ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ ಸಂಖ್ಯಾ ೧೪

# ಶ್ರೀ ಸ್ಕಾಂದಮಹಾಪುರಾಣಂ

## ಮಾಹೇಶ್ವರಖಂಡ

## ೧

## ಕೇದಾರಖಂಡ

(ಮೂಲ ಮತ್ತು ಅನುವಾದ ಸಹಿತ)

ಅನುವಾದಕ

ಆಸ್ಥಾನ ವಿದ್ವಾನ್

**ನೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

ಬೆಂಗಳೂರು ಪ್ರೆಸ್

ಮೈಸೂರು ರೋಡು, ಬೆಂಗಳೂರು ಸಿಟಿ

೧೯೪೪

# ಅರಿಕೆ

ಶ್ರೀ ಪೂಜ್ಯರಾದ ವೇದವ್ಯಾಸ ಮಹಾಮುನಿಗಳು ಲೋಕಾನುಗ್ರಹಕ್ಕಾಗಿ ಅಪ್ಪಣೆ ಕೊಡಿಸಿರುವ ಅಷ್ಟಾದಶ ಮಹಾಪುರಾಣಗಳಲ್ಲಿ ಶ್ರೀ ಸ್ಕಾಂದಮಹಾಪುರಾಣವು, ಎಂಭತ್ತೊಂದುಸಾವಿರ ಶ್ಲೋಕಗಳನ್ನೊಳಗೊಂಡು, ಹದಿಮೂರನೆಯ ಮಹಾಪುರಾಣವೆಂದು ಪರಿಗಣಿತವಾಗಿದೆ. ಪ್ರಾಯಶಃ ಈ ಪುರಾಣವೇ ಎಲ್ಲ ಪುರಾಣಗಳಿಗಿಂತಲೂ ಬಹಳ ದೊಡ್ಡದು ಇದರಲ್ಲಿ ಅನೇಕಾನೇಕ ತೀರ್ಥ ಕ್ಷೇತ್ರಗಳ ಮಾಹಾತ್ಮ್ಯಗಳೂ, ಶಿವೋತ್ಕೃಷ್ಟತ್ವವನ್ನು ಪ್ರತಿಪಾದಿಸುವ ಕಥಾಪ್ರಸಂಗಗಳೂ, ಸಂದರ್ಭೋಚಿತವಾದ ಇತರ ದೇವತಾಮಾಹಾತ್ಮ್ಯಗಳೂ ತನ್ನದೇ ಆದ ಒಂದು ರೀತಿಯಲ್ಲಿ ಪ್ರತಿಪಾದಿತವಾಗಿವೆ. ಅಲ್ಲದೆ ಈ ಸ್ಕಾಂದವು ಖಂಡಾತ್ಮಕ, ಸಂಹಿತಾತ್ಮಕ ಎಂದು ಎರಡು ಬಗೆಯಾಗಿದೆ. ಖಂಡಾತ್ಮಕವಾದ ಸ್ಕಾಂದವೇ ಸರಿಯಾದ ಮಹಾಪುರಾಣವೆಂದೂ, ಎರಡನೆಯದು ಉಪಪುರಾಣವೆಂದೂ ಹಲವರು ವಿಮರ್ಶಕರು ಅಭಿಪ್ರಾಯಪಡುತ್ತಾರೆ: ಆದುದರಿಂದ ಖಂಡಾತ್ಮಕವಾದ ಸ್ಕಾಂದವನ್ನೇ ಇಲ್ಲಿ ಅನುವಾದಕ್ಕೆ ತೆಗೆದುಕೊಂಡುದಾಗಿದೆ. ಈ ಮಹಾಪುರಾಣದ ಮಾಹೇಶ್ವರಖಂಡದ ಕೇದಾರಖಂಡವು ಅನುವಾದ ಸಹಿತವಾಗಿ ಈ ಸಂಪುಟದಲ್ಲಿ ಕೊಡಲಾಗಿದೆ. ಮುಂದಿನ ಸಂಪುಟಗಳಲ್ಲಿ ಇನ್ನುಳಿದ ಖಂಡೋಪಖಂಡಗಳು ಪ್ರಕಟವಾಗುತ್ತವೆ.

ಈಗ ಅನುವಾದಕ್ಕೆ ತೆಗೆದುಕೊಂಡಿರುವ ಶ್ರೀ ಸ್ಕಾಂದಮಹಾಪುರಾಣದ ಪ್ರತಿಯು ಬೊಂಬಾಯಿನ ಶ್ರೀ ವೆಂಕಟೇಶ್ವರ ಮುದ್ರಣಾಲಯದಲ್ಲಿ ಮುದ್ರಿತವಾದುದು. ಇದು ಖಂಡಾತ್ಮಕವಾಗಿದೆ. ಈ ವಿಷಯದಲ್ಲಿ ಆ ಪ್ರತಿಯ ಸಂಪಾದಕರು ಇದೇ ಸರಿಯಾದ ಸ್ಕಾಂದಮಹಾಪುರಾಣವೆಂದು ಪ್ರತಿಪಾದಿಸಿ ಕೆಲವು ಸಂಗತಿಗಳನ್ನು "ಸ್ಕಾಂದಮಹಾಪುರಾಣ ವಿಷಯಕ ಸಂದೇಹನಿರಾಸಃ" ಎಂಬ ಅಂಕಿತದಿಂದ ನಿರೂಪಿಸಿರುತ್ತಾರೆ; ಅವುಗಳನ್ನು ಸಂಗ್ರಹವಾಗಿ ಇಲ್ಲಿ ಸೂಚಿಸಲಾಗುವುದು.

[ಬ್ರಹ್ಮವೈವರ್ತ ಮಹಾಪುರಾಣದ ಶ್ರೀ ಕೃಷ್ಣ ಜನ್ಮಖಂಡದ ನೂರ ಮೂವತ್ತೆರಡನೆಯ ಅಧ್ಯಾಯದಲ್ಲಿ,

**ಏಕಾಶೀತಿ ಸಹಸ್ರಂಚ ಪರಮೇಕ ಶತಾಧಿಕಂ।**
**ವರಂ ಸ್ಕಾಂದಪುರಾಣಂ ಚ ಸದ್ಭಿರೇವಂ ನಿರೂಪಿತಂ॥**

(ಶ್ರೀ ಸ್ಕಾಂದಮಹಾಪುರಾಣವು ಎಂಬತ್ತೊಂದುಸಾವಿರ ಶ್ಲೋಕ ಸಂಖ್ಯೆಯುಳ್ಳುದೆಂದು ಸಜ್ಜನರು ನಿರೂಪಿಸಿರುತ್ತಾರೆ.)

ಎಂದು ಉಕ್ತವಾಗಿರುವುದು.]

[ಬೃಹನ್ನಾರದೀಯ ಪುರಾಣದಲ್ಲಿಯೂ ಇದೇ ಹದಿಮೂರನೆಯ ಮಹಾ ಪುರಾಣವಾದ ಸ್ಕಾಂದವನ್ನು ಕುರಿತು,

**ಶೃಣು ವಕ್ಷ್ಯೇ ಮರೀಚೇ ಚ ಪುರಾಣಂ ಸ್ಕಾಂದಸಂಜ್ಞಿತಂ ।**
**ಯಸ್ಮಿನ್ ಪ್ರತಿಪದಂ ಸಾಕ್ಷಾನ್ಮಹಾದೇವೋ ವ್ಯವಸ್ಥಿತಃ ॥**
**ಪುರಾಣೇ ಶತಕೋಟೌ ತು ಯಚ್ಛೈವಂ ವರ್ಣಿತಂ ಮಯಾ ।**
**ಲಕ್ಷಿತಸ್ಯಾರ್ಥ ಜಾತಸ್ಯ ಸಾರೋ ವ್ಯಾಸೇನ ಕೀರ್ತಿತಃ ॥**
**ಸ್ಕಾಂದಾಹ್ವಯಸ್ತತ್ರ ಖಂಡಾಃ ಸಪ್ತೈವ ಪರಿಕಲ್ಪಿತಾಃ ।**
**ಏಕಾಶೀತಿ ಸಹಸ್ರಂತು ಸ್ಕಾಂದಂ ಸರ್ವಾಘಕೃಂತನಂ ॥**
**ಯಃ ಶೃಣೋತಿ ಪಠೇದ್ವಾಪಿ ಸತು ಸಾಕ್ಷಾಚ್ಛಿವಃ ಸ್ಥಿತಃ ।**
**ಯತ್ರ ಮಾಹೇಶ್ವರಾ ಧರ್ಮಾಃ ಷಣ್ಮುಖೇನ ಪ್ರಕಾಶಿತಾಃ ॥**
**ಕಲ್ಪೇ ತತ್ಪುರುಷೇ ವೃತ್ತಾಃ ಸರ್ವಸಿದ್ಧಿವಿಧಾಯಕಾಃ ॥**

ಎಲೈ ಮರೀಚಿಯೇ! ಈಗ ಸ್ಕಾಂದಮಹಾಪುರಾಣದ ವಿಷಯವನ್ನು ಹೇಳುತ್ತೇನೆ; ಕೇಳು. ಈ ಮಹಾ ಪುರಾಣದ ಪ್ರತಿಪದದಲ್ಲಿಯೂ ಶ್ರೀಮನ್ಮಹಾದೇವನು ಸಾಕ್ಷಾತ್ತಾಗಿ ನೆಲಸಿರುತ್ತಾನೆ; ಶತಕೋಟಿ ಸಂಖ್ಯಾಕವಾದ ಪುರಾಣದಲ್ಲಿ ಯಾವುದು ಶೈವಪುರಾಣವೆಂದು ನಾನು ಬಣ್ಣಿಸಿದೆನೋ ಅದರಲ್ಲಿ ತೋರಿಬರುವ ಮಹಾರ್ಥಗಳ ಸಾರವೆಲ್ಲವೂ, ಪೂಜ್ಯರಾದ ವ್ಯಾಸಮಹರ್ಷಿಗಳಿಂದ ಈ ಪುರಾಣದಲ್ಲಿ ಹೇಳಲಾಗಿದೆ. ಸ್ಕಾಂದಮಹಾಪುರಾಣವು ಏಳು ಖಂಡಗಳಿಂದ ರಚಿತವಾಗಿದೆ. ಇದು ಎಂಭತ್ತೊಂದುಸಾವಿರ ಶ್ಲೋಕಗಳೊಡಗೂಡಿರುವುದು; ಸಮಸ್ತ ಪಾಪಗಳನ್ನೂ ಅಳಿಸುವುದಾಗಿದೆ. ಯಾವ ಈ ಮಹಾ ಪುರಾಣದಲ್ಲಿ ಷಣ್ಮುಖನು ತತ್ಪುರುಷಕಲ್ಪದಲ್ಲಿ ನಡೆದುವೂ, ಸಮಸ್ತ ಸಿದ್ಧಿಗಳನ್ನು ಉಂಟುಮಾಡುವವೂ ಆದ ಮಾಹೇಶ್ವರ ಧರ್ಮಗಳೆಲ್ಲವನ್ನು ಪ್ರಕಾಶಗೊಳಿಸಿರುತ್ತಾನೆಯೋ ಅಂತಹ ಈ ಸ್ಕಾಂದವನ್ನು ಯಾರು ಕೇಳುತ್ತಾರೆಯೋ, ಯಾರು ಓದುತ್ತಾರೆಯೋ ಅವರು ಸಾಕ್ಷಾಚ್ಛಿವನೇ ಸರಿ.]

[ಇದೂ ಅಲ್ಲದೆ, ಇದೇ ಸ್ಕಾಂದಮಹಾಪುರಾಣದ ಪ್ರಭಾಸಖಂಡದ ನಾಲ್ಕನೆಯ ದ್ವಾರಕಾಮಾಹಾತ್ಮ್ಯ — ನಲವತ್ತುನಾಲ್ಕನೆಯ ಅಧ್ಯಾಯದಲ್ಲಿ ಈ ಮಹಾ ಪುರಾಣವು ಪರಂಪರೆಯಾಗಿ ಪ್ರವೃತ್ತವಾದುದೆಂತೆಂಬ ವಿಷಯವನ್ನು ಸೂತಪುರಾಣಿಕನು ಈ ರೀತಿ ಹೇಳಿರುತ್ತಾನೆ.

**ಏತತ್ಪುರಾಣಮಖಿಲಂ ಪುರಾ ಸ್ಕಂದೇನಭಾಷಿತಂ ।**
**ಭೃಗವೇ ಬ್ರಹ್ಮಪುತ್ರಾಯ ತಸ್ಮಾಲ್ಲೇಭೇ ತಥಾಂಗಿರಾಃ ॥**
**ತತಶ್ಚ ಚ್ಯವನಃ ಪ್ರಾಪ ಋಚೀಕಶ್ಚ ತತೋ ಮುನಿಃ ।**
**ಏವಂ ಪರಂಪರಾಪ್ರಾಪ್ತಂ ಸರ್ವೇಷು ಭುವನೇಷ್ವಪಿ ॥**

**ಸ್ಕಾಂದಂ ಪುರಾಣಮೇತಚ್ಚ ಕುಮಾರೇಣ ಪುರೋದ್ಧೃತಂ ।**
**ಯಃ ಶೃಣೋತಿ ಸತಾಂ ಮಧ್ಯೇ ನರಃ ಪಾಪಾದ್ವಿಮುಚ್ಯತೇ ॥**
**ಇದಂ ಪುರಾಣಮಾಯುಷ್ಯಂ ಚತುರ್ವರ್ಣಸುಖಪ್ರದಂ ।**
**ನಿರ್ಮಿತಂ ಷಣ್ಮುಖೇನೇಹ ನಿಯತಂ ಸುಮಹಾತ್ಮನಾ ॥**
**ಏವಮೇತತ್ಸಮಾಖ್ಯಾತಮಾಖ್ಯಾನಂ ಭದ್ರಮಸ್ತು ವಃ ।**
**ಮಂಡಿತಂ ಸಪ್ತಭಿಃ ಖಂಡೈಃ ಸ್ಕಾಂದಂ ಯಃ ಶೃಣುಯಾನ್ನರಃ ॥**
**ನತಸ್ಯ ಪುಣ್ಯಸಂಖ್ಯಾನಂ ಕರ್ತುಂ ಶಕ್ಯೇತ ಕೇನಚಿತ್ ।**
**ಯ ಇದಂ ಧರ್ಮಮಾಹಾತ್ಮ್ಯಂ ಬ್ರಾಹ್ಮಣಾಯ ಪ್ರಯಚ್ಛತಿ ॥**
**ಸ್ವರ್ಗಲೋಕೇ ವಸೇತ್ತಾವದ್ಯಾವದಕ್ಷರಸಂಖ್ಯಯಾ ॥**

ಸಂಪೂರ್ಣವಾದ ಈ ಮಹಾಪುರಾಣವನ್ನು ಸ್ಕಂದನು ಬ್ರಹ್ಮಪುತ್ರನಾದ ಭೃಗುಮಹರ್ಷಿಗೆ ಅಪ್ಪಣೆಕೊಡಿಸಿದನು. ಆತನಿಂದ ಅಂಗೀರಸನೂ, ಆತನಿಂದ ಚ್ಯವನನೂ, ಚ್ಯವನನಿಂದ ಋಚೀಕನೂ ಇದನ್ನು ಪಡೆದುಕೊಂಡರು. ಆಮೇಲೆ ಇದು ಎಲ್ಲ ಲೋಕಗಳಲ್ಲಿಯೂ ಒಬ್ಬರಿಂದೊಬ್ಬರಿಗೆ ಬಂದಿತು. ಪೂರ್ವದಲ್ಲಿ ಷಣ್ಮುಖನು ಉದ್ಧರಿಸಿದ ಈ ಪುರಾಣವನ್ನು ಯಾರು ಸತ್ಪುರುಷರ ಮಧ್ಯದಲ್ಲಿ ಕೇಳುತ್ತಾರೆಯೋ ಅವರು ಸಮಸ್ತಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ; ಅಲ್ಲದೆ ಅವರ ಪುಣ್ಯಗಳನ್ನು ಎಣಿಸಲು ಯಾರಿಂದಲೂ ಸಾಧ್ಯವಾಗುವುದಿಲ್ಲ. ಯಾವನು ಧರ್ಮಮಾಹಾತ್ಮ್ಯವನ್ನೊಳಗೊಂಡ ಈ ಪುರಾಣವನ್ನು ಬ್ರಾಹ್ಮಣನಿಗೆ ದಾನಮಾಡುತ್ತಾನೆಯೋ ಅವನು ಇದರಲ್ಲಿನ ಅಕ್ಷರಗಳೆಷ್ಟೋ, ಅಷ್ಟುಕಾಲ ಸ್ವರ್ಗಲೋಕದಲ್ಲಿ ವಾಸಮಾಡುತ್ತಾನೆ.]

ಎಂಬಿವೇ ಮೊದಲಾದ ಪ್ರಮಾಣಗಳಿಂದ ಇದೇ ಸಪ್ತಖಂಡಾತ್ಮಕವಾದ ಸ್ಕಾಂದವೆಂಬ ಹೆಸರಿನ ಮಹಾಪುರಾಣವೆಂದು ಹೇಳಬಹುದಾಗಿದೆ; ಅಲ್ಲದೆ ತತ್ಪುರುಷಕಲ್ಪದಲ್ಲಿ ಹೇಳಲ್ಪಟ್ಟ ಈ ಸ್ಕಾಂದಮಹಾಪುರಾಣವನ್ನೇ ಕುರಿತು ಇದರಲ್ಲಿನ ಏಳು ಖಂಡಗಳ ಹೆಸರುಗಳನ್ನೂ ಒಳಗೊಂಡ ಈ ಕೆಳಕಂಡ ಶ್ಲೋಕವನ್ನು ಕೆಲವರು ಹೇಳಿಕೊಳ್ಳುವುದುಂಟು.

**[೧] ಮಾಹೇಶ್ವರೋ [೨] ವೈಷ್ಣವ [೩] ಬ್ರಾಹ್ಮ [೪] ಕಾಶ್ಯಾ**
**[೫] ಸ್ತ್ವವಂತಿಕಾ [೬] ನಾಗರಮತ್ರ ಷಷ್ಠಂ ।**
**[೭] ಪ್ರಾಭಾಸಿಕೋ ವಿಪ್ರವರೇಣ ಖಂಡಾಃ**
**ಸ್ಕಾಂದೇ ಪುರಾಣೇ ಕಥಿತಾಃ ಸು ಪುಣ್ಯಾಃ ॥**

ಸ್ಕಾಂದಮಹಾಪುರಾಣದಲ್ಲಿ ಮಾಹೇಶ್ವರ, ವೈಷ್ಣವ, ಬ್ರಾಹ್ಮ, ಕಾಶೀ, ಆವಂತ್ಯ, ನಾಗರ, ಪ್ರಭಾಸ ಎಂಬ ಏಳು ಖಂಡಗಳನ್ನು ವಿಪ್ರಶ್ರೇಷ್ಠರಾದ ವೇದವ್ಯಾಸ ಮುನಿಗಳು ಹೇಳಿರುತ್ತಾರೆ; ಇವು ಬಹಳ ಪುಣ್ಯಪ್ರದವಾದವು.

ಇದೂ ಅಲ್ಲದೆ, ಈ ಸ್ಕಾಂದಮಹಾಪುರಾಣದ ಪ್ರಭಾಸಖಂಡದ ಮೊದಲನೆಯ ಪ್ರಭಾಸಕ್ಷೇತ್ರ ಮಾಹಾತ್ಮ್ಯದ ಎರಡನೆಯ ಅಧ್ಯಾಯದಲ್ಲಿ "ಅಷ್ಟಾದಶಪುರಾಣ ಭೇದವರ್ಣನ" ಪ್ರಸಂಗದಲ್ಲಿ

**ಸ್ಕಾಂದಂತು ಸಪ್ತಧಾ ಭಿನ್ನಂ ವೇದವ್ಯಾಸೇನ ಧೀಮತಾ ।**
**ಏಕಾಶೀತಿ ಸಹಸ್ರಾಣಿ ಶತಂ ಚೈಕಂತು ಸಂಖ್ಯಯಾ ॥**

ಎಂಬ ಶ್ಲೋಕ ಮೊದಲುಗೊಂಡು ಮೇಲೆ ಸೂಚಿತವಾದ ಖಂಡಗಳೆಲ್ಲವನ್ನೂ ನಿರೂಪಿಸಿರುತ್ತಾರೆ. ಬೃಹನ್ನಾರದೀಯ ಮಹಾಪುರಾಣದಲ್ಲಿಯೂ ಇದೇ ವಿಷಯವನ್ನೇ ಸೂಚಿಸಿರುತ್ತಾರೆ. ಈ ಎಲ್ಲ ಪ್ರಮಾಣಗಳಿಂದಲೂ ಈಗ ಮುದ್ರಿತವಾಗಿರುವ ಸ್ಕಾಂದಮಹಾಪುರಾಣವೇ ಯಥಾರ್ಥವಾದ ಸ್ಕಾಂದ ಮಹಾಪುರಾಣವೆಂದು ಪಂಡಿತರು ತಿಳಿದುಕೊಳ್ಳತಕ್ಕದ್ದು.

ಇನ್ನೊಂದು ಸ್ಕಾಂದವೆಂದರೆ, ಸಂಹಿತಾತ್ಮಕವಾದ ಸ್ಕಾಂದ. ಇದು ಉಪಪುರಾಣವೆಂದು ಹೇಳುತ್ತಾರೆ. (ಆದರೆ ಇದೇ ಮಹಾಪುರಾಣವೆಂದು ಬಹುಮಂದಿ ಪಂಡಿತರು ಹೇಳುವುದುಂಟು.) ಇದರಲ್ಲಿ ಆರು ಸಂಹಿತೆಗಳೂ ಎಂಬತ್ತೊಂದುಸಾವಿರ ಶ್ಲೋಕಗಳೂ ಐವತ್ತು ಖಂಡಗಳೂ ಇರುತ್ತವೆ. ಸನತ್ಕುಮಾರಸಂಹಿತೆ ೩೬ ಸಾವಿರ, ಸೂತಸಂಹಿತೆ ೬ ಸಾವಿರ, ಶಂಕರಸಂಹಿತೆ ೩೦ ಸಾವಿರ, ವೈಷ್ಣವಸಂಹಿತೆ ೫ ಸಾವಿರ, ಬ್ರಾಹ್ಮಸಂಹಿತೆ ೩ ಸಾವಿರ, ಸೌರಸಂಹಿತೆ ೧ ಸಾವಿರ.

ಅಂತು, ಪ್ರಕೃತದಲ್ಲಿ ಈ ಉಪಪುರಾಣವನ್ನು ಬಿಟ್ಟು ಮಹಾಪುರಾಣವನ್ನೇ ಅನುವಾದಕ್ಕೆ ತೆಗೆದುಕೊಂಡುದಾಗಿದೆ. ಶಿವೋತ್ಕೃಷ್ಟತ್ವವನ್ನೂ ಇತರ ಅನೇಕಾನೇಕ ತೀರ್ಥಕ್ಷೇತ್ರ ಮಹಾತ್ಮ್ಯಗಳನ್ನೂ ವರ್ಣಿಸಿರುವ ಈ ಮಹಾಪುರಾಣವು, ನಮ್ಮನ್ನಾಳುವ ಮಹಾಸ್ವಾಮಿಯವರಾದ ಶ್ರೀ ಜಯಚಾಮರಾಜ ಒಡೆಯರ್ ಬಹದ್ದೂರ್ ಅವರ ಅಪ್ಪಣೆಯನ್ನು ಪಡೆದು ಉಪಕ್ರಮಿಸಲಾಗಿದೆ. ಈ ಮಹಾಗ್ರಂಥವು ಅಶೇಷ ಭಕ್ತಮಹಾಜನಗಳಿಗೆ ಉಪಯುಕ್ತವಾಗುವುದರ ಮೂಲಕ ನಮ್ಮ ಮಹಾಪ್ರಭುಗಳವರಿಗೆ ಸಮಸ್ತ ಶ್ರೇಯಸ್ಸುಗಳೂ ಲಭಿಸಲೆಂದು ಪರಮೇಶ್ವರನಲ್ಲಿ ಮೊರೆಯಿಡುತ್ತೇನೆ. ಈ ಗ್ರಂಥದ ಮೂಲದಲ್ಲಿಯಾಗಲಿ ಅನುವಾದದಲ್ಲಿಯಾಗಲಿ ಇರಬಹುದಾದ ಲೋಪದೋಷಗಳನ್ನು ಪ್ರಾಜ್ಞರು ಮನ್ನಿಸುವರೆಂದು ನಂಬಿರುತ್ತೇನೆ.

ಆಸ್ಥಾನ ವಿದ್ವಾನ್
**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರೀ**

# ವಿಷಯಾನುಕ್ರಮಣಿಕೆ

ಪುಟ ಸಂಖ್ಯೆ

ಪುಟ ಸಂಖ್ಯೆ

॥ ಶ್ರೀಃ ॥

ಅಥ ಮಂಗಳಾಚರಣಶ್ಲೋಕಃ

**ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।**
**ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥**

**ತಾತ್ಪರ್ಯ**

ಯಾವ ಪ್ರಭುವಿನ ಅಪ್ಪಣೆಯಿಂದ
ಬ್ರಹ್ಮನು ಜಗತ್ತನ್ನು ಸೃಜಿಸುವವನಾಗಿಯೂ
ಶ್ರೀಮನ್ನಾರಾಯಣಮೂರ್ತಿಯು ಸಂರಕ್ಷಿಸುವವನಾಗಿಯೂ
ಕಾಲರುದ್ರನೆಂದು ಹೆಸರಾದ ಸ್ವಾಮಿಯು ಸಂಹಾರಕರ್ತನಾಗಿಯೂ ಇರುವರೋ
ಆ ಪಿನಾಕಪಾಣಿಯಾದ ಪರಮಶಿವನಿಗೆ
ನಮಸ್ಕಾರವು

॥ ಶ್ರೀಃ ॥

॥ ಶ್ರೀ ಶಂಕರಃ ಶಂಕರಃ ॥

# ಶ್ರೀ ಸ್ಕಾಂದಮಹಾಪುರಾಣ ಪ್ರಾರಂಭಃ

## ಮಾಹೇಶ್ವರಖಂಡೇ ಪ್ರಥಮಃ ಕೇದಾರಖಂಡಃ

ಶ್ರೀಮತ್ಸುಂದರಮೀಶಾನಂ ಶ್ರೀಮತ್ಸಿದ್ಧಿವಿನಾಯಕಂ ।
ಷಣ್ಮುಖಂ ಸ್ಕಂದಮಾನಂದಂ ಬ್ರಹ್ಮಾಣಂ ವಿಷ್ಣುಮಾಶ್ರಯೇ ॥
ಯಸ್ಯಾಜ್ಞಯಾ ಜಗತ್ಸ್ರಷ್ಟಾ ವಿರಿಂಚಿಃ ಪಾಲಕೋ ಹರಿಃ ।
ಸಂಹರ್ತಾ ಕಾಲರುದ್ರಾಖ್ಯೋ ನಮಸ್ತಸ್ಮೈ ಪಿನಾಕಿನೇ ॥

## ಪ್ರಥಮೋಽಧ್ಯಾಯಃ

### ಪುರಾಣಪ್ರಸ್ತಾವಃ — ದಕ್ಷವೃತ್ತಾಂತವರ್ಣನಂ

**ವ್ಯಾಸ ಉವಾಚ :—**

**ತೀರ್ಥಾನಾಮುತ್ತಮಂ ತೀರ್ಥಂ ಕ್ಷೇತ್ರಾಣಾಂ ಕ್ಷೇತ್ರಮುತ್ತಮಂ ।**
**ತತ್ರೈವ ನೈಮಿಷಾರಣ್ಯೇ ಶೌನಕಾದ್ಯಾಸ್ತಪೋಧನಾಃ ।**
**ದೀರ್ಘಸತ್ರಂ ಪ್ರಕುರ್ವಂತಃ ಸತ್ರಿಣಃ ಕರ್ಮಚೇತಸಃ ॥ ೧ ॥**
**ತೇಷಾಂ ಸಂದರ್ಶನೌತ್ಸುಕ್ಯಾದಾಗತೋ ಹಿ ಮಹಾತಪಾಃ ।**
**ವ್ಯಾಸ ಶಿಷ್ಯೋ ಮಹಾಪ್ರಾಜ್ಞೋ ಲೋಮಶೋ ನಾಮ ನಾಮತಃ ॥ ೨ ॥**

---

### ಕನ್ನಡದ ಅನುವಾದ

#### ಪುರಾಣಪ್ರಸ್ತಾವ — ದಕ್ಷವೃತ್ತಾಂತವರ್ಣನ

೧. ತೀರ್ಥಗಳಲ್ಲಿ ಉತ್ತಮ ತೀರ್ಥವೂ, ಕ್ಷೇತ್ರಗಳಲ್ಲಿ ಉತ್ತಮ ಕ್ಷೇತ್ರವೂ ಆಗಿರುವ ನೈಮಿಷಾರಣ್ಯವೆಂಬ ಕ್ಷೇತ್ರವೊಂದುಂಟು. ಅಲ್ಲಿ, ತಪೋಧನರೂ, ಸತ್ಕರ್ಮಾಚರಣೆಯಲ್ಲಿಯೇ ಮನಸ್ಸುಳ್ಳವರೂ, ಅನೇಕ ಯಾಗಗಳನ್ನೆಸಗಿ ಸೋಮಯಾಜಿಗಳೆನಿಸಿದವರೂ ಆದ ಶೌನಕರೇ ಮೊದಲಾದ ಮುನಿಪುಂಗವರು ಬಹುಕಾಲ ನಡೆಯುವ ದೀರ್ಘಸತ್ರವೆಂಬ ಯಾಗವನ್ನು ಮಾಡುತ್ತಿದ್ದರು.

೨. ಇವರನ್ನು ನಂದರ್ಶಿಸಬಯಸಿ, ವ್ಯಾಸಮಹರ್ಷಿಯ ಶಿಷ್ಯನೂ, ಮಹಾ ತಪಸ್ವಿಯೂ, ಜ್ಞಾನಿಯೂ ಆದ ಲೋಮಶನೆಂಬ ಹೆಸರುಳ್ಳ ಸೂತಪುರಾಣಿಕನು ಅಲ್ಲಿಗೆ ಬಿಜಯಗೈದನು.

ತತ್ರಾಗತಂ ತೇ ದದೃಶುರ್ಮುನಯೋ ದೀರ್ಘಸತ್ರಿಣಃ ।
ಉತ್ತಸ್ಥುರ್ಯುಗಪತ್ಸರ್ವೇ ಸಾರ್ಘ್ಯಹಸ್ತಾಃ ಸಮುತ್ಸುಕಾಃ ॥ ೩ ॥
ದತ್ವಾರ್ಘ್ಯಪಾದ್ಯಂ ಸತ್ಕೃತ್ಯ ಮುನಯೋ ವೀತಕಲ್ಮಷಾಃ ।
ತಂ ಪಪ್ರಚ್ಛುರ್ಮಹಾಭಾಗಾಃ ಶಿವಧರ್ಮಂ ಸವಿಸ್ತರಂ ॥ ೪ ॥

ಋಷಯ ಊಚುಃ:—

ಕಥಯಸ್ವ ಮಹಾಪ್ರಾಜ್ಞ ದೇವದೇವಸ್ಯ ಶೂಲಿನಃ ।
ಮಹಿಮಾನಂ ಮಹಾಭಾಗ ಧ್ಯಾನಾರ್ಚನಸಮನ್ವಿತಂ ॥ ೫ ॥
ಸಂಮಾರ್ಜನೇ ಕಿಂ ಫಲಂ ಸ್ಯಾತ್ತಥಾ ರಂಗಾವಲೀಷು ಚ ।
ಪ್ರದಾನೇ ದರ್ಪಣಸ್ಯಾಥ ತಥಾನ್ಯೈ ಚಾಮರಸ್ಯ ಚ ॥ ೬ ॥
ಪ್ರದಾನೇ ಚ ವಿತಾನಸ್ಯ ತಥಾ ಧಾರಾಗೃಹಸ್ಯ ಚ ।
ದೀಪದಾನೇ ಕಿಂ ಫಲಂ ಸ್ಯಾತ್ಪೂಜಾಯಾಂ ಕಿಂ ಫಲಂ ಭವೇತ್ ॥ ೭ ॥
ಕಾನಿ ಕಾನಿ ಚ ಪುಣ್ಯಾನಿ ಕಥ್ಯತಾಂ ಶಿವಪೂಜನೇ ।
ಇತಿಹಾಸಪುರಾಣಾನಿ ವೇದಾಧ್ಯಯನಮೇವ ಚ ॥ ೮ ॥
ಶಿವಸ್ಯಾಗ್ರೇ ಪ್ರಕುರ್ವಂತಿ ಕಾರಯಂತ್ಯಥವಾ ನರಾಃ ।
ಕಿಂ ಫಲಂ ಚ ನೃಣಾಂ ತೇಷಾಂ ಕಥ್ಯತಾಂ ವಿಸ್ತರೇಣ ಹಿ ॥ ೯ ॥
ಶಿವಧ್ಯಾನಪರೋ ಲೋಕೇ ತ್ವತ್ತೋ ನಾನ್ಯೋಽಸ್ತಿ ವೈಮುನೇ ॥ ೧೦ ॥

---

೩. ಆಗ, ಸತ್ರಯಾಗದಲ್ಲಿ ತೊಡಗಿದ್ದ ಆ ಶೌನಕಾದಿ ಮುನಿಗಳು ಆತನನ್ನು ಕಂಡೊಡನೆಯೇ ಆತನನ್ನು ಗೌರವಿಸುವುದರಲ್ಲಿ ಉತ್ಸಾಹವುಳ್ಳವರಾಗಿ ಅರ್ಘ್ಯವನ್ನು ತೆಗೆದುಕೊಂಡು ಒಂದೇತಡವೆಯೇ ಎದ್ದು ನಿಂತರು.

೪. ತರುವಾಯ ನಿಷ್ಕಲ್ಮಷರೂ, ಮಹಾ ಪುಣ್ಯಶೀಲರೂ ಆದ ಆ ಮುನಿಗಳು ಆ ಸೂತಮಹರ್ಷಿಗೆ ಅರ್ಘ್ಯಪಾದ್ಯಾದಿಗಳನ್ನಿತ್ತು ಸತ್ಕರಿಸಿ, ವಿಸ್ತಾರವಾದ ಶಿವಧರ್ಮಗಳ ವಿಷಯವಾಗಿ ಆತನನ್ನು ಈ ರೀತಿ ಪ್ರಶ್ನಿಸಿದರು.

೫–೧೦. ಋಷಿಗಳು ಪ್ರಶ್ನಿಸುತ್ತಾರೆ:—ಎಲೈ ಮಹಾಬುದ್ಧಿಶಾಲಿಯೂ, ಭಾಗ್ಯಶಾಲಿಯೂ ಆದ ಸೂತಮಹರ್ಷಿಯೇ! ದೇವದೇವನಾದ ಮಹಾದೇವನ ಧ್ಯಾನ ಮತ್ತು ಪೂಜೆಗಳ ವಿಷಯವನ್ನೂ, ಆ ಸ್ವಾಮಿಯ ಮಹಾತ್ಮ್ಯ ವಿಚಾರವನ್ನೂ ನಮಗೆ ತಿಳಿಯಹೇಳಬೇಕು. ಎಲೈ ಮಹರ್ಷಿಯೇ! ಶಿವದೇವಾಲಯಗಳಲ್ಲಿ ಸಾರಣೆ ಕಾರಣೆಗಳನ್ನು ಮಾಡಿ ನಿರ್ಮಲಗೊಳಿಸುವುದರಿಂದ ಮಾನವರಿಗೆ ಯಾವ ಫಲವು ದೊರಕುತ್ತದೆ? ಶ್ರೀ ಶಂಕರನ ಪ್ರೀತ್ಯರ್ಥವಾಗಿ ಕನ್ನಡಿಗಳನ್ನೂ, ಚಾಮರಗಳನ್ನೂ ಸಮರ್ಪಿಸುವುದರಿಂದಾವ ಫಲವುಂಟಾಗುತ್ತದೆ? ಶಿವದೇವಾಲಯಗಳಿಗೆ ತೆರೆಗಳನ್ನೂ, ಮೆತ್ತೆಗಳನ್ನೂ, ಧಾರಾಪಾತ್ರೆಗಳನ್ನೂ, ದೀಪಸ್ತಂಭಗಳನ್ನೂ ಒಪ್ಪಿಸುವುದರಿಂದ ದೊರಕುವ ಫಲವಾವುದು? ಶಿವಪೂಜೆಯಿಂದ

**ಇತಿ ಶ್ರುತ್ವಾ ವಚಸ್ತೇಷಾಂ ಮುನೀನಾಂ ಭಾವಿತಾತ್ಮನಾಂ ।**
**ಉವಾಚ ವ್ಯಾಸಶಿಷ್ಯೋಽಸೌ ಶಿವಮಹಾತ್ಮ್ಯಮುತ್ತಮಂ ॥ ೧೧ ॥**

**ಲೋಮಶ ಉವಾಚ :—**

**ಅಷ್ಟಾದಶಪುರಾಣೇಷು ಗೀಯತೇ ವೈ ಪರಃ ಶಿವಃ ।**
**ತಸ್ಮಾಚ್ಛಿವಸ್ಯ ಮಾಹಾತ್ಮ್ಯಂ ವಕ್ತುಂ ಕೋಽಪಿ ನ ಪಾರ್ಯತೇ ॥ ೧೨ ॥**
**ಶಿವೇತಿ ದ್ವ್ಯಕ್ಷರಂ ನಾಮ ವ್ಯಾಹರಿಷ್ಯಂತಿ ಯೇ ಜನಾಃ ।**
**ತೇಷಾಂ ಸ್ವರ್ಗಶ್ಚ ಮೋಕ್ಷಶ್ಚ ಭವಿಷ್ಯತಿ ನ ಚಾನ್ಯಥಾ ॥ ॥ ೧೩ ॥**
**ಉದಾರೋ ಹಿ ಮಹಾದೇವೋ ದೇವಾನಾಂ ಪತಿರೀಶ್ವರಃ ।**
**ಯೇನ ಸರ್ವಂ ಪ್ರದತ್ತಂ ಹಿ ತಸ್ಮಾತ್ಸರ್ವ ಇತಿ ಸ್ಮೃತಃ ॥ ೧೪ ॥**
**ತೇ ಧನ್ಯಾಸ್ತೇ ಮಹಾತ್ಮಾನೋ ಯೇ ಭಜಂತಿ ಸದಾಶಿವಂ ॥ ೧೫ ॥**
**ವಿನಾ ಸದಾಶಿವಂ ಯೋ ಹಿ ಸಂಸಾರಂ ತರ್ತುಮಿಚ್ಛತಿ ।**
**ಸ ಮೂಢೋ ಹಿ ಮಹಾಪಾಪಃ ಶಿವದ್ವೇಷೀ ನ ಸಂಶಯಃ ॥ ೧೬ ॥**

---

ಲಭಿಸುವ ಫಲವೆಂತಹುದು? ಶಿವನ ಸನ್ನಿಧಿಯಲ್ಲಿ ಇತಿಹಾಸ ಪುರಾಣಗಳನ್ನು ಓದಿ ಹೇಳುವ, ಅಥವಾ ಇತರರಿಂದ ಓದಿಸಿ ಕೇಳಿಸುವ ಮಾನವರಿಗೆ ಯಾವ ಶುಭಫಲಗಳು ದೊರಕುತ್ತವೆ? ನೀನು ಈ ಎಲ್ಲ ವಿಷಯಗಳನ್ನೂ ನಮಗೆ ವಿಸ್ತಾರವಾಗಿ ಅಪ್ಪಣೆ ಕೊಡಿಸಬೇಕು. ಎಲೈ ಸೂತಮಹರ್ಷಿಯೇ! ಲೋಕದಲ್ಲಿ ನಿನಗಿಂತಲೂ ಶಿವಭಕ್ತಿಸಂಪನ್ನರಾದವರು ಮತ್ತಾರೂ ಇರುವುದಿಲ್ಲ.

೧೧. ಆತ್ಮಜ್ಞಾನಿಗಳಾದ ಶೌನಕಾದಿ ಮಹಾಮುನಿಗಳ ಈ ಪ್ರಶ್ನೆಯನ್ನು ಕೇಳಿ, ವ್ಯಾಸಮುನಿಯ ಶಿಷ್ಯನಾದ ಆ ಸೂತಪುರಾಣಿಕನು ಉತ್ತಮೋತ್ತಮವಾದ ಶಿವಮಾಹಾತ್ಮ್ಯವನ್ನು ಅವರಿಗೆ ಈ ರೀತಿ ಹೇಳಲುಪಕ್ರಮಿಸಿದನು.

೧೨–೧೪. ಲೋಮಶನು ಹೇಳುತ್ತಾನೆ:—"ಎಲೈ ಶೌನಕಾದಿ ಮುನಿಗಳಿರಾ! ಕೇಳಿರಿ; ಶ್ರೀಮತ್ಪರಶಿವನು ಹದಿನೆಂಟುಪುರಾಣಗಳಲ್ಲಿಯೂ ಕೀರ್ತಿತನಾಗಿರುವನು. ಆತನ ಮಹಿಮೆಯು ಅಪಾರವಾಗಿರುವುದು. ಆದುದರಿಂದಲೇ ಆ ಮಹಾದೇವನ ಮಹಾ ಮಹಿಮೆಯನ್ನು ಹೀಗೆಂದು ಬಣ್ಣಿಸಲು ಯಾರೂ ಸಮರ್ಥರಾಗಿರುವುದಿಲ್ಲ. ಯಾವ ಮಾನವರು 'ಶಿವ' ಎಂಬ ಎರಡಕ್ಷರದ ಹೆಸರನ್ನು ಒಮ್ಮೆ ಉಚ್ಚರಿಸುತ್ತಾರೆಯೋ ಅವರಿಗೆ ಸ್ವರ್ಗಮೋಕ್ಷಗಳು ಲಭಿಸುವುದರಲ್ಲಿ ಸಂಶಯವಿಲ್ಲವು. ಆ ಮಹಾದೇವನು ಬಹಳ ಉದಾರಿಯಾದವನು. ದೇವತೆಗಳೆಲ್ಲರಿಗೂ ಆತನೇ ಪ್ರಭುವು. ಸಮಸ್ತವನ್ನೂ ತೋರೆದಿರುವುದರಿಂದ ಆತನಿಗೆ 'ಸರ್ವ' ಎಂಬ ಹೆಸರು ಬಂದಿರುವುದು.

೧೫–೧೬. ಇಂತಹ ಸದಾಶಿವನನ್ನು ಯಾವ ಮಾನವರು ಸದಾ ಭಜಿಸುವರೋ ಅವರೇ ಧನ್ಯರು; ಅವರೇ ಮಹಾತ್ಮರು. ಆತನನ್ನು ತೊರೆದು ಯಾವನು

ಭಕ್ಷಿತಂ ಹಿ ಗರಂ ಯೇನ ದಕ್ಷಯಜ್ಞೋ ವಿನಾಶಿತಃ ।
ಕಾಲಸ್ಯ ದಹನಂ ಯೇನ ಕೃತಂ ರಾಜ್ಞಃ ಪ್ರಮೋಚನಂ ॥ ೧೭ ॥

ಋಷಯ ಊಚುಃ:—

ಯಥಾ ಗರಂ ಭಕ್ಷಿತಂ ಚ ಯಥಾ ಯಜ್ಞೋ ವಿನಾಶಿತಃ ।
ದಕ್ಷಸ್ಯ ಚ ತಥಾ ಬ್ರೂಹಿ ಪರಂ ಕೌತೂಹಲಂ ಹಿ ನಃ ॥ ೧೮ ॥

ಸೂತ ಉವಾಚ:—

ದಾಕ್ಷಾಯಣೀ ಪುರಾ ದತ್ತಾ ಶಂಕರಸ್ಯ ಮಹಾತ್ಮನೇ ।
ವಚನಾದ್ಬ್ರಹ್ಮಣೋ ವಿಪ್ರಾ ದಕ್ಷೇಣ ಪರಮೇಷ್ಠಿನಃ ॥ ೧೯ ॥
ಏಕದಾ ಹಿ ಸ ದಕ್ಷೋ ವೈ ನೈಮಿಷಾರಣ್ಯಮಾಗತಃ ।
ಯದೃಚ್ಛಾವಶಮಾಪನ್ನ ಋಷಿಭಿಃ ಪರಿಪೂಜಿತಃ ॥ ೨೦ ॥
ಸ್ತುತಿಭಿಃ ಪ್ರಣಿಪಾತೈಶ್ಚ ತಥಾ ಸರ್ವೈಃ ಸುರಾಸುರೈಃ ।
ತತ್ರ ಸ್ಥಿತೋ ಮಹಾದೇವೋ ನಾಭ್ಯುತ್ಥಾನಾಭಿವಾದನೇ ।
ಚಕಾರಾಸ್ಯ ತತಃ ಕ್ರುದ್ಧೋ ದಕ್ಷೋ ವಚನಮಬ್ರವೀತ್ ॥ ೨೧ ॥

---

ಈ ಭವಸಾಗರವನ್ನು ದಾಟಬಯಸುವನೋ ಅವನು ಕೇವಲ ತಿಳುವಳಿಕೆಯಿಲ್ಲದವನು. ಅಲ್ಲದೆ, ಮಹಾ ಪಾಪಿಯೂ, ಶಿವದ್ವೇಷಿಯೂ ಅವನೇ ಎಂಬುದರಲ್ಲಿ ಸಂಶಯವಿಲ್ಲವು. ಆ ಶಂಕರನು ಸಾಮಾನ್ಯನೇ! ಆತನು ಬಹು ಘೋರವಾದ ಕಾಲಕೂಟವೆಂಬ ವಿಷವನ್ನು ಪಾನಮಾಡಿದನು! ದಕ್ಷಬ್ರಹ್ಮನ ಯಾಗವನ್ನು ನಾಶಗೊಳಿಸಿದವನೂ ಆತನೇ! ಆತನೇ ಕಾಲನೆಂದು ಪ್ರಸಿದ್ಧನಾದ ಯಮನನ್ನು ಸುಟ್ಟು ನಾಶಗೊಳಿಸಿದವನು! ಆತನೇ ಶ್ವೇತನೆಂಬ ರಾಜಶ್ರೇಷ್ಠನನ್ನು ಯಮನಿಂದ ಬಿಡುಗಡೆ ಮಾಡಿದವನು!''.

೧೮. ಇಂತು ನುಡಿದ ಆ ಲೋಮಶನ ನುಡಿಗಳನ್ನು ಕೇಳಿದ ಬಳಿಕ ಶೌನಕಾದಿ ಮುನಿಗಳು ಆತನನ್ನು ಈ ರೀತಿ ಪ್ರಶ್ನಿಸುತ್ತಾರೆ:—'' ಎಲೈ ಮುನಿಶ್ರೇಷ್ಠನೇ! ಪರಶಿವನು ಕಾಲಕೂಟ ವಿಷವನ್ನು ಪಾನಮಾಡಿದುದು ಹೇಗೆ? ದಕ್ಷಬ್ರಹ್ಮನ ಯಾಗವನ್ನು ನಾಶಮಾಡಿದುದೆಂತು? ಈ ವಿಷಯವನ್ನು ಕೇಳಲು ನಮಗೆ ಬಹಳ ಕುತೂಹಲವಾಗಿರುವುದು.''

೧೯–೨೧. ಸೂತನು ಹೇಳುತ್ತಾನೆ:—'' ಎಲೈ ಮುನಿಗಳಿರಾ! ಪೂರ್ವದಲ್ಲಿ ದಕ್ಷನು ಬ್ರಹ್ಮನ ಮಾತಿನಂತೆ, ತನ್ನ ಮಗಳಾದ ಸತೀದೇವಿಯನ್ನು ಮಹಾತ್ಮನಾದ ಶಂಕರನಿಗೆ ಕೊಟ್ಟು ಮದುವೆ ಮಾಡಿದನು. ತರುವಾಯ ಒಂದಾನೊಂದು ದಿವಸ ಅವನು ಅಕಸ್ಮಾತ್ತಾಗಿ ನೈಮಿಷಾರಣ್ಯಕ್ಕೆ ಬಂದನು. ಬಹು ಅಪರೂಪವಾಗಿ ಅಲ್ಲಿಗೆ ಬಂದ ಅವನನ್ನು ಕಂಡು ಅಲ್ಲಿದ್ದ ಮಹರ್ಷಿಗಳು, ದೇವತೆಗಳು ಎಲ್ಲರೂ ಅವನನ್ನು ಸ್ತುತಿಸಿ, ನಮಸ್ಕರಿಸಿ ಸತ್ಕರಿಸಿದರು. ಆದರೆ ಅಲ್ಲಿಯೇ ಕುಳಿತಿದ್ದ ಮಹಾದೇವನು ಮಾತ್ರ ಅವನನ್ನು ಗೌರವಿಸಲು ಎದ್ದು

ಸರ್ವತ್ರ ಸರ್ವೇಹಿ ಸುರಾಸುರಾ ಭೃಶಂ ।
ನಮಂತಿ ಮಾಂ ವಿಪ್ರವರಾಃ ಸಮುತ್ಸುಕಾಃ ॥
ಕಥಂ ಹ್ಯಸೌ ದುರ್ಜನವನ್ಮಹಾತ್ಮಾ ।
ಭೂತಾದಿಭಿಃ ಪ್ರೇತಪಿಶಾಚಯುಕ್ತಃ ॥ ೨೨ ॥
ಶ್ಮಶಾನವಾಸೀ ನಿರಪತ್ರಪೋ ಹ್ಯಯಂ ।
ಕಥಂ ಪ್ರಣಾಮಂ ನ ಕರೋತಿ ಮೇಽಧುನಾ ॥
ಪಾಖಂಡಿನೋ ದುರ್ಜನಾಃ ಪಾಪಶೀಲಾ ।
ವಿಪ್ರಂ ದೃಷ್ಟ್ವಾ ಚೋದ್ಧತಾ ಉನ್ಮದಾಶ್ಚ ॥ ೨೩ ॥
ವಧ್ಯಾಸ್ತ್ಯಾಜ್ಯಾಃ ಸದ್ಭಿರೇವಂ ವಿಧಾಹಿ ।
ತಸ್ಮಾದೇನಂ ಶಪಿತುಂ ಚೋದ್ಯತೋಽಸ್ಮಿ ॥
ಇತ್ಯೇವಮುಕ್ತ್ವಾ ಸ ಮಹಾತಪಾಸ್ತದಾ ।
ರುಷಾನ್ವಿತೋ ರುದ್ರಮಿದಂ ಬಭಾಷೇ ॥ ೨೪ ॥
ಶೃಣ್ವಂತ್ವಮೀ ವಿಪ್ರತಮಾ ಇದಾನೀಂ ।
ವಚೋ ಹಿ ಮೇ ಕರ್ತುಮಿಹಾರ್ಹಥೈತತ್ ॥
ರುದ್ರೋ ಹ್ಯಯಂ ಯಜ್ಞಬಾಹ್ಯೋ ಕೃತೋ ಮೇ ।
ವರ್ಣಾತೀತೋ ವರ್ಣಪರೋ ಯತಶ್ಚ ॥ ೨೫ ॥

---

ನಿಲ್ಲಲಿಲ್ಲ. ಇದರಿಂದ ಅವನಿಗೆ ಬಹಳ ಕೋಪಬಂದಿತು. ಆ ಕೋಪದಿಂದಲೇ ಅವನು ಹೀಗೆ ನುಡಿದನು :

೨೨–೨೩. "ಎಲೈ ಮುನಿಗಳಿರಾ! ನಾನು ಹೋದ ಕಡೆಗಳಲ್ಲೆಲ್ಲಾ ದೇವತೆಗಳು, ರಾಕ್ಷಸರು, ಬ್ರಾಹ್ಮಣರು ಎಲ್ಲರೂ ನನ್ನನ್ನು ನಮಸ್ಕರಿಸಿ ಗೌರವಿಸುತ್ತಾರೆ! ಹೀಗಿರುವಲ್ಲಿ ಈ ಶಿವನು ಮಹಾತ್ಮನಾಗಿದ್ದರೂ, ಕೇವಲ ದುಷ್ಟನಂತೆ, ಈ ಭೂತ ಪ್ರೇತ ಪಿಶಾಚಗಳಿಂದ ಕೂಡಿ, ಶ್ಮಶಾನದಲ್ಲಿ ವಾಸಮಾಡುತ್ತಿದ್ದರೂ ನಾಚಿಕೆಯೇ ಇಲ್ಲದೆ ನನಗೆ ನಮಸ್ಕಾರ ಮಾಡಲಿಲ್ಲವೇಕೆ? ಯಾರು ಬ್ರಾಹ್ಮಣನನ್ನು ಕಂಡು ಎದ್ದು ನಿಂತು ನಮಸ್ಕರಿಸುವುದಿಲ್ಲವೋ ಅವರು ಪಾಷಂಡಿಗಳು; ದುಷ್ಟರು; ದುರಹಂಕಾರಿಗಳು; ಕಡುಕೊಬ್ಬಿದವರು. ಅಂತಹರನ್ನು ಸತ್ಪುರುಷರು ವಧಿಸತಕ್ಕುದು; ಅಥವಾ ತೊರೆಯತಕ್ಕುದು. ಆದುದರಿಂದ ಈಗ ನಾನು ಈ ಶಿವನನ್ನು ಶಪಿಸಲು ತೊಡಗಿದ್ದೇನೆ?"

೨೪–೨೫. ಎಲೈ ಶೌನಕಾದಿ ಮುನಿಗಳಿರಾ! ಮಹಾ ತಪಸ್ವಿಯಾದ ದಕ್ಷನು ಈ ರೀತಿ ನುಡಿದು ಬಹಳವಾಗಿ ರೇಗಿ, ಅಲ್ಲಿದ್ದ ರುದ್ರಮೂರ್ತಿಯನ್ನುದ್ದೇಶಿಸಿ, ಎಲ್ಲರನ್ನೂ ಕುರಿತು "ಎಲೈ ವಿಪ್ರಶ್ರೇಷ್ಠರೇ! ಈಗ ನಾನಾಡುವ ಮಾತನ್ನು ಕೇಳಿರಿ. ನೀವೆಲ್ಲರೂ ಇನ್ನುಮುಂದೆ ಅದರಂತೆಯೇ ನಡೆಯಬೇಕು. ಯಾವ

**ನಂದೀ ನಿಶಮ್ಯ ತದ್ವಾಕ್ಯಂ ಶೈಲಾದೋಹಿ ರುಷಾನ್ವಿತಃ ।**
**ಅಬ್ರವೀತ್ತ್ವರಿತೋ ದಕ್ಷಂ ಶಾಪದಂ ತಂ ಮಹಾಪ್ರಭಂ ॥ ೨೬ ॥**

ನಂದ್ಯುವಾಚ :—

**ಯಜ್ಞಬಾಹ್ಯೋ ಹಿ ಮೇ ಸ್ವಾಮೀ ಮಹೇಶೋಽಯಂ ಕೃತಃ ಕಥಂ ।**
**ಯಸ್ಯ ಸ್ಮರಣಮಾತ್ರೇಣ ಯಜ್ಞಾಶ್ಚ ಸಫಲಾ ಹ್ಯಮೀ ॥ ೨೭ ॥**
**ಯಜ್ಞೋ ದಾನಂ ತಪಶ್ಚೈವ ತೀರ್ಥಾನಿ ವಿವಿಧಾನಿ ಚ ।**
**ಯಸ್ಯ ನಾಮ್ನಾ ಪವಿತ್ರಾಣಿ ಸೋಽಯಂ ಶಪ್ತೋಽಧುನಾ ಕಥಂ ॥ ೨೮ ॥**
**ವೃಥಾ ತೇ ಬ್ರಹ್ಮಚಾಪಲ್ಯಾಚ್ಛಪ್ತೋಽಯಂ ದಕ್ಷ ದುರ್ಮತೇ ।**
**ಯೇನೇದಂ ಪಾಲಿತಂ ವಿಶ್ವಂ ಶರ್ವೇಣ ಚ ಮಹಾತ್ಮನಾ ।**
**ಶಪ್ತೋಽಯಂ ಸ ಕಥಂ ಪಾಪ ರುದ್ರೋಽಯಂ ಬ್ರಾಹ್ಮಣಾಧಮ ॥೨೯॥**
**ಏವಂ ನಿರ್ಭರ್ತ್ಸಿತಸ್ತೇನ ನಂದಿನಾ ಹಿ ಪ್ರಜಾಪತಿಃ ।**
**ನಂದಿನಂ ಚ ಶಶಾಪಾಥ ದಕ್ಷೋ ರೋಷಸಮನ್ವಿತಃ ॥ ೩೦ ॥**

---

ಕಾರಣದಿಂದ ಈ ರುದ್ರನು ಚಾತುರ್ವರ್ಣ್ಯಕ್ಕೆ ಮೀರಿದವನಾದರೂ, ವರ್ಣಪರನಂತೆ ನಟಿಸುತ್ತಿರುವನೋ ಅದೇ ಕಾರಣದಿಂದಲೇ ನಾನು ಇವನನ್ನು ಯಜ್ಞಬಾಹ್ಯನನ್ನಾಗಿ ಮಾಡಿದ್ದೇನೆ. ನಾನು ಇವನಿಗೆ ಈ ರೀತಿ ಶಾಪವನ್ನು ಕೊಟ್ಟಿರುವೆನು'' ಎಂದು ಹೇಳಿದನು.

೨೬–೨೭. ದಕ್ಷನಾಡಿದ ಈ ಮಾತುಗಳನ್ನು ಕೇಳಿ ಅಲ್ಲಿಯೇ ಇದ್ದ ಶೈಲಾದನಾದ ನಂದಿಯು ರೋಷಗೊಂಡು ತನ್ನ ಪ್ರಭುವಿಗೆ ಶಾಪವನ್ನಿತ್ತ ಮಹಾತೇಜಸ್ವಿಯಾದ ಅವನನ್ನು ಕುರಿತು ಬಹು ತೀಕ್ಷ್ಣವಾಗಿ ಹೀಗೆಂದನು. ನಂದಿಯು ಹೇಳುತ್ತಾನೆ:—'' ಎಲವೋ ದಕ್ಷಾ! ಯಾವನನ್ನು ಸ್ಮರಿಸಿದ ಮಾತ್ರದಿಂದಲೇ ಸಮಸ್ತ ಯಜ್ಞಗಳೂ ಸಫಲಗಳಾಗುತ್ತವೆಯೋ ಆ ನಮ್ಮ ಸ್ವಾಮಿಯಾದ ಶಂಕರನನ್ನು ನೀನು ಯಜ್ಞಬಾಹಿರನನ್ನಾಗಿ ಮಾಡಿದುದೆಂತು? ಯಾವನ ಹೆಸರನ್ನೊಮ್ಮೆ ಉಚ್ಚರಿಸಿದೊಡನೆಯೇ ಯಜ್ಞ, ದಾನ, ತಪಸ್ಸು, ವಿವಿಧ ತೀರ್ಥಗಳು ಎಲ್ಲವೂ ಪವಿತ್ರವಾಗುತ್ತವೆಯೋ ಆ ನಮ್ಮ ಪರಮಶಿವನನ್ನು ನೀನು ಶಪಿಸಿದುದು ಹೇಗೆ?

೨೮–೨೯. ಎಲಾ ದಕ್ಷಾ! ನೀನು ಕೇವಲ ಮಂದಬುದ್ಧಿಯುಳ್ಳವನು! ನೀನು, ಕೇವಲ ಆ ನಿನ್ನ ಬ್ರಾಹ್ಮಣ ಚಾಪಲ್ಯದಿಂದಲೂ, ನಾನೇ ಬ್ರಾಹ್ಮಣನೆಂಬ ದುರಹಂಕಾರದಿಂದಲೂ ನಿಷ್ಪ್ರಯೋಜನವಾಗಿ ನಮ್ಮ ಪ್ರಭುವನ್ನು ಶಪಿಸಿದೆ! ಎಲವೋ ಬ್ರಾಹ್ಮಣಾಧಮನೇ! ಶಂಕರನೆಂದರೆ ಸಾಮಾನ್ಯನೆಂದು ತಿಳಿದೆಯಾ! ಈ ಮಹಾತ್ಮನೇ ಸಮಸ್ತ ಪ್ರಪಂಚವನ್ನೂ ಪಾಲಿಸುವಾತನು! ಇಂತಹನನ್ನು ನೀನು ಹೇಗೆತಾನೆ ಶಪಿಸಿದೆ?''

೩೦–೩೨. ಎಲೈ ಮಹರ್ಷಿಗಳಿರಾ! ನಂದೀಶ್ವರನು ಈ ಪ್ರಕಾರ ಗದುರಿಸಲು ಆ ದಕ್ಷಪ್ರಜಾಪತಿಯು ಮತ್ತೂ ರೇಗಿ ಅವನನ್ನೂ ಇತರ ಶಿವಭಕ್ತರನ್ನೂ

ಯೂಯಂ ಸರ್ವೇ ರುದ್ರಪರಾ ವೇದಬಾಹ್ಯಾಶ್ಚ ವೈ ಭೃಶಂ ।
ಶಪ್ತಾಹಿ ವೇದಮಾರ್ಗೈಶ್ಚ ತಥಾ ತ್ಯಕ್ತಾ ಮಹರ್ಷಿಭಿಃ ॥ ೩೧ ॥
ಪಾಷಂಡವಾದಸಂಯುಕ್ತಾಃ ಶಿಷ್ಟಾಽಽಚಾರ ಬಹಿಷ್ಕೃತಾಃ ।
ಕಪಾಲಿನಃ ಪಾನರತಾಸ್ತಥಾ ಕಾಲಮುಖಾಹ್ಯಮೀ ॥ ೩೨ ॥
ಇತಿ ಶಪ್ತಾಸ್ತದಾ ತೇನ ದಕ್ಷೇಣ ಶಿವಕಿಂಕರಾಃ ।
ತದಾ ಪ್ರಕುಪಿತೋ ನಂದೀ ದಕ್ಷಂ ಶಪ್ತುಂ ಪ್ರಚಕ್ರಮೇ ॥ ೩೩ ॥
ಶಪ್ತಾ ವಯಂ ತ್ವಯಾ ವಿಪ್ರ ಸಾಧವಃ ಶಿವಕಿಂಕರಾಃ ।
ವೃಥೈವ ಬ್ರಹ್ಮಚಾಪಲ್ಯಾದಹಂ ಶಾಪಂ ದದಾಮಿ ತೇ ॥ ೩೪ ॥
ವೇದವಾದರತಾ ಯೂಯಂ ನಾನ್ಯದಸ್ತೀತಿ ವಾದಿನಃ ।
ಕಾಮಾತ್ಮಾನಃ ಸ್ವರ್ಗಪರಾ ಲೋಭಮೋಹಸಮನ್ವಿತಾಃ ॥ ೩೫ ॥
ವೈದಿಕಂ ಚ ಪುರಸ್ಕೃತ್ಯ ಬ್ರಾಹ್ಮಣಾಃ ಶೂದ್ರಯಾಜಕಾಃ ।
ದರಿದ್ರಿಣೋ ಭವಿಷ್ಯಂತಿ ಪ್ರತಿಗ್ರಹರತಾಃ ಸದಾ ।

---

ಈ ರೀತಿ ಶಪಿಸಿದನು :— "ಎಲವೆಲವೋ! ರುದ್ರನು ಮಾತ್ರವಲ್ಲದೆ, ಅವನ ಕಡೆಯುವರಾದ ನೀವೆಲ್ಲರೂ ಯಜ್ಞಬಾಹ್ಯರಾಗಿರೆಂದು ಈ ನಾನು ಶಪಿಸಿರುತ್ತೇನೆ. ಆದುದರಿಂದ ವೇದೋಕ್ತ ಕರ್ಮಗಳನ್ನು ಅನುಷ್ಠಾನ ಮಾಡುವುದರಲ್ಲಿ ಆಸಕ್ತರಾದ ಎಲ್ಲ ಮಹರ್ಷಿಗಳೂ ನಿಮ್ಮನ್ನು ತೊರೆಯುತ್ತಾರೆ. ಇದೋ ಇದೋ! ಇಲ್ಲಿರುವ ನೀವೆಲ್ಲರೂ ಪಾಷಂಡವಾದದಲ್ಲಿಯೇ ತೊಡಗಿ, ಶಿಷ್ಟರು ಅನುಷ್ಠಿಸುವ ಆಚಾರಗಳಿಗೆ ಬಾಹ್ಯರಾಗಿ ಕೈಯಲ್ಲಿ ತಲೆಬುರುಡೆಗಳನ್ನು ಹಿಡಿದು ಹೆಂಡ ಕುಡಿಯುವುದರಲ್ಲಿಯೇ ಆಸಕ್ತರಾಗಿ ಕಪ್ಪುಮೋರೆಯುವರಾಗಿ ಹೋಗಿರಿ."

೩೩–೩೬. ಹೀಗೆ ಆ ದಕ್ಷನು ನಂದಿಯನ್ನು ಮಾತ್ರವಲ್ಲದೆ ಶಿವಕಿಂಕರರೆಲ್ಲರನ್ನೂ ಶಪಿಸಲು ಅವನು ಬಹಳವಾಗಿ ಕೋಪಗೊಂಡು ಅದೇ ಕೋಪದಲ್ಲಿಯೇ ಆ ದಕ್ಷನನ್ನೂ ಶಪಿಸಲು ಮೊದಲುಮಾಡಿದನು :— "ಎಲವೊ ವಿಪ್ರನೇ! ನೀನು ಕೇವಲ ಆ ನಿನ್ನ ಬ್ರಹ್ಮಚಾಪಲ್ಯದಿಂದ, ಯಾರಗೊಡವೆಗೂ ಹೋಗದೆ ಸಾಧುಗಳಾಗಿರುವವರೂ, ಸ್ವಾಮಿಯಾದ ಶಿವನನ್ನೇ ಸೇವೆ ಮಾಡಿಕೊಂಡಿರುವವರೂ ಆದ ನಮ್ಮೆಲ್ಲರನ್ನೂ ನಿಷ್ಪ್ರಯೋಜನವಾಗಿ ಶಪಿಸಿದೆಯಲ್ಲವೆ! ಇದೋ, ಈಗ ನಾನು ನಿನಗೆ ಪ್ರತಿಶಾಪವನ್ನು ಕೊಡುತ್ತೇನೆ. ಬ್ರಾಹ್ಮಣರಾದ ನೀವೆಲ್ಲರೂ, ವೇದವಾದಗಳನ್ನು ಮಾಡುವುದರಲ್ಲಿಯೇ ಆಸಕ್ತರಾಗಿ ಆ ವೇದಗಳನ್ನುಳಿದು ಮತ್ತೇನೂ ಇರುವುದಿಲ್ಲವೆಂದು ಹೇಳುತ್ತ, ಕಾಮಕ್ಕೆ ತುತ್ತಾಗಿ ಚಲಿಸಿದ ಚಿತ್ತವುಳ್ಳವರೂ, ಸ್ವರ್ಗವನ್ನೇ ಬಯಸಿ ಯಾಗಾದಿ ಕರ್ಮಗಳನ್ನು ಮಾಡುವವರೂ, ಲೋಭ ಮೋಹಗಳಿಂದ ಕೂಡಿ, ವೇದೋಕ್ತ ಕರ್ಮಗಳನ್ನೇ ಮುಂದುಮಾಡಿಕೊಂಡು ಶೂದ್ರರನ್ನು ಪೂಜಿಸುವವರೂ, ದಟ್ಟದರಿದ್ರರೂ

**ದಕ್ಷ ಕೇಚಿದ್ಭವಿಷ್ಯಂತಿ ಬ್ರಾಹ್ಮಣಾ ಬ್ರಹ್ಮರಾಕ್ಷಸಾಃ ॥ ೩೬ ॥**

**ಲೋಮಶ ಉವಾಚ :—**

**ವಿಪ್ರಾಸ್ತೇ ಶಪಿತಾಸ್ತೇನ ನಂದಿನಾ ಕೋಪಿನಾ ಭೃಶಂ ॥ ೩೭ ॥**

**ಅಥಾಕರ್ಣ್ಯೇಶ್ವರೋ ವಾಕ್ಯಂ ನಂದಿನಃ ಪ್ರಹಸನ್ನಿವ ।**

**ಉವಾಚ ವಾಕ್ಯಂ ಮಧುರಂ ಬೋಧಯುಕ್ತಂ ಸದಾಶಿವಃ ॥ ೩೮ ॥**

**ಮಹಾದೇವ ಉವಾಚ :—**

**ಕೋಪಂ ನಾರ್ಹಸಿ ವೈ ಕರ್ತುಂ ಬ್ರಾಹ್ಮಣಾನ್ಪ್ರತಿ ವೈ ಸದಾ ।**

**ಬ್ರಾಹ್ಮಣಾ ಗುರವೋ ಹ್ಯೇತೇ ವೇದವಾದರತಾಃ ಸದಾ ॥ ೩೯ ॥**

**ವೇದೋ ಮಂತ್ರಮಯಃ ಸಾಕ್ಷಾತ್ತಥಾ ಸೂಕ್ತಮಯೋ ಭೃಶಂ ।**

**ಸೂಕ್ತೇ ಪ್ರತಿಷ್ಠಿತೋ ಹ್ಯಾತ್ಮಾ ಸರ್ವೇಷಾಮಪಿ ದೇಹಿನಾಂ ॥ ೪೦ ॥**

**ತಸ್ಮಾನ್ನಾತ್ಮವಿದೋ ನಿಂದ್ಯಾ ಆತ್ಮೈವಾಹಂ ನ ಚೇತರಃ ।**

**ಕೋಽಯಂ ಕಸ್ತ್ವಂ ಕ್ವಚಾಹಂ ವೈ ಕಸ್ಮಾಚ್ಛಪ್ತಾಹಿ ವೈದ್ವಿಜಾಃ ॥ ೪೧ ॥**

**ಪ್ರಪಂಪರಚನಾಂ ಹಿತ್ವಾ ಬುದ್ಧೋ ಭವ ಮಹಾಮತೇ ।**

**ತತ್ವಜ್ಞಾನೇನ ನಿರ್ವರ್ತ್ಯ ಸ್ವಸ್ಥಃ ಕ್ರೋಧಾದಿವರ್ಜಿತಃ ॥ ೪೨ ॥**

---

ಆಗಿ ಯಾವಾಗಲೂ ದಾನಗಳನ್ನೇ ಹಿಡಿಯುವುದರಲ್ಲಿ ಆಸಕ್ತಿಯುಳ್ಳವರಾಗಿರಿ. ಎಲಾ ದಕ್ಷಾ! ಈ ಬ್ರಾಹ್ಮಣರಲ್ಲಿ ಕೆಲವರಂತೂ ಬ್ರಹ್ಮರಾಕ್ಷಸರಾಗುತ್ತಾರೆ!!"

೩೭–೩೮. ಲೋಮಶಮುನಿಯು ಹೇಳುವನು :—ಅಯ್ಯಾ ಮುನಿಗಳಿರಾ! ನಂದಿಯು ಈ ಪ್ರಕಾರ ದಕ್ಷನನ್ನು ಮಾತ್ರವಲ್ಲದೆ ಆ ನೈಮಿಷಾರಣ್ಯದಲ್ಲಿದ್ದ ಬ್ರಾಹ್ಮಣರೆಲ್ಲರನ್ನೂ ಶಪಿಸಿದನು. ಆಗ ಪರಶಿವನು ತನ್ನ ಕಿಂಕರನಾದ ಅವನ ಶಾಪವಚನವನ್ನಾಲಿಸಿ ನಸುನಗುತ್ತ ಅವನಿಗೆ ತಿಳುವಳಿಕೆಯನ್ನು ಹೇಳುವವನಾಗಿ ಅವನನ್ನು ಕುರಿತು ಮಧುರವಾದ ಈ ಮಾತನ್ನಾಡಿದನು.

೩೯–೪೦. ಮಹಾದೇವನು ಹೇಳುತ್ತಾನೆ:—"ಅಯ್ಯಾ ನಂದಿಯೇ! ಯಾವಾಗಲೇ ಆಗಲಿ ಬ್ರಾಹ್ಮಣರೆಲ್ಲರಲ್ಲಿಯೂ ಕೋಪವನ್ನು ತಾಳಬೇಡ. ವೇದ ವಿಷಯದಲ್ಲಿ ವಿಚಾರಮಾಡುವ ಬ್ರಾಹ್ಮಣರು ಯಾವಾಗಲೂ ಗುರುಗಳೇ! ಏಕೆಂದರೆ, ವೇದಗಳು ಸಾಕ್ಷಾತ್ತಾಗಿ ಮಂತ್ರಗಳಿಂದ ತುಂಬಿರುವುವು. ಇಷ್ಟೆಯಲ್ಲದೆ ಅನೇಕ ಸೂಕ್ತಿಗಳಿಂದಲೂ ಶೋಭಿಸುತ್ತಿರುವುವು. ಈ ಎಲ್ಲ ಸೂಕ್ತಗಳಲ್ಲಿಯೂ, ಸಮಸ್ತ ದೇಹಗಳಲ್ಲಿಯೂ ನೆಲಸಿರುವ ಆತ್ಮನೇ ಪ್ರತಿಷ್ಠಿತನಾಗಿರುವನು.

೪೧–೪೨. ಪರಮಾತ್ಮನು ವೇದ ಸೂಕ್ತಗಳಿಂದಲೇ ಪ್ರತಿಪಾದ್ಯನಲ್ಲವೆ! ಆದುದರಿಂದ ವೇದಗಳನ್ನರಿತವರು ಆತ್ಮಜ್ಞಾನಿಗಳು. ಅಂತಹರನ್ನು ನಿಂದಿಸಬಾರದು. ಅಯ್ಯಾ ನಾನೇ ಆ ಪರಮಾತ್ಮನಾಗಿರುವೆನಲ್ಲವೆ! ನನ್ನನ್ನು ಬಿಟ್ಟರೆ

ಏವಂ ಪ್ರಬೋಧಿತಸ್ತೇನ ಶಂಭುನಾ ಪರಮೇಷ್ಠಿನಾ ।
ವಿವೇಕಪರಮೋ ಭೂತ್ವಾ ಶೈಲಾದೋ ಹಿ ಮಹಾತಪಾಃ ।
ಶಿವೇನ ಸಹ ಸಂಗಮ್ಯ ಪರಮಾನಂದಸಂಪ್ಲುತಃ ॥ ೪೩ ॥
ದಕ್ಷೋಽಪಿಹಿ ರುಷಾವಿಷ್ಟ ಋಷಿಭಿಃ ಪರಿವಾರಿತಃ ।
ಯಯೌ ಸ್ಥಾನಂ ಸ್ವಕಂ ತತ್ರ ಪ್ರವಿವೇಶ ರುಷಾನ್ವಿತಃ ॥ ೪೪ ॥
ಶ್ರದ್ಧಾಂ ವಿಹಾಯ ಪರಮಾಂ ಶಿವಪೂಜಕಾನಾಂ ।
ನಿಂದಾಪರಃ ಸಹಿ ಬಭೂವ ನರಾಧಮಶ್ಚ ॥
ಸರ್ವೈರ್ಮಹರ್ಷಿಭಿರುಪೇತ್ಯ ಸ ತತ್ರ ಶರ್ವಂ ।
ದೇವಂ ನಿನಿಂದ ನ ಬಭೂವ ಕದಾಪಿ ಶಾಂತಃ ॥ ೪೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಪುರಾಣಪ್ರಸ್ತಾವ-
ದಕ್ಷವೃತ್ತಾಂತವರ್ಣನಂ" ನಾಮ ಪ್ರಥಮೋಧ್ಯಾಯಃ

---

ಮತ್ತಾವನೂ ಪರಮಾತ್ಮನೆನಿಸಿದವನಿಲ್ಲವು. ಎಲೈ ನಂದಿಯೇ! ಇವನಾರು? ನಾನಾರು? ನೀನಾದರೂ ಯಾರು? ಎಲ್ಲರಲ್ಲಿಯೂ ನಾನೇ ಅಂತರ್ಯಾಮಿಯಾಗಿರುವೆನಲ್ಲವೇ! ಇಂತಿರುವಲ್ಲಿ ನೀನು ಬ್ರಾಹ್ಮಣರೆಲ್ಲರನ್ನೂ ಶಪಿಸಿದುದೇಕೆ? ನಂದೀ! ನೀನು ಬಹಳ ಬುದ್ಧಿಶಾಲಿಯು! ರೋಷಕ್ಕೆ ತುತ್ತಾಗಿ ಈ ರೀತಿ ಶಪಿಸಿದ್ದೀಯೆ. ಆದುದರಿಂದ ಈಗ ತತ್ತ್ವವನ್ನು ಮನದಟ್ಟುಮಾಡಿಕೊಂಡು ಈ ಕ್ರೋಧವನ್ನು ತೊರೆದು ಶುದ್ಧನಾಗು; ಜ್ಞಾನಿಯಾಗಿ ಈ ಪ್ರಾಪಂಚಿಕ ರಚನೆಯನ್ನು ದೂರಮಾಡು."

೪೩. ಎಲೈ ತಪೋಧನರೇ! ಈ ರೀತಿ ಪರಮೇಷ್ಠಿಯಾದ ಆ ಶಂಭುವು ವಿವೇಕವನ್ನು ಹೇಳಿ ಎಚ್ಚರಗೊಳಿಸಲು ಮಹಾ ತಪಸ್ವಿಯಾದ ಆ ಶೈಲಾದ ನಂದಿಯು ಮಹಾ ಜ್ಞಾನಿಯಾಗಿ ಶಿವನೊಡನೆ ಸೇರಿ ಪರಮಾನಂದಭರಿತನಾದನು.

೪೪–೪೫. ದಕ್ಷಬ್ರಹ್ಮನಾದರೋ ಅದೇ ರೋಷದಿಂದಲೇ ಕೂಡಿ ಋಷಿಗಳೊಡನೆ ತನ್ನ ಮನೆಗೆ ಬಂದನು. ಅವನು ಉತ್ತಮವಾದ ಶ್ರದ್ಧಾಭಕ್ತಿಗಳನ್ನು ತೊರೆದು, ಶಿವಪೂಜಕರನ್ನು ನಿಂದಿಸುವ ನರಾಧಮನಾಗಿ ಪರಶಿವನನ್ನೂ ನಿಂದಿಸಿದನಲ್ಲದೆ ಶಾಂತಿಯನ್ನೆಂದಿಗೂ ಹೊಂದಲಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ
ಕೇದಾರಖಂಡದಲ್ಲಿ "ಪುರಾಣಪ್ರಸ್ತಾವ–ದಕ್ಷವೃತ್ತಾಂತವರ್ಣನ" ಎಂಬ
ಮೊದಲನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಿತೀಯೋಽಧ್ಯಾಯಃ

**ದಕ್ಷಯಜ್ಞಪ್ರಾರಂಭಃ — ಯಜ್ಞಂಪ್ರತಿ ಸತೀದೇವ್ಯಾಗಮನಂ**

**ಲೋಮಶ ಉವಾಚ :—**

**ಏಕದಾ ತು ತದಾ ತೇನ ಯಜ್ಞಃ ಪ್ರಾರಂಭಿತೋ ಮಹಾನ್ ।**
**ತತ್ರಾಹೂತಾಸ್ತದಾ ಸರ್ವೇ ದೀಕ್ಷಿತೇನ ತಪಸ್ವಿನಾ ॥ ೧ ॥**
**ಋಷಯೋ ವಿವಿಧಾಸ್ತತ್ರ ವಶಿಷ್ಠಾದ್ಯಾಃ ಸಮಾಗತಾಃ ।**
**ಅಗಸ್ತ್ಯಃ ಕಶ್ಯಪೋಽತ್ರಿಶ್ಚ ವಾಮದೇವಸ್ತಥಾ ಭೃಗುಃ ॥ ೨ ॥**
**ದಧೀಚಿರ್ಭಗವಾನ್ವ್ಯಾಸೋ ಭರದ್ವಾಜೋಽಥ ಗೌತಮಃ ।**
**ಏತೇ ಚಾನ್ಯೇ ಚ ಬಹವಃ ಸಮಾಜಗ್ಮುರ್ಮಹರ್ಷಯಃ ॥ ೩ ॥**
**ತಥಾ ಸರ್ವೇ ಸುರಗಣಾ ಲೋಕಪಾಲಾಸ್ತಥಾಽಪರೇ ।**
**ವಿದ್ಯಾಧರಾಶ್ಚ ಗಂಧರ್ವಾಃ ಕಿಂನರಾಪ್ಸರಸಾಂಗಣಾಃ ॥ ೪ ॥**
**ಸತ್ಯಲೋಕಾತ್ಸಮಾನೀತೋ ಬ್ರಹ್ಮಾ ಲೋಕಪಿತಾಮಹಃ ।**
**ವೈಕುಂಠಾಚ್ಚ ತಥಾ ವಿಷ್ಣುಃ ಸಮಾನೀತೋ ಮಖಂ ಪ್ರತಿ ॥ ೫ ॥**
**ದೇವೇಂದ್ರೋ ಹಿ ಸಮಾನೀತ ಇಂದ್ರಾಣ್ಯಾ ಸಹ ಸುಪ್ರಭಃ ।**
**ತಥಾ ಚಂದ್ರೋ ಹಿ ರೋಹಿಣ್ಯಾ ವರುಣಃ ಪ್ರಿಯಯಾ ಸಹ ॥ ೬ ॥**

---

### ಕನ್ನಡದ ಅನುವಾದ

**ದಕ್ಷಬ್ರಹ್ಮನು ಯಜ್ಞವನ್ನು ಪ್ರಾರಂಭ ಮಾಡಿದುದು — ಸತೀದೇವಿಯು ಆ ಯಜ್ಞಕ್ಕೆ ಬರುವುದು**

೧–೩. ಲೋಮಶನು ಹೇಳುತ್ತಾನೆ :—ಕೇಳಿರೈ ಋಷಿಗಳಿರಾ ! ತರುವಾಯ ಆ ದಕ್ಷಬ್ರಹ್ಮನು ಒಂದಾನೊಂದು ಸಮಯದಲ್ಲಿ ಮಹತ್ತರವಾದ ಯಾಗವನ್ನು ಮಾಡಲುಪಕ್ರಮಿಸಿದನು. ದೀಕ್ಷಿತನಾದ ಅವನು ಆ ಯಾಗಕ್ಕೆ ಎಲ್ಲರನ್ನೂ ಆಹ್ವಾನಿಸಿದನು. ವಸಿಷ್ಠರೇ ಮೊದಲಾದ ಅನೇಕ ಮಹರ್ಷಿಗಳು ದಯಮಾಡಿಸಿದರು. ಅಗಸ್ತ್ಯ, ಕಶ್ಯಪ, ಅತ್ರಿ, ವಾಮದೇವ, ದಧೀಚಿ, ಪೂಜ್ಯರಾದ ವ್ಯಾಸರು, ಭಾರದ್ವಾಜ, ಗೌತಮ ಮುಂತಾದ ಇತರ ಬಹುಮಂದಿ ಮಹಾಮುನಿಗಳೂ ಅಲ್ಲಿಗೆ ಬಂದರು.

೪–೬. ಅತಲವಿತಲಾದಿ ಸಮಸ್ತ ಲೋಕಗಳಿಂದಲೂ ಆ ದಕ್ಷಬ್ರಹ್ಮನು ದೇವತಾ ಸಮೂಹಗಳನ್ನೂ, ಲೋಕಪಾಲಕರನ್ನೂ, ವಿದ್ಯಾಧರ, ಗಂಧರ್ವ, ಕಿನ್ನರ, ಅಪ್ಸರರ ಸಮೂಹಗಳನ್ನೂ ತಾನು ನಡೆಸುವ ಆ ಯಜ್ಞಕ್ಕೆ ಕರೆಯಿಸಿದನು. ಸತ್ಯಲೋಕದಿಂದ ಲೋಕಪಿತಾಮಹನಾದ ಬ್ರಹ್ಮನನ್ನೂ, ವೈಕುಂಠದಿಂದ

**ಕುಬೇರಃ ಪುಷ್ಪಕಾರೂಢೋ ಮೃಗಾಽಽರೂಢೋಽಥ ಮಾರುತಃ ।**
**ಬಸ್ತಾಽಽರೂಢಃ ಪಾವಕಶ್ಚ ಪ್ರೇತಾಽಽರೂಢೋಽಥ ನಿರ್ಋತಿಃ ॥ ೭ ॥**
**ಏತೇ ಸರ್ವೇ ಸಮಾಯಾತಾ ಯಜ್ಞವಾಟಂ ದ್ವಿಜನ್ಮನಃ ।**
**ತೇ ಸರ್ವೇ ಸತ್ಕೃತಾಸ್ತೇನ ದಕ್ಷೇಣ ಚ ದುರಾತ್ಮನಾ ॥ ೮ ॥**
**ಭವನಾನಿ ಮಹಾರ್ಹಾಣಿ ಸುಪ್ರಭಾಣಿ ಮಹಾಂತಿಚ ।**
**ತ್ವಷ್ಟ್ರಾ ಕೃತಾನಿ ದಿವ್ಯಾನಿ ಕೌಶಲ್ಯೇನ ಮಹಾತ್ಮನಾ ॥ ೯ ॥**
**ತೇಷು ಸರ್ವೇಷು ಧಿಷ್ಣ್ಯೇಷು ಯಥಾ ಜೋಷಂ ಸಮಾಸ್ಥಿತಾಃ ॥ ೧೦ ॥**
**ವರ್ತಮಾನೇ ಮಹಾಯಜ್ಞೇ ತೀರ್ಥೇ ಕನಖಲೇ ತಥಾ ।**
**ಋತ್ವಿಜಶ್ಚ ಕೃತಾಸ್ತೇನ ಭೃಗ್ವಾದ್ಯಾಶ್ಚ ತಪೋಧನಾಃ ॥ ೧೧ ॥**
**ದೀಕ್ಷಾಯುಕ್ತಸ್ತದಾ ದಕ್ಷಃ ಕೃತಕೌತುಕಮಂಗಲಃ ।**
**ಭಾರ್ಯಯಾ ಸಹಿತೋ ವಿಪ್ರೈಃ ಕೃತಸ್ವಸ್ತ್ಯಯನೋ ಭೃಶಂ ॥ ೧೨ ॥**

---

ಶ್ರೀಮನ್ಮಹಾವಿಷ್ಣುವನ್ನೂ ಆಹ್ವಾನಿಸಿದನು. ಮಹಾ ತೇಜಸ್ವಿಯಾದ ದೇವೇಂದ್ರನು ಶಚೀದೇವಿಯೊಡನೆಯೂ, ಚಂದ್ರನು ರೋಹಿಣೀದೇವಿಯೊಡನೆಯೂ, ವರುಣನು ತನ್ನ ಪ್ರಿಯೆಯೊಡನೆಯೂ ಆ ಯಜ್ಞ ಸಮಾರಂಭಕ್ಕೆ ಆಹ್ವಾನಿತರಾದರು.

೭. ಕುಬೇರನು ಪುಷ್ಪಕ ವಿಮಾನವನ್ನೇರಿಯೂ, ಮಾರುತನು ಮೃಗ ವಾಹನನಾಗಿಯೂ, ಯಜ್ಞೇಶ್ವರನು ಆಡನ್ನೇರಿಯೂ, ನಿರ್ಋತಿಯು ಪ್ರೇತಾ ರೂಢನಾಗಿಯೂ ಬ್ರಾಹ್ಮಣನಾದ ಆ ದಕ್ಷನೆನಗುವ ಯಾಗಕ್ಕೈತಂದರು. ಆ ದುರಾತ್ಮನು ಅವರೆಲ್ಲರನ್ನೂ ಎದುರುಗೊಂಡು ಬಹುವಾಗಿ ಸತ್ಕರಿಸಿದನು.

೮–೧೦. ಯಜ್ಞಸಮಾರಂಭವನ್ನು ನೋಡಲೈತಂದಿದ್ದ ಅವರೆಲ್ಲರೂ, ದೇವ ಶಿಲ್ಪಿಯಾದ ವಿಶ್ವಕರ್ಮನು ಬಹು ಕುಶಲತೆಯಿಂದ ನಿರ್ಮಿಸಿದ್ದ ಉತ್ತಮೋ ತ್ತಮವೂ, ಮಹಾ ಕಾಂತಿಸಮನ್ವಿತವೂ ಆಗಿದ್ದ ಮನೋಹರವಾದ ಭವನಗಳಲ್ಲಿ ಯಥಾಸುಖವಾಗಿ ತಂಗಿದರು.

೧೧–೧೪. ಬಳಿಕ ಪುಣ್ಯಕ್ಷೇತ್ರವಾದ ಕನಖಲಕ್ಷೇತ್ರದಲ್ಲಿ ಯಜ್ಞವು ಮೊದಲಾಯಿತು. ಆಗ, ದಕ್ಷಬ್ರಹ್ಮನು ಭೃಗುವೇ ಮೊದಲಾದ ತಪೋಧನರನ್ನು ಆ ಯಾಗಕ್ಕೆ ಋತ್ವಿಜರಾಗಬೇಕೆಂದು ಪ್ರಾರ್ಥಿಸಿದನು. ತರುವಾಯ ಅವನು ಯಥಾವಿಧಿಯಾಗಿ ದೀಕ್ಷೆಯನ್ನು ವಹಿಸಿ ತನ್ನ ಭಾರ್ಯೆಯೊಡನೆ ಮಂಗಳಸ್ನಾನ ವನ್ನು ಮಾಡಿ, ಬ್ರಾಹ್ಮಣರ ಸ್ವಸ್ತ್ಯಯನವನ್ನು ಕೈಕೊಂಡು, ಗೆಳೆಯರೆಲ್ಲರೂ ಸುತ್ತ ಬಳಸಿ ನಿಂತಿರಲು ಬಹುವಾಗಿ ಶೋಭಿಸಿದನು. ಈ ನಡುವೆ ಆ ಯಾಗ ಮಂಟಪದಲ್ಲಿದ್ದ ದಧೀಚಿ ಮುನಿಯು ಅವನನ್ನು ಕುರಿತು ಹೇಳಿದನು: "ಅಯ್ಯಾ ದಕ್ಷಬ್ರಹ್ಮನೇ! ನೀನು ಮೊದಲುಮಾಡಿರುವ ಈ ಯಜ್ಞಕ್ಕೆ ಸುರಶ್ರೇಷ್ಠರೂ,

**ರೇಜೇ ತದಾ ಮಹತ್ವೇನ ಸುಹೃದ್ಭಿಃ ಪರಿತಃ ಸದಾ ।**
**ಏತಸ್ಮಿನ್ನಂತರೇ ತತ್ರ ದಧೀಚಿರ್ವಾಕ್ಯಮಬ್ರವೀತ್ ॥ ೧೩ ॥**

**ದಧೀಚಿರುವಾಚ :–**

**ಏತೇ ಸುರೇಶಾ ಋಷಯೋ ಮಹತ್ತರಾಃ ।**
**ಸ ಲೋಕಪಾಲಾಶ್ಚ ಸಮಾಗತಾಸ್ತ್ವ ॥**
**ತಥಾಽಪಿ ಯಜ್ಞಸ್ತು ನ ಶೋಭತೇ ಭೃಶಂ ।**
**ಪಿನಾಕಿನಾ ತೇನ ಮಹಾತ್ಮನಾ ವಿನಾ ॥ ೧೪ ॥**
**ಏನ್ಯೈವ ಸರ್ವಾಣ್ಯಪಿ ಮಂಗಳಾನಿ ।**
**ಜಾತಾನಿ ಶಂಸಂತಿ ಮಹಾವಿಪಶ್ಚಿತಃ ॥**
**ಸೋಽಸೌ ನ ದೃಷ್ಟೋಽತ್ರ ಪುಮಾನ್‌ಪುರಾಣೋ ।**
**ವೃಷಧ್ವಜೋ ನೀಲಕಂಠಃ ಕಪರ್ದೀ ॥ ೧೫ ॥**
**ಅಮಂಗಳಾನ್ಯೇವ ಚ ಮಂಗಲಾನಿ ।**
**ಭವಂತಿ ಯೇನಾಧಿಕೃತಾನಿ ದಕ್ಷ ॥**
**ತ್ರಿಯಂಬಕೇನಾಥ ಸುಮಂಗಳಾನಿ ।**
**ಭವಂತಿ ಸದ್ಯೋಽಹ್ಯಪಮಂಗಳಾನಿ ॥ ೧೬ ॥**

**ತಸ್ಮಾತ್ತ್ವಯೈವ ಕರ್ತವ್ಯಮಾಹ್ವಾನಂ ಪರಮೇಷ್ಠಿನಾ ।**
**ತ್ವರಿತಂ ಚೈವ ಶಕ್ರೇಣ ವಿಷ್ಣುನಾ ಪ್ರಭವಿಷ್ಣುನಾ ॥ ೧೭ ॥**

---

ಮಹಾಮಹಾ ಋಷಿಪುಂಗವರೂ ಲೋಕಪಾಲಕರೊಡನೆ ದಯಮಾಡಿಸಿರುತ್ತಾರೆ. ಆದರೂ ಮಹಾತ್ಮನಾದ ಶ್ರೀಮತ್ಪರಶಿವನು ಇಲ್ಲಿಗೆ ಬಂದಿಲ್ಲವಾಗಿ ಈ ಯಾಗ ಮಂಟಪವು ತುಂಬುಕಳೆಯಿಂದ ಬೆಳಗುತ್ತಿಲ್ಲ.

೧೫–೧೬. ಎಲೈ ವಿಪ್ರನೇ! ಮಹಾಜ್ಞಾನಿಗಳಾದ ಮಹನೀಯರು ಆ ಪರಶಿವನಿಂದಲೇ ಸಮಸ್ತ ಸತ್ಕರ್ಮಗಳಗಳೂ ಉಂಟಾಗುತ್ತವೆಯೆಂದು ಹೇಳುತ್ತಾರೆಯಲ್ಲವೆ! ಅಂತಹ ಪುರಾಣಪುರುಷನೂ, ವೃಷಭಧ್ವಜನೂ, ನೀಲಕಂಠನೂ, ಕಪರ್ದಿಯೂ ಆದ ಸದಾಶಿವಮೂರ್ತಿಯು ಇಲ್ಲಿ ಕಾಣುವುದೇ ಇಲ್ಲವಲ್ಲ!! ಅಯ್ಯಾ ದಕ್ಷನೇ! ಆ ಶಂಕರನಿಂದ ಎಲ್ಲ ಅಶುಭಗಳೂ ಶುಭಗಳಾಗಿ ಪರಿಣಮಿಸುತ್ತವೆ. ತ್ರಿಣೇತ್ರನಾದ ಆತನಿಂದಲೇ ಶುಭಗಳೂ ಸಹ ಅಶುಭಗಳಾಗುವುದೂ ಉಂಟು. ಇದನ್ನು ನೀನು ಚೆನ್ನಾಗಿ ಅರಿತುಕೊ!

೧೭–೨೦. ಆದುದರಿಂದ ಈಗ ನೀನೂ, ಈ ಬ್ರಹ್ಮನೂ, ಮಹೇಂದ್ರನೂ, ಮಹಾ ಪ್ರಭಾವಶಾಲಿಯಾದ ಈ ಮಹಾವಿಷ್ಣುವೂ ಈಗಲೇ ಇಲ್ಲಿಂದ ಜಾಗ್ರತೆಯಾಗಿ ಹೊರಟು ಆ ಪರಮಶಿವನನ್ನು ಈ ಯಜ್ಞಸಮಾರಂಭಕ್ಕೆ ಕರೆದುತರಬೇಕು. ನೀವೆಲ್ಲರೂ ಆ ಮಹೇಶ್ವರನಿರುವೆಡೆಗೆ ಜಾಗ್ರತೆಯಾಗಿ ಹೋಗಿ, ದಾಕ್ಷಾಯಣೀ

ಸರ್ವೈರೇವ ಹಿ ಗಂತವ್ಯಂ ಯತ್ರ ದೇವೋ ಮಹೇಶ್ವರಃ ॥ ೧೮ ॥
ದಾಕ್ಷಾಯಣ್ಯಾ ಸಮೇತಂ ತಮಾನಯಧ್ವಂ ತ್ವರಾನ್ವಿತಾಃ ।
ತೇನ ಸರ್ವಂ ಪವಿತ್ರಂ ಸ್ಯಾಚ್ಛಂಭುನಾ ಯೋಗಿನಾ ಭೃಶಂ ॥ ೧೯ ॥
ಯಸ್ಯ ಸ್ಮೃತ್ಯಾ ಚ ನಾಮೋಕ್ತ್ಯಾ ಸಮಗ್ರಂ ಸುಕೃತಂ ಭವೇತ್ ।
ತಸ್ಮಾತ್ಸರ್ವಪ್ರಯತ್ನೇನ ಸಮಾನೇಯೋ ವೃಷಧ್ವಜಃ ॥ ೨೦ ॥
ತಸ್ಯ ತದ್ವಚನಂ ಶ್ರುತ್ವಾ ಪ್ರಹಸನ್ನಾಹ ದುಷ್ಟಧೀಃ ।
ಮೂಲಂ ವಿಷ್ಣುರ್ಹಿ ದೇವಾನಾಂ ಯತ್ರ ಧರ್ಮಃ ಸನಾತನಃ ॥ ೨೧ ॥
ಯಸ್ಮಿನ್ವೇದಾಶ್ಚ ಯಜ್ಞಾಶ್ಚ ಕರ್ಮಾಣಿ ವಿವಿಧಾನಿ ಚ ।
ಪ್ರತಿಷ್ಠಿತಾನಿ ಸರ್ವಾಣಿ ಸೋಽಸೌ ವಿಷ್ಣುರಿಹಾಗತಃ ॥ ೨೨ ॥
ಸತ್ಯಲೋಕಾತ್ಸಮಾಯಾತೋ ಬ್ರಹ್ಮಾ ಲೋಕಪಿತಾಮಹಃ ।
ವೇದೈಶ್ಚೋಪನಿಷದ್ಭಿಶ್ಚ ಆಗಮೈರ್ವಿವಿಧೈಃ ಸಹ ॥ ೨೩ ॥
ತಥಾ ಸುರಗಣೈಃ ಸಾಕಮಾಗತಃ ಸುರರಾಟ್‌ಸ್ವಯಂ ।
ತಥಾ ಯೂಯಂ ಸಮಾಯಾತಾ ಋಷಯೋ ವೀತಕಲ್ಮಷಾಃ ॥ ೨೪ ॥
ಯೇ ಯೇ ಯಜ್ಞೋಚಿತಾಃ ಶಾಂತಾಸ್ತೇತೇ ಸರ್ವೇ ಸಮಾಗತಾಃ ।
ವೇದವೇದಾರ್ಥತತ್ವಜ್ಞಾಃ ಸರ್ವೇ ಯೂಯಂ ದೃಢವ್ರತಾಃ ॥ ೨೫ ॥

---

ಸಮೇತನಾದ ಆ ಸ್ವಾಮಿಯನ್ನಿಲ್ಲಿಗೆ ಕರೆದುತನ್ನಿರಿ. ಅಯ್ಯಾ! ಆ ಶಂಭುವು ಯೋಗೀಶ್ವರನು; ಆತನಿಂದ ಈ ಯಾಗವು ಪರಮಪಾವನವಾಗುವುದು. ಆತನನ್ನು ಸ್ಮರಿಸುವುದರಿಂದಲೂ, ಆತನ ಶುಭನಾಮವನ್ನುಚ್ಚರಿಸುವುದರಿಂದಲೂ ನೀವೆಸಗುವ ಈ ಸಮಸ್ತವೂ ಸುಕೃತವಾಗುತ್ತದೆ. ಆದಕಾರಣ ಈಗ ನೀವೆಲ್ಲರೂ ಈಗಲೇ ಇಲ್ಲಿಂದ ತೆರಳಿ ಆತನನ್ನಿಲ್ಲಿಗೆ ಕರೆತರಬೇಕು.''

೨೧–೨೫. ಎಲೈ ಶೌನಕಾದಿ ಮಹರ್ಷಿಗಳಿರಾ! ಈ ರೀತಿ ಹೇಳಿದ ಆ ದಧೀಚಿ ಮುನಿಯ ಮಾತುಗಳನ್ನು ಕೇಳಿ, ದುಷ್ಟಬುದ್ಧಿಯಾದ ಆ ದಕ್ಷನು ತಾತ್ಸಾರ ಭಾವದಿಂದ ಕಿಲಕಿಲನೆ ನಗುತ್ತ ಹೇಳುತ್ತಾನೆ: ''ಅಯ್ಯಾ! ಸನಾತನ ಧರ್ಮವೆಲ್ಲವೂ ಈ ಮಹಾವಿಷ್ಣುವಿನಲ್ಲಿಯೇ ಸುಪ್ರತಿಷ್ಠಿತವಾಗಿರುವುದು. ಈತನೇ ಸಮಸ್ತ ದೇವತೆಗಳಿಗೂ ಆದಿಯು. ಈತನಲ್ಲಿಯೇ ವೇದಗಳೂ, ಯಜ್ಞಗಳೂ, ವಿವಿಧ ಕರ್ಮಗಳೂ ನೆಲಸಿರುತ್ತವೆ. ಇಂತಹ ಪ್ರಭುವೇ ಸಾಕ್ಷಾತ್ತಾಗಿ ಇಲ್ಲಿಗೈತಂದಿರುವನು. ವೇದಗಳು, ಉಪನಿಷತ್ತುಗಳು, ಬಗೆಬಗೆಯ ಆಗಮಗಳು— ಈ ಎಲ್ಲವನ್ನೂ ತೆಗೆದುಕೊಂಡು, ಲೋಕಕ್ಕೆಲ್ಲ ಪಿತಾಮಹನೆನಿಸಿರುವ ಈ ಬ್ರಹ್ಮದೇವನು ಚಿತ್ತೈಸಿರುವನು. ಅಂತೆಯೇ ದೇವರಾಜನಾದ ಮಹೇಂದ್ರನೂ ಸಹ ಸಮಸ್ತ ದೇವತಾವೃಂದದೊಡನೆ ದಯಮಾಡಿಸಿರುತ್ತಾನೆ. ಹಾಗೂ ನಿಷ್ಕಲ್ಮಷರೂ,ಮಹರ್ಷಿಗಳೂ ಆದ ತಾವೆಲ್ಲರೂ ಬಿಜಯಗೈದಿರುವಿರಿ. ಹೆಚ್ಚೇನು! ಯಾರಾರು

ಅತ್ರೈವ ಚ ಕಿಮಸ್ಮಾಕಂ ರುದ್ರೇಣಾಪಿ ಪ್ರಯೋಜನಂ ।
ಕನ್ಯಾ ದತ್ತಾ ಮಯಾ ವಿಪ್ರಾ ಬ್ರಹ್ಮಣಾ ನೋದಿತೇನ ಹಿ ॥ ೨೬ ॥
ಅಕುಲೀನೋ ಹ್ಯಸೌ ವಿಪ್ರಾ ನಷ್ಟೋ ನಷ್ಟಪ್ರಿಯಃ ಸದಾ ।
ಭೂತಪ್ರೇತಪಿಶಾಚಾನಾಂ ಪತಿರೇಕೋ ದುರತ್ಯಯಃ ॥ ೨೭ ॥
ಆತ್ಮಸಂಭಾವಿತೋ ಮೂಢಃ ಸ್ತಬ್ಧೋ ಮೌನೀ ಸಮತ್ಸರಃ ।
ಕರ್ಮಣ್ಯಸ್ಮಿನ್ನಯೋಗ್ಯೋಽಸೌ ನಾನೀತೋಹಿ ಮಯಾಽಧುನಾ ॥ ೨೮ ॥
ತಸ್ಮಾತ್ತ್ವಯಾ ನವಕ್ತವ್ಯಂ ಪುನರೇವಂ ವಚೋ ದ್ವಿಜ ।
ಸರ್ವೈರ್ಭವದ್ಭಿಃ ಕರ್ತವ್ಯೋ ಯಜ್ಞೋ ಮೇ ಸಫಲೋ ಮಹಾನ್ ॥೨೯॥
ಏತಚ್ಛ್ರುತ್ವಾ ವಚಸ್ತಸ್ಯ ದಧೀಚಿರ್ವಾಕ್ಯಮಬ್ರವೀತ್ ॥ ೩೦ ॥

ದಧೀಚಿರುವಾಚ :—

ಸರ್ವೇಷಾಮೃಷಿವರ್ಯಾಣಾಂ ಸುರಾಣಾಂ ಭಾವಿತಾತ್ಮನಾಂ ।
ಅನಯೋಽಯಂ ಮಹಾನ್ ಜಾತೋ ವಿನಾ ತೇನ ಮಹಾತ್ಮನಾ ॥ ೩೧ ॥

---

ಈ ಯಾಗಕ್ಕೆ ಬರಲು ಯೋಗ್ಯರೋ, ಅಂತಹ ಪ್ರಶಾಂತಮನಸ್ಕರೆಲ್ಲರೂ ಬಂದೇ ಇರುತ್ತಾರೆ. ತಾವೇನು ಸಾಮಾನ್ಯರೇ! ತಾವು ಸಮಸ್ತವೇದಗಳನ್ನೂ, ವೇದಾರ್ಥಗಳನ್ನೂ, ವೇದತತ್ತ್ವವನ್ನೂ ಬಲ್ಲವರು; ದೃಢವಾದ ವ್ರತನಿಯಮವುಳ್ಳವರು.

೨೬–೨೭. ಹೀಗೆ ತಾವೆಲ್ಲರೂ ಬಂದ ಬಳಿಕ ಇನ್ನು ಈ ಯಜ್ಞದಲ್ಲಿ ನಮಗೆ ಆ ರುದ್ರನಿಂದ ಆಗಬೇಕಾದುದು ತಾನೆ ಏನು? ಅಯ್ಯಾ ವಿಪ್ರರೇ! 'ರುದ್ರನು ನಿನಗೆ ಅಳಿಯನಲ್ಲವೆ?' ಎಂದು ಕೇಳಬಹುದು. ಕೇಳಿರಿ; ಪೂರ್ವದಲ್ಲಿ ಈ ಬ್ರಹ್ಮನು ಅವನ ವಿಷಯವಾಗಿ ನನಗೆ ಬಹಳವಾಗಿ ಹೇಳಿದನು. ಆದುದರಿಂದಲೇ ನಾನವನಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡಿದೆನು. ಆ ರುದ್ರನೋ ಕುಲವಿಲ್ಲದವನು; ಬಹಳ ಅಲ್ಪನು; ಎಲ್ಲವನ್ನೂ ಲಯಮಾಡುವುದರಲ್ಲಿಯೇ ಯಾವಾಗಲೂ ಪ್ರೀತಿಯುಳ್ಳವನು; ಭೂತ ಪ್ರೇತ ಪಿಶಾಚಗಳಿಗೆಲ್ಲ ಅವನೇ ಪ್ರಭುವು. ಇಂತಹನನ್ನು ಹೊಂದಲು ಸಾಧ್ಯವಾದೀತೇ! ಇಲ್ಲ.

೨೮–೩೦. ಇದರ ಮೇಲಾಗಿ ಅವನು 'ನಾನೇ ಎಲ್ಲರಿಗಿಂತಲೂ ಹೆಚ್ಚು' ಎಂದು ತಿಳಿದಿರುವನು; ದುರಹಂಕಾರಿ; ತಿಳಿಗೇಡಿ, ಮೂರ್ಖ, ಮೌನಿ, ಬಹಳ ಹೊಟ್ಟೆಗಿಚ್ಚಿನವನು. ಇಂತಹನು ಈ ಮಹಾ ಯಜ್ಞಕ್ಕೆ ಬರಲು ಅನರ್ಹನೆಂದು ತಿಳಿದೇ ನಾನವನನ್ನು ಇಲ್ಲಿಗೆ ಕರೆತರಲಿಲ್ಲ. ಆದುದರಿಂದಲೈದಧೀಚಿಯೇ! ಇನ್ನು ನೀನು ಆ ರುದ್ರನ ಮಾತನ್ನೆತ್ತಬೇಡ. ಈಗ ನೀವೆಲ್ಲರೂ ಸೇರಿ, ನಾನು ಪ್ರಾರಂಭಮಾಡಿರುವ ಈ ಮಹಾಯಾಗವನ್ನು ಸಫಲಗೊಳಿಸಿರಿ." ದಕ್ಷನಿಂತೆನಲು, ದಧೀಚಿಮುನಿಯು ಅವನನ್ನು ಕುರಿತು ಹೇಳಿದನು:

೩೧–೩೨. ದಧೀಚಿ ಮುನಿಯು ಹೇಳುತ್ತಾನೆ:— "ಅಯ್ಯಾ ಕೇಳಿರಿ! ಈ ಯಜ್ಞಕ್ಕೆ ಮಹಾತ್ಮನಾದ ಶಿವನನ್ನು ಆಹ್ವಾನಿಸದಿರುವುದರಿಂದ ಇಲ್ಲಿ ಸೇರಿರುವ

ವಿನಾಶೋಽಪಿ ಮಹಾನದ್ಯ ಹ್ಯತ್ರತ್ಯಾನಾಂ ಭವಿಷ್ಯತಿ ।
ಏವಮುಕ್ತ್ವಾ ದಧೀಚೋಽಸಾವೇಕ ಏವ ವಿನಿರ್ಗತಃ ॥ ೩೨ ॥
ಯಜ್ಞವಾಟಾಚ್ಚ ದಕ್ಷಸ್ಯ ತ್ವರಿತಃ ಸ್ವಾಶ್ರಮಂ ಯಯೌ ।
ಮುನೌ ವಿನಿರ್ಗತೇ ದಕ್ಷಃ ಪ್ರಹಸನ್ನಿದಮಬ್ರವೀತ್ ॥ ೩೩ ॥
ಗತಃ ಶಿವಪ್ರಿಯೋ ವೀರೋ ದಧೀಚಿರ್ನಾಮ ನಾಮತಃ ।
ಆವಿಷ್ಟಚಿತ್ತಾ ಮಂದಾಶ್ಚ ಮಿಥ್ಯಾವಾದರತಾಃ ಖಲಾಃ ॥ ೩೪ ॥
ವೇದಬಾಹ್ಯಾ ದುರಾಚಾರಾಸ್ತ್ಯಾಜ್ಯಾಸ್ತೇ ಹ್ಯತ್ರಕರ್ಮಣಿ ।
ವೇದವಾದರತಾ ಯೂಯಂ ಸರ್ವೇ ವಿಷ್ಣುಪುರೋಗಮಾಃ ॥ ೩೫ ॥
ಯಜ್ಞಂ ಮೇ ಸಫಲಂ ವಿಪ್ರಾಃ ಕುರ್ವಂತು ಹ್ಯಚಿರಾದಿವ ।
ತದಾ ತೇ ದೇವಯಜನಂ ಚಕ್ರುಃ ಸರ್ವೇ ಮಹರ್ಷಯಃ ॥ ೩೬ ॥
ಏತಸ್ಮಿನ್ನಂತರೇ ತತ್ರ ಪರ್ವತೇ ಗಂಧಮಾದನೇ ।
ಧಾರಾಗೃಹೇ ವಿಮಾನೇನ ಸಖೀಭಿಃ ಪರಿವಾರಿತಾ ॥ ೩೭ ॥

---

ಆತ್ಮಜ್ಞಾನಿಗಳಾದ ಸಮಸ್ತ ಋಷಿಗಳಿಗೂ, ದೇವತೆಗಳಿಗೂ ಅಧರ್ಮವು ಬಂದಿತು. ಇನ್ನು ಸ್ವಲ್ಪಕಾಲದಲ್ಲಿಯೇ ಇವರೆಲ್ಲರಿಗೂ ವಿನಾಶವುಂಟಾಗುವುದು.'' ಆ ಮುನಿಯು ಇಂತು ನುಡಿದು, ಕೂಡಲೇ ಆ ಯಜ್ಞಶಾಲೆಯಿಂದ ಹೊರಹೊರಟು ತನ್ನ ಆಶ್ರಮಕ್ಕೈತಂದನು.

೩೩–೩೬. ಆತನಿಂತು ಹೊರಟುಹೋಗುತ್ತಲೇ ಇತ್ತ ದಕ್ಷಬ್ರಹ್ಮನು ಗಟ್ಟಿಯಾಗಿ ಹಾಸ್ಯದ ನಗೆಯನ್ನು ನಕ್ಕು ಅಲ್ಲಿದ್ದವರೆಲ್ಲರನ್ನೂ ಕುರಿತು, '' ಅಯ್ಯಾ ಬ್ರಾಹ್ಮಣರೇ! ಶಿವನಿಗೆ ಪ್ರಿಯನೂ, ಮಹಾಶೂರನೂ ಆದ ದಧೀಚಿಯೆಂಬ ಹೆಸರಿನವನು ಇದೀಗ ಸಾಗಿಹೋದನು! ದುಷ್ಟಬುದ್ಧಿಗಳೂ, ತಿಳಿಗೇಡಿಗಳೂ, ಅನೃತವಾದಗಳಲ್ಲಿಯೇ ಆಸಕ್ತರಾದವರೂ, ದುರುಳರೂ, ವೇದಬಾಹಿರರೂ, ದುರಾಚಾರರೂ ಆದ ಇವರೆಲ್ಲರೂ ಈ ಯಜ್ಞಕರ್ಮದಲ್ಲಿ ತ್ಯಾಜ್ಯರೇ! ಈಗ ಇಲ್ಲಿರುವ ವಿಷ್ಣುವೇ ಮೊದಲಾದ ನೀವೆಲ್ಲರೂ ವೇದಗಳಲ್ಲಿಯೂ, ವೇದೋಕ್ತ ಕರ್ಮಗಳಲ್ಲಿಯೂ ಅಕ್ಕರೆಯುಳ್ಳವರು. ಇಂತಹ ಸದ್ವಿಪ್ರರಾದ ನೀವು ಈ ನನ್ನ ಯಾಗವನ್ನು ಜಾಗ್ರತೆಯಾಗಿ ಸಫಲಗೊಳಿಸಿರಿ'' ಎಂದು ಹೇಳಿದನು. ಆಗ ಅಲ್ಲಿದ್ದ ಮಹರ್ಷಿಗಳೆಲ್ಲರೂ ಅವನು ಕೈಕೊಂಡಿದ್ದ ದೇವಯಜನವನ್ನು ಪ್ರಾರಂಭ ಮಾಡಿದರು.

೩೭–೩೯. ಇದೇ ಸಮಯದಲ್ಲಿಯೇ ಅತ್ತ ಗಂಧಮಾದನ ಪರ್ವತದಲ್ಲಿ ಶಿವನ ಮಡದಿಯಾದ ದಾಕ್ಷಾಯಣೀ ಮಹಾದೇವಿಯು ಸಖಿಯರೊಡನೆ, ಸ್ನಾನದ ಕೊಳದಲ್ಲಿ ಕ್ರೀಡಾವಿಮಾನಾರೂಢೆಯಾಗಿ ಚಂಡಾಟವೇ ಮೊದಲಾದ ಬಗೆಬಗೆಯ ಆಟಗಳನ್ನಾಡುತ್ತಿದ್ದಳು. ಮಹಾ ಪತಿವ್ರತೆಯಾದ ಆ ದೇವಿಯು

ದಾಕ್ಷಾಯಣೀ ಮಹಾದೇವೀ ಚಕಾರ ವಿವಿಧಾಸ್ತದಾ ।
ಕ್ರೀಡಾ ವಿಮಾನಮಧ್ಯಸ್ಥಾ ಕಂದುಕಾದ್ಯಾಃ ಸಹಸ್ರಶಃ ॥ ೩೮ ॥
ಕ್ರೀಡಾಸಕ್ತಾ ತದಾ ದೇವೀ ದದರ್ಶಾಥ ಮಹಾಸತೀ ।
ಯಜ್ಞಂ ಪ್ರಯಾಂತಂ ಸೋಮಂ ಚ ರೋಹಿಣ್ಯಾ ಸಹಿತಂ ಪ್ರಭುಂ ॥ ೩೯ ॥
ಕ್ವ ಗಮಿಷ್ಯತಿ ಚಂದ್ರೋಽಯಂ ವಿಜಯೇ ಪೃಚ್ಛ ಸತ್ವರಂ ।
ತಯೋಕ್ತಾ ವಿಜಯಾ ದೇವೀ ತಂ ಪಪ್ರಚ್ಛ ಯಥೋಚಿತಂ ॥ ೪೦ ॥
ಕಥಿತಂ ತೇನ ತತ್ಸರ್ವಂ ದಕ್ಷಸ್ಯೈವ ಮಖಾದಿಕಂ ।
ತಚ್ಛ್ರುತ್ವಾ ತ್ವರಿತಾ ದೇವೀ ವಿಜಯಾ ಜಾತಸಂಭ್ರಮಾ ।
ಕಥಯಾಮಾಸ ತತ್ಸರ್ವಂ ಯದುಕ್ತಂ ಶಶಿನಾ ಭೃಶಂ ॥ ೪೧ ॥
ವಿಮೃಶ್ಯ ಕಾರಣಂ ದೇವೀ ಕಿಮಾಹ್ವಾನಂ ಕರೋತಿ ನ ।
ದಕ್ಷಃ ಪಿತಾ ಮೇ ಮಾತಾ ಚ ವಿಸ್ಮೃತೌ ಮಾಂ ಕುತೋಽಧುನಾ ॥ ೪೨ ॥
ಪೃಚ್ಛಾಮಿ ಶಂಕರಂ ಚಾದ್ಯ ಕಾರಣಂ ಕೃತನಿಶ್ಚಯಾ ।
ಸ್ಥಾಪಯಿತ್ವಾ ಸಖೀಸ್ತತ್ರ ಆಗತಾ ಶಂಕರಂ ಪ್ರತಿ ॥ ೪೩ ॥

---

ಹೀಗೆ ಆಟದಲ್ಲಿ ತೊಡಗಿರುವಾಗಲೇ, ಪ್ರಭುವಾದ ಚಂದ್ರನು ತನ್ನ ಮಡದಿಯಾದ ರೋಹಿಣಿಯೊಡನೆ ಯಜ್ಞಾರ್ಥವಾಗಿ ಪ್ರಯಾಣಮಾಡುತ್ತಿರುವುದನ್ನು ಆಕೆಯು ಕಂಡಳು.

೪೦–೪೧. ಆಗಲಾಕೆಯು ಸಖಿಯನ್ನು ಕುರಿತು, "ವಿಜಯೇ ! ಈ ಚಂದ್ರನು ಎಲ್ಲಿಗೆ ಪ್ರಯಾಣ ಬೆಳಸಿರುವನೆಂಬ ವಿಷಯವನ್ನು ಕೇಳಿ ತಿಳಿದುಕೊ" ಎಂದಳು. ಅಂತೆಯೇ ಆಕೆಯು ಪ್ರಯಾಣವಾಗಿರುವುದೆಲ್ಲಿಗೆಂದು ಚಂದ್ರನನ್ನು ಮರ್ಯಾದೆಯಿಂದ ಪ್ರಶ್ನಿಸಿದಳು. ಚಂದ್ರನು, ದಕ್ಷಬ್ರಹ್ಮನು ಯಜ್ಞವನ್ನುಪಕ್ರಮಿಸಿರುವ ವಿಚಾರವೆಲ್ಲವನ್ನೂ ತಿಳಿಸಿ ತಾನು ಅಲ್ಲಿಗೇ ತೆರಳುತ್ತಿರುವುದಾಗಿ ಉತ್ತರವಿತ್ತನು. ಈ ಸುದ್ದಿಯನ್ನು ಕೇಳಿದೊಡನೆಯೇ ಅವಳು ಬಹು ಸಂಭ್ರಮದಿಂದ ಸತೀದೇವಿಯ ಬಳಿಗೈದಿ ಅದನ್ನಾಕೆಗೆ ಯಥಾವತ್ತಾಗಿ ತಿಳಿಸಿದಳು.

೪೨–೪೩. ಆಗ ದಾಕ್ಷಾಯಣಿಯು, "ನಮ್ಮ ತಂದೆಯಾದ ದಕ್ಷನು ನನ್ನನ್ನೇಕೆ ಯಜ್ಞಕ್ಕೆ ಕರೆಯಲಿಲ್ಲ! ಆತನು ನನ್ನನ್ನು ಕರೆಯಲು ಮರೆತರೂ, ನಮ್ಮ ತಾಯಿಯು ಮರೆತುದೆಂತು?" ಎಂದು ಯೋಚಿಸಿದಳು. ಎಷ್ಟು ಯೋಚಿಸಿದರೂ, ಅವರು ತನ್ನನ್ನು ಕರೆಯದಿರಲು ಕಾರಣವೇನೆಂಬುದು ಆಕೆಗೆ ಗೋಚರವಾಗಲಿಲ್ಲ. ಕಡೆಗೆ ಆಕೆಯು "ಇದಕ್ಕೆ ಕಾರಣವೇನೆಂಬುದನ್ನು ನನ್ನ ಪ್ರಭುವಾದ ಶಂಕರನನ್ನೇ ಕೇಳಿ ತಿಳಿದುಕೊಳ್ಳುವೆನು" ಎಂದು ನಿಶ್ಚಯಿಸಿ ಸಖಿಯರೆಲ್ಲರನ್ನೂ ಅಲ್ಲಿಯೇ ಬಿಟ್ಟು ಆತನಿದ್ದೆಡೆಗೆ ಬಂದಳು.

**ದದರ್ಶ ತಂ ಸಭಾಮಧ್ಯೇ ತ್ರಿಲೋಚನಮವಸ್ಥಿತಂ ।**
**ಗಣೈಃ ಪರಿವೃತಂ ಸರ್ವೈಶ್ಚಂಡಮುಂಡಾದಿಭಿಸ್ತದಾ ॥ ೪೪ ॥**
**ಬಾಣೋ ಭೃಂಗಿಸ್ತದಾ ನಂದೀ ಶೈಲಾದೋಹಿ ಮಹಾತಪಾಃ ।**
**ಮಹಾಕಾಲೋ ಮಹಾಚಂಡೋ ಮಹಾಮುಂಡೋ ಮಹಾಶಿರಾಃ ॥೪೫॥**
**ಧೂಮ್ರಾಕ್ಷೋ ಧೂಮ್ರಕೇತುಶ್ಚ ಧೂಮ್ರಪಾದಸ್ತಥೈವಚ ।**
**ಏತೇ ಚಾನ್ಯೇ ಚ ಬಹವಃ ಗಣಾ ರುದ್ರಾನುವರ್ತಿನಃ ॥ ೪೬ ॥**
**ಕೇಚಿದ್ಭಯಾನಕಾ ರೌದ್ರಾಃ ಕಬಂಧಾಶ್ಚ ತಥಾಪರೇ ।**
**ವಿಲೋಚನಾಶ್ಚ ಕೇಚಿಚ್ಚ ವಕ್ಷೋಹೀನಾಸ್ತಥಾಪರೇ ॥ ೪೭ ॥**
**ಏವಂ ಭೂತಾಶ್ಚ ಶತಶಃ ಸರ್ವೇ ತೇ ಕೃತ್ತಿವಾಸಸಃ ।**
**ಜಟಾಕಲಾಪಸಂಭೂಷಾಃ ಸರ್ವೇ ರುದ್ರಾಕ್ಷಭೂಷಣಾಃ ॥ ೪೮ ॥**
**ಜಿತೇಂದ್ರಿಯಾ ವೀತರಾಗಾಃ ಸರ್ವೇ ವಿಷಯವೈರಿಣಃ ।**
**ಏಭಿಃ ಸರ್ವೈಃ ಪರಿವೃತಃ ಶಂಕರೋ ಲೋಕಶಂಕರಃ ॥**
**ದೃಷ್ಟಸ್ತಯಾ ಉಪಾವಿಷ್ಟ ಆಸನೇ ಪರಮಾದ್ಭುತೇ ॥ ೪೯ ॥**
**ಆಕ್ಷಿಪ್ತಚಿತ್ತಾ ಸಹಸಾ ಜಗಾಮ ಶಿವಸನ್ನಿಧಿಂ ।**
**ಶಿವೇನ ಸ್ಥಾಪಿತಾ ಸ್ವಾಂಕೇ ಪ್ರೀತಿಯುಕ್ತೇನ ವಲ್ಲಭಾ ॥ ೫೦ ॥**

---

೪೪–೪೬. ಆಗಲಾಕೆಯು, ಚಂಡಮುಂಡರೇ ಮೊದಲಾದ ಶಿವಗಣಗಳೆಲ್ಲವೂ ಬಳಸಿ ನಿಂತಿರಲು ಸಭಾಮಧ್ಯದಲ್ಲಿ ಸುಖಾಸೀನನಾಗಿದ್ದ ಆ ಮುಕ್ಕಣ್ಣನನ್ನು ಕಂಡಳು. ಆ ಸಮಯದಲ್ಲಿ ಬಾಣ, ಭೃಂಗಿ, ನಂದಿ, ಮಹಾ ತಪಸ್ವಿಯಾದ ಮಹಾಕಾಲ, ಮಹಾಚಂಡ, ಮಹಾಮುಂಡ, ಮಹಾಶಿರ, ಧೂಮ್ರಾಕ್ಷ, ಧೂಮ್ರಕೇತು, ಧೂಮ್ರಪಾದರೇ ಮೊದಲಾದ ಕಿಂಕರರೆಲ್ಲರೂ ಆ ಸ್ವಾಮಿನ್ನೋಲೈಸುತ್ತಿದ್ದರು.

೪೭–೫೦. ಅವರಲ್ಲಿ ಕೆಲವರು ಮಹಾಭಯಂಕರರೂ, ರೌದ್ರಾಕಾರವುಳ್ಳವರೂ ಆಗಿದ್ದರು; ಕೆಲವರು ಕಬಂಧವನ್ನು ಮಾತ್ರ ಉಳ್ಳವರು; ಕೆಲವರು ವಿಕಾರವಾದ ಕಣ್ಣುಗಳುಳ್ಳವರು; ವಕ್ಷಸ್ಥಳಗಳೇ ಇಲ್ಲದವರು ಕೆಲವರು; ಇಂತಹ ನೂರಾರುಮಂದಿ ಸೇವಕರು ಆ ಸ್ವಾಮಿಯನ್ನು ಸೇವೆಗೈಯುತ್ತಿದ್ದರು. ಎಲೈ ಮಹರ್ಷಿಗಳಿರಾ! ಈ ಶಿವಕಿಂಕರರೆಲ್ಲರೂ ಆನೆದೊಗಲನ್ನು ಹೊದ್ದು, ಜಟೆಗಳಿಂದಲೂ, ರುದ್ರಾಕ್ಷ ಮಾಲೆಗಳಿಂದಲೂ ಅಲಂಕೃತರಾಗಿದ್ದರು. ಎಲ್ಲರೂ ಜಿತೇಂದ್ರಿಯರು; ಅವರಿಗೆ ಕಾಮಕ್ರೋಧಗಳೇ ಇರಲಿಲ್ಲವು; ಪ್ರತಿಯೊಬ್ಬರೂ ವಿಷಯಗಳಿಗೆ ದೂರರಾಗಿದ್ದರು. ಲೋಕಶಂಕರನಾದ ಶ್ರೀಶಂಕರನು ಇವರೆಲ್ಲರೂ ಸುತ್ತ ಬಳಸಿ ತನ್ನನ್ನು ಓಲೈಸುತ್ತಿರಲು, ಪರಮಾದ್ಭುತವಾದ ಆಸನದಲ್ಲಿ ಕುಳಿತು ವಿರಾಜಿಸುತ್ತಿದ್ದನು. ಇಂತಿರುವ ಆ ದೇವದೇವನನ್ನು ದಾಕ್ಷಾಯಣೀ ದೇವಿಯು ಕಂಡಳು. ಒಡನೆಯೇ ಆಕೆಯು, ಮನಸ್ಸೇ ಕಲಕಿಹೋಗಿದ್ದುದರಿಂದ ಬಹುಬೇಗನೆ ಆತನ ಬಳಿಗೈದಿದಳು. ಶಿವನಾದರೋ ಪ್ರಿಯತಮೆಯಾದ

ಪ್ರೇಮ್ಣೋದಿತಾ ವಚೋಭಿಃ ಸಾ ಬಹುಮಾನಪುರಸ್ಸರಂ ।
ಕಿಮಾಗಮನಕಾರ್ಯಂ ಮೇ ವದ ಶೀಘ್ರಂ ಸುಮಧ್ಯಮೇ ॥ ೫೧ ॥
ಏವಮುಕ್ತಾ ತದಾ ತೇನ ಉವಾಚಾಸಿತಲೋಚನಾ ॥ ೫೨ ॥

ಸತ್ಯುವಾಚ :—

ಪಿತುರ್ಮಮ ಮಹಾಯಜ್ಞೇ ಕಸ್ಮಾತ್ತವ ನರೋಚತೇ ।
ಗಮನಂ ದೇವದೇವೇಶ ತತ್ಸರ್ವಂ ಕಥಯ ಪ್ರಭೋ ॥ ೫೩ ॥
ಸುಹೃದಾಮೇಷ ವೈ ಧರ್ಮಃ ಸುಹೃದ್ಭಿಃ ಸಹಸಂಗತಿಂ ।
ಕುರ್ವಂತಿ ಯಾಂ ಮಹಾದೇವ ಸುಹೃದಾಂ ಪ್ರೀತಿವರ್ಧಿನೀಂ ॥ ೫೪ ॥
ತಸ್ಮಾತ್ಸರ್ವಪ್ರಯತ್ನೇನ ಅನಾಹೂತೋಽಪಿಗಚ್ಛ ಭೋಃ ।
ಯಜ್ಞವಾಟಂ ಪಿತುರ್ಮೇಽದ್ಯ ವಚನಾನ್ಮೇ ಸದಾಶಿವ ॥ ೫೫ ॥
ತಸ್ಯಾಸ್ತದ್ವಚನಂ ಶ್ರುತ್ವಾ ಬಭಾಷೇ ಸೂನೃತಂ ವಚಃ ।
ತ್ವಯಾ ಭದ್ರೇ ನಗಂತವ್ಯಂ ದಕ್ಷಸ್ಯ ಯಜನಂ ಪ್ರತಿ ॥ ೫೬ ॥
ತಸ್ಯ ಯೇ ಮಾನಿನಃ ಸರ್ವೇ ಸಸುರಾಸುರಕಿನ್ನರಾಃ ।
ತೇ ಸರ್ವೇ ಯಜನಂ ಪ್ರಾಪ್ತಾಃ ಪಿತುಸ್ತವ ನ ಸಂಶಯಃ ॥ ೫೭ ॥

---

ಆಕೆಯನ್ನು ಬಹು ಪ್ರೀತಿಯಿಂದ ತೊಡೆಯಮೇಲೆ ಕುಳ್ಳಿರಿಸಿಕೊಂಡು ಬಹುಮಾನ ಪುರಸ್ಸರವಾಗಿ, "ಎಲೌ ಸುಂದರೀ! ನೀನು ಬಂದ ಕಾರ್ಯವೇನು?" ಎಂದು ಕೇಳಿದನು. ಆಗ ಕಮಲಲೋಚನೆಯಾದ ಆ ದೇವಿಯು ಹೀಗೆಂದಳು :—

೫೩–೫೫. ಸತೀದೇವಿಯು ಹೇಳುತ್ತಾಳೆ:— "ಓ ದೇವದೇವೇಶ್ವರಾ, ಪ್ರಭೂ! ನಮ್ಮ ತಂದೆಯಾದ ದಕ್ಷನು ಯಾಗವನ್ನು ಮಾಡುತ್ತಿರುವನು. ಆ ಯಾಗಕ್ಕೆ ಹೋಗುವುದು ನಿನ್ನ ಮನಸ್ಸಿಗೆ ಸರಿಬೀಳಲಿಲ್ಲವೇಕೆಂಬ ವಿಷಯ ವನ್ನು ನನಗೆ ತಿಳಿಸಬೇಕು. ಮಹಾದೇವ! ಲೋಕದಲ್ಲಿ, ಗೆಳೆಯರು ಗೆಳೆಯ ರೊಡನೆ ಸೇರುವುದು ಅವರ ಸಂತೋಷವನ್ನು ಬೆಳಸುತ್ತದೆಯಲ್ಲವೆ? ಅಲ್ಲದೆ ಗೆಳೆಯರಾದವರು ಪರಸ್ಪರವಾಗಿ ಸೇರುವುದೂ ಅವರ ಧರ್ಮವೇ ಅಲ್ಲವೆ? ಸದಾಶಿವ! ನೀನೂ, ನಮ್ಮ ತಂದೆಯಾದ ಆ ದಕ್ಷಬ್ರಹ್ಮನೂ ಪರಸ್ಪರ ಮಿತ್ರರೇ ಅಲ್ಲವೆ? ಈ ಕಾರಣದಿಂದ, ಈಗ ಅವನು ನಿನ್ನನ್ನು ಕರೆಯದಿದ್ದರೂ ನೀನೇ ಪ್ರಯತ್ನಪೂರ್ವಕವಾಗಿ ಅಲ್ಲಿಗೆ ಹೋಗಬೇಕು. ಇದು ನಿನ್ನ ಧರ್ಮ."

೫೬–೫೯. ಸದಾಶಿವನು ಸತಿಯ ಈ ಮಾತುಗಳನ್ನು ಕೇಳಿ ಅರ್ಥಯುಕ್ತ ವಾಗಿ ಹೀಗೆ ಹೇಳಿದನು: "ಮಂಗಳಾಂಗಿ! ನಿನ್ನ ತಂದೆಯು ನಡೆಸುತ್ತಿರುವ ಯಜ್ಞಕ್ಕೆ ನೀನು ಹೋಗಬಾರದು. ಕೇಳು; ಆ ನಿನ್ನ ಜನಕನು, ತನಗೆ ಯಾರು ಯಾರು ಪೂಜ್ಯರೋ ಅಂತಹ ಸಮಸ್ತ ದೇವತೆಗಳು, ರಾಕ್ಷಸರು, ಕಿನ್ನರರೇ ಮೊದಲಾದ ಎಲ್ಲರನ್ನೂ ಆಹ್ವಾನಿಸಿರುವನು. ಅವರೆಲ್ಲರೂ ಯಜ್ಞಕ್ಕೆ ಹೋಗಿಯೇ ಇದ್ದಾರೆ. ಇದರಲ್ಲಿ ಸಂಶಯವಿಲ್ಲವು. ಓ ಸುಭ್ರು! ಕರೆಯದೆ ಯಾರೂ ಇತರರ

ಅನಾಹೂತಾಶ್ಚ ಯೇ ಸುಭ್ರು ಗಚ್ಛಂತಿ ಪರಮಂದಿರಂ ।
ಅಪಮಾನಂ ಪ್ರಾಪ್ನುವಂತಿ ಮರಣಾದಧಿಕಂ ತತಃ ॥ ೫೮ ॥
ಪರೇಷಾಂ ಮಂದಿರಂ ಪ್ರಾಪ್ತ ಇಂದ್ರೋಽಪಿ ಲಘುತಾಂ ವ್ರಜೇತ್ ।
ತಸ್ಮಾತ್ತ್ವಯಾ ನಗಂತವ್ಯಂ ದಕ್ಷಸ್ಯ ಯಜನಂ ಶುಭೇ ॥ ೫೯ ॥
ಏವಮುಕ್ತಾ ಸತೀ ತೇನ ಮಹೇಶೇನ ಮಹಾತ್ಮನಾ ।
ಉವಾಚ ರೋಷಸಂಯುಕ್ತಂ ವಾಕ್ಯಂ ವಾಕ್ಯವಿದಾಂ ವರಾ ॥ ೬೦ ॥
ಯಜ್ಞೋಽಹಿ ಸತ್ಯಂ ಲೋಕೇ ತ್ವಂ ಸತ್ವಂ ದೇವವರೇಶ್ವರ ।
ಅನಾಹೂತೋಽಸಿ ತೇನಾದ್ಯ ಪಿತ್ರಾಮೇ ದುಷ್ಟಚಾರಿಣಾ ।
ತತ್ಸರ್ವಂ ಜ್ಞಾತುಮಿಚ್ಛಾಮಿ ತಸ್ಯ ಭಾವಂ ದುರಾತ್ಮನಃ ॥ ೬೧ ॥
ತಸ್ಮಾಚ್ಚಾದ್ಯೈವ ಗಚ್ಛಾಮಿ ಯಜ್ಞವಾಟಂ ಪಿತುರ್ಮಮ ।
ಅನುಜ್ಞಾಂ ದೇಹಿ ಮೇ ನಾಥ ದೇವದೇವ ಜಗತ್ಪತೇ ॥ ೬೨ ॥
ಇತ್ಯುಕ್ತೋ ಭಗವಾನ್ ರುದ್ರಸ್ತಯಾ ದೇವ್ಯಾ ಶಿವಃ ಸ್ವಯಂ ।
ವಿಜ್ಞಾತಾಖಿಲದೃಗ್ದ್ರಷ್ಟಾ ಭಗವಾನ್ ಭೂತಭಾವನಃ ॥ ೬೩ ॥
ಸತಾಮುವಾಚ ದೇವೇಶೋ ಮಹೇಶಃ ಸರ್ವಸಿದ್ಧಿದಃ ।
ಗಚ್ಛದೇವಿ ತ್ವರಾಯುಕ್ತಾ ವಚನಾನ್ಮಮ ಸುವ್ರತೇ ॥ ೬೪ ॥

---

ಮನೆಗಳಿಗೆ ಹೋಗಬಾರದು. ಹಾಗೆ ಹೋದವರು ಸಾವಿಗೂ ಮಿಗಿಲಾದ ಅವಮಾನವನ್ನು ಪಡೆಯುತ್ತಾರೆ. ಮಂಗಳಾಂಗಿ! ಮಹೇಂದ್ರನಾದರೂ ಸರಿಯೆ, ಕರೆಯದೆ ಇತರರ ಮನೆಗಳಿಗೆ ಹೋದಲ್ಲಿ ಕೇವಲ ಕೀಳಾಗಿಹೋಗುವನೆಂದು ತಿಳಿ. ಆದುದರಿಂದ ನೀನೀಗ ನಿನ್ನ ತಂದೆಯ ಯಜ್ಞವಾಟಿಗೆ ಹೋಗುವುದು ಉಚಿತವಲ್ಲವು.''

೬೦–೬೫. ಅಯ್ಯಾ ಶೌನಕಾದಿಗಳಿರಾ! ಮಹಾತ್ಮನಾದ ಮಹೇಶ್ವರನೀ ರೀತಿ ನುಡಿಯಲು ನುಡಿಜಾಣ್ಮೆಯುಳ್ಳ ಆ ಸತೀದೇವಿಯು ಬಹಳವಾಗಿ ರೋಷಪಟ್ಟುಕೊಂಡು, ''ಮಹಾದೇವ! ಲೋಕದಲ್ಲಿ ಯಜ್ಞವೆಂಬುದು ಸತ್ಯವಾದುದು. ಸಾಕ್ಷಾತ್ ಯಜ್ಞಸ್ವರೂಪಿಯೇ ನೀನಾಗಿರುವೆ. ಇಂತಿರುವ ನಿನ್ನನ್ನು, ದುರಾತ್ಮನಾದ ಆ ನನ್ನ ತಂದೆಯು ತಾನೆನಗುವ ಆ ಯಜ್ಞಕ್ಕೆ ಆಹ್ವಾನಿಸಲಿಲ್ಲವೇಕೆ? ಅದಕ್ಕೆ ಕಾರಣವೇನೆಂಬುದನ್ನು ತಿಳಿಯಲು ನನಗೆ ಅಪೇಕ್ಷೆಯುಂಟು. ಆದುದರಿಂದ ನಾನೀಗಲೇ ನಮ್ಮ ತಂದೆಯ ಯಜ್ಞವಾಟಿಗೆ ಹೋಗುತ್ತೇನೆ. ಓ ಸ್ವಾಮಿ! ಜಗತ್ಪತೀ!! ನೀನು ನನಗೆ ಅಪ್ಪಣೆಯನ್ನು ದಯಪಾಲಿಸಬೇಕು'' ಎಂದಳು. ಸರ್ವಪೂಜ್ಯನೂ, ಸರ್ವಾಂತರ್ಯಾಮಿಯೂ ಆದ ಪರಶಿವನು ಆಕೆಯ ಮಾತುಗಳೆಲ್ಲವನ್ನೂ ಸಾವಧಾನವಾಗಿ ಕೇಳಿದನು. ಬಳಿಕ, ಸಮಸ್ತವನ್ನೂ ಬಲ್ಲವನಾಗಿ, ಸಮಸ್ತ ಪ್ರಪಂಚಕ್ಕೂ ಸಾಕ್ಷಿಯಾಗಿ, ದೇವೇಶ್ವರನೂ, ಸರ್ವಸಿದ್ಧಿಪ್ರದನೂ ಆದ ಆ ಸ್ವಾಮಿಯು ಆ ಸತಿಯನ್ನು ಕುರಿತು, ''ದೇವೀ! ಇದೋ, ನಾನು

**ಏತಂ ನಂದಿನಮಾರುಹ್ಯ ನಾನಾವಿಧಗಣಾನ್ವಿತಾ ।**
**ಗಣಾಃ ಷಷ್ಟಿಸಹಸ್ರಾಣಿ ಜಗ್ಮೂ ರೌದ್ರಾಃ ಶಿವಾಜ್ಞಯಾ ॥ ೬೫ ॥**
**ತೈರ್ಗಣೈಃ ಸಂವೃತಾ ದೇವೀ ಜಗಾಮ ಪಿತೃಮಂದಿರಂ ।**
**ನಿರೀಕ್ಷ್ಯ ತದ್ಬಲಂ ಸರ್ವಂ ಮಹಾದೇವೋತಿವಿಸ್ಮಿತಃ ॥ ೬೬ ॥**
**ಭೂಷಣಾನಿ ಮಹಾರ್ಹಾಣಿ ತೇಭ್ಯೋ ದೇವ್ಯೈ ಪರಂತಪಃ ।**
**ಪ್ರೇಷಯಾಮಾಸ ಚಾವ್ಯಗ್ರೋ ಮಹಾದೇವೋಽನುಪೃಷ್ಟತಃ ॥ ೬೭ ॥**
**ದೇವ್ಯಾ ಗತಂ ವೈ ಸ್ವಪಿತುರ್ಗೃಹಂ ತದಾ ।**
**ವಿಮೃಶ್ಯ ಸರ್ವಂ ಭಗವಾನ್ಮಹೇಶಃ ॥**
**ದಾಕ್ಷಾಯಣೀ ಪಿತ್ರವಮಾನಿತಾ ಸತೀ ।**
**ನಯಾಸ್ಯತೀತಿ ಸ್ವಪುರಂ ಪುನರ್ಯಯೌ ॥ ೬೮ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ದಕ್ಷಯಜ್ಞಂಪ್ರತಿ ಸತೀದೇವ್ಯಾಗಮನವರ್ಣನಂ" ನಾಮ ದ್ವಿತೀಯೋಽಧ್ಯಾಯಃ**

---

ಅಪ್ಪಣೆಯಿತ್ತೆನು. ಈಗಲೇ ನೀನು ಈ ನಂದಿಯನ್ನೇರಿ ಅನೇಕ ಬಗೆಯ ಶಿವಗಣಗಳು ಬಳಸಿ ಬರುತ್ತಿರಲು ಜಾಗ್ರತೆಯಾಗಿ ನಿಮ್ಮ ತಂದೆಯ ಯಾಗಮಂಟಪಕ್ಕೆ ಪ್ರಯಾಣ ಬೆಳಸು" ಎಂದು ಹೇಳಿದನು. ಪರಶಿವನಿಂತು ನುಡಿದೊಡನೆಯೇ ಆತನ ಆಜ್ಞೆಯನ್ನನುಸರಿಸಿ ಅರುವತ್ತುಸಾವಿರ ಶಿವಗಣಗಳು ಹೊರಟು ನಿಂತರು.

೬೬-೬೮. ಹೀಗೆ ಆ ಶಿವಗಣಗಳು ತನ್ನನ್ನು ಬಳಸಿ ಹೊರಡಲು ಆ ಸತೀದೇವಿಯು ತನ್ನ ತಂದೆಯಾದ ದಕ್ಷಬ್ರಹ್ಮನ ಮನೆಗೆ ಪ್ರಯಾಣಮಾಡಿದಳು. ಈರೀತಿ ಹೊರಟ ಆ ದೇವಿಯನ್ನೂ, ಆಕೆಯೊಡನಿದ್ದ ಅಪಾರವಾದ ತನ್ನ ಸೇನೆಯನ್ನೂ ಕಂಡು, ಮಹಾತಪಸ್ವಿಯಾದ ಮಹಾದೇವನಾದರೋ, ಪರಮಾಶ್ಚರ್ಯಭರಿತನಾಗಿ ಆ ದೇವಿಗೂ, ಆ ಸೇನೆಯವರಿಗೂ ಅಮೂಲ್ಯವಾದ ಆಭರಣಗಳನ್ನು ಅಲಂಕಾರಾರ್ಥವಾಗಿ ಕೊಟ್ಟು ಕಳುಹಿಸಿದನು. ಆ ಮಹೇಶ್ವರನು ತನ್ನ ಸತಿಯಾದ ಸತೀದೇವಿಯು ತಾನಷ್ಟು ಹೇಳಿದರೂ ಕಡೆಗೂ ತಂದೆಯ ಮನೆಗೆ ತೆರಳಿದುದನ್ನು ಕುರಿತು ಹಾಗೆಯೇ ಆಲೋಚಿಸಿ, "ಅಕ್ಕಟ! ಮಹಾಪತಿವ್ರತೆಯಾದ ಈ ದೇವಿಯು ತಂದೆಯಿಂದ ಅವಮಾನಿತೆಯಾಗುತ್ತಾಳೆಯಾಗಿ ಇಲ್ಲಿಗೆ ಹಿಂತಿರುಗಿ ಬರುವುದಿಲ್ಲ!" ಎಂದು ನಿಶ್ಚಯಿಸಿಕೊಂಡು ತನ್ನ ಪಟ್ಟಣವಾದ ಕೈಲಾಸಕ್ಕೆ ಹೊರಟುಹೋದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ
ಕೇದಾರಖಂಡದಲ್ಲಿ "ದಕ್ಷಯಜ್ಞಪ್ರಾರಂಭ-ಸತೀದೇವ್ಯಾಗಮನ" ಎಂಬ
ಎರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ತೃತೀಯೋಽಧ್ಯಾಯಃ

## ವೀರಭದ್ರಪ್ರಾದುರ್ಭಾವವರ್ಣನಂ

ಲೋಮಶ ಉವಾಚ :—

ದಾಕ್ಷಾಯಣೀ ಗತಾ ತತ್ರ ಯತ್ರ ಯಜ್ಞೋ ಮಹಾನಭೂತ್ ।
ತತ್ಪಿತುಃ ಸದನಂ ಗತ್ವಾ ನಾನಾಶ್ಚರ್ಯಸಮನ್ವಿತಂ ॥ ೧ ॥
ದ್ವಾರಿ ಸ್ಥಿತಾ ತದಾ ದೇವ್ಯಾ ಅವತೀರ್ಯ ನಿಜಾಸನಾತ್ ।
ನಂದಿನೋ ಹಿ ಮಹಾಭಾಗಾ ದೇವಲೋಕಂ ನಿರೀಕ್ಷ್ಯ ಚ ॥ ೨ ॥
ಮಾತರಂ ಪಿತರಂ ದೃಷ್ಟ್ವಾ ಸುಹೃತ್ಸಂಬಂಧಿ ಬಾಂಧವಾನ್ ।
ಅಭಿವಾದ್ಯೈವ ಪಿತರಂ ಮಾತರಂ ಚ ಮುದಾನ್ವಿತಾ ॥ ೩ ॥
ಬಭಾಷೇ ವಚನಂ ದೇವೀ ಪ್ರಸ್ತಾವಸದೃಶಂ ತದಾ ।
ಅನಾಹೂತಸ್ತ್ವಯಾ ಕಸ್ಮಾಚ್ಛಂಭುಃ ಪರಮಶೋಭನಃ ॥ ೪ ॥
ಯೇನ ಪೂತಮಿದಂ ಸರ್ವಂ ಸಮಗ್ರಂ ಸಚರಾಚರಂ । [೫ ॥
ಯಜ್ಞೋ ಯಜ್ಞವಿದಾಂ ಶ್ರೇಷ್ಠೋ ಯಜ್ಞಾಂಗೋ ಯಜ್ಞದಕ್ಷಿಣಃ ॥

---

### ಕನ್ನಡದ ಅನುವಾದ

#### ವೀರಭದ್ರನು ಅವತರಿಸಿದುದು

೧–೩. ಲೋಮಶನು ಹೇಳುತ್ತಾನೆ:— ಎಲೈ ಶೌನಕಾದಿ ಮಹರ್ಷಿಗಳಿರಾ! ಬಳಿಕ, ಮಹಾಭಾಗ್ಯವತಿಯಾದ ದಾಕ್ಷಾಯಣೀದೇವಿಯು ಮಹತ್ತರವಾದ ಯಜ್ಞನಮಾರಂಭವು ನಡೆಯುತ್ತಿದ್ದ ತನ್ನ ತಂದೆಯ ಮನೆಗೈತಂದಳು. ಅನೇಕ ಬಗೆಯ ಆಶ್ಚರ್ಯಗಳಿಂದ ತುಂಬಿ ತುಳುಕುತ್ತಿದ್ದ ಆ ಭವ್ಯಭವನದ ಮಹಾದ್ವಾರದಲ್ಲಿ ನಿಂತು, ಆ ದೇವಿಯು ನಂದಿಪೀಠದಿಂದ ಕೆಳಕ್ಕಿಳಿದು, ಒಳಗೆ ನೆರೆದಿದ್ದ ದೇವತೆಗಳ ಗುಂಪನ್ನೂ, ತನ್ನ ತಾಯಿ ತಂದೆಯರನ್ನೂ, ಗೆಳೆಯರನ್ನೂ, ಇತರ ನೆಂಟರನ್ನೂ ನೋಡಿ ಪರಮಸಂತುಷ್ಟೆಯಾದಳು.

೪–೬. ತಾಯಿ ತಂದೆಯರ ಬಳಿಗೈದಿ ಅವರನ್ನು ನಮಸ್ಕರಿಸಿದ ಬಳಿಕ ಆ ದೇವಿಯು ಸಮಯಕ್ಕೆ ತಕ್ಕಂತೆ ಹೀಗೆಂದಳು: "ತಂದೆಯೆ! ನೀನು ಪರಮಮಂಗಳಸ್ವರೂಪನಾದ ಶಂಭುವನ್ನು ಈ ಯಜ್ಞಕ್ಕೆ ಆಹ್ವಾನಿಸಲಿಲ್ಲವೇಕೆ? ಯಾವನಿಂದ ಚರಚರಾತ್ಮಕವಾದ ಈ ಪ್ರಪಂಚವೆಲ್ಲವೂ ಪಾವನವಾಗುತ್ತದೆಯೋ, ಯಾವನು ಯಜ್ಞಸ್ವರೂಪಿಯಾಗಿ,ಯಜ್ಞಸಂವಿಧಾನವನ್ನರಿತವರಲ್ಲಿ ಶ್ರೇಷ್ಠನಾಗಿ, ಯಜ್ಞಾಂಗನೂ, ಯಜ್ಞದಲ್ಲಿ ಕೊಡುವ ದಕ್ಷಿಣಾಸ್ವರೂಪನೂ ದ್ರವ್ಯ ಮಂತ್ರಮುಂತಾದ ಯಜ್ಞೋಪಕರಣಗಳ ಸ್ವರೂಪನೂ ಆಗಿರುವನೋ, ಹವ್ಯಕವ್ಯ

ದ್ರವ್ಯಂ ಮಂತ್ರಾದಿಕಂ ಸರ್ವಂ ಹವ್ಯಂ ಕವ್ಯಂಚ ಯನ್ಮಯಂ ।
ವಿನಾ ತೇನ ಕೃತಂ ಸರ್ವಮಪವಿತ್ರಂ ಭವಿಷ್ಯತಿ ॥ ೬ ॥
ಶಂಭುನಾಹಿ ವಿನಾ ತಾತ ಕಥಂ ಯಜ್ಞಃ ಪ್ರವರ್ತತೇ ।
ಏತೇ ಕಥಂ ಸಮಾಯಾತಾ ಬ್ರಹ್ಮಣಾ ಸಹಿತಾಃ ಪಿತಃ ॥ ೭ ॥
ಹೇ ಭೃಗೋ ತ್ವಂ ನಜಾನಾಸಿ ಹೇ ಕಶ್ಯಪ ಮಹಾಮತೇ ।
ಅತ್ರೇ ವಶಿಷ್ಠ ಏಕಸ್ತ್ವಂ ಶಕ್ರ ಕಿಂ ಕೃತಮದ್ಯ ತೇ ॥ ೮ ॥
ಹೇ ವಿಷ್ಣೋ ತ್ವಂ ಮಹಾದೇವಂ ಜಾನಾಸಿ ಪರಮೇಶ್ವರಂ ।
ಬ್ರಹ್ಮನ್ಕಿಂ ತ್ವಂ ನಜಾನಾಸಿ ಮಹಾದೇವಸ್ಯ ವಿಕ್ರಮಂ ॥ ೯ ॥
ಪುರಾ ಪಂಚಮುಖೋ ಭೂತ್ವಾ ಗರ್ವಿತೋಸಿ ಸದಾಶಿವಂ ।
ಕೃತಶ್ಚತುರ್ಮುಖಸ್ತೇನ ವಿಸ್ಮೃತೋಽಸಿ ತದದ್ಭುತಂ ॥ ೧೦ ॥
ಭಿಕ್ಷಾಟನಂ ಕೃತಂ ಯೇನ ಪುರಾ ದಾರುವನೇ ವಿಭುಃ ।
ಶಪ್ತೋಽಯಂ ಭಿಕ್ಷುಕೋ ರುದ್ರೋ ಭವದ್ಭಿಃ ಸಖಿಭಿಸ್ತದಾ ॥ ೧೧ ॥
ಶಪ್ತೇನಾಪಿ ಚ ರುದ್ರೇಣ ಭವದ್ಭಿರ್ವಿಸ್ಮೃತಂ ಕಥಂ ।
ಯಸ್ಯಾವಯವಮಾತ್ರೇಣ ಪೂರಿತಂ ಸಚರಾಚರಂ ॥ ೧೨ ॥

---

ಗಳೆಲ್ಲವೂ ಯಾರ ಸ್ವರೂಪವೇ ಆಗಿರುವುದೋ ಆ ಪರಮಪರಶಿವನನ್ನು ನೀನು ಈ ಯಜ್ಞಕ್ಕೆ ಆಹ್ವಾನಿಸದಿರಲು ಕಾರಣವೇನು ? ತಂದೆಯೇ ! ಆತನನ್ನು ಬಿಟ್ಟರೆ ಎಲ್ಲವೂ ಅಪವಿತ್ರವಾಗುತ್ತದೆಯಲ್ಲವೆ ?

೭–೧೦. ಜನಕಾ! ಆತನಿಲ್ಲದೆ ಈ ಯಜ್ಞಕರ್ಮವು ನಡೆಯುವುದೆಂತು? ಇಲ್ಲಿ ನೆರೆದಿರುವ ದೇವತೆಗಳು, ಬ್ರಹ್ಮನೊಡಗೂಡಿ ಪರಶಿವನನ್ನು ಬಿಟ್ಟು ಬಂದುದು ತಾನೇ ಹೇಗೆ? ಅಯ್ಯಾ ಭೃಗುಮುನಿಯೇ! ನಿನಗೆ ಆ ಮಹೇಶ್ವರನ ಮಾಹಾತ್ಮ್ಯವು ತಿಳಿಯದೇ? ಎಲೈ ಕಶ್ಯಪನೇ, ಮಹಾಬುದ್ಧಿಶಾಲಿಯಾದ ಓ ವಸಿಷ್ಠಮುನಿಯೇ! ನಿಮಗಾದರೂ ಆ ಸ್ವಾಮಿಯ ವಿಚಾರವು ತಿಳಿಯದಾಯಿತೆ? ಮಹೇಂದ್ರಾ! ನನ್ನ ಸ್ವಾಮಿಯಾದ ಶಂಕರನು ನಿನಗಾವ ಅಪಕಾರವನ್ನು ಮಾಡಿದನು. ಎಲೈ ವಿಷ್ಣುವೇ! ನೀನು ಮಹಾದೇವನನ್ನು ಚೆನ್ನಾಗಿ ಬಲ್ಲವನು. ಅಂತಹ ನೀನೂ ಇಲ್ಲಿಗೆ ಬಂದುದೆಂತು ? ಅಯ್ಯಾ, ಕಮಲಾಸನನೇ ! ಮಹಾದೇವನ ಪರಾಕ್ರಮವು ನಿನಗೆ ತಿಳಿಯದೆ? ಪೂರ್ವದಲ್ಲಿ ನೀನು ಪಂಚಮುಖನಾಗಿ ಕಡುಕೊಬ್ಬಿದ್ದಾಗ್ಗೆ, ನನ್ನ ಪ್ರಭುವಾದ ಆ ಪರಶಿವನು ನಿನ್ನನ್ನು ದಂಡಿಸಿ ಚತುರ್ಮುಖನನ್ನಾಗಿ ಮಾಡಿದುದು ನಿನಗಾಗಲೇ ಮರೆತುಹೋಯಿತೆ!

೧೧–೧೪. ಎಲೈ ಋಷಿಗಳಿರಾ! ಹಿಂದೆ, ಆ ವಿಭುವು ದಾರುವನದಲ್ಲಿ ಭಿಕ್ಷಾಟನ ಮಾಡಿದಂದು ನೀವೂ, ನಿಮ್ಮ ಗೆಳೆಯರೂ ಆತನನ್ನು ಶಪಿಸಿದರೂ, ಆ ಸ್ವಾಮಿಯ ಒಂದೇ ಅವಯವವೇ ಚರಾಚರಾತ್ಮಕವಾದ ಜಗತ್ತೆಲ್ಲವನ್ನೂ

ಲಿಂಗಭೂತಂ ಜಗತ್ಸರ್ವಂ ಜಾತಂ ತತ್ಕ್ಷಣಮೇವ ಹಿ ।
ಲಯನಾಲ್ಲಿಂಗಮಿತ್ಯಾಹುಃ ಸರ್ವೇ ದೇವಾಃ ಸವಾಸವಾಃ ॥ ೧೩ ॥
ಸರ್ವೇ ದೇವಾಶ್ಚ ಸಂಭೂತಾ ಯತೋ ದೇವಸ್ಯ ಶೂಲಿನಃ । [೧೪ ॥
ಸೋಽಸೌ ವೇದಾಂತಗೋ ದೇವಸ್ತ್ವಯಾ ಜ್ಞಾತುಂ ನ ಪಾರ್ಯತೇ ॥
ತಸ್ಯಾ ವಚನಮಾಕರ್ಣ್ಯ ದಕ್ಷಃ ಕ್ರುದ್ಧೋಽಬ್ರವೀದ್ವಚಃ ।
ಕಿಂ ತ್ವಯಾ ಬಹುನೋಕ್ತೇನ ಕಾರ್ಯಂ ನಾಸ್ತೀಹ ಸಾಂಪ್ರತಂ ॥ ೧೫ ॥
ಗಚ್ಛ ವಾ ತಿಷ್ಠ ವಾ ಭದ್ರೇ ಕಸ್ಮಾತ್ತ್ವಂ ಹಿ ಸಮಾಗತಾ ।
ಅಮಂಗಲೋ ಹಿ ಭರ್ತಾ ತೇ ಅಶಿವೋಽಸೌ ಸುಮಧ್ಯಮೇ ॥ ೧೬ ॥
ಅಕುಲೀನೋ ವೇದಬಾಹ್ಯೋ ಭೂತಪ್ರೇತಪಿಶಾಚರಾಟ್ ।
ತಸ್ಮಾನ್ನಾಕಾರಿತೋ ಭದ್ರೇ ಯಜ್ಞಾರ್ಥಂ ಚಾರುಭಾಷಿಣಿ ॥ ೧೭ ॥
ಮಯಾ ದತ್ತಾಸಿ ಸುಶ್ರೋಣಿ ಪಾಪಿನಾ ಮಂದಬುದ್ಧಿನಾ ।
ರುದ್ರಾಯಾಽವಿದಿತಾರ್ಥಾಯ ಉದ್ಧತಾಯ ದುರಾತ್ಮನೇ ॥ ೧೮ ॥

---

ವ್ಯಾಪಿಸಿದ ಅದ್ಭುತವು ನಿಮಗಾಗಲೆ ಮರೆತುಹೋಯಿತೆ? ಆ ಸಮಯದಲ್ಲಿ ಕ್ಷಣಮಾತ್ರದಲ್ಲಿಯೇ ಆ ರುದ್ರನ ಪ್ರಭಾವದಿಂದ ಜಗತ್ತೇ ಲಿಂಗಮಯ ವಾಗಲಿಲ್ಲವೆ? ಅದೇ ಸಮಯದಲ್ಲಿಯೇ ಈ ದೇವತೆಗಳೂ, ಇವರೆಲ್ಲರಿಗೂ ಪ್ರಭುವಾದ ಈ ಮಹೇಂದ್ರನೂ, 'ಎಲ್ಲವೂ ಯಾವುದರಲ್ಲಿ ಲಯವಾಗು ತ್ತದೆಯೋ ಅದೇ ಲಿಂಗ'ವೆಂದು ಹೇಳಿದರಲ್ಲವೆ? ಯಾವಾತನಿಂದಲೇ ಈ ಸಮಸ್ತ ಪ್ರಪಂಚವೂ, ಈ ದೇವತೆಗಳೂ ಉಂಟಾದರೋ ಅಂತಹ ವೇದ ವೇದಾಂತಗೋಚರನೂ, ಸರ್ವಸ್ವಾಮಿಯೂ ಆದ ಆ ಪರಮೇಶ್ವರನ ಸ್ವರೂಪ ವನ್ನು ತಿಳಿದುಕೊಳ್ಳಲು ನಿನಗೆಂದಿಗೂ ಸಾಧ್ಯವಲ್ಲವು.''

೧೫-೧೮. ಎಲೈ ಮಹರ್ಷಿಗಳಿರಾ! ದಾಕ್ಷಾಯಣೀದೇವಿಯು ಈ ಪ್ರಕಾರ ಹೇಳಲು ದಕ್ಷಬ್ರಹ್ಮನು ಬಹುವಾಗಿ ಕನಲಿ ಅವಳನ್ನು ಕುರಿತು, ''ಎಲೆ ಭದ್ರೇ! ನೀನು ಹೀಗೆ ಬಹಳವಾಗಿ ಹರಟುವುದರಿಂದ ಪ್ರಯೋಜನವೇನು? ಪ್ರಕೃತ ದಲ್ಲಿ ಇಲ್ಲಿ ನಿನ್ನಿಂದ ನಡೆಯಬೇಕಾದ ಕಾರ್ಯವೇನೂ ಇರುವುದಿಲ್ಲ. ಇಲ್ಲಿಗೆ ನಿನ್ನನ್ನು ಕರೆಯಿಸಿದವರಾರು? ನೀನೇ ಬಂದಿರುವೆಯಾದುದರಿಂದ ನಿನ್ನ ಇಷ್ಟ ವಿದ್ದರೆ ಇರಬಹುದು; ಇಲ್ಲವಾದರೆ ಹೊರಡಬಹುದು. ಎಲೌ ಸುಮಧ್ಯಮೇ! ನೀನು ನಿನ್ನ ಪತಿಯ ವಿಚಾರವನ್ನಿಷ್ಟುದೂರ ಹೇಳಿ ಅವನನ್ನು ಕರೆಯಲಿಲ್ಲ ವೇಕೆಂದು ಕೇಳಿದೆಯಲ್ಲವೆ? ಕೇಳು; ನಿನ್ನ ಪತಿಯು ಅಮಂಗಳಕರನು. ಅವನು ಶಿವನಲ್ಲ, ಅಶಿವನು. ಅವನಿಗೆ ಕುಲವಿಲ್ಲ. ವೇದಬಾಹ್ಯನವನು; ಭೂತಪ್ರೇತ ಪಿಶಾಚಗಳಿಗೆಲ್ಲ ಅವನೇ ದೊರೆ. ಎಲೆ ಚಾರುಭಾಷಿಣಿ! ಈ ಕಾರಣ ದಿಂದಲೇ ಅವನನ್ನು ಈ ಯಜ್ಞಕ್ಕೆ ಆಹ್ವಾನಿಸಲಿಲ್ಲ. ಎಲೌ ಸುಶ್ರೋಣಿಯೇ!

**ತಸ್ಮಾತ್ತ್ಕಾಯಂ ಪರಿತ್ಯಜ್ಯ ಸ್ವಸ್ಥಾಭವ ಶುಚಿಸ್ಮಿತೇ ।**
**ದಕ್ಷೇಣೋಕ್ತಾ ತದಾ ಪುತ್ರೀ ಸಾ ಸತೀ ಲೋಕಪೂಜಿತಾ ॥ ೧೯ ॥**
**ನಿಂದಾಯುಕ್ತಂ ಸ್ವಪಿತರಂ ವಿಲೋಕ್ಯ ರುಷಿತಾ ಭೃಶಂ ।**
**ಚಿಂತಯಂತೀ ತದಾ ದೇವೀ ಕಥಂ ಯಾಸ್ಯಾಮಿ ಮಂದಿರಂ ॥ ೨೦ ॥**
**ಶಂಕರಂ ದ್ರಷ್ಟುಕಾಮಾಹಂ ಕಿಂ ವಕ್ಷ್ಯೇ ತೇನ ಪೃಚ್ಛಿತಾ ।**
**ಯೋ ನಿಂದತಿ ಮಹಾದೇವಂ ನಿಂದ್ಯಮಾನಂ ಶೃಣೋತಿ ಯಃ ।**
**ತಾವುಭೌ ನರಕೇ ಯಾತೌ ಯಾವಚ್ಚಂದ್ರದಿವಾಕರೌ ॥ ೨೧ ॥**
**ತಸ್ಮಾತ್ತ್ಯಕ್ಷ್ಯಾಮ್ಯಹಂ ದೇಹಂ ಪ್ರವೇಕ್ಷ್ಯಾಮಿ ಹುತಾಶನಂ ॥ ೨೨ ॥**
**ಏವಂ ಮೀಮಾಂಸಮಾನಾ ಸಾ ಶಿವ ರುದ್ರೇತಿ ಭಾಷಿಣೀ ।**
**ಅಪಮಾನಾಭಿಭೂತಾ ಸಾ ಪ್ರವಿವೇಶ ಹುತಾಶನಂ ॥ ೨೩ ॥**

---

ನಾನು ಮಹಾ ಪಾಪಿ; ಏನೂ ತಿಳುವಳಿಕೆಯಿಲ್ಲದವನು! ಆದುದರಿಂದಲೇ ಮಗಳಾದ ನಿನ್ನನ್ನು ದುರಾತ್ಮನೂ, ದುರಹಂಕಾರಿಯೂ, ತತ್ವಜ್ಞಾನಿಯಲ್ಲದವನೂ ಆದ ಆ ಶಿವನಿಗೆ ಕೊಟ್ಟು ಮದುವೆ ಮಾಡಿದೆನು! ಓ ಶುಚಿಸ್ಮಿತೇ! ಕಳೆದುಹೋದುದಕ್ಕೆ ಈಗ ಮರುಗಿ ಫಲವೇನು? ಆದುದು ಆಗಿಹೋಯಿತು! ಪ್ರಕೃತದಲ್ಲಿ ನೀನು ಈ ದೇಹವನ್ನಾದರೂ ತ್ಯಾಗಮಾಡಿ ಸ್ವರ್ಗವನ್ನು ಸೇರಿಕೋ" ಎಂದು ಹೇಳಿದನು.

೨೦–೨೩. ದುಷ್ಟನಾದ ಆ ದಕ್ಷನಿಂತೆನಲು ಅವನ ಮಗಳಾದರೂ ಶ್ರೀಮತ್ಪರಶಿವನ ಮಡದಿಯಾದುದರಿಂದ ಲೋಕಪೂಜ್ಯಳಾದ ಆ ಸತೀದೇವಿಯು ತನ್ನ ಸ್ವಾಮಿಯಾದ ಆ ಶಿವನನ್ನು ನಿಂದಿನತೊಡಗಿರುವ ಅವನನ್ನು ಕಂಡು ಮತ್ತೂ ರೋಷಗೊಂಡವಳಾಗಿ, "ಅಕಟಕಟಾ! ಈಗ ನಾನು ನನ್ನ ಪ್ರಭುವಾದ ಪರಮೇಶ್ವರನನ್ನು ಕಾಣಬಯಸಿರುವೆನಾದರೂ ಆತನಲ್ಲಿಗೆ ಹೇಗೆತಾನೆ ಹಿಂತಿರುಗಿ ಹೋಗಲಿ!! ಒಂದುವೇಳೆ ಅಲ್ಲಿಗೆ ಹೋದರೂ ಆ ಸ್ವಾಮಿಯು ಇಲ್ಲಿನ ಸುದ್ದಿಯನ್ನು ಕೇಳಿದರೆ ನಾನು ಹೇಳುವುದಾದರೂ ಏನು? ಲೋಕದಲ್ಲಿ ಪರಶಿವನನ್ನು ನಿಂದಿಸುವವರೂ, ಇತರರು ಮಾಡಿದ ಶಿವನಿಂದೆಯನ್ನು ಕಿವಿಯಾರ ಕೇಳುವವರೂ ಈ ಇಬ್ಬರೂ ಸೂರ್ಯ ಚಂದ್ರರಿರುವವರೆಗೂ ನರಕದಲ್ಲಿ ಬೀಳುತ್ತಾರೆಯಲ್ಲವೆ! ನಾನಾದರೋ ಈ ಶಿವನಿಂದೆಯನ್ನು ಕೇಳಿ ಮಹಾಪಾಪಿಷ್ಠೆಯಾಗಿರುವೆನು. ಇಂತಹ ನಾನು ಕೈಲಾಸಕ್ಕೆ ಹಿಂತಿರುಗುವುದಿಲ್ಲವಾಗಿ ಅಗ್ನಿಪ್ರವೇಶ ಮಾಡಿಯಾದರೂ ಈ ದೇಹವನ್ನೇ ತೊರೆಯುತ್ತೇನೆ" ಎಂದು ಯೋಚಿಸಿದಳು. ತರುವಾಯ ಆಕೆಯು ತನ್ನ ತಂದೆಯಾದ ಆ ದಕ್ಷನು ಮಾಡಿದ ತಿರಸ್ಕಾರದಿಂದ ಬಹುವಾಗಿ ಕೊರಗಿ ಒಡನೆಯೇ, "ಶಿವ! ರುದ್ರಾ!!" ಎಂದು ಮುಂತಾಗಿ ಶಿವನಾಮಗಳನ್ನುಚ್ಚರಿಸುತ್ತ ಅಲ್ಲಿಯೇ ಅಗ್ನಿಪ್ರವೇಶವನ್ನು ಮಾಡಿಬಿಟ್ಟಳು.

**ಹಾಹಾಕಾರೇಣ ಮಹತಾ ವ್ಯಾಪ್ತಮಾಸೀದ್ದಿಗಂತರಂ ।**
**ಸರ್ವೇ ತೇ ಮಂಚಮಾರೂಢಾಃ ಶಸ್ತ್ರೈರ್ವ್ಯಾಪಾದ್ಯ ನಿರಂತರಾಃ ॥ ೨೪ ॥**
**ಶಸ್ತ್ರೈಃ ಸ್ವೈರ್ಜಘ್ನುರಾತ್ಮಾನಂ ಸ್ವಾನಿ ದೇಹಾನಿ ಚಿಚ್ಛಿದುಃ ।**
**ಕೇಚಿತ್ಕರತಲೇ ಗೃಹ್ಯ ಶಿರಾಂಸಿ ಸ್ವಾನಿ ಚೋತ್ಸುಕಾಃ ॥ ೨೫ ॥**
**ನೀರಾಜಯಂತಸ್ತ್ವರಿತಾ ಭಸ್ಮೀಭೂತಾಶ್ಚ ಜಜ್ಞಿರೇ ।**
**ಏವಮೂಚುಸ್ತದಾ ಸರ್ವೇ ಜಗರ್ಜುರತಿಭೀಷಣಂ ॥ ೨೬ ॥**
**ಶಸ್ತ್ರಪ್ರಹಾರೈಃ ಸ್ವಾಂಗಾನಿ ಚಿಚ್ಛಿದುಶ್ಚಾತಿಭೀಷಣಾಃ ।**
**ತೇ ತಥಾ ವಿಲಯಂ ಪ್ರಾಪ್ತಾ ದಾಕ್ಷಾಯಣ್ಯಾ ಸಮಂ ತದಾ । ॥ ೨೭ ॥**
**ಗಣಾಸ್ತತ್ರಾಯುತೇ ದ್ವೇಚ ತದದ್ಭುತಮಿವಾಽಭವತ್ ।**
**ತೇ ಸರ್ವಋಷಯೋ ದೇವಾ ಇಂದ್ರಾದ್ಯಾಃ ಸಮರುದ್ಗಣಾಃ ॥ ೨೮ ॥**
**ವಿಶ್ವೇಽಶ್ವಿನೌ ಲೋಕಪಾಲಾಸ್ತೂಷ್ಣೀಂ ಭೂತಾಸ್ತದಾಽಭವನ್ ।**
**ವಿಷ್ಣುಂ ವರೇಣ್ಯಂ ಕೇಚಿಚ್ಚ ಪ್ರಾರ್ಥಯಂತಃ ಸಮಂತತಃ ॥ ೨೯ ॥**

---

೨೪-೩೦. ಆಗ ದಿಗ್ದಿಗಂತರಗಳೆಲ್ಲವೂ ಭಯಂಕರವಾದ ಹಾಹಾಕಾರ ಗಳಿಂದ ತುಂಬಿಹೋದವು. ಅಲ್ಲಿದ್ದ ಶಿವಗಣಗಳೆಲ್ಲರೂ ಒಡನೆಯೇ ಶಸ್ತ್ರಗಳನ್ನೇರಿ ಕೆಲವರು, ಮಂಚ (ಎತ್ತರವಾದ ಪ್ರದೇಶಗಳಿಂದ ಬಿದ್ದು) ಗಳನ್ನೇರಿ ಬಿದ್ದು ಕೆಲವರು, ಶಸ್ತ್ರಗಳಿಂದ ತಮ್ಮ ದೇಹಗಳನ್ನು ಕತ್ತರಿಸಿಕೊಂಡು ಕೆಲವರೂ ಮಡಿದರು. ಕೆಲವರು ಶಿವಕಿಂಕರರು ತಮ್ಮ ತಲೆಗಳನ್ನು ಕತ್ತರಿಸಿ ಬಹು ಉತ್ಸಾಹದಿಂದ ಅವುಗಳನ್ನು ಕೈಯಲ್ಲಿ ಹಿಡಿದು ಅವನ್ನು ಉರಿಸಿ ತಿರುಗಿಸುತ್ತ ತಾವೂ ಸುಟ್ಟು ಬಹುಬೇಗನೆಯೇ ಭಸ್ಮವಾದರು. ಕೆಲವರು ಬಹು ಭಯಂಕರ ವಾಗಿ ಗರ್ಜಿಸಿದರು. ಕೆಲವರು ವಿಕಾರ ವಿಕಾರವಾಗಿ ಅರಚಿಕೊಂಡರು. ಮಹಾ ಭಯಂಕರ ಸ್ವರೂಪರಾದ ಮತ್ತೆ ಕೆಲಮಂದಿ ಶಿವಕಿಂಕರರೆಲ್ಲರೂ ತಮ್ಮ ಅವಯವಗಳೆಲ್ಲವನ್ನೂ ಖಡ್ಗಗಳಿಂದ ತುಂಡು ತುಂಡಾಗಿ ಕತ್ತರಿಸಿಕೊಂಡರು. ಎಲೈ ಮಹರ್ಷಿಗಳಿರಾ! ಈ ಪ್ರಕಾರವಾಗಿ ಆ ಅರುವತ್ತುಸಾವಿರ ಮಂದಿ ಶಿವಕಿಂಕರರೆಲ್ಲರೂ, ಶಿವಸತಿಯಾದ ಆ ದಾಕ್ಷಾಯಣೀ ದೇವಿಯೊಡನೆಯೇ ನಾಶವಾಗಿಹೋದರು. ಅವರೆಲ್ಲರ ಈ ಬಗೆಯ ವಿನಾಶವು ಪರಮಾದ್ಭುತವಾಗಿ ಪರಿಣಮಿಸಿತು. ಆಗ ಯಾಗಮಂಟಪದಲ್ಲಿದ್ದ ಸಮಸ್ತ ಋಷಿಗಳೂ, ಮರುದ್ಗಣ ಗಳೊಡಗೂಡಿದ ಮಹೇಂದ್ರಾದಿ ದೇವತೆಗಳೂ, ವಿಶ್ವೇದೇವತೆಗಳೂ, ಅಶ್ವಿನೀ ದೇವತೆಗಳೂ, ಅಷ್ಟದಿಕ್ಪಾಲಕರೂ ಯಾವ ಮಾತನ್ನೂ ಆಡದೆ ಸುಮ್ಮ ನಾಗಿ ಹೋದರು. ಕೆಲವರಂತು ವರೇಣ್ಯನಾದ ಶ್ರೀಮನ್ಮಹಾವಿಷ್ಣುವನ್ನು ಸುತ್ತ ಬಳಸಿಕೊಂಡು ಕಾಪಾಡಬೇಕೆಂದು ಆತನನ್ನು ಪ್ರಾರ್ಥಿಸುತ್ತಿದ್ದರು.

ಏವಂ ಭೂತಸ್ತದಾ ಯಜ್ಞೋ ಜಾತಸ್ತಸ್ಯ ದುರಾತ್ಮನಃ ।
ದಕ್ಷಸ್ಯ ಬ್ರಹ್ಮಬಂಧೋಶ್ಚ ಋಷಯೋ ಭಯಮಾಗತಾಃ ॥ ೩೦ ॥
ಏತಸ್ಮಿನ್ನಂತರೇ ವಿಪ್ರಾ ನಾರದೇನ ಮಹಾತ್ಮನಾ ।
ಕಥಿತಂ ಸರ್ವಮೇವೈತದ್ದಕ್ಷಸ್ಯ ಚ ವಿಚೇಷ್ಟಿತಂ ॥ ೩೧ ॥
ತದಾಕರ್ಣ್ಯೇಶ್ವರೋ ವಾಕ್ಯಂ ನಾರದಸ್ಯ ಮುಖೋದ್ಗತಂ ।
ಚುಕೋಪ ಪರಮಂ ಕ್ರುದ್ಧ ಆಸನಾದುತ್ಪತನ್ನಿವ ॥ ೩೨ ॥
ಉದ್ಧೃತ್ಯ ಚ ಜಟಾಂ ರುದ್ರೋ ಲೋಕಸಂಹಾರಕಾರಕಃ ।
ಆಸ್ಫೋಟಯಾಮಾಸ ರುಷಾ ಪರ್ವತಸ್ಯ ಶಿರೋಪರಿ ॥ ೩೩ ॥
ತಾಡನಾಚ್ಚ ಸಮುದ್ಭೂತೋ ವೀರಭದ್ರೋ ಮಹಾಯಶಾಃ ।
ತಥಾ ಕಾಳೀ ಸಮುತ್ಪನ್ನಾ ಭೂತಕೋಟಿಭಿರಾವೃತಾ ॥ ೩೪ ॥
ಕೋಪಾನ್ನಿಃಶ್ವಸಿತೇನೈವ ರುದ್ರಸ್ಯಚ ಮಹಾತ್ಮನಃ ।
ಜಾತಂ ಜ್ವರಾಣಾಂಚ ಶತಂ ಸನ್ನಿಪಾತಾಸ್ತ್ರಯೋದಶ ॥ ೩೫ ॥
ವಿಜ್ಞಪ್ತೋ ವೀರಭದ್ರೇಣ ರುದ್ರೋ ರೌದ್ರಪರಾಕ್ರಮಃ ।
ಕಿಂ ಕಾರ್ಯಂ ಭವತಃ ಕಾರ್ಯಂ ಶೀಘ್ರಮೇವ ವದ ಪ್ರಭೋ ॥ ೩೬ ॥

---

ದುರಾತ್ಮನೂ, ಬ್ರಾಹ್ಮಣಾಧಮನೂ ಆದ ಆ ದಕ್ಷನ ಯಾಗವು ಈ ರೀತಿ ದುಃಖಮಯವಾಗಿ ಪರಿಣಮಿಸಲು ಅಲ್ಲಿದ್ದ ಸಮಸ್ತ ಋಷಿಗಳಿಗೂ ಭಯವಡಸಿಬಂದಿತು.

೩೧–೩೫. ಎಲೈ ಶೌನಕಾದಿ ಮುನಿಗಳಿರಾ! ಇದೇ ಸಮಯದಲ್ಲಿಯೇ ಮಹಾತ್ಮನಾದ ನಾರದಮುನಿಯು ಕೈಲಾಸಕ್ಕೆ ತೆರಳಿ, ದಕ್ಷನು ಸತೀದೇವಿಯ ವಿಷಯದಲ್ಲಿ ನಡೆದ ನೀಚವಾದ ನಡೆವಳಿಕೆಯೆಲ್ಲವನ್ನೂ ಪರಮೇಶ್ವರನಿಗೆ ತಿಳಿಸಿದನು. ಅದನ್ನು ಕೇಳಿದೊಡನೆಯೇ ಆತನು, ಕುಳಿತಿದ್ದ ಪೀಠದಿಂದ ಹಾರಿಬೀಳುವನೋ ಎನ್ನುವಷ್ಟುಮಟ್ಟಿಗೆ ಕೋಪದಿಂದ ಕೆರಳಿಹೋದನು. ಲೋಕಲೋಕಗಳನ್ನೇ ಸಂಹಾರಮಾಡುವ ಆ ರುದ್ರನೆಂತು ಮಹತ್ತರ ರೋಷಪೂರಿತನಾಗಿ ಒಡನೆಯೆ ಜಟೆಗಳನ್ನೆತ್ತಿ ಆ ಕೈಲಾಸಾದ್ರಿಯ ಶಿಖರದಮೇಲೆ ಅಪ್ಪಳಿಸಿ ಬಡಿದನು. ಆ ಜಟಾತಾಡನ ಮಾತ್ರದಿಂದಲೇ ಮಹಾ ಕೀರ್ತಿಸಂಪನ್ನನಾದ ವೀರಭದ್ರನೂ, ಅನೇಕ ಭೂತಕೋಟಿಗಳೊಡನೆ ಕಾಳಿಕಾದೇವಿಯೂ ಆವಿರ್ಭವಿಸಿದರು. ಅದೇ ಸಮಯದಲ್ಲಿಯೇ ಆ ಮಹಾರುದ್ರನ ರೋಷಸಮನ್ವಿತವಾದ ನಿಃಶ್ವಾಸದಿಂದ ನೂರುಬಗೆಯ ಜ್ವರಗಳೂ, ಹದಿಮೂರುಬಗೆಯ ಸನ್ನಿಪಾತಗಳೂ ಹುಟ್ಟಿದುವು.

೩೬–೪೦. ತರುವಾಯ, ಮಹಾ ಭಯಂಕರ ಪರಾಕ್ರಮಿಯಾದ ಆ ರುದ್ರಮೂರ್ತಿಯನ್ನು ಕುರಿತು ವೀರಭದ್ರನು, "ಪ್ರಭುವೇ! ಈಗ ನಾನು ಮಾಡಬೇಕಾದ ಕಾರ್ಯವಾವುದು? ಅದನ್ನು ಜಾಗ್ರತೆಯಾಗಿ ಅಪ್ಪಣೆ ಕೊಡು" ಎಂದು ಪ್ರಾರ್ಥಿಸಿದನು. ಒಡನೆಯೇ ಆ ಸ್ವಾಮಿಯು, "ಎಲೈ ವೀರನೇ!

ಇತ್ಯುಕ್ತೋ ಭಗವಾನ್‌ರುದ್ರೋ ಪ್ರೇಷಯಾಮಾಸ ಸತ್ವರಂ ।
ಗಚ್ಛ ವೀರ ಮಹಾಬಾಹೋ ದಕ್ಷಯಜ್ಞಂ ವಿನಾಶಯ ॥ ೩೭ ॥
ಶಾಸನಂ ಶಿರಸಾ ಧೃತ್ವಾ ದೇವದೇವಸ್ಯ ಶೂಲಿನಃ ।
ಕಾಳಿಕಾಽಲಿಯುತೋ ವೀರಃ ಸರ್ವಭೂತೈಃ ಸಮಾವೃತಃ ।
ವೀರಭದ್ರೋ ಮಹಾತೇಜಾ ಯಯೌ ದಕ್ಷಮುಖಂ ಪ್ರತಿ ॥ ೩೮ ॥
ತದಾನೀಮೇವ ಸಹಸಾ ದುರ್ನಿಮಿತ್ತಾನಿ ಚಾಭವನ್ ।
ರೂಕ್ಷೋ ವವೌ ತದಾ ವಾಯುಃ ಶರ್ಕರಾಭಿಃ ಸಮಾವೃತಃ ॥ ೩೯ ॥
ಅಸೃಗ್ವರ್ಷತಿ ದೇವಶ್ಚ ತಿಮಿರೇಣಾವೃತಾ ದಿಶಃ ।
ಉಲ್ಕಾಪಾತಾಶ್ಚ ಬಹವಃ ಪೇತುರುರ್ವ್ಯಾಂ ಸಹಸ್ರಶಃ ॥ ೪೦ ॥
ಏವಂ ವಿಧಾನ್ಯರಿಷ್ಟಾನಿ ದದೃಶುರ್ವಿಬುಧಾದಯಃ ।
ದಕ್ಷೋಽಪಿ ಭಯಮಾಪನ್ನೋ ವಿಷ್ಣುಂ ಶರಣಮಾಯಯೌ ॥ ೪೧ ॥
ರಕ್ಷರಕ್ಷ ಮಹಾವಿಷ್ಣೋ ತ್ವಂ ಹಿ ನಃ ಪರಮೋ ಗುರುಃ ।
ಯಜ್ಞೋಽಸಿ ತ್ವಂ ಸುರಶ್ರೇಷ್ಠ ಭಯಾನ್ಮಾಂ ಪರಿಮೋಚಯ ॥ ೪೨ ॥
ದಕ್ಷೇಣ ಪ್ರಾರ್ಥ್ಯಮಾನೋ ಹಿ ಜಗಾದ ಮಧುಸೂದನಃ ।
ಮಯಾ ರಕ್ಷಾ ವಿಧಾತವ್ಯಾ ಭವತೋ ನಾತ್ರ ಸಂಶಯಃ ॥ ೪೩ ॥

---

ಹೊರಡು ; ಮಹಾಬಾಹುವಾದ ನೀನು ಆ ದಕ್ಷನ ಯಾಗವನ್ನು ಧ್ವಂಸಮಾಡು ; ಹೊರಡು" ಎಂದು ಆಣತಿಯಿತ್ತನು. ಆಗಲಾ ವೀರಭದ್ರನು ದೇವದೇವನಾದ ಆ ಮಹಾದೇವನ ಅಪ್ಪಣೆಯನ್ನು ಶಿರಸಾವಹಿಸಿ ಸಹೋದರಿಯಾದ ಕಾಳಿಯೊಡನೆಯೂ, ಸಮಸ್ತ ಭೂತಗಣಗಳೊಡನೆಯೂ ದಕ್ಷಬ್ರಹ್ಮನ ಯಾಗಶಾಲೆಯ ಕಡೆಗೆಹೊರಟನು. ಆ ಸಮಯದಲ್ಲಿ ಎತ್ತೆತ್ತಲೂ ಅನೇಕ ಅಪಶಕುನಗಳಾದುವು. ಗಾಳಿಯು ತುಂಬುಧೂಳಿನಿಂದ ಬಹು ಬಿರುಸಾಗಿ ಬೀಸತೊಡಗಿತು. ಪರ್ಜನ್ಯ ದೇವನು ನೆತ್ತರ ಮಳೆಗರೆದನು. ದಿಕ್ಕುಗಳೆಲ್ಲ ಕತ್ತಲೆ ಕವಿಯಿತು. ಗಗನದಿಂದ ಸಾವಿರಾರು ಬಾಲಚಿಕ್ಕೆಗಳುದುರಿದವು.

೪೧–೪೬. ಈ ಬಗೆಯ ಅನಿಷ್ಟವಾದ ಅಪಶಕುನಗಳನ್ನು ಕಂಡು ದಕ್ಷನ ಯಾಗಮಂಟಪದಲ್ಲಿದ್ದ ದೇವತೆಗಳೂ ಇತರರೂ ಎಲ್ಲರೂ ಭಯದಿಂದ ತತ್ತಳಿಸಿದರು. ದಕ್ಷಬ್ರಹ್ಮನಿಗೂ ಭಯವಾಯಿತು. ಅವನು ಕೂಡಲೇ ವಿಷ್ಣುವನ್ನು ಶರಣುಬೇಡಿ, "ಎಲೈ ಮಹಾವಿಷ್ಣುವೇ ! ಕಾಪಾಡು, ಕಾಪಾಡು !! ನೀನೇ ನನ್ನ ಪರಮ ಗುರುವು. ಓ ಸುರಶ್ರೇಷ್ಠ ! ಯಜ್ಞಸ್ವರೂಪಿಯೇ ನೀನಾಗಿರುವೆ ! ಇಂತಹ ಮಹಾತ್ಮನಾದ ನೀನು ಈಗ ನನ್ನನ್ನು ಈ ಭಯದಿಂದ ಪಾರುಮಾಡಬೇಕು" ಎಂದು ಹೇಳಿದನು. ಆಗಲಾ ಮಧುಸೂದನನು ಅವನನ್ನು ಕುರಿತು, "ಅಯ್ಯಾ ದಕ್ಷನೇ ! ನಾನು ನಿನ್ನನ್ನು ಕಾಪಾಡಬೇಕೆಂಬುದರಲ್ಲಿ ಸಂದೇಹ

ಅವಜ್ಞಾಹಿ ಕೃತಾ ದಕ್ಷ ತ್ವಯಾ ಧರ್ಮಮಜಾನತಾ ।
ಈಶ್ವರಾವಜ್ಞಯಾ ಸರ್ವಂ ವಿಫಲಂ ಚ ಭವಿಷ್ಯತಿ ॥ ೪೪ ॥
ಅಪೂಜ್ಯಾ ಯತ್ರ ಪೂಜ್ಯಂತೇ ಪೂಜನೀಯೋ ನ ಪೂಜ್ಯತೇ ।
ತ್ರೀಣಿ ತತ್ರ ಪ್ರವರ್ತಂತೇ ದುರ್ಭಿಕ್ಷಂ ಮರಣಂ ಭಯಂ ॥ ೪೫ ॥
ತಸ್ಮಾತ್ಸರ್ವಪ್ರಯತ್ನೇನ ಮಾನನೀಯೋ ವೃಷಧ್ವಜಃ ।
ಅಮಾನಿತಾನ್ಮಹೇಶಸ್ತ್ವಾಂ ಮಹದ್ಭಯಮುಪಸ್ಥಿತಂ ॥ ೪೬ ॥
ಅಧುನೈವ ವಯಂ ಸರ್ವೇ ಪ್ರಭವೋ ನ ಭವಾಮಹೇ ।
ಭವತೋ ದುರ್ನಯೇ ನೈವ ನಾತ್ರ ಕಾರ್ಯಾ ವಿಚಾರಣಾ ॥ ೪೭ ॥
ವಿಷ್ಣೋಸ್ತದ್ವಚನಂ ಶೃತ್ವಾ ದಕ್ಷಶ್ಚಿಂತಾಪರೋಽಭವತ್ ।
ವಿವರ್ಣವದನೋ ಭೂತ್ವಾ ತೂಷ್ಣೀಮಾಸೀದ್ಭುವಿಸ್ಥಿತಃ ॥ ೪೮ ॥
ವೀರಭದ್ರೋ ಮಹಾಬಾಹೂ ರುದ್ರೇಣೈವ ಪ್ರಚೋದಿತಃ ।
ಕಾಳೀ ಕಾತ್ಯಾಯನೀಶಾನಾ ಚಾಮುಂಡಾ ಮುಂಡಮರ್ದಿನೀ ॥ ೪೯ ॥
ಭದ್ರಕಾಳೀ ತಥಾ ಭದ್ರಾ ತ್ವರಿತಾ ವೈಷ್ಣವೀ ತಥಾ ।
ನವದುರ್ಗಾದಿಸಹಿತೋ ಭೂತಾನಾಂ ಚ ಗಣೋ ಮಹಾನ್ ॥ ೫೦ ॥

---

ವಿಲ್ಲ. ಆದರೆ ಧರ್ಮಸ್ವರೂಪವನ್ನರಿಯದೆ ನೀನು ಪರಮೇಶ್ವರನನ್ನು ತಿರಸ್ಕರಿಸಿ ಮಹಾಪರಾಧ ಮಾಡಿರುವೆ. ಅಯ್ಯಾ ಬ್ರಾಹ್ಮಣಾ! ಆತನ ಆಜ್ಞೆಯಿಂದಲೇ ಎಲ್ಲ ಕಾರ್ಯಗಳೂ ವಿಫಲವಾಗುತ್ತವೆ. ಎಲ್ಲಿಯಾದರೂ ಸರಿಯೇ, ಪೂಜೆಗೆ ಯೋಗ್ಯರಲ್ಲದವರಿಗೆ ಪೂಜೆಯು ನಡೆದರೆ ಅಲ್ಲಿ ದುರ್ಭಿಕ್ಷ, ಮರಣ ಮತ್ತು ಭಯ ಎಂಬ ಈ ಮೂರೂ ಏಕಕಾಲದಲ್ಲಿಯೇ ಕಾಣಿಸಿಕೊಳ್ಳುತ್ತವೆ. ಆದುದರಿಂದ ಪ್ರಕೃತದಲ್ಲಿ ನೀನು ಪರಮಪೂಜ್ಯನಾದ ಆ ವೃಷಭವಾಹನನನ್ನು ಪ್ರಯತ್ನ ಪೂರ್ವಕವಾಗಿ ಇಲ್ಲಿಗೆ ಕರೆತಂದು ಆತನನ್ನು ಪೂಜಿಸಿ ಗೌರವಿಸತಕ್ಕುದು. ನೀನು ಆ ಮಹೇಶ್ವರನನ್ನು ಆಹ್ವಾನಿಸಿ ಗೌರವಿಸದಿದ್ದುದರಿಂದಲೇ ನಿನಗೀಗ ಇಂತಹ ಭಯವುಂಟಾಗಿರುವುದು!

೪೭–೫೩. ಎಲೆವೊ ದಕ್ಷನೇ! ದುಷ್ಟನಾದ ನೀನು ಅಧರ್ಮಕಾರ್ಯ ವನ್ನು ಮಾಡಿರುವೆಯಾದುದರಿಂದಲೇ ನಾವೀಗ ನಿನ್ನನ್ನು ಕಾಪಾಡಲು ಅಸಮರ್ಥ ರಾಗಿರುವುದು! ಇದರಲ್ಲಿ ಸಂಶಯವೇ ಇಲ್ಲವೆಂದು ತಿಳಿ" ಎಂದು ಹೇಳಿದನು. ಎಲೈ ಮುನಿಗಳಿರಾ! ಶ್ರೀಮನ್ಮಹಾವಿಷ್ಣುವು ಈರೀತಿ ಹೇಳಿದುದನ್ನು ಕೇಳಿ ಆ ದಕ್ಷಬ್ರಹ್ಮನು ಚಿಂತೆಗೊಳಗಾಗಿ ಮುಖಗೆಟ್ಟು ಏನುಮಾಡುವುದಕ್ಕೂ ತೋರದೆ ಸುಮ್ಮನೆ ನೆಲದಲ್ಲಿ ಕುಕ್ಕರಿಸಿದನು. ಅಷ್ಟರಲ್ಲಿಯೇ, ಇತ್ತ ರುದ್ರನು ಪ್ರೇರಿಸಿ ಕಳುಹಿಸಿದ್ದ ಮಹಾಬಾಹುವಾದ ವೀರಭದ್ರನು ಕಾಳಿ, ಕಾತ್ಯಾಯನಿ, ಈಶಾನಾ, ಚಾಮುಂಡಿ, ಮುಂಡಮರ್ದಿನಿ, ಭದ್ರಕಾಳಿ, ಭದ್ರಾ, ತ್ವರಿತಾ, ವೈಷ್ಣವೀ

ಶಾಕಿನೀ ಡಾಕಿನೀ ಚೈವ ಭೂತಪ್ರಮಥಗುಹ್ಯಕಾಃ ।
ತಥೈವ ಯೋಗಿನೀಚಕ್ರಂ ಚತುಃಷಷ್ಟ್ಯಾ ಸಮನ್ವಿತಂ ॥ ೫೧ ॥
ನಿರ್ಜಗ್ಮುಃ ಸಹಸಾ ತತ್ರ ಯಜ್ಞವಾಟಂ ಮಹಾಪ್ರಭಂ ।
ವೀರಭದ್ರಸಮೇತಾ ಯೇ ಗಣಾಃ ಶತಸಹಸ್ರಶಃ ॥ ೫೨ ॥
ಪಾರ್ಷದಾಃ ಶಂಕರಸ್ಯೈತೇ ಸರ್ವೇ ರುದ್ರಸ್ವರೂಪಿಣಃ ।
ಪಂಚವಕ್ತ್ರಾ ನೀಲಕಂಠಾಃ ಸರ್ವೇತೇ ಶಸ್ತ್ರಪಾಣಯಃ ॥ ೫೩ ॥
ಛತ್ರಚಾಮರಸಂವೀತಾಃ ಸರ್ವೇ ಹರಪರಾಕ್ರಮಾಃ ।
ದಶಬಾಹವಸ್ತ್ರಿನೇತ್ರಾ ಜಟಿಲಾರುದ್ರಭೂಷಣಾಃ ॥ ೫೪ ॥
ಅರ್ಧಚಂದ್ರಧರಾಃ ಸರ್ವೇ ಸರ್ವೇ ಚೈವ ಮಹೌಜಸಃ ।
ಸರ್ವೇ ತೇ ವೃಷಭಾರೂಢಾಃ ಸರ್ವೇ ತೇ ವೇಷಭೂಷಣಾಃ ॥ ೫೫ ॥
ಸಹಸ್ರಬಾಹುರ್ಭುಜಗಾಧಿಪೈರ್ವೃತ ।
ಸ್ತ್ರಿಲೋಚನೋ ಭೀಮಬಲೋ ಭಯಾವಹಃ ॥
ಏಭಿಃ ಸಮೇತಶ್ಚ ತದಾ ಮಹಾತ್ಮಾ ।
ಸ ವೀರಭದ್ರೋಽಭಿಜಗಾಮ ಯಜ್ಞಂ ॥ ೫೬ ॥

---

ಮುಂತಾದ ನವದುರ್ಗೆಯರಿಂದಲೂ ಶಕ್ತಿದೇವಿಯರಿಂದಲೂ, ಒಡಗೂಡಿದವನಾಗಿ ಆ ದಕ್ಷನ ಯಜ್ಞಶಾಲೆಗೆ ಹೊರಟುಬಂದನು. ಭೂತಗಳ ದೊಡ್ಡ ಗುಂಪೂ, ಶಾಕಿನಿ ಡಾಕಿನಿಯರೂ, ಭೂತ ಪ್ರಮಥ ಗುಹ್ಯಕರ ಸಮೂಹಗಳೂ, ಅಂತೆಯೇ ಅರುವತ್ತುನಾಲ್ಕು ಯೋಗಿನೀ ಚಕ್ರಗಳೂ, ನೂರಾರು ಸಾವಿರಾರು ಮಂದಿ ಭಟರೂ ಆ ವೀರಭದ್ರನನ್ನು ಹಿಂಬಾಲಿಸಿ ಪ್ರಭಾವಯುಕ್ತವಾದ ಆ ಯಜ್ಞವಾಟಿಕೆಗೆ ಹೊರಟರು. ಹೀಗೆ ದಕ್ಷನ ಯಾಗವನ್ನು ನಾಶಗೊಳಿಸಲು ಹೊರಟ ಇವರೆಲ್ಲರೂ ಶ್ರೀಶಂಕರನ ಪರಿವಾರದವರೇ! ಎಲ್ಲರೂ ರುದ್ರನ ಸ್ವರೂಪವನ್ನೊಳಗೊಂಡಿದ್ದವರೇ! ಪಂಚಮುಖಗಳುಳ್ಳವರೂ, ನೀಲಕಂಠರೂ ಆಗಿ ಬೆಳಗುತ್ತಿದ್ದ ಅವರೆಲ್ಲರೂ ಶಸ್ತ್ರಪಾಣಿಗಳಾಗಿಯೇ ಇದ್ದರು.

೫೪–೬೦. ಅವರಲ್ಲಿ ಪ್ರತಿಯೊಬ್ಬರೂ ಛತ್ರಚಾಮರಗಳುಳ್ಳವರು; ಎಲ್ಲರೂ ಪ್ರಭುವಾದ ಪರಮೇಶ್ವರನಂತೆಯೇ ಮಹಾಪರಾಕ್ರಮಶಾಲಿಗಳು; ಹತ್ತುತೋಳುಗಳೂ, ಮೂರು ಕಣ್ಣುಗಳೂ ಉಳ್ಳವರು; ಅಂತೆಯೇ ಸಮಸ್ತ ಭೂಷಣ ಭೂಷಿತರೂ, ಅರ್ಧಚಂದ್ರಾಲಂಕೃತಶೇಖರರೂ ಆಗಿ ಎಲ್ಲರೂ ವೃಷಭಾರೂಢರಾಗಿದ್ದರು. ಮಹಾ ಭಯಂಕರ ಪರಾಕ್ರಮಿಯೂ, ಸಮಸ್ತ ಭೂತಗಳಿಗೂ ಭಯವನ್ನುಂಟುಮಾಡುವವನೂ, ಸಾವಿರ ತೋಳುಗಳಿಂದೊಪ್ಪಿ, ಸರ್ಪಭೂಷಣನಾಗಿ, ತ್ರಿಣೇತ್ರನೂ ಮಹಾತ್ಮನೂ ಆಗಿರುವ ಆ ವೀರಭದ್ರನಾದರೋ ಈ ಎಲ್ಲ ಸೇನೆಯನ್ನೂ ಹಿಂದಿಟ್ಟುಕೊಂಡು ಆ ದಕ್ಷನ ಯಜ್ಞವಾಟಿಗೆ ಹೊರಟನು.

ಯುಗ್ಯಾನಾಂ ಚ ಸಹಸ್ರೇಣ ದ್ವಿಪ್ರಮಾಣೇನ ಸ್ಯಂದನಂ ।
ಸಿಂಹಾನಾಂ ಪ್ರಯುತೇನೈವ ವಹ್ಯಮಾನಂ ಚ ತಸ್ಯ ತತ್ ॥ ೫೭ ॥
ತಥೈವ ದಂಶಿತಾಃ ಸಿಂಹಾ ಬಹವಃ ಪಾರ್ಶ್ವರಕ್ಷಕಾಃ ।
ಶಾರ್ದೂಲಾ ಮಕರಾ ಮತ್ಸ್ಯಾ ಗಜಾಶ್ಚೈವ ಸಹಸ್ರಶಃ ।
ಛತ್ರಾಣಿ ವಿವಿಧಾನ್ಯೇವ ಚಾಮರಾಣಿ ತಥೈವಚ ॥ ೫೮ ॥
ಮೂರ್ಧನಿ ಧ್ರಿಯಮಾಣಾನಿ ಸರ್ವತೋಽಗ್ರಾಣಿ ಸರ್ವಶಃ ।
ತತೋ ಭೇರೀಮಹಾನಾದಾಃ ಶಂಖಾಶ್ಚ ವಿವಿಧಸ್ವನಾಃ ।
ಪಟಹಾ ಗೋಮುಖಾಶ್ಚೈವ ಶೃಂಗಾಣಿ ವಿವಿಧಾನಿಚ ॥ ೫೯ ॥
ತತೋಽವಾದ್ಯಂತ ತಾನ್ಯೇವ ಘನಾನಿ ಸುಕರಾಣಿ ಚ ।
ಕಲಗಾನಪರಾಸ್ಸರ್ವೇ ಸರ್ವೇ ಮೃದಂಗವಾದಿನಃ ॥ ೬೦ ॥
ಅನೇಕ ಲಾಸ್ಯ ಸಂಯುಕ್ತಾ ವೀರಭದ್ರಾಗ್ರತೋಽಭವನ್ ।
ರಣವಾದಿತ್ರನಿರ್ಘೋಷೈರ್ಜಗರ್ಜುರಮಿತೌಜಸಃ ॥ ೬೧ ॥
ತೇನನಾದೇನ ಮಹತಾ ನಾದಿತಂ ಭುವನತ್ರಯಂ ।
ಏವಂ ಸರ್ವೇ ಸಮಾಯಾತಾ ಗಣಾ ರುದ್ರಪ್ರಣೋದಿತಾಃ ॥ ೬೨ ॥

---

ಆತನ ಮಹಾರಥವು ಎರಡುಸಾವಿರ ಕುದುರೆಗಳಿಂದಲೂ, ಒಂದು ಕೋಟಿ ಸಿಂಹ
ಗಳಿಂದಲೂ ಎಳೆಯಲ್ಪಡುತ್ತಿದ್ದಿತು. ಅಂತೆಯೇ ಆ ರಥದ ಇಕ್ಕೆಲಗಳಲ್ಲಿಯೂ
ಕಾಪಿಗಾಗಿ ಮುಂದುವರಿಯುತ್ತಿದ್ದ ಇತರ ಸಿಂಹಗಳೂ ಬಹಳ ಭಯಂಕರವಾಗಿ
ದ್ದುವು. ಆತನ ಸೇನೆಯಲ್ಲಿ ಸಾವಿರಾರು ಹುಲಿಗಳೂ, ಮೊಸಳೆಗಳೂ, ಆನೆಗಳೂ
ಮುನ್ನುಗ್ಗಿ ಹೋಗುತ್ತಿದ್ದುವು. ಎಲ್ಲ ರೀತಿಯಲ್ಲಿಯೂ ಸರ್ವೋತ್ತಮಗಳಾದ
ಬಗೆಬಗೆಯ ಛತ್ರಚಾಮರಗಳು ಆ ಸೇನೆಯಲ್ಲಿ ಎತ್ತೆತ್ತಲೂ ಶೋಭಿಸುತ್ತಿದ್ದುವು.
ಆ ಸೇನೆಯು ಪ್ರಯಾಣಮಾಡಿದ ಸಮಯದಲ್ಲಿ, ಮಹಾಧ್ವನಿಗಳುಳ್ಳ ಭೇರಿ
ಗಳೂ, ಬಗೆಬಗೆಯ ನಾದಗಳನ್ನು ಕೊಡುವ ಶಂಖಗಳೂ, ಹಲವುಬಗೆಯ
ಪಟಹ, ಗೋಮುಖ, ಕೊಂಬು, ಕಹಳೆ ಮುಂತಾದ ವೀರವಾದ್ಯಗಳೂ ಗಟ್ಟಿ
ಯಾಗಿಯೂ, ಮನೋಹರವಾಗಿಯೂ ನುಡಿಸಲಾದುವು. ಅದೇ ಸಮಯ
ದಲ್ಲಿಯೇ ಕೆಲಮಂದಿ ಶಿವಕಿಂಕರರು ಇಂಪಾಗಿ ಗಾನಮಾಡುತ್ತಲೂ, ಮೃದಂಗ
ಗಳನ್ನು ನುಡಿಸುತ್ತಲೂ, ಹಲವುಬಗೆಯ ಕುಣಿತಗಳನ್ನು ಕುಣಿಯುತ್ತಲೂ
ತಮ್ಮೊಡೆಯನಾದ ಆ ವೀರಭದ್ರಸ್ವಾಮಿಯ ಮುಂದೆ ಹೊರಟರು.

೬೧-೬೨. ಆ ಮಹಾಸೇನೆಯ ವೀರಭಟರೆಲ್ಲರೂ ರಣಕಹಳೆಗಳೊಡನೆಯೇ
ಭಯಂಕರ ಸಿಂಹಧ್ವನಿಯನ್ನು ಮಾಡಿದರು. ಆ ವೀರನಾದದಿಂದ ಜಗತ್ತ್ರಯ
ವೆಲ್ಲವೂ ಪ್ರತಿಧ್ವನಿತವಾಯಿತು. ಈ ಪ್ರಕಾರವಾಗಿ ಶ್ರೀರುದ್ರನಿಂದ ಪ್ರೇರಿತ
ರಾಗಿ ವಿರೋಧಿಗಳೆಲ್ಲರನ್ನೂ ಸದೆಬಡಿವವರಾದ ಆ ಶಿವಕಿಂಕರರೆಲ್ಲರೂ ದಕ್ಷನ

ಯಜ್ಞವಾಟಂ ಚ ದಕ್ಷಸ್ಯ ವಿನಾಶಾರ್ಥಂ ಪ್ರಹಾರಿಣಃ ।
ರಜಸಾ ಚಾಽವೃತಂ ವ್ಯೋಮ ತಮಸಾ ಚ ವೃತಾ ದಿಶಃ ॥ ೬೩ ॥
ಸಪ್ತದ್ವೀಪವತೀ ಪೃಥ್ವೀ ಚಚಾಲ ಸಾದ್ರಿಕಾನನಾ ।
ತೇ ದೃಷ್ಟ್ವಾ ಮಹದಾಶ್ಚರ್ಯಂ ಲೋಕಕ್ಷಯಕರಂ ತದಾ ॥ ೬೪ ॥
ಉತ್ತಸ್ಥುರ್ಯಜ್ಞಗಪತ್ಸರ್ವೇ ದೇವದೈತ್ಯನಿಶಾಚರಾಃ ।
ತೇ ವೈದದೃಶುರಾಯಾಂತೀಂ ರುದ್ರಸೇನಾಂ ಭಯಾವಹಾಂ ॥ ೬೫ ॥
ಪೃಥ್ವೀಂ ಕೇಚಿತ್ಸಮಾಯಾತಾ ಗಗನೇ ಕೇಚಿದಾಗತಾಃ ।
ದಿಶಶ್ಚ ಪ್ರದಿಶಶ್ಚೈವ ಸಮಾವೃತ್ಯ ತಥಾಪರೇ ॥ ೬೬ ॥
ಅನಂತಾಹ್ಯಕ್ಷಯಾಃ ಸರ್ವೇ ಶೂರಾ ರುದ್ರಸಮಾ ಯುಧಿ ।
ಏವಂ ಭೂತಂ ಚ ತತ್ಸೈನ್ಯಂ ರುದ್ರೈಶ್ಚ ಪರಿವಾರಿತಂ ।
ದೃಷ್ಟ್ವೋಚುರ್ವಿಸ್ಮಿತಾಃ ಸರ್ವೇ ಯಾಮೋಽದ್ಯ ಶಸ್ತ್ರಪಾಣಯಃ ॥ ೬೭ ॥
ಇಂದ್ರೋಹಿ ಗಜಮಾರೂಢೋ ಮೃಗಾರೂಢಃ ಸದಾಗತಿಃ ।
ಯಮೋ ಮಹಿಷಮಾರುಢೋ ಯಮದಂಡಸಮನ್ವಿತಃ ॥ ೬೮ ॥
ಕುಬೇರಃ ಪುಷ್ಪಕಾರೂಢಃ ಪಾಶೀ ಮಕರಮೇವಚ ।
ಅಗ್ನಿರ್ಬಸ್ತಸಮಾರೂಢೋ ನಿರ್ಋತಿಃ ಪ್ರೇತಮೇವ ಚ ॥ ೬೯ ॥

---

ಯಜ್ಞವನ್ನು ನಾಶಗೊಳಿಸಲೋಸುಗ ಹೊರಟುಬರುತ್ತಿರಲು ಗಗನವೆಲ್ಲವೂ ಧೂಳಿನಿಂದ ತುಂಬಿಹೋಯಿತು. ದಿಕ್ಕುಗಳೆಲ್ಲ ಕತ್ತಲೆ ಕವಿದುವಾದುವು. ಸಪ್ತದ್ವೀಪಗಳಿಂದಲೂ, ಶೈಲಾರಣ್ಯಗಳಿಂದಲೂ ಕೂಡಿದ ಈ ಭೂಮಂಡಲವೇ ನಡುಗಿಹೋಯಿತು. ಲೋಕವನ್ನೇ ನಾಶಗೊಳಿಸುವ ಆ ರುದ್ರಸೇನೆಯನ್ನು ಕಂಡು ದಕ್ಷನ ಯಾಗಶಾಲೆಯಲ್ಲಿದ್ದ ದೇವತೆಗಳೂ, ದೈತ್ಯರೂ ಒಂದೇ ತಡವೆಯೇ ಗಾಬರಿಬಿದ್ದು ಒಟ್ಟಾಗಿ ದಿಗ್ಗನೆದ್ದುನಿಂತರು. ರುದ್ರಸೇನೆಯು ಯಜ್ಞವಾಟಯ ಕಡೆಗೇ ಬರುತ್ತಿರುವುದನ್ನು ಕಂಡು ಅಲ್ಲಿದ್ದ ಕೆಲವರು ಒಡನೆಯೇ ಭೂಮಿಗಿಳಿದು ಬಂದರು; ಕೆಲವರು ಭಯಗೊಂಡು ಗಗನಕ್ಕೆ ಹಾರಿದರು. ಇನ್ನು ಕೆಲವರು ದಿಕ್ಕುದಿಕ್ಕುಗಳಿಗೆಲ್ಲ ಪಲಾಯನವಾದರು.

೬೭–೭೦. ಇತ್ತಲಾದರೋ, ಸಮರಾಂಗಣದಲ್ಲಿ ಸಾಕ್ಷಾತ್ ರುದ್ರನಿಗೆ ಸಮಾನವಾದ ಪರಾಕ್ರಮವುಳ್ಳುದೂ, ಅಪಾರವೂ, ಅಕ್ಷಯವೂ, ರುದ್ರಗಣ ಪರಿವಾರಿತವೂ ಆದ ಆ ಶಿವಕಿಂಕರರ ಮಹಾಸೇನೆಯು ಮುನ್ನುಗ್ಗಿ ಬರುತ್ತಿರಲು ಯಜ್ಞಮಂಟಪದಲ್ಲಿದ್ದ ದೇವತೆಗಳೆಲ್ಲರೂ ಆಶ್ಚರ್ಯಚಕಿತರಾಗಿ, "ನಾವೆಲ್ಲರೂ ನಮ್ಮನಮ್ಮ ಶಸ್ತ್ರಗಳೊಡನೆ ನಮ್ಮನಮ್ಮ ಲೋಕಗಳಿಗೆ ಹೊರಡೋಣ" ಎಂದು ಮಾತನಾಡಿಕೊಂಡರು. ಆಗ ಇಂದ್ರನು ಐರಾವತವನ್ನೇರಿದನು. ವಾಯುವು ಮೃಗವಾಹನನಾದನು. ಯಮನು ಯಮದಂಡಸಹಿತನಾಗಿ ಕೋಣವನ್ನೇರಿ

ತಥಾನ್ಯೇ ಸುರಸಂಘಾಶ್ಚ ಯಕ್ಷಚಾರಣಗುಹ್ಯಕಾಃ ।
ಆರುಹ್ಯ ವಾಹನಾನ್ಯೇವ ಸ್ವಾನಿ ಸ್ವಾನಿ ಪ್ರತಾಪಿನಃ ॥ ೭೦ ॥
ತೇಷಾಮುದ್ಯೋಗಮಾಲೋಕ್ಯ ದಕ್ಷಶ್ಚಾಶ್ರುಮುಖಸ್ತತಃ ।
ದಂಡವತ್ಪತಿತೋ ಭೂಮೌ ಸರ್ವಾನೇವಾಭ್ಯಭಾಷತ ॥ ೭೧ ॥
ಯುಷ್ಮದ್ಬಲೇನೈವ ಮಯಾ ಯಜ್ಞಃ ಪ್ರಾರಂಭಿತೋ ಮಹಾನ್ ।
ಸತ್ಕರ್ಮಸಿದ್ಧಯೇ ಯೂಯಂ ಪ್ರಮಾಣಂ ಸುಮಹಾಪ್ರಭಾಃ ॥ ೭೨ ॥
ವಿಷ್ಣೋ ತ್ವಂ ಕರ್ಮಣಃ ಸಾಕ್ಷಾತ್ ಯಜ್ಞಾನಾಂ ಪರಿಪಾಲಕಃ ।
ಧರ್ಮಸ್ಯ ವೇದಗರ್ಭಸ್ಯ ಬ್ರಹ್ಮಣ್ಯಸ್ತ್ವಂ ಚ ಮಾಧವ ॥ ೭೩ ॥
ತಸ್ಮಾದ್ರಕ್ಷಾ ವಿಧಾತವ್ಯಾ ಯಜ್ಞಸ್ಯಾಸ್ಯ ಮಹಾಪ್ರಭೋ ॥ ೭೪ ॥
ದಕ್ಷಸ್ಯ ವಚನಂ ಶ್ರುತ್ವಾ ಉವಾಚ ಮಧುಸೂದನಃ ।
ಮಯಾ ರಕ್ಷಾ ವಿಧಾತವ್ಯಾ ಧರ್ಮಸ್ಯ ಪರಿಪಾಲನೇ ।
ತತ್ಸತ್ಯಂತು ತ್ವಯೋಕ್ತಂ ಹಿ ಕಿಂತು ತಸ್ಯ ವ್ಯತಿಕ್ರಮಃ ॥ ೭೫ ॥
ಯಾತಾಸ್ತ್ವದ್ಯೈವ ಯಜ್ಞಸ್ಯ ಯತ್ತ್ವಯೋಕ್ತಂ ಸದಾಶಿವಂ ।
ನೈಮಿಷೇಽನಿಮಿಷಕ್ಷೇತ್ರೇ ತದಾ ಕಿಂ ನ ಸ್ಮೃತಂ ತ್ವಯಾ ॥ ೭೬ ॥

---

ದನು. ಕುಬೇರನು ಪುಷ್ಪಕವಿಮಾನವನ್ನೇರಿ ಕುಳಿತನು. ವರುಣದೇವನು ಮೊಸಳೆಯನ್ನೇರಿದನು. ಅಗ್ನಿದೇವನು ಆಡನ್ನೇರಿದನು. ಅಂತೆಯೇ ನಿರ್ಋತಿಯೂ ಪ್ರೇತವಾಹನನಾಗಿ ಹೊರಡಲನುವಾದನು. ಮಹಾ ಪರಾಕ್ರಮ ಶಾಲಿಗಳಾದ ಇತರ ದೇವಸಮೂಹದವರೂ, ಯಕ್ಷರೂ, ಚಾರಣರೂ, ಗುಹ್ಯಕರೂ ತಮ್ಮ ತಮ್ಮ ವಾಹನಗಳನ್ನೇರಿದವರಾಗಿ ಹೊರಡಲನುವಾದರು.

೭೧. ಇವರೆಲ್ಲರ ಈ ಪ್ರಯತ್ನವನ್ನು ಕಂಡೊಡನೆಯೇ ದಕ್ಷನು ಕಂಬನಿ ದುಂಬಿ ಕೋಲಿನಂತೆ ನೆಲದಲ್ಲಿ ಅಡ್ಡಬಿದ್ದು ಅವರೆಲ್ಲರನ್ನೂ ಕುರಿತು ಈ ರೀತಿ ಅರಿಕೆ ಮಾಡಿಕೊಂಡನು.

೭೨. "ಎಲೈ ದೇವತೆಗಳಿರಾ! ನಿಮ್ಮ ಬಲದಿಂದಲೇ ನಾನು ಈ ಮಹಾ ಯಜ್ಞವನ್ನು ಮೊದಲುಮಾಡಿದೆನು. ಮಹಾ ತೇಜಸ್ವಿಗಳಾದ ನೀವೇ ಅಲ್ಲವೆ ಸತ್ಕರ್ಮಗಳೆಲ್ಲವೂ ಸಿದ್ಧಿಸುವುದಕ್ಕೆ ಪ್ರಮಾಣಭೂತರಾದವರು!

೭೩–೭೪. ಎಲೈ ವಿಷ್ಣುವೇ! ನೀನು ಯಜ್ಞಗಳಿಗೆಲ್ಲ ಸಾಕ್ಷಾತ್ತಾಗಿ ಪರಿಪಾಲಕನಾದವನು. ಮಾಧವ! ಧರ್ಮಕ್ಕೂ, ವೇದಗರ್ಭಕ್ಕೂ ಬ್ರಹ್ಮಣ್ಯ ನಾದ ನೀನೇ ಪ್ರಭುವು. ಎಲೈ ಮಹಾಪ್ರಭುವೇ! ಆದುದರಿಂದ ಈ ಯಜ್ಞ ವನ್ನೀಗ ನೀನೇ ಕಾಪಾಡಬೇಕು."

೭೫–೭೬. ದಕ್ಷನ ಈ ಮಾತುಗಳನ್ನು ಕೇಳಿ ಮಧುಸೂದನನು ಅವನನ್ನು ಕುರಿತು, "ಅಯ್ಯಾ ದಕ್ಷನೇ! ಧರ್ಮರಕ್ಷಣೆಯ ವಿಷಯದಲ್ಲಿ ನಾನು ಬೇಕಾದ

**ಯೋಽಯಂ ರುದ್ರೋ ಮಹಾತೇಜಾ ಯಜ್ಞರೂಪಃ ಸದಾಶಿವಃ ।**
**ಯಜ್ಞಬಾಹ್ಯಃ ಕೃತೋ ಮೂಢ ತಚ್ಚ ದುರ್ಮಂತ್ರಿತಂ ತವ ॥ ೭೭ ॥**
**ರುದ್ರಕೋಪಾಚ್ಚ ಕೋಽಹ್ಯತ್ರ ಸಮರ್ಥೋ ರಕ್ಷಣೇ ತವ ।**
**ನಪಶ್ಯಾಮಿ ಚ ತಂ ವಿಪ್ರ ತ್ವಾಂ ವೈ ರಕ್ಷತಿ ದುರ್ಮತಿಂ ॥ ೭೮ ॥**
**ಕಿಂ ಕರ್ಮ ಕಿಮಕರ್ಮೇತಿ ತನ್ನಪಶ್ಯಾಮಿ ದುರ್ಮತೇ ।**
**ಸಮರ್ಥಂ ಕೇವಲಂ ಕರ್ಮ ನಭವಿಷ್ಯತಿ ಸರ್ವದಾ ॥ ೭೯ ॥**
**ಸೇಶ್ವರಂ ಕರ್ಮ ವಿದ್ಧ್ಯೇತತ್ಸಮರ್ಥತ್ವೇನ ಜಾಯತೇ ।**
**ನಹ್ಯನ್ಯಃ ಕರ್ಮಣೋ ದಾತಾ ಈಶ್ವರೇಣ ವಿನಾ ಭವೇತ್ ॥ ೮೦ ॥**
**ಈಶ್ವರಸ್ಯ ಚ ಯೇ ಭಕ್ತಾಃ ಶಾಂತಸ್ತದ್ಗತಮಾನಸಾಃ ।**
**ಕರ್ಮಣೋ ಹಿ ಫಲಂ ತೇಷಾಂ ಪ್ರಯಚ್ಛತಿ ಸದಾಶಿವಃ ॥ ೮೧ ॥**

---

ಸಹಾಯವನ್ನು ಮಾಡಬೇಕೆಂದು ನೀನು ಹೇಳಿದುದು ನಿಜವಾದ ಮಾತು. ಆದರೆ ಈಗ ಆ ಧರ್ಮವೇ ತಲೆಕೆಳಗಾಗಿದೆ. ಹಿಂದೆ ಅನಿಮಿಷ (ದೇವ) ಕ್ಷೇತ್ರ (ಭೂಮಿ) ವಾದ ನೈಮಿಷದಲ್ಲಿ ನೀನು ಸದಾಶಿವನನ್ನು ಕುರಿತು ಹೇಳಿದುದೆಲ್ಲವನ್ನೂ ಈಗ ನೀನೇ ಮರೆತುಹೋದೆಯಾ!"

೭೭. ಯಾವನು ಸದಾ ಮಂಗಳಕರನೂ, ಮಹಾ ತೇಜಸ್ವಿಯೂ, ಯಜ್ಞ ರೂಪನೂ ಆಗಿರುವನೋ ಆ ರುದ್ರನನ್ನೇ ನೀನು ಯಜ್ಞಬಾಹ್ಯನನ್ನಾಗಿ ಮಾಡಿದು ದೆಂತು? ನೀನು ಹೀಗೆ ಮಾಡಿದುದು ನಿನ್ನ ದುರಾಲೋಚನೆಯಿಂದಲೇ ಎಂದು ತಿಳಿ.

೭೮. ಎಲವೋ ದಕ್ಷನೇ! ರುದ್ರನ ಮುನಿಸಿಗೆ ತುತ್ತಾಗಿರುವ ನಿನ್ನನ್ನು ಕಾಪಾಡಲು ಯಾರುತಾನೇ ಸಮರ್ಥರಾದಾರು? ಅಯ್ಯಾ ಬ್ರಾಹ್ಮಣಾ! ದುರ್ಬುದ್ಧಿಯಾದ ನಿನ್ನನ್ನು ಕಾಪಾಡುವವರಾರನ್ನೂ ನಾನು ಕಾಣೆನು.

೭೯. ಎಲೆವೋ ತಿಳಿಗೇಡಿಯೇ! ಮಾಡಬೇಕಾದ ಕಾರ್ಯವಾವುದು; ಮಾಡಬಾರದ ಕಾರ್ಯವಾವುದು ಎಂಬುದನ್ನು ನೀನು ತಿಳಿಯದೆಹೋದೆ! ಲೋಕದಲ್ಲಿ ಕರ್ಮವೊಂದೇ ಎಂದಿಗೂ ಕರ್ತೃವನ್ನು ಕಾಪಾಡಲು ಸಮರ್ಥ ವಾಗುವುದಿಲ್ಲವೆಂಬುದನ್ನರಿತುಕೊ.

೮೦. ಈಶ್ವರಸಹಿತವಾದ (ಈಶ್ವರಾರ್ಪಣಬುದ್ಧಿಯಿಂದೆಸಗಿದ) ಕರ್ಮವು ಫಲಪ್ರದವಾಗುತ್ತದೆಯೆಂದು ತಿಳಿ. ಸತ್ಕರ್ಮಾನುಷ್ಠಾನಕ್ಕೆ ಫಲವನ್ನು ಕೊಡುವಾತನು ಈಶ್ವರನಲ್ಲದೆ ಮತ್ತಾರೂ ಅಲ್ಲ.

೮೧. ಈಶ್ವರನ ಭಕ್ತರಾಗಿ, ಶಾಂತರಾಗಿ, ಆ ಪರಮೇಶ್ವರನಲ್ಲಿಯೇ ಮನಸ್ಸೆಲ್ಲವನ್ನೂ ನೆಲೆಗೊಳಿಸಿರುವವರು ಯಾರೋ, ಅವರು ಮಾಡಿದ ಕರ್ಮ ಕ್ಕೇನೇ ಆ ಸದಾಶಿವನು ಫಲವನ್ನು ದಯಪಾಲಿಸುತ್ತಾನೆ.

ಕೇವಲಂ ಕರ್ಮ ಚಾಶ್ರಿತ್ಯ ನಿರೀಶ್ವರಪರಾ ಜನಾಃ ।
ನಿರಯಂ ತೇ ಚ ಗಚ್ಛಂತಿ ಕೋಟಿಯಜ್ಞಶತೈರಪಿ ॥ ೮೨ ॥
ಪುನಃ ಕರ್ಮಮಯೈಃ ಪಾಶೈರ್ಬದ್ಧಾ ಜನ್ಮನಿ ಜನ್ಮನಿ ।
ನಿರಯೇಷು ಪ್ರಪಚ್ಯಂತೇ ಕೇವಲಂ ಕರ್ಮರೂಪಿಣಃ ॥ ೮೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ
ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ
"ವೀರಭದ್ರ ಪ್ರಾದುರ್ಭಾವವರ್ಣನಂ" ನಾಮ
ತೃತೀಯೋಽಧ್ಯಾಯಃ

---

೮೨. ಕೇವಲ ಕರ್ಮವೊಂದನ್ನೇ ನಂಬಿಕೊಂಡು, ಈಶ್ವರನನ್ನು ತೊರೆಯುವ ಜನರೆಲ್ಲರೂ ಒಂದು ಕೋಟಿ ಯಜ್ಞಗಳನ್ನು ಮಾಡಿದರೂ ನರಕಕ್ಕೇ ಹೋಗುತ್ತಾರೆ.

೮೩. ಇಷ್ಟೆಯಲ್ಲದೆ, ಅಂತಹ ಕೇವಲ ಕರ್ಮವನ್ನೇ ನಂಬಿ ಪ್ರವರ್ತಿಸುವ ಮಾನವರು ಮತ್ತೆ ಮತ್ತೆ ತಾವು ಮಾಡಿದ ಆ ಕರ್ಮಗಳೆಂಬ ಹಗ್ಗಗಳಿಂದಲೇ ಕಟ್ಟುಬಿದ್ದು ನರಕಗಳಲ್ಲಿ ಬೇಯುತ್ತಾರೆ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ
ಕೇದಾರಖಂಡದಲ್ಲಿ "ವೀರಭದ್ರಪ್ರಾದುರ್ಭಾವವರ್ಣನ"ವೆಂಬ
ಮೂರನೆಯ ಅಧ್ಯಾಯವು ಮುಗಿದುದು

ಶ್ರೀಃ

## ಚತುರ್ಥೋಽಧ್ಯಾಯಃ

### ವೀರಭದ್ರಾದೀನಾಂ ವಿಷ್ಣ್ವಾದಿಭಿಃ ಸಹ ಯುದ್ಧವರ್ಣನಂ

**ಲೋಮಶ ಉವಾಚ :—**

**ವಿಷ್ಣುನೋಕ್ತಂ ವಚಃ ಶ್ರುತ್ವಾ ದಕ್ಷೋ ವಚನಮಬ್ರವೀತ್ ।**
**ವೇದಾನಾಮಪ್ರಮಾಣಂ ಚ ಕೃತಂ ತೇ ಮಧುಸೂದನ ॥ ೧ ॥**
**ವೈದಿಕಂ ಕರ್ಮ ಚೋತ್ಸೃಜ್ಯ ಕಥಂ ಸೇಶ್ವರತಾಂ ವ್ರಜೇತ್ ।**
**ತದುಚ್ಯತಾಂ ಮಹಾವಿಷ್ಣೋ ಯೇನ ಧರ್ಮಃ ಪ್ರತಿಷ್ಠಿತಃ ॥ ೨ ॥**
**ದಕ್ಷೇಣೋಕ್ತೋ ಮಹಾವಿಷ್ಣುರುವಾಚ ಪರಿಸಾಂತ್ವಯನ್ ।**
**ತ್ರೈಗುಣ್ಯವಿಷಯಾ ವೇದಾಃ ಸಂಭವಂತಿ ನ ಚಾನ್ಯಥಾ ॥ ೩ ॥**
**ವೇದೋದಿತಾನಿ ಕರ್ಮಾಣಿ ಈಶ್ವರೇಣ ವಿನಾ ಕಥಂ ।**
**ಸಫಲಾನಿ ಭವಿಷ್ಯಂತಿ ವಿಫಲಾನ್ಯೇವ ತಾನಿಚ । ॥ ೪ ॥**
**ತಸ್ಮಾತ್ಸರ್ವಪ್ರಯತ್ನೇನ ಈಶ್ವರಂ ಶರಣಂ ವ್ರಜ ।**
**ಏವಂ ಬ್ರುವತಿ ಗೋವಿಂದ ಆಗತಃ ಸೈನ್ಯಸಾಗರಃ ।**
**ವೀರಭದ್ರೇಣ ಸದೃಶೋ ದದೃಶುಸ್ತಂ ತದಾ ಸುರಾಃ ॥ ೫ ॥**

---

### ಕನ್ನಡದ ಅನುವಾದ

#### ವೀರಭದ್ರಾದಿಗಳಿಗೂ, ವಿಷ್ಣು ಮೊದಲಾದ ದೇವತೆಗಳಿಗೂ ನಡೆದ ಯುದ್ಧದ ವರ್ಣನೆ

೧–೨. ಲೋಮಶನು ಹೇಳುತ್ತಾನೆ:—ಶ್ರೀಮನ್ಮಹಾವಿಷ್ಣುವು ನುಡಿದ ನುಡಿಯನ್ನು ಕೇಳಿ ದಕ್ಷನು, "ಎಲೈ ವಿಷ್ಣುವೇ! ಹೀಗೆ ಮಾಡಿದರೆ ವೇದಗಳಿಗೆಲ್ಲ ಅಪ್ರಾಮಾಣ್ಯವನ್ನು ಹೇಳಿದಂತಾಗುವುದಲ್ಲವೆ? ವೇದೋಕ್ತವಾದ ಕರ್ಮವನ್ನು ತೊರೆದು ಕರ್ತನಾದವನು ಈಶ್ವರತ್ವವನ್ನು ಹೊಂದುವುದೆಂತು? ಆದುದರಿಂದ ಧರ್ಮವು ಯಾವುದರಿಂದ ಪ್ರತಿಷ್ಠಿತವಾಗಿರುವುದೆಂಬುದನ್ನು ತಿಳಿಸು" ಎಂದು ಕೇಳಿದನು.

೩–೪. ಹೀಗೆಂದ ಆ ದಕ್ಷನನ್ನು ಸಮಾಧಾನಪಡಿಸುತ್ತ ಶ್ರೀಮನ್ಮಹಾವಿಷ್ಣುವು, "ಅಯ್ಯಾ ದಕ್ಷನೇ! ವೇದಗಳೆಲ್ಲವೂ ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಗಳಿಂದ ಕೂಡಿದವುಗಳಾಗಿಯೇ ಹುಟ್ಟಿರುತ್ತವೆ. ವೇದೋಕ್ತಗಳಾದ ಕರ್ಮಗಳೆಲ್ಲವೂ ಗುಣಾತೀತನಾದ ಈಶ್ವರನನ್ನುಳಿದು ಹೇಗೆತಾನೆ ಸಫಲಗಳಾಗುತ್ತವೆ. ಈಶ್ವರರಹಿತವಾದ ಕರ್ಮಗಳೆಲ್ಲವೂ ವಿಫಲಗಳೇ ಆಗುತ್ತವೆ.

೫. ಆದುದರಿಂದ ಎಲ್ಲ ಬಗೆಯ ಪ್ರಯತ್ನಗಳನ್ನೂ ಮಾಡಿ ಈಶ್ವರನನ್ನೇ ಶರಣುಹೋಗು." ಎಲೈ ಶೌನಕಾದಿಗಳಿರಾ! ಗೋವಿಂದನು ಈರೀತಿ ಹೇಳುತ್ತಿ

ಇಂದ್ರೋಽಪಿ ಪ್ರಹಸನ್ವಿಷ್ಣುಮಾತ್ಮವಾದರತಂ ತದಾ ।
ವಜ್ರಪಾಣಿಃ ಸುರೈಃ ಸಾರ್ಧಂ ಯೋದ್ಧುಕಾಮೋಽಭವತ್ತದಾ ॥ ೬ ॥
ಭೃಗುಣಾಚಾರಿತಃ ಶೀಘ್ರಂ ಉಚ್ಚಾಟನಪರೇಣ ಹಿ ।
ತದಾ ಗಣಾಃ ಸುರೈಃ ಸಾರ್ಧಂ ಯುಯುಧುಸ್ತೇ ಗಣಾನ್ವಿತಾಃ ॥ ೭ ॥
ಶರತೋಮರನಾರಾಚೈರ್ಜಘ್ನುಸ್ತೇ ಚ ಪರಸ್ಪರಂ ।
ನೇದುಃ ಶಂಖಾಶ್ಚ ಬಹುಶಸ್ತಸ್ಮಿನ್ ರಣಮಹೋತ್ಸವೇ ॥ ೮ ॥
ತಥಾ ದುಂದುಭಯೋ ನೇದುಃ ಪಟಹಾ ಡಿಂಡಿಮಾದಯಃ ।
ತೇನ ಶಬ್ದೇನ ಮಹತಾ ಶ್ಲಾಘ್ಯಮಾನಾಸ್ತದಾ ಸುರಾಃ ।
ಲೋಕಪಾಲೈಶ್ಚ ಸಹಿತಾ ಜಘ್ನುಸ್ತಾನ್ ಶಿವಕಿಂಕರಾನ್ ॥ ೯ ॥
ಖಡ್ಗೈಶ್ಚಾಪಿ ಹತಾಃ ಕೇಚಿದ್ಗದಾಭಿಶ್ಚ ವಿಪ್ರೋಥಿತಾಃ ।
ದೇವೈಃ ಪರಾಜಿತಾಃ ಸರ್ವೇ ಗಣಾಃ ಶತಸಹಸ್ರಶಃ ॥ ೧೦ ॥
ಇಂದ್ರಾದ್ಯೈರ್ಲೋಕಪಾಲೈಶ್ಚ ಗಣಾಸ್ತೇಚ ಪರಾಙ್ಮುಖಾಃ ।
ಕೃತಾಶ್ಚ ತಕ್ಷಣಾದೇವ ಭೃಗೋರ್ಮಂತ್ರಬಲೇನಹಿ ॥ ೧೧ ॥

---

ರುವಂತೆಯೇ ವೀರಭದ್ರಸಹಿತವಾದ ಆ ಸೈನ್ಯಸಾಗರವು ನುಗ್ಗಿಬಂದುದನ್ನು ಅಲ್ಲಿದ್ದ ದೇವತೆಗಳೆಲ್ಲರೂ ಕಂಡರು.

೬–೭. ಆಗ ವಜ್ರಪಾಣಿಯಾದ ಇಂದ್ರನೂ ಸಹ, ಆತ್ಮವಾದದಲ್ಲಿ ಆಸಕ್ತನಾಗಿರುವ ವಿಷ್ಣುವನ್ನು ನೋಡಿ ನಗುತ್ತ ಆ ಶಿವಗಣಗಳೊಡನೆ ಕಾಳಗ ಮಾಡಬಯಸಿದನು. ಶತ್ರುಗಳನ್ನು ಓಡಿಸುವುದರಲ್ಲಿ ತತ್ಪರನಾದ ಭೃಗುವು ಉಚ್ಚಾಟನ ಮಂತ್ರಗಳನ್ನುಚ್ಚರಿಸಲು ಮೊದಲುಮಾಡಿದನು. ಆಗ ಶಿವಗಣಗಳು, ಗುಂಪು ಗುಂಪುಗಳಾಗಿ ಹೊರಟು ಆ ದೇವತೆಗಳೊಡನೆ ಕಾಳಗ ಮಾಡಲಾರಂಭಿಸಿದರು.

೮–೯. ಇರ್ವರೂ ಶಕ್ತ್ಯಾಯುಧಗಳಿಂದಲೂ, ತೋಮರಗಳಿಂದಲೂ ಒಬ್ಬರನ್ನೊಬ್ಬರು ಹೊಡೆದರು. ಆ ರಣಮಹೋತ್ಸವದಲ್ಲಿ ಶಂಖಗಳು ಬಹಳವಾಗಿ ಮೊಳಗಿದವು. ದುಂದುಭಿಗಳೂ, ಪಟಹಗಳೂ, ಡಿಂಡಿಮಗಳೂ ಭೋರ್ಗರೆದವು. ಮಹತ್ತರವಾದ ಆ ಶಬ್ದದಿಂದಲೇ ಆ ದೇವತೆಗಳೆಲ್ಲರೂ ಪ್ರೋತ್ಸಾಹಿತರಾದ ಲೋಕಪಾಲಕರೊಡನೆ ಮುಂದೆ ನುಗ್ಗಿಹೋಗಿ ಆ ಶಿವಕಿಂಕರರೆಲ್ಲರನ್ನೂ ಬಹಳವಾಗಿ ಹೊಡೆದು ಕೆಡವಿದರು.

೧೦–೧೧. ಶಿವಕಿಂಕರರಲ್ಲಿ ಕೆಲವರು ಕತ್ತಿಯ ಪೆಟ್ಟುಗಳಿಂದ ಮಡಿದರು. ಕೆಲವರು ಗದೆಗಳ ಹೊಡೆತಕ್ಕೆ ಸಿಕ್ಕಿ ನಜ್ಜುಗುಜ್ಜಾದರು. ಹೀಗೆ ಭೃಗುವಿನ ಶತ್ರೂಚ್ಚಾಟನ ಮಂತ್ರದ ಬಲದಿಂದ ಸಾವಿರಾರುಮಂದಿ ಶಿವಗಣಗಳೆಲ್ಲರೂ ಇಂದ್ರನೇ ಮೊದಲಾದ ಲೋಕಪಾಲಕರಿಂದಲೂ, ಇತರ ದೇವತೆಗಳಿಂದಲೂ ಪರಾಜಿತರಾಗಿಹೋದರು.

ಉಚ್ಚಾಟನಂ ಕೃತಂ ತೇಷಾಂ ಭೃಗುಣಾ ಯಜ್ವಿನಾ ತದಾ ।
ಯಜನಾರ್ಥಂ ಚ ದೇವಾನಾಂ ತುಷ್ಟ್ಯರ್ಥಂ ದೀಕ್ಷಿತಸ್ಯಚ ॥ ೧೨ ॥
ತೇನೈವ ದೇವಾ ಜಯಿನೋ ಜಾತಾಸ್ತತ್ಕ್ಷಣಮೇವ ಹಿ ।
ಸ್ವಾನಾಂ ಪರಾಜಯಂ ದೃಷ್ಟ್ವಾ ವೀರಭದ್ರೋ ರುಷಾನ್ವಿತಃ ॥ ೧೩ ॥
ಭೂತಾನ್ಪ್ರೇತಾನ್ಪಿಶಾಚಾಂಶ್ಚ ಕೃತ್ವಾ ತಾನೇವ ಪೃಷ್ಠತಃ ।
ವೃಷಭಸ್ಥಾನ್ ಪುರಸ್ಕೃತ್ಯ ಸ್ವಯಂ ಚೈವ ಮಹಾಬಲಃ ।
ತೀಕ್ಷ್ಣಂ ತ್ರಿಶೂಲಮಾದಾಯ ಪಾತಯಾಮಾಸ ತಾನ್ರಣೇ ॥ ೧೪ ॥
ದೇವಾನ್ಯಕ್ಷಾನ್ ಪಿಶಾಚಾಂಶ್ಚ ಗುಹ್ಯಕಾನ್ ರಾಕ್ಷಸಾಂಸ್ತಥಾ ।
ಶೂಲಘಾತೈಶ್ಚ ತೇ ಸರ್ವೇ ಗಣಾ ದೇವಾನ್ ಪ್ರಜಘ್ನಿರೇ ॥ ೧೫ ॥
ಕೇಚಿದ್ದ್ವಿಧಾಕೃತಾಃ ಖಡ್ಗೈರ್ಮುದ್ಗರೈಶ್ಚಾಪಿ ಪೋಥಿತಾಃ ।
ಪರಶ್ವಧೈಃ ಖಂಡಶಶ್ಚ ಕೃತಾಃ ಕೇಚಿದ್ರಣಾಜಿರೇ ॥ ೧೬ ॥
ಶೂಲೈರ್ಭಿನ್ನಾಶ್ಚ ಶತಶಃ ಕೇಚಿಚ್ಚ ಶಕಲೀಕೃತಾಃ ।
ಏವಂ ಪರಾಜಿತಾಃ ಸರ್ವೇ ಪಲಾಯನ ಪರಾಯಣಾಃ ॥ ೧೭ ॥

---

೧೨. ಸೋಮಯಾಜಿಯಾದ ಭೃಗುಮಹರ್ಷಿಯು ದೇವತೆಗಳ ಸತ್ಕಾರ ಕ್ಕೋಸುಗವೂ, ಯಜ್ಞದೀಕ್ಷಿತನಾದ ದಕ್ಷನಿಗೆ ಸಂತೋಷವನ್ನುಂಟುಮಾಡ ಲೋಸುಗವೂ ಈರೀತಿ ಆ ಶಿವಕಿಂಕರರ ಉಚ್ಚಾಟನೆಯನ್ನು ಮಾಡಿದನು.

೧೩-೧೪. ಆದುದರಿಂದಲೇ ದೇವತೆಗಳೆಲ್ಲರೂ ಒಂದು ಕ್ಷಣಮಾತ್ರದಲ್ಲಿ ಜಯಶಾಲಿಗಳಾದರು. ಇತ್ತ ವೀರಭದ್ರನಾದರೋ ತನ್ನ ಕಡೆಯವರಿಗಾದ ಸೋಲನ್ನು ಕಂಡು ಬಹಳವಾಗಿ ರೋಷಗೊಂಡು, ಭೂತ ಪ್ರೇತ ಪಿಶಾಚಗಳೆಲ್ಲ ರನ್ನೂ ಹಿಂದಿಟ್ಟುಕೊಂಡು ವೃಷಭಾರೂಢರಾಗಿದ್ದ ಶಿವಕಿಂಕರರೆಲ್ಲರನ್ನೂ ಮುಂದೆ ನಡೆಸಿಕೊಂಡು ಬಹು ಮೊನಚಾದ ತ್ರಿಶೂಲಾಯುಧವನ್ನು ಕೈಕೊಂಡು ಆ ದೇವತೆಗಳೆಲ್ಲರನ್ನೂ ಹೊಡೆದು ಬೀಳಿಸಿದನು.

೧೫-೧೬. ಅದೇ ಸಮಯದಲ್ಲಿ ಶಿವಗಣಗಳೂ ಕೂಡ ದೇವತೆಗಳನ್ನೂ, ಯಕ್ಷ, ಪಿಶಾಚ, ಗುಹ್ಯಕ, ರಾಕ್ಷಸರನ್ನೂ ಶೂಲಾಯುಧಗಳಿಂದ ಹೊಡೆದರು. ಆಗಲಾ ಕಾಳಗದಲ್ಲಿ ಕೆಲ ದೇವತೆಗಳು ಇಬ್ಭಾಗವಾಗಿ ಸೀಳಲ್ಪಟ್ಟರು ; ಕೆಲವರು ಕತ್ತಿಗಳಿಂದಲೂ, ಮುದ್ಗರಗಳಿಂದಲೂ ತಿವಿಯಲ್ಪಟ್ಟರು. ಗಂಡುಗೊಡಲಿ ಗಳಿಂದ ಕೆಲವರು ತುಂಡರಿಸಲಾದರು.

೧೭-೧೮. ನೂರಾರುಮಂದಿ ದೇವತೆಗಳು ಶೂಲಗಳಿಂದ ಸೀಳಿಹೋದರು. ಕೆಲವರು ತುಂಡು ತುಂಡಾಗಿಹೋದರು. ಹೀಗೆ ಶಿವಕಿಂಕರರಿಂದ ಪರಾಜಿತರಾದ ಆ ದೇವತೆಗಳೆಲ್ಲರೂ ಪಲಾಯನಪರಾಯಣರಾಗಿ ಒಬ್ಬರನ್ನೊಬ್ಬರು ತಬ್ಬಿಕೊಂಡು ಸ್ವರ್ಗಲೋಕಕ್ಕೆ ಓಡಿಯೇ ಹೋದರು. ಇಂದ್ರನೇ ಮೊದಲಾದ ದಿಕ್ಪಾಲಕರು

**ಪರಸ್ಪರಂ ಪರಿಷ್ವಜ್ಯ ಗತಾಸ್ತೇಽಪಿ ತ್ರಿವಿಷ್ಟಪಂ ।**
**ಕೇವಲಂ ಲೋಕಪಾಲಾಶ್ಚ ಇಂದ್ರಾದ್ಯಾಸ್ತತ್ರ ತಸ್ಥುರುತ್ಸುಕಾಃ ।**
**ಬೃಹಸ್ಪತಿಂ ಪೃಚ್ಛಮಾನಾಃ ಕುತೋಽಸ್ಮಾಕಂ ಜಯೋ ಭವೇತ್ ॥ ೧೮ ॥**
**ಬೃಹಸ್ಪತಿರುವಾಚೇದಂ ಸುರೇಂದ್ರಂ ತ್ವರಿತಸ್ತದಾ ।**

**ಬೃಹಸ್ಪತಿರುವಾಚ :—**

**ಯದುಕ್ತಂ ವಿಷ್ಣುನಾ ಪೂರ್ವಂ ತತ್ಸತ್ಯಂ ಜಾತಮದ್ಯ ವೈ ॥ ೧೯ ॥**
**ಅಸ್ತಿಚೇದೀಶ್ವರಃ ಕಶ್ಚಿತ್ಫಲರೂಪಸ್ಯಕರ್ಮಣಃ ।**
**ಕರ್ತಾರಂ ಭಜತೇ ಸೋಽಪಿ ನಹ್ಯಕರ್ತುಃ ಪ್ರಭುರ್ಹಿ ಸಃ ॥ ೨೦ ॥**
**ನಮಂತ್ರೌಷಧಯಃ ಸರ್ವೇ ನಾಭಿಚಾರಾ ನ ಲೌಕಿಕಾಃ ।**
**ನ ಕರ್ಮಾಣಿ ನವೇದಾಶ್ಚ ನಮೀಮಾಂಸಾದ್ವಯಂ ತಥಾ ॥ ೨೧ ॥**
**ಜ್ಞಾತುಮೀಶಾಃ ಸಂಭವಂತಿ ಭಕ್ತ್ಯಾಜ್ಞೇಯಸ್ತ್ವನನ್ಯಯಾ ।**
**ಶಾಂತ್ಯಾಚ ಪರಯಾ ತುಷ್ಟ್ಯಾ ಜ್ಞಾತವ್ಯೋಹಿ ಸದಾಶಿವಃ ॥ ೨೨ ॥**
**ತೇನ ಸರ್ವಂ ಸಂಭವಂತಿ ಸುಖದುಃಖಾತ್ಮಕಂ ಜಗತ್ ।**
**ಪರಂತು ಸಂವದಿಷ್ಯಾಮಿ ಕಾರ್ಯಾಕಾರ್ಯವಿವಕ್ಷಯಾ ॥ ೨೩ ॥**

---

ಮಾತ್ರ ಇನ್ನೂ ಯುದ್ಧಮಾಡಬೇಕೆಂಬ ಉತ್ಸಾಹದಿಂದ ರಣಭೂಮಿಯಲ್ಲಿಯೇ ನಿಂತರು. ಅವರು ತಮ್ಮ ಗುರುವಾದ ಬೃಹಸ್ಪತ್ಯಾಚಾರ್ಯನನ್ನು ತಮಗೆ ಜಯವಾಗುವುದೆಂತೆಂದು ಪ್ರಶ್ನಿಸಿದರು. ಆ ಬೃಹಸ್ಪತಿಯಾದರೋ ಬಹಳ ಜಾಗರೂಕನಾಗಿ ದೇವೇಂದ್ರನನ್ನು ಕುರಿತು, "ಅಯ್ಯಾ ಮಹೇಂದ್ರನೇ! ಹಿಂದೆ ಶ್ರೀಮನ್ಮಹಾವಿಷ್ಣುವು ಹೇಗೆ ನುಡಿದಿದ್ದನೋ ಹಾಗೆಯೇ ನಡೆಯಿತು.

೨೦. ಪ್ರಪಂಚದಲ್ಲಿ ಫಲರೂಪವಾದ ಕರ್ಮಕ್ಕೆ ಈಶ್ವರನೊಬ್ಬನಿದ್ದೇ ಇರುವನು. ಅವನೂ ಸಹ ಕರ್ತೃವನ್ನೇ ಸೇವಿಸುತ್ತಾನೆ. ಕರ್ಮ ಮಾಡದವನಿಗೆ ಅವನು ಪ್ರಭುವಲ್ಲವು.

೨೧-೨೨. ಮಂತ್ರ ತಂತ್ರಗಳಾಗಲಿ, ಔಷಧಿಗಳಾಗಲಿ, ಎಲ್ಲ ಬಗೆಯ ಮಾರಣೋಚ್ಚಾಟನೆಯೇ ಮೊದಲಾದ ಆಭಿಚಾರಿಕ ಕ್ರಿಯೆಗಳಾಗಲಿ, ಇತರ ಲೌಕಿಕಕಾರ್ಯಗಳಾಗಲಿ, ಕರ್ಮಗಳಾಗಲಿ, ವೇದಗಳು, ಪೂರ್ವೋತ್ತರ ಮೀಮಾಂಸಗಳೇ ಆಗಲಿ ಆ ಈಶ್ವರನನ್ನು ತಿಳಿಯಲು ಸಮರ್ಥಗಳಾಗುವುದಿಲ್ಲ. ಅನನ್ಯವಾದ ಭಕ್ತಿಯಿಂದಲೂ, ಶ್ರೇಷ್ಠವಾದ ಶಾಂತಿತುಷ್ಟಿಗಳಿಂದಲೂ ಆ ಸದಾ ಶಿವನನ್ನು ಅರಿತುಕೊಳ್ಳಬೇಕು.

೨೩. ಆ ಪರಶಿವನಿಂದಲೇ ಸುಖದುಃಖರೂಪವಾದ ಈ ಪ್ರಪಂಚವೆಲ್ಲವೂ ಸೃಷ್ಟಿಯಾಗುತ್ತದೆ. ಆದುದರಿಂದ ನಿಮಗೆ ಜಯವೆತ್ತಣದು? ಆದರೂ ಈಗ ಕಾರ್ಯಾಕಾರ್ಯ ವಿವೇಚನೆಯಿಂದ ನಿಮಗೆ ಹೇಳುತ್ತೇನೆ ಕೇಳಿರಿ.

ತ್ವಮಿಂದ್ರ ಬಾಲಿಶೋ ಭೂತ್ವಾ ಲೋಕಪಾಲೈಃ ಸಹಾಽದ್ಯವೈ ।
ಆಗತೋ ಬಾಲಿಶೋಭೂತ್ವಾ ಇದಾನೀಂ ಕಿಂ ಕರಿಷ್ಯಸಿ ॥ ೨೪ ॥
ಏತೇ ರುದ್ರಸಹಾಯಾಶ್ಚ ಗಣಾಃ ಪರಮಶೋಭನಾಃ ।
ಕುಪಿತಾಶ್ಚ ಮಹಾಭಾಗಾಃ ನತು ಶೇಷಂ ಪ್ರಕುರ್ವತೇ ॥ ೨೫ ॥
ಏವಂ ಬೃಹಸ್ಪತೇರ್ವಾಕ್ಯಂ ಶೃತ್ವಾ ತೇಽಪಿ ದಿವೌಕಸಃ ।
ಚಿಂತಾಮಾಪೇದಿರೇ ಸರ್ವೇ ಲೋಕಪಾಲಾ ಮಹೇಶ್ವರಾಃ ॥ ೨೬ ॥
ತತೋಽಬ್ರವೀದ್ವೀರಭದ್ರೋ ಗಣೈಃ ಪರಿವೃತೋ ಭೃಶಂ ।
ಸರ್ವೇ ಯೂಯಂ ಬಾಲಿಶತ್ವಾದವದಾನಾರ್ಥಮಾಗತಾಃ ॥ ೨೭ ॥
ಅವದಾನಾನಿ ದಾಸ್ಯಾಮಿ ತೃಪ್ತ್ಯರ್ಥಂ ಭವತಾಂ ತ್ವರನ್ ।
ಏವಮುಕ್ತ್ವಾ ಶಿತೈರ್ಬಾಣೈರ್ಜಘಾನಾಥ ರುಷಾನ್ವಿತಃ ॥ ೨೮ ॥
ತೈರ್ಬಾಣೈರ್ನಿಹತಾಃ ಸರ್ವೇ ಜಗ್ಮುಸ್ತೇ ಚ ದಿಶೋದಶ ॥ ೨೯ ॥
ಗತೇಷು ಲೋಕಪಾಲೇಷು ವಿದ್ರುತೇಷು ಸುರೇಷು ಚ ।
ಯಜ್ಞವಾಟೇ ಸಮಾಯಾತೋ ವೀರಭದ್ರೋ ಗಣಾನ್ವಿತಃ ॥ ೩೦ ॥

---

೨೪–೨೫. ಎಲೈ ಇಂದ್ರನೇ! ನೀನು ಕೇವಲ ತಿಳಿಗೇಡಿ. ಲೋಕಪಾಲಕರೊಡಗೂಡಿ ಈ ಯಜ್ಞಕ್ಕೆ ಬಂದಿರುವ ನೀನು ಈಗ ಮಾಡುವುದೇನು? ಸಾಕ್ಷಾತ್ ರುದ್ರನ ಸಹಾಯಸಂಪತ್ತಿಯಿರುವ ಈ ಶಿವಗಣಗಳೆಲ್ಲರೂ ಪರಮಮಂಗಳ ಸ್ವರೂಪರಾದವರು. ಮಹಾಭಾಗ್ಯಶಾಲಿಗಳಾದ ಇವರೆಲ್ಲರೂ ಇದೀಗ ಕೆರಳಿ ಹೋಗಿರುವರು. ಇವರು ನಿಮ್ಮನ್ನೇನೋ ಉಳಿಸುವಂತಿಲ್ಲ.''

೨೬. ದೇವಗುರುವಾದ ಬೃಹಸ್ಪತಿಯು ಈ ರೀತಿ ನುಡಿಯಲು ಅದನ್ನು ಕೇಳಿ ಇಂದ್ರನೇ ಮೊದಲಾದ ಆ ದೇವತೆಗಳೆಲ್ಲರೂ ಬಹಳವಾಗಿ ಚಿಂತೆಗೊಳಗಾದರು.

೨೭–೨೮. ಅದೇ ಸಮಯದಲ್ಲಿಯೇ ವೀರಭದ್ರನು ಶಿವಗಣಗಳೊಡಗೂಡಿ ಅವರೆಲ್ಲರನ್ನೂ ಕುರಿತು, "ಎಲೈ ದೇವತೆಗಳಿರಾ! ನೀವೆಲ್ಲರೂ ಬುದ್ಧಿಯಿಲ್ಲದೆ ಪರಾಕ್ರಮವನ್ನು ಮೆರೆಯುವುದಕ್ಕಾಗಿ ಇಲ್ಲಿಗೆ ಬಂದಿರುವಿರಷ್ಟೆ! ಈಗ ನಾನು ನಿಮ್ಮೆಲ್ಲರಿಗೂ ತೃಪ್ತಿಯಾಗುವಂತೆ ಬಹು ಜಾಗ್ರತೆಯಾಗಿಯೇ ಪಾರಿತೋಷಕಗಳನ್ನು ಕೊಡುತ್ತೇನೆ ತೆಗೆದುಕೊಳ್ಳಿರಿ'' ಎಂದು ಹೇಳಿ ರೋಷಗೊಂಡು ಕೂರಂಬುಗಳಿಂದ ಅವರೆಲ್ಲರನ್ನೂ ಹೊಡೆದನು.

೨೯. ಆ ಬಾಣಗಳ ಹೊಡೆತಗಳಿಗೆ ಸಿಕ್ಕಿ ಆ ದೇವತೆಗಳೆಲ್ಲರೂ ಅಲ್ಲಿ ನಿಲ್ಲದೆ ಹತ್ತುದಿಕ್ಕುಗಳಿಗೂ ಓಡಿಹೋದರು.

೩೦. ಲೋಕಪಾಲಕರೆಲ್ಲರೂ ಹೊರಟುಹೋಗಿ, ಇತರ ದೇವತೆಗಳೂ ಹೆದರಿ ಓಡಿಹೋದ ತರುವಾಯ ವೀರಭದ್ರನು ಆ ಶಿವಗಣಗಳೊಡನೆಯೇ ದಕ್ಷನ ಯಜ್ಞವಾಟಿಕೆಗೆ ನುಗ್ಗಿಬಂದನು.

ತದಾ ತೇ ಋಷಯಃ ಸರ್ವೇ ಸರ್ವನೇವೇಶ್ವರೇಶ್ವರಂ ।
ವಿಜ್ಞಪ್ತುಕಾಮಾಃ ಸಹಸಾ ಊಚುರೇವಂ ಜನಾರ್ದನಂ ॥ ೩೧ ॥
ರಕ್ಷ ಯಜ್ಞಂ ಹಿ ದಕ್ಷಸ್ಯ ಯಜ್ಞೋಽಸಿ ತ್ವಂ ನ ಸಂಶಯಃ ।
ಏತಚ್ಛ್ರುತ್ವಾ ತು ವಚನಂ ಋಷೀಣಾಂ ವೈ ಜನಾರ್ದನಃ ॥ ೩೨ ॥
ಯೋದ್ಧುಕಾಮಃ ಸ್ಥಿತೋ ಯುದ್ಧೇ ವಿಷ್ಣುರಧ್ಯಾತ್ಮದೀಪಕಃ ।
ವೀರಭದ್ರೋ ಮಹಾಬಾಹುಃ ಕೇಶವಂ ವಾಕ್ಯಮಬ್ರವೀತ್ ॥ ೩೩ ॥
ಅತ್ರ ತ್ವಯಾಗತಂ ಕಸ್ಮಾದ್ವಿಷ್ಣೋ ವೇತ್ತಾ ಮಹಾಬಲ ।
ದಕ್ಷಸ್ಯ ಪಕ್ಷಮಾಶ್ರಿತ್ಯ ಕಥಂ ಜೇಷ್ಯಸಿ ತದ್ವದ ॥ ೩೪ ॥
ದಾಕ್ಷಾಯಣ್ಯಾ ಕೃತಂ ಯಚ್ಚ ನ ದೃಷ್ಟಂ ಕಿಂ ತ್ವಯಾನಘ ।
ತ್ವಂ ಚಾಪಿ ಯಜ್ಞೇ ದಕ್ಷಸ್ಯ ಅವದಾನಾರ್ಥಮಾಗತಃ ।
ಅವದಾನಂ ಪ್ರಯಚ್ಛಾಮಿ ತವ ಚಾಪಿ ಮಹಾಭುಜ ॥ ೩೫ ॥
ಏವಮುಕ್ತ್ವಾ ಪ್ರಣಮ್ಯಾದೌ ವಿಷ್ಣುಂ ಸದೃಶರೂಪಿಣಂ ।
ವೀರಭದ್ರೋಽಗ್ರತೋ ಭೂತ್ವಾ ವಿಷ್ಣುಂ ವಾಕ್ಯಮಥಾಬ್ರವೀತ್ ॥ ೩೬ ॥

---

೩೧–೩೩. ಆಗ ಅಲ್ಲಿದ್ದ ಋಷಿಗಳೆಲ್ಲರೂ ಎಲ್ಲ ವಿಚಾರಗಳನ್ನೂ ಸರ್ವೇಶ್ವರನಾದ ಜನಾರ್ದನನಲ್ಲಿ ಅರಿಕೆಮಾಡಿಕೊಳ್ಳಲಪೇಕ್ಷಿಸಿ, ಅವನನ್ನು ಕುರಿತು, "ಓ ಜನಾರ್ದನಾ! ನೀನೇ ಯಜ್ಞಸ್ವರೂಪನಲ್ಲವೆ? ಅಂತಹ ನೀನು ಈಗ ಈ ದಕ್ಷನ ಯಜ್ಞವನ್ನು ರಕ್ಷಿಸಬೇಕು" ಎಂದು ಹೇಳಿದರು. ಋಷಿಗಳ ಈ ಮಾತನ್ನು ಕೇಳಿ ಜನಾರ್ದನನೂ, ಆಧ್ಯಾತ್ಮದೀಪಕನೂ ಆದ ವಿಷ್ಣುವು ಯುದ್ಧಮಾಡಬಯಸಿ ಅಲ್ಲಿಯೇ ನಿಂತನು. ಆ ಸಮಯದಲ್ಲಿ ಮಹಾಬಾಹುವಾದ ವೀರಭದ್ರಮೂರ್ತಿಯು ಆ ಕೇಶವನನ್ನು ಕುರಿತು ಹೇಳಿದನು:

೩೪. "ಎಲೈ ವಿಷ್ಣುವೇ! ನೀನು ಪರಶಿವನ ಬಲಪರಾಕ್ರಮವೆಲ್ಲವನ್ನೂ ಅರಿತವನಾಗಿದ್ದರೂ ಇಲ್ಲಿಗೆ ಬರಬಹುದೆ? ಈ ದಕ್ಷನ ಪಕ್ಷವನ್ನು ವಹಿಸಿ ನಿಂತ ನೀನು ಜಯವನ್ನು ಪಡೆಯುವುದೆಂತು?

೩೫. ಎಲೈ ಪಾಪರಹಿತನೇ! ದಾಕ್ಷಾಯಣಿಯು ಈ ಯಜ್ಞದಲ್ಲೆಸಗಿದ ಕಾರ್ಯವನ್ನು ನೀನು ನೋಡಲಿಲ್ಲವೇನು? ಹಾಗೆ ನೋಡಿಯೂ ಸಹ ನೀನು ಈ ದಕ್ಷನ ಯಜ್ಞದಲ್ಲಿ ಹವಿರ್ಭಾಗವನ್ನು ಪಡೆಯುವ ಗೌರವಕ್ಕಾಗಿ ಬಂದೆಯಲ್ಲವೆ? ಎಲೈ ಮಹಾಭಾಗನೇ! ಈಗ ನಾನು ನಿನಗೂ ಕೂಡ ಸರಿಯಾದ ಮರ್ಯಾದೆಯನ್ನು ಕೊಡುತ್ತೇನೆ ಕೈಕೊಳ್ಳುವವನಾಗು."

೩೬–೩೭. ಹೀಗೆ ನುಡಿದ ಆ ವೀರಭದ್ರನು ಪರಶಿವನಿಗೆ ಸಮಾನವಾದ ರೂಪವುಳ್ಳ ಆತನಿಗೆ ಮೊದಲು ಮಣಿದು ತರುವಾಯ ಮುಂದೆ ಬಂದು ಆತನನ್ನು ಕುರಿತು, "ಓ ಮಹಾಬಾಹುವೇ! ನಮ್ಮ ಒಡೆಯನಾದ ಶಂಭುವು ಹೇಗೋ

ಯಥಾ ಶಂಭುಸ್ತಥಾ ತ್ವಂ ಹಿ ಮಮ ನಾಸ್ತ್ಯತ್ರ ಸಂಶಯಃ ।
ತಥಾಪಿ ತ್ವಂ ಮಹಾಬಾಹೋ ಯುದ್ಧಕಾಮೋಽಗ್ರತಃ ಸ್ಥಿತಃ ।
ನೇಷ್ಯಾಮ್ಯಪುನರಾವೃತ್ತಿಂ ಯದಿ ತಿಷ್ಠೇಸ್ತ್ವಮಾತ್ಮನಾ ॥ ೩೭ ॥
ತಸ್ಯ ತದ್ವಚನಂ ಶ್ರುತ್ವಾ ವೀರಭದ್ರಸ್ಯ ಧೀಮತಃ ।
ಉವಾಚ ಪ್ರಹಸನ್ ದೇವೋ ವಿಷ್ಣುಃ ಸರ್ವೇಶ್ವರೇಶ್ವರಃ ॥ ೩೮ ॥

ವಿಷ್ಣುರುವಾಚ :—

ರುದ್ರತೇಜಃಪ್ರಸೂತೋಽಸಿ ಪವಿತ್ರೋಽಸಿ ಮಹಾಮತೇ ।
ಅನೇನ ಪ್ರಾರ್ಥಿತಃ ಪೂರ್ವಂ ಯಜ್ಞಾರ್ಥಂ ಚ ಪುನಃ ಪುನಃ ॥ ೩೯ ॥
ಅಹಂ ಭಕ್ತಪರಾಧೀನಸ್ತಥಾ ಸೋಽಪಿ ಮಹೇಶ್ವರಃ ।
ತೇನೈವ ಕಾರಣೇನಾಽತ್ರ ದಕ್ಷಸ್ಯ ಯಜನಂ ಪ್ರತಿ ॥ ೪೦ ॥
ಆಗತೋಽಹಂ ವೀರಭದ್ರ ರುದ್ರಕೋಪಸಮುದ್ಭವ ।
ಅಹಂ ನಿವಾರಯಾಮಿ ತ್ವಾಂ ತ್ವಂ ವಾ ಮಾಂ ವಿನಿವಾರಯ ॥ ೪೧ ॥
ಇತ್ಯುಕ್ತವತಿ ಗೋವಿಂದೇ ಪ್ರಹಸ್ಯ ಸ ಮಹಾಭುಜಃ ।
ಪ್ರಶ್ರಯಾವನತೋ ಭೂತ್ವಾ ಇದಮಾಹ ಜನಾರ್ದನಂ ॥ ೪೨ ॥

---

ನೀನೂ ನನಗೆ ಹಾಗೆಯೇ ಎಂಬುದರಲ್ಲಿ ಸಂಶಯವಿಲ್ಲ. ಆದರೂ ನೀನು ನನ್ನೊಡನೆ ಯುದ್ಧಮಾಡಲು ಎದುರು ನಿಂತಿರುವೆ. ಸರಿಯಾಗಿ ನಿಂತುದೇ ಆದರೆ ನಿನಗೆ ಬಿಡುಗಡೆಯೇ ಇರುವುದಿಲ್ಲವೆಂದು ತಿಳಿಯುತ್ತೇನೆ" ಎಂದನು.

೩೮-೩೯. ಮಹಾಬುದ್ಧಿಶಾಲಿಯಾದ ವೀರಭದ್ರನ ಈ ಮಾತುಗಳನ್ನು ಕೇಳಿ ಸರ್ವೇಶ್ವರೇಶ್ವರನಾದ ಶ್ರೀವಿಷ್ಣುವು ನಸುನಗುತ್ತ, ಅವನನ್ನು ಕುರಿತು, "ಎಲೈ ಮಹಾಮತಿಯಾದ ವೀರಭದ್ರನೇ! ನೀನು ರುದ್ರನ ತೇಜಸ್ಸಿನಿಂದ ಜನಿಸಿರುವೆ. ಅದರಿಂದ ಪವಿತ್ರನೂ ಆಗಿರುವೆ. ನೋಡು; ಹಿಂದೆ ಈ ದಕ್ಷನು ಯಜ್ಞವನ್ನು ಕಾಪಾಡಬೇಕೆಂದು ನನ್ನನ್ನು ಅಡಿಗಡಿಗೂ ಪ್ರಾರ್ಥಿಸಿದನು.

೪೦-೪೧. ನಾನು ಭಕ್ತಪರಾಧೀನನು. ನಿನ್ನೊಡೆಯನಾದ ಮಹೇಶ್ವರನೂ ಅಂತೆಯೇ ಭಕ್ತಪರಾಧೀನನು! ವೀರಭದ್ರಾ! ಆ ಕಾರಣದಿಂದಲೇ ನಾನು ಈ ದಕ್ಷನ ಯಜ್ಞಕ್ಕೆ ಬಂದಿರುವೆನು. ಈಗ, ರುದ್ರನ ಮುನಿಸಿನಿಂದುದಿಸಿರುವ ನಿನ್ನನ್ನು ನಾನು ತಡೆಯುತ್ತೇನೆ; ನೀನು ನನ್ನನ್ನು ತಡೆ" ಎಂದು ಹೇಳಿದನು.

೪೨. ಈ ರೀತಿ ನುಡಿದ ಗೋವಿಂದನ ನುಡಿಯನ್ನಾಲಿಸಿ ಮಹಾಭುಜನಾದ ಆ ವೀರಭದ್ರನು ವಿನಯದಿಂದ ತಲೆವಾಗಿ ಜನಾರ್ದನನಾದ ಆತನನ್ನು ಕುರಿತು ನಗುತ್ತ ಹೀಗೆ ಹೇಳಿದನು:

ಯಥಾ ಶಿವಸ್ತಥಾ ತ್ವಂ ಹಿ ಯಥಾ ತ್ವಂ ಚ ತಥಾ ಶಿವಃ ।
ಸೇವಕಾಶ್ಚ ವಯಂ ಸರ್ವೇ ತವ ವಾ ಶಂಕರಸ್ಯಚ ॥ ೪೩ ॥
ತಚ್ಛ್ರುತ್ವಾ ವಚನಂ ತಸ್ಯ ಸೋಽಚ್ಯುತಃ ಸಂಪ್ರಹಸ್ಯಚ ।
ಇದಂ ವಿಷ್ಣುರ್ಮಹಾವಾಕ್ಯಂ ಜಗಾದ ಪರಮೇಶ್ವರಃ ॥ ೪೪ ॥
ಯೋಧಯಸ್ವ ಮಹಾಬಾಹೋ ಮಯಾ ಸಾರ್ಧಮಶಂಕಿತಃ ।
ತವಾಸ್ತ್ರೈಃ ಪೂರ್ಯಮಾಣೋಽಹಂ ಗಚ್ಛಾಮಿ ಭವನಂ ಸ್ವಕಂ ॥ ೪೫ ॥
ಕಥೇತ್ಯುಕ್ತ್ವಾತು ವೀರೋಽಸೌ ವೀರಭದ್ರೋ ಮಹಾಬಲಃ ।
ಗೃಹೀತ್ವಾ ಪರಮಾಸ್ತ್ರಾಣಿ ಸಿಂಹನಾದೈರ್ಜಗರ್ಜಹ ॥ ೪೬ ॥
ವಿಷ್ಣುಶ್ಚಾಪಿ ಮಹಾಘೋಷಂ ಶಂಖನಾದಂ ಚಕಾರ ಸಃ ।
ತಚ್ಛ್ರುತ್ವಾ ಯೇ ಗತಾ ದೇವಾಃ ರಣಂ ಹಿತ್ವಾಽಽಯಯುಃ ಪುನಃ ॥ ೪೭ ॥
ವ್ಯೂಹಂ ಚಕ್ರುಸ್ತದಾ ಸರ್ವೇ ಲೋಕಪಾಲಾ ಸವಾಸವಾಃ ।
ತದೇಂದ್ರೇಣ ಹತೋ ನಂದೀ ವಜ್ರೇಣ ಶತಪರ್ವಣಾ ॥ ೪೮ ॥

---

೪೩. "ದೇವಾ! ನನಗೆ ಶಿವನು ಹೇಗೆ ಒಡೆಯನೋ ನೀನೂ ಹಾಗೆಯೇ ಒಡೆಯನು. ನೀನೆಂತೋ ಶಿವನೂ ಅಂತೆಯೇ ಪೂಜ್ಯನು. ನಿನಗಾಗಲಿ, ಆ ಶಿವನಿಗಾಗಲಿ ನಾವೆಲ್ಲರೂ ಕಿಂಕರರೇ! ಹೀಗಿರುವಾಗ ನಾವು ನಿನ್ನೊಡನೆ ಯುದ್ಧಮಾಡುವುದೆಂತು?"

೪೪. ಈ ಮಾತನ್ನು ಕೇಳಿ ಪರಮೇಶ್ವರನೂ, ಅಚ್ಯುತನೂ ಆದ ಆ ವಿಷ್ಣುವು ಘಟ್ಟಿಯಾಗಿ ನಕ್ಕು ಮಹಾರ್ಥಗರ್ಭಿತವಾದ ಈ ಮಾತನ್ನಾಡಿದನು :

೪೫. "ಎಲೈ ಮಹಾಬಾಹುವೇ! ನನ್ನೊಡನೆ ಕಾಳಗ ಮಾಡು. ಸಂಶಯ ಪಡಬೇಡ, ನಾನು ನಿನ್ನ ಬಾಣಗಳಿಂದ ತುಂಬಿದ ಮೈಯುಳ್ಳವನಾಗಿ ನನ್ನ ಭವನವಾದ ವೈಕುಂಠಲೋಕಕ್ಕೆ ತೆರಳುವೆನು."

೪೬. ಮಹಾವೀರನೂ, ಶೂರನೂ ಆದ ಆ ವೀರಭದ್ರನಾದರೋ ಅಂತೆಯೇ ಆಗಲೆಂದು ಹೇಳಿ, ಶ್ರೇಷ್ಠವಾದ ಅಸ್ತ್ರಗಳನ್ನು ಕೈಕೊಂಡು ಸಿಂಹನಾದಗಳನ್ನು ಮಾಡಿ ಗರ್ಜಿಸಿದನು.

೪೭–೪೮. ವಿಷ್ಣುವೂ ಕೂಡ ಮಹತ್ತರವಾಗಿ ಶಬ್ದವಾಗುವಂತೆ ಶಂಖವನ್ನೂದಿದನು. ಆ ಶಂಖನಾದವನ್ನು ಕೇಳುತ್ತಲೇ ಹಿಂದೆ ಸೋತು ಹೆದರಿ ರಣರಂಗದಿಂದ ಓಡಿಹೋಗಿದ್ದ ದೇವತೆಗಳೆಲ್ಲರೂ ಮತ್ತೆ ಹಿಂತಿರುಗಿ ಬಂದರು. ತರುವಾಯ, ಮಹೇಂದ್ರನೇ ಮೊದಲಾದ ಆ ಲೋಕಪಾಲಕರೆಲ್ಲರೂ ವ್ಯೂಹವನ್ನು ಕಟ್ಟಿದರು. ಆಗ ದೇವೇಂದ್ರನು ನೂರು ಗಂಟುಗಳುಳ್ಳ ತನ್ನ ವಜ್ರಾಯುಧದಿಂದ ನಂದಿಯನ್ನು ಹೊಡೆದನು.

ನಂದಿನಾ ಚ ಹತಃ ಶಕ್ರಸ್ತ್ರಿಶೂಲೇನ ಸ್ತನಾಂತರೇ ।
ವಾಯುನಾ ಚ ಹತೋ ಭೃಂಗೀ ಭೃಂಗಿಣಾ ವಾಯುರಾಹತಃ ॥ ೪೯ ॥
ಶೂಲೇನ ಸಿತಧಾರೇಣ ಸನ್ನದ್ಧೋ ದಂಡಧಾರಿಣಾ ।
ಯಮೇನ ಸಹ ಸಂಗ್ರಾಮಂ ಮಹಾಕಾಲೋ ಬಲಾನ್ವಿತಃ ॥ ೫೦ ॥
ಕುಬೇರೇಣ ಚ ಸಂಗಮ್ಯ ಕೂಷ್ಮಾಂಡಾನಾಂಪತಿಃಸ್ವಯಂ ।
ವರುಣೇನ ಸಮಂ ಯುದ್ಧಂ ಮುಂಡಶ್ಚೈವ ಮಹಾಬಲಃ ॥ ೫೧ ॥
ಯುಯುಧೇ ಪರಯಾ ಶಕ್ತ್ಯಾ ತ್ರೈಲೋಕ್ಯಂ ವಿಸ್ಮಯನ್ನಿವ ।
ನೈರ್ಋತೇನ ಸಮಾಗಮ್ಯ ಚಂಡಶ್ಚ ಬಲವತ್ತರಃ ॥ ೫೨ ॥
ಯುಯುಧೇ ಪರಮಾಸ್ತ್ರೇಣ ನೈರ್ಋತಂಚ ವಿಡಂಬಯನ್ ।
ಯೋಗಿನೀಚಕ್ರಸಂಯುಕ್ತೋ ಭೈರವೋ ನಾಯಕೋ ಮಹಾನ್ ॥೫೩॥
ವಿದಾರ್ಯ ದೇವಾನಖಿಲಾನ್ ಪಪೌ ಶೋಣಿತಮದ್ಭುತಂ ।
ಕ್ಷೇತ್ರಪಾಲಾಸ್ತಥಾ ಚಾನ್ಯೇ ಭೂತಪ್ರಮಥಗುಹ್ಯಕಾಃ ॥ ೫೪ ॥
ಶಾಕಿನೀ ಡಾಕಿನೀ ರೌದ್ರಾ ನವದುರ್ಗಾಸ್ತಥೈವಚ ।
ಯೋಗಿನ್ಯೋ ಯಾತುಧಾನ್ಯಶ್ಚ ತದಾ ಕೂಷ್ಮಾಂಡಕಾದಯಃ ।
ನೇದುಃ ಪಪುಃ ಶೋಣಿತಂ ಚ ಬುಭುಜುಃ ಪಿಶಿತಂ ಬಹು ॥ ೫೫ ॥

---

೪೯–೫೦. ನಂದಿಯೂ ಸಹ ತ್ರಿಶೂಲವನ್ನು ತೆಗೆದುಕೊಂಡು ಮಹೇಂದ್ರನ ಎದೆಗೂಡಿಗೆ ಬಡಿದನು. ವಾಯುವು ಭೃಂಗಿಯನ್ನು ನದೆಯಲು ಅವನು ಆ ವಾಯುವನ್ನು ಮತ್ತೂ ಬಲವಾಗಿ ನದೆದನು. ಮಹಾ ಪರಾಕ್ರಮಿಯಾದ ಕಾಲನು ಬಹು ಮೊನಚಾದ ಅಂಚುಳ್ಳ ಶೂಲಾಯುಧವನ್ನು ಸಿದ್ಧಗೊಳಿಸಿ ಕೊಂಡು ದಂಡಧರನಾದ ಯಮನೊಡನೆ ಕಾಳೆಗ ಮಾಡಿದನು.

೫೧–೫೫. ಕೂಷ್ಮಾಂಡಪತಿಯೆಂಬ ಶಿವಕಿಂಕರನೋರ್ವನು ಕುಬೇರ ನೊಡನೆ ನಿಂತು ಹೋರಾಡಿದನು. ಮಹಾಬಲನಾದ ಮುಂಡನು ವರುಣನೊಡನೆ ಸೆಣಸಿ ನಿಂತು, ಮೂರು ಲೋಕಗಳೂ ಬೆಚ್ಚನೆ ಬೆರಗಾಗುವಂತೆ ಮಹಾ ಪರಾಕ್ರಮದಿಂದ ಯುದ್ಧಮಾಡಿದನು. ಬಹು ಬಲಿಷ್ಠನಾದ ಚಂಡನಾದರೋ ನಿರ್ಋತಿಯೊಡನೆ ಕಾಳೆಗ ಮಾಡಿ ದಿವ್ಯಾಸ್ತ್ರವೊಂದನ್ನು ಪ್ರಯೋಗಿಸಿ ಅವನ ನೈರ್ಋತ್ಯಾಸ್ತ್ರವನ್ನೇ ತಿರಸ್ಕರಿಸಿ ಕಾಳೆಗ ಮಾಡಿದನು. ಗಣನಾಯಕನಾದ ಮಹಾಭೈರವನು ಯೋಗಿನೀ ಚಕ್ರಗಳೊಡಗೂಡಿ ದೇವತೆಗಳೆಲ್ಲರನ್ನೂ ಸಿಗಿದು ಅದ್ಭುತವಾದ ಅವರ ಕೆನ್ನೆತ್ತರನ್ನು ಕುಡಿದನು. ಇತರ ಕ್ಷೇತ್ರಪಾಲಕರೂ, ಭೂತ ಪ್ರಮಥ ಗುಹ್ಯಕರೂ, ಶಾಕಿನೀ ಡಾಕಿನಿಯರೂ, ಮಹಾ ಭಯಂಕರೆಯ ರಾದ ನವದುರ್ಗೆಯರೂ, ಯೋಗಿನಿಯರೂ, ರಾಕ್ಷಸಿಯರೂ, ಅಂತೆಯೇ ಕೂಷ್ಮಾಂಡಕನೇ ಮೊದಲಾದವರೂ ಘಟ್ಟಿಯಾಗಿ ಕೂಗಿಟ್ಟು ಆ ದೇವತೆಗಳ

ಭಕ್ಷ್ಯಮಾಣಂ ತದಾ ಸೈನ್ಯಂ ವಿಲೋಕ್ಯ ಸುರರಾಟ್ ಸ್ವಯಂ ।
ವಿಹಾಯ ನಂದಿನಂ ಪಶ್ಚಾತ್ ವೀರಭದ್ರಂ ಸಮಾಕ್ಷಿಪತ್ ॥ ೫೬ ॥
ವೀರಭದ್ರೋ ವಿಹಾಯೈವ ವಿಷ್ಣುಂ ದೇವೇಂದ್ರಮಾಸ್ಥಿತಃ ।
ತಯೋರ್ಯುದ್ಧಮಭೂದ್ಘೋರಂ ಬುಧಾಂಗಾರಕಯೋರಿವ ॥ ೫೭ ॥
ವೀರಭದ್ರಂ ಯದಾ ಶಕ್ರೋ ಹಂತುಕಾಮಸ್ತ್ವರಾನ್ವಿತಃ ।
ತಾವಚ್ಚಕ್ರಂ ಗಜಸ್ಥಂ ಹಿ ಪೂರಯಾಮಾಸ ಮಾರ್ಗಣೈಃ ॥ ೫೮ ॥
ವೀರಭದ್ರೋ ರುಷಾವಿಷ್ಟೋ ದುರ್ನಿವಾರ್ಯೋ ಮಹಾಬಲಃ ।
ತದೇಂದ್ರೇಣಾಹತಃ ಶೀಘ್ರಂ ವಜ್ರೇಣ ಶತಪರ್ವಣಾ ॥ ೫೯ ॥
ಸಗಜಂ ಚ ಸವಜ್ರಂ ಚ ವಾಸವಂ ಗ್ರಸ್ತುಮುದ್ಯತಃ ।
ಹಾಹಾಕಾರೋ ಮಹಾನಾಸೀದ್ಭೂತಾನಾಂ ತತ್ರ ಪಶ್ಯತಾಂ ॥ ೬೦ ॥
ವೀರಭದ್ರಂ ತಥಾಭೂತಂ ಹಂತುಕಾಮಂ ಪುರಂದರಂ ।
ತ್ವರಮಾಣಸ್ತದಾ ವಿಷ್ಣುರ್ವೀರಭದ್ರಾಗ್ರತಃ ಸ್ಥಿತಃ ॥ ೬೧ ॥

---

ರಕ್ತವನ್ನು ಕುಡಿಯುತ್ತಲೂ, ಅವರ ಮಾಂಸವನ್ನು ಯಥೇಚ್ಛವಾಗಿ ತಿನ್ನುತ್ತಲೂ ಮೆರೆದರು.

೫೬. ಹೀಗೆ ತನ್ನ ಸೇನೆಯೆಲ್ಲವನ್ನೂ ಆ ಶಿವಕಿಂಕರರು ಭಕ್ಷಿಸುತ್ತಿರುವುದನ್ನು ಕಂಡು ದೇವರಾಜನಾದ ಮಹೇಂದ್ರನು ನಂದಿಯೊಡನೆ ಕಾಳಗವನ್ನು ತೊರೆದು ವೀರಭದ್ರನಿದ್ದೆಡೆಗೆ ತೆರಳಿ ಅವನನ್ನು ತಿರಸ್ಕರಿಸಿ ಮಾತನಾಡಿದನು.

೫೭. ವೀರಭದ್ರನೂ ಸಹ ವಿಷ್ಣುವಿನೊಡನೆ ಕಾಳಗವನ್ನು ಬಿಟ್ಟು ದೇವೇಂದ್ರನಿದ್ದೆಡೆಗೆ ಬಂದನು. ಆಗ ಅವರೀರ್ವರಿಗೂ, ಬುಧನಿಗೂ ಅಂಗಾರಕನಿಗೂ ಎಂತೋ ಅಂತು ಘೋರವಾದ ಯುದ್ಧವು ನಡೆಯಿತು.

೫೮–೬೦. ದೇವೇಂದ್ರನು ವೀರಭದ್ರನನ್ನು ಹೊಡೆಯಬಯಸಿ ನುಗ್ಗಿ ಬರುತ್ತಿರುವಷ್ಟರಲ್ಲಿಯೇ, ಆ ಮಹೇಂದ್ರನು ಐರಾವತದ ಮೇಲೆ ಕುಳಿತಿದ್ದಂತೆಯೇ ಅವನನ್ನು ಅಂಬುಗಳಿಂದ ತುಂಬಿಬಿಟ್ಟನು. ಮಹಾಬಲನೂ, ತಡೆಯಲಸದಳನೂ ಆದ ವೀರಭದ್ರನು ಆಗ ಬಹಳವಾಗಿ ರೋಷಗೊಂಡನು. ಇಂದ್ರನಾದರೋ ಶತಪರ್ವವಾದ ವಜ್ರಾಯುಧವನ್ನೆತ್ತಿ ಅವನನ್ನು ಹೊಡೆದನು. ಆಗ ಮೊದಲೇ ರೋಷಗೊಂಡಿದ್ದ ವೀರಭದ್ರನು ಐರಾವತದೊಡನೆಯೂ, ವಜ್ರಾಯುಧದೊಡನೆಯೂ ಸಹಿತವಾಗಿಯೇ ಆ ದೇವೇಂದ್ರನನ್ನು ನುಂಗುವುದಕ್ಕೆ ಉದ್ಯುಕ್ತನಾದನು. ಆಗ ಸಮಸ್ತ ಭೂತಗಳೂ ಬಹಳ ಹಾಹಾಕಾರ ಮಾಡಿದವು.

೬೧–೬೪. ಹೀಗೆ ವೀರಭದ್ರನು ಪುರಂದರನನ್ನು ಹೊಡೆಯಬಯಸಿರುವುದನ್ನು ಕಂಡು ಶ್ರೀ ಮಹಾವಿಷ್ಣುವು ಬಹು ಬೇಗನೆ ಅವನ ಮುಂಗಡೆ ಬಂದು ನಿಂತನು. ಅವನು, ಇಂದ್ರನನ್ನು ಹಿಂದಿಟ್ಟುಕೊಂಡು ಆ ವೀರಭದ್ರನೊಡನೆ

ಶಕ್ರಂ ಚ ಪೃಷ್ಟತಃ ಕೃತ್ವಾ ಯೋಧಯಾಮಾಸ ವೈ ತದಾ ।
ವೀರಭದ್ರಸ್ಯ ವಿಷ್ಣೋಶ್ಚ ಯುದ್ಧಂ ಪರಮಭೂತ್ತದಾ ॥ ೬೨ ॥
ಶಸ್ತ್ರಾಸ್ತ್ರೈರ್ವಿವಿಧಾಕಾರ್ಯೈರ್ಯೋದಯಾಮಾಸತುಸ್ತದಾ ।
ಪುನರ್ನಂದಿನಮಾಲೋಕ್ಯ ಶಕ್ರೋ ಯುದ್ಧವಿಶಾರದಃ ॥ ೬೩ ॥
ದ್ವಂದ್ವಯುದ್ಧಂ ಸುತುಮುಲಂ ದೇವಾನಾಂ ಪ್ರಮಥೈಃಸಹ ।
ಪ್ರಮಥಾ ಮಥಿತಾ ದೇವೈಃ ಸರ್ವೇತೇ ಪ್ರಾದ್ರವನ್ರಣಾತ್ ॥ ೬೪ ॥
ಗಣಾನ್ ಪರಾಙ್ಮುಖಾನ್ ದೃಷ್ಟ್ವಾ ಸರ್ವೇ ತೇ ವ್ಯಾಧಯೋ ಭೃಶಂ ।
ರುದ್ರಕೋಪಾತ್ಸಮುದ್ಭೂತಾ ದೇವಾಶ್ಚಾಪಿ ಪ್ರದುದ್ರುವುಃ ॥ ೬೫ ॥
ಜ್ವರೈಸ್ತು ಪೀಡಿತಾನ್ ದೇವಾನ್ ದೃಷ್ಟ್ವಾ ವಿಷ್ಣುರ್ಹಸನ್ನಿವ ।
ಜೀವಗ್ರಾಹೇಣ ಜಗ್ರಾಹ ದೇವಾಂಸ್ತಾಂಶ್ಚ ಪೃಥಕ್ಪೃಥಕ್ ॥ ೬೬ ॥
ದೇವಾಃಶ್ವಿನೌ ತದಾಹೂಯ ವ್ಯಾಧೀನ್ ಹಂತುಂ ತದಾಭೃಶಂ ।
ದದೌ ತಾಭ್ಯಾಂ ಪ್ರಯತ್ನೇನ ಗಣಯಿತ್ವಾ ಸುವೃದ್ಧಿಮಾನ್ ॥ ೬೭ ॥
ಜ್ವರಾಂಶ್ಚ ಸನ್ನಿಪಾತಾಂಶ್ಚ ಅನ್ಯೇ ಭೂತದ್ರುಹಸ್ತದಾ ।
ತಾನ್ ಸರ್ವಾನ್ನಿಗೃಹೀತ್ವಾಥ ಅಶ್ವಿನೌ ತೌ ಮುದಾನ್ವಿತೌ ।
ವಿಜ್ವರಾನಥ ದೇವಾಂಶ್ಚ ಕೃತ್ವಾ ಮುಮುದತುಶ್ಚಿರಂ ॥ ೬೮ ॥

---

ಕಾದಿದನು. ಆಗ, ವಿಷ್ಣು ವೀರಭದ್ರರ ಈ ಯುದ್ಧವು ಬಹಳವಾಗಿ ಬೆಳೆದು ಹೋಯಿತು. ಅವರೀರ್ವರೂ ಶಸ್ತ್ರಕ್ಕೆ ಶಸ್ತ್ರವನ್ನು ಪ್ರಯೋಗಿಸಿ ಬಗೆಬಗೆಯಾಗಿ ಕಾಳಗ ಮಾಡಿದರು. ಇತ್ತ ಯುದ್ಧವಿಶಾರದನಾದ ದೇವೇಂದ್ರನಾದರೋ ಅಲ್ಲಿಯೇ ಇದ್ದ ನಂದಿಯನ್ನು ಕಂಡು ಮತ್ತೆ ಅವನೊಡನೆ ಯುದ್ಧಕ್ಕೆ ನಿಂತನು. ಇತರ ದೇವತೆಗಳೆಲ್ಲರೂ ಪ್ರಮಥಗಣಗಳೊಡನೆ ದ್ವಂದ್ವಯುದ್ಧ ಮಾಡತೊಡಗಿದರು. ಆ ಪ್ರಮಥಗಣಗಳಾದರೋ ದೇವತೆಗಳಿಂದ ಮಥಿಸಲ್ಪಟ್ಟವರಾಗಿ ರಣರಂಗವನ್ನು ತೊರೆದು ಓಡಿಹೋದರು.

೬೫. ಹೀಗೆ ಶಿವಗಣಗಳೆಲ್ಲವೂ ಸೋತುಹೋದುದನ್ನು ಕಂಡೊಡನೆಯೇ ಪರಮೇಶ್ವರನ ಕೋಪದಿಂದ ಹುಟ್ಟಿದ ವ್ಯಾಧಿಗಳೆಲ್ಲವೂ ದೇವತೆಗಳನ್ನು ಮುತ್ತಿದವು. ಕೂಡಲೇ ದೇವತೆಗಳೆಲ್ಲರೂ ಆ ರಣರಂಗದಲ್ಲಿ ಓಡಿಹೋದರು.

೬೬. ಈ ರೀತಿ ದೇವತೆಗಳೆಲ್ಲರೂ ಜ್ವರಗಳಿಂದ ಪೀಡಿತರಾದುದನ್ನು ಕಂಡು ಮಹಾವಿಷ್ಣುವು ನಸುನಗುತ್ತ ಅವರೆಲ್ಲರನ್ನೂ ಬೇರೆಬೇರೆಯಾಗಿ ಜೀವಗ್ರಾಹದಿಂದೆಳೆದುಹಾಕಿದನು.

೬೭–೬೮. ಮಹಾಬುದ್ಧಿಶಾಲಿಯಾದ ಆ ನಾರಾಯಣನು ಹೀಗೆ ಸೆಳೆದು ಹಾಕಿದ ದೇವತೆಗಳೆಲ್ಲರನ್ನೂ ಲೆಕ್ಕಮಾಡಿ ಅವರಿಗೆ ಬಂದಿದ್ದ ಜ್ವರಾದಿ ವ್ಯಾಧಿಗಳನ್ನು ನಿವಾರಣೆಮಾಡಲೋಸುಗ ಅಶ್ವಿನೀಕುಮಾರರನ್ನು ಕರೆದು ಅವರಿಗೊಪ್ಪಿ

ತೈರ್ಜಿತಂ ಯೋಗಿನೀಚಕ್ರಂ ಭೈರವೋ ವ್ಯಾಕುಲೀಕೃತಃ ।
ತೀಕ್ಷ್ಣಾಗ್ರೈಃ ಪಾತಯಾಮಾಸುಃ ಶರೈರ್ಭೂತಗಣಾನಪಿ ॥ ೧೯ ॥
ಸುರೈರ್ವಿದ್ರಾವಿತಂ ಸೈನ್ಯಂ ವಿಲೋಕ್ಯ ಪತಿತಂ ಭುವಿ ।
ವೀರಭದ್ರೋ ರುಷಾವಿಷ್ಟೋ ವಿಷ್ಣುಂ ವಚನಮಬ್ರವೀತ್ ॥ ೨೦ ॥
ತ್ವಂ ಶೂರೋಸಿ ಮಹಾಬಾಹೋ ದೇವಾನಾಂ ಪಾಲಕೋಹ್ಯಸಿ ।
ಯುದ್ಧ್ಯಸ್ವ ಮಾಂ ಪ್ರಯತ್ನೇನ ಯದಿತೇ ಮತಿರೀದೃಶೀ ॥ ೨೧ ॥
ಇತ್ಯುಕ್ತ್ವಾ ತಂ ಸಮಾಸಾದ್ಯ ವಿಷ್ಣುಂ ಸರ್ವೇಶ್ವರೇಶ್ವರಂ ।
ವವರ್ಷ ನಿಶಿತೈರ್ಬಾಣೈರ್ವೀರಭದ್ರೋ ಮಹಾಬಲಃ ॥ ೨೨ ॥
ತದಾ ಚಕ್ರೇಣ ಭಗವಾನ್ ವೀರಭದ್ರಂ ಜಘಾನ ಸಃ ।
ಆಯಾಂತಂ ಚಕ್ರಮಾಲೋಕ್ಯ ಗ್ರಸಿತಂ ತಕ್ಷಣಾಚ್ಚ ತತ್ ॥ ೨೩ ॥
ಗ್ರಸಿತಂ ಚಕ್ರಮಾಲೋಕ್ಯ ವಿಷ್ಣುಃ ಪರಪುರಂಜಯಃ ।
ಮುಖಂ ತಸ್ಯ ಪರಾಮೃಜ್ಯ ವಿಷ್ಣುನೋದ್ಗಲಿತಂ ಪುನಃ ॥ ೨೪ ॥

---

ಸಿದನು. ಆ ಕುಮಾರರಾದರೋ, ಸಂತುಷ್ಟರಾಗಿ ದೇವತೆಗಳನ್ನು ಮುತ್ತಿದ್ದ ಸಾಮಾನ್ಯ ಜ್ವರಗಳನ್ನೂ, ಸನ್ನಿಪಾತಗಳನ್ನೂ, ಭೂತಪೀಡೆಗಳನ್ನೂ ಸಮಸ್ತ ರುಜಿನಗಳನ್ನೂ ಕಳೆದು ಬಹಳವಾಗಿ ನಲಿದರು.

೧೯. ಹೀಗೆ ಜ್ವರಾದಿ ರೋಗಗಳಿಂದ ಬಿಡುಗಡೆಯಾದ ದೇವತೆಗಳೆಲ್ಲರೂ ಯೋಗಿನೀಚಕ್ರವೆಲ್ಲವನ್ನೂ ಗೆದ್ದು ಭೈರವನನ್ನು ತಳಮಳಗೊಳಿಸಿದರು. ಮೊನಚಾದ ತುದಿಗಳುಳ್ಳ ಬಾಣಗಳನ್ನೆಸೆದು ಭೂತಗಣಗಳೆಲ್ಲವನ್ನೂ ಬೀಳಿಸಿದರು.

೨೦–೨೨. ಆ ದೇವತೆಗಳು ಹೊಡೆದೋಡಿಸಿದ ತನ್ನ ಸೇನೆಯೆಲ್ಲವೂ ನೆಲದಲ್ಲಿ ಬಿದ್ದುದನ್ನು ಕಂಡು ವೀರಭದ್ರನು ಬಹಳವಾಗಿ ರೋಷಗೊಂಡು, ವಿಷ್ಣುವನ್ನು ಕುರಿತು, "ಎಲೈ ಮಹಾಬಾಹುವೇ! ನೀನೇ ಶೂರನು! ಈ ದೇವತೆಗಳೆಲ್ಲರಿಗೂ ರಕ್ಷಕನೂ ಆಗಿರುವೆ! ನಿನಗೆ ದೇವತೆಗಳನ್ನು ಕಾಪಾಡಬೇಕೆಂಬ ಬುದ್ಧಿಯೇ ಇರುವುದಾದರೆ ನನ್ನೊಡನೆ ಸರಿಯಾಗಿ ನಿಂತು ಕಾಳೆಗ ಮಾಡು" ಎಂದು ಹೇಳಿದನು. ಇಂತು ನುಡಿದು ಆ ಮಹಾಬಲನು ಸರ್ವೇಶ್ವರನಾದ ಆ ವಿಷ್ಣುವನ್ನೆದುರಿಸಿ ನಿಂತು ತೀಕ್ಷ್ಣವಾದ ಬಾಣಗಳನ್ನು ಅವನ ಮೇಲೆ ಸುರಿಸಿದನು.

೨೩–೨೫. ಆಗ ವಿಷ್ಣುವು ಆ ವೀರಭದ್ರನ ಮೇಲೆ ಚಕ್ರಾಯುಧವನ್ನು ಪ್ರಯೋಗಿಸಿದನು. ಆ ಚಕ್ರವು ತನ್ನಮೇಲೆರಗಿಬರುತ್ತಿರುವುದನ್ನು ಕಂಡೊಡನೆಯೇ ಅವನದನ್ನು ಕ್ಷಣಮಾತ್ರದಲ್ಲಿಯೇ ನುಂಗಿದನು. ಪರಪುರಂಜಯನಾದ ವಿಷ್ಣುವಾದರೋ ವೀರಭದ್ರನು ತನ್ನ ಚಕ್ರಾಯುಧವನ್ನು ನುಂಗಿದುದನ್ನು ಕಂಡು ಅವನ ಬಾಯನ್ನು ಬಿಡಿಸಿ ಆ ಚಕ್ರವನ್ನು ಮತ್ತೆ ತೆಗೆದುಕೊಂಡನು.

ಸ್ವಚಕ್ರಮಾದಾಯ ಮಹಾನುಭಾವೋ ।
ದಿವಂಗತೋಽಥೋ ಭುವನೈಕಭರ್ತಾ ॥
ಜ್ಞಾತ್ವಾ ಚ ತತ್ಸರ್ವಮಿದಂ ಚ ವಿಷ್ಣುಃ ।
ಕೃತೀ ಕೃತಂ ದುಷ್ಪ್ರಸಹಂ ಪರೇಷಾಂ ॥ ೭೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ವೀರಭದ್ರಾದೀನಾಂ ವಿಷ್ಣ್ವಾದಿಭಿಃ ಸಹ ಯುದ್ಧ ವರ್ಣನಂ" ನಾಮ ಚತುರ್ಥೋಽಧ್ಯಾಯಃ

---

ಮಹಾನುಭಾವನೂ, ಚತುರ್ದಶಭುವನಗಳಿಗೂ ಸ್ವಾಮಿಯೂ ಆದ ಆತನು ಹೀಗೆ ಆ ತನ್ನ ಚಕ್ರವನ್ನು ತೆಗೆದುಕೊಂಡು, ವೀರಭದ್ರನು ಇತರರಾರಿಗೂ ತಡೆಯಲಸಾಧ್ಯನೆಂಬುದನ್ನಲ್ಲದೆ ಅವನ ಕಾರ್ಯವನ್ನೂ ಬಲ್ಲವನಾದುದರಿಂದ ಅಲ್ಲಿ ನಿಲ್ಲದೆ ಒಡನೆಯೇ ಸ್ವರ್ಗಕ್ಕೆ ಹೊರಟುಹೋದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ
ಕೇದಾರಖಂಡದಲ್ಲಿ "ವೀರಭದ್ರ ಕೃತಯುದ್ಧ ವರ್ಣನ"ವೆಂಬ
ನಾಲ್ಕನೆಯ ಅಧ್ಯಾಯವು ಮುಗಿದುದು

ಶ್ರೀಃ

## ಪಂಚಮೋಽಧ್ಯಾಯಃ

### ಶಿವಭಕ್ತಿ ಮಾಹಾತ್ಮ್ಯವರ್ಣನಂ

**ಲೋಮಶ ಉವಾಚ :—**

**ವಿಷ್ಣೌ ಗತೇ ತದಾ ಸರ್ವೇ ದೇವಾಶ್ಚ ಋಷಿಭಿಃ ಸಹ ।**
**ವಿನಿರ್ಜಿತಾ ಗಣೈಃ ಸರ್ವೇ ಯೇಽಚ ಯಜ್ಞೋಪಜೀವಿನಃ ॥ ೧ ॥**
**ಭೃಗುಂ ಚ ಪಾತಯಾಮಾಸ ಶ್ಮಶ್ರೂಣಾಂ ಲುಂಚನಂ ಕೃತಂ ।**
**ದ್ವಿಜಾಂಶ್ಚೋತ್ಪಾಟಯಾಮಾಸ ಪೂಷ್ಣೋ ವಿಕೃತವಿಕ್ರಿಯಾನ್ ॥ ೨ ॥**
**ವಿಡಂಬಿತಾ ಸ್ವಧಾ ತತ್ರ ಋಷಯಶ್ಚ ವಿಡಂಬಿತಾಃ ।**
**ವವೃಷುಸ್ತೇ ಪುರೀಷೇಣ ವಿತಾನಾಗ್ನೌ ರುಷಾನ್ವಿತಾಃ ॥ ೩ ॥**
**ಅನಿರ್ವಾಚ್ಯಂ ತದಾ ಚಕ್ರುರ್ಗಣಾಃ ಕ್ರೋಧಸಮನ್ವಿತಾಃ ।**
**ಅಂತರ್ವೇದ್ಯಂತರಗತೋ ದಕ್ಷೋ ವೈ ಮಹತೋ ಭಯಾತ್ ॥ ೪ ॥**

---

### ಕನ್ನಡದ ಅನುವಾದ

### ಶಿವಭಕ್ತಿ ಮಾಹಾತ್ಮ್ಯವರ್ಣನ

೧. ಲೋಮಶನು ಹೇಳುತ್ತಾನೆ:—ಎಲೈ ಮುನಿಗಳಿರಾ! ಶ್ರೀ ಮಹಾವಿಷ್ಣುವು ವೈಕುಂಠಕ್ಕೆ ಹೊರಟುಹೋದ ಬಳಿಕ, ದಕ್ಷನ ಯಜ್ಞವಾಟಿಕೆಯಲ್ಲಿದ್ದ ಋಷಿಗಳೊಡಗೂಡಿದ ಸಮಸ್ತ ದೇವತೆಗಳನ್ನೂ, ಯಜ್ಞಗಳಿಂದಲೇ ಹೊಟ್ಟೆ ಹೊರೆದುಕೊಳ್ಳುತ್ತಿದ್ದ ಇತರರನ್ನೂ ಆ ಶಿವಕಿಂಕರರು ಬಹುಬೇಗನೆಯೇ ಪರಾಜಯಗೊಳಿಸಿದರು.

೨–೪. ಆ ಶಿವಕಿಂಕರರು, ಭೃಗುವನ್ನು ಕೆಡವಿ, ಅವನ ಗಡ್ಡ ಮೀಸೆಗಳನ್ನು ಕಿತ್ತುಹಾಕಿದುದಲ್ಲದೆ, ಅಲ್ಲಿದ್ದ ಬ್ರಾಹ್ಮಣರೆಲ್ಲರನ್ನೂ ಹೊಡೆದೆಬ್ಬಿಸಿ ಹೊರದೂಡಿದರು. ಪೂಷಾ ಮತ್ತು ಸ್ವಧಾ ದೇವತೆಗಳನ್ನೂ, ಋಷಿಗಳನ್ನೂ ವಿಕಾರವಾದ ಚೇಷ್ಟೆಗಳಿಂದ ಬಹಳ ಅಸಹ್ಯವಾಗಿ ಅಣಕಿಸಿದರು. ಇಷ್ಟೆಯಲ್ಲದೆ, ಆ ವೀರಭದ್ರಾನುಯಾಯಿಗಳು ಬಹಳವಾಗಿ ರೋಷಗೊಂಡು ದುರುಳನಾದ ಆ ದಕ್ಷನೆಸಗುತ್ತಿದ್ದ ಯಜ್ಞದ ಪವಿತ್ರವಾದ ಅಗ್ನಿಕುಂಡದಲ್ಲಿ ಹೇಳಬಾರದುದನ್ನೆಲ್ಲ ತಂದು ಸುರಿದು ಅಪವಿತ್ರಗೊಳಿಸಿದರು. ಬಹಳವಾಗಿ ಕೆರಳಿಹೋಗಿದ್ದ ಆ ಶಿವಗಣಗಳು ಆ ಯಜ್ಞವಾಟಿಕೆಯಲ್ಲಿ ಬಾಯಲ್ಲಿ ಹೇಳಬಾರದುದನ್ನೆಲ್ಲ ಮಾಡಿಬಿಟ್ಟರು. ಆಗ ದಕ್ಷನು ಬಹುವಾಗಿ ಹೆದರಿ ಯಜ್ಞಮಂಟಪದ ಒಳಮನೆಯಲ್ಲಿ ಅಡಗಿಕೊಂಡನು.

ತಂ ನಿಲೀನಂ ಸಮಾಜ್ಞಾಯ ಆನಿನಾಯ ರುಷಾನ್ವಿತಃ ।
ಕಪೋಲೇಷು ಗೃಹೀತ್ವಾ ತು ಖಡ್ಗೇನೋಪಹತಂ ಶಿರಃ ॥ ೫ ॥
ಅಭೇದ್ಯಂ ತಚ್ಛಿರೋ ಮತ್ವಾ ವೀರಭದ್ರಃ ಪ್ರತಾಪವಾನ್ ।
ಸ್ಕಂದಂ ಪದ್ಭ್ಯಾಂ ಸಮಾಕ್ರಮ್ಯ ಕಂಧರೋಽಪೀಡಯತ್ತದಾ ॥ ೬ ॥
ಕಂಧರಾತ್ಪ್ರಾಟ್ಯಮಾನಾಚ್ಚ ಶಿರಶ್ಛಿನ್ನಂ ದುರಾತ್ಮನಃ ।
ದಕ್ಷಸ್ಯ ಚ ತದಾ ತೇನ ವೀರಭದ್ರೇಣ ಧೀಮತಾ ।
ತಚ್ಛಿರಃ ಸುಹುತಂ ಕುಂಡೇ ಜ್ವಲಿತೇ ತಕ್ಷಣಾತ್ತದಾ ॥ ೭ ॥
ಯೇ ಚಾನ್ಯ ಋಷಯೋ ದೇವಾಃ ಪಿತರೋ ಯಕ್ಷರಾಕ್ಷಸಾಃ ।
ಗಣೈರುಪದ್ರುತಾಃ ಸರ್ವೇ ಪಲಾಯನಪರಾ ಯಯುಃ ॥ ೮ ॥
ಚಂದ್ರಾದಿತ್ಯಗಣಾಃ ಸರ್ವೇ ಗ್ರಹನಕ್ಷತ್ರತಾರಕಾಃ ।
ಸರ್ವೇ ವಿಚಲಿತಾ ಹ್ಯಾಸನ್‌ಗಣೈಸ್ತೇಪಿ ಹ್ಯುಪದ್ರುತಾಃ ॥ ೯ ॥
ಸತ್ಯಲೋಕಂ ಗತೋ ಬ್ರಹ್ಮಾ ಪುತ್ರಶೋಕೇನ ಪೀಡಿತಃ ।
ಚಿಂತಯಾಮಾಸ ಚಾವ್ಯಗ್ರಃ ಕಿಂ ಕಾರ್ಯಂ ಕಾರ್ಯಮದ್ಯ ವೈ ॥ ೧೦ ॥

---

೫. ಆಗ ವೀರಭದ್ರನು, ಈ ರೀತಿ ದಕ್ಷನು ಬೈತಿಟ್ಟುಕೊಂಡಿರುವನೆಂಬ ಸಂಗತಿಯನ್ನರಿತು, ರೋಷಸಮನ್ವಿತನಾಗಿ ಅವನನ್ನೆಳೆದುತಂದು, ಅವನೆರಡೂ ಕೆನ್ನೆಗಳನ್ನು ಹಿಡಿದೆತ್ತಿ ಖಡ್ಗವನ್ನು ಹಿರಿದು ಅವನ ತಲೆಯನ್ನು ಕತ್ತರಿಸಿದನು.

೬. ಆದರೆ ಆ ತಲೆಯು ಕತ್ತಿಯ ಪೆಟ್ಟಿಗೆ ಕತ್ತರಿಸದಿದ್ದುದನ್ನು ಕಂಡು ಮಹಾ ಪರಾಕ್ರಮಿಯಾದ ಅವನು ತನ್ನೆರಡೂ ಕಾಲುಗಳಿಂದ ಅವನ ಹೆಗಲನ್ನು ಅದುಮಿ ಕುತ್ತಿಗೆಯನ್ನು ತಿರುವಿದನು.

೭. ಬುದ್ಧಿಶಾಲಿಯಾದ ಆ ವೀರಭದ್ರನಿಂತೆಸಗಲು ದುರುಳನಾದ ಆ ದಕ್ಷನ ಹೆಗಲಿನಿಂದ ತಲೆಯು ಕಿತ್ತುಬಂದಿತು. ಆ ಕೂಡಲೇ ಅವನು ಆ ತಲೆಯನ್ನು ಧಗಧಗನುರಿಯುತ್ತಿರುವ ಯಜ್ಞಕುಂಡದಲ್ಲಿ ಹಾಕಿ ಚೆನ್ನಾಗಿ ಸುಟ್ಟು ಬೂದಿ ಮಾಡಿದನು.

೮. ಇದಾದ ಬಳಿಕ, ಆ ಯಜ್ಞಕುಂಡದಲ್ಲಿ ಕಳೆದುಳಿದಿದ್ದ ಋಷಿಗಳೂ, ದೇವತೆಗಗೂ, ಪಿತೃದೇವತೆಗಳೂ, ಯಕ್ಷರಾಕ್ಷಸರೂ, ಶಿವಗಣಗಳು ತಮ್ಮನ್ನು ಅಟ್ಟಿಬರಲು ಎಲ್ಲರೂ ಪಲಾಯನಪರಾಯಣರಾದರು.

೯. ಚಂದ್ರನೂ, ದ್ವಾದಶಾದಿತ್ಯರೂ, ಗ್ರಹನಕ್ಷತ್ರ ತಾರಕೆಗಳೂ, ಶಿವಗಣಗಳು ಓಡಿಸಲು ಎಲ್ಲರೂ ತಂತಮ್ಮ ಸ್ಥಳಗಳಿಂದಲೇ ಚಲಿಸಿಹೋದರು.

೧೦–೧೪. ಬ್ರಹ್ಮದೇವನು, ಮಗನು ಮಡಿದುದರ ಸಲುವಾಗಿ ತುಂಬ ಖತಿಗೊಂಡು ಸತ್ಯಲೋಕಕ್ಕೆ ಹೊರಟುಹೋದನು. ಹೀಗೆ ತನ್ನ ಲೋಕಕ್ಕೆ ಹೋಗಿ ಸೇರಿದ ಬಳಿಕಲೂ ಆ ಚತುರಾನನು, ಈಗ ಮಾಡತಕ್ಕ ಕಾರ್ಯವೇನೆಂದು

ಮನಸಾ ದೂಯಮಾನೇನ ಶಂ ನ ಲೇಭೇ ಪಿತಾಮಹಃ ।
ಜ್ಞಾತ್ವಾ ಸರ್ವಂ ಪ್ರಯತ್ನೇನ ದುಷ್ಕೃತಂ ತಸ್ಯ ಪಾಪಿನಃ ॥ ೧೧ ॥
ಗಮನಾಯ ಮತಿಂ ಚಕ್ರೇ ಕೈಲಾಸಂ ಪರ್ವತಂ ಪ್ರತಿ ।
ಹಂಸಾರೂಢೋ ಮಹತೇಜಾಃ ಸರ್ವದೇವೈಃ ಸಮನ್ವಿತಃ ॥ ೧೨ ॥
ಪ್ರವಿಷ್ಟಃ ಪರ್ವತಶ್ರೇಷ್ಠಂ ಸ ದದರ್ಶ ಸದಾಶಿವಂ ।
ಏಕಾಂತವಾಸಿನಂ ರುದ್ರಂ ಶೈಲಾದೇನ ಸಮನ್ವಿತಂ ॥ ೧೩ ॥
ಕಪರ್ದಿನಂ ಶ್ರಿಯಾ ಯುಕ್ತಂ ವೇದಾಂಗಾನಾಂಚ ದುರ್ಗಮಂ ।
ತಥಾ ವಿಧಂ ಸಮಾಲೋಕ್ಯ ಬ್ರಹ್ಮಾ ಕ್ಷೋಭಪರೋಽಭವತ್ ॥ ೧೪ ॥
ದಂಡವತ್ಪತಿತೋ ಭೂಮೌ ಕ್ಷಮಾಪಯಿತುಮುದ್ಯತಃ ।
ಸಂಸ್ಪೃಶಂಸ್ತತ್ಪದಾಬ್ಜಂ ಚ ಚತುರ್ಮಕುಟಕೋಟಿಭಿಃ ।
ಸ್ತುತಿಂ ಕರ್ತುಂಸಮಾರೇಭೇ ಶಿವಸ್ಯ ಪರಮಾತ್ಮನಃ ॥ ೧೫ ॥

ಬ್ರಹ್ಮೋವಾಚ :—

ನಮೋ ರುದ್ರಾಯ ಶಾಂತಾಯ ಬ್ರಹ್ಮಣೇ ಪರಮಾತ್ಮನೇ ।
ತ್ವಂ ಹಿ ವಿಶ್ವಸೃಜಾಂ ಸ್ರಷ್ಟಾ ಧಾತಾ ತ್ವಂ ಪ್ರಪಿತಾಮಹಃ ॥ ೧೬ ॥

---

ಬಹಳವಾಗಿ ಯೋಚಿಸಿದನು. ತರುವಾಯ ಆ ಮಹಾತೇಜಸ್ವಿಯು ಹಂಸಾರೂಢನಾಗಿ ಸಮಸ್ತದೇವತೆಗಳನ್ನೂ ಹಿಂದಿಟ್ಟುಕೊಂಡು ಪರ್ವತೋತ್ತಮವಾದ ಕೈಲಾಸಗಿರಿಗೈತಂದು ಶೈಲಾದನೊಡನೆ ಏಕಾಂತವಾಸಿಯಾಗಿದ್ದ ಸದಾಶಿವನನ್ನು ಸಂದರ್ಶಿಸಿದನು. ಉಪನಿಷತ್ತುಗಳಿಗಾಗಲಿ, ವೇದಾಂಗಗಳಾದ ಶಿಕ್ಷಾವ್ಯಾಕರಣಾದಿ ಶಾಸ್ತ್ರಗಳಿಗಾಗಲಿ ನಿಲುಕದ ಆ ಕಪರ್ದಿಯು ಮಹಾತೇಜನಾಗಿ ಅಲ್ಲಿ ರಾರಾಜಿಸುತ್ತಿದ್ದನು. ಇಂತಿರುವ ಆ ದೇವದೇವನನ್ನು ಕಂಡು ಬ್ರಹ್ಮನು ಭಯಭಕ್ತಿಗಳಿಂದ ತಳಮಳಿಸಿ ದುಃಖಕ್ಕೆ ತುತ್ತಾಗಿಹೋದನು.

೧೫. ಆಗಲಾತನು ಆ ಪರಮಶಿವನಡಿಗೆ ದೀರ್ಘದಂಡ ಪ್ರಣಾಮ ಮಾಡಿ ತನ್ನ ನಾಲ್ಕೂ ತಲೆಗಳ ಮುಡಿತುದಿಗಳನ್ನೂ ಸೋಕಿಸಿ ಪರಮಾತ್ಮನಾದ ಆತನ ಕ್ಷಮಾಪಣೆಯನ್ನು ಕೇಳಿಕೊಳ್ಳಲೋಸುಗವೂ, ಆತನನ್ನು ಪ್ರಸನ್ನನನ್ನಾಗಿಸಿಕೊಳ್ಳಲೋಸುಗವೂ ಆತನನ್ನು ಈ ರೀತಿ ಸ್ತೋತ್ರಮಾಡಲುಪಕ್ರಮಿಸಿದನು.

೧೬. ಬ್ರಹ್ಮನು ಸ್ತುತಿಸುತ್ತಾನೆ:—"ಓ ಪರಮೇಶ್ವರಾ! ಪರಮಾತ್ಮನೂ, ಪರಬ್ರಹ್ಮನೂ, ಶಾಂತನೂ, ರುದ್ರಮೂರ್ತಿಯೂ ಆದ ನಿನಗೆ ನಮೋ ನಮಃ! ಓ ಪರಮಾತ್ಮಾ! ಪ್ರಪಂಚವನ್ನು ಸೃಷ್ಟಿಮಾಡುವ ನನ್ನಂತಹ ಬ್ರಹ್ಮರಿಗೆಲ್ಲರಿಗೂ ನೀನೇ ಸೃಷ್ಟಿಕರ್ತನು. ನೀನೇ ಧಾತೃವು. ಪಿತಾಮಹನಾದ ನನಗೂ ನೀನೇ ಪ್ರಪಿತಾಮಹನು.

ನಮೋ ರುದ್ರಾಯ ಮಹತೇ ನೀಲಕಂಠಾಯ ವೇಧಸೇ ।
ವಿಶ್ವಾಯ ವಿಶ್ವಬೀಜಾಯ ಜಗದಾನಂದಹೇತವೇ ॥ ೧೭ ॥
ಓಂಕಾರಸ್ತ್ವಂ ವಷಟ್ಕಾರಃ ಸರ್ವಾರಂಭಪ್ರವರ್ತಕಃ ।
ಯಜ್ಞೋಽಸಿ ಯಜ್ಞಕರ್ಮಾಸಿ ಯಜ್ಞಾನಾಂ ಚ ಪ್ರವರ್ತಕಃ ॥ ೧೮ ॥
ಸರ್ವೇಷಾಂ ಯಜ್ಞಕರ್ತೄಣಾಂ ತ್ವಮೇವ ಪ್ರತಿಪಾಲಕಃ ।
ಶರಣ್ಯೋಽಸಿ ಮಹಾದೇವ ಸರ್ವೇಷಾಂ ಪ್ರಾಣಿನಾಂ ಪ್ರಭೋ ।
ರಕ್ಷ ರಕ್ಷ ಮಹಾದೇವ ಪುತ್ರಶೋಕೇನ ಪೀಡಿತಂ ॥ ೧೯ ॥

ಮಹಾದೇವ ಉವಾಚ :—

ಶೃಣುಷ್ವಾವಹಿತೋ ಭೂತ್ವಾ ಮಮ ವಾಕ್ಯಂ ಪಿತಾಮಹ ।
ದಕ್ಷಸ್ಯ ಯಜ್ಞಭಂಗೋಽಯಂ ನಕೃತಶ್ಚ ಮಯಾ ಕ್ವಚಿತ್ ॥ ೨೦ ॥
ಸ್ವಿಯೇನ ಕರ್ಮಣಾ ದಕ್ಷೋ ಹತೋ ಬ್ರಹ್ಮನ್ ನಸಂಶಯಃ ॥ ೨೧ ॥
ಪರೇಷಾಂ ಕ್ಲೇಶದಂ ಕರ್ಮ ನ ಕಾರ್ಯಂ ತತ್ಕದಾಚನ ।
ಪರಮೇಷ್ಠಿನ್ ಪರೇಷಾಂ ಯದಾತ್ಮನಸ್ತದ್ಭವಿಷ್ಯತಿ ॥ ೨೨ ॥

---

೧೭–೧೮. ರುದ್ರನೂ, ಮಹತ್ತರನೂ, ನೀಲಕಂಠನೂ, ಸರ್ವಜ್ಞನೂ, ವಿಶ್ವಸ್ವರೂಪನೂ, ವಿಶ್ವದ ಆನಂದಕ್ಕೇ ಕಾರಣನೂ ಆದ ನಿನಗೆ ನಮುಸ್ಕಾರವು! ಶಂಕರಾ!! ಓಂಕಾರವೂ, ವಷಟ್ಕಾರವೂ ನೀನೇ ಆಗಿರುವೆ. ಜಗತ್ತಿನಲ್ಲಿ ನಡೆಯುವ ಎಲ್ಲ ಉದ್ಯಮಗಳನ್ನು ನಡೆಯಿಸುವವನೂ ನೀನೇ. ನೀನೇ ಯಜ್ಞ ಸ್ವರೂಪನಾಗಿರುವೆ. ಯಜ್ಞಕರ್ಮವು ನೀನೇ ಆಗಿ ಆ ಯಜ್ಞಗಳೆಲ್ಲಕ್ಕೂ ಪ್ರವರ್ತಕನೂ ನೀನೇ ಆಗಿರುವೆ!

೧೯. ಯಜ್ಞಗಳನ್ನು ಮಾಡುವವರೆಲ್ಲರಿಗೂ ಸಾಕ್ಷಿಭೂತನಾಗಿದ್ದುಕೊಂಡು ಅವರನ್ನು ಸಂರಕ್ಷಿಸುವಾತನೂ ನೀನೇ! ಮಹಾದೇವ! ನೀನೇ ಸಮಸ್ತ ಪ್ರಾಣಿಗಳಿಗೂ ಶರಣ್ಯನೂ ಆಗಿರುವೆ! ಇಂತಹ ಪರಮಪೂಜ್ಯನಾದ ನೀನು ಪುತ್ರಶೋಕದಿಂದ ಪೀಡಿತನಾಗಿರುವ ನನ್ನನ್ನು ಕಾಪಾಡು; ಕಾಪಾಡು!!"

೨೦. ಆಗ ಮಹಾದೇವನು ಆ ಬ್ರಹ್ಮನನ್ನು ಕುರಿತು ಹೇಳುತ್ತಾನೆ:— "ಅಯ್ಯಾ ಪಿತಾಮಹನೇ! ಈಗ ನಾನು ಹೇಳುವುದನ್ನು ಮನಸ್ಸಿಟ್ಟು ಕೇಳು. ನಿನ್ನ ಮಗನಾದ ಆ ದಕ್ಷನ ಯಜ್ಞವನ್ನು ನಾನು ಎಷ್ಟುಮಾತ್ರಕ್ಕೂ ನಾಶಗೊಳಿಸಿದವನೇ ಅಲ್ಲ.

೨೧–೨೨. ಭೋ ಬ್ರಹ್ಮನ್! ಆ ದಕ್ಷನು ತಾನು ಮಾಡಿದ ಕರ್ಮದಿಂದಲೇ ಅವನು ನಾಶವಾಗಿಹೋದನು. ಕೇಳು; ಯಾರೇ ಆಗಲಿ, ಇತರರಿಗೆ ನೋವನ್ನುಂಟುಮಾಡುವಂತಹ ಕಾರ್ಯಗಳನ್ನೆಂದಿಗೂ ಮಾಡಬಾರದು. ಅಯ್ಯಾ ಪರಮೇಷ್ಠಿಯೇ! ಹಾಗೊಂದುವೇಳೆ ಮಾಡಿದಲ್ಲಿ, ಆ ಕಾರ್ಯವನ್ನು

ಏವಮುಕ್ತ್ವಾ ತದಾ ರುದ್ರೋ ಬ್ರಹ್ಮಣಾ ಸಹಿತಃ ಸುರೈಃ ।
ಯಯೌ ಕನಖಲಂ ತೀರ್ಥಂ ಯಜ್ಞವಾಟಂ ಪ್ರಜಾಪತೇಃ ॥ ೨೩ ॥
ರುದ್ರಸ್ತದಾ ದದರ್ಶಾಥ ವೀರಭದ್ರೇಣ ಯತ್ಕೃತಂ ।
ಸ್ವಾಹಾ ಸ್ವಧಾ ತಥಾ ಪೂಷಾ ಭೃಗುಮತಿಮತಾಂ ವರಃ ॥ ೨೪ ॥
ತಥಾನ್ಯ ಋಷಯಃ ಸರ್ವೇ ಪಿತರಶ್ಚ ತಥಾ ವಿಧಾಃ ।
ಯೇಽನ್ಯೇಚ ಬಹವಸ್ತತ್ರ ಯಕ್ಷಗಂಧರ್ವಕಿನ್ನರಾಃ ॥ ೨೫ ॥
ತ್ರೋಟಿತಾ ಮುಂಚಿತಾಶ್ಚೈವ ಮೃತಾಃ ಕೇಚಿದ್ರಣಾಜಿರೇ ॥ ೨೬ ॥
ಶಂಭುಂ ಸಮಾಗತಂ ದೃಷ್ಟ್ವಾ ವೀರಭದ್ರೋ ಗಣೈಃ ಸಹ ।
ದಂಡಪ್ರಣಾಮಸಂಯುಕ್ತಸ್ತಸ್ಥಾವಗ್ರೇ ಸದಾಶಿವಂ ॥ ೨೭ ॥
ದೃಷ್ಟ್ವಾ ಪುರಃಸ್ಥಿತಂ ರುದ್ರೋ ವೀರಭದ್ರಂ ಮಹಾಬಲಂ ।
ಉವಾಚ ಸಪ್ರಹಸ್ವಾಕ್ಯಂ ಕಿಂ ಕೃತಂ ವೀರ ನನ್ವಿದಂ ॥ ೨೮ ॥
ದಕ್ಷಮಾನಯ ಶೀಘ್ರಂ ಭೋ ಯೇನೇದಂಕೃತಮೀದೃಶಂ ।
ಯಜ್ಞೋ ವಿಲಕ್ಷಣಂ ತಾತ ಯಸ್ಯೇದಂ ಫಲಮೀದೃಶಂ ॥ ೨೯ ॥

---

ಮಾಡಿದಾತನು ಆ ಇತರರು ಎಷ್ಟರಮಟ್ಟಿಗೆ ಮನಸ್ಸಿನಲ್ಲಿ ಸಂಕಟಪಡುವರೋ ಅಷ್ಟೇಮಟ್ಟಿನ ಕಷ್ಟಕ್ಕೀಡಾಗುತ್ತಾನೆ.''

೨೩. ಆ ರುದ್ರಮೂರ್ತಿಯು ಬ್ರಹ್ಮನಿಗೆ ಈ ರೀತಿ ಅಪ್ಪಣೆಕೊಡಿಸಿ ಅವನೊಡನೆಯೂ, ಸಮಸ್ತ ಸುರರೊಡನೆಯೂ ದಕ್ಷಪ್ರಜಾಪತಿಯ ಯಜ್ಞವಾಟಿಕೆಯಿದ್ದ ಕನಖಲ ಕ್ಷೇತ್ರಕ್ಕೆ ಬಿಜಮಾಡಿದನು.

೨೪–೨೬. ಆಗ, ತನ್ನ ಜಟಾಸಂಭೂತನಾದ ವೀರಭದ್ರನೆಸಗಿದ್ದುದೆಲ್ಲವನ್ನೂ ಆ ಮಹಾದೇವನು ಕಂಡನು. ಸ್ವಾಹಾ, ಸ್ವಧಾ, ಪೂಷಾ ದೇವತೆಗಳೂ, ಬುದ್ಧಿವಂತರಲ್ಲೆಲ್ಲ ಉತ್ತಮನಾದ ಭೃಗುಮಹರ್ಷಿಯೂ, ಇತರ ಋಷಿಪುಂಗವರೂ, ಸಮಸ್ತ ಪಿತೃದೇವತೆಗಳೂ, ಅವರಂತೆಯೇ ಇತರ ಬಹುಮಂದಿ ಯಕ್ಷಗಂಧರ್ವ ಕಿನ್ನರರೂ ಎಲ್ಲರೂ ದುರವಸ್ಥೆಗೀಡಾಗಿದ್ದರು. ಶಿವಗಣಗಳು ಅವರಲ್ಲಿ ಕೆಲವರನ್ನು ಕತ್ತರಿಸಿಯೂ ಕೆಡವಿದ್ದರು; ಕೆಲವರನ್ನು ಮುರಿದುಹಾಕಿದ್ದರು. ಅವರಲ್ಲಿ ಕೆಲವರಂತು, ಆ ಶಿವಗಣಗಳೊಡನೆ ಹೋರಾಡಿ ಮಡಿದುಹೋಗಿದ್ದರು.

೨೭. ಆಗ ತಮ್ಮ ಪ್ರಭುವಾದ ಶಂಭುವು ಆಗಮಿಸಿದುದನ್ನು ಕಂಡು ಒಡನೆಯೇ ಆ ವೀರಭದ್ರನು ತನ್ನ ಗಣಗಳೆಲ್ಲರೊಡನೆ ಆ ಸದಾಶಿವನಿಗೆ ದೀರ್ಘದಂಡ ಪ್ರಣಾಮವನ್ನೆಸಗಿ ಆತನ ಮುಂದೆ ನಿಂತನು

೨೮–೨೯. ಶ್ರೀ ರುದ್ರದೇವನು ತನ್ನ ಮುಂಗಡೆ ಬಂದು ನಿಂತ ಮಹಾಬಲನಾದ ಆ ವೀರಭದ್ರನನ್ನು ಕಂಡು ನಗುತ್ತ, ''ಅಯ್ಯಾ ವೀರನೇ! ಎಂತಹ ಕಾರ್ಯವನ್ನು ಮಾಡಿಬಿಟ್ಟೆ? ಏನಿದು? ಹೋಗು; ಯಾವನು ಇಂತಹ

**ಏವಮುಕ್ತಃ ಶಂಕರೇಣ ವೀರಭದ್ರಸ್ತ್ವರಾನ್ವಿತಃ ।**
**ಕಬಂಧಮಾನಯಿತ್ವಾಥ ಶಂಭೋರಗ್ರೇ ತದಾಕ್ಷಿಪತ್ ॥ ೩೦ ॥**
**ತದೋಕ್ತಃ ಶಂಕರೇಣೈವ ವೀರಭದ್ರೋ ಮಹಾಮನಾಃ ।**
**ಶಿರಃ ಕೇನಾಪನೀತಂಚ ದಕ್ಷಸ್ಯಾಸ್ಯ ದುರಾತ್ಮನಃ ॥ ೩೧ ॥**
**ದಾಸ್ಯಾಮಿ ಜೀವನಂ ವೀರ ಕುಟಿಲಸ್ಯಾಪಿ ಚಾಧುನಾ ।**
**ಏವಮುಕ್ತಃ ಶಂಕರೇಣ ವೀರಭದ್ರೋಽಬ್ರವೀತ್ಪುನಃ ॥ ೩೨ ॥**
**ಮಯಾ ಶಿರೋ ಹುತಂ ಚಾಗ್ನೌ ತದಾನೀಮೇವ ಶಂಕರ ।**
**ಅವಶಿಷ್ಟಂ ಶಿರಃ ಶಂಭೋ ಪಶೋಶ್ಚ ವಿಕೃತಾನನಂ ॥ ೩೩ ॥**
**ಇತಿ ಜ್ಞಾತ್ವಾ ತತೋ ರುದ್ರಃ ಕಬಂಧೋಪರಿ ಚಾಕ್ಷಿಪತ್ ।**
**ಶಿರಃ ಪಶೋಶ್ಚ ವಿಕೃತಂ ಕೂರ್ಚಯುಕ್ತಂ ಭಯಾವಹಂ ॥ ೩೪ ॥**
**ಸದಕ್ಷೋ ಜೀವಿತಂ ಲೇಭೇ ಪ್ರಸಾದಾಚ್ಛಂಕರಸ್ಯಚ ।**
**ಸ ದೃಷ್ಟ್ವಾಗ್ರೇ ತದಾ ರುದ್ರಂ ದಕ್ಷೋ ಲಜ್ಜಾಸಮನ್ವಿತಃ ।**
**ತುಷ್ಟಾವ ಪ್ರಣತೋ ಭೂತ್ವಾ ಶಂಕರಂ ಲೋಕಶಂಕರಂ ॥ ೩೫ ॥**

---

ವಿಲಕ್ಷಣವಾದ ಯಾಗವನ್ನು ಮಾಡಿ ಇಂತಹ ಫಲವನ್ನು ಪಡೆದನೋ ಆ ದಕ್ಷನನ್ನು ಜಾಗ್ರತೆಯಾಗಿ ಇಲ್ಲಿಗೆ ಕರೆದುಕೊಂಡುಬಾ'' ಎಂದು ಹೇಳಿದನು.

೩೦. ಶಂಕರನಿಂತೆನಲು ವೀರಭದ್ರನು ತ್ವರಾನ್ವಿತನಾಗಿ ಹೊರಟು ದಕ್ಷನ ಕಬಂಧವನ್ನು ತಂದು ಆ ಪರಶಿವನ ಮುಂಗಡೆ ಹಾಕಿದನು.

೩೧–೩೩. ಆಗ ಶಂಕರನು ಮಹಾಮನಸ್ವಿಯಾದ ವೀರಭದ್ರನನ್ನು ಕುರಿತು ''ಎಲೈ! ದುರಾತ್ಮನಾದ ಈ ದಕ್ಷನ ತಲೆಯನ್ನು ಕೊಂಡುಹೋದವರಾರು? ಅದನ್ನು ಜಾಗ್ರತೆಯಾಗಿ ತೆಗೆದುಕೊಂಡು ಬರುವವನಾಗು. ಇವನು ಬಹಳ ವಕ್ರವಾದ ಬುದ್ಧಿಯುಳ್ಳವನಾದರೂ ನಾನಿವನಿಗೆ ಜೀವವನ್ನು ಕರುಣಿಸುವೆನು'' ಎಂದನು. ಶಿವನಿಂತು ನುಡಿಯಲು ವೀರಭದ್ರನು ಮತ್ತೆ ಆ ಸ್ವಾಮಿಯನ್ನು ಕುರಿತು, ''ಶಂಕರಾ! ನಾನು ಇವನ ತಲೆಯನ್ನು ಆಗಲೇ ಬೆಂಕಿಯಲ್ಲಿ ಹಾಕಿ ಸುಟ್ಟುಬಿಟ್ಟೆನು. ಓ ಶಂಭುವೇ! ಈಗ ಉಳಿದಿರುವುದು ಯಜ್ಞಪಶುವಿನ ವಿಕಾರವಾದ ಮುಖವುಳ್ಳ ತಲೆಯೊಂದೇ'' ಎಂದು ಅರಿಕೆ ಮಾಡಿದನು.

೩೪–೩೫. ವೀರಭದ್ರನಿಂದ ಈ ವಾರ್ತೆಯನ್ನು ತಿಳಿದು ಆ ರುದ್ರನು ದರ್ಭೆಯ ಕೂರ್ಚೆಯೊಡಗೂಡಿ ಭಯಂಕರವಾಗಿದ್ದ ಆ ಪಶುವಿನ ತಲೆಯನ್ನೇ ಆ ದಕ್ಷನ ಕಬಂಧದ ಮೇಲೆಸೆದನು. ಒಡನೆಯೇ ಅವನು ಶಂಕರನ ಪ್ರಸಾದ ದಿಂದ ಜೀವಿತವನ್ನು ಪಡೆದನು. ಅವನು ತನ್ನ ಮುಂಗಡೆಯೇ ನಿಂತಿದ್ದ ಆ ರುದ್ರನನ್ನು ಕಂಡು ನಾಚಿ, ಒಡನೆಯೇ ಭಕ್ತಿನಮ್ರನಾಗಿ, ಲೋಕಕ್ಕೆಲ್ಲ ಮಂಗಳವನ್ನುಂಟುಮಾಡುವ ಆ ಶಂಕರನಿಗೆ ಮಣಿದು, ಈ ರೀತಿ ಆತನನ್ನು ಸ್ತುತಿಸಿ ಸಂತೋಷಗೊಳಿಸಿದನು.

ದಕ್ಷ ಉವಾಚ :—

**ನಮಾಮಿ ದೇವಂ ವರದಂ ವರೇಣ್ಯಂ, ನಮಾಮಿದೇವೇಶವರಂ ಸನಾತನಂ।**
**ನಮಾಮಿ ದೇವಾಧಿಪಮೀಶ್ವರಂ ಹರಂ ನಮಾಮಿ ಶಂಭುಂ ಜಗದೇಕಬಂಧುಂ॥**
**ನಮಾಮಿ ವಿಶ್ವೇಶ್ವರ ವಿಶ್ವರೂಪಂ, ಸನಾತನಂ ಬ್ರಹ್ಮ ನಿಜಾತ್ಮರೂಪಂ ।**
**ನಮಾಮಿ ಸರ್ವಂ ನಿಜಭಾವಭಾವಂ, ವರಂ ವರೇಣ್ಯಂ ವರದಂ ನತೋಽಸ್ಮಿ॥**

ಲೋಮಶ ಉವಾಚ :—

**ದಕ್ಷೇಣ ಸಂಸ್ತುತೋ ರುದ್ರೋ ಬಭಾಷೇ ಪ್ರಹಸನ್ ಹರಃ ॥ ೩೮ ॥**

ಹರ ಉವಾಚ :—

**ಚತುರ್ವಿಧಾ ಭಜಂತೇ ಮಾಂ ಜನಾಃ ಸುಕೃತಿನಃ ಸದಾ ।**
**ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀಚ ದ್ವಿಜಸತ್ತಮ ॥ ೩೯ ॥**
**ತಸ್ಮಾನ್ಮೇ ಜ್ಞಾನಿನಃ ಸರ್ವೇ ಪ್ರಿಯಾಸ್ಯುರ್ನಾತ್ರಸಂಶಯಃ ।**
**ವಿನಾ ಜ್ಞಾನೇನ ಮಾಂ ಪ್ರಾಪ್ತುಂ ಯತಂತೇ ತೇ ಹಿ ಬಾಲಿಶಾಃ ॥ ೪೦ ॥**
**ಕೇವಲಂ ಕರ್ಮಣಾ ತ್ವಂ ಹಿ ಸಂಸಾರಾತ್ತರ್ತುಮಿಚ್ಛಸಿ ॥ ೪೧ ॥**

---

೩೬–೩೭. ದಕ್ಷನು ಹೇಳುತ್ತಾನೆ:—"ಓ ಸ್ವಾಮಿಯೇ! ನಿನಗೆ ನಮಸ್ಕಾರವು. ವರಪ್ರದಾಯಕನೂ, ಸರ್ವೋತ್ತಮನೂ, ದೇವೋತ್ತಮೋತ್ತಮನೂ, ಸನಾತನನೂ ಆದ ನಿನ್ನನ್ನು ನಮಸ್ಕರಿಸುತ್ತೇನೆ. ದೇವತೆಗಳೆಲ್ಲರಿಗೂ ಒಡೆಯನೂ, ಈಶ್ವರನೂ, ಹರನೂ, ಶಂಭುವೂ, ಜಗತ್ತಿಗೆಲ್ಲ ಏಕಬಂಧುವೂ ಆದ ನಿನಗೆ ನಮಸ್ಕಾರವು. ಓ ವಿಶ್ವೇಶ್ವರ! ವಿಶ್ವರೂಪನೂ, ಸನಾತನನೂ, ಪರಬ್ರಹ್ಮ ಮೂರ್ತಿಯೂ, ಪರಮಾತ್ಮನ ನಿಜವಾದ ಸ್ವರೂಪವೂ ಆದ ನಿನಗೆ ನಮಸ್ಕಾರವು. ಸಮಸ್ತ ಚರಾಚರ ಜಗತ್ಸ್ವರೂಪನೂ, ಯಥಾರ್ಥಜ್ಞಾನದಿಂದ ಮಾತ್ರ ಹೊಂದಲಾಗುವವನೂ, ಶ್ರೇಷ್ಠನೂ, ವರೇಣ್ಯನೂ, ವರದನೂ ಆದ ನಿನಗೆ ಮಣಿಯುವೆನು."

೩೮–೪೧. ಲೋಮಶನು ಹೇಳುತ್ತಾನೆ:— ಎಲೈ ಶೌನಕಾದಿಗಳಿರಾ! ದಕ್ಷನು ಈ ರೀತಿ ಸ್ತೋತ್ರಮಾಡಿದ ಬಳಿಕ ಆ ರುದ್ರದೇವನು ನಸುನಗುತ್ತ, ಅವನನ್ನು ಕುರಿತು ಬಹು ಗೋಪ್ಯವಾಗಿ ಹೀಗೆ ಹೇಳಿದನು: "ಅಯ್ಯಾ ದಕ್ಷನೇ! ಲೋಕದಲ್ಲಿ ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ ಎಂಬ ನಾಲ್ಕು ಬಗೆಯ ಜನಗಳು ನನ್ನನ್ನು ಭಜಿಸುತ್ತಾರೆ. ಇವರೆಲ್ಲರೂ ಪುಣ್ಯಶಾಲಿಗಳೇ! ಸಂಕಟಕ್ಕೊಳಗಾಗಿ ಬೇರಿನ್ನಾವ ಗತಿಯನ್ನೂ ಕಾಣದೆ ಕಡೆಗೆ ಈಶ್ವರನನ್ನು ಮರೆಹೊಗುವವನು ಆರ್ತ; ಬ್ರಹ್ಮಸ್ವರೂಪ ವಿಷಯದಲ್ಲಿ ಚಿಂತನೆಮಾಡುವವನು ಜಿಜ್ಞಾಸು; ಪ್ರಯೋಜನವನ್ನು ಬಯಸಿ ಭಗವಂತನನ್ನು ಭಜಿಸುವವನು ಅರ್ಥಾರ್ಥಿ; ಸರ್ವವೂ ಈಶ್ವರಮಯವೇ ಆಗಿರುವುದೆಂದರಿತು ತನ್ನಲ್ಲಿ ತಾನೇ

ನ ವೇದೈಶ್ಚ ನ ದಾನೈಶ್ಚ ನ ಯಜ್ಞೈಸ್ತಪಸಾ ಕ್ವಚಿತ್ ।
ನ ಶಕ್ನುವಂತಿ ಮಾಂ ಪ್ರಾಪ್ತುಂ ಮೂಢಾ ಕರ್ಮವಶಾ ನರಾಃ ॥ ೪೨ ॥
ತಸ್ಮಾತ್ ಜ್ಞಾನಪರೋ ಭೂತ್ವಾ ಕುರು ಕರ್ಮ ಸಮಾಹಿತಃ ।
ಸುಖದುಃಖಸಮೋ ಭೂತ್ವಾ ಸುಖೀಭವ ನಿರಂತರಂ ॥ ೪೩ ॥

ಲೋಮಶ ಉವಾಚ :—

ಉಪದಿಷ್ಟಸ್ತದಾ ತೇನ ಶಂಭುನಾ ಪರಮೇಷ್ಠಿನಾ ।
ದಕ್ಷಂ ತತ್ರೈವ ಸಂಸ್ಥಾಪ್ಯ ಯಯೌ ರುದ್ರಃ ಸ ಪರ್ವತಂ ॥ ೪೪ ॥
ಬ್ರಹ್ಮಣಾಪಿ ತಥಾ ಸರ್ವೇ ಭೃಗ್ವಾದ್ಯಾಶ್ಚ ಮಹರ್ಷಯಃ ।
ಆಶ್ವಾಸಿತಾ ಬೋಧಿತಾಶ್ಚ ಜ್ಞಾನಿನಶ್ಚಾಭವನ್ ಕ್ಷಣಾತ್ ॥ ೪೫ ॥
ಗತಃ ಪಿತಾಮಹೋ ಬ್ರಹ್ಮಾ ತತಶ್ಚ ಸದನಂ ಸ್ವಕಂ ॥ ೪೬ ॥
ದಕ್ಷೋಽಪಿ ಚ ಸ್ವಯಂ ವಾಕ್ಯಾತ್ಪರಂ ಬೋಧಮುಪಾಗತಃ ।
ಶಿವಧ್ಯಾನಪರೋ ಭೂತ್ವಾ ತಪಸ್ತೇಪೇ ಮಹಾಮನಾಃ ॥ ೪೭ ॥

---

ಆತನನ್ನು ಕಾಣಬಯಸುವವನು ಜ್ಞಾನಿ. ಎಲೈ ದ್ವಿಜಸತ್ತಮನೇ! ಆದುದರಿಂದ ಜ್ಞಾನಿಗಳೆಲ್ಲರೂ ನನಗೆ ಹಿತರೆಂಬುದರಲ್ಲಿ ಸಂಶಯವೇ ಇರುವುದಿಲ್ಲ. ಯಾರು ಜ್ಞಾನವನ್ನುಳಿದು ಅಜ್ಞಾನರೂಪವಾದ ಈ ಕರ್ಮಗಳಿಂದ ನನ್ನನ್ನು ಹೊಂದಲಪೇಕ್ಷಿಸುವರೋ ಅವರು ಕೇವಲ ತಿಳಿಗೇಡಿಗಳು. ಅಂತೆಯೇ, ನೀನಾದರೋ ಕೇವಲ ಈ ಕರ್ಮಗಳಿಂದಲೇ ಭವಸಾಗರವನ್ನು ದಾಟಬಯಸುತ್ತಿರುವೆ.

೪೨. ಕೇಳು; ಜ್ಞಾನವಿಹೀನರಾಗಿ, ಕೇವಲ ಕರ್ಮಕ್ಕೆ ವಶರಾದ ತಿಳಿಗೇಡಿಗಳು ಮಾಡುವ ವೇದಾಧ್ಯಯನಗಳಿಂದಾಗಲಿ, ದಾನಗಳಿಂದಾಗಲಿ, ಯಜ್ಞಗಳಿಂದಾಗಲಿ, ತಪಸ್ಸಿನಿಂದಲೇ ಆಗಲಿ ನನ್ನನ್ನು ಹೊಂದಲೆಂದಿಗೂ ಸಮರ್ಥರಾಗುವುದಿಲ್ಲವು.

೪೩–೪೪. ಆದುದರಿಂದೆಲೈ ದಕ್ಷಬ್ರಹ್ಮನೇ! ನೀನಿನ್ನುಮೇಲೆ ಜ್ಞಾನಪರನಾಗಿ ಮನಸ್ಸನ್ನು ಶಾಂತಗೊಳಿಸಿಕೊಂಡು ಕಾಮಕ್ರೋಧಾದಿಗಳನ್ನು ದೂರಮಾಡಿ ಈಶ್ವರಾರ್ಪಣಬುದ್ಧಿಯಿಂದ ಕರ್ಮಗಳನ್ನು ಮಾಡು. ಸುಖದಲ್ಲಿಯೂ, ದುಃಖದಲ್ಲಿಯೂ ಒಂದೇ ಸಮನಾಗಿದ್ದುಕೊಂಡು ಯಾವಾಗಲೂ ಸಂತೋಷವಾಗಿರು."

೪೫. ಲೋಮಶಮುನಿಯು ಹೇಳುತ್ತಾನೆ:— ಎಲೈ ತಪೋಧನರೇ! ಪರಮೇಷ್ಠಿಯಾದ ಪರಶಿವನು ಈ ರೀತಿ ಆ ದಕ್ಷನಿಗೆ ಬುದ್ಧಿಹೇಳಿ ಅವನನ್ನು ಆ ಕನಖಲ ಕ್ಷೇತ್ರದಲ್ಲಿಯೇ ಇರಿಸಿ ಕೈಲಾಸಕ್ಕೆ ಹೊರಟುಹೋದನು.

೪೬–೪೭. ಚತುರಾನನಾದ ಬ್ರಹ್ಮನೂ ಸಹ ಭೃಗುವೇ ಮೊದಲಾದ ಮಹರ್ಷಿಗಳೆಲ್ಲರನ್ನೂ ಸಮಾಧಾನಗೊಳಿಸಿ ಅವರಿಗೆ ಉಚಿತವಾದ ಉಪದೇಶ

ತಸ್ಮಾತ್ಸರ್ವಪ್ರಯತ್ನೇನ ಸಂಸೇವ್ಯೋ ಭಗವಾನ್‌ಶಿವಃ ॥ ೪೮ ॥
ಸಂಮಾರ್ಜನಂ ಚ ಕುರ್ವಂತಿ ನರಾ ಯೇ ಚ ಶಿವಾಂಗಣೇ ।
ತೇ ವೈ ಶಿವಪುರಂ ಪ್ರಾಪ್ಯ ಜಗದ್ವಂದ್ಯಾ ಭವಂತಿಚ ॥ ೪೯ ॥
ಯೇ ಶಿವಾಯ ಪ್ರಯಚ್ಛಂತಿ ದರ್ಪಣಂ ಸುಮಹಾಪ್ರಭಂ ।
ಭವಿಷ್ಯಂತಿ ಶಿವಸ್ಯಾಗ್ರೇ ಪಾರ್ಷದತ್ವೇನ ತೇ ನರಾಃ ॥ ೫೦ ॥
ಚಾಮರಾಣಿಪ್ರಯಚ್ಛಂತಿ ದೇವದೇವಸ್ಯ ಶೂಲಿನಃ ।
ಚಾಮರೈರ್ವೀಜ್ಯಮಾನಾಸ್ತೇ ಭವಿಷ್ಯಂತಿ ಜಗತ್ತ್ರಯೇ ॥ ೫೧ ॥
ದೀಪದಾನಂ ಪ್ರಯಚ್ಛಂತಿ ಮಹಾದೇವಾಲಯೇ ನರಾಃ ।
ತೇಜಸ್ವಿನೋ ಭವಿಷ್ಯಂತಿ ತೇ ತ್ರೈಲೋಕ್ಯಪ್ರದೀಪಕಾಃ ॥ ೫೨ ॥
ಧೂಪಂ ಯೇ ವೈ ಪ್ರಯಚ್ಛಂತಿ ಶಿವಾಯ ಪರಮಾತ್ಮನೇ ।
ಯಶಸ್ವಿನೋ ಭವಿಷ್ಯಂತಿ ಉದ್ಧರಂತಿ ಕುಲದ್ವಯಂ ॥ ೫೩ ॥

---

ವನ್ನು ಮಾಡಿದನು. ಆ ಕ್ಷಣದಲ್ಲಿಯೇ ಅವರೆಲ್ಲರೂ ಜ್ಞಾನಿಗಳಾದರು. ತರುವಾಯ, ಪಿತಾಮಹನಾದ ಬ್ರಹ್ಮನೂ ಸಹ ತನ್ನ ಲೋಕಕ್ಕೆ ತೆರಳಿದನು. ದಕ್ಷನೂ ಸಾಕ್ಷಾತ್ ಪರಶಿವನ ವಾಕ್ಯದಿಂದ ಜ್ಞಾನವನ್ನು ಪಡೆದು ಆತನ ಧ್ಯಾನದಲ್ಲಿಯೇ ಆಸಕ್ತನಾಗಿ ಮಹಾ ಮನನಶೀಲನಾಗಿ ತಪಸ್ಸುಮಾಡಿದನು.

೪೮. ಆದುದರಿಂದ ಎಲೈ ಮುನಿಗಳಿರಾ! ಸರ್ವಪ್ರಯತ್ನದಿಂದಲೂ ಸರ್ವರೂ ಭಗವಾನ್ ಶಿವನನ್ನು ಸೇವಿಸತಕ್ಕುದು.

೪೯–೫೦. ಅಯ್ಯಾ! ಯಾವ ಮಾನವರು ಶಿವಾಲಯಗಳಲ್ಲಿ ಸಾರಣೆ ಕಾರಣೆಗಳನ್ನು ಮಾಡುವರೋ ಅವರು ಶಿವಪುರವಾದ ಕೈಲಾಸವನ್ನು ಸೇರಿ ಲೋಕಪೂಜ್ಯರಾಗುತ್ತಾರೆ. ಯಾವ ಮಾನವರು ಶಿವಾಲಯಗಳಿಗೆ ಕನ್ನಡಿ ಗಳನ್ನೊಪ್ಪಿಸುತ್ತಾರೆಯೋ ಅವರು ಕೈಲಾಸದಲ್ಲಿ ಪರಶಿವನ ಸಮೀಪದ ಸೇವಕ ರಾಗುವ ಭಾಗ್ಯವನ್ನು ಪಡೆಯುತ್ತಾರೆ.

೫೧–೫೨. ದೇವದೇವನೂ, ಶೂಲಿಯೂ ಆದ ಪರಶಿವಮೂರ್ತಿಗೆ ಚಾಮರ ಗಳನ್ನೊಪ್ಪಿಸುವ ಮಾನವರು ಮೂರು ಲೋಕಗಳಲ್ಲಿಯೂ ಚಾಮರಗಳಿಂದ ಗಾಳಿ ಹಾಕಿಸಿಕೊಳ್ಳುವ ಭಾಗ್ಯವನ್ನು ಪಡೆಯುತ್ತಾರೆ. ಅಯ್ಯಾ ಮುನಿಗಳಿರಾ! ಮಹಾದೇವ ಮಂದಿರಗಳಿಗೆ ದೀಪಗಳನ್ನು ದಾನ ಮಾಡಿದ ಮಾನವರು ಮೂರು ಲೋಕಗಳನ್ನೂ ಬೆಳಗುವಂತಹ ತೇಜಸ್ವಿಗಳಾಗುತ್ತಾರೆ.

೫೩. ಪರಮಾತ್ಮನಾದ ಪರಶಿವನಿಗೆ ಧೂಪವನ್ನು ತಂದೊಪ್ಪಿಸುವವರು ಮಹಾ ಕೀರ್ತಿಶಾಲಿಗಳಾಗುವುದಲ್ಲದೆ ಉಭಯ ಕುಲಗಳನ್ನೂ ಉದ್ಧಾರಮಾಡು ವವರಾಗುತ್ತಾರೆ.

ನೈವೇದ್ಯಂ ಚ ಪ್ರಯಚ್ಛಂತಿ ಭಕ್ತ್ಯಾ ಹರಿಹರಾಗ್ರತಃ ।
ಸಿಕ್ಥೇ ಸಿಕ್ಥೇ ಕ್ರತುಫಲಂ ಪ್ರಾಪ್ನುವಂತಿ ಹಿ ತೇ ನರಾಃ ॥ ೫೪ ॥
ಭಗ್ನಂ ಶಿವಾಲಯಂ ಯೇ ಚ ಪ್ರಕುರ್ವಂತಿ ನರೋತ್ತಮಾಃ ।
ಪ್ರಾಪ್ನುವಂತಿ ಫಲಂ ತೇ ವೈ ದ್ವಿಗುಣಂ ಗಾತ್ರಸಂಶ್ರಯಃ ॥ ೫೫ ॥
ನೂತನಂ ಯೇ ಪ್ರಕುರ್ವಂತಿ ಇಷ್ಟಕೈರಶ್ಮನಾ ಪಿ ವಾ ।
ಸ್ವರ್ಗೇ ಹಿತೇ ಪ್ರಮೋದಂತೇ ಯಾವತ್ತಿಷ್ಠತಿ ನಿರ್ಮಲಂ ।
ಯಶೋ ಭೂಮೌ ದ್ವಿಜಶ್ರೇಷ್ಠಾ ನಾತ್ರ ಕಾರ್ಯಾ ವಿಚಾರಣಾ ॥ ೫೬ ॥
ಕಾರಯಂತಿ ಚ ಯೇ ವಿಪ್ರಾಃ ಪ್ರಾಸಾದಂ ಬಹುಭೂಮಿಕಂ ।
ಶಿವಸ್ಯಾಥ ಮಹಾಪ್ರಾಜ್ಞಾಃ ಪ್ರಾಪ್ನುವಂತಿ ಪರಾಂಗತಿಂ ॥ ೫೭ ॥
ಶುದ್ಧಂ ಧವಳಿತಂ ಯೇ ಚ ಕುರ್ವಂತಿ ಹರಮಂದಿರಂ ।
ಸ್ವೀಯಂ ಪರಕೃತಂ ಚಾಪಿ ತೇಽಪಿ ಯಾಂತಿ ಪರಾಂಗತಿಂ ॥ ೫೮ ॥
ವಿತಾನಂ ಯೇ ಪ್ರಯಚ್ಛಂತಿ ನರಾಃ ಸುಕೃತಿನೋಽಪಿ ಹಿ ।
ತಾರಯಂತಿ ಕುಲಂ ಕೃತ್ಸ್ನಂ ಶಿವಲೋಕಂ ಗತಾಃ ಪುನಃ ॥ ೫೯ ॥

---

೫೪. ಹರಿಹರಮೂರ್ತಿಗಳಿಗೆ ಯಾವ ಮಾನವರು ಭಕ್ತಿಪೂರ್ವಕವಾಗಿ ನೈವೇದ್ಯವನ್ನು ಸಮರ್ಪಿಸುತ್ತಾರೆಯೋ ಅವರು ಆ ನೈವೇದ್ಯದ ಒಂದೊಂದು ತುತ್ತಿಗೂ ಒಂದೊಂದು ಯಾಗ ಮಾಡಿದಷ್ಟು ಪುಣ್ಯವನ್ನು ಗಳಿಸುತ್ತಾರೆ.

೫೫. ಯಾವ ನರೋತ್ತಮರು ಶಿಥಿಲವಾದ ಶಿವಾಲಯಗಳನ್ನು ಜೀರ್ಣೋದ್ಧಾರ ಮಾಡುತ್ತಾರೆಯೋ ಅವರು ಈ ಮೇಲೆ ಹೇಳಿದ ಫಲಗಳನ್ನೆಲ್ಲ ಇಮ್ಮಡಿಯಾಗಿ ಪಡೆಯುತ್ತಾರೆಯೆಂಬುದರಲ್ಲಿ ಸಂಶಯವಿಲ್ಲವು.

೫೬. ಯಾರಾದರೆ, ಹೊಸತಾಗಿ ಶಿವದೇವಾಲಯಗಳನ್ನು ಇಟ್ಟಿಕೆಗಳಿಂದಾಗಲಿ, ಕಲ್ಲುಗಳಿಂದಾಗಲಿ ಕಟ್ಟಿಸುತ್ತಾರೆಯೋ, ಅವರು ಆ ದೇವಾಲಯವು ನಿರ್ಮಲವಾಗಿ ನೆಲೆಯಾಗಿರುವವರೆಗೂ ಸ್ವರ್ಗಲೋಕದಲ್ಲಿ ನೆಲಸಿ ಸಂತೋಷದಿಂದಿರುತ್ತಾರೆ. ಭೂಲೋಕದಲ್ಲಿಯೂ ಅವರು ಮಹಾ ಕೀರ್ತಿಶಾಲಿಗಳಾಗುತ್ತಾರೆಯೆಂಬುದರಲ್ಲಿ ಸಂದೇಹವೇ ಇರುವುದಿಲ್ಲ. ಅದನ್ನು ಕೇಳಬೇಕಾಗಿಯೇ ಇಲ್ಲವು.

೫೭–೫೮. ಅಯ್ಯಾ ವಿಪ್ರರೇ! ಶಿವಾಲಯಗಳಿಗೆ ಅನೇಕ ಪರ್ವ(ಅಂತಸ್ತು)ಗಳುಳ್ಳ ಗೋಪುರಗಳನ್ನು ಕಟ್ಟಿಸುವ ಮಹಾ ಬುದ್ಧಿಶಾಲಿಗಳು ಪರಮಪದವಿಯನ್ನೇ ಪಡೆಯುತ್ತಾರೆ. ಶಿವಮಂದಿರಗಳಿಗೆ ತಾವಾಗಲಿ, ಇತರರಿಂದಾಗಲಿ ಸುಣ್ಣ ತೊಳಿಸಿ ಬೆಳ್ಳಗೆ ಬೆಳಗುವಂತೆ ಮಾಡಿಸುವವರೂ ಕೂಡ ಅಂತೆಯೇ ಉತ್ತಮ ಗತಿಯನ್ನು ಪಡೆಯುವರು.

೫೯. ಅಯ್ಯಾ ಬ್ರಾಹ್ಮಣರೇ! ಶಿವನ ಸನ್ನಿಧಿಗೆ ಅಂತಃಪಟ (ಒಳದೆರೆ)ಗಳನ್ನು ಸಮರ್ಪಿಸಿದವರು ಎಷ್ಟು ಪುಣ್ಯಶಾಲಿಗಳೋ! ಆ ಪುಣ್ಯಪುರುಷರು

ಯೇ ಚ ನಾದಮಯೀಂ ಘಂಟಾಂ ನಿಬಧ್ನಂತಿ ಶಿವಾಲಯೇ ।
ತೇಜಸ್ವಿನಃ ಕೀರ್ತಿಮಂತೋ ಭವಿಷ್ಯಂತಿ ಜಗತ್ತ್ರಯೇ ॥ ೬೦ ॥
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ಚಾನುಪಶ್ಯತಿ ।
ಆಢ್ಯೋ ವಾಪಿ ದರಿದ್ರೋ ವಾ ಸುಖೀ ದುಃಖಾತ್ಪ್ರಮುಚ್ಯತೇ ॥ ೬೧ ॥
ಶ್ರದ್ಧಾವಾನ್ಭಜತೇ ಯೋ ವಾ ಶಿವಾಯ ಪರಮಾತ್ಮನೇ ।
ಕುಲಕೋಟಿಂ ಸಮುದ್ಧೃತ್ಯ ಶಿವೇನ ಸಹ ಮೋದತೇ ॥ ೬೨ ॥
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ಇಂದ್ರದ್ಯುಮ್ನೇಶ್ಚ ಸಂವಾದಂ ಯಮಸ್ಯ ಚ ಮಹಾತ್ಮನಃ ॥ ೬೩ ॥
ಪುರಾ ಕೃತಯುಗೇ ಹ್ಯಾಸೀದಿಂದ್ರಸೇನೋ ನರಾಧಿಪಃ ।
ಪ್ರತಿಷ್ಠಾನಾಧಿಪೋ ವೀರೋ ಮೃಗಯಾರಸಿಕಃ ಸದಾ ॥ ೬೪ ॥
ಅಬ್ರಹ್ಮಣ್ಯಃ ಸದಾ ಕ್ರೂರಃ ಕೇವಲಾಸುತೃಪಃ ಸದಾ ।
ಪರಪ್ರಾಣೈರ್ನಿಜಪ್ರಾಣಾನ್ ಪುಷ್ಯತಿಸ ಖಲಃ ಸದಾ ॥ ೬೫ ॥

---

ಶಿವಲೋಕವನ್ನು ಸೇರುವುದೇ ಅಲ್ಲದೆ ತಮ್ಮ ಕುಲವನ್ನೇ ಪಾವನಗೊಳಿಸಿ ಅವರೆಲ್ಲರನ್ನೂ ಭವಸಾಗರದಿಂದ ದಾಟಿಸುತ್ತಾರೆ.

೬೦. ಯಾವ ಮಹನೀಯರು ಒಳ್ಳೆಯ ನಾದದೊಡಗೂಡಿದ ಘಂಟೆಯನ್ನು ಶಿವಾಲಯಗಳಿಗೊಪ್ಪಿಸುತ್ತಾರೆಯೋ ಅವರು ಮೂರು ಲೋಕಗಳಲ್ಲಿಯೂ ಒಳ್ಳೆಯ ತೇಜಸ್ವಿಗಳೂ, ಕೀರ್ತಿಶಾಲಿಗಳೂ ಆಗುತ್ತಾರೆ.

೬೧–೬೨. ಶ್ರೀಮಂತನಾಗಲಿ, ಕಡುಬಡವನಾಗಲಿ ಒಂದುವೇಳೆಯಾಗಲಿ, ಎರಡುವೇಳೆಗಳಲ್ಲಿಯಾಗಲಿ, ತ್ರಿಕಾಲಗಳಲ್ಲಿಯಾಗಲಿ ಪರಶಿವಮೂರ್ತಿಯನ್ನು ಸಂದರ್ಶಿಸುತ್ತಿದ್ದರೆ ಸುಖವನ್ನು ಪಡೆದು ಸಮಸ್ತ ದುಃಖಗಳಿಂದಲೂ ಪಾರಾಗುತ್ತಾರೆ. ಶ್ರದ್ಧಾವಂತನಾದ ಯಾವನಾದರೂ ಸರಿಯೇ, ಸತತವೂ ಶ್ರದ್ಧಾಯುಕ್ತನಾಗಿ ಪರಶಿವನನ್ನು ಭಜಿಸುತ್ತಿದ್ದರೆ ಕುಲಕೋಟಿಗಳನ್ನುದ್ಧರಿಸಿ ಆ ಪರಶಿವನೊಡನೆಯೇ ಸಮಸಮವಾಗಿ ಆನಂದಪಡುತ್ತಾನೆ.

೬೩. ಈ ವಿಷಯದಲ್ಲಿಯೇ ಇಂದ್ರದ್ಯುಮ್ನನ ಮಗನಿಗೂ, ಮಹಾತ್ಮನಾದ ಯಮಧರ್ಮನಿಗೂ ನಡೆದ ಸಂವಾದರೂಪವಾದ ಇತಿಹಾಸವನ್ನು ಉದಾಹರಿಸಿರುತ್ತಾರೆ. ಅದನ್ನೀಗ ಹೇಳುತ್ತೇನೆ ಕೇಳಿರಿ:

೬೪. ಹಿಂದೆ ಕೃತಯುಗದಲ್ಲಿ, ಪ್ರತಿಷ್ಠಾನವೆಂಬ ನಗರದಲ್ಲಿ ಇಂದ್ರಸೇನನೆಂಬ ದೊರೆಯೊಬ್ಬನಿದ್ದನು. ಅವನು ಮಹಾವೀರನು; ಎಲ್ಲ ಕಾಲಗಳಲ್ಲಿಯೂ ಬೇಟೆಯಾಡುವುದರಲ್ಲಿ ಅವನು ಬಹಳ ರಸಿಕನಾಗಿದ್ದನು.

೬೫–೬೬. ಇಷ್ಟೆಯಲ್ಲದೆ ಅವನು ಯಾವಾಗಲೂ ಮಾಡಬಾರದ ಕೆಲಸಗಳನ್ನೇ ಮಾಡುವಾತನು. ಯಾವಾಗಲೂ ಕ್ರೂರನಾಗಿಯೇ ಇರುವವನು.

ಪರಸ್ತ್ರೀಲಂಪಟೋಽತ್ಯಂತಂ ಪರದ್ರವ್ಯೇಷು ಲೋಲುಪಃ ।
ಬ್ರಾಹ್ಮಣಾ ಘಾತಿತಾಸ್ತೇನ ಸುರಾಪಶ್ಚ ನಿರಂತರಂ ॥ ೬೬ ॥
ಗುರುತಲ್ಪಗಕೋಽತ್ಯರ್ಥಂ ಸದಾ ಸೌವರ್ಣತಸ್ಕರಃ ।
ತಥಾಭೂತಾನುಗಾಃ ಸರ್ವೇ ರಾಜ್ಞಸ್ತಸ್ಯ ದುರಾತ್ಮನಃ ॥ ೬೭ ॥
ಏವಂ ಬಹುವಿಧಂ ರಾಜ್ಯಂ ಚಕಾರ ಸ ದುರಾತ್ಮವಾನ್ ।
ತತಃ ಕಾಲೇನ ಮಹತಾ ಪಂಚತ್ವಂ ಪ್ರಾಪ ದುರ್ಮತಿಃ ॥ ೬೮ ॥
ತದಾ ಯಾಮ್ಯೈಶ್ಚ ನೀತೋಽಸಾವಿಂದ್ರಸೇನೋ ದುರಾತ್ಮವಾನ್ ।
ಯಮಾಂತಿಕಮನುಪ್ರಾಪ್ತಸ್ತದಾ ರಾಜಾ ಸಕಲ್ಮಷಃ ॥ ೬೯ ॥
ಯಮೇನ ದೃಷ್ಟಸ್ತತ್ರಾಸಾವಿಂದ್ರಸೇನೋಽಗ್ರತಃ ಸ್ಥಿತಃ ।
ಅಭ್ಯುತ್ಥಾನಪರೋ ಭೂತ್ವಾ ನನಾಮ ಶಿರಸಾ ಶಿವಂ ॥ ೭೦ ॥
ದೂತಾನ್‌ಸಂಭರ್ತ್ಸಯಾಮಾಸ ಯಮೋ ಧರ್ಮಭೃತಾಂ ವರಃ ।
ಪಾಶೈರ್ಬದ್ಧಂ ಚೇಂದ್ರಸೇನಂ ಮುಕ್ತ್ವಾ ಪ್ರೋವಾಚ ಧರ್ಮರಾಟ್॥೭೧॥

---

ಎಷ್ಟೇ ಭೋಗಗಳನ್ನನುಭವಿಸಿದರೂ ಅವನಿಗೆ ಎಂದಿಗೂ ತೃಪ್ತಿಯೆಂಬುದೇ ಇರುತ್ತಿರಲಿಲ್ಲ. ಅವನು ಯಾವಾಗಲೂ ಇತರರನ್ನು ಹಿಂಸಿಸಿಯೇ ತನ್ನ ಪ್ರಾಣಗಳನ್ನು ಭರಣಮಾಡಿಕೊಳ್ಳುತ್ತಿದ್ದನು. ಹೆರರ ಹೆಂಗಸರಲ್ಲಿಯೇ ಯಾವಾಗಲೂ ಲಂಪಟನವನು. ಹೆರರ ಹಣವನ್ನು ಸೂರೆಮಾಡುವುದರಲ್ಲಿಯೇ ಅವನಿಗೆ ಆಸಕ್ತಿ. ಅವನು ಯಾವಾಗಲೂ ಕಳ್ಳುಕುಡಿದು ಬ್ರಾಹ್ಮಣರನ್ನೆಲ್ಲ ಹಿಂಸಿಸುತ್ತಿದ್ದನು.

೬೭. ಯಾವಾಗಲೂ ದುರಾತ್ಮನೂ, ಗುರುಭಾರ್ಯಾರತನೂ, ಸ್ವರ್ಣಸ್ತೇಯ (ಚಿನ್ನವನ್ನು ಕಳು)ವನ್ನು ಮಾಡುವವನೂ ಆದ ಆ ಅರಸನಿಗೆ ಜೊತೆಗಾರರಾಗಿದ್ದವರೂ ಸಹ ಅವನಂತೆಯೇ ದುರಾತ್ಮರು; ಅವನಂತೆಯೇ ಎಲ್ಲ ದುರ್ಗುಣಗಳನ್ನೂ ಮೈಗೂಡಿಸಿಕೊಂಡಿದ್ದವರು.

೬೮. ಹೀಗೆ ದುಷ್ಟನಾದ ಆ ಇಂದ್ರಸೇನನು ಬಹುಬಗೆಯ ದುರ್ಮಾರ್ಗಗಳಿಂದ ರಾಜ್ಯವನ್ನಾಳುತ್ತಿದ್ದನು. ಕಡೆಗೆ ಬಹುಕಾಲವಾದ ಬಳಿಕ ಆ ದುರ್ಬುದ್ಧಿಯು ಮೃತಿಯೊಂದಿದನು.

೬೯. ಆಗಲಾ ದುಷ್ಟನನ್ನು ಯಮಭಟರು ತಮ್ಮ ಲೋಕಕ್ಕೆಳೆದೊಯ್ದರು. ಅವರು ಮಹಾ ಪಾಪಿಷ್ಠನಾದ ಆ ದೊರೆಯನ್ನು ಯಮನ ಮುಂದೆ ನಿಲ್ಲಿಸಿದರು.

೭೦. ಯಮನಾದರೋ ತನ್ನ ಮುಂಗಡೆ ನಿಂತಿದ್ದ ಆ ಇಂದ್ರಸೇನರಾಜನನ್ನು ಕಂಡೊಡನೆಯೇ ಅವನಿಗೆ ಗೌರವವನ್ನು ಸಲ್ಲಿಸುವುದಕ್ಕಾಗಿ ಎದ್ದುನಿಂತು, ತರುವಾಯ ಪರಶಿವಮೂರ್ತಿಯನ್ನು ನಮಸ್ಕರಿಸಿದನು.

೭೧–೭೩. ಧರ್ಮಸಂರಕ್ಷಣೆ ಮಾಡುವವರಲ್ಲಿ ಅಗ್ಗಳಿಯನಾದ ಆ ಯಮಧರ್ಮರಾಜನು ಆರೀತಿ ಅವನನ್ನು ತನ್ನ ಲೋಕಕ್ಕೆಳೆದುತಂದುದಕ್ಕಾಗಿ ತನ್ನ

ಗಚ್ಛ ಪುಣ್ಯತಮಾನ್ ಲೋಕಾನ್ ಭುಂಕ್ಷ್ವ ರಾಜನ್ಯಸತ್ತಮ ।
ಯಾವದಿಂದ್ರಶ್ಚ ನಾಕೋಽಸ್ತಿ ಯಾವತ್ಸೂರ್ಯೋ ನಭಸ್ತಲೇ ॥ ೭೨ ॥
ಪಂಚಭೂತಾನಿ ಯಾವಚ್ಚ ತಾವತ್ತ್ವಂ ಚ ಸುಖೀಭವ ।
ಸುಕೃತೀ ತ್ವಂ ಮಹಾರಾಜ ಶಿವಭಕ್ತೋಽಸಿ ನಿತ್ಯದಾ ॥ ೭೩ ॥
ಯಮಸ್ಯ ವಚನಂ ಶ್ರುತ್ವಾ ಇಂದ್ರಸೇನೋಽಭ್ಯಭಾಷತ ।
ಅಹಂ ಶಿವಂ ನಜಾನಾಮಿ ಮೃಗಯಾರಸಿಕೋಹ್ಯಹಂ ॥ ೭೪ ॥
ತಚ್ಛ್ರುತ್ವಾ ವಚನಂ ತಸ್ಯ ಯಮೋ ವಾಕ್ಯಮಭಾಷತ ।
ಆಹರ ಪ್ರಹರಸ್ವೇತಿ ಉಕ್ತಂ ಚೇದಂ ಸದಾ ತ್ವಯಾ ॥ ೭೫ ॥
ತೇನ ಕರ್ಮವಿಪಾಕೇನ ಸದಾ ಪೂತೋಽಸಿ ಮಾನದ ।
ತಸ್ಮಾತ್ತ್ವಂ ಗಚ್ಛ ಕೈಲಾಸಂ ಪರ್ವತಂ ಶಂಕರಂ ಪ್ರತಿ ॥ ೭೬ ॥
ಏವಂ ಸಂಭಾಷಮಾಣಸ್ಯ ಯಮಸ್ಯಚ ಮಹಾತ್ಮನಃ ।
ಆಗತಾ ಶಿವದೂತಾಸ್ತೇ ವೃಷಾರೂಢಾ ಮಹಾಪ್ರಭಾಃ ॥ ೭೭ ॥

---

ದೂತರನ್ನೆಲ್ಲ ಗದರಿಸಿದನು. ಬಳಿಕ ಆತನು ಇಂದ್ರಸೇನನನ್ನು ಪಾಶಗಳಿಂದ ಬಿಡಿಸಿ ಅವನನ್ನು ಕುರಿತು, "ಅಯ್ಯಾ ರಾಜಶ್ರೇಷ್ಠನೇ! ಹೋಗು; ನೀನಿಲ್ಲಿಗೆ ಬರತಕ್ಕವನಲ್ಲ. ಪುಣ್ಯತಮವಾದ ಲೋಕಗಳನ್ನು ಸೇರಿ ಭೋಗಭಾಗ್ಯಗಳನ್ನನುಭವಿಸು. ಎದುವರೆಗೆ ಇಂದ್ರನೂ ಆತನ ಸ್ವರ್ಗಲೋಕವೂ ಇರುತ್ತದೆಯೋ, ಎದುವರೆಗೆ ಸೂರ್ಯ ಚಂದ್ರರು ಗಗನದಲ್ಲಿ ಬೆಳಗುತ್ತಿರುವರೋ, ಜಗತ್ತಿನಲ್ಲಿ ಪೃಥಿವೀ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಗಳು ಎದುವರೆಗೆ ನೆಲಸಿರುತ್ತವೆಯೋ ಅದುವರೆಗೂ ನೀನು ಆ ಪುಣ್ಯಲೋಕಗಳಲ್ಲಿ ಸುಖವನ್ನನುಭವಿಸುತ್ತಿರು. ಮಹಾರಾಜ! ಇಂದ್ರಸೇನಾ!! ನೀನು ಪುಣ್ಯಶಾಲಿ, ನೀನು ಮುಕ್ತಿಯನ್ನು ದೊರಕಿಸುವಂತಹ ಶಿವಭಕ್ತಿಯನ್ನು ಮಾಡಿದವನು."

೭೪. ಇಂತು ನುಡಿದ ಯಮಧರ್ಮನ ನುಡಿಯನ್ನು ಕೇಳಿ ಆ ಇಂದ್ರಸೇನನು ಹೇಳಿದನು: "ಅಯ್ಯಾ ಯಮಧರ್ಮನೇ! ನಾನು ಶಿವನನ್ನೇ ಕಾಣೆನು. ನಾನು ಯಾವಾಗಲೂ ಬೇಟೆಯಾಡುವುದರಲ್ಲಿಯೇ ಆಸಕ್ತನಾಗಿದ್ದೆನು."

೭೫–೭೬. ಅವನ ಈ ಮಾತನ್ನು ಕೇಳಿ ಯಮನು ಅವನ ಬೇಟೆಗೆ ಭಾಷ್ಯವನ್ನು ಈ ರೀತಿ ವಿವರಿಸಿದನು. "ನೀನು ಯಾವಾಗಲೂ, "ಆ-ಹರ (ತೆಗೆದುಕೊಂಡು ಬಾ) ಪ್ರ-ಹರ (ಹೊಡೆ)" (ಹರ-ಹರ) ಎಂದು ಹೇಳುತ್ತಿದ್ದೆ. ಎಲೈ ಮಾನದನೇ! ಆ ವಾಕ್ಕರ್ಮದಿಂದಲೇ ನೀನು ಪವಿತ್ರನಾಗಿರುವೆ. ಆದುದರಿಂದ ನೀನೀಗಲೇ ಕೈಲಾಸಗಿರಿಯನ್ನೈದಿ ಶಂಕರನ ಸನ್ನಿಧಿಯನ್ನು ಸೇರು."

೭೭–೭೯. ಮಹಾತ್ಮನಾದ ಯಮನು ಹೀಗೆ ಹೇಳುತ್ತಿರುವಂತೆಯೇ ಮಹಾತೇಜಸ್ವಿಗಳಾದ ಶಿವದೂತರು ವೃಷಭಾರೂಢರಾಗಿ ಅಲ್ಲಿಗೆ ಬಂದರು.

ನೀಲಕಂಠಾ ದಶಭುಜಾಃ ಪಂಚವಕ್ತ್ರಾಸ್ತ್ರಿಲೋಚನಾಃ ।
ಕಪರ್ದಿನಃ ಕುಂಡಲಿನಃ ಶಶಾಂಕಾಂಕಿತ ಮೌಲಯಃ ॥ ೭೮ ॥
ತಾನ್ ದೃಷ್ಟ್ವಾ ಸಹಸೋತ್ಥಾಯ ಯಮೋ ಧರ್ಮಭೃತಾಂ ವರಃ ।
ಪೂಜಯಾಮಾಸ ತಾನ್‌ಸರ್ವಾನ್ ಮಹೇಂದ್ರಪ್ರತಿಮಾನ್‌ತದಾ ॥೭೯॥
ತ್ವರಿತೇನೈವ ತೇ ಸರ್ವೇ ಊಚುರ್ವೈವಸ್ವತಂ ಯಮಂ ।
ಅತ್ರಾಗತೋ ಮಹಾಭಾಗ ಇಂದ್ರಸೇನೋಽಮಿತದ್ಯುತಿಃ ।
ನಾಮ್ನಃ ಪ್ರವರ್ತಕೋ ನಿತ್ಯಂ ರುದ್ರಸ್ಯ ಚ ಮಹಾತ್ಮನಃ ॥ ೮೦ ॥
ಶ್ರುತ್ವಾಚ ವಚನಂ ತೇಷಾಂ ಯಮೇನ ಚ ಪುರಸ್ಕೃತಃ ।
ಇಂದ್ರಸೇನೋ ವಿಮಾನಸ್ಥಃ ಪ್ರೇಷಿತೋ ಹಿ ಶಿವಾಲಯಂ ॥ ೮೧ ॥
ಆನೀತೋ ಯಂ ತದಾ ತೈಶ್ಚ ಪಾರ್ಷದಪ್ರವರೋತ್ತಮೈಃ ।
ಶಂಭುನಾ ಹಿ ತದಾ ದೃಷ್ಟ ಇಂದ್ರಸೇನೋಽಮಿತದ್ಯುತಿಃ ॥ ೮೨ ॥
ಅಭ್ಯುತ್ಥಾಯಾಽಗತೋ ರುದ್ರಃ ಪರಿಷ್ವಜ್ಯ ತದಾ ನೃಪಂ ।
ಅರ್ಧಾಸನಗತಂ ಕೃತ್ವಾ ಇಂದ್ರಸೇನಂ ತತೋಽಬ್ರವೀತ್ ॥ ೮೩ ॥
ಕಿಂ ದಾತವ್ಯಂ ನೃಪಶ್ರೇಷ್ಠ ಪ್ರಯಚ್ಛಾಮಿ ತವೇಪ್ಸಿತಂ ।
ಇತಿ ಶ್ರುತ್ವಾ ವಚಸ್ತಸ್ಯ ಮಹೇಶ ತದಾ ನೃಪಃ ।
ಆನಂದಾಶ್ರುಕಣಾನ್‌ಮುಂಚನ್‌ಪ್ರೇಮ್ಣಾ ನೋವಾಚ ಕಿಂಚನ ॥೮೪॥

---

ಅವರೆಲ್ಲರೂ ನೀಲಕಂಠರರೂ, ದಶಭುಜಗಳುಳ್ಳವರೂ, ಪಂಚವಕ್ತ್ರರೂ, ತ್ರಿಲೋಚನರೂ, ಕಪರ್ದಿಗಳೂ, ಕುಂಡಲಗಳುಳ್ಳವರೂ, ಚಂದ್ರಶೇಖರರೂ ಆಗಿದ್ದರು. ಧರ್ಮಸಂರಕ್ಷನಾದ ಯಮಧರ್ಮರಾಜನು ಅವರನ್ನು ಕಂಡೊಡನೆಯೇ ದಿಗ್ಗನೆದ್ದು ಮಹೇಂದ್ರನಿಗೆ ಸಮಾನರಾದ ಅವರೆಲ್ಲರನ್ನೂ ಪೂಜಿಸಿ ಗೌರವಿಸಿದನು.

೮೦. ಆಗಲಾ ಶಿವಕಿಂಕರರೆಲ್ಲರೂ ಅವಸರವುಳ್ಳವರಾಗಿ ಆ ಯಮನನ್ನು ಕುರಿತು, "ಅಯ್ಯಾ ಮಹಾ ಭಾಗ್ಯಶಾಲಿಯಾದ ಯಮಧರ್ಮನೇ! ಮಹಾ ತೇಜಸ್ವಿಯೂ, ಸತತವೂ ಮಹಾತ್ಮನಾದ ಪರಶಿವನ ನಾಮಸಂಕೀರ್ತನವನ್ನೇ ಮಾಡುತ್ತಿದ್ದವನೂ ಆದ ಇಂದ್ರಸೇನರಾಜನು ಇಲ್ಲಿಗೆ ಬಂದಿರುವನೇ?" ಎಂದು ಕೇಳಿದರು.

೮೧. ಇಂತು ನುಡಿದ ಅವರ ನುಡಿಗಳನ್ನು ಕೇಳಿದ ತರುವಾಯ ಯಮನು ಆ ಇಂದ್ರಸೇನನನ್ನು ಅವರಿಗೊಪ್ಪಿಸಿದನಲ್ಲದೆ ಅವನನ್ನು ವಿಮಾನದಲ್ಲಿ ಕುಳ್ಳಿರಿಸಿ ಶಿವನ ಮನೆಯಾದ ಕೈಲಾಸಕ್ಕೆ ಕಳುಹಿಸಿಕೊಟ್ಟನು.

೮೨–೮೪. ಶ್ರೇಷ್ಠರಾದ ಆ ಶಿವಕಿಂಕರರೇ ಅವನನ್ನು ಕೈಲಾಸಕ್ಕೆ ಕರೆತಂದರು. ಅಮಿತದ್ಯುತಿಯಾದ ಪರಶಿವನಾದರೋ ಆ ಇಂದ್ರಸೇನರಾಜನನ್ನು ಕಂಡೊಡನೆಯೇ ತನ್ನ ಆಸನದಿಂದೆದ್ದು ಅವನನ್ನು ಆಲಿಂಗಿಸಿಕೊಂಡು ಅರ್ಧಾ

**ತದಾ ಕೃತೋ ಮಹೇಶೇನ ಪಾರ್ಷದೋ ಹಿ ಮಹಾತ್ಮನಾ ।**
**ಚಂಡನಾಮ್ನಾ ಚ ವಿಖ್ಯಾತೋ ಮುಂಡಸ್ಯಚ ಸಖಾ ಪ್ರಿಯಃ ॥ ೮೫ ॥**
**ನಾಮೋಚ್ಚಾರಣಮಾತ್ರೇಣ ರುದ್ರಸ್ಯ ಪರಮಾತ್ಮನಃ ।**
**ಸಿದ್ಧಿಂ ಪ್ರಾಪ್ತೋಹಿ ಪಾಪಿಷ್ಠ ಇಂದ್ರಸೇನೋ ನರಾಧಿಪ ॥ ೮೬ ॥**
**ಹರೇ ಹರೇತಿ ವೈ ನಾಮ್ನೋ ಶಂಭೋಶ್ಚಕ್ರಧರಸ್ಯಚ ।**
**ರಕ್ಷಿತಾ ಬಹವೋ ಮರ್ತ್ಯಾಃ ಶಿವೇನ ಪರಮಾತ್ಮನಾ ॥ ೮೭ ॥**
**ಮಹೇಶಾನ್ನಾಪರೋ ದೇವೋ ದೃಶ್ಯತೇ ಭುವನತ್ರಯೇ ।**
**ತಸ್ಮಾತ್ಸರ್ವಪ್ರಯತ್ನೇನ ಪೂಜನೀಯಃ ಸದಾಶಿವಃ ॥ ೮೮ ॥**
**ಪತ್ರೈಃ ಪುಷ್ಪೈಃ ಫಲೈರ್ವಾಪಿ ಜಲೈರ್ವಾವಿಮಲೈಸ್ಸದಾ ।**
**ಕರವೀರೈಃ ಪೂಜ್ಯಮಾನಃ ಶಂಕರೋ ವರದೋ ಭವೇತ್ ॥ ೮೯ ॥**

---

ಸನದಲ್ಲಿ ಕುಳ್ಳಿರಿಸಿ ಅವನನ್ನು ಕುರಿತು, "ಅಯ್ಯಾ ರಾಜಶ್ರೇಷ್ಠನೇ! ನಾನು ನಿನಗೇನನ್ನು ಕೊಡಲಿ. ಈಗ ನೀನು ಬಯಸಿ ಕೇಳಿದುದೆಲ್ಲವನ್ನೂ ಕೊಡುವೆನು; ಕೇಳು" ಎಂದು ಹೇಳಿದನು. ಮಹೇಶ್ವರನ ಈ ಮಾತನ್ನು ಕೇಳಿ ಆ ರಾಜನು ಸಂತೋಷವುಕ್ಕಿಬಂದು ಕಂಬನಿಯಿಡುತ್ತ ಏನನ್ನೂ ಹೇಳಲಿಲ್ಲವು.

೮೫. ಆಗ ಮಹಾತ್ಮನಾದ ಪರಶಿವನು ಅವನನ್ನು ತನ್ನ ಪಾರ್ಷದನನ್ನಾಗಿ ಮಾಡಿದನು. ಅಂದಿನಿಂದ ಅವನು ಚಂಡನೆಂದು ಹೆಸರಾಗಿ ಮುಂಡನಿಗೆ ಬಹಳ ನಚ್ಚಿನ ಗೆಳೆಯನಾದನು.

೮೬. ಅಯ್ಯಾ ಮುನಿಗಳಿರಾ! ಹೀಗೆ ಪರಮಾತ್ಮನಾದ ಪರಶಿವನ ದಿವ್ಯ ನಾಮೋಚ್ಚಾರಣ ಮಾತ್ರದಿಂದಲೇ ಮಹಾ ಪಾಪಿಷ್ಠನಾದ ಆ ಇಂದ್ರಸೇನ ಮಹಾರಾಜನು ಪರಮ ಸಿದ್ಧಿಯನ್ನು ಪಡೆದು ಕೈಲಾಸವನ್ನು ಸೇರಿದನು.

೮೭, ಇವನಂತೆಯೇ ಎಷ್ಟೋ ಮಂದಿ ಮಾನವರು "ಹರಿ ಹರಿ, ಹರ ಹರ" ಎಂಬುದಾಗಿ ಹರಿ ಹರರ ದಿವ್ಯ ನಾಮೋಚ್ಚಾರಣೆಯನ್ನು ಮಾಡಿ, ಅದರ ಮಹಿಮೆಯಿಂದ ಪರಶಿವನ ರಕ್ಷಣೆಗೆ ಪಾತ್ರರಾಗಿ ಮುಕ್ತಿಯನ್ನು ಪಡೆದಿರುತ್ತಾರೆ.

೮೮. ಎಲೈ ಶೌನಕಾದಿಗಳಿರಾ! ಈ ಭುವನತ್ರಯದಲ್ಲಿ ಮಹೇಶ್ವರನಿಗಿಂತಲೂ ಶ್ರೇಷ್ಠನಾದ ದೇವನಿರುವುದಿಲ್ಲವು. ಆದುದರಿಂದ ಸರ್ವ ಪ್ರಯತ್ನದಿಂದಲೂ ಆ ಸದಾಶಿವನನ್ನು ಸಮಸ್ತ ಮಾನವರೂ ಪೂಜಿಸಬೇಕು.

೮೯. ಪತ್ರಗಳಿಂದಾಗಲಿ, ಪುಷ್ಪಗಳಿಂದಾಗಲೀ, ಫಲಗಳಿಂದಲೇ ಆಗಲಿ; ಕಡೆಗೆ ಏನೂ ಇಲ್ಲದಿದ್ದರೆ ಜಲದಿಂದಾಗಲಿ ಅಥವಾ ಕರವೀರ ಪುಷ್ಪಗಳಿಂದಾದರೂ ಅರ್ಚಿಸಿದುದೇ ಆದರೆ ಆ ಪರಶಿವನು ಪ್ರಸನ್ನನಾಗುವನಲ್ಲದೆ ಇಷ್ಟಾರ್ಥಗಳನ್ನೀಡೇರಿಸುವವನೂ ಆಗುತ್ತಾನೆ.

ಕರವೀರಾದ್ದಶಗುಣಮರ್ಕಪುಷ್ಪಂ ವಿಶಿಷ್ಯತೇ ।
ವಿಭೂತ್ಯಾದಿಕೃತಂ ಸರ್ವಂ ಜಗದೇತಚ್ಚರಾಚರಂ ॥ ೯೦ ॥
ಶಿವಸ್ಯಾಂಗಣಲಗ್ನಾ ಯಾ ತಸ್ಮಾತ್ತಾಂ ಧಾರಯೇತ್ಸದಾ ।
ತತಸ್ತ್ರಿಪುಂಡ್ರೇ ಯತ್ಪುಣ್ಯಂ ತಚ್ಛೃಣುಧ್ವಂ ದ್ವಿಜೋತ್ತಮಾಃ ॥ ೯೧ ॥
ಸರ್ವಪಾಪಹರಂ ಪುಣ್ಯಂ ತಚ್ಛೃಣುಧ್ವಂ ದ್ವಿಜೋತ್ತಮಾಃ ।
ಸ್ತೇನಃ ಕೋಽಪಿ ಮಹಾಪಾಪೋ ಘಾತಿತೋ ರಾಜದೂತಕೈಃ ॥ ೯೨ ॥
ತಂ ಖಾದಿತುಂ ಸಮಾಯಾತಃ ಶ್ವಾ ಶಿರಸ್ಯುಪರಿಸ್ಥಿತಃ ।
ನಖಾಂತರಾಳಸಂಲಗ್ನಾ ರಕ್ಷಾ ತಸ್ಯೈವ ಪಾಪಿನಃ ॥ ೯೩ ॥
ಲಲಾಟೇ ಪತಿತಾ ತಸ್ಯ ತ್ರಿಪುಂಡ್ರಾಂಕಿತಮುದ್ರಯಾ ।
ಚೈತನ್ಯೇನ ವಿನಾ ತಸ್ಯ ದೇಹಮಾತ್ರೈಕಲಗ್ನಯಾ ॥ ೯೪ ॥
ಕೈಲಾಸಂ ತಸ್ಕರೋ ನೀತೋ ರುದ್ರದೂತೈಸ್ತತಸ್ತದಾ ।
ವಿಭೂತೇರ್ಮಹಿಮಾನಂತು ಕೋ ವಿಶೇಷಿತುಮರ್ಹತಿ ॥ ೯೫ ॥

---

೯೦. ಕರವೀರ ಕುಸುಮಗಳಿಗಿಂತಲೂ, ಅರ್ಕ (ಎಕ್ಕದ) ಪುಷ್ಪಗಳು ಹತ್ತರಷ್ಟು ಹೆಚ್ಚಿನ ಗುಣವುಳ್ಳದ್ದಲ್ಲದೆ ಶಿವಪೂಜೆಗೆ ಅವು ವಿಶೇಷವಾದುವು. ಅಯ್ಯಾ ಮುನಿಗಳಿರಾ! ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ವಿಭೂತಿಯೇ ಮೊದಲಾದವುಗಳಿಂದ ರಚನೆಯಾಗಿರುತ್ತದೆ.

೯೧. ಯಾವಾಗಲೂ ಶಿವಾಲಯದ ಅಂಗಳದಲ್ಲಿ ಬಿದ್ದಿರುವ ಭಸ್ಮವನ್ನೇ ಎಲ್ಲರೂ ಧರಿಸತಕ್ಕುದು. ಎಲೈ ದ್ವಿಜೋತ್ತಮರೇ! ಇನ್ನು ಭಸ್ಮ ತ್ರಿಪುಂಡ್ರದ ಮಾಹಾತ್ಮ್ಯವನ್ನೂ, ಅದರಿಂದ ದೊರಕುವ ಪುಣ್ಯವನ್ನೂ ಹೇಳುವೆನು; ಕೇಳಿರಿ.

೯೨. ಈಗ ನಾನು ಹೇಳುವ ವಿಷಯವು ಸಮಸ್ತ ಪಾಪಗಳನ್ನೂ ಕಳೆಯುವಂತಹುದು. ಆದುದರಿಂದ ನೀವಿದನ್ನು ಶ್ರದ್ಧೆಯಿಂದ ಆಲಿಸಬೇಕು. ಪೂರ್ವದಲ್ಲಿ ಯಾವನೋ ಒಬ್ಬ ಮಹಾ ಪಾಪಿಷ್ಠನನ್ನು ಅವನು ಮಾಡಿದ ಪಾಪಕ್ಕಾಗಿ ರಾಜದೂತರು ರಾಜಾಜ್ಞೆಯಂತೆ ಅವನನ್ನು ಕೊಂದುಹಾಕಿದರು. ಅವನ ಶವವನ್ನು ಕಿತ್ತುತಿನ್ನಲು ಯಾವುದೋ ಒಂದು ನಾಯಿಯು ಅಲ್ಲಿಗೆ ಬಂದು ಅವನ ತಲೆಯ ಮೇಲೆ ಕಾಲಿಟ್ಟು ನಿಂತಿತು.

೯೩–೯೫. ಆಗ ಆ ನಾಯಿಯ ಕಾಲುಗುರುಗಳ ಸಂದಿಗಳಲ್ಲಿ ಅಂಟಿಕೊಂಡಿದ್ದ ಬೂದಿಯು ಆ ಪಾಪಿಷ್ಠನ ಹಣೆಯ ಮೇಲೆ ತ್ರಿಪುಂಡ್ರದ ಗುರುತು ಅಚ್ಚೊತ್ತಿದಂತೆ ಬಿದ್ದಿತು. ಆಗ ಜೀವವೇ ಇಲ್ಲದಿದ್ದರೂ ಆ ಪಾಪಿಷ್ಠನ ಶರೀರದಲ್ಲಿ ಮಾತ್ರ ಅಂಟಿಕೊಂಡಿದ್ದ ಆ ತ್ರಿಪುಂಡ್ರದ ಗುರುತಿನಿಂದಲೇ ಆ ಕಳ್ಳನನ್ನು ಶಿವದೂತರು ಕೈಲಾಸಕ್ಕೆ ಕರೆದೊಯ್ದರು. ಹೀಗಿರುವಾಗ ವಿಭೂತಿಯ ಮಹಿಮೆಯನ್ನು ವಿಶೇಷವಾಗಿ ಹೇಳಲು ಯಾರು ತಾನೇ ಸಮರ್ಥರಾದಾರು?

**ವಿಭೂತ್ಯಾ ಮಂಡಿತಾಂಗಾನಾಂ ನರಾಣಾಂ ಪುಣ್ಯಕರ್ಮಣಾಂ ।**
**ಮುಖೇ ಪಂಚಾಕ್ಷರೋ ಯೇಷಾಂ ರುದ್ರಾಸ್ತೇ ನಾತ್ರ ಸಂಶಯಃ ॥೯೬॥**
**ಜಟಾಕಲಾಪಿನೋ ಯೇಚ ಯೇ ರುದ್ರಾಕ್ಷವಿಭೂಷಣಾಃ ।**
**ತೇ ವೈ ಮನುಷ್ಯರೂಪೇಣ ರುದ್ರಾ ನಾಸ್ತ್ಯತ್ರ ಸಂಶಯಃ ॥ ೯೭ ॥**
**ತಸ್ಮಾತ್ಸದಾಶಿವಃ ಪುಂಭಿಃ ಪೂಜನೀಯೋ ಹಿ ನಿತ್ಯಶಃ ।**
**ಪ್ರಾತರ್ಮಧ್ಯಾಹ್ನಕಾಲೇಚ ಸಾಯಂ ಸಂಧ್ಯಾ ವಿಶಿಷ್ಯತೇ ॥ ೯೮ ॥**
**ಪ್ರಾತಸ್ತು ದರ್ಶನಾಚ್ಛಂಭೋರ್ನೈಶಮೇನೋ ವ್ಯಪೋಹತಿ ।**
**ಮಧ್ಯಾಹ್ನೇ ದರ್ಶನಾಚ್ಛಂಭೋಃ ಸಪ್ತಜನ್ಮಾರ್ಜಿತಂ ನೃಣಾಂ ।**
**ಪಾಪಂ ಪ್ರಣಾಶಮಾಯತಿ ನಿಶಾಯಾಂ ನೈವ ಗಣ್ಯತೇ ॥ ೯೯ ॥**
**ಶಿವೇತಿ ದ್ವ್ಯಕ್ಷರಂ ನಾಮ ಮಹಾಪಾಪಪ್ರಣಾಶನಂ । [೧೦೦ ॥**
**ಯೇಷಾಂ ಮುಖೋದ್ಗತಂ ನೄಣಾಂ ತೈರಿದಂ ಧಾರ್ಯತೇ ಜಗತ್ ॥**

---

೯೬. ವಿಭೂತಿಯಿಂದಲಂಕೃತವಾದ ಮುಖವುಳ್ಳವರ ಮತ್ತು ಬಾಯಿಯಲ್ಲಿ 'ಓಂ ನಮಃ ಶಿವಾಯ' ಎಂಬ ಶಿವಪಂಚಾಕ್ಷರೀ ಜಪವುಳ್ಳವರ ಅಪಾರಮಹಿಮೆಯನ್ನು ಹೇಳಲು ಯಾರಿಗೆತಾನೆ ಸಾಧ್ಯವಾದೀತು. ಆ ಪುಣ್ಯಶಾಲಿಗಳು ಸಾಕ್ಷಾತ್ ರುದ್ರಸ್ವರೂಪರೇ ಎಂಬುದರಲ್ಲಿ ಸಂದೇಹವೇ ಇರುವುದಿಲ್ಲ.

೯೭. ಯಾರು ಜಟೆಗಳನ್ನು ಬೆಳಸಿಕೊಂಡಿರುತ್ತಾರೆಯೋ, ಯಾರು ರುದ್ರಾಕ್ಷಿಗಳನ್ನು ಧರಿಸಿರುತ್ತಾರೆಯೋ ಅವರೆಲ್ಲರೂ ಮನುಷ್ಯರೂಪದಿಂದಿರುವ ರುದ್ರರೇ ಎಂಬುದರಲ್ಲಿ ಸಂಶಯವಿಲ್ಲವು.

೯೮. ಆದುದರಿಂದ ಸಮಸ್ತ ಮಾನವರೂ ಆ ಪರಶಿವನನ್ನು ನಿತ್ಯವೂ ಪ್ರಾತರ್ಮಧ್ಯಾಹ್ನ ಸಾಯಂಕಾಲಗಳಲ್ಲಿ ಪೂಜಿಸತಕ್ಕುದು. ಈ ತ್ರಿಕಾಲ ಪೂಜೆಗಳಲ್ಲಿಯೂ ಸಾಯಂಪೂಜೆಯು ಸರ್ವೋತ್ತಮವಾದುದು.

೯೯. ಪ್ರಾತಃಕಾಲದಲ್ಲಿ ಪರಮೇಶ್ವರನನ್ನು ಸಂದರ್ಶಿಸುವುದರಿಂದ ರಾತ್ರಿಯಲ್ಲಿ ಮಾಡಿದ ಪಾಪವೆಲ್ಲವೂ ಪರಿಹಾರವಾಗುತ್ತದೆ. ಮಧ್ಯಾಹ್ನದಲ್ಲಿ ಶಿವದರ್ಶನ ಮಾಡುವುದರಿಂದ ಏಳು ಜನ್ಮಗಳಲ್ಲಿ ಮಾಡಿದ ಪಾಪಗಳೆಲ್ಲವೂ ಕಳೆದು ಹೋಗುತ್ತವೆ. ಎಂದಮೇಲೆ ಸಾಯಂಕಾಲದ ಶಿವದರ್ಶನದಿಂದ ದೊರಕುವ ಫಲವೆಷ್ಟೆಂದು ಹೇಳಬೇಕಾದುದೇ ಇಲ್ಲ. ಅದರ ಫಲವು ಅನಂತವಾದುದು.

೧೦೦. ಅಯ್ಯಾ ಮುನಿಗಳಿರಾ! 'ಶಿವ' ಎಂಬ ಎರಡಕ್ಷರಗಳ ಹೆಸರು ಮಹಾ ಪಾತಕಗಳನ್ನೆಲ್ಲಾ ಕಳೆಯುವಂತಹುದು. ಆ 'ಶಿವ' ಎಂಬ ದ್ವ್ಯಕ್ಷರ ಮಂತ್ರವು ಯಾವ ಮಾನವರ ಬಾಯಿಯಲ್ಲಿರುತ್ತದೆಯೋ ಅವರೇ ಈ ಜಗತ್ತನ್ನು ಭರಣಮಾಡುವವರೆಂದು ತಿಳಿಯಿರಿ.

ಶಿವಾಂಗಣೇ ತು ಯಾ ಭೇರೀ ಸ್ಥಾಪಿತಾ ಪುಣ್ಯಕರ್ಮಭಿಃ ।
ತಸ್ಯಾ ನಾದೇನ ಪೂತಾ ವೈ ಯೇಚ ಪಾಪರತಾ ಜನಾಃ ॥
ಪಾಷಂಡಿನೋಽಪ್ಯಸದ್ವಾದಾಸ್ತೇಽಪಿ ಯಾಂತಿ ಪರಾಂಗತಿಂ ॥ ೧೦೧ ॥
ಪಶೋರ್ಯಸ್ಯ ಚ ಬದ್ಧಾ ಚರ್ಮಣಾ ಚ ಶಿವಾಲಯೇ ।
ನೃಭಿರ್ಯಾ ಸ್ಥಾಪಿತಾ ಭೇರೀ ಮೃದಂಗಮುರಜಾದಿ ಚ ।
ಸಪಶುಃ ಶಿವಸಾನ್ನಿಧ್ಯಮಾಪ್ನೋತ್ಯತ್ರ ನ ಸಂಶಯಃ ॥ ೧೦೨ ॥
ತಸ್ಮಾತ್ತತಂ ಚ ವಿತತಂ ಘನಂ ಸುಷಿರಮೇವಚ ।
ಚಾಮರಾಣಿ ಮಹಾರ್ಹಾಣಿ ಮಂಚಕಾಃ ಶಯನಾನಿಚ ॥ ೧೦೩ ॥
ಗಾಥಾಶ್ಚ ಇತಿಹಾಸಾಶ್ಚ ಗಾಯನಂ ಚ ಯಥಾವಿಧಿ ।
ಬಹುರೂಪಾದಿಕಂ ಶಂಭೋಃ ಪ್ರಿಯಾನ್ಯೇತಾನಿ ಕಲ್ಪಯೇತ್ ।
ಕಲ್ಪಯಿತ್ವಾ ಚ ಗಚ್ಛಂತಿ ಶಿವಲೋಕಂ ಹಿ ಪಾಪಿನಃ ॥ ೧೦೪ ॥
ಸುಧರ್ಮಾಣೋ ಮಹಾತ್ಮಾನಃ ಶಿವಪೂಜಾವಿಶಾರದಾಃ ॥ ೧೦೫ ॥

---

೧೦೧. ಶಿವಾಲಯದ ಅಂಗಣಗಳಲ್ಲಿ ಪುಣ್ಯಾತ್ಮರು ಸ್ಥಾಪನೆ ಮಾಡಿದ ಭೇರಿಯ ನಾದವನ್ನು ಕೇಳಿದ ಮಾತ್ರದಿಂದಲೇ ಪಾಪಿಷ್ಠರಾದ ಮಾನವರೆಲ್ಲರೂ ಪಾಪಗಳಿಂದ ಬಿಡುಗಡೆಹೊಂದಿ ಪವಿತ್ರರಾಗುತ್ತಾರೆ. ಆ ಶಿವಾಲಯಗಳ ಭೇರೀ ನಾದವನ್ನಾಲಿಸಿದವರು, ಪಾಷಂಡಿಗಳಾದರೂ, ಅಸಂಬದ್ಧವಾದಿ (ಪ್ರಲಾಪಿ) ಗಳಾದರೂ ಸಹ ಉತ್ತಮ ಗತಿಯನ್ನು ಪಡೆಯುತ್ತಾರೆ.

೧೦೨. ಪುಣ್ಯಶಾಲಿಗಳಾದ ಮಾನವರು ಶಿವಾಲಯಗಳಲ್ಲಿ ಸ್ಥಾಪನೆ ಮಾಡುವ ಭೇರೀ, ಮೃದಂಗ, ಮುರಜವೇ (ಝಲ್ಲರಿ) ಮೊದಲಾದ ವಾದ್ಯಗಳಿಗೆ ಯಾವ ಪಶುಗಳ ಚರ್ಮವನ್ನು ಕಟ್ಟಿರುತ್ತಾರೆಯೋ, ಆ ಪಶುಗಳೂ ಸಹ ಪರಶಿವನ ಸನ್ನಿಧಿಯನ್ನೈದುವುದೆಂಬುದರಲ್ಲಿ ಸಂದೇಹವಿಲ್ಲವು.

೧೦೩–೧೦೫. ಆದುದರಿಂದ ಸಮಸ್ತ ಮಾನವರೂ, ಶಿವಾಲಯಗಳಿಗೆ ಚೆನ್ನಾಗಿ ಕೂಡಿಸಿ. ಅಗಲವಾಗಿಯೂ ದಪ್ಪವಾಗಿಯೂ ಮಾಡಿರುವ ಚಾಮರಗಳನ್ನೂ, ಅಮೂಲ್ಯಗಳಾದ ಮಂಚಗಳನ್ನೂ, ಶಯನಗಳನ್ನೂ ಸಮರ್ಪಿಸುವುದು, ಅಲ್ಲಿ ಉಪಖ್ಯಾನಗಳನ್ನೂ, ಇತಿಹಾಸಪುರಾಣಗಳನ್ನೂ, ಸಂಗೀತವನ್ನೂ ಶಾಸ್ತ್ರೋಕ್ತವಾಗಿ ನಡೆಯಿಸುವುದು ಮುಂತಾದ ಅನೇಕ ಬಗೆಯ ಸೇವೆಗಳನ್ನು ಸಲ್ಲಿಸಬೇಕು. ಪರಮೇಶ್ವರನಿಗೆ ಈ ಸೇವೆಗಳೆಲ್ಲವೂ ಬಹಳ ಪ್ರಿಯಕರವಾದುವು. ಈ ರೀತಿ ಸೇವೆ ಸಲ್ಲಿಸಿದವರು ಪಾಪಿಗಳಾಗಿದ್ದರೂ ಅವರು ಮಾಡಿದ ಪಾಪಗಳಿಂದ ದೂರರಾಗಿ ಶಿವಲೋಕವನ್ನು ಸೇರುತ್ತಾರೆ. (ಮಾಡಬಾರದುದನ್ನೆಲ್ಲ ಮಾಡಿ ಪಾಪಿಗಳಾದವರೂ ಸಹ ಈ ಸೇವೆಗಳನ್ನು ಶಿವನಿಗೆ ಸಲ್ಲಿಸಿದರೆ ಪವಿತ್ರರಾಗಿ ಕೈಲಾಸವನ್ನು ಸೇರುತ್ತಾರೆಯೆಂಬುದರಲ್ಲಿ ಸಂಶಯವಿಲ್ಲವು.)

**ಗುರೋರ್ಮುಖಾಚ್ಚ ಸಂಪ್ರಾಪ್ತಶಿವಪೂಜಾರತಾಶ್ಚಯೇ ।**
**ಶಿವರೂಪೇಣ ಯೇ ವಿಶ್ವಂ ಪಶ್ಯಂತಿ ಕೃತನಿಶ್ಚಯಾಃ ॥ ೧೦೬ ॥**
**ಸಮ್ಯಗ್ಬುದ್ಧ್ಯಾ ಸಮಾಚಾರಾ ವರ್ಣಾಶ್ರಮಯುತಾ ನರಾಃ ।**
**ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾಃ ಶೂದ್ರಾಶ್ಚಾನ್ಯೇ ತಥಾ ನರಾಃ ॥೧೦೭॥**
**ಶ್ವಪಚೋಽಪಿ ವರಿಷ್ಠಃ ಸನ್ ಶಂಭೋಃ ಪ್ರಿಯತರೋ ಭವೇತ್ ।**
**ಶಂಭುನಾಽಧಿಷ್ಠಿತಂ ಸರ್ವಂ ಜಗದೇತಚ್ಚರಾಚರಂ ॥ ೧೦೮ ॥**
**ತಸ್ಮಾತ್ಸರ್ವಂ ಶಿವಮಯಂ ಜ್ಞಾತವ್ಯಂ ಸುವಿಶೇಷತಃ ।**
**ವೇದೈಃ ಪುರಾಣೈಃ ಶಾಸ್ತ್ರೈಶ್ಚ ತಥೌಪನಿಷದೈರಪಿ ॥ ೧೦೯ ॥**
**ಆಗಮೈರ್ವಿವಿಧೈಃ ಶಂಭುರ್ಜ್ಞಾತವ್ಯೋ ಗಾತ್ರಸಂಶ್ರಯಃ ।**
**ನಿಷ್ಕಾಮೈಶ್ಚ ಸಕಾಮೈಶ್ಚ ಪೂಜನೀಯಃ ಸದಾಶಿವಃ ॥ ೧೧೦ ॥**

---

೧೦೬–೧೦೭. ಮಹಾ ಧರ್ಮಿಷ್ಠರೂ, ಮಹಾತ್ಮರೂ, ಶಿವಪೂಜಾವಿಶಾರದರೂ ಆದವರು ಸದ್ಗುರುಗಳ ಮೂಲಕ ಉಪದೇಶವನ್ನು ಪಡೆದು ಶಿವಪೂಜೆಯಲ್ಲಿ ಆಸಕ್ತರಾದವರೂ, ಸ್ಥಿರಮತಿಗಳಾಗಿ ಪ್ರಪಂಚವೆಲ್ಲವನ್ನೂ ಶಿವನ ಸ್ವರೂಪವೆಂದೇ ತಿಳಿದು ಶಿವಮಯವನ್ನಾಗಿ ಕಾಣುವವರೂ ಸಮ್ಯಕ್ ಜ್ಞಾನವನ್ನು ಪಡೆದು, ಸದಾಚಾರನಿಷ್ಠರಾಗಿ ವರ್ಣಾಶ್ರಮಧರ್ಮಗಳನ್ನು ಪಾಲಿಸುವ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶುದ್ರರೂ ಇನ್ನೂ ಇತರ ಮಾನವರೂ ಶಿವಲೋಕವನ್ನು ಸೇರಿ ಸುಖಿಸುತ್ತಾರೆ.

೧೦೮. ಶಿವಭಕ್ತಿಯುಳ್ಳವನಾಗಿ, ಶಿವಪೂಜೆಯಲ್ಲಿ ತೊಡಗಿದವನು ಶ್ವಪಚನಾದರೂ ಅವನು ಶ್ರೇಷ್ಠನೇ! ಅವನೇ ಶಂಭುವಿಗೆ ಅತ್ಯಂತ ಪ್ರಿಯನಾದವನು. ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ಆ ಶಂಭುವಿನಿಂದಲೇ ಅಧಿಷ್ಠಿತವಾಗಿರುವುದು. ಎಲ್ಲೆಲ್ಲಿಯೂ ಆ ಪರಶಿವಮೂರ್ತಿಯೇ ವ್ಯಾಪಿಸಿರುತ್ತಾನೆ.

೧೦೯–೧೧೦. ಆದುದರಿಂದ ಸಮಸ್ತವೂ ಶಿವಮಯವಾದುದೆಂದು ತಿಳಿಯಬೇಕು. ವೇದಗಳು, ಪುರಾಣಗಳು, ಶಾಸ್ತ್ರಗಳು, ಉಪನಿಷತ್ತುಗಳು, ಬಗೆಬಗೆಯ ಆಗಮಗಳು ಈ ಎಲ್ಲವುಗಳ ಮೂಲಕವೂ ಆ ಪರಶಿವನನ್ನೇ ಅರಿತುಕೊಳ್ಳಬೇಕು. ಶಿವನು, ವೇದ-ವೇದಾಂತ-ಆಗಮ ಶಾಸ್ತ್ರಾದಿಗಳಿಂದ ಪ್ರತಿಪಾದಿತವಾದ ಸ್ವರೂಪವುಳ್ಳವನೆಂದು ತಿಳಿಯಿರಿ. ಆತನನ್ನು ಸಮಸ್ತ ಮಾನವರೂ ಫಲಾಪೇಕ್ಷೆಯಿಲ್ಲದೆಯೋ ಫಲಾಪೇಕ್ಷೆಯಿದ್ದೋ ಹೇಗಾದರೂ ಅವಶ್ಯವಾಗಿ ಸತತವೂ ಪೂಜಿಸಬೇಕು. (ಪರಶಿವಮೂರ್ತಿಯು ಸರ್ವವ್ಯಾಪಿಯೂ, ಮುಕ್ತಿಪ್ರದನೂ ಆಗಿರುವುದರಿಂದ ಸಮಸ್ತರೂ ಆ ಸ್ವಾಮಿಯಲ್ಲಿ ಯಾವ ಬಗೆಯಿಂದಲಾದರೂ ಭಕ್ತಿಯನ್ನು ಮಾಡಿ ಪೂಜಿಸಿ ಆತನ ಅನುಗ್ರಹಕ್ಕೆ ಪಾತ್ರರಾಗಬೇಕು.)

ಲೋಮಶ ಉವಾಚ:—

**ಕಥಯಾಮಿ ಪುರಾವೃತ್ತಮಿತಿಹಾಸಂ ಪುರಾತನಂ ।**
**ನಂದೀ ನಾಮ ಪುರಾ ವೈಶ್ಯೋ ಹ್ಯಾವಂತೀಪುರಮಾವಸತ್ ॥ ೧೧೧ ॥**
**ಶಿವಧ್ಯಾನಪರೋ ಭೂತ್ವಾ ಶಿವಪೂಜಾಂ ಚಕಾರ ಸಃ ।**
**ನಿತ್ಯಂ ತಪೋವನಸ್ಥಂ ಹಿ ಲಿಂಗಮೇಕಂ ಸಮರ್ಚಯತ್ ॥ ೧೧೨ ॥**
**ಉಷಸ್ಯುಷಸಿ ಚೋತ್ಥಾಯ ಪ್ರತ್ಯಹಂ ಶಿವವಲ್ಲಭಃ ।**
**ನಂದೀ ಲಿಂಗಾರ್ಚನರತೋ ಬಭೂವಾತಿಶಯೇನ ಹಿ ॥ ೧೧೩ ॥**
**ಲಿಂಗಂ ಪಂಚಾಮೃತೇನೈವ ಯಥೋಕ್ತೇನಾಭ್ಯಷೇಚಯತ್ ।**
**ವಿಪ್ರೈಃ ಸಮಾವೃತೋ ನಿತ್ಯಂ ವೇದವೇದಾಂಗಪಾರಗೈಃ ॥ ೧೧೪ ॥**
**ಯಥಾಶಾಸ್ತ್ರೇಣ ವಿಧಿನಾ ಲಿಂಗಾರ್ಚನಪರೋಽಭವತ್ ।**
**ಸ್ನಾಪಯಿತ್ವಾ ತತಃ ಪುಷ್ಪೈರ್ನಾನಾಶ್ಚರ್ಯಸಮನ್ವಿತೈಃ ॥ ೧೧೫ ॥**
**ಮುಕ್ತಾಫಲೈರಿಂದ್ರನೀಲೈರ್ಗೋಮೇದೈಶ್ಚ ನಿರಂತರಂ ।**
**ವೈಡೂರ್ಯೈಶ್ಚ ನೀಲೈಶ್ಚ ಮಾಣಿಕ್ಯೈಶ್ಚ ತಥಾರ್ಚಯತ್ ॥ ೧೧೬ ॥**

---

೧೧೧. ಲೋಮಶನು ಹೇಳುತ್ತಾನೆ:—ಅಯ್ಯಾ ಮಹರ್ಷಿಗಳೇ! ಇದೇ ವಿಷಯದಲ್ಲಿ ನಿಮಗೆ ಪುರಾತನವಾದ ಒಂದು ಇತಿವೃತ್ತವನ್ನು ಹೇಳುತ್ತೇನೆ; ಕೇಳಿರಿ. ಹಿಂದೆ ಅವಂತೀ ಪಟ್ಟಣದಲ್ಲಿ ನಂದಿಯೆಂದು ಹೆಸರುವಾಸಿಯಾದ ವೈಶ್ಯನೊಬ್ಬನಿದ್ದನು.

೧೧೨–೧೧೩. ಈ ವೈಶ್ಯ ನಂದಿಯು ಶಿವಧ್ಯಾನಪರಾಯಣನಾಗಿ ಪ್ರತಿ ನಿತ್ಯವೂ ಸಮೀಪದಲ್ಲಿಯೇ ಇದ್ದ ತಪೋವನದ ಒಂದಾನೊಂದು ಶಿವಲಿಂಗವನ್ನು ಬಹು ಚೆನ್ನಾಗಿ ಅರ್ಚಿಸುತ್ತಿದ್ದನು. ಪ್ರತಿ ದಿನದ ಮುಂಜಾವದಲ್ಲಿಯೂ ಎದ್ದು ಶಿವನಲ್ಲಿ ಭಕ್ತಿಸಂಪನ್ನನಾಗಿ ನದೀ ತೀರದಲ್ಲಿದ್ದ ಆ ಶಿವಲಿಂಗವನ್ನು ಅತಿಶಯ ವಾದ ರೀತಿಯಲ್ಲಿ ಪೂಜಿಸುತ್ತಿದ್ದನು.

೧೧೪–೧೧೫. ಇವನು ವೇದವೇದಾಂಗಪಾರಂಗತರಾದ ಬ್ರಾಹ್ಮಣರೊಡ ಗೂಡಿ ಪ್ರತಿದಿನವೂ ಶಾಸ್ತ್ರೋಕ್ತ ಪ್ರಕಾರವಾಗಿಯೇ ಶಿವಲಿಂಗಾರ್ಚನಾಸಕ್ತ ನಾಗಿ ಆ ಶಿವಲಿಂಗಮೂರ್ತಿಗೆ ಪಂಚಾಮೃತಾಭಿಷೇಕವನ್ನೆಸಗಿ ಬಗೆಬಗೆಯ ದಿವ್ಯ ಪರಿಮಳ ಪುಷ್ಪಗಳಿಂದ ಪೂಜಿಸುತ್ತಿದ್ದನು.

೧೧೬. ಅಲ್ಲದೆ ಮಹಾ ಶ್ರೀಮಂತನಾಗಿದ್ದುದರಿಂದ ಇವನು ಮುತ್ತು ಗಳಿಂದಲೂ, ಇಂದ್ರನೀಲ, ಗೋಮೇದಿಕ, ವೈಡೂರ್ಯ, ನೀಲ, ಮಾಣಿಕ್ಯ ಮೊದಲಾದ ವಿವಿಧ ರತ್ನಗಳಿಂದಲೂ ಆ ಪರಶಿವಲಿಂಗವನ್ನು ಪ್ರತಿನಿತ್ಯವೂ ಪರಮ ಭಕ್ತಿಸಂಪನ್ನನಾಗಿ ಅರ್ಚಿಸುತ್ತಿದ್ದನು.

ಏವಂ ನಂದೀ ಮಹಾಭಾಗೋ ಬಹೂನ್ಯಬ್ದಾನಿ ಚಾರ್ಚಯತ್ ।
ವಿಜನಸ್ಥಂ ತದಾ ಲಿಂಗಂ ನಾನಾಭೋಗಸಮನ್ವಿತಂ ॥ ೧೧೭ ॥
ಏಕದಾ ಮೃಗಯಾಸಕ್ತಃ ಕಿರಾತೋ ಭೂತಹಿಂಸಕಃ ।
ಅವಿವೇಕಪರೋ ಭೂತ್ವಾ ಮೃಗಯಾರಸಿಕಃ ಸದಾ ॥ ೧೧೮ ॥
ಪಾಪೀ ಪಾಪಸಮಾಚಾರೋ ವಿಚರನ್ಗಿರಿಕಂದರೇ ।
ಅನೇಕಶ್ವಾಪದಾಕೀರ್ಣೇ ಹನ್ಯಮಾನ ಇತಸ್ತತಃ ॥ ೧೧೯ ॥
ಏವಂ ವಿಚರಮಾಣೋಽಸೌ ಕಿರಾತೋ ಭೂತಹಿಂಸಕಃ ।
ಯದೃಚ್ಛಯಾಽಗತಸ್ತತ್ರ ಯತ್ರ ಲಿಂಗಂ ಸುಪೂಜಿತಂ ॥ ೧೨೦ ॥
ಉದಕಂ ವೀಕ್ಷಮಾಣೋಽಸೌ ತೃಷಯಾ ಪೀಡಿತೋ ಭೃಶಂ ।
ತತೋ ವನೇ ಸರಃ ಶೀಘ್ರಂ ದೃಷ್ಟ್ವಾ ತೋಯೇ ಸಮಾವಿಶತ್ ॥೧೨೧॥
ತೀರೇ ಸಂಸ್ಥಾಪ್ಯ ಧೃಷ್ಟಾತ್ಮಾ ತತ್ಸರ್ವಂ ಮೃಗಯಾದಿಕಂ ।
ಗಂಡೂಷೋತ್ಸರ್ಜನಂ ಕೃತ್ವಾ ಪೀತ್ವಾ ತೋಯಂ ಚ ನಿರ್ಗತಃ ॥೧೨೨॥
ಶಿವಾಲಯಂ ದದರ್ಶಾಗ್ರೇ ಅನೇಕಾಶ್ಚರ್ಯಮಂಡಿತಂ ।
ದೃಷ್ಟಂ ಸುಪೂಜಿತಂ ಲಿಂಗಂ ನಾನಾರತ್ನೈಃ ಪೃಥಕ್ಪೃಥಕ್ ॥ ೧೨೩ ॥

---

೧೧೭. ಅಯ್ಯಾ ವಿಪ್ರರಿರಾ! ಈ ರೀತಿ ಮಹಾ ಪುಣ್ಯವಂತನಾದ ಆ ವೈಶ್ಯ ನಂದಿಯು ನಿರ್ಜನವಾದ ಆ ತಪೋವನದಲ್ಲಿದ್ದ ಶಿವಲಿಂಗವನ್ನು ವಿವಿಧ ವೈಭವ ಭೋಗಭಾಗ್ಯಸಮರ್ಪಣೆಯಿಂದ ಬಹಳ ವರ್ಷಗಳ ಕಾಲ ಪೂಜಿಸಿದನು.

೧೧೮–೧೨೦. ಹೀಗಿರಲು ಒಂದಾನೊಂದು ದಿನ ಬೇಟೆಯಲ್ಲಿಯೇ ಮಮತೆಯುಳ್ಳ ಒಬ್ಬಾನೊಬ್ಬ ಬೇಡರವನು ಆ ತಪೋವನಕ್ಕೆ ಬಂದನು. ಅವನಾದರೋ ಸಮಸ್ತ ಪ್ರಾಣಿಗಳನ್ನು ಹಿಂಸಿಸುವವನು. ಸ್ವಲ್ಪವೂ ತಿಳುವಳಿಕೆಯೇ ಇಲ್ಲದವನು. ಕೇವಲ ಮೃಗಗಳನ್ನು ಬೇಟೆಯಾಡುವುದರಲ್ಲಿಯೇ ಅವನಿಗೆ ಆಸಕ್ತಿ. ಮಹಾ ಪಾಪಿಷ್ಠನೂ, ಕೇವಲ ಪಾಪಕರ್ಮಗಳನ್ನೇ ಮಾಡುವವನೂ ಆದ ಇವನು ಅಲ್ಲಲ್ಲಿ ಗಿರಿಗುಹೆಗಳನ್ನೆಲ್ಲ ಸುತ್ತುತ್ತ ಆಕಸ್ಮಾತ್ತಾಗಿ ಆ ತಪೋವನದಲ್ಲಿ ಶಿವಲಿಂಗಕ್ಕೆ ಪೂಜೆ ಮಾಡಿದ್ದ ಪ್ರದೇಶಕ್ಕೈತಂದನು.

೧೨೧–೧೨೨. ಸುತ್ತಿ ಸುತ್ತಿ ಬಹಳ ಬಾಯಾರಿದ್ದುದರಿಂದ ಜಲಪಾನ ಮಾಡಲೋಸುಗ ಆ ವನದಲ್ಲಿ ಸರೋವರವನ್ನು ಕಂಡು ಬಹು ಜಾಗ್ರತೆಯಾಗಿ ಅದರಲ್ಲಿಳಿದು ತಾನು ಕೊಂದು ತಂದಿದ್ದ ಮೃಗಗಳ ಮಾಂಸವನ್ನೆಲ್ಲಾ ತೀರದಲ್ಲಿ ಇರಿಸಿ, ಬಾಯಿಮುಕ್ಕಳಿಸಿ ತೊಳೆದುಕೊಂಡು ನೀರು ಕುಡಿದು ಹೊರಗೆ ಬಂದನು.

೧೨೩. ಹೀಗೆ ಬಂದೊಡನೆಯೇ ಆ ದುಷ್ಟನು ತನ್ನ ಮುಂಗಡೆಯೇ ಅನೇಕ ಆಶ್ಚರ್ಯಗಳಿಂದ ಕೂಡಿ, ಬಗೆಬಗೆಯ ರತ್ನಗಳಿಂದ ಬಹು ಅಚ್ಚುಕಟ್ಟಾಗಿ ಪೂಜಿಸಲಾಗಿದ್ದ ಆ ಶಿವಲಿಂಗವನ್ನು ಕಂಡನು.

ತಥಾ ಲಿಂಗಂ ಸಮಾಲಕ್ಷ್ಯ ಯದಾ ಪೂಜಾಂ ಸಮಾಹರತ್ ।
ರತ್ನಾನಿ ಸರ್ವಭೂತಾನಿ ವಿಧೂತಾನಿ ಇತಸ್ತತಃ ॥ ೧೨೪ ॥
ಸ್ನಪನಂ ತಸ್ಯ ಲಿಂಗಸ್ಯ ಕೃತಂ ಗಂಡೂಷವಾರಿಣಾ ।
ಕರೇಣೈಕೇನ ಪೂಜಾರ್ಥಂ ಬಿಲ್ವಪತ್ರಾಣಿ ಸೋಽರ್ಚಯತ್ ॥ ೧೨೫ ॥
ದ್ವಿತೀಯೇನ ಕರೇಣೈವ ಮೃಗಮಾಂಸಂ ಸಮರ್ಪಯತ್ ।
ದಂಡಪ್ರಣಾಮಸಂಯುಕ್ತಃ ಸಂಕಲ್ಪಂ ಮನಸಾಽಕರೋತ್ ॥ ೧೨೬ ॥
ಅದ್ಯ ಪ್ರಭೃತಿ ಪೂಜಾಂ ವೈ ಕರಿಷ್ಯಾಮಿ ಪ್ರಯತ್ನತಃ ।
ತ್ವಂ ಮೇ ಸ್ವಾಮೀ ಚ ಭಕ್ತೋಽಹಂ ಅದ್ಯಪ್ರಭೃತಿ ಶಂಕರ ॥ ೧೨೭ ॥
ಏವಂ ನೈಯಮಿಕೋ ಭೂತ್ವಾ ಕಿರಾತೋ ಗೃಹಮಾಗತಃ ।
ನಂದೀ ದದರ್ಶ ತತ್ಸರ್ವಂ ಕಿರಾತೇನ ಇತಸ್ತತಃ ॥ ೧೨೮ ॥
ಚಿಂತಾಯುಕ್ತೋಽಭವನ್ನಂದೀ ಜಾತಂ ಕಿಂ ಛಿದ್ರಮದ್ಯ ಮೇ ।
ಕಥಿತಾನಿ ಚ ವಿಘ್ನಾನಿ ಶಿವಪೂಜಾರತಸ್ಯ ಚ ।
ಉಪಸ್ಥಿತಾನಿ ತಾನ್ಯೇವ ಮಮ ಭಾಗ್ಯವಿಪರ್ಯಯಾತ್ ॥ ೧೨೯ ॥

---

೧೨೪–೧೨೭. ಒಡನೆಯೇ ಅವನಿಗೂ ಶಿವನಿಗೆ ಪೂಜೆ ಸಲ್ಲಿಸಬೇಕೆಂಬ ಬುದ್ಧಿ ಹುಟ್ಟಿತು. ಆ ಶಿವಲಿಂಗದ ಮೇಲಿದ್ದ ಅಮೂಲ್ಯ ರತ್ನಗಳೆಲ್ಲವನ್ನೂ ಹೊರನೂಕಿದನು. ತರುವಾಯ ಅವನು, ಆ ಶಿವಲಿಂಗಕ್ಕೆ ಎಂಜಲನೀರಿನಿಂದ ಅಭಿಷೇಕಮಾಡಿ ಒಂದು ಕೈಯಿಂದಲೇ ಪೂಜೆಗಾಗಿ ಬಿಲ್ವಪತ್ರೆಗಳನ್ನು ಹಾಕಿ, ಇನ್ನೊಂದು ಕೈಯಿಂದ ತಾನು ತಂದಿದ್ದ ಮೃಗಗಳ ಮಾಂಸವನ್ನು ನೈವೇದ್ಯವಾಗಿ ಸಮರ್ಪಿಸಿದನು. ಇದಾದ ಬಳಿಕ ಆ ಕಿರಾತನು ಆ ಶಿವಲಿಂಗಕ್ಕೆ ದೀರ್ಘದಂಡ ಪ್ರಣಾಮವನ್ನು ಮಾಡಿ ಮನಸ್ಸಿನಲ್ಲಿಯೇ "ಎಲೈ ಪರಶಿವನೇ! ಇಂದಿನಿಂದ ನೀನು ನನಗೆ ಒಡೆಯನು. ನಾನು ನಿನ್ನ ಭಕ್ತನು. ನಾನು ಇನ್ನುಮೇಲೆ ಪ್ರತಿದಿನವೂ ನಿನಗೆ ಪ್ರಯತ್ನಪೂರ್ವಕವಾಗಿ ಪೂಜೆಯನ್ನು ಸಲ್ಲಿಸುತ್ತೇನೆ" ಎಂದು ಸಂಕಲ್ಪಮಾಡಿದನು.

೧೨೮. ಎಲೈ ವಿಪ್ರರೇ! ಈ ರೀತಿ ಆ ಕಿರಾತನು ನಿಯಮನಿಷ್ಠನಾಗಿ ಮನೆಗೆ ಹಿಂತಿರುಗಿ ಬಂದನು. ಇತ್ತ ವೈಶ್ಯ ನಂದಿಯಾದರೋ ತಾನು ಮಾಡಿದ್ದ ಪೂಜೆಯೆಲ್ಲವನ್ನೂ ಆ ಕಿರಾತನು ಅತ್ತಿತ್ತ ನೂಕಿಹೋಗಿದ್ದುದನ್ನು ಕಂಡನು.

೧೨೯. ಆಗ ಅವನಿಗೆ ಬಹಳ ಸಂಕಟವಾಯಿತು; "ಅಕ್ಕಟಾ! ನನ್ನ ಶಿವಪೂಜೆಗೆ ಎಂತಹ ವಿಘ್ನವಡಸಿಬಂದಿತು! ಶಿವಪೂಜಾರತರಿಗೆ ವಿಘ್ನಗಳು ಹೀಗೆಯೇ ಸಂಭವಿಸುತ್ತವೆಯೆಂದು ಹೇಳುತ್ತಾರೆ! ಅಂತಹ ಎಡರುಗಳೇ ದುರದೃಷ್ಟವಶದಿಂದ ನನಗೂ ಒದಗಿಬಂದವು!"

**ಏವಂ ವಿಮೃಶ್ಯ ಸುಚಿರಂ ಪ್ರಕ್ಷಾಳ್ಯ ಶಿವಮಂದಿರಂ ।**
**ಯಥಾಗತೇನ ಮಾರ್ಗೇಣ ನಂದೀ ಸ್ವಗೃಹಮಾಗತಃ ॥ ೧೩೦ ॥**
**ತತೋ ನಂದಿನಮಾಗತ್ಯ ಪುರೋಧಾ ಗತಮಾನಸಂ ।**
**ಅಬ್ರವೀದ್ವಚನಂ ತಂ ತು ಕಸ್ಮಾತ್ತ್ವಂ ಗತಮಾನಸಃ ॥ ೧೩೧ ॥**
**ಪುರೋಹಿತಂ ಪ್ರತಿ ತದಾ ನಂದೀ ವಚನಮಬ್ರವೀತ್ ॥ ೧೩೨ ॥**
**ಅದ್ಯ ಧೃಷ್ಟಂ ಮಯಾ ವಿಪ್ರಾ ಅಮೇಧ್ಯಂ ಶಿವಸನ್ನಿಧೌ ।**
**ಕೇನೇದಂ ಕಾರಿತಂ ತತ್ರ ನ ಜಾನಾಮಿ ಕಥಂಚನ ॥ ೧೩೩ ॥**
**ತತಃ ಪುರೋಧಾ ವಚನಂ ನಂದಿನಂ ಚಾಬ್ರವೀತ್ತದಾ ।**
**ಯೇನ ವಿಸ್ಫಲಿತಂ ತತ್ರ ರತ್ನಾದೀನಾಂ ಪ್ರಪೂಜನಂ ॥**
**ಸೋಽಪಿ ಮೂಢೋ ನ ಸಂದೇಹಃ ಕಾರ್ಯಾಕಾರ್ಯೇಷು ಮಂದಧೀಃ**
**ತಸ್ಮಾಚ್ಚಿಂತಾ ನ ಕರ್ತವ್ಯಾ ತ್ವಯಾ ಅಣುರಪಿ ಪ್ರಭೋ ।**
**ಪ್ರಭಾತೇ ಚ ಮಯಾ ಸಾರ್ಧಂ ಗಮ್ಯತಾಂ ತಚ್ಛಿವಾಲಯಂ ॥ ೧೩೫ ॥**

---

೧೩೦. ಎಂಬೀ ಪ್ರಕಾರವಾಗಿ ಆ ನಂದಿಯು ಬಹಳ ಕಾಲ ಚಿಂತಿಸುತ್ತಿದ್ದು ತರುವಾಯ ಶಿವಮಂದಿರವೆಲ್ಲವನ್ನೂ ಚೆನ್ನಾಗಿ ತೊಳೆದು ತಾನು ಬಂದ ಮಾರ್ಗದಲ್ಲಿಯೇ ಮನೆಗೆ ಹಿಂತಿರುಗಿ ಬಂದನು.

೧೩೧. ಆಗ ಪುರೋಹಿತನು ಅವನ ಮನೆಗೆ ಬಂದು, ಕೇವಲ ಮನಕುಗ್ಗಿ ಕುಳಿತಿರುವ ಅವನನ್ನು ಕಂಡು, "ಅಯ್ಯಾ! ಹೀಗೇಕೆ ಕುಗ್ಗಿದ ಮನಸ್ಸುಳ್ಳವನಾಗಿರುವೆ?" ಎಂದು ಕೇಳಿದನು.

೧೩೨. ಆಗಲಾ ನಂದಿಯು ಆ ಪುರೋಹಿತನನ್ನು ಕುರಿತು, ಹೇಳಿದನು: "ಅಯ್ಯಾ ವಿಪ್ರನೇ! ಇಂದು ನಾನು ಶಿವನ ಸನ್ನಿಧಿಯಲ್ಲಿ ಅಮೇಧ್ಯವನ್ನು ಕಂಡುದಾಯಿತು. ಹೀಗೆ ಅದನ್ನು ಅಲ್ಲಿ ತಂದುಹಾಕಿದವರಾರೆಂಬುದು ಮಾತ್ರ ಎಷ್ಟು ಯೋಚಿಸಿದರೂ ನನಗೆ ತಿಳಿಯಲಿಲ್ಲವು."

೧೩೩-೧೩೪. ಇಂತು ನುಡಿದ ಆ ವೈಶ್ಯನಂದಿಯು ಮಾತುಗಳನ್ನು ಕೇಳಿ ಪುರೋಹಿತನು ಅವನನ್ನು ಕುರಿತು, "ಅಯ್ಯಾ ನಂದಿಯೇ! ನೀನು ಆ ಶಿವಲಿಂಗಕ್ಕೆ ಸಲ್ಲಿಸಿದ್ದ ರತ್ನಾದಿಗಳ ಪೂಜೆಯನ್ನು ನೂಕಿಹಾಕಿದವನು ಯಾವನೋ ಒಬ್ಬ ತಿಳಿಗೇಡಿಯಾಗಿರಬೇಕು. ಅಲ್ಪಬುದ್ಧಿಯಾದ ಅವನಿಗೆ ಕಾರ್ಯಾಕಾರ್ಯಗಳ ಅರಿವೇ ಇಲ್ಲವೆಂಬುದರಲ್ಲಿ ಸಂದೇಹವೇ ಇಲ್ಲ.

೧೩೫-೧೩೬. ಆದುದರಿಂದ ನೀನು ಸ್ವಲ್ಪವೂ ಚಿಂತಿಸಬೇಡ. ಎಲೈ ಪ್ರಭುವೇ! ನೀನು ನಾಳೆಯ ಪ್ರಾತಃಕಾಲದಲ್ಲಿ ನನ್ನೊಡನೆ ಆ ಶಿವಾಲಯಕ್ಕೆ ಬರುವವನಾಗು. ಅಲ್ಲಿ ಆ ದುಷ್ಟನನ್ನು ನೋಡಿಕೊಳ್ಳುವ ಕಾರ್ಯವನ್ನು ನಾನು ಮಾಡುತ್ತೇನೆ" ಎಂದನು. ವೈಶ್ಯ ನಂದಿಯು ಪುರೋಹಿತನ ಈ ಮಾತು

ನಿರೀಕ್ಷಣಾರ್ಥಂ ದುಷ್ಟಸ್ಯ ತತ್ಕಾರ್ಯಂ ವಿದಧಾಮ್ಯಹಂ ।
ಏತಚ್ಛ್ರುತ್ವಾ ತು ವಚನಂ ನಂದೀ ತಸ್ಯ ಪುರೋಧಸಃ ॥ ೧೩೬ ॥
ಆಸ್ಥಿತಃ ಸ್ವಗೃಹೇ ನಕ್ತಂ ದೂಯಮಾನೇನ ಚೇತಸಾ ।
ತಸ್ಯಾಂ ರಾತ್ರ್ಯಾಂ ವ್ಯತೀತಾಯಾಮಾಹೂಯ ಚ ಪುರೋಧಸಂ ॥೧೩೭॥
ಗತಃ ಶಿವಾಲಯಂ ನಂದೀ ಸಮಂತೇನ ಮಹಾತ್ಮನಾ ।
ತತೋ ದೃಷ್ಟಂ ಪೂರ್ವದಿನೇ ಕೃತಂ ತೇನ ದುರಾತ್ಮನಾ ॥ ೧೩೮ ॥
ಸಮ್ಯಕ್ಸುಪೂಜನಂ ಕೃತ್ವಾ ನಾನಾರತ್ನಪರಿಚ್ಛದಂ ।
ಪಂಚೋಪಚಾರಸಂಯುಕ್ತಂ ಚೈಕಾದಶ್ಯಾನ್ವಿತಂ ತಥಾ ॥ ೧೩೯ ॥
ಅನೇಕಸ್ತುತಿಭಿಃ ಸ್ತುತ್ವಾ ಗಿರೀಶಂ ಬ್ರಾಹ್ಮಣೈಃ ಸಹ ।
ತದಾ ಯಾಮದ್ವಯಂ ಜಾತಂ ಸ್ತೂಯಮಾನಸ್ಯ ನಂದಿನಃ ॥ ೧೪೦ ॥
ಆಯಾತೋ ಹಿ ಮಹಾಕಾಲಸ್ತ್ವಥರೂಪೋ ಮಹಾಬಲಃ ।
ಕಾಲರೂಪೋ ಮಹಾರೌದ್ರೋ ಧನುಷ್ಪಾಣಿಃ ಪ್ರತಾಪವಾನ್ ॥ ೧೪೧ ॥
ತಂ ದೃಷ್ಟ್ವಾ ಭಯವಿತ್ರಸ್ತೋ ನಂದೀ ಸ ವಿಲಲಾಪ ಹ ।
ಪುರೋಧಾಶ್ಚೈವ ಸಹಸಾ ಭಯಭೀತಸ್ತದಾಭವತ್ ॥ ೧೪೨ ॥

---

ಗಳನ್ನು ಕೇಳಿ ಅಂದಿನ ರಾತ್ರಿಯೆಲ್ಲ ಮನಸ್ಸಿನಲ್ಲಿಯೇ ಕೊರಗುತ್ತಿದ್ದು ಬೆಳಗಾಗುತ್ತಲೇ ಅವನನ್ನು ಕರೆದು ಮಹಾತ್ಮನಾದ ಅವನೊಡನೆಯೇ ಶಿವಾಲಯಕ್ಕೆ ಹೋದನು. ಅಲ್ಲಿ ಹೋದೊಡನೆಯೇ ಹಿಂದಿನ ದಿನ ದುರಾತ್ಮನಾದ ಕಿರಾತನು ಮಾಡಿದ್ದುದೆಲ್ಲವೂ ಕಂಡುಬಂದಿತು.

೧೩೯–೧೪೦. ಆಗಲಾ ವೈಶ್ಯ ನಂದಿಯು ಶಿವಮಂದಿರವೆಲ್ಲವನ್ನೂ ಶುದ್ಧಪಡಿಸಿಕೊಂಡು ಪುರೋಹಿತನಿಂದಲೂ, ಇತರ ಬ್ರಾಹ್ಮಣರಿಂದಲೂ ಕೂಡಿ ಶಿವಲಿಂಗಕ್ಕೆ ಏಕಾದಶವಾರ ರುದ್ರಾಭಿಷೇಕವನ್ನು ಮಾಡಿ ವಿವಿಧ ರತ್ನಗಳಿಂದಲೂ ಪಂಚೋಪಚಾರಗಳಿಂದಲೂ ಪೂಜೆ ಮಾಡಿ ಆ ಗಿರೀಶನನ್ನು ಅನೇಕ ಸ್ತೋತ್ರಗಳಿಂದ ಸ್ತುತಿಸಿದನು. ಅವನೀರೀತಿ ಸ್ತುತಿಸುತ್ತಿದ್ದಂತೆಯೇ ಎರಡು ಯಾಮಗಳು ಕಳೆದವು.

೧೪೧–೧೪೨. ಮೂರನೆಯ ಯಾಮವು ಮೊದಲಾಗುತ್ತಲೇ ಮಹಾಕಾಲನೂ, ಮಹಾ ಭಯಂಕರವಾದ ರೂಪವುಳ್ಳವನೂ, ಮಹಾಬಲನೂ, ಯಮಸ್ವರೂಪನೂ, ಮಹಾ ರೌದ್ರನೂ ಆದ ಆ ಕಿರಾತನು, ಕೈಯಲ್ಲಿ ಧನುಸ್ಸನ್ನು ಹಿಡಿದು ಮಹಾ ಪ್ರತಾಪಶಾಲಿಯಾಗಿ ಅಲ್ಲಿಗೆ ಬಂದನು. ಅವನನ್ನು ನೋಡಿದೊಡನೆಯೇ ವೈಶ್ಯ ನಂದಿಯು ಹೆದರಿ ನಡುಗುತ್ತ ಶಿವಪೂಜೆಗೆ ಭಂಗಬಂದುದಕ್ಕಾಗಿ ಗಟ್ಟಿಯಾಗಿ ಅಳತೊಡಗಿದನು. ಪುರೋಹಿತನೂ ಸಹ ಭಯದಿಂದ ತತ್ತಳಿಸಿಹೋದನು.

**ಕಿರಾತೇನ ಕೃತಂ ತತ್ರ ಯಥಾಪೂರ್ವಮವಿಸ್ಪಲಂ ।**
**ತಾಂ ಪೂಜಾಂ ಪ್ರಪದಾಽಹತ್ಯ ಬಿಲ್ವಪತ್ರಂ ಸಮರ್ಚಯತ್ ॥ ೧೪೩ ॥**
**ಸ್ನಪನಂ ತಸ್ಯ ಕೃತ್ವಾ ಚ ತತೋ ಗಂಡೂಷವಾರಿಣಾ ।**
**ನೈವೇದ್ಯಂ ತತ್ಫಲಂಚೈವ ಕಿರಾತಃ ಶಿವಮರ್ಪಯತ್ ॥ ೧೪೪ ॥**
**ದಂಡವತ್ಪತಿತೋ ಭೂಮಾವುತ್ಥಾಯ ಸ್ವಗೃಹಂ ಗತಃ ।**
**ತದ್ದೃಷ್ಟ್ವಾ ಮಹದಾಶ್ಚರ್ಯಂ ಚಿಂತಯಾಮಾಸ ವೈ ಚಿರಂ ।**
**ಪುರೋಧಸಾ ಸಹ ತದಾ ನಂದೀ ವ್ಯಾಕುಲಚೇತಸಾ ॥ ೧೪೫ ॥**
**ತೇನಚಾಕಾರಿತಾ ವಿಪ್ರಾ ಬಹವೋ ವೇದವಾದಿನಃ ॥ ೧೪೬ ॥**
**ನಿವೇದ್ಯ ತೇಷು ತತ್ಸರ್ವಂ ಕಿರಾತೇನ ಚ ಯತ್ಕೃತಂ ।**
**ಕಿಂ ಕಾರ್ಯಮಥ ಭೋ ವಿಪ್ರಾಃ ಕಥ್ಯತಾಂ ಚ ಯಥಾತಥಂ ॥ ೧೪೭ ॥**
**ಸಂಪ್ರಧಾರ್ಯ ತತಃ ಸರ್ವೇ ಮಿಲಿತ್ವಾ ಧರ್ಮಶಾಸ್ತ್ರತಃ ।**
**ಊಚುಸ್ಸರ್ವೇ ತದಾ ವಿಪ್ರಾ ನಂದಿನಂ ಚಾತಿಶಂಕಿನಂ ॥ ೧೪೮ ॥**

---

೧೪೩. ತರುವಾಯ ಆ ಕಿರಾತನು ಎಂದಿನಂತೆ, ಹೆಚ್ಚು ಕಡಮೆಗಳೇನೂ ಇಲ್ಲದಂತೆ ಹಿಂದಿನಂತೆಯೇ ಶಿವಲಿಂಗವನ್ನರ್ಚಿಸತೊಡಗಿದನು. ಅವನು, ಆ ವೈಶ್ಯ ನಂದಿಯು ಮಾಡಿದ್ದ ಪೂಜೆಯೆಲ್ಲವನ್ನೂ ಕಾಲಿನಿಂದಲೇ ಅತ್ತ ನೂಕಿಹಾಕಿ, ಮೊದಲು ಬಿಲ್ವಪತ್ರೆಯನ್ನು ಸಮರ್ಪಿಸಿದನು.

೧೪೪–೧೪೫. ತರುವಾಯ ಎಂಜಲ ನೀರಿನಿಂದ ಆ ಶಿವಲಿಂಗಕ್ಕೆ ಸ್ನಾನ ಮಾಡಿಸಿ, ತಾನು ತಂದಿದ್ದ ಮಾಂಸವನ್ನು ನೈವೇದ್ಯಮಾಡಿ, ಭೂಮಿಯಲ್ಲಿ ದಂಡದಂತೆ ಬಿದ್ದು ನಮಸ್ಕಾರಮಾಡಿ ಸ್ವಸ್ಥವಾಗಿ ತನ್ನ ಮನೆಗೆ ತಾನು ಹೊರಟು ಹೋದನು. ಈ ಪರಮಾಶ್ಚರ್ಯವನ್ನು ಕಂಡು ಆ ನಂದಿಯು ಬಹಳ ಹೊತ್ತು ಮನಸ್ಸೇ ತಳಮಳಿಸಿಹೋಗಿದ್ದ ಪುರೋಹಿತನೊಡನೆ ಏನುಮಾಡಬೇಕೆಂದು ಆಲೋಚಿಸಿದನು.

೧೪೬–೧೪೭. ಪುರೋಹಿತನಾದರೋ ಏನು ಮಾಡುವುದಕ್ಕೂ ತೋರದೆ ವೇದಾವಾದಿಗಳಾದ ಅನೇಕ ಬ್ರಾಹ್ಮಣರನ್ನೆಲ್ಲ ಕರೆಯಿಸಿ ಅವರಲ್ಲಿ ಕಿರಾತನು ಮಾಡಿದುದೆಲ್ಲವನ್ನೂ ಅರಿಕೆ ಮಾಡಿ, "ಅಯ್ಯಾ ಬ್ರಾಹ್ಮಣರೇ! ಈಗಲೀ ಶಿವಲಿಂಗಾರ್ಚನೆಯ ವಿಷಯದಲ್ಲಿ ನಾವೇನು ಮಾಡಬೇಕೆಂಬುದನ್ನು ಶಾಸ್ತ್ರವನ್ನು ನೋಡಿ ಸರಿಯಾಗಿ ಹೇಳಿರಿ" ಎಂದು ಕೇಳಿದನು.

೧೪೮. ಆಗ ವಿಪ್ರರೆಲ್ಲರೂ ಒಟ್ಟುಗೂಡಿ ಧರ್ಮಶಾಸ್ತ್ರಗಳನ್ನು ನೋಡಿ ಚೆನ್ನಾಗಿ ಆಲೋಚಿಸಿ ನಿರ್ಧರಿಸಿಕೊಂಡು, ಬಹಳವಾಗಿ ಸಂಶಯಗೊಂಡಿದ್ದ ಆ ವೈಶ್ಯ ನಂದಿಯನ್ನು ಕುರಿತು ಹೀಗೆ ಹೇಳಿದರು:

ಇದಂ ವಿಘ್ನಂ ಸಮುತ್ಪನ್ನಂ ದುರ್ನಿವಾರ್ಯಂ ಸುರೈರಪಿ ।
ತಸ್ಮಾದಾನಯ ಲಿಂಗಂ ತ್ವಂ ಸ್ವಗೃಹಂ ವೈಶ್ಯಸತ್ತಮ ॥ ೧೪೯ ॥
ತಥೇತಿ ಮತ್ವಾಸೌ ನಂದೀ ಶಿವಸ್ಯೋತ್ಪಾಟನಂ ತದಾ ।
ಕೃತ್ವಾ ಸ್ವಗೃಹಮಾನೀಯ ಪ್ರತಿಷ್ಠಾಪ್ಯ ಯಥಾವಿಧಿ ॥ ೧೫೦ ॥
ಸುವರ್ಣಪೀಠಿಕಾಂ ಕೃತ್ವಾ ನವರತ್ನಸುಶೋಭಿತಾಂ ।
ಉಪಚಾರೈರನೇಕೈಶ್ಚ ಪೂಜಯಾಮಾಸ ವೈ ತದಾ ॥ ೧೫೧ ॥
ಅಥಾಽಪರೇದ್ಯುರಾಯತಃ ಕಿರಾತಃ ಶಿವಮಂದಿರಂ ।
ಯಾವದ್ವಿಲೋಕಯಾಮಾಸ ಲಿಂಗನ್ನೈಶಂ ನ ದೃಷ್ಟವಾನ್ ॥ ೧೫೨ ॥
ಮೌನಂ ವಿಹಾಯ ಸಹಸಾ ಹ್ಯಾಕ್ರೋಶನ್ನಿದಮಬ್ರವೀತ್ ।
ಹೇ ಶಂಭೋ ಕ್ವಗತೋಽಸಿ ತ್ವಂ ದರ್ಶಯಾತ್ಮಾನಮದ್ಯ ವೈ ॥ ೧೫೩ ॥
ನದೃಷ್ಟೋಽಸಿ ಮಯಾ ತ್ವಂ ಹಿ ತ್ಯಜಾಮ್ಯದ್ಯ ಕಲೇವರಂ ।
ಹೇ ಶಂಭೋ ಹೇ ಜಗನ್ನಾಥ ತ್ರಿಪುರಾಂತಕರಪ್ರಭೋ ॥ ೧೫೪ ॥
ಹೇ ರುದ್ರ ಹೇ ಮಹಾದೇವ ದರ್ಶಯಾತ್ಮಾನಮಾತ್ಮನಾ ॥ ೧೫೫ ॥

---

೧೪೯–೧೫೧. "ಅಯ್ಯಾ ವೈಶ್ಯಶ್ರೇಷ್ಠನಾದ ನಂದಿಯೇ! ಈಗ ನಿನ್ನ ಶಿವಪೂಜೆಗೆ ಒದಗಿಬಂದಿರುವ ವಿಘ್ನವನ್ನು ಪರಿಹರಿಸಲು ದೇವತೆಗಳಿಗೂ ಶಕ್ಯವಲ್ಲವು. ಆದುದರಿಂದ ನೀನು ಆ ಶಿವಲಿಂಗವನ್ನು ನಿನ್ನ ಮನೆಗೆ ತೆಗೆದುಕೊಂಡು ಬಂದುಬಿಡು. ಆಮೇಲೆ ನಿನ್ನ ಶಿವಪೂಜೆಯು ನಿರ್ವಿಘ್ನವಾಗಿ ನಡೆಯುತ್ತದೆ." ವಿಪ್ರರು ಈ ರೀತಿ ನುಡಿಯಲು, ನಂದಿಯು ಹಾಗೆಯೇ ಆಗಲೆಂದು ಹೇಳಿ ಆ ತಪೋವನದ ಶಿವಲಿಂಗವನ್ನು ಕಿತ್ತು ತನ್ನ ಮನೆಗೆ ತೆಗೆದುಕೊಂಡುಬಂದು ನವರತ್ನಾಲಂಕೃತವಾದ ಸುವರ್ಣ ಪೀಠವನ್ನು ಮಾಡಿಸಿ ಅದರ ಮೇಲೆ ಶಾಸ್ತ್ರೋಕ್ತವಿಧಿಯಿಂದ ಪ್ರತಿಷ್ಠೆಮಾಡಿಸಿ ಬಹುವಿಧೋಪಚಾರಗಳಿಂದ ಆದಕ್ಕೆ ಪೂಜೆ ಪುರಸ್ಕಾರಗಳನ್ನೆಸಗಿದನು.

೧೫೨. ಮಾರನೆಯ ದಿನ ಮಹಾಕಾಲನೆಂಬ ಆ ಕಿರಾತನು ಆ ತಪೋವನದ ಶಿವಮಂದಿರಕ್ಕೆ ಬಂದು ನೋಡುತ್ತಾನೆ: ಅಲ್ಲಿ ಶಿವಲಿಂಗವೇ ಕಾಣಲಿಲ್ಲ.

೧೫೩–೧೫೫. ಆಗಲವನು ಮೌನವನ್ನು ತೊರೆದು ಗಟ್ಟಿಯಾಗಿ ಅಳುತ್ತ "ಹೇ ಶಂಭೋ! ಎಲ್ಲಿಗೆ ಹೋದೆ!! ಈಗಲೇ ಸಂದರ್ಶನವನ್ನು ಕರುಣಿಸು. ಈಗ ನಾನು ನಿನ್ನನ್ನು ಕಾಣದೆಹೋದರೆ. ಇದೋ ಈ ದೇಹವನ್ನೇ ತೊರೆದು ಬಿಡುತ್ತೇನೆ. ಓ ಶಂಭುವೇ! ಜಗನ್ನಾಥಾ!! ತ್ರಿಪುರಾಂತಕ! ಸ್ವಾಮಿ!! ಹೇ ರುದ್ರ! ಮಹಾದೇವಾ! ನೀನೀಗಲೇ ಮೈದೋರಬೇಕು!" ಎಂದು ಮೊರೆಯಿಟ್ಟನು.

ಏವಂ ಸಾಕ್ಷೇಪಮಧುರೈರ್ವಾಕ್ಯೈಃ ಕ್ಷಿಪ್ತಃ ಸದಾಶಿವಃ ।
ಕಿರಾತೇನ ತತೋ ರಂಗೈರ್ವೀರೋಸೌ ಜಠರಂ ಸ್ವಕಂ ॥ ೧೫೭ ॥
ಬಿಭೇದಾಶು ತತೋ ಬಾಹೂನಾಸ್ಫೋಟ್ಯೈವ ರುಷಾಽಬ್ರವೀತ್ ।
ಹೇ ಶಂಭೋ ದರ್ಶಯಾತ್ಮಾನಂ ಕುತೋ ಮಾಂ ತ್ಯಜ್ಯ ಯಾಸ್ಯಸಿ
ಇತಿ ಕ್ಷಿಪ್ತ್ವಾ ತತೋಽಂತ್ರಾಣಿ ಮಾಂಸಮುತ್ಕೃತ್ಯ ಸರ್ವತಃ ।
ತಸ್ಮಿನ್ಗರ್ತೇ ಕರೇಣೈವ ಕಿರಾತಃ ಸಹ ಸಾಕ್ಷಿಪತ್ ॥ ೧೫೮ ॥
ಸ್ವಸ್ಥಂ ಚ ಹೃದಯಂ ಕೃತ್ವಾ ಸಸ್ನೌ ತತ್ಸರಸಿ ಧ್ರುವಂ ।
ತಥೈವ ಜಲಮಾನೀಯ ಬಿಲ್ವಪತ್ರಂ ತ್ವರಾನ್ವಿತಃ ॥ ೧೫೯ ॥
ಪೂಜಯಿತ್ವಾ ಯಥಾ ನ್ಯಾಯಂ ದಂಡವತ್ಪತಿತೋ ಭುವಿ ॥ ೧೬೦ ॥
ಧ್ಯಾನಸ್ಥಿತಸ್ತತಸ್ತತ್ರ ಕಿರಾತಃ ಶಿವಸನ್ನಿಧೌ ।
ಪ್ರಾದುರ್ಭೂತಸ್ತದಾ ರುದ್ರಃ ಪ್ರಮಥೈಃ ಪರಿವಾರಿತಃ ॥ ೧೬೧ ॥
ಕರ್ಪೂರಗೌರೋ ದ್ಯುತಿಮಾನ್ಕಪರ್ದೀ ಚಂದ್ರಶೇಖರಃ ।
ತಂ ಗೃಹೀತ್ವಾ ಕರೇ ರುದ್ರ ಉವಾಚ ಪರಿಸಾಂತ್ವಯನ್ ॥ ೧೬೨ ॥
ಭೋ ಭೋ ವೀರ ಮಹಾಪ್ರಾಜ್ಞ ಮದ್ಭಕ್ತೋಽಸಿ ಮಹಾಮತೇ ।
ವರಂ ವೃಣೀಷ್ವಾತ್ಮಹಿತಂ ಯತ್ತೇಽಭಿಲಷಿತಂ ಮಹತ್ ॥ ೧೬೩ ॥

---

೧೫೭–೧೫೮. ಹೀಗೆ ಆಕ್ಷೇಪಣೆಯೊಡಗೂಡಿದ ಸವಿಮಾತುಗಳಿಂದ ಆ ಕಿರಾತನು ಸದಾಶಿವನನ್ನು ಸ್ತುತಿಸಿದನು. ಅಲ್ಲಿಗೂ ಶಿವನು ಮೈದೋರದಿರಲು ಆ ವೀರನು ತನ್ನುಗುರುಗಳಿಂದ ತಟಕ್ಕನೆ ಹೊಟ್ಟೆಯನ್ನು ಬಗೆದುಕೊಂಡು ತೋಳುಗಳನ್ನೆತ್ತಿ ಬಡಿದುಕೊಳ್ಳುತ್ತ ರೋಷಗೊಂಡು, “ಎಲೈ ಶಂಭುವೆ ಮೈದೋರು; ನನ್ನನ್ನು ತೊರೆದು ಎಲ್ಲಿಗೆ ಹೋದೆ” ಎಂದು ಹೇಳುತ್ತಾ ಹೊಟ್ಟೆಯಿಂದ ಕರುಳುಗಳನ್ನೂ, ಶರೀರದೆಲ್ಲೆಡೆಗಳಿಂದಲೂ ಮಾಂಸವನ್ನೂ ಬಗೆದು ತೆಗೆದು ಆ ಶಿವಲಿಂಗವನ್ನು ಕಿತ್ತಿದ್ದ ಗುಂಡಿಯಲ್ಲಿ ತನ್ನ ಕೈಯಾರವೇ ಹಾಕಿ ತುಂಬಿದನು.

೧೫೯–೧೬೩. ತರುವಾಯ ಆ ಭಕ್ತನು ಮನಸ್ಸನ್ನು ಸ್ಥಿರಗೊಳಿಸಿಕೊಂಡು ಅಲ್ಲಿಂದ ಹೋಗಿ ಸರೋವರದಲ್ಲಿ ಸ್ನಾನಮಾಡಿ ಅಂತೆಯೇ ನೀರನ್ನೂ, ಬಿಲ್ವಪತ್ರೆಯನ್ನೂ ಜಾಗ್ರತೆಯಾಗಿ ತೆಗೆದುಕೊಂಡುಬಂದು ಹಿಂದಿನಂತೆಯೇ ಪೂಜೆಮಾಡಿ ದೀರ್ಘದಂಡದಂತೆ ಭೂಮಿಯಲ್ಲಿ ಬಿದ್ದು ಆ ಶಿವನ ಸನ್ನಿಧಿಯಲ್ಲಿಯೇ ಧ್ಯಾನಮಗ್ನನಾಗಿಹೋದನು. ಆಗ ಸಾಕ್ಷಾತ್ ಪರಶಿವನು ಪ್ರಮಥಗಣಗಳೊಡಗೂಡಿ, ಕರ್ಪೂರದಂತೆ ಗೌರವರ್ಣವುಳ್ಳವನಾಗಿ ಬೆಳಗುತ್ತ, ಕಪರ್ದಿಯೂ, ಚಂದ್ರಶೇಖರನೂ ಆಗಿ ಪ್ರತ್ಯಕ್ಷನಾಗಿ ಆ ಕಿರಾತ ಮಹಾಕಾಲನನ್ನು ಕೈಹಿಡಿದೆಬ್ಬಿಸಿ ಅವನನ್ನು ಸಮಾಧಾನಗೊಳಿಸುತ್ತ, “ಅಯ್ಯಾ ವೀರನೇ! ಮಹಾಜ್ಞಾನಿಯಾದ

**ಏವಮುಕ್ತಃ ಸರುದ್ರೇಣ ಮಹಾಕಾಲೋ ಮುದಾನ್ವಿತಃ ।**
**ಪಪಾತ ದಂಡವದ್ಭೂವೌ ಭಕ್ತ್ಯಾ ಪರಮಯಾ ಯುತಃ ॥ ೧೬೪ ॥**
**ತತೋ ರುದ್ರಂ ಬಭಾಷೇ ಸ ವರಂ ಸಂಪ್ರಾರ್ಥಯಾಮ್ಯಹಂ ।**
**ಅಹಂ ದಾಸೋಽಸ್ಮಿ ತೇ ರುದ್ರ ತ್ವಂ ಮೇ ಸ್ವಾಮೀ ನ ಸಂಶಯಃ ॥೧೬೫॥**
**ಏತದ್ಬುದ್ಧ್ವಾತ್ಮನೋ ಭಕ್ತಿಂ ದೇಹಿ ಜನ್ಮನಿ ಜನ್ಮನಿ ।**
**ತ್ವಂ ಮಾತಾ ಚ ಪಿತಾ ತ್ವಂ ಚ ತ್ವಂ ಬಂಧು ಸ್ಸಖಾಹಿ ಮೇ ॥ ೧೬೬ ॥**
**ತ್ವಂ ಗುರುಸ್ತ್ವಂ ಮಹಾಮಂತ್ರೋ ಮಂತ್ರವೇದ್ಯೋಽಸಿ ಸರ್ವದಾ ।**
**ತಸ್ಮಾತ್ತ್ವದಪರಂ ನಾನ್ಯತ್ತ್ರಿಷು ಲೋಕೇಷು ಕಿಂಚನ ॥ ೧೬೭ ॥**
**ನಿಷ್ಕಾಮಂ ವಾಕ್ಯಮಾಕರ್ಣ್ಯ ಕಿರಾತಸ್ಯ ತದಾ ಭವಃ ।**
**ದದೌ ಪಾರ್ಷದ ಮುಖ್ಯತ್ವಂ ದ್ವಾರಪಾಲತ್ವಮೇವಚ ॥ ೧೬೮ ॥**

---

ನೀನೆನ್ನ ಭಕ್ತನಾಗಿರುವೆ! ಎಲೈ ಮಹಾಮತಿಯೇ! ನಿನಗೆ ಪ್ರಿಯವಾದ, ನಿನ್ನ ಕೋರಿಕೆಗನುಸಾರವಾದ ದೊಡ್ಡದೊಂದು ವರವನ್ನು ಕೇಳು" ಎಂದು ಹೇಳಿದನು.

೧೬೪–೧೬೫. ಶ್ರೀರುದ್ರನಿಂತು ನುಡಿಯಲು, ಆ ಮಹಾಕಾಲನು ಬಹಳ ಸಂತೋಷಗೊಂಡು ಭಕ್ತ್ಯಾವೇಶದಿಂದ ಮೆತ್ತಿ ದಂಡದಂತೆ ಆ ಶಿವನ ಸನ್ನಿಧಿ ಯಲ್ಲಿ ಮಣಿದು ತರುವಾಯ, "ಓ ಸ್ವಾಮಿಯೇ! ಹೇ ರುದ್ರ!! ಇದೋ ನಾನು ಈ ವರವನ್ನು ಮಾತ್ರ ಬೇಡುತ್ತೇನೆ. ನಾನು ನಿನಗೆ ಆಳು; ನೀನು ನನ್ನ ಒಡೆಯ; ಇದರಲ್ಲಿ ಸಂಶಯವಿಲ್ಲವಷ್ಟೆ!

೧೬೬–೧೬೭. ನೀನಿದನ್ನು ತಿಳಿದು ನನಗೆ ಜನ್ಮಜನ್ಮದಲ್ಲಿಯೂ ನಿನ್ನಲ್ಲಿ ಭಕ್ತಿಯನ್ನು ಮಾತ್ರ ದಯಪಾಲಿಸು. ಓ ಮಹಾದೇವಾ! ನೀನೇ ನನಗೆ ತಾಯಿ, ತಂದೆ, ಬಂಧು, ಬಳಗ, ಗೆಳೆಯ, ಗುರು, ಮಹಾಮಂತ್ರದಿಂದ ಅರಿಯಬೇಕಾದ ಪರದೈವ ಎಲ್ಲವೂ ನೀನೇ ಆಗಿರುವೆ. ಆದುದರಿಂದ ಓ ಸ್ವಾಮಿಯೇ! ನಿನ್ನನ್ನು ಬಿಟ್ಟು ಈ ಮೂರು ಲೋಕಗಳಲ್ಲಿ ನನಗೆ ಬೇಕಾದ ವಸ್ತುವಾವುದೂ ಇರುವುದಿಲ್ಲ. ಆದುದರಿಂದ ನೀನಿದನ್ನರಿತು ಭಾವಿಸಿ ಜನ್ಮಜನ್ಮ ದಲ್ಲಿಯೂ ನನಗೆ ನಿನ್ನಲ್ಲಿನ ಭಕ್ತಿಯನ್ನೇ ಕರುಣಿಸು. ಇದೇ ನಾನು ಬೇಡುವ ವರವು" ಎಂದು ಹೇಳಿದನು.

೧೬೮. ಅಯ್ಯಾ ಋಷಿಗಳಿರಾ! ಹೀಗೆ ಏನೊಂದೂ ಬಯಕೆಯೇ ಇಲ್ಲದೆ ಭಕ್ತಿಯೊಂದನ್ನೇ ದಯೆಗೈಯಬೇಕೆಂದು ಬೇಡುತ್ತಿರುವ ಆ ಕಿರಾತನ ಮಾತನ್ನು ಕೇಳಿ ಪರಶಿವನು ಅವನಿಗೆ ತನ್ನ ಕಿಂಕರರಿಗೆಲ್ಲ ಮುಖಂಡನಾಗಿರುವಿಕೆಯನ್ನೂ ತನ್ನ ಕೈಲಾಸಭವನದ ದ್ವಾರಪಾಲಕನಾಗಿರುವಿಕೆಯನ್ನೂ ವರವಾಗಿ ಅನುಗ್ರಹಿ ಸಿದನು.

ತದಾ ಡಮರುನಾದೇನ ನಾದಿತಂ ಭುವನತ್ರಯಂ ।
ಭೇರೀಭಾಂಕಾರಶಬ್ದೇನ ಶಂಖಾನಾಂ ನಿನದೇನ ಚ ॥ ೧೬೯ ॥
ತದಾ ದುಂದಭಯೋ ನೇದುಃ ಪಟಹಾಶ್ಚ ಸಹಸ್ರಶಃ ।
ನಂದೀ ತಂ ನಾದಮಾಕರ್ಣ್ಯ ವಿಸ್ಮಯಾತ್ತ್ವರಿತೋ ಯಯೌ ॥ ೧೭೦ ॥
ತಪೋವನಂ ಯತ್ರ ಶಿವಃ ಸ್ಥಿತಃ ಪ್ರಮಥಸಂವೃತಃ ।
ಕಿರಾತೋ ಹಿ ತದಾ ದೃಷ್ಟೋ ನಂದಿನಾ ಚ ತಥಾ ಭೃಶಂ ॥ ೧೭೧ ॥
ಉವಾಚ ಪ್ರಶ್ರಿತೋ ವಾಕ್ಯಂ ಸ ನಂದೀ ವಿಸ್ಮಯಾನ್ವಿತಃ ।
ಕಿರಾತಂ ಸ್ತೋತುಕಾಮೋಽಸೌ ಪರಮೇಣ ಸಮಾಧಿನಾ ॥ ೧೭೨ ॥
ಇಹಾನೀತಸ್ತ್ವಯಾ ಶಂಭುಸ್ತ್ವಂ ಭಕ್ತೋಽಸಿ ಪರಂತಪ ।
ತ್ವದ್ಭಕ್ತೋಽಹಮಿಹಪ್ರಾಪ್ತೋ ಮಾಂ ನಿವೇದಯ ಶಂಕರೇ ॥ ೧೭೩ ॥
ತಚ್ಛ್ರುತ್ವಾ ವಚನಂ ತಸ್ಯ ಕಿರಾತಸ್ತ್ವರಯಾಽನ್ವಿತಃ ।
ನಂದಿನಿಂ ಚ ಕರೇ ಗೃಹ್ಯ ಶಂಕರಂ ಸಮುಪಾಗತಃ ॥ ೧೭೪ ॥
ಪ್ರಹಸ್ಯ ಭಗವಾನ್ರುದ್ರಃ ಕಿರಾತಂ ವಾಕ್ಯಮಬ್ರವೀತ್ ।
ಕೋಽಯಂ ತ್ವಯಾ ಸಮಾನೀತೋ ಗಣಾನಾಮಿಹ ಸನ್ನಿಧೌ ॥ ೧೭೫ ॥

---

೧೬೯–೧೭೩. ಆ ಸಮಯದಲ್ಲಿ ಡಮರು ನಾದದಿಂದಲೂ, ಭೇರಿಗಳ ಭಾಂಕಾರ ಧ್ವನಿಯಿಂದಲೂ, ಶಂಖಧ್ವನಿಗಳಿಂದಲೂ ಮೂರು ಲೋಕಗಳೂ ಪ್ರತಿಧ್ವನಿತವಾದುವು. ಇಷ್ಟೆಯಲ್ಲದೆ ಅದೇ ಸಮಯದಲ್ಲಿಯೇ ದುಂದುಭಿಗಳೂ, ಸಾವಿರಾರು ಪಟಹಗಳೂ ಧ್ವನಿಗೊಂಡವು. ಇತ್ತ ವೈಶ್ಯನಾದ ನಂದಿಯು ಈ ಶಬ್ದವನ್ನು ಕೇಳಿ ಆಶ್ಚರ್ಯಭರಿತನಾಗಿ, ಪರಶಿವನು ಪ್ರಮಥಗಣಗಳೊಡಗೂಡಿ ಕಿರಾತ ಭಕ್ತನಿಗೆ ಮೈದೋರಿದ್ದ ತಪೋವನಕ್ಕೆ ಬಹು ಜಾಗ್ರತೆಯಾಗಿ ಬಂದನು. ಆಗಲವನು ಕಿರಾತನನ್ನು ಕಂಡು ಬೆಚ್ಚನೆಬೆರಗಾಗಿ ಬಹಳಹೊತ್ತು ಅವನನ್ನೇ ನೋಡುತ್ತಿದ್ದನು. ತರುವಾಯ ಅವನು ಆ ಕಿರಾತನನ್ನೇ ಅನನ್ಯಭಕ್ತಿಯಿಂದ ಸ್ತೋತ್ರಮಾಡಬಯಸಿ ಅವನನ್ನು ಕುರಿತು ಬಹು ನಮ್ರತೆಯಿಂದ, "ಅಯ್ಯಾ ಪರಂತಪನೇ! ನೀನು ಶಂಭುವನ್ನಿಲ್ಲಿಗೆ ಕರೆದುತಂದೆ! ನೀನು ಪರಮ ಶಿವಭಕ್ತನು. ಇದೋ ನಾನು ನಿನ್ನ ಭಕ್ತನಾಗಿ ಇಲ್ಲಿಗೆ ಬಂದಿರುವೆನು. ನನ್ನ ವಿಷಯವನ್ನೀಗ ಶಂಕರನಲ್ಲಿ ಅರಿಕೆ ಮಾಡು" ಎಂದು ಹೇಳಿದನು.

೧೭೪–೧೭೫. ಅವನ ಈ ಮಾತುಗಳನ್ನು ಕೇಳಿ ಆ ಕಿರಾತನು ಬಹುಬೇಗನೆ ಅವನನ್ನು ಕೈಹಿಡಿದು ಶಂಕರನ ಬಳಿಗೆ ಕರೆತಂದನು. ಆಗ ರುದ್ರನು ನಸುನಗುತ್ತ ಅವನನ್ನು ಕುರಿತು, "ಅಯ್ಯಾ ಭಕ್ತನೇ! ಇವನಾರು? ಈ ಪ್ರಮಥಗಣಗಳ ಸನ್ನಿಧಿಗೆ ಇವನನ್ನೇಕೆ ಕರೆದುತಂದೆ?" ಎಂದು ಕೇಳಿದನು.

ವಿಜ್ಞಪ್ತೋಽಸೌ ಕಿರಾತೇನ ಶಂಕರೋ ಲೋಕಶಂಕರಃ ।
ಕಿರಾತ ಉವಾಚ :—
ತವಭಕ್ತಃ ಸದಾ ದೇವ ತವ ಪೂಜಾರತೋ ಹ್ಯಸೌ ॥ ॥ ೧೭೬ ॥
ಪ್ರತ್ಯಹಂ ರತ್ನಮಾಣಿಕ್ಯೈಃ ಪುಷ್ಪೈಶ್ಚೋಚ್ಚಾವಚೈರಪಿ ।
ಜೀವಿತೇನ ಧನೇನಾಪಿ ಪೂಜಿತೋಽಸಿ ನ ಸಂಶಯಃ ॥ ॥ ೧೭೭ ॥
ತಸ್ಮಾಜ್ಜಾನೀಹಿ ಮನ್ಮಿತ್ರಂ ನಂದಿನಂ ಭಕ್ತವತ್ಸಲ ॥ ೧೭೮ ॥
ಮಹಾದೇವ ಉವಾಚ :—
ನ ಜಾನಾಮಿ ಮಹಾಭಾಗ ನಂದಿನಂ ವೈಶ್ಯಚರ್ಚಿತಂ ।
ತ್ವಂ ಮೇ ಭಕ್ತಃ ಸಖಾ ಚೇತಿ ಮಹಾಕಾಲ ಮಹಾಮತೇ ॥ ೧೭೯ ॥
ಉಪಾಧಿರಹಿತಾ ಯೇಚ ಯೇಽಸಿ ಚೈವ ಮನಿಸ್ವಿನಃ ।
ತೇಽತೀವ ಮೇ ಪ್ರಿಯಾ ಭಕ್ತಾಸ್ತೇ ವಿಶಿಷ್ಟಾ ನರೋತ್ತಮಾಃ ॥ ೧೮೦ ॥
ತವ ಭಕ್ತೋಹ್ಯಯಂ ತಾತ ಸಚ ಮೇಪ್ರಿಯಕೃತ್ತರಃ ।
ತಾವುಭೌ ಸ್ವೀಕೃತೌ ತೇನ ಪಾರ್ಷದತ್ವೇನ ಶಂಭುನಾ ॥ ೧೮೧ ॥

---

೧೭೬–೧೭೮. ಆಗಲಾ ಕಿರಾತನು, ಲೋಕವನ್ನೇ ಆನಂದಗೊಳಿಸಿ ಶಾಂತಿಯನ್ನುಂಟುಮಾಡುವ ಆ ಶಂಕರನಲ್ಲಿ ಈ ರೀತಿ ಅರಿಕೆ ಮಾಡಿದನು : "ದೇವಾ! ಇವನು ನಿನ್ನಲ್ಲಿ ನಿರಂತರವಾದ ಭಕ್ತಿಯನ್ನಿಟ್ಟುಕೊಂಡಿರುವ ಭಕ್ತನು. ಇವನು ಪ್ರತಿದಿನವೂ ರತ್ನಮಾಣಿಕ್ಯಗಳಿಂದಲೂ, ಅಮೂಲ್ಯಗಳಾದ ಪುಷ್ಪಗಳಿಂದಲೂ, ತನುಮನಧನಗಳಿಂದಲೂ ನಿನ್ನನ್ನು ಪೂಜಿಸಿರುತ್ತಾನೆ. ಇದರಲ್ಲಿ ಸಂಶಯವಿಲ್ಲವು. ಆದುದರಿಂದ, ಓ ಭಕ್ತವತ್ಸಲನೇ! ಅಂತಹ ಈ ನಂದಿಯು ನನ್ನ ಗೆಳೆಯನೆಂದು ತಿಳಿ."

೧೭೯. ಆಗ ಮಹಾದೇವನು, "ಎಲೈ ಮಹಾಮತಿಯಾದ ಮಹಾಕಾಲನೇ! ವೈಶ್ಯನ ಕುರುಹುಗಳುಳ್ಳ ನಂದಿಯೆಂಬ ಇವನಾರೋ ನಾನು ಕಾಣೆನು. ನೀನೇ ನನ್ನ ಭಕ್ತನು. ನೀನೇ ನನ್ನ ಗೆಳೆಯನು. ಇಷ್ಟುಮಾತ್ರ ನಾನು ಬಲ್ಲೆನು.

೧೮೦. ಕೇಳು; ಯಾವ ಉಪಾಧಿಗಳೂ ಇಲ್ಲದೆ ಸ್ಥಿರಚಿತ್ತರಾಗಿ ನನ್ನಲ್ಲಿ ಭಕ್ತಿಯನ್ನಿಡುವ ನರೋತ್ತಮರು ಯಾರೋ ಅವರೇ ನನಗೆ ಬಹಳ ಪ್ರಿಯರಾದ ಭಕ್ತರು. ಅವರು ಎಲ್ಲರಿಗೂ ಶ್ರೇಷ್ಠರಾದವರು.

೧೮೧. ಆದರೂ, ಎಲೈ ವತ್ಸನೇ! ಈ ನಂದಿಯು ನಿನ್ನ ಭಕ್ತನಾಗಿರುವುದರಿಂದ ನನಗೂ ಹೆಚ್ಚಿನ ಪ್ರಿಯವನ್ನುಂಟುಮಾಡಿದ ಭಕ್ತನೇ ಆದನು" ಎಂದು ಹೇಳಿ ಅವರಿಬ್ಬರನ್ನೂ ತನ್ನ ಪಾರ್ಷದರನ್ನಾಗಿ ಸ್ವೀಕರಿಸಿದನು.

ತತೋ ವಿಮಾನಾನಿ ಬಹೂನಿ ತತ್ರ ಸಮಾಗತಾನ್ಯೇವ ಮಹಾಪ್ರಭಾಣಿ ।
ಕಿರಾತವರ್ಯೇಣ ಸ ವೈಶ್ಯವರ್ಯ ಉದ್ಧಾರಿತಸ್ತೇನ ಮಹಾಪ್ರಭೇಣ ॥
ಕೈಲಾಸಂ ಪರ್ವತಂ ಪ್ರಾಪ್ತಾ ವಿಮಾನೈರ್ವೇಗವತ್ತರೈಃ ।
ಸಾರೂಪ್ಯಮೇವ ಸಂಪ್ರಾಪ್ತಾವೀಶ್ವರೇಣ ಮಹಾತ್ಮನಾ ॥ ೧೮೩ ॥
ನೀರಾಜಿತಾ ಗಿರಿಜಯಾ ಶಿವೇನ ಸಹಿತೌ ತದಾ ।
ಉವಾಚೇದಂ ತತೋ ದೇವೀ ಪ್ರಹಸ್ಯ ಗಜಗಾಮಿನೀ ॥ ೧೮೪ ॥
ಯಥಾ ತ್ವಂ ಹಿ ಮಹಾದೇವ ತಥಾ ಚೇಮೌ ನ ಸಂಶಯಃ ।
ಸ್ವರೂಪೇಣಚ ಗತ್ಯಾಚ ಹಾಸ್ಯಭಾವೈಃ ಸುಪೂಜಿತೌ ॥
ಮಯಾ ತ್ವಮೇಕ ಏವಾಸೀಃ ಸೇವಿತೋ ನೈವ ಸಂಶಯಃ ॥ ೧೮೫ ॥
ದೇವ್ಯಾಸ್ತದ್ವಚನಂ ಶ್ರುತ್ವಾ ಕಿರಾತೋ ವೈಶ್ಯ ಏವಚ ॥
ಸದ್ಯಃ ಪರಾಙ್ಮುಖೌ ಭೂತ್ವಾ ಶಂಕರಸ್ಯ ಚ ಪಶ್ಯತಃ ॥ ೧೮೬ ॥
ಭವಾವಸ್ತ್ವನುಕಂಪ್ಯೌ ಚ ಭವತಾ ಹಿ ತ್ರಿಲೋಚನ ॥ ೧೮೭ ॥
ತವದ್ವಾರಿ ಸ್ಥಿತೌ ನಿತ್ಯಂ ಭವಾವಸ್ತೇ ನಮೋ ನಮಃ ॥ ೧೮೮ ॥

---

೧೮೨–೧೮೩. ಇದಾದ ಬಳಿಕ ಮಹಾತೇಜಸ್ಸಿನಿಂದ ವಿರಾಜಿಸುತ್ತಿರುವ ಅನೇಕ ವಿಮಾನಗಳು ಅಲ್ಲಿಗೆ ಬಂದವು. ಆಗಲಾ ಕಿರಾತಶ್ರೇಷ್ಠನಾದ ಮಹಾಕಾಲನೂ, ಅವನಿಂದ ಉದ್ಧಾರವಾದ ಆ ವೈಶ್ಯೋತ್ತಮ ನಂದಿಯೂ ಇಬ್ಬರೂ ಬಹು ವೇಗವಾಗಿ ಹೋಗುವ ಆ ವಿಮಾನಗಳಲ್ಲಿ ಕುಳಿತು ಪರಶಿವನ ಸಾರೂಪ್ಯವನ್ನೇ ಪಡೆದು ಆತನೊಡನೆಯೇ ಕೈಲಾಸಗಿರಿಗೈತಂದರು.

೧೮೪–೧೮೫. ಆಗ ಪಾರ್ವತಿಯು ಶಿವನೊಡನೆ ಅವರಿಗೂ ಆರತಿಯನ್ನೆತ್ತಿದಳು. ತರುವಾಯ ಗಜಗಾಮಿನಿಯಾದ ಆ ಗಿರಿಜೆಯು ಪರಶಿವನನ್ನು ಕುರಿತು, ನಸುನಗುತ್ತ, "ಮಹಾದೇವ! ಪೂಜ್ಯರಾದ ಇವರು, ಸ್ವರೂಪದಲ್ಲಿಯೂ, ನಡಿಗೆಯಲ್ಲಿಯೂ, ಹಾಸ್ಯಭಾವದಲ್ಲಿಯೂ ನೀನು ಹೇಗಿರುವೆಯೋ ಹಾಗೆಯೇ ನಿನ್ನಂತೆ ಇರುತ್ತಾರೆ. ಇದರಲ್ಲಿ ಸಂಶಯವಿಲ್ಲವು.

೧೮೬. ಆದರೆ ನಾನು ಮಾತ್ರ ನಿನ್ನೊಬ್ಬನನ್ನೇ ಸೇವಿಸಿರುವೆನೆಂಬುದರಲ್ಲಿ ಸಂದೇಹವಿಲ್ಲವಷ್ಟೆ?" ಎಂದು ಹೇಳಿದಳು. ದೇವಿಯ ಮಾತನ್ನು ಕೇಳಿದೊಡನೆಯೇ ಆ ಕಿರಾತನೂ, ವೈಶ್ಯನೂ ಪರಶಿವನು ನೋಡುತ್ತಿರುವಂತೆಯೇ ನಾಚಿ ತಲೆತಗ್ಗಿಸಿ ನಿಂತರು.

೧೮೭–೧೮೮. ತರುವಾಯ ಅವರೀರ್ವರೂ "ಓ ತ್ರಿಲೋಚನಾ! ನಾವು ನಿನ್ನ ದಯೆಯನ್ನು ಮಾತ್ರ ಕೋರುವವರು. ನಾವು ಯಾವಾಗಲೂ ನಿನ್ನ ಭವನದ ಬಾಗಿಲನ್ನು ಕಾಯ್ದುಕೊಂಡಿರುತ್ತೇವೆ. ಇದೋ ನಿನಗೆ ನಮೋ ನಮಃ" ಎಂದರು.

ತಯೋರ್ಭಾವಂ ಸ ಭಗವಾನ್ವಿದಿತ್ವಾ ಪ್ರಹಸನ್ ಭವಃ ।
ಉವಾಚ ಪರಯಾ ಭಕ್ತ್ಯಾ ಭವತೋರಸ್ತು ವಾಂಛಿತಂ ॥ ೧೮೯ ॥
ತದಾ ಪ್ರಭೃತಿ ತಾವೇತೌ ದ್ವಾರಪಾಲೌ ಬಭೂವತುಃ ।
ಶಿವದ್ವಾರಿ ಸ್ಥಿತೌ ವಿಪ್ರಾ ಮಧ್ಯಾಹ್ನೇ ಶಿವದರ್ಶನೌ ॥ ೧೯೦ ॥
ಏಕೋ ನಂದೀ ಮಹಾಕಾಲೋ ದ್ವಾವೇತೌ ಶಿವವಲ್ಲಭೌ ।
ಊಚತು ಸ್ತೌ ಮುದಾಯುಕ್ತಾವೇಕ ಏವ ಸದಾಶಿವಃ ॥ ೧೯೧ ॥
ಏಕಾಂಗುಲಿಂ ಸಮುದ್ಧೃತ್ಯ ಮಹಾದೇವೋಽಭ್ಯಭಾಷತ ।
ತಥಾ ನಂದೀ ಉವಾಚೇದಮುದ್ಧೃತ್ಯ ಸ್ವಾಂಗುಳಿದ್ವಯಂ ॥ ೧೯೨ ॥
ಏವಂ ಸಂಜ್ಞಾನ್ವಿತೌ ದ್ವಾರಿ ತಿಷ್ಠತಸ್ತೌ ಮಹಾತ್ಮನಃ ।
ಶಂಕರಸ್ಯ ಮಹಾಭಾಗಾಃ ಶೃಣ್ವಂತು ಋಷಯೋ ಹ್ಯಮೀ ॥ ೧೯೩ ॥
ಶೈಲಾದೇನ ಪುರಾ ಪ್ರೋಕ್ತಂ ಶಿವಧರ್ಮಮನಂತಕಂ ।
ಪ್ರಾಣಿನಾಂ ಕೃಪಯಾ ವಿಪ್ರಾಃ ಸರ್ವೇಷಾಂ ದುಷ್ಕೃತಾತ್ಮನಾಂ ॥೧೯೪॥

---

೧೮೯. ಭಗವಾನ್ ಭವನು ಅವರೀರ್ವರ ಅಭಿಪ್ರಾಯವನ್ನೂ ತಿಳಿದು ಪರಮ ಪ್ರೀತಿಯಿಂದ, "ನಿಮ್ಮ ಇಷ್ಟವಿದ್ದಂತಾಗಲಿ" ಎಂದು ಹೇಳಿದನು.

೧೯೦. ಅಯ್ಯಾ ಮುನಿಗಳಿರಾ! ಅಂದಿನಿಂದ ಆ ನಂದಿಯೂ, ಮಹಾಕಾಲನೂ ಇಬ್ಬರೂ ಶಿವಮಂದಿರದ ಬಾಗಿಲಿನಲ್ಲಿ ಕಾವಲಿರುತ್ತ ಮಧ್ಯಾಹ್ನ ಕಾಲದಲ್ಲಿ ಮಾತ್ರ ಶಿವಸಂದರ್ಶನ ಮಾಡುತ್ತ ಆ ಕೈಲಾಸದಲ್ಲಿ ನೆಲಸಿರುತ್ತಾರೆ.

೧೯೧–೧೯೨. ಒಬ್ಬನು ನಂದಿ; ಇನ್ನೊಬ್ಬನು ಮಹಾಕಾಲ. ಇವರಿಬ್ಬರೂ ಪರಶಿವನಿಗೆ ಬಹಳ ನೆಚ್ಚಿನವರು. ಈರ್ವರೂ ಬಹು ಸಂತೋಷಗೊಂಡು ಆ ಶಿವನೊಬ್ಬನನ್ನೇ ಕುರಿತು ಮಾತನಾಡಿಕೊಳ್ಳುತ್ತಿದ್ದರು. ಮಹಾದೇವನು ಒಂದು ಬೆರಳನ್ನೆತ್ತಿ ಮಾತನಾಡಿದರೆ ನಂದಿಯು ಎರಡು ಬೆರಳುಗಳನ್ನೆತ್ತಿ ನುಡಿಯುವನು.

೧೯೩–೧೯೪. ಹೀಗೆ ಆ ಭಕ್ತಶ್ರೇಷ್ಠರೀರ್ವರೂ ಮಹಾತ್ಮನಾದ ಶಿವನ ಭವ್ಯ ಮಂದಿರದ ಬಾಗಿಲಿನಲ್ಲಿ ನಿಂತು ಕೇವಲ ಸಂಜ್ಞೆಯಿಂದಲೇ ಆ ಪರಶಿವನೊಡನೆ ಸಂಭಾಷಣಗೈಯುತ್ತ ನಲಿಯುತ್ತಿರುವರು. ಎಲೈ ಮಹಾಭಾಗ್ಯಶಾಲಿಗಳಾದ ಶೌನಕಾದಿ ವಿಪ್ರರೇ! ಕೇಳಿರಿ; ಪೂರ್ವದಲ್ಲಿ ಪರಶಿವನ ಕಿಂಕರನಾದ ಶೈಲಾದ ನಂದಿಯು ಈ ಲೋಕದಲ್ಲಿರುವ ಪಾಪಿಗಳಾದ ಎಲ್ಲ ಪ್ರಾಣಿಗಳ ವಿಷಯದಲ್ಲಿಯೂ ಕನಿಕರಗೊಂಡು ಅವರೆಲ್ಲರ ಉದ್ಧಾರಕ್ಕಾಗಿಯೇ ಅನೇಕ ಬಗೆಯ ಶಿವಧರ್ಮಗಳನ್ನು ಅಪಾರವಾಗಿ ಹೇಳಿರುವನು.

ಯೇ ಪಾಪಿನೋಽಪ್ಯಧರ್ಮಿಷ್ಠಾ ಅಂಧಾ ಮೂಕಶ್ಚ ಪಂಗವಃ ।
ಕುಲಹೀನಾ ದುರಾತ್ಮಾನಃ ಶ್ವಪಚಾ ಅಪಿ ಮಾನವಾಃ ॥ ೧೯೫ ॥
ಯಾದೃಶಾಸ್ತಾದೃಶಾಶ್ಚಾನ್ಯೇ ಶಿವಭಕ್ತಿಪುರಸ್ಕೃತಾಃ ।
ತೇಽಪಿ ಗಚ್ಛಂತಿ ಸಾಂನಿಧ್ಯಂ ದೇವದೇವಸ್ಯ ಶೂಲಿನಃ ॥ ೧೯೬ ॥
ಲಿಂಗಂ ಸಿಕತಮಯಂ ಯೇ ಪೂಜಯಂತಿ ವಿಪಶ್ಚಿತಃ ।
ತೇ ರುದ್ರಲೋಕಂ ಗಚ್ಛಂತಿ ನಾತ್ರ ಕಾರ್ಯಾವಿಚಾರಣಾ ॥ ೧೯೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ
"ಶಿವಭಕ್ತಿಮಾಹಾತ್ಮ್ಯವರ್ಣನಂ" ನಾಮ ಪಂಚಮೋಽಧ್ಯಾಯಃ

---

೧೯೫–೧೯೬. ಪಾಪಿಷ್ಠರಾಗಲಿ, ಅಧರ್ಮಿಷ್ಠರಾಗಿರಲಿ, ಕುರುಡರು, ಮೂಕರು, ಕುಂಟರು, ಕುಲಹೀನರೇ ಆಗಿರಲಿ, ಶ್ವಪಚರೇ ಆಗಿರಲಿ, ಹಾಗೆಯೋ, ಹೀಗೆಯೋ, ಹೇಗಾದರೂ ಇರಲಿ, ಯಾರಾದರೂ ಆಗಲಿ, ಯಾವ ಮಾನವರು ಶಿವಭಕ್ತಿಯನ್ನು ಪುರಸ್ಕರಿಸಿ ಶಿವನನ್ನಾರಾಧಿಸುತ್ತಾರೆಯೋ ಅವರೆಲ್ಲರೂ ದೇವ ದೇವನಾದ ಮಹಾದೇವನ ಸನ್ನಿಧಿಯನ್ನು ಸೇರಿ ಸುಖಿಸುತ್ತಾರೆ. ಯಾವ ಜ್ಞಾನಿಗಳು ಸೈಕತ(ಮರಳಿನಲ್ಲಿ) ಲಿಂಗವನ್ನು ಮಾಡಿ ಅದನ್ನು ಅನನ್ಯಭಕ್ತಿಯಿಂದ ಪೂಜಿಸುತ್ತಾರೆಯೋ ಅವರು ಕೈಲಾಸವನ್ನು ಸೇರುತ್ತಾರೆಯೆಂಬುದರಲ್ಲಿ ಸಂದೇಹವಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ
"ಶಿವಭಕ್ತಿ ಮಾಹಾತ್ಮ್ಯವರ್ಣನ"ವೆಂಬ
ಐದನೆಯ ಅಧ್ಯಾಯವು ಮುಗಿದುದು.

ಶ್ರೀಃ

## ಅಥ ಷಷ್ಠೋಽಧ್ಯಾಯಃ

### ಶ್ರೀ ಶಿವಲಿಂಗಮಾಹಾತ್ಮ್ಯೇ ಬ್ರಹ್ಮಾದಿಶಾಪವೃತ್ತಾಂತವರ್ಣನಂ

ಋಷಯ ಊಚು :—

ಲಿಂಗೇ ಪ್ರತಿಷ್ಠಾ ಚ ಕಥಂ ಶಿವಂ ಹಿತ್ವಾ ಪ್ರವರ್ತಿತಾ ।
ತತ್ಕಥ್ಯತಾಂ ಮಹಾಭಾಗ ಪರಂ ಶುಶ್ರೂಷತಾ ಹಿನಃ ॥ ೧ ॥

ಲೋಮಶ ಉವಾಚ :

ತದಾ ದಾರುವನೇ ಶಂಭುರ್ಭಿಕ್ಷಾರ್ಥಂ ಪ್ರಾಚರತ್ಪ್ರಭುಃ ॥ ೨ ॥

ದಿಗಂಬರೋ ಮುಕ್ತಜಟಾಕಲಾಪೋ
ವೇದಾಂತವೇದ್ಯೋ ಭುವನೈಕಭರ್ತಾ ।
ಸ ಈಶ್ವರೋ ಬ್ರಹ್ಮಕಪಾಲಧಾರೋ
ಯೋಗೀಶ್ವರಾಣಾಂ ಪರಮಃ ಪರಶ್ಚ ॥ ೩ ॥
ಅಣೋರಣೀಯಾನ್ಮಹತೋ ಮಹೀಯಾನ್
ಮಹಾನುಭಾವೋ ಭುವನಾಧಿಪೋ ಮಹಾನ್ ।
ಸ ಈಶ್ವರೋ ಭಿಕ್ಷುರೂಪೀ ಮಹಾತ್ಮಾ
ಭಿಕ್ಷಾಟನಂ ದಾರುವನೇ ಚಕಾರ ॥ ೪ ॥

---

### ಕನ್ನಡದ ಅನುವಾದ

#### ಶಿವಲಿಂಗಮಾಹಾತ್ಮ್ಯ — ಬ್ರಹ್ಮಾದಿಗಳಿಗೆ ಶಾಪ ಬಂದುದು

೧. ಋಷಿಗಳು ಕೇಳುತ್ತಾರೆ:—ಎಲೈ ಲೋಮಶ ಮಹರ್ಷಿಯೇ! ಶಿವನನ್ನುಳಿದು, ಶಿವಲಿಂಗಕ್ಕೆ ಪ್ರತಿಷ್ಠೆಯು ನಡೆದುದೆಂತು? ಈ ವಿಷಯವನ್ನು ಕೇಳಲು ನಮಗೆ ಬಹಳ ಕುತೂಹಲವುಂಟಾಗಿರುವುದು. ಆದುದರಿಂದ ನಮಗೆ ಈ ವಿಚಾರವನ್ನು ತಿಳಿಯಹೇಳುವವನಾಗು.

೨–೪. ಲೋಮಶನು ಹೇಳುತ್ತಾನೆ:—ಎಲೈ ಋಷಿಗಳಿರಾ! ಒಂದಾನೊಂದು ಸಮಯದಲ್ಲಿ ಶ್ರೀ ಪರಮೇಶ್ವರನು ದಾರುವನದಲ್ಲಿ ಭಿಕ್ಷಾಟನವನ್ನು ಮಾಡಿದನು. ತ್ರಿಭುವನಗಳಿಗೆಲ್ಲ ಏಕಪ್ರಭುವೂ, ವೇದಾಂತ (ಉಪನಿಷತ್) ವೇದ್ಯನೂ, ಯೋಗೀಶ್ವರರೆಲ್ಲರಿಗೂ ಶ್ರೇಷ್ಠನೂ, ಪರಾತ್ಪರನೂ ಆದ ಆ ಪರಮೇಶ್ವರನು ದಿಗಂಬರನಾಗಿ, ಜಟೆಗಳನ್ನು ಬಿರಿಹೊಯ್ದುಕೊಂಡು ಬ್ರಹ್ಮಕಪಾಲವನ್ನು ಕೈಯಲ್ಲಿ ಧರಿಸಿದನು. ಅಣುವಿಗಿಂತಲೂ ಅಣುತರನೂ, ಮಹತ್ತಿಗಿಂತಲೂ ಮಹತ್ತರನೂ, ಮಹಾನುಭಾವನೂ, ತ್ರಿಭುವನಗಳಿಗೆಲ್ಲ ಅಧೀಶ್ವರನೂ, ಮಹಾತ್ಮನೂ ಆದ ಆ ಪರಮೇಶ್ವರನು ಭಿಕ್ಷುರೂಪಧರನಾಗಿ ಆ ದಾರುವನದಲ್ಲಿ ಭಿಕ್ಷಾಟನವನ್ನು ಮಾಡಿದನು.

ಮಧ್ಯಾಹ್ನ ಋಷಯೋ ವಿಪ್ರಾಸ್ತೀರ್ಥಂ ಜಗ್ಮುಃ ಸ್ವಕಾಶ್ರಮಾತ್ ।
ತದಾನೀಮೇವ ಸರ್ವಾಸ್ತಾ ಋಷಿಭಾರ್ಯಾಃ ಸಮಾಗತಾಃ ॥ ೫ ॥
ವಿಲೋಕಯಂತ್ಯಃ ಶಂಭುಂ ತಮಾಚಖ್ಯುಶ್ಚ ಪರಸ್ಪರಂ ।
ಕೋಽಸೌ ಭಿಕ್ಷುಕರೂಪೋಽಯಮಾಗತೋಽಪೂರ್ವದರ್ಶನಃ ॥ ೬ ॥
ಅಸ್ಮೈ ಭಿಕ್ಷಾಂ ಪ್ರಯಚ್ಛಾಮೋ ವಯಂ ಚ ಸಖಿಭಿಃ ಸಹ ।
ತಥೇತಿ ಗತ್ವಾ ಸರ್ವಾಸ್ತಾ ಗೃಹೇಭ್ಯ ಆನಯನ್ಮುದಾ ॥ ೭ ॥
ಭಿಕ್ಷಾನ್ನಂ ವಿವಿಧಂ ಶ್ಲಕ್ಷ್ಣಂ ಸೋಪಚಾರಂ ಚ ಶಕ್ತಿತಃ ।
ಪ್ರದತ್ತಂ ಭಿಕ್ಷಿತಂ ತೇನ ದೇವದೇವೇನ ಶೂಲಿನಾ ॥ ೮ ॥
ಕಾಚಿತ್ಪ್ರಿಯತಮಂ ಶಂಭುಂ ಬಭಾಷೇ ವಿಸ್ಮಯಾನ್ವಿತಾ ।
ಕೋಽಸಿ ತ್ವಂ ಭಿಕ್ಷುಕೋ ಭೂತ್ವಾ ಆಗತೋಽತ್ರ ಮಹಾಮತೇ ॥ ೯ ॥
ಋಷೀಣಾಮಾಶ್ರಮಂ ಶುದ್ಧಂ ಕಿಮರ್ಥಂ ನೋ ನಿಷೀದಸಿ ।
ತಯೋಕ್ತೋಽಪಿ ತದಾ ಶಂಭುರ್ಬಭಾಷೇ ಪ್ರಹಸನ್ನಿವ ॥ ೧೦ ॥
ಈಶ್ವರೋಽಹಂ ಸುಕೇಶಾಂತೇ ಪಾವನಂ ಪ್ರಾಪ್ತವಾನಿಮಂ ।
ಈಶ್ವರಸ್ಯ ವಚಃ ಶ್ರುತ್ವಾ ಋಷಿಭಾರ್ಯಾ ಉವಾಚ ತಂ ॥ ೧೧ ॥

---

೫–೭. ಆಗ ಮಧ್ಯಾಹ್ನ ಸಮಯವಾಗಿದ್ದುದರಿಂದ ಆ ವನದಲ್ಲಿದ್ದ ಋಷಿಗಳೆಲ್ಲರೂ ಸ್ನಾನಾರ್ಥವಾಗಿ ಹೊರಗೆ ಹೊರಟುಹೋಗಿದ್ದರು. ಅದೇ ಸಮಯದಲ್ಲಿಯೇ ಋಷಿಪತ್ನಿಯರೆಲ್ಲರೂ ಹೊರಗೆಬಂದು ಆ ಶಂಭುವನ್ನು ನೋಡಿ, "ಬಹು ಸುಂದರಾಕಾರನಾಗಿ ಇಲ್ಲಿಗೈತಂದಿರುವ ಈ ಭಿಕ್ಷುಕನಾರಿರಬಹುದು? ನಾವೆಲ್ಲರೂ ನಮ್ಮ ಗೆಳತಿಯರೊಡಗೂಡಿ ಇವನಿಗೆ ಭಿಕ್ಷೆಯನ್ನು ನೀಡುವ" ಎಂದು ತಮ್ಮತಮ್ಮಲ್ಲಿಯೇ ಮಾತನಾಡಿಕೊಂಡರು.

೮. ತರುವಾಯ ಅವರೆಲ್ಲರೂ ಹಾಗೆಯೇ ಮಾಡುವುದಾಗಿ ನಿರ್ಧರಿಸಿ, ಮನೆಗಳಿಗೆ ಹೋಗಿ ತಮ್ಮ ಶಕ್ತ್ಯನುಸಾರ ರುಚಿಕರವಾದ ಬಗೆಬಗೆಯ ಭಿಕ್ಷಾನ್ನಗಳನ್ನು ತಂದು ಸವಿನುಡಿಯಾಡಿ ಆತನಿಗೆ ಕೊಟ್ಟರು. ಆ ಶೂಲಿಯೂ ಅವುಗಳನ್ನೆಲ್ಲ ಭಿಕ್ಷವೆತ್ತಿದನು.

೯–೧೧. ತರುವಾಯ, ಆ ಋಷಿಪತ್ನಿಯರಲ್ಲಿ ಒಬ್ಬಾಕೆಯು ಅಚ್ಚರಿಗೊಂಡು ಪ್ರಿಯತಮನಾದ ಆ ಶಂಭುವನ್ನು ಕುರಿತು, "ಎಲೈ ಮಹಾಮತಿಯೇ! ನೀನಾರು? ಏತಕ್ಕಾಗಿ ಈ ಭಿಕ್ಷುಕನ ವೇಷವನ್ನು ತಾಳಿ ಇಲ್ಲಿಗೆ ಬಂದಿರುವೆ? ಪಾವನವಾದ ಈ ಋಷಿಗಳ ಆಶ್ರಮದಲ್ಲಿ ಕುಳಿತುಕೊಳ್ಳುವುದಿಲ್ಲವೇಕೆ" ಎಂದು ಕೇಳಿದಳು. ಆಕೆಯಿಂತು ನುಡಿಯಲು ಶಂಭುವು, "ಎಲೌ ಸೊಗಸಾದ ಮುಂಗುರುಳುಳ್ಳವಳೇ! ನಾನು ಈಶ್ವರನು. ಪಾವನವಾದುದರಿಂದಲೇ ಈ ಋಷ್ಯಾಶ್ರಮಕ್ಕೈತಂದೆನು" ಎಂದನು. ಈ ರೀತಿ ನುಡಿದ ಆ ಮಹೇಶ್ವರನ ಮಾತನ್ನು ಕೇಳಿ, ಆ ಋಷಿಪತ್ನಿಯು ಮತ್ತೆ ಅವನನ್ನು ಕುರಿತು ಹೇಳಿದಳು:

ಈಶ್ವರೋಽಸಿ ಮಹಾಭಾಗ ಕೈಲಾಸಪತಿರೇವ ಚ ।
ಏಕಾಕಿನಃ ಕಥಂ ದೇವ ಭಿಕ್ಷಾರ್ಥಮಟನಂ ತವ ॥ ॥ ೧೨ ॥
ಏವಮುಕ್ತಸ್ತಯಾ ಶಂಭುಃ ಪುನಸ್ತಾಮಬ್ರವೀದ್ವಚಃ ।
ದಾಕ್ಷಾಯಣ್ಯಾ ವಿರಹಿತೋ ವಿಚಾರಾಮಿ ದಿಗಂಬರಃ ॥ ॥ ೧೩ ॥
ಭಿಕ್ಷಾಟನಾರ್ಥಂ ಸುಶ್ರೋಣಿ ಸಂಕಲ್ಪರಹಿತಃ ಸದಾ ।
ತಯಾ ಸತ್ಯಾ ವಿನಾ ಕಿಂಚಿತ್ ಸ್ತ್ರೀಮಾತ್ರಂ ಮಮ ಭಾಮಿನಿ ॥
ನರೋಚತೇ ವಿಶಾಲಾಕ್ಷಿ ಸತ್ಯಂ ಪ್ರತಿವದಾಮಿ ತೇ ॥ ॥ ೧೪ ॥
ತಸ್ಯೋಕ್ತವಚನಂ ಶ್ರುತ್ವಾ ಉವಾಚ ಕಮಲೇಕ್ಷಣಾ ।
ಸ್ತ್ರಿಯೋಹಿ ಸುಖಸಂಸ್ಪರ್ಶಾಃ ಪುರುಷಸ್ಯ ನ ಸಂಶಯಃ ॥ ೧೫ ॥
ತಾಸ್ತ್ರಿಯೋ ವರ್ಜಿತಾಃ ಶಂಭೋ ತ್ವಾದೃಶೇನ ವಿಪಶ್ಚಿತಾ ॥ ೧೬ ॥
ಇತಿ ಚ ಪ್ರಮದಾ ಸರ್ವಾ ಮಿಲಿತಾ ಯತ್ರ ಶಂಕರಃ ।
ಭಿಕ್ಷಾಪಾತ್ರಂ ಚ ತಚ್ಛಂಭೋಃ ಪೂರಿತಂ ಚ ಮಹಾಗುಣೈಃ ॥ ॥ ೧೭ ॥
ಅನ್ನೈಶ್ಚತುರ್ವಿಧೈಃ ಷಡ್ಭೀ ರಸೈಶ್ಚ ಪರಿಪೂರಿತಂ ।
ಯದಾ ಶಂಭುಃ ಗಂತುಕಾಮಃ ಕೈಲಾಸಂ ಪರ್ವತಂ ಪ್ರತಿ ।
ತದಾ ಸರ್ವಾ ವಿಪ್ರಪತ್ನ್ಯೋ ಹ್ಯನ್ವಗಚ್ಛನ್ಮದಾನ್ವಿತಾಃ ॥ ೧೮ ॥

---

೧೨. "ಎಲೈ ಸ್ವಾಮಿಯೇ! ನೀನು ಕೈಲಾಸಪತಿಯಾದ ಪರಮೇಶ್ವರನೇ ಆದರೆ ಹೀಗೇಕೆ ಹೆಂಡತಿಯನ್ನು ತೊರೆದುಬಂದು ಒಬ್ಬಂಟಿಗನಾಗಿ ಭಿಕ್ಷಾಟನ ಮಾಡುತ್ತಿರುವೆ?"

೧೩-೧೪. ಆಗ ಶಂಭುವು ಮತ್ತೆ ಅವಳನ್ನು ಕುರಿತು, "ಎಲೆ ಸುಶ್ರೋಣಿ! ದಾಕ್ಷಾಯಣಿಯ ವಿಯೋಗವಾದಂದಿನಿಂದ ನಾನು ಈ ರೀತಿ ಸಂಕಲ್ಪವೇ ಇಲ್ಲದೆ ದಿಗಂಬರನಾಗಿ ಭಿಕ್ಷೆಗಾಗಿ ಅಲೆಯುತ್ತಿರುವೆನು. ಎಲೌ ಸುಂದರಿಯೇ! ಆ ಸತಿಯನ್ನುಳಿದು ಮತ್ತಾವ ಹೆಂಗಸೂ ನನಗೆ ರುಚಿಸುವುದಿಲ್ಲ. ಇದನ್ನು ಸತ್ಯವಾಗಿ ಹೇಳುತ್ತಿರುವೆನು" ಎಂದನು.

೧೫. ಶಿವನಾಡಿದ ಈ ನುಡಿಯನ್ನಾಲಿಸಿ ಆ ಕಮಲೇಕ್ಷಣೆಯು ಮತ್ತೆ ಆತನನ್ನು ಕುರಿತು, "ಎಲೈ ಪರಶಿವನೇ! ಪುರುಷರಿಗೆ ಸುಖಸಂಸ್ಪರ್ಶರಾದವರು ಸ್ತ್ರೀಯರಲ್ಲವೆ? ಇದರಲ್ಲಿ ಯಾವ ಸಂಶಯವೂ ಇರುವುದಿಲ್ಲವಲ್ಲವೆ! ಎಲೈ ಶಂಭುವೇ! ಇಂತಹ ಸ್ತ್ರೀಯನ್ನು ಮಹಾ ಜ್ಞಾನಿಯಾದ ನೀನು ತೊರೆಯ ಬಹುದೆ?" ಎಂದು ಹೇಳಿದಳು.

೧೬-೧೮. ಈ ರೀತಿ ಆ ಪ್ರಮದೆಯರೆಲ್ಲರೂ ಮಾತನಾಡುತ್ತಲೇ ಶಂಕರ ನಿದ್ದೆಡೆಯಲ್ಲಿಯೇ ಗುಂಪುಗೂಡಿ ಆತನ ಭಿಕ್ಷಾಪಾತ್ರೆಯನ್ನು ನಾಲ್ಕುಬಗೆಯ ಅನ್ನಗಳಿಂದಲೂ ಷಡ್ರಸೋಪೇತವಾದ ಇತರ ಭಕ್ಷ್ಯಗಳಿಂದಲೂ ತುಂಬಿದರು.

ಗೃಹಕಾರ್ಯಂ ಪರಿತ್ಯಜ್ಯ ಚೇರುಸ್ತದ್ಗತಮಾನಸಾಃ ।
ಗತಾಸು ತಾಸು ಸರ್ವಾಸು ಪತ್ನೀಷು ಋಷಿಸತ್ತಮಾಃ ॥ ೧೯ ॥
ಯಾವದಾಶ್ರಮಮಭ್ಯೇತ್ಯ ತಾವಚ್ಛೂನ್ಯಂ ವ್ಯಲೋಕಯನ್ ।
ಪರಸ್ಪರಮಥೋಚುಸ್ತೇ ಪತ್ನ್ಯಃ ಸರ್ವಾ ಕುತೋ ಗತಾಃ ॥ ೨೦ ॥
ನ ವಿದ್ಮೋಽಥ ವೈ ಸರ್ವಾಃ ಕೇನ ನಷ್ಟೇನ ಚಾಹೃತಾಃ ।
ಏವಂ ವಿಮೃಶಮಾನಾಸ್ತೇ ವಿಚಿನ್ವಂತಸ್ತತಸ್ತತಃ ॥ ೨೧ ॥
ಸಮಪಶ್ಯಂಸ್ತತಃ ಸರ್ವೇ ಶಿವಸ್ಯಾನುಗತಾಶ್ಚ ತಾಃ ।
ಶಿವಂ ದೃಷ್ಟ್ವಾ ತು ಸಂಪ್ರಾಪ್ತಾ ಋಷಯಸ್ತೇ ರುಷಾನ್ವಿತಾಃ ॥ ೨೨ ॥
ಶಿವಸ್ಯಾಥಾಗ್ರತೋ ಭೂತ್ವಾ ಊಚುಃ ಸರ್ವೇ ತ್ವರಾನ್ವಿತಾಃ ।
ಕಿಂ ಕೃತಂ ಹಿ ತ್ವಯಾ ಶಂಭೋ ವಿರಕ್ತೇನ ಮಹಾತ್ಮನಾ ।
ಪರದಾರಾಪಹರ್ತಾಸಿ ತ್ವಂ ಋಷೀಣಾಂ ನ ಸಂಶಯಃ ॥ ೨೩ ॥

---

ಇದಾದಬಳಿಕ ಶ್ರೀ ಶಿವನು ಕೈಲಾಸಕ್ಕೆ ಹೊರಡಲನುವಾಗಲು ಆ ಋಷಿಪತ್ನಿಯರೆಲ್ಲರೂ ಆತನಲ್ಲಿಯೇ ನಟ್ಟ ಮನಸ್ಸುಳ್ಳವರಾಗಿ ತಮ್ಮ ಮನೆಗಳನ್ನೂ, ಮನೆಗೆಲಸಗಳೆಲ್ಲವನ್ನೂ ತೊರೆದು ಪರಮಾನಂದಭರಿತೆಯರಾಗಿ ಆತನನ್ನೇ ಹಿಂಬಾಲಿಸಿ ಹೊರಟರು.

೧೯. ಹೀಗೆ ಆ ಋಷಿಪತ್ನಿಯರೆಲ್ಲರೂ ಶಂಕರನನ್ನನುಸರಿಸಿ ಹೊರಟು ಹೋಗುತ್ತಿರಲು, ಇತ್ತ ಸ್ನಾನಕ್ಕಾಗಿ ಹೋಗಿದ್ದ ಋಷಿಶ್ರೇಷ್ಠರೆಲ್ಲರೂ ತಮ್ಮ ಆಶ್ರಮಗಳಿಗೆ ಹಿಂತಿರುಗಿ ಬಂದರು.

೨೦–೨೨. ಅವರು ತಂತಮ್ಮ ಆಶ್ರಮಗಳೆಲ್ಲವೂ ಬರಿದಾಗಿರುವುದನ್ನು ನೋಡಿ, "ನಮ್ಮ ಹೆಂಡತಿಯರೆಲ್ಲರೂ ಎಲ್ಲಿಗೆ ಹೋದರು? ಯಾವ ನೀಚನು ಇವರೆಲ್ಲರನ್ನೂ ಅಪಹರಿಸಿಕೊಂಡುಹೋದನೋ ತಿಳಿಯದಾಗಿರುವುದಲ್ಲ!" ಎಂದು ಪರಸ್ಪರವಾಗಿ ವಿಮರ್ಶೆಮಾಡಿಕೊಂಡು ಅಲ್ಲಲ್ಲಿ ಹುಡುಕುತ್ತ ಕಡೆಗೆ ಅವರೆಲ್ಲರೂ ಶಿವನನ್ನು ಅನುಸರಿಸಿಹೋಗುತ್ತಿರುವುದನ್ನು ಕಂಡರು. ಈ ರೀತಿ ಹೆಂಗಳೊಡಗೂಡಿ ಹೋಗುತ್ತಿರುವ ಆ ಶಿವನನ್ನು ಕಂಡೊಡನೆಯೇ ಋಷಿಗಳೆಲ್ಲರೂ ಬಹಳವಾಗಿ ಕೆರಳಿಹೋದರು.

೨೩. ತರುವಾಯ ಅವರೆಲ್ಲರೂ ಆ ಶಿವನ ಸನ್ನಿಧಿಗೆ ಬಹುಬೇಗನೈತಂದು ಅವನ ಮುಂಗಡೆ ಅಡ್ಡನಿಂತು ಸ್ವಲ್ಪವೂ ತಡೆಬಡೆಯಿಲ್ಲದೆ "ಎಲೈ ಶಂಭುವೇ! ನೀನು ವಿರಕ್ತನೂ, ಮಹಾತ್ಮನೂ ಆಗಿದ್ದರೂ ಎಂತಹ ಹೀನಕಾರ್ಯವನ್ನು ಮಾಡಿಬಿಟ್ಟೆ. ಈಗ ನೀನು ಋಷಿಭಾರ್ಯೆಯರಾದ ಇವರನ್ನು ಅಪಹರಿಸಿಕೊಂಡು ಹೋಗುತ್ತಿರುವುದರಿಂದ ಹೆರರ ಹೆಂಗಳನ್ನು ಅಪಹರಿಸಿದ ಪಾಪಕ್ಕೆ ಪಾತ್ರನಾದೆ. ಇದರಲ್ಲಿ ಸಂಶಯವಿಲ್ಲವು" ಎಂದರು.

**ಏವಂ ಕ್ಷಿಪ್ತಃ ಶಿವೋ ಮೌನೀ ಗಚ್ಛಮಾನೋಽಪಿ ಪರ್ವತಂ ।**
**ತದಾ ಸಋಷಿಭಿಃ ಶಪ್ತೋ ಮಹಾದೇವೋಽವ್ಯಯಸ್ತಥಾ ।**
**ಯಸ್ಮಾತ್ಕಳತ್ರಹರ್ತಾ ತ್ವಂ ತಸ್ಮಾತ್ ಷಂಡೋ ಭವ ತ್ವರಂ ॥ ೨೪ ॥**
**ಏವಂ ಶಪ್ತಃ ಸಮುನಿಭಿರ್ಲಿಗಂ ತಸ್ಯಾಪತದ್ಭುವಿ ।**
**ಭೂಮಿಪ್ರಾಪ್ತಂಚ ತಲ್ಲಿಂಗಂ ವವೃಧೇ ತರಸಾ ಮಹತ್ ॥ ೨೫ ॥**
**ಆವೃತ್ಯ ಸಪ್ತ ಪಾತಾಲಾನ್ ಕ್ಷಣಾಲ್ಲಿಂಗಮಥೋರ್ಧ್ವತಃ ।**
**ವ್ಯಾಪ್ಯ ಪೃಥ್ವೀಂ ಸಮಗ್ರಾಂಚ ಅಂತರಿಕ್ಷಂ ಸಮಾವೃಣೋತ್ ॥ ೨೬ ॥**
**ಸ್ವರ್ಗಾಃ ಸಮಾವೃತಾಃ ಸರ್ವೇ ಸ್ವರ್ಗಾತೀತಮಥಾಭವತ್ ।**
**ನ ಮಹೀ ನ ಚ ದಿಕ್ಚಕ್ರಂ ನ ತೋಯಂ ನಚ ಪಾವಕಃ ॥ ೪೭ ॥**
**ನಚ ವಾಯುರ್ನವಾಕಾಶಂ ನಾಹಂಕಾರೋ ನವಾ ಮಹತ್ ।**
**ನ ಚಾವ್ಯಕ್ತಂ ನ ಕಾಲಶ್ಚ ನ ಮಹಾಪ್ರಕೃತಿಸ್ತಥಾ ॥ ॥ ೨೮ ॥**
**ನಾಸೀದ್ವೈತವಿಭಾಗಂ ಚ ಸರ್ವಂ ಲೀನಂ ಚ ತಕ್ಷಣಾತ್ ।**
**ಯಸ್ಮಾಲ್ಲೀನಂ ಜಗತ್ಸರ್ವಂ ತಸ್ಮಿನ್ ಲಿಂಗೇ ಮಹಾತ್ಮನಃ ॥ ೨೯ ॥**

---

೨೪–೨೫. ಋಷಿಗಳು ಈ ರೀತಿ ತಿರಸ್ಕರಿಸಿ ನುಡಿಯುತ್ತಿದ್ದರೂ ಆ ಶಂಕರನು ಯಾವ ಮಾತನ್ನೂ ಆಡದೆ ಮೌನವಾಗಿ ಕೈಲಾಸವನ್ನು ಕುರಿತು ಹೋಗುತ್ತಲೇ ಇದ್ದನು. ಆಗಲಾ ಋಷಿಗಳೆಲ್ಲರೂ ಮತ್ತೂ ಕೆರಳಿ, ಅವ್ಯಯನಾದ ಆ ಮಹಾದೇವನನ್ನು, "ಎಲೈ! ನೀನು ಪರದಾರಾಪಹರಣ ಪಾತಕವನ್ನೆಸಗಿರುವುದರಿಂದ ಷಂಡನಾಗಿ ಹೋಗು!" ಎಂದು ಶಪಿಸಿದರು. ಹೀಗೆ ಶಪಿಸಿದೊಡನೆಯೇ ಆ ಶಿವನ ಲಿಂಗವು ಭೂಮಿಗೆ ಬಿದ್ದುಹೋಯಿತು. ಅದು ಭೂಮಿಯನ್ನು ಸೋಕಿದೊಡನೆಯೇ ಬಹು ಬೇಗನೆಯೇ ಮಹತ್ತರವಾಗಿ ಬೆಳೆಯತೊಡಗಿತು.

೨೬–೨೯. ಒಂದೇ ಒಂದು ಕ್ಷಣದಲ್ಲಿಯೇ ಆ ಶಿವನ ಲಿಂಗವು ಸಪ್ತ ಪಾತಾಳಗಳನ್ನೂ, ಸಪ್ತೋರ್ಧ್ವಲೋಕಗಳನ್ನೂ ಆವರಿಸಿ ಭೂವ್ಯಂತರಿಕ್ಷಗಳೆರಡನ್ನೂ ಅಖಂಡವಾಗಿ ಆವರಿಸಿಕೊಂಡಿತು. ಅದು ಸ್ವರ್ಗಲೋಕಗಳೆಲ್ಲವನ್ನೂ ಆವರಿಸಿ ಅದಕ್ಕೂ ಮೀರಿ ಬೆಳೆಯಿತು. ಆಗ, ಇದು ಭೂಮಿ, ಇದು ದಿಕ್ಕುಗಳು, ಇದು ನೀರು, ಇದು ಬೆಂಕಿ, ಇದು ಗಾಳಿ, ಇದು ಆಕಾಶ, ಇದು ಅಹಂಕಾರ, ಇದು ಮಹತ್ತು, ಇದು ಅವ್ಯಕ್ತ, ಇದು ಕಾಲ, ಇದು ಮಹಾಪ್ರಕೃತಿ ಎಂಬ ವಿಭಾಗವೇ ಇಲ್ಲವಾಯಿತು. ಎತ್ತನೋಡಿದರೂ ಆ ಲಿಂಗವೊಂದಲ್ಲದೆ ಮತ್ತೊಂದೇನೂ ಕಾಣದಾಯಿತು. ದ್ವೈತಭಾವವೆಲ್ಲವೂ ಒಂದು ಕ್ಷಣಕಾಲದಲ್ಲಿಯೇ ಆ ಲಿಂಗದಲ್ಲಿ ಅಡಗಿಹೋಯಿತು. ಯಾವ ಕಾರಣದಿಂದ ಶಿವಲಿಂಗದಲ್ಲಿ ಜಗತ್ತೆಲ್ಲವೂ ಲಯವಾಯಿತೋ ಆ ಕಾರಣದಿಂದ ಜ್ಞಾನಿಗಳಾದವರು, "ಲಯಗೊಳಿಸಿಕೊಳ್ಳುವುದರಿಂದ ಲಿಂಗ" ಎಂದು ಹೇಳುತ್ತಾರೆ.

ಲಯನಾಲ್ಲಿಂಗಮಿತ್ಯೇವಂ ಪ್ರವದಂತಿ ಮನೀಷಿಣಃ ।
ತಥಾಭೂತಂ ವರ್ಧಮಾನಂ ದೃಷ್ಟ್ವಾ ತೇಽಪಿ ಸುರರ್ಷಯಃ ॥ ೩೦ ॥
ಬ್ರಹ್ಮೇಂದ್ರವಿಷ್ಣುವಾಯ್ವಗ್ನಿಲೋಕಪಾಲಾಃ ಸಪನ್ನಗಾಃ ।
ವಿಸ್ಮಯಾವಿಷ್ಟಮನಸಃ ಪರಸ್ಪರಮಥಾಬ್ರುವನ್ ॥ ೩೧ ॥
ಕಿಮಾಯಾಮಂ ಚ ವಿಸ್ತಾರಂ ಕ್ವ ಚಾಂತಃ ಕ್ವಚ ಪೀಠಿಕಾ ।
ಇತಿ ಚಿಂತಾನ್ವಿತಾ ವಿಷ್ಣುಮೂಚುಃ ಸರ್ವೇ ಸುರಾಸ್ತದಾ ॥ ೩೨ ॥

ದೇವಾ ಊಚು :—

ಅಸ್ಯ ಮೂಲಂ ತ್ವಯಾ ವಿಷ್ಣೋ ಪದ್ಮೋದ್ಭವ ಚ ಮಸ್ತಕಂ ।
ಯುವಭ್ಯಾಂಚ ವಿಲೋಕ್ಯಂ ಸ್ಯಾತ್ ಸ್ಥಾನೇಽಸ್ಯಾಃ ಪರಿಪಾಲಕೌ ॥ ೩೩ ॥
ಶ್ರುತ್ವಾ ತು ತೌ ಮಹಾಭಾಗೌ ವೈಕುಂಠಕಮಲೋದ್ಭವೌ ।
ವಿಷ್ಣುರ್ಗತೋ ಹಿ ಪಾತಲಂ ಬ್ರಹ್ಮಾ ಸ್ವರ್ಗಂ ಜಗಾಮಹ ॥ ೩೪ ॥
ಸ್ವರ್ಗಂ ಗತಸ್ತದಾ ಬ್ರಹ್ಮಾ ಅವಲೋಕನತತ್ಪರಃ ।
ನಾಪಶ್ಯತ್ತತ್ರ ಲಿಂಗಸ್ಯ ಮಸ್ತಕಂಚ ವಿಚಕ್ಷಣಃ ॥ ೩೫ ॥
ತಥಾಗತೇನ ಮಾರ್ಗೇಣ ಪ್ರತ್ಯಾವೃತ್ಯಾಬ್ಜಸಂಭವಃ ।
ಮೇರುಪೃಷ್ಠಮನುಪ್ರಾಪ್ತಃ ಸುರಭ್ಯಾ ಲಕ್ಷಿತಸ್ತತಃ ॥ ೩೬ ॥

---

೩೦. ಈ ರೀತಿ ಬೆಳೆಯುತ್ತಿರುವ ಆ ಶಿವಲಿಂಗವನ್ನು ಕಂಡು ಅಲ್ಲಿದ್ದ ಮಹರ್ಷಿಗಳೂ, ಪನ್ನಗರೊಡಗೂಡಿದ ಬ್ರಹ್ಮ, ವಿಷ್ಣು, ವಾಯು, ಅಗ್ನಿ, ಲೋಕಪಾಲಕರು ಮೊದಲಾದವರೂ ಅಚ್ಚರಿಗೊಂಡ ಮನಸ್ಸುಳ್ಳವರಾಗಿ ತಂತಮ್ಮಲ್ಲಿಯೇ ಹೀಗೆಂದುಕೊಂಡರು :

೩೧. "ಈ ಶಿವಲಿಂಗದ ಎತ್ತರವೆಷ್ಟು! ಇದರ ಅಗಲವೆಷ್ಟು! ಇದರ ಮುಖವೆಲ್ಲಿ! ಇದರ ಪೀಠವಿರುವುದೆತ್ತ!!" ಹೀಗೆ ಯೋಚಿಸುತ್ತ ಅವರೆಲ್ಲರೂ ವಿಷ್ಣುವನ್ನು ಕುರಿತು ಹೇಳಿದರು :

೩೨–೩೩. ದೇವತೆಗಳು ಹೇಳುತ್ತಾರೆ: "ಎಲೈ ವಿಷ್ಣುವೆ! ನೀನು ಈ ಶಿವಲಿಂಗದ ಮೂಲವನ್ನು ನೋಡಿಕೊಂಡು ಬರಬೇಕು. ಎಲೈ ಪದ್ಮೋದ್ಭವನೇ! ನೀನು ಇದರ ಶಿರಸ್ಸನ್ನು ಕಂಡುಬರಬೇಕು. ಜಗತ್ತನ್ನು ಕಾಪಾಡುವವರಾದ ನೀವಿಬ್ಬರೂ ಈ ಕಾರ್ಯವನ್ನು ಮಾಡತಕ್ಕುದು.

೩೪. ಮಹಾಭಾಗ್ಯಶಾಲಿಗಳಾದ ಆ ವಿಷ್ಣು ಬ್ರಹ್ಮರೀರ್ವರೂ ದೇವತೆಗಳ ಈ ಮಾತನ್ನು ಕೇಳಿ ಅಂತೆಯೇ ಆಗಲೆಂದು ಒಪ್ಪಿ, ವಿಷ್ಣುವು ಪಾತಾಳಕ್ಕೂ, ಬ್ರಹ್ಮನು ಸ್ವರ್ಗಕ್ಕೂ ಹೊರಟರು.

೩೫–೩೬. ಆ ಶಿವಲಿಂಗದ ಮಸ್ತಕವನ್ನು ನೋಡಿಬರಲು ಸ್ವರ್ಗಕ್ಕೆ ಹೋದ ವಿಚಕ್ಷಣನಾದ ಬ್ರಹ್ಮನು ಎಷ್ಟು ಹುಡುಕಿದರೂ ಅಲ್ಲಿ ಅದರ ಮಸ್ತಕ

ಸ್ಥಿತಾ ಯಾ ಕೇತಕೀಚ್ಛಾಯಾಮುವಾಚ ಮಧುರಂ ವಚಃ ।
ತಸ್ಯಾ ವಚನಮಾಕರ್ಣ್ಯ ಸರ್ವಲೋಕಪಿತಾಮಹಃ ।
ಉವಾಚ ಪ್ರಹಸನ್ವಾಕ್ಯಂ ಛಲೋಕ್ತ್ಯಾ ಸುರಭಿಂ ಪ್ರತಿ ॥ ೩೭ ॥
ಲಿಂಗಂ ಮಹಾದ್ಭುತಂ ದ್ರಷ್ಟುಂ ಯೇನ ವ್ಯಾಪ್ತಂ ಜಗತ್ತ್ರಯಂ ।
ದರ್ಶನಾರ್ಥಂ ಚ ತಸ್ಯಾಂತಂ ದೇವೈಃ ಸಂಪ್ರೇಷಿತೋಽಸ್ಮ್ಯಹಂ ॥ ೩೮ ॥
ನ ದೃಷ್ಟಂ ಮಸ್ತಕಂ ತಸ್ಯ ವ್ಯಾಪಕಸ್ಯ ಮಹಾತ್ಮನಃ ।
ಕಿಂ ವಕ್ಷ್ಯೇಽಹಂ ಚ ದೇವಾಗ್ರೇ ಚಿಂತಾ ಮೇ ಚಾತಿವರ್ತತೇ ॥ ೩೯ ॥
ಲಿಂಗಸ್ಯ ಮಸ್ತಕಂ ದೃಷ್ಟಂ ದೇವಾನಾಂ ಚ ಮೃಷಾ ವದೇಃ ।
ತೇ ಸರ್ವೇ ಯದಿ ವಕ್ಷ್ಯಂತಿ ಇಂದ್ರಾದ್ಯಾ ದೇವತಾಗಣಾಃ ॥ ೪೦ ॥
ತೇ ಸಂತಿ ಸಾಕ್ಷಿಣೋ ದೇವಾ ಅಸ್ಮಿನ್ನರ್ಥೇ ವದ ತ್ವರಂ ।
ಅರ್ಥೇನ್‌ಭವಸಾಕ್ಷೀ ತ್ವಂ ಕೇತಕ್ಯಾಸಹ ಸುವ್ರತೇ ॥ ೪೧ ॥

---

ವನ್ನು ಕಾಣಲಿಲ್ಲವು. ತರುವಾಯ ಆತನು ತಾನು ಬಂದ ಮಾರ್ಗದಲ್ಲಿಯೇ ಹಿಂತಿರುಗುತ್ತ, ಮೇರುಪರ್ವತದ ತಪ್ಪಲಿಗೆ ಬಂದು ಅಲ್ಲಿ ಕಾಮಧೇನುವನ್ನು ಕಂಡನು.

೩೭. ಆ ಕಾಮಧೇನುವು ತಾಳೆಮರದ ನೆರಳಿನಲ್ಲಿ ನಿಂತಿದ್ದುದನ್ನು ಕಂಡು, ಎಲ್ಲ ಲೋಕಗಳಿಗೂ ಪಿತಾಮಹನಾದ ಆ ಬ್ರಹ್ಮನು ಅದನ್ನು ಕುರಿತು ನಗುತ್ತ ಕಪಟೋಕ್ತಿಗಳಿಂದ ಮಧುರವಾಗಿ ಈ ರೀತಿ ಹೇಳಿದನು.

೩೮. "ಎಲೈ ಸುರಭಿಯೇ! ಮೂರು ಲೋಕಗಳನ್ನೂ ವ್ಯಾಪಿಸಿರುವ ಮಹದದ್ಭುತವಾದ ಈ ಶಿವಲಿಂಗದ ಮಸ್ತಕವನ್ನು ಸಂದರ್ಶಿಸಿ ಬರಲು ದೇವತೆಗಳು ನನ್ನನ್ನಿಲ್ಲಿಗೆ ಕಳುಹಿಸಿಕೊಟ್ಟರು.

೩೯. ಎಲ್ಲೆಲ್ಲಿಯೂ ತಾನೇತಾನಾಗಿ ವ್ಯಾಪಿಸಿರುವವನೂ, ಮಹಾತ್ಮನೂ ಆದ ಈ ಶಿವನ ಲಿಂಗಮಸ್ತಕವನ್ನು ನಾನು ನೋಡಲಿಲ್ಲವು. ಇಂತಿರಲು ದೇವತೆಗಳ ಮುಂದೆ ಏನು ಹೇಳಲಿ ಎಂದು ನನಗೆ ಬಹಳ ಯೋಚನೆಯಾಗಿರುವುದು.

೪೦-೪೧. ಆದುದರಿಂದ ಈಗ ನಾನು ಲಿಂಗಮಸ್ತಕವನ್ನು ಕಂಡೆನೆಂದು ಆ ದೇವತೆಗಳೆದುರಿನಲ್ಲಿ ಸುಳ್ಳು ಹೇಳುವೆನು. ಒಂದುವೇಳೆ ಇಂದ್ರನೇ ಮೊದಲಾದ ದೇವತಾ ಸಮೂಹದವರೆಲ್ಲರೂ, "ಎಲೈ ಪಿತಾಮಹನೇ! ನಿನಗೆ ಈ ವಿಷಯದಲ್ಲಿ ಸಾಕ್ಷಿಗಳಾಗಿರುವ ದೇವತೆಗಳಾರು" ಎಂದೇನಾದರೂ ಕೇಳಿದರೆ ಸುವ್ರತೆಯಾದ ನೀನು ದಯವಿಟ್ಟು ಈ ಕೇತಕಿ (ತಾಳೆ)ಯೊಡನೆ ಜಾಗ್ರತೆಯಾಗಿ ಕಂಡುದುಂಟೆಂದು ನನಗೆ ಸಾಕ್ಷಿ ಹೇಳಬೇಕು. ಹೀಗೆ ನೀನು ಈ ವಿಷಯದಲ್ಲಿ ನನಗೆ ಸಾಕ್ಷಿಯಾಗಿರಬೇಕು" ಎಂದನು.

ತದ್ವಚಃ ಶಿರಸಾ ಗೃಹ್ಯ ಬ್ರಹ್ಮಣಃ ಪರಮೇಷ್ಠಿನಃ ।
ಕೇತಕೀ ಸಹಿತಾ ತತ್ರ ಸುರಭೀ ತದಮಾನಯತ್ ॥ ೪೨ ॥
ಏವಂ ಸಮಾಗತೋ ಬ್ರಹ್ಮಾ ದೇವಾಗ್ರೇ ಸಮುವಾಚಹ ॥ ೪೩ ॥

ಬ್ರಹ್ಮೋವಾಚ :—

ಲಿಂಗಸ್ಯ ಮಸ್ತಕಂ ದೇವಾ ದೃಷ್ಟವಾನಹಮದ್ಭುತಂ ।
ಸಮೀಚೀನಂ ಚಾರ್ಚಿತಂಚ ಕೇತಕೀದಳಸಂಯುತಂ ॥ ೪೪ ॥
ವಿಶಾಲಂ ವಿಮಲಂ ಶ್ಲಕ್ಷ್ಣಂ ಪ್ರಸನ್ನತರಮದ್ಭುತಂ ।
ರಮ್ಯಂಚ ರಮಣೀಯಂ ಚ ದರ್ಶನೀಯಂ ಮಹಾಪ್ರಭಂ ॥ ೪೫ ॥
ಏತಾದೃಶಂ ಮಯಾ ದೃಷ್ಟಂ ನ ದೃಷ್ಟಂ ತದ್ವಿನಾಕ್ವಚಿತ್ ।
ಬ್ರಹ್ಮಣೋ ಹಿ ವಚಃ ಶ್ರುತ್ವಾ ಸುರಾ ವಿಸ್ಮಯಮಾಯಯುಃ ॥ ೪೬ ॥
ಏವಂ ವಿಸ್ಮಯಪೂರ್ಣಾಸ್ತೇ ಇಂದ್ರಾದ್ಯಾ ದೇವತಾಗಣಾಃ ।
ತಿಷ್ಠಂತಿ ತಾವತ್ ಸರ್ವೇಶೋ ವಿಷ್ಣುರಧ್ಯಾತ್ಮದೀಪಕಃ ॥ ೪೭ ॥

---

೪೨–೪೩. ಆಗ ಕೇತಕಿಯೊಡನಿದ್ದ ಆ ಸುರಭಿ (ಕಾಮಧೇನುವು)ಯು ಪರಮೇಷ್ಠಿಯಾದ ಆ ಬ್ರಹ್ಮನ ಮಾತುಗಳನ್ನು ಶಿರಸಾವಹಿಸಿ ಅಂತೆಯೇ ಆಗಲೆಂದೊಪ್ಪಿ ಗೌರವಿಸಿದಳು. ಹೀಗೆ, ಎಲ್ಲವನ್ನೂ ಏರ್ಪಡಿಸಿಕೊಂಡಬಳಿಕ ಆ ಬ್ರಹ್ಮನು ದೇವತೆಗಳ ಬಳಿಗೈದಿ ಅವರ ಮುಂಗಡೆ ಬಹು ಸ್ಪಷ್ಟವಾಗಿ ಹೀಗೆ ಹೇಳಿದನು.

೪೪. ಬ್ರಹ್ಮನು ಹೇಳುತ್ತಾನೆ:—"ಎಲೈ ದೇವತೆಗಳಿರಾ! ಅದ್ಭುತವಾದ ಈ ಶಿವಲಿಂಗದ ಮಸ್ತಕವನ್ನು ನಾನು ಕಂಡೆನು. ಅದಕ್ಕೆ ಬಹು ಸೊಗಸಾಗಿ ಪೂಜೆಯಾಗಿದ್ದಿತು. ಅದು ಕೇತಕೀ ಕುಸುಮದ ದಳದೊಡಗೂಡಿದ್ದಿತು.

೪೫. ಆ ಪರಶಿವಲಿಂಗವು ವಿಶಾಲವೂ, ನಿರ್ಮಲವೂ, ಮೃದುವೂ, ಸುಪ್ರಸನ್ನವೂ, ಅದ್ಭುತವೂ, ಸುಂದರವೂ, ರಮಣೀಯವೂ, ದರ್ಶನೀಯವೂ, ಮಹಾ ಕಾಂತಿಯುಕ್ತವೂ ಆಗಿದ್ದಿತು.

೪೬. ನಾನು ಇಂತಹ ಪರಮಾದ್ಭುತವಾದ ಪರಶಿವನ ಲಿಂಗಮಸ್ತಕವನ್ನು ಕಂಡೆನು. ಅಲ್ಲಿ ಶಿವಲಿಂಗವನ್ನಲ್ಲದೆ ಎಲ್ಲಿಯೂ ಏನನ್ನೂ ನಾನು ನೋಡಲಿಲ್ಲವು." ಈ ರೀತಿ ನುಡಿದ ಆ ಬ್ರಹ್ಮನ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ ಬೆಚ್ಚನೆ ಬೆರಗಾಗಿಹೋದರು.

೪೭–೪೮. ಇಂದ್ರನೇ ಮೊದಲಾದ ದೇವತೆಗಳ ಗುಂಪಿನವರೆಲ್ಲರೂ ಈರೀತಿ ಬೆರಗಾಗಿರಲು, ಸರ್ವೇಶ್ವರನೂ, ಅಧ್ಯಾತ್ಮದೀಪಕನೂ ಆದ ವಿಷ್ಣುವು ಪಾತಾಲ ಲೋಕದಿಂದಲ್ಲಿಗೈತಂದು ಬಹು ತ್ವರೆಯುಳ್ಳವನಾಗಿ ಅವರೆಲ್ಲರನ್ನೂ ಕುರಿತು, "ಅಯ್ಯಾ ದೇವತೆಗಳಿರಾ! ನೀವು ನನಗೆ ಬೆಸಸಿದಂತೆ ಈ ಶಿವಲಿಂಗದ ಮೂಲ

**ಪಾತಾಲಾದಾಗತಃ ಸದ್ಯಃ ಸರ್ವೇಷಾಮುವದತ್ತ್ವರಂ ।**
**ತಸ್ಯಾಪ್ಯಂತೋ ನ ದೃಷ್ಟೋ ಮೇ ಹ್ಯವಲೋಕನತತ್ಪರಃ ॥ ೪೮ ॥**
**ವಿಸ್ಮಯೋ ಮೇ ಮಹಾನ್ ಜಾತಃ ಪಾತಾಲಾತ್ಪರತಶ್ಚರನ್ ।**
**ಅತಲಂ ಸುತಲಂ ಚಾಪಿ ನಿತಲಂ ಚ ರಸಾತಲಂ ॥ ೪೯ ॥**
**ತಥಾಗತಸ್ತಲಂ ಚೈವ ಪಾತಾಲಂ ಚ ತಥಾತಲಂ ।**
**ತಲಾತಲಾನಿ ತಾನ್ಯೇವಂ ಶೂನ್ಯವದ್ಯದ್ವಿಭಾವ್ಯತೇ ॥ ೫೦ ॥**
**ಶೂನ್ಯಾದಧಿ ಚ ಶೂನ್ಯಂ ಚ ತತ್ಸರ್ವಂ ಸುನಿರೀಕ್ಷಿತಂ ।**
**ನಮೂಲಂ ಚ ನಮಧ್ಯಂ ಚ ನ ಚಾಂತೋ ಹ್ಯಸ್ಯ ವಿದ್ಯತೇ ॥ ೫೧ ॥**
**ಲಿಂಗರೂಪೀ ಮಹಾದೇವೋ ಯೇನೇದಂ ಧಾರ್ಯತೇ ಜಗತ್ ।**
**ಯಸ್ಯ ಪ್ರಸಾದಾದುತ್ಪನ್ನಾ ಯೂಯಂ ಚ ಋಷಯಸ್ತಥಾ ॥ ೫೨ ॥**
**ಶ್ರುತ್ವಾ ಸುರಾಶ್ಚ ಋಷಯಸ್ತಸ್ಯವಾಕ್ಯಮಪೂಜಯನ್ ।**
**ತದಾ ವಿಷ್ಣುರುವಾಚೇದಂ ಬ್ರಹ್ಮಾಣಂ ಪ್ರಹಸನ್ನಿವ ॥ ೫೩ ॥**
**ದೃಷ್ಟಂ ಹಿ ಚೇತ್ತ್ವಯಾ ಬ್ರಹ್ಮನ್ಮಸ್ತಕಂ ಪರಮಾರ್ಥತಃ ।**
**ಸಾಕ್ಷಿಣಃ ಕೇ ತ್ವಯಾ ತತ್ರ ಅಸ್ಮಿನ್ನರ್ಥೇ ಪ್ರಕಲ್ಪಿತಾಃ ॥ ೫೪ ॥**

---

ವನ್ನು ನೋಡುವುದರಲ್ಲಿಯೇ ನೆಟ್ಟ ಮನಸ್ಸುಳ್ಳವನಾಗಿ ನಾನು ಎಷ್ಟೋ ಹುಡುಕಿದೆನು. ಆದರೂ ಅದನ್ನು ಕಾಣಲೇ ಇಲ್ಲವು.

೪೯–೫೧. ಪಾತಾಳಕ್ಕಿಂತಲೂ ಮುಂದಕ್ಕೆ ಹೋಗಿ ಅತಲಸುತಲ ಲೋಕಗಳನ್ನೂ ಅದರಿಂದಾಚಿನ ವಿತಲ ರಸಾತಲಗಳನ್ನೂ ಪ್ರವೇಶಿಸಿ, ಅಲ್ಲಿಂದ ಮುಂದೆ ತಲ, ಪಾತಾಲ, ಅತಲ, ತಲಾತಲಗಳನ್ನು ಹುಡುಕಿನೋಡಿದರೂ ಅವುಗಳೆಲ್ಲವೂ ಬರಿದಾಗಿಹೋಗಿದ್ದುವು. ಆ ಲೋಕಗಳೆಲ್ಲವೂ ಶೂನ್ಯಕ್ಕಿಂತಲೂ ಶೂನ್ಯಗಳಾಗಿ ಹೋಗಿದ್ದವು. ಇದನ್ನು ಮಾತ್ರ ನಾನು ಚೆನ್ನಾಗಿ ನೋಡಿ ಬಂದೆನು. ಆದುದರಿಂದ ಶಿವಲಿಂಗಕ್ಕೆ ಮೂಲವಾಗಲಿ, ಮಧ್ಯವಾಗಲಿ, ತುದಿಯಾಗಲಿ ಇರುವುದಿಲ್ಲವು.

೫೨. ಹೀಗೆ ಆ ಲಿಂಗದ ರೂಪದಲ್ಲಿರುವಾತನು, ಯಾರ ಪ್ರಸಾದದಿಂದ ನೀವೂ, ಈ ಋಷಿಗಳೂ ಉದಿಸಿರುವರೋ, ಯಾರು ಈ ಜಗತ್ತನ್ನೇ ಧರಿಸಿರುವನೋ ಆ ಮಹಾದೇವನೇ ಆಗಿರುವನು.''

೫೩–೫೪. ಈ ರೀತಿ ನುಡಿದ ಆ ಮಹಾವಿಷ್ಣುವಿನ ಮಾತುಗಳನ್ನು ಕೇಳಿ ದೇವತೆಗಳೂ, ಋಷಿಗಳೂ ಅದು ಸತ್ಯವೆಂದು ಗೌರವಿಸಿದರು. ಆಗ ವಿಷ್ಣುವು ಬ್ರಹ್ಮನನ್ನು ಕುರಿತು ನಸುನಗುತ್ತ, ''ಅಯ್ಯಾ ಬ್ರಹ್ಮನೇ! ನೀನು ನಿಜವಾಗಿಯೂ ಈ ಶಿವಲಿಂಗದ ಮಸ್ತಕವನ್ನು ನೋಡಿದೆಯಾ? ಈ ವಿಷಯದಲ್ಲಿ ಯಾರನ್ನು ಸಾಕ್ಷಿಗಳನ್ನಾಗಿರಿಸಿರುವೆ!'' ಎಂದು ಕೇಳಿದನು.

ಆಕರ್ಣ್ಯ ವಚನಂ ವಿಷ್ಣೋರ್ಬ್ರಹ್ಮಾ ಲೋಕಪಿತಾಮಹಃ ।
ಉವಾಚ ತ್ವರಿತೇನೈವ ಕೇತಕೀ ಸುರಭೀತಿ ಚ ॥ ೫೫ ॥
ತೇ ದೇವಾ ಮಮ ಸಾಕ್ಷಿತ್ವೇ ಜಾನೀಹಿ ಪರಮಾರ್ಥತಃ ।
ಬ್ರಹ್ಮಣೋಹಿ ವಚಃ ಶ್ರುತ್ವಾ ಸರ್ವೇ ದೇವಾಸ್ತ್ವರಾನ್ವಿತಾಃ ॥ ೫೬ ॥
ಆಹ್ವಾನಂ ಚಕ್ರಿರೇ ತಸ್ಯಾಃ ಸುರಭ್ಯಾಶ್ಚ ತಯಾಸಹ ।
ಆಗತೇ ತಕ್ಷಣಾದೇವ ಕಾರ್ಯಾರ್ಥಂ ಬ್ರಹ್ಮಣಸ್ತದಾ ॥ ೫೭ ॥
ಇಂದ್ರಾದ್ಯೈಶ್ಚ ತದಾ ದೇವೈರುಕ್ತಾ ಚ ಸುರಭೀ ತತಃ ।
ಉವಾಚ ಕೇತಕೀಸಾರ್ಧಂ ದೃಷ್ಟೋ ವೈ ಬ್ರಹ್ಮಣಾ ಸುರಾಃ ॥ ೫೮ ॥
ಲಿಂಗಸ್ಯ ಮಸ್ತಕೋ ದೇವಾಃ ಕೇತಕೀದಲಪೂಜಿತಃ ।
ತದಾ ನಭೋಗತಾ ವಾಣೀ ಸರ್ವೇಷಾಂ ಶೃಣ್ವತಾಮಭೂತ್ ॥ ೫೯ ॥
ಸುರಭ್ಯಾಚೈವ ಯತ್ಪ್ರೋಕ್ತಂ ಕೇತಕ್ಯಾ ಚ ತಥಾ ಸುರಾಃ ।
ತನ್ಮೃಷೋಕ್ತಂ ವಿಜಾನೀಧ್ವಂ ನದೃಷ್ಟೋಹ್ಯಸ್ಯ ಮಸ್ತಕಃ ॥ ೬೦ ॥
ತಥಾ ಸರ್ವೇಽಥ ವಿಬುಧಾಃ ಸೇಂದ್ರಾ ವೈ ವಿಷ್ಣುನಾ ಸಹ ।
ಶೇಪುಶ್ಚ ಸುರಭಿಂ ರೋಷಾನ್ಮೃಷಾವಾದನತತ್ಪರಾಂ ॥ ೬೧ ॥

---

೫೫–೫೮. ಲೋಕಪಿತಾಮಹನಾದ ಬ್ರಹ್ಮನು ವಿಷ್ಣುವಿನ ಈ ಮಾತನ್ನು ಕೇಳಿ ಬಹು ಜಾಗ್ರತೆಯಾಗಿ ಕೇತಕಿ ಮತ್ತು ಸುರಭಿ ಇವರಿಬ್ಬರೂ ತನಗೆ ಸಾಕ್ಷಿಗಳೆಂದು ನುಡಿದು, "ಈ ದೇವತೆಗಳು ನನಗೆ ಯಥಾರ್ಥವಾಗಿಯೂ ಸಾಕ್ಷಿಗಳೆಂದು ತಿಳಿಯಿರಿ" ಎಂದನು. ಬ್ರಹ್ಮನು ಈ ಮಾತನ್ನು ಹೇಳಿದೊಡನೆಯೇ ದೇವತೆಗಳೆಲ್ಲರೂ ಅವರಿಂದ ಆ ವಿಷಯವನ್ನು ತಿಳಿಯಲು ತ್ವರೆಯುಳ್ಳವರಾಗಿ ಅವರಿಬ್ಬರನ್ನೂ ಜಾಗ್ರತೆಯಾಗಿ ಕರೆದರು. ಸುರಭಿಯು ಕೇತಕಿಯೊಡನೆ ಬ್ರಹ್ಮನ ಕಾರ್ಯಕ್ಕಾಗಿ ಅಲ್ಲಿಗೆ ಬಂದ ಬಳಿಕ ಇಂದ್ರಾದಿ ದೇವತೆಗಳು ಕೇತಕಿಯೊಡನಿದ್ದ ಅವಳನ್ನು ಪ್ರಶ್ನಿಸಲಾಗಿ ಅವಳು "ಎಲೈ ದೇವತೆಗಳಿರಾ! ಈ ಬ್ರಹ್ಮನು ಕೇತಕೀ ಕುಸುಮಗಳಿಂದ ಪೂಜಿಸಿದ್ದ ಶಿವಲಿಂಗದ ಮಸ್ತಕವನ್ನು ನೋಡಿದನು" ಎಂದು ನುಡಿದಳು.

೫೯–೬೦. ಆ ಸಮಯದಲ್ಲಿಯೇ ಎಲ್ಲರೂ ಕೇಳುವಂತೆ ಆಕಾಶವಾಣಿಯು, "ಈಗಲೀ ಸುರಭಿಯೂ, ಕೇತಕಿಯೂ ನುಡಿದುದೆಲ್ಲ ಶುದ್ಧ ಸುಳ್ಳು. ಬ್ರಹ್ಮನು ಶಿವಲಿಂಗ ಮಸ್ತಕವನ್ನು ನೋಡಲೇ ಇಲ್ಲವು" ಎಂದು ನುಡಿಯಿತು.

೬೧–೬೩. ಆಗ ವಿಷ್ಣುಸಹಿತರಾದ ಸಮಸ್ತ ದೇವತೆಗಳೂ ರೋಷಗೊಂಡು ಸಟೆಯಾಡಿದ ಆ ಸುರಭಿಯನ್ನು "ಎಲೌ ಮಂಗಳಕರಳೇ! ಈಗ ನೀನು ಶುಭಕರವಾದ ಈ ನಿನ್ನ ಮುಖದಿಂದ ಇಂತಹ ಸಟೆಯನ್ನಾಡಿದೆ. ಆದುದರಿಂದ

**ಮುಖೇನೋಕ್ತಂ ತ್ವಯಾದ್ಯೈವಮನೃತಂ ಚ ತಥಾ ಶುಭೇ ।**
**ಅಪವಿತ್ರಂ ಮುಖಂ ತೇಽಸ್ತು ಸರ್ವಧರ್ಮಬಹಿಷ್ಕೃತಂ ॥ ೬೨ ॥**
**ಸುಗಂಧಕೇತಕೀ ಚಾಪಿ ಅಯೋಗ್ಯಾ ತ್ವಂ ಶಿವಾರ್ಚನೇ ।**
**ಭವಿಷ್ಯಸಿ ನ ಸಂದೇಹೋ ಅನೃತಾ ಚೈವ ಭಾಮಿನಿ ॥ ೬೩ ॥**
**ತದಾ ನ ಭೋಗತಾ ವಾಣೀ ಬ್ರಹ್ಮಾಣಂ ಚ ಶಶಾಪ ವೈ ।**
**ಮೃಷೋಕ್ತಂ ಚ ತ್ವಯಾ ಮಂದ ಕಿಮರ್ಥಂ ಬಾಲಿಶೇನ ಹಿ ॥ ೬೪ ॥**
**ಭೃಗುಣಾ ಋಷಿಭಿಃ ಸಾಕಂ ತಥೈವ ಚ ಪುರೋಧಸಾ ।**
**ತಸ್ಮಾದ್ಯೂಯಂ ನ ಪೂಜ್ಯಾಶ್ಚ ಭವೇಯುಃ ಕ್ಲೇಶಭಾಗಿನಃ ॥ ೬೫ ॥**
**ಋಷಯೋಽಪಿ ಚ ಧರ್ಮಿಷ್ಠಾಸ್ತತ್ತ್ವವಾಕ್ಯ ಬಹಿಷ್ಕೃತಾಃ ।**
**ವಿವಾದನಿರತಾ ಮೂಢಾ ಅತತ್ತ್ವಜ್ಞಾ ಸಮುತ್ಸರಾಃ ॥ ೬೬ ॥**
**ಯಾಚಕಾಶ್ಚಾವದಾನ್ಯಾಶ್ಚ ನಿತ್ಯಂ ಸ್ವಜ್ಞಾನಘಾತಕಾಃ ।**
**ಆತ್ಮಸಂಭಾವಿತಾಃ ಸ್ತಬ್ಧಾಃ ಪರಸ್ಪರವಿನಿಂದಕಾಃ ॥ ೬೭ ॥**

---

ನಿನ್ನ ಮುಖವು ಅಪವಿತ್ರವೂ, ಸರ್ವಧರ್ಮಗಳಿಂದ ಹೊರಗಾದುದೂ ಆಗಲಿ. ಸುವಾಸನೆಯುಳ್ಳ ಓ ಕೇತಕಿಯೇ! ಇಂದಿನಿಂದ ನೀನೂ ಸಹ ಶಿವನ ಪೂಜೆಗೆ ಅಯೋಗ್ಯಳಾಗಿಹೋಗುವೆಯೆಂಬುದರಲ್ಲಿ ಸಂಶಯವಿಲ್ಲವು.

೬೪–೬೫. ಅದೇ ಸಮಯದಲ್ಲಿಯೇ ಆ ಆಕಾಶವಾಣಿಯು ಸಟೆನುಡಿದ ಆ ಬ್ರಹ್ಮನನ್ನೂ ಸಹ ಈ ರೀತಿ ಶಪಿಸಿದಳು. “ಎಲೆವೋ ತಿಳಿಗೇಡಿಯಾದ ಬ್ರಹ್ಮನೇ! ನೀನು ಹುಡುಗಾಟಿಕೆಯಿಂದ ಭೃಗುವೇ ಮೊದಲಾದ ಋಷಿಗಳೊಡನೆಯೂ, ಪುರೋಹಿತನೊಡನೆಯೂ ಈ ರೀತಿ ಸಟೆಯನ್ನಾಡಿದೆಯೇಕೆ? ಈ ಕಾರಣದಿಂದಲೇ ನೀವೆಲ್ಲರೂ ಪೂಜ್ಯರಾಗದೆಹೋಗುವುದು ಮಾತ್ರವಲ್ಲದೆ ದುಃಖಗಳಿಗೂ ತುತ್ತಾಗುವಿರಿ.

೬೬. ಧರ್ಮಿಷ್ಠರಾದ ಈ ಋಷಿಗಳೂ ಸಹ ತತ್ತ್ವವಾಕ್ಯದಿಂದ ದೂರರಾಗಿ, ದುಷ್ಟವಾದಗಳಲ್ಲಿಯೇ ಆಸಕ್ತರಾಗಿ, ತಿಳುವಳಿಕೆಯಿಲ್ಲದವರೂ, ತತ್ತ್ವವಲ್ಲದುದನ್ನು ತತ್ತ್ವವೆಂದರಿತವರೂ, ಅಸೂಯೆಯುಳ್ಳವರೂ ಆಗುತ್ತಾರೆ.

೬೭. ಇಷ್ಟೆಯಲ್ಲದೆ ಯಾಚಕರೂ, ದಾನಗಳನ್ನು ಹಿಡಿಯುವವರೂ, ಯಾವಾಗಲೂ ತಮ್ಮ ತಿಳಿವಿಗೆ ತಾವೇ ವಿಘಾತವನ್ನುಂಟುಮಾಡಿಕೊಳ್ಳುವವರೂ, ತಮ್ಮನ್ನು ತಾವೇ ಹೊಗಳಿಕೊಳ್ಳುವವರೂ, ಸ್ತಬ್ಧರೂ, ಒಬ್ಬರನ್ನೊಬ್ಬರು ನಿಂದಿಸುವವರೂ ಆಗುತ್ತಾರೆ.”

ಏವಂ ಶಪ್ತಾಶ್ಚ ಮುನಯೋ ಬ್ರಹ್ಮಾದ್ಯಾ ದೇವತಾಸ್ತಥಾ ।
ಶಿವೇನ ಶಪ್ತಾಸ್ತೇ ಸರ್ವೇ ಲಿಂಗಂ ಶರಣಮಾಯಯುಃ ॥ ೬೮ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಶ್ರೀ ಶಿವಲಿಂಗ ಮಾಹಾತ್ಮ್ಯೇ– ಬ್ರಹ್ಮಾದಿಶಾಪವೃತ್ತಾಂತವರ್ಣನಂ" ನಾಮ ಷಷ್ಠೋಽಧ್ಯಾಯಃ

---

೬೮. ಈ ರೀತಿ ಶಿವನು ಅಶರೀರವಾಕ್ಕಿನಿಂದ ಶಪಿಸಲು, ಮುನಿಗಳೂ, ಬ್ರಹ್ಮನೇ ಮೊದಲಾದವರೂ ಎಲ್ಲರೂ ಭಯಗ್ರಸ್ತರಾಗಿ ಆ ಶಿವಲಿಂಗವನ್ನೇ ಮರೆಹೊಕ್ಕರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಶಿವಲಿಂಗಮಾಹಾತ್ಮ್ಯ – ಬ್ರಹ್ಮಾದಿಗಳಿಗೆ ಶಾಪ ಬಂದುದು" ಎಂಬ ಆರನೆಯ ಅಧ್ಯಾಯವು ಮುಗಿದುದು.

ಶ್ರೀಃ

## ಅಥ ಸಪ್ತಮೋಽಧ್ಯಾಯಃ

### ಶಿವ— ಶಿವಲಿಂಗಪ್ರಭಾವವರ್ಣನಂ

ಲೋಮಶ ಉವಾಚ :—

ತದಾ ಚ ತೇ ಸುರಾಃ ಸರ್ವೇ ಋಷಯೋಽಪಿ ಭಯಾನ್ವಿತಾಃ ।
ಈಡಿರೇ ಲಿಂಗಮೈಶಂ ಚ ಬ್ರಹ್ಮಾದ್ಯಾ ಜ್ಞಾನವಿಹ್ವಲಾಃ ॥ ೧ ॥

ಬ್ರಹ್ಮೋವಾಚ :—

ತ್ವಂ ಲಿಂಗರೂಪೀತು ಮಹಾಪ್ರಭಾವೋ
ವೇದಾಂತವೇದ್ಯೋಽಸಿ ಮಹಾತ್ಮರೂಪೀ ।
ಯೇನೈವ ಸರ್ವಂ ಜಗದಾತ್ಮಮೂಲಂ
ಕೃತಂ ಸದಾನಂದಪರೇಣ ನಿತ್ಯಂ ॥ ೨ ॥

ತ್ವಂ ಸಾಕ್ಷೀ ಸರ್ವಲೋಕಾನಾಂ ಹರ್ತಾ ತ್ವಂ ಚ ವಿಚಕ್ಷಣಃ ।
ರಕ್ಷಕೋಽಸಿ ಮಹಾದೇವ ಭೈರವೋಽಸಿ ಜಗತ್ಪತೇ ॥ ೩ ॥

ತ್ವಯಾಹಿ ಲಿಂಗರೂಪೇಣ ವ್ಯಾಪ್ತಮೇತಜ್ಜಗತ್ರಯಂ ।
ಕ್ಷುದ್ರಾಶ್ಚೈವ ವಯಂ ನಾಥ ಮಾಯಾಮೋಹಿತಚೇತಸಃ ॥ ೪ ॥

---

## ಕನ್ನಡದ ಅನುವಾದ

### ಶಿವ — ಶಿವಲಿಂಗಪ್ರಭಾವವರ್ಣನಂ

೧. ಲೋಮಶನು ಹೇಳುತ್ತಾನೆ:—ಎಲೈ ಋಷಿಗಳಿರಾ! ಆ ತರುವಾಯ ಅಲ್ಲಿದ್ದ ಬ್ರಹ್ಮಾದಿ ಸಮಸ್ತ ದೇವತೆಗಳೂ, ಋಷಿಗಳೂ, ಭಯದಿಂದ ತಳಮಳಿಸಿ ಜ್ಞಾನವಿಹ್ವಲರಾಗಿ ಆ ಶಿವಲಿಂಗವನ್ನು ಈ ರೀತಿ ಸ್ತುತಿಸಿದರು.

೨. ಬ್ರಹ್ಮನು ಹೇಳುತ್ತಾನೆ:—"ಎಲೈ ಪರಶಿವನೇ! ಯಾವಾಗಲೂ ಬ್ರಹ್ಮಾನಂದದಲ್ಲಿಯೇ ಆಸಕ್ತನಾಗಿರುವ ನೀನು, ನಿನ್ನ ಆತ್ಮವೇ ಮೂಲವಾಗಿರುವ ಈ ಜಗತ್ತನ್ನು ಸೃಷ್ಟಿಮಾಡಿದೆ. ಮಹಾತ್ಮರೂಪಿಯೂ, ಮಹಾ ಪ್ರಭಾವಶಾಲಿಯೂ, ವೇದಾಂತ (ಉಪನಿಷತ್ತುಗಳಿಂದ) ವೇದ್ಯನೂ ಆದ ಅಂತಹ ನೀನೇ ಈಗ ಈ ಲಿಂಗಸ್ವರೂಪಿಯೂ ಆಗಿರುವೆ.

೩. ಎಲೈ ಜಗತ್ಪತಿಯೇ! ನೀನೇ ಸಮಸ್ತ ಲೋಕಗಳಿಗೂ ಸಾಕ್ಷಿಯಾದವನು. ಮಹಾ ವಿಚಕ್ಷಣನಾದ ನೀನೇ ಜಗತ್ತನ್ನು ಸಂಹರಿಸುವವನು. ಕಾಪಾಡುವ ಮಹಾದೇವನೂ ನೀನೇ. ಭೈರವನೂ ನೀನೇ.

೪. ನೀನು ಈ ಲಿಂಗರೂಪದಿಂದ ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳನ್ನೂ ವ್ಯಾಪಿಸಿರುವೆ. ನಾವುಗಳಾದರೋ ಕೇವಲ ಮಾಯೆ

ಅಹಂ ಸುರಾಽಸುರಾಃಸರ್ವೇ ಯಕ್ಷಗಂಧರ್ವರಾಕ್ಷಸಾಃ ।
ಪನ್ನಗಾಶ್ಚ ಪಿಶಾಚಾಶ್ಚ ತಥಾ ವಿದ್ಯಾಧರಾ ಹ್ಯಮೀ ॥ ೫ ॥
ತ್ವಂ ಹಿ ವಿಶ್ವಸೃಜಾಂ ಸ್ರಷ್ಟಾ ತ್ವಂ ಹಿದೇವೋ ಜಗತ್ಪತಿಃ ।
ಕರ್ತಾ ತ್ವಂ ಭುವನಸ್ಯಾಸ್ಯ ತ್ವಂ ಹರ್ತಾ ಪುರುಷಃ ಪರಃ ॥ ೬ ॥
ಪಾಹ್ಯಸ್ಮಾಕಂ ಮಹಾದೇವ ದೇವದೇವ ನಮೋಽಸ್ತುತೇ ।
ಏವಂ ಸ್ತುತೋ ಹಿ ವೈ ಧಾತ್ರಾ ಲಿಂಗರೂಪೀ ಮಹೇಶ್ವರಃ ॥ ೭ ॥
ಋಷಯಸ್ತೋತುಕಾಮಾಸ್ತೇ ಮಹೇಶ್ವರಮಕಲ್ಮಷಂ ।
ಆಸ್ತುವನ್‌ಗೀರ್ಭಿರಗ್ರ್ಯಾಭಿಃ ಶ್ರುತಿಗೀತಾಭಿರಾದೃತಃ ॥ ೮ ॥

ಋಷಯ ಊಚು :—

ಅಜ್ಞಾನಿನೋ ವಯಂ ಕಾಮಾನ್ನವಿಂದಾಮೋಽಸ್ಯ ಸಂಸ್ಥಿತಿಂ ।
ತ್ವಂ ಹ್ಯಾತ್ಮಾ ಪರಮಾತ್ಮಾಚ ಪ್ರಕೃತಿಸ್ತ್ವಂ ವಿಭಾವಿತಾ ॥ ೯ ॥

---

ಯಿಂದ ಮರೆಯಾದ ಬುದ್ಧಿಯುಳ್ಳ ಅಲ್ಪರು. ನಮಗೆ ನಿನ್ನ ಈ ಪ್ರಭಾವವು ಅರಿವಾಗಲಿಲ್ಲವು.

೫. ಎಲೈ ಪ್ರಭುವೇ! ನಾನೂ, ಈ ಸುರಾಸುರರೂ, ಯಕ್ಷ ಗಂಧರ್ವ ರಾಕ್ಷಸರೂ, ಪನ್ನಗರೂ, ಪಿಶಾಚರೂ, ವಿದ್ಯಾಧರರೂ ಎಲ್ಲರೂ ತಿಳಿವಿಲ್ಲದವರೇ!

೬. ಎಲೈ ಪರಶಿವನೇ! ನೀನು ವಿಶ್ವವನ್ನು ಸೃಷ್ಟಿಮಾಡುವ ನನ್ನಂತ ಬ್ರಹ್ಮರಿಗೆಲ್ಲ ಸೃಷ್ಟಿಕರ್ತನು; ಜಗತ್ಪತಿಯು; ನೀನೇ ಈ ತ್ರಿಭುವನಕ್ಕೆಲ್ಲ ಕರ್ತನಾದವನು. ಸಂಹಾರಕರ್ತನೂ ನೀನೇ ಆಗಿರುವೆಯಲ್ಲದೆ ಪರಮಪುರುಷನೂ ಆಗಿರುವೆ.

೭. ದೇವದೇವ! ನಿನಗೆ ನಮಸ್ಕಾರವು. ಮಹಾದೇವ! ನಮ್ಮನ್ನು ಕಾಪಾಡು ಕಾಪಾಡು.'' ಎಲೈ ಶೌನಕಾದಿಗಳಿರಾ! ಈ ಪ್ರಕಾರವಾಗಿ ಬ್ರಹ್ಮನು ಲಿಂಗರೂಪಿಯಾದ ಆ ಮಹೇಶ್ವರನನ್ನು ಸ್ತುತಿಸಿದನು.

೮. ತರುವಾಯ ಮಹರ್ಷಿಗಳು ಅಕಲ್ಮಷನಾದ ಆ ಮಹೇಶ್ವರನನ್ನು ಸ್ತೋತ್ರಮಾಡಬಯಸಿ ಶ್ರುತಿಗೀತಗಳಿಂದಲೂ, ಉತ್ತಮವಾದ ಸ್ತೋತ್ರಗಳಿಂದಲೂ ಆ ದೇವದೇವನನ್ನು ಈ ರೀತಿ ಸ್ತುತಿಸಿದರು.

೯. ಋಷಿಗಳು ಹೇಳುತ್ತಾರೆ:—ಎಲೈ ಮಹಾದೇವನೇ! ನಾವೆಲ್ಲರೂ ಸಕಾಮರಾಗಿರುವುದರಿಂದ ಈ ನಿನ್ನ ಲಿಂಗಸ್ವರೂಪದ ಸಂಸ್ಥಿತಿಯನ್ನು ಅರಿಯಲಾರದೆ ಹೋಗಿರುವೆವು. ನೀನೇ ಆತ್ಮನೂ, ಪರಮಾತ್ಮನೂ ಆಗಿರುವೆಯಲ್ಲದೆ (ಆತ್ಮಜ್ಞಾನಿಗಳಾದ ಋಷಿಗಳೂ ಇತರರೂ) ವಿಶೇಷವಾಗಿ ಭಾವಿಸಿ ತಿಳಿಯಬೇಕಾದ ಮೂಲಪ್ರಕೃತಿಯೂ ನೀನೇ ಆಗಿರುವೆ.

ತ್ವಮೇವ ಮಾತಾಚ ಪಿತಾ ತ್ವಮೇವ
ತ್ವಮೇವ ಬಂಧುಶ್ಚ ಸಖಾ ತ್ವಮೇವ ।
ತ್ವಮೀಶ್ವರೋ ವೇದವಿದೇಕರೂಪೋ
ಮಹಾನುಭಾವೈಃ ಪರಿಚಿಂತ್ಯಮಾನಃ ॥ ೧೦ ॥
ತ್ವಮಾತ್ಮಾ ಸರ್ವಭೂತಾನಾಮೇಕೋ ಜ್ಯೋತಿರಿವೈಧಸಾಂ ।
ಸರ್ವಂ ಭವತಿ ಯಸ್ಮಾತ್ತ್ವತ್ತಸ್ಮಾತ್ಸರ್ವೋಽಸಿ ನಿತ್ಯದಾ ॥ ೧೧ ॥
ಯಸ್ಮಾಚ್ಚ ಸಂಭವತ್ಯೇತತ್ತಸ್ಮಾಚ್ಛಂಭುರಿತಿ ಪ್ರಭುಃ ॥ ೧೨ ॥
ತ್ವತ್ಪಾದಪಂಕಜಂ ಪ್ರಾಪ್ತಾ ವಯಂ ಸರ್ವೇ ಸುರಾದಯಃ ।
ಋಷಯೋ ದೇವಗಂಧರ್ವಾ ವಿದ್ಯಾಧರಮಹೋರಗಾಃ ॥ ೧೩ ॥
ತಸ್ಮಾಚ್ಚ ಕೃಪಯಾ ಶಂಭೋ ಪಾಹ್ಯಸ್ಮಾನ್ ಜಗತಃ ಪತೇ ॥ ೧೪ ॥

ಮಹಾದೇವ ಉವಾಚ:—

ಶೃಣುಧ್ವಂ ತು ವಚೋ ಮೇಽದ್ಯ ಕ್ರಿಯತಾಂ ಚ ತ್ವರಾನ್ವಿತೈಃ ।
ವಿಷ್ಣುಂ ಸರ್ವೇ ಪ್ರಾರ್ಥಯಂತು ತ್ವರಿತೇನ ತಪೋಧನಾಃ ॥ ೧೫ ॥
ತಸ್ಯ ತದ್ವಚನಂ ಶ್ರುತ್ವಾ ಶಂಕರಸ್ಯ ಮಹಾತ್ಮನಃ ।
ವಿಷ್ಣುಂ ಸರ್ವೇ ನಮಸ್ಕೃತ್ಯ ಈಡಿರೇ ಚ ತದಾ ಸುರಾಃ ॥ ೧೬ ॥

---

೧೦. ತಾಯಿಯೂ, ತಂದೆಯೂ ನೀನೇ! ನೆಂಟನೂ, ಗೆಳೆಯನೂ ನೀನೇ! ಈಶ್ವರನೂ, ವೇದವಿತ್ತೂ (ವೇದವೇದ್ಯನೂ), ಏಕರೂಪವುಳ್ಳವನೂ, ಮಹಾನುಭಾವರಿಂದ ಧ್ಯಾನಿಸಲ್ಪಡುತ್ತಿರುವವನೂ ನೀನೇ!

೧೧–೧೨. ಸರ್ವಭೂತಗಳ ಆತ್ಮನೂ, ಜ್ಯೋತಿಗಳಿಗೆಲ್ಲ ಜ್ಯೋತಿಯೂ ನೀನೇ! ಯಾವ ಕಾರಣದಿಂದ ನಿನ್ನಿಂದಲೇ ಸಮಸ್ತವೂ ಉಂಟಾಗುತ್ತದೆಯೋ ಅದರಿಂದಲೇ ನೀನು ಸರ್ವನೆನಿಸಿರುವೆ. ಈ ಜಗತ್ತೆಲ್ಲವೂ ನಿನ್ನಿಂದಲೇ ಸಂಭವಿಸುವುದಾದುದರಿಂದ ನೀನು ಶಂಭುವೆನಿಸಿರುವೆ. ನೀನೇ ಪ್ರಭುವು!

೧೩–೧೫. ಎಲೈ ಸ್ವಾಮಿಯೇ! ನಾವೂ, ಈ ದೇವತೆಗಳೂ, ಇತರ ಋಷಿಗಳೂ, ದೇವಗಂಧರ್ವ ವಿದ್ಯಾಧರ ಪನ್ನಗರೂ ನಿನ್ನ ಪಾದಕಮಲಗಳನ್ನೇ ಶರಣುಹೊಕ್ಕಿರುತ್ತೇವೆ. ಆದುದರಿಂದೆಲೈಜಗತ್ಪತಿಯೇ! ನೀನು ಕೃಪೆಯಿಟ್ಟು ನಮ್ಮನ್ನು ಕಾಪಾಡು.'' ಋಷಿಗಳೆಲ್ಲರೂ ಈ ರೀತಿ ಸ್ತುತಿಸಿದ ಬಳಿಕ ಮಹಾದೇವನು ಅವರೆಲ್ಲರನ್ನೂ ಕುರಿತು ಹೇಳುತ್ತಾನೆ:—''ಎಲೈ! ಈಗ ನೀವೆಲ್ಲರೂ ನಾನು ಹೇಳಿದಂತೆ ಮಾಡಿರಿ. ತಪೋಧನರಾದ ನೀವೆಲ್ಲರೂ ಜಾಗ್ರತೆಯಾಗಿ ಈ ವಿಷಯದಲ್ಲಿ ವಿಷ್ಣುವನ್ನು ರಕ್ಷಣೆಗಾಗಿ ಪ್ರಾರ್ಥಿಸಿರಿ'' ಎಂದನು.

೧೬. ಆಗ ಮಹಾತ್ಮನಾದ ಶಂಕರನ ಮಾತನ್ನು ಕೇಳಿ ದೇವತೆಗಳೆಲ್ಲರೂ ವಿಷ್ಣುವನ್ನು ನಮಸ್ಕರಿಸಿ ಅವನನ್ನು ಸ್ತುತಿಸಿದರು.

ದೇವಾ ಊಚುः—

ವಿದ್ಯಾಧರಾಃ ಸುರಗಣಾ ಋಷಯಶ್ಚ ಸರ್ವೇ
ತ್ರಾತಾಸ್ತ್ವಯಾದ್ಯ ಸಕಲಾ ಜಗದೇಕಬಂಧೋ ।
ತದ್ವತ್ಕೃಪಾಕರ ಜನಾನ್ ಪರಿಪಾಲಯಾದ್ಯ
ತ್ರೈಲೋಕ್ಯನಾಥ ಜಗದೀಶ ಜಗನ್ನಿವಾಸ ॥ ೧೭ ॥

ಪ್ರಹಸ್ಯ ಭಗವಾನ್ವಿಷ್ಣುರುವಾಚೇದಂ ವಚಸ್ತದಾ ।
ದೈತ್ಯೈಃ ಪ್ರಪೀಡಿತಾ ಯೂಯಂ ರಕ್ಷಿತಾಶ್ಚ ಪುರಾ ಮಯಾ ॥ ೧೮ ॥
ಅದ್ಯೈವ ಭಯಮುತ್ಪನ್ನಂ ಲಿಂಗಾದಸ್ಮಾಚ್ಚಿರಂತನಂ ।
ನ ಶಕ್ಯತೇ ಮಯಾ ತ್ರಾತುಮಸ್ಮಾಲ್ಲಿಂಗಭಯಾತ್ಸುರಾಃ ॥ ೧೯ ॥
ಅಚ್ಯುತೇನೈವಮುಕ್ತಾಸ್ತೇ ದೇವಾಶ್ಚಿಂತಾನ್ವಿತಾಭವನ್ ।
ತದಾ ನಭೋಗತಾ ವಾಣೀ ಉವಾಚಾಶ್ವಸ್ಯ ವೈ ಸುರಾನ್ ॥ ೨೦ ॥
ಏತಲ್ಲಿಂಗಂ ಸಂವೃಣುಷ್ವ ಪೂಜನಾಯ ಜನಾರ್ದನ ।
ಪಿಂಡೀಭೂತ್ವಾ ಮಹಾಬಾಹೋ ರಕ್ಷಸ್ವ ಸಚರಾಚರಂ ।
ತಥೇತಿ ಮತ್ವಾ ಭಗವನ್ವೀರಭದ್ರೋಽಭ್ಯಪೂಜಯತ್ ॥ ೨೧ ॥

---

೧೭. ದೇವತೆಗಳು ಹೇಳುತ್ತಾರೆ:—ಓ ಜಗದೇಕ ಬಂಧುವೇ! ವಿದ್ಯಾಧರರೂ, ದೇವತಾ ಸಮೂಹಗಳೂ, ಸಮಸ್ತ ಋಷಿಗಳೇ ಮೊದಲಾದ ಇವರೆಲ್ಲರನ್ನೂ ಈಗ ನೀನೇ ಕಾಪಾಡಬೇಕು. ಓ ಕರುಣಾಳು, ತ್ರೈಲೋಕ್ಯನಾಥ, ಜಗದೀಶ, ಜಗನ್ನಿವಾಸ!! ಅಂತೆಯೇ ನೀನೀಗ ಜನಗಳೆಲ್ಲರನ್ನೂ ಸಲಹು."

೧೮. ಆಗ ಭಗವಾನ್ ವಿಷ್ಣುವು ನಸುನಗುತ್ತ, "ಅಯ್ಯಾ ದೇವತೆಗಳಿರಾ! ನೀವು ದೈತ್ಯರ ಪೀಡೆಗೆ ತುತ್ತಾಗಿದ್ದಾಗ ನಾನು ನಿಮ್ಮನ್ನು ಕಾಪಾಡಿದೆನು.

೧೯. ಈಗಲಾದರೋ ಈ ಶಿವಲಿಂಗದಿಂದ ಶಾಶ್ವತವಾದ ಭಯವುಂಟಾಗಿರುವುದು. ಅಯ್ಯಾ! ಈ ಭಯದಿಂದ ಪಾರುಮಾಡಲು ನನಗೀಗ ಸಾಧ್ಯವಿಲ್ಲವಾಗಿದೆ" ಎಂದನು.

೨೦. ಅಚ್ಯುತನಿಂತೆನಲು ದೇವತೆಗಳೆಲ್ಲರೂ ಚಿಂತೆಗೀಡಾದರು. ಆಗ ಆಕಾಶವಾಣಿಯು ಅವರೆಲ್ಲರನ್ನೂ ಸಂತೈಸುತ್ತ ಆ ವಿಷ್ಣುವನ್ನು ಕುರಿತು ಈ ರೀತಿ ಹೇಳಿತು.

೨೧. "ಎಲೈ ಜನಾರ್ದನನೇ! ನೀನು ಈ ಲಿಂಗವನ್ನು ಪೂಜೆಗಾಗಿ ಧರಿಸುವವನಾಗು. ಅಲ್ಲದೆ ನೀನು ಪಿಂಡಭೂತನಾಗಿ ಚರಾಚರಾತ್ಮಕವಾದ ಈ ಜಗತ್ತನ್ನು ರಕ್ಷಿಸು" ಎಂದು ಹೇಳಲು, ವಿಷ್ಣುವು ಅಂತೆಯೇ ಮಾಡಿದನು. ಆಗ ಪೂಜ್ಯನಾದ ವೀರಭದ್ರನು ಅಂತೆಯೇ ಆ ಶಿವಲಿಂಗವನ್ನು ಪೂಜಿಸಿದನು.

ಬ್ರಹ್ಮಾದಿಭಿಃ ಸುರಗಣೈಃ ಸಹಿತೈಸ್ತದಾನೀಂ
ಸಂಪೂಜಿತಃ ಶಿವವಿಧಾನರತೋ ಮಹಾತ್ಮಾ ।
ಸ ವೀರಭದ್ರಃ ಶಶಿಶೇಖರೋಽಸೌ
ಶಿವಪ್ರಿಯೋ ರುದ್ರಸಮಸ್ತ್ರಿಲೋಕ್ಯಾಂ ॥ ೨೨ ॥
ಲಿಂಗಸ್ಯಾರ್ಚನಯುಕ್ತೋಽಸೌ ವೀರಭದ್ರೋಽಭವತ್ತದಾ ।
ತದ್ರೂಪಸ್ಯೈವ ಲಿಂಗಸ್ಯ ಯೇನ ಸರ್ವಮಿದಂಜಗತ್ ॥ ೨೩ ॥
ಉದ್ಭಾತಿ ಸ್ಥಿತಿಮಾಪ್ನೋತಿ ತಥಾ ವಿಲಯಮೇತಿಚ ।
ತಲ್ಲಿಂಗಂ ಲಿಂಗಮಿತ್ಯಾಹುರ್ಲಯನಾತ್ತತ್ತ್ವವಿತ್ತಮಾಃ ॥ ೨೪ ॥
ಬ್ರಹ್ಮಾಂಡಗೋಲಕೈರ್ವ್ಯಾಪ್ತಂ ತಥಾ ರುದ್ರಾಕ್ಷಭೂಷಿತಂ ।
ತಥಾ ಲಿಂಗಂ ಮಹಜ್ಜಾತಂ ಸರ್ವೇಷಾಂ ದುರತಿಕ್ರಮಂ ॥ ೨೫ ॥
ತದಾ ಸರ್ವೇಽಥ ವಿಬುಧಾ ಋಷಯೋ ವೈ ಮಹಾಪ್ರಭಾಃ ।
ತುಷ್ಟುವುಶ್ಚ ಮಹಾಲಿಂಗಂ ವೇದವಾದ್ಯೈಃ ಪೃಥಕ್ಪೃಥಕ್ ॥ ೨೬ ॥
ಅಣೋರಣೀಯಾಂಸ್ತ್ವಂ ದೇವ ತಥಾ ತ್ವಂ ಮಹತೋ ಮಹಾನ್ ।
ತಸ್ಮಾತ್ತ್ವಯಾ ವಿಧಾತವ್ಯಂ ಸರ್ವೇಷಾಂ ಲಿಂಗಪೂಜನಂ ॥ ೨೭ ॥

---

೨೨–೨೪. ಬ್ರಹ್ಮನೇ ಮೊದಲಾದ ದೇವತಾ ಸಮೂಹಗಳಿಂದ ಪೂಜೆಗೊಂಡವನೂ, ಶಿವಪೂಜಾ ವಿಧಾನವನ್ನು ಬಲ್ಲವನೂ, ಮಹಾತ್ಮನೂ, ಚಂದ್ರಶೇಖರನೂ, ಮೂರು ಲೋಕಗಳಲ್ಲಿಯೂ ಸಾಕ್ಷಾತ್ ರುದ್ರನಿಗೇ ಸಮಾನನಾದವನೂ, ಶಿವನಿಗೆ ಪ್ರೀತಿಪಾತ್ರನೂ ಆದ ವೀರಭದ್ರನು ಆ ಶಿವಲಿಂಗವನ್ನು ಪೂಜಿಸುವುದರಲ್ಲಿ ತೊಡಗಿದನು. ಶಿವಸ್ವರೂಪವಾದ ಆ ಲಿಂಗದಿಂದಲೇ ಈ ಪ್ರಪಂಚವೆಲ್ಲವೂ ಉದಿಸುತ್ತದೆ; ಸ್ಥಿತಿಯನ್ನು ಪಡೆಯುತ್ತದೆ; ಅಂತೆಯೇ ಲಯವನ್ನೂ ಹೊಂದುತ್ತದೆ. ಸಮಸ್ತವೂ ಅದರಲ್ಲಿಯೇ ಲಯವಾಗುವುದರಿಂದ ತತ್ತ್ವವನ್ನರಿತವರು ಅದನ್ನು ಲಿಂಗವೆನ್ನುತ್ತಾರೆ.

೨೫. ಹೀಗೆ ಬ್ರಹ್ಮಾಂಡಗೋಳಕಗಳಿಂದ ವ್ಯಾಪ್ತವಾಗಿ, ರುದ್ರಾಕ್ಷಿಗಳಿಂದಲಂಕೃತವಾಗಿ ಆ ಮಹಾ ಶಿವಲಿಂಗವು ಎಲ್ಲರಿಗೂ ಮೀರಲಸದಳವಾಗಿ ಹುಟ್ಟಿತು.

೨೬. ಆಗ ಸಮಸ್ತ ದೇವತೆಗಳೂ, ಮಹಾತೇಜಸ್ವಿಗಳಾದ ಋಷಿಗಳೂ ಆ ಮಹಾ ಶಿವಲಿಂಗವನ್ನು ಬೇರೆಬೇರೆಯಾದ ವೇದಮಂತ್ರಗಳಿಂದ ಸ್ತೋತ್ರ ಮಾಡಿದರು.

೨೭. ಓ ಸ್ವಾಮಿಯೇ! ನೀನು ಅಣುವಿಗಿಂತಲೂ ಅಣುವಾದವನು; ಮಹತ್ತಿಗಿಂತ ಮಹತ್ತಾದವನು. ಆದುದರಿಂದೆಲೈಸರ್ವನೇ! ದೇವತೆಗಳಾದ ನಮ್ಮೆಲ್ಲರಿಗೂ ಈ ಶಿವಲಿಂಗಪೂಜೆಯು ಸುಲಭವಾಗುವಂತೆ ಅನುಗ್ರಹಿಸಬೇಕು.''

ತದಾನೀಮೇವ ಸರ್ವೇಣ ಲಿಂಗಂಚ ಬಹುಳಃ ಕೃತಂ ।
ಸತ್ಯೇ ಬ್ರಹ್ಮೇಶ್ವರಂ ಲಿಂಗಂ ವೈಕುಂಠೇ ಚ ಸದಾಶಿವಃ ॥ ೨೮ ॥
ಅಮರಾವತ್ಯಾಂ ಸುಪ್ರತಿಷ್ಠಮಮರೇಶ್ವರ ಸಂಜ್ಞಕಂ ।
ವರುಣೇಶ್ವರಂ ಚ ವಾರುಣ್ಯಾಂ ಯಾಮ್ಯಾಂ ಕಾಲೇಶ್ವರಂ ಪ್ರಭುಂ ॥೨೯॥
ನೈಋರ್ತೇಶ್ವರಂ ಚ ನೈಋರ್ತ್ಯಾಂ ವಾಯವ್ಯಾಂ ಪಾವನೇಶ್ವರಂ ।
ಕೇದಾರಂ ಮೃತ್ಯುಲೋಕೇ ಚ ತಥೈವ ಅಮರೇಶ್ವರಂ ॥ ೩೦ ॥
ಓಂಕಾರಂ ನರ್ಮದಾಯಾಂ ಚ ಮಹಾಕಾಲಂ ತಥೈವಚ ।
ಕಾಶ್ಯಾಂ ವಿಶ್ವೇಶ್ವರಂ ದೇವಂ ಪ್ರಯಾಗೇ ಲಲಿತೇಶ್ವರಂ ॥ ೩೧ ॥
ತ್ರಿಯಂಬಕಂ ಬ್ರಹ್ಮಗಿರೌ ಕಲೌ ಭದ್ರೇಶ್ವರಂ ತಥಾ ।
ದ್ರಾಕ್ಷಾರಾಮೇಶ್ವರಂ ಲಿಂಗಂ ಗಂಗಸಾಗರಸಂಗಮೇ ॥ ೩೨ ॥
ಸೌರಾಷ್ಟ್ರೇ ಚ ತಥಾ ಲಿಂಗಂ ಸೋಮೇಶ್ವರಮಿತಿಸ್ಮೃತಂ ।
ತಥಾ ಸರ್ವೇಶ್ವರಂ ವಿಂಧ್ಯೇ ಶ್ರೀಶೈಲೇ ಶಿಖರೇಶ್ವರಂ ।
ಕಾಂತ್ಯಾಂ ಮಲ್ಲಾಲನಾಥಂ ಚ ಸಿಂಹನಾಥಂಚ ಸಿಂಗಲೇ ॥ ೩೩ ॥
ವಿರೂಪಾಕ್ಷಂ ತಥಾಲಿಂಗಂ ಕೋಟಿ ಶಂಕರಮೇವ ಚ ।
ತ್ರಿಪುರಾಂತಕಂ ಭೀಮೇಶಮಮರೇಶ್ವರ ಮೇವಚ ॥ ೩೪ ॥

---

೨೮. ಆ ಸಮಯದಲ್ಲಿ ಶ್ರೀಶಂಕರನು ಆ ದೇವತೆಗಳ ಪ್ರಾರ್ಥನೆಯಂತೆ ಅನೇಕ ಲಿಂಗಗಳನ್ನು ನಿರ್ಮಿಸಿದನು. ಸತ್ಯಲೋಕದಲ್ಲಿ ಬ್ರಹ್ಮೇಶ್ವರಲಿಂಗ; ವೈಕುಂಠದಲ್ಲಿ ಸದಾಶಿವಲಿಂಗ;

೨೯. ಅಮರಾವತಿಯಲ್ಲಿ ಸುಪ್ರತಿಷ್ಠಿತವಾದ ಅಮರೇಶ್ವರಲಿಂಗ; ವರುಣ ಲೋಕದಲ್ಲಿ ವರುಣೇಶ್ವರಲಿಂಗ; ಯಮಲೋಕದಲ್ಲಿ ಕಾಲೇಶ್ವರಲಿಂಗ;

೩೦–೩೧. ನೈಋರ್ತಲೋಕದಲ್ಲಿ ನೈಋರ್ತೇಶ್ವರಲಿಂಗ; ವಾಯುಲೋಕ ದಲ್ಲಿ ಪಾವನೇಶ್ವರ; ಮೃತ್ಯುಲೋಕದಲ್ಲಿ ಕೇದಾರೇಶ್ವರ ಮತ್ತು ಅಮರೇಶ್ವರ ಲಿಂಗಗಳು; ನರ್ಮದಾ ಕ್ಷೇತ್ರದಲ್ಲಿ ಓಂಕಾರೇಶ್ವರ ಮಹಾಕಾಲೇಶ್ವರಲಿಂಗ ಗಳು; ಕಾಶಿಯಲ್ಲಿ ವಿಶ್ವೇಶ್ವರಲಿಂಗ; ಪ್ರಯಾಗಕ್ಷೇತ್ರದಲ್ಲಿ ಲಲಿತೇಶ್ವರಲಿಂಗ;

೩೨–೩೩. ಬ್ರಹ್ಮಗಿರಿಯಲ್ಲಿ ತ್ರಿಯಂಬಕಲಿಂಗ; ಕಲಿಯುಗದಲ್ಲಿ ಭದ್ರೇ ಶ್ವರ; ಗಂಗಾಸಾಗರ ಸಂಗಮಕ್ಷೇತ್ರದಲ್ಲಿ ದ್ರಾಕ್ಷಾರಾಮೇಶ್ವರಲಿಂಗ; ಅಂತೆಯೆ ಸೌರಾಷ್ಟ್ರ ದೇಶದಲ್ಲಿರುವ ಲಿಂಗವು ಸೋಮೇಶ್ವರವೆಂದು ತಿಳಿಯಲಾಗಿದೆ. ವಿಂಧ್ಯಗಿರಿಯಲ್ಲಿ ಸರ್ವೇಶ್ವರ; ಶ್ರೀಶೈಲದಲ್ಲಿ ಶಿಖರೇಶ್ವರ (ಮಲ್ಲಿಕಾರ್ಜುನ); ಕಾಂತ್ಯದೇಶದಲ್ಲಿ ಮಲ್ಲಾಲನಾಥ; ಸಿಂಗಲದಲ್ಲಿ ಸಿಂಹನಾಥ.

೩೪–೩೫. ಹಾಗೆಯೇ ವಿರೂಪಾಕ್ಷ, ಕೋಟಿಶಂಕರ, ತ್ರಿಪುರಾಂತಕ, ಭೀಮೇಶ, ಅಮರೇಶ್ವರ, ಭೋಗೇಶ್ವರ, ಪಾತಾಲದಲ್ಲಿ ಹಾಟಕೇಶ್ವರ ಮೊದ

ಭೋಗೇಶ್ವರಂ ಚ ಪಾತಾಳೇ ಹಾಟಕೇಶ್ವರಮೇವ ಚ ।
ಏವಮಾದೀನ್ಯನೇಕಾನಿ ಲಿಂಗಾನಿ ಭುವನತ್ರಯೇ ।
ಸ್ಥಾಪಿತಾನಿ ತದಾ ದೇವೈರ್ವಿಶ್ವೋಪಕೃತಿಹೇತವೇ ॥ ೩೫ ॥
ಲಿಂಗೈಶ್ಚ ತಥಾ ಸರ್ವೈಃ ಪೂರ್ಣಮಾಸೀಜ್ಜಗತ್ರಯಂ ।
ತಥಾಚ ವೀರಭದ್ರಾಂಶಾಃ ಪೂಜಾರ್ಥಮಮರೈಃ ಕೃತಾಃ ॥ ೩೬ ॥
ತತ್ರ ವಿಂಶತಿ ಸಂಸ್ಕಾರಾಸ್ತೇಷಾಮಷ್ಟಾಧಿಕಾ ಭವನ್ ।
ಕಥಿತಾಃ ಶಂಕರೇಣೈವ ಲಿಂಗಸ್ಯಾರ್ಚನ ಸೂಚಕಾಃ ॥ ೩೭ ॥
ಸಂತಿ ರುದ್ರೇಣ ಕಥಿತಾಃ ಶಿವಧರ್ಮಾಃ ಸನಾತನಾಃ ।
ವೀರಭದ್ರೋ ಯಥಾರುದ್ರಸ್ತಥಾನ್ಯೇ ಗುರವಃ ಸ್ಮೃತಾಃ ॥ ೩೮ ॥
ಗುರೋರ್ಜಾತಾಶ್ಚ ಗುರವೋ ವಿಖ್ಯಾತಾ ಭುವನತ್ರಯೇ ।
ಲಿಂಗಸ್ಯ ಮಹಿಮಾನಂ ತು ನಂದೀ ಜಾನಾತಿ ತತ್ತ್ವತಃ ॥ ೩೯ ॥
ತಥಾ ಸ್ಕಂದೋಹಿ ಭಗವಾನನ್ಯೇ ತೇ ನಾಮಧಾರಕಾಃ ।
ಯಥೋಕ್ತಾಃ ಶಿವಧರ್ಮಾ ಹಿ ನಂದಿನಾ ಪರಿಕೀರ್ತಿತಾಃ ॥ ೪೦ ॥
ಶೈಲಾದೇನ ಮಹಾಭಾಗಾ ವಿಚಿತ್ರಾ ಲಿಂಗಧಾರಕಾಃ ।
ಶವಸ್ಯೋಪರಿ ಲಿಂಗಂಚ ಧ್ರಿಯತೇ ಚ ಪುರಾತನೈಃ ॥ ೪೧ ॥

---

ಲಾದ ಈ ಶಿವಲಿಂಗಮೂರ್ತಿಗಳೆಲ್ಲವೂ ಮೂರು ಲೋಕಗಳಲ್ಲಿಯೂ ದೇವತೆಗಳಿಂದ ಪ್ರಜೆಗಳ ಕ್ಷೇಮಕ್ಕಾಗಿ ಸ್ಥಾಪಿಸಲಾದುವು.

೩೬. ಅಯ್ಯಾ ಶೌನಕಾದಿಗಳಿರಾ! ಭುವನತ್ರಯವೂ ಈಶ್ವರಲಿಂಗಗಳಿಂದ ತುಂಬಿಹೋಯಿತು. ಆಗ ಈ ಶಿವಲಿಂಗಗಳ ಪೂಜೆಗಾಗಿ ದೇವತೆಗಳು ವೀರಭದ್ರಾಂಶರನ್ನು ಸೃಜಿಸಿದರು.

೩೭. ಶಿವಲಿಂಗಾರ್ಚನೆಯು ಸುಗಮವಾಗಿ ನಡೆಯಲು ಈ ವೀರಭದ್ರಾಂಶ ಸಂಭೂತರಿಗೆ ಶಂಕರನೇ ಇಪ್ಪತ್ತೆಂಟು ಬಗೆಯ ಸಂಸ್ಕಾರಗಳನ್ನು ಅಪ್ಪಣೆ ಕೊಡಿಸಿರುತ್ತಾನೆ.

೩೮-೩೯. ಶಿವನೇ ಅಪ್ಪಣೆಕೊಡಿಸಿದ ಸನಾತನವಾದ ಶಿವಧರ್ಮಗಳಿರುತ್ತವೆ. ವೀರಭದ್ರನೂ, ರುದ್ರನೂ ಈ ಶಿವಪೂಜಕರಿಗೆ ಗುರುಗಳು. ಈ ಗುರುಗಳ ಮಕ್ಕಳು ಮೂರು ಲೋಕಗಳಲ್ಲಿ ಗುರುಗಳೆಂದೇ ಹೆಸರಾದವರು. ಎಲೈ ಮುನಿಗಳಿರಾ! ಇಷ್ಟೆಯಲ್ಲದೆ ನಂದೀಶ್ವರನು ಶಿವಲಿಂಗದ ಮಹಿಮೆಯನ್ನು ಯಥಾರ್ಥವಾಗಿ ತಿಳಿದಿರುತ್ತಾನೆ.

೪೦-೪೧. ಅಂತೆಯೇ ಪೂಜ್ಯನಾದ ಷಣ್ಮುಖನೂ, ಇತರ ಶಿವನಾಮಧಾರಕರೂ ಯಾವ ರೀತಿ ಹೇಳಿರುವರೋ ಅದೇ ರೀತಿ ಶೈಲಾದನಾದ ನಂದೀಶ್ವರನೂ ಆ ಧರ್ಮಗಳನ್ನು ಸಾರಿರುತ್ತಾನೆ. ಲಿಂಗಧಾರಕರು ವಿಚಿತ್ರವೃತ್ತಿ

**ಲಿಂಗೇನ ಸಹ ಪಂಚತ್ವಂ ಲಿಂಗೇನಸಹ ಜೀವಿತಂ ।**
**ಏತೇ ಧರ್ಮಾಃ ಸುಪ್ರತಿಷ್ಠಾಃ ಶೈಲಾದೇನ ಪ್ರತಿಷ್ಠಿತಾಃ ॥ ೪೨ ॥**
**ಧರ್ಮಃ ಪಾಶುಪತಃ ಶ್ರೇಷ್ಠಃ ಸ್ಕಂದೇನ ಪ್ರತಿಪಾಲಿತಃ ॥ ೪೩ ॥**
**ಶುದ್ಧಾ ಪಂಚಾಕ್ಷರೀ ವಿದ್ಯಾ ಪ್ರಾಸಾದೀ ತದನಂತರಂ ।**
**ಷಡಕ್ಷರೀ ತಥಾ ವಿದ್ಯಾಪ್ರಾಸಾದಸ್ಯ ಚ ದೀಪಿಕಾ ॥ ೪೪ ॥**
**ಸ್ಕಂದಾತ್ತತ್ಸಮನುಪ್ರಾಪ್ತಮಗಸ್ತ್ಯೇನ ಮಹಾತ್ಮನಾ ।**
**ಪಶ್ಚಾದಾಚಾರ್ಯ ಭೇದೇನ ಹ್ಯಾಗಮಾಃ ಬಹವೋಽಭವನ್ ॥ ೪೫ ॥**
**ಕಿಂನು ವೈ ಬಹುನೋಽಕ್ತೇನ ಶಿವ ಇತ್ಯಕ್ಷರದ್ವಯಂ ।**
**ಉಚ್ಚಾರಯಂತಿ ಯೇ ನಿತ್ಯಂ ತೇ ರುದ್ರಾಃ ನಾತ್ರ ಸಂಶಯಃ ॥ ೪೬ ॥**
**ಸತಾಂ ಮಾರ್ಗಂ ಪುರಸ್ಕೃತ್ಯ ಯೇ ಸರ್ವೇ ತೇ ಪುರಾಂತಕಾಃ ।**
**ವೀರಾಮಾಹೇಶ್ವರಾ ಜ್ಞೇಯಾಃ ಪಾಪಕ್ಷಯಕರಾ ನೃಣಾಂ ॥ ೪೭ ॥**
**ಪ್ರಸಂಗೇನಾನುಷಂಗೇಣ ಶ್ರದ್ಧಯಾ ಚ ಯದೃಚ್ಛಯಾ ।**
**ಶಿವಭಕ್ತಿಂ ಪ್ರಕುರ್ವಂತಿ ಯೇ ವೈ ತೇ ಯಾಂತಿ ಸದ್ಗತಿಂ ॥ ೪೮ ॥**

---

ಯುಳ್ಳವರು. ಅಯ್ಯಾ ಮಹಾಭಾಗರೇ! ಪುರಾತನರು ಶವದಮೇಲೆ ಶಿವಲಿಂಗವನ್ನು ಧರಿಸುತ್ತಾರೆ. ಶೈಲಾದನು ಲಿಂಗದೊಡನೆಯೇ ಸಾವು; ಲಿಂಗದೊಡನೆಯೇ ಬದುಕು ಎಂಬಿವೇ ಮೊದಲಾದ ಶಿವಧರ್ಮಗಳನ್ನು ನೆಲೆಗೊಳಿಸಿದನು.

೪೩. ಷಣ್ಮುಖ (ಸ್ಕಂದ)ನಿಂದ ಪರಿಪಾಲಿತವಾದ ಪಾಶುಪತ ಧರ್ಮವು ಶ್ರೇಷ್ಠವಾದುದು.

೪೪–೪೫. ಪಂಚಾಕ್ಷರೀ ವಿದ್ಯೆಯು ಶುದ್ಧವಾದುದು. ಅದಾದಮೇಲೆ ಪ್ರಣವವು. ಅದಾದಬಳಿಕ ಪ್ರಣವವನ್ನು ಬೆಳಗಿರುವ ಷಡಕ್ಷರೀ ವಿದ್ಯೆ. ಈ ವಿದ್ಯೆಯನ್ನು ಅಗಸ್ತ್ಯ ಮಹರ್ಷಿಯು ಮಹಾತ್ಮ ಸ್ಕಂದನಿಂದ ಪಡೆದನು. ತರುವಾಯ ಈ ವಿದ್ಯಾವಿಚಾರದಲ್ಲಿ ಆಚಾರ್ಯಭೇದದಿಂದ ಅನೇಕ ಆಗಮಗಳುಂಟಾದುವು.

೪೬. ಅಯ್ಯಾ ಮುನಿಗಳಿರಾ! ಹೆಚ್ಚಾಗಿ ಹೇಳುವುದರಿಂದೇನು? ಯಾರು ಶಿವ ಎಂಬ ಎರಡಕ್ಷರಗಳನ್ನು ನಿತ್ಯವೂ ಉಚ್ಚರಿಸುತ್ತಾರೆಯೋ ಅವರೇ ರುದ್ರರೆಂಬುದರಲ್ಲಿ ಸಂಶಯವಿಲ್ಲವು.

೪೭. ಯಾರು ಈ ಸತ್ಪುರುಷರ ಮಾರ್ಗವನ್ನು ಅನುಸರಿಸುವರೋ ಅವರೆಲ್ಲರೂ ತ್ರಿಪುರಾಂತಕರೇ! ಅವರೇ ಮಾನವರ ಪಾಪಗಳೆಲ್ಲವನ್ನೂ ಕಳೆಯುವ ವೀರ ಮಾಹೇಶ್ವರರು.

೪೮. ಯಾರಾದರೂ ಸರಿಯೇ! ಪ್ರಸಂಗಾನುಸಾರವೋ, ಸಹವಾಸದಿಂದಲೋ, ಅಕಸ್ಮಾತ್ತಾಗಿಯೋ, ಶ್ರದ್ಧೆಯಿಂದಲೋ ಶಿವನಲ್ಲಿ ಭಕ್ತಿಯನ್ನು ಮಾಡಿದುದಾದರೆ ಅವರೆಲ್ಲರೂ ಸದ್ಗತಿಯನ್ನು ಪಡೆದೇ ಪಡೆಯುತ್ತಾರೆ.

ಶೃಣುಧ್ವಂ ಕಥಯಾಮೀಹ ಇತಿಹಾಸಂ ಪುರಾತನಂ ।
ಕೃತಂ ಶಿವಾಲಯೇ ಯಚ್ಚ ಪತಂಗ್ಯಾ ಮಾರ್ಜನಂ ಪುರಾ ॥ ೪೯ ॥
ಆಗತಾ ಭಕ್ಷಣಾರ್ಥಂ ಹಿ ನೈವೇದ್ಯಂ ಕೇನ ಚಾರ್ಪಿತಂ ।
ಮಾರ್ಜನಂ ರಜಸಸ್ತಸ್ಯಾಃ ಪಕ್ಷಾಭ್ಯಾಮಭವತ್ಪುರಾ ॥ ೫೦ ॥
ತೇನ ಕರ್ಮವಿಪಾಕೇನ ಉತ್ತಮಂ ಸ್ವರ್ಗಮಾಗತಾ ।
ಭುಕ್ತ್ವಾ ಸ್ವರ್ಗಸುಖಂ ಚೋಗ್ರಂ ಪುನಃ ಸಂಸಾರಮಾಗತಾ ॥ ೫೧ ॥
ಕಾಶೀರಾಜಸುತಾ ಜಾತಾ ಸುಂದರೀ ನಾಮ ವಿಶ್ರುತಾ ।
ಪೂರ್ವಾಭ್ಯಾಸಾಚ್ಚ ಕಲ್ಯಾಣೀ ಬಭೂವ ಪರಮಾ ಸತೀ ॥ ೫೨ ॥
ಉಷಸ್ಯುಷಸಿ ತನ್ವಂಗೀ ಶಿವದ್ವಾರರತಾಸದಾ ।
ಸಂಮಾರ್ಜನಂಚ ಕುರುತೇ ಭಕ್ತ್ಯಾಪರಮಯಾ ಯುತಾ ॥ ೫೩ ॥
ಸ್ವಯಮೇವ ತಥಾ ದೇವೀ ಸುಂದರೀ ರಾಜಕನ್ಯಕಾ ।
ತಥಾಭೂತಾಂಚ ತಾಂ ದೃಷ್ಟ್ವಾ ಋಷಿರುದ್ದಾಲಕೋಽಬ್ರವೀತ್ ॥೫೪॥

---

೪೯. ಅಯ್ಯಾ ಕೇಳಿರಿ! ನಿಮಗೊಂದು ಇತಿಹಾಸವನ್ನು ಹೇಳುತ್ತೇನೆ. ಪೂರ್ವದಲ್ಲಿ ಹೆಣ್ಣು ಪತಂಗವೊಂದು ಶಿವಾಲಯದಲ್ಲಿ ಮಾರ್ಜನೆಯನ್ನು ಮಾಡಿತು.

೫೦. ಆ ಪತಂಗವು ಯಾರೋ ಶಿವಾಲಯದಲ್ಲಿ ಶಿವನಿಗರ್ಪಿಸಿದ್ದ ನೈವೇದ್ಯವನ್ನು ತಿನ್ನಲು ಬಂದಾಗ ಅದರ ರೆಕ್ಕೆಗಳಲ್ಲಿದ್ದ ಪುಷ್ಪಧೂಳಿಯು ಬಿದ್ದು ಅಲ್ಲಿ ಮಾರ್ಜನೆಯಾಯಿತು.

೫೧. ಈ ಕರ್ಮದ ಫಲವಾಗಿ ಆ ಪತಂಗಿಯು ಉತ್ತಮವಾದ ಸ್ವರ್ಗವನ್ನು ಸೇರಿತು. ಅದು ಅಲ್ಲಿ ಸ್ವರ್ಗಸುಖವನ್ನು ಅನುಭವಿಸಿ ಮತ್ತೆ ಭಯಂಕರವಾದ ಭೂಲೋಕಕ್ಕೆ ಬಂದಿತು.

೫೨–೫೩. ಎಲೈ ಮುನಿಗಳಿರಾ! ಈ ರೀತಿ ಭೂಮಿಗೆ ಬಂದ ಪತಂಗಿಯು ಸುಂದರಿಯೆಂಬ ಹೆಸರಿನಿಂದ ಕಾಶಿರಾಜನ ಮಗಳಾಗಿ ಹುಟ್ಟಿದಳು. ಪೂರ್ವಜನ್ಮದಲ್ಲಿ ಅಭ್ಯಾಸಮಾಡಿದ್ದ ಪುಣ್ಯಕರ್ಮದಿಂದ ಈ ಸುಂದರಿಯು ಬಹು ಮಂಗಳಾಂಗಿಯೂ ಪತಿವ್ರತೆಯೂ ಆದಳು. ಕೋಮಲಾಂಗಿಯಾದ ಈಕೆಯು ಪ್ರತಿದಿನವೂ ಉಷಃಕಾಲಕ್ಕೆದ್ದು ಶಿವಾಲಯದ ಬಾಗಿಲಬಳಿಗೈದಿ ಪರಮಭಕ್ತಿ ಸಂಪನ್ನೆಯಾಗಿ ಅಲ್ಲಿ ಸಾರಣೆಕಾರಣೆಗಳನ್ನು ಮಾಡುತ್ತಿದ್ದಳು.

೫೪–೫೮. ರಾಜಕನ್ಯೆಯಾದ ಆ ದೇವಿಯು ಈ ರೀತಿ ಯಾರೊಬ್ಬರ ಸಹಾಯವೂ ಇಲ್ಲದೆ ತಾನೇ ಶಿವಾಲಯದ ಬಾಗಿಲಿನಲ್ಲಿ ಸಾರಣೆಕಾರಣೆಗಳನ್ನು ನಿತ್ಯವೂ ಮಾಡುತ್ತಿದ್ದಳು. ಇಂತೆಸಗುತ್ತಿದ್ದ ಆಕೆಯನ್ನು ಕಂಡು ಉದ್ದಾಲಕ ಋಷಿಯು "ಎಲೆ ಬಾಲೇ! ಶುಚಿಸ್ಮಿತೇ! ನೀನು ಬಹು ಮಂಗಳಾಂಗಿಯಾಗಿ

ಸುಕುಮಾರೀ ಸತೀ ಬಾಲೇ ಸ್ವಯಮೇವಕಥಂ ಶುಭೇ ।
ಸಂಮಾರ್ಜನಂಚ ಕುರುಷೇ ಕನ್ಯಕೇ ತ್ವಂ ಶುಚಿಸ್ಮಿತೇ ॥ ೫೫ ॥
ದಾಸೀದಾಸ್ಯಶ್ಚ ಬಹವಃ ಸಂತಿ ದೇವಿ ತವಾಗ್ರತಃ ।
ತವಾಜ್ಞಯಾ ಕರಿಷ್ಯಂತಿ ಸರ್ವಂ ಸಂಮಾರ್ಜನಾದಿಕಂ ॥ ೫೬ ॥
ಋಷೇಸ್ತದ್ವಚನಂ ಶ್ರುತ್ವಾ ಪ್ರಹಸ್ಯೇದಮುವಾಚ ಹ ॥ ೫೭ ॥
ಶಿವಸೇವಾಂ ಪ್ರಕುರ್ವಾಣಾಃ ಶಿವಭಕ್ತಿಪುರಸ್ಕೃತಾಃ ।
ಯೇ ನರಾಶ್ಚೈವ ನಾರ್ಯಶ್ಚ ಶಿವಲೋಕಂ ವ್ರಜಂತಿ ವೈ ॥ ೫೮ ॥
ಸಂಮಾರ್ಜನಂ ಚ ಪಾಣಿಭ್ಯಾಂ ಪದ್ಭ್ಯಾಂ ಯಾನಂ ಶಿವಾಲಯೇ ।
ತಸ್ಮಾನ್ಮಯಾ ಚ ಕ್ರಿಯತೇ ಸಂಮಾರ್ಜನ ಮತಂದ್ರಿತಂ ॥ ೫೯ ॥
ಅನ್ಯಂ ಕಿಂಚಿನ್ನಜಾನಾಮ್ಯೇಕಂ ಸಂಮಾರ್ಜನಂ ವಿನಾ ।
ಋಷಿಸ್ತದ್ವಚನಂ ಶ್ರುತ್ವಾ ಮನಸಾ ಚ ವಿಮೃಶ್ಯಹಿ ॥ ೬೦ ॥
ಅನಯಾ ಕಿಂ ಕೃತಂ ಪೂರ್ವಂ ಕೇಯಂಕಸ್ಯ ಪ್ರಸಾದತಃ ।
ತದಾ ಜ್ಞಾತಂ ಚ ಋಷಿಣಾ ತತ್ಸರ್ವಂ ಜ್ಞಾನ ಚಕ್ಷುಷಾ ।
ವಿಸ್ಮಯೇನ ಸಮಾವಿಷ್ಟಸ್ತೂಷ್ಣೀಂಭೂತೋಽಭವತ್ತದಾ ॥ ೬೧ ॥

---

ರುವೆ. ಸುಕುಮಾರಿಯಾದ ನೀನು ಯಾರ ನೆರವೂ ಇಲ್ಲದೆ ನೀನೇ ಈ ರೀತಿ ಸಂಮಾರ್ಜನೆಯನ್ನೇಕೆ ಮಾಡುವೆ? ನಿನಗೆ ಬೇಕಾದಷ್ಟು ಮಂದಿ ಆಳುಗಳೂ, ಗೌಡಿಯರೂ ಇಲ್ಲವೆ, ನೀನು ಬೆಸಸಿದರೆ ಅವರು ಈ ಸಾರಣೆಕಾರಣೆಗಳೆಲ್ಲ ವನ್ನೂ ಮಾಡುತ್ತಾರೆಯಲ್ಲವೆ" ಎಂದು ಕೇಳಿದನು. ಋಷಿಯು ಈ ಮಾತನ್ನು ಕೇಳಿ, ಆ ರಾಜಕುಮಾರಿಯಾದ ಸುಂದರಿಯು ನಸುನಕ್ಕು ಹೀಗೆಂದಳು: "ಎಲೈ ತಪೋಧನನೇ! ಶಿವಭಕ್ತಿಸಂಪನ್ನರಾಗಿ ಶಿವಸೇವೆಯನ್ನು ಮಾಡುವ ನರನಾರಿಯರು ಶಿವಲೋಕವನ್ನು ಸೇರುತ್ತಾರೆಯಲ್ಲವೆ?

೫೯. ಶಿವಾಲಯಗಳಲ್ಲಿ ಕೈಗಳಿಂದ ಸಾರಿಸುವುದು, ಬರಿ ಕಾಲುಗಳಿಂದ ನಡೆಯುವುದು ಸಂಪ್ರದಾಯವಾಗಿರುವುದು. ಆದುದರಿಂದ ನಾನೂ ಬೇಸರ ವಿಲ್ಲದೆ ಸಾರಣೆಯನ್ನು ಮಾಡುತ್ತಿರುವೆನು.

೬೦–೬೧. ಎಲೈ ಮುನಿಯೇ! ನಾನು ಈ ಸಂಮಾರ್ಜನೆಯೊಂದನ್ನು ಬಿಟ್ಟು ಮತ್ತೇನನ್ನೂ ಅರಿಯೆನು." ಇಂತು ನುಡಿದ ಆ ಸುಂದರಿಯ ನುಡಿ ಯನ್ನು ಕೇಳಿ ಉದ್ದಾಲಕ ಮುನಿಯು, "ಇವಳು ಪೂರ್ವಜನ್ಮದಲ್ಲಿ ಯಾವ ಪುಣ್ಯವನ್ನು ಮಾಡಿದಳೊ!" ಎಂದು ತನ್ನ ಮನಸ್ಸಿನಲ್ಲಿಯೇ ವಿಮರ್ಶಿಸಿ, ಜ್ಞಾನದೃಷ್ಟಿಯಿಂದ ಆ ವಿಷಯವೆಲ್ಲವನ್ನೂ ಅರಿತುಕೊಂಡು ಆಶ್ಚರ್ಯಪಟ್ಟು ಸುಮ್ಮನಾದನು.

ಸವಿಸ್ಮಯೋಽಭೂದಥ ತದ್ವಿದಿತ್ವಾ
ಉದ್ದಾಲಕೋ ಜ್ಞಾನವತಾಂ ವರಿಷ್ಠಃ ।
ಶಿವಪ್ರಭಾವಂ ಮನಸಾ ವಿಚಿಂತ್ಯ
ಜ್ಞಾನಾತ್ಪರಂ ಭೋಧಮವಾಪ ಶಾಂತಃ ॥ ॥ ೬೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ
" ಶಿವಲಿಂಗಮಾಹಾತ್ಮ್ಯವರ್ಣನಂ " ನಾಮ ಸಪ್ತಮೋಽಧ್ಯಾಯಃ

---

೬೨. ಅಯ್ಯಾ ಮುನಿಗಳಿರಾ! ಜ್ಞಾನಿಗಳಲ್ಲಿ ಉತ್ತಮ ಜ್ಞಾನಿಯಾದ ಉದ್ದಾಲಕ ಋಷಿಯು ಈ ರೀತಿ ಆಶ್ಚರ್ಯಭರಿತನಾಗಿ ಮನಸ್ಸಿನಲ್ಲಿಯೇ ಶಿವನ ಮಹಿಮೆಯನ್ನು ಕುರಿತು ಯೋಚಿಸುತ್ತ ಜ್ಞಾನಕ್ಕೂ ಮೀರಿದ ಬೋಧೆಯನ್ನು ಪಡೆದು ಶಾಂತಿಸಂಪನ್ನನಾದನು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ
" ಶಿವ – ಶಿವಲಿಂಗಪ್ರಭಾವವರ್ಣನ "ವೆಂಬ
ಏಳನೆಯ ಅಧ್ಯಾಯವು ಮುಗಿದುದು

ಶ್ರೀಃ

## ಅಥ ಅಷ್ಟಮೋಽಧ್ಯಾಯಃ

### ಶಿವಲಿಂಗಾರ್ಚನ ಮಾಹಾತ್ಮ್ಯಕಥನೇ ಶ್ರೀರಾಮಾವತಾರ ವೃತ್ತಾಂತಕಥನಂ

**ಲೋಮಶ ಉವಾಚ :—**

**ತಸ್ಕರೋಽಪಿ ಪುರಾ ಬ್ರಹ್ಮನ್ ಸರ್ವಧರ್ಮಬಹಿಷ್ಕೃತಃ ।**
**ಬ್ರಹ್ಮಘ್ನೋಽಸೌ ಸುರಾಪಶ್ಚ ಸುವರ್ಣಸ್ಯ ಚ ತಸ್ಕರಃ ॥ ೧ ॥**
**ಲಂಪಟೋ ಹಿ ಮಹಾಪಾಪ ಉತ್ತಮಸ್ತ್ರೀಷು ಸರ್ವ[illegible]ಾ ।**
**ದ್ಯೂತಕಾರೀ ಸದಾಮಂದಃ ಕಿತವೈಃ ಸಹ ಸಂಗತಃ ॥ ೨ ॥**
**ಏಕದಾ ಕ್ರೀಡತಾ ತೇನ ಹಾರಿತಂ ದ್ಯೂತಮುದ್ಭುತಂ ।**
**ಕಿತವೈರ್ಮರ್ದ್ಯಮಾನೋಹಿ ತದಾ ನೋವಾಚ ಕಿಂಚನ ॥ ೩ ॥**
**ಪೀಡಿತೋಽಪ್ಯಭವತ್ತೂಷ್ಣೀಂ ತೈರುಕ್ತಃ ಪಾಪಕೃತ್ತಮಃ ।**
**ದ್ಯೂತೇ ತ್ವಯಾ ಚ ತದ್ದ್ರವ್ಯಂ ಹಾರಿತಂ ಕಿಂ ಪ್ರಯಚ್ಛಸಿ ॥ ೪ ॥**
**ನೋವಾ ತತ್ಕಥ್ಯತಾಂ ಶೀಘ್ರಂ ಯಾಥಾತಥ್ಯೇನ ದುರ್ಮತೇ ।**
**ಯದ್ಧಾರಿತಂ ಪ್ರಯಚ್ಛಾಮಿ ರಾತ್ರಾವಿತ್ಯಬ್ರವೀಚ್ಚ ಸಃ ॥ ೫ ॥**

---

## ಕನ್ನಡದ ಅನುವಾದ

### ಶಿವಲಿಂಗಾರ್ಚನ ಮಹಾತ್ಮ್ಯ ಕಥನದಲ್ಲಿ ಶ್ರೀ ರಾಮಾವತಾರ ಕಥಾವೃತ್ತಾಂತ

೧. ಲೋಮಶನು ಹೇಳುತ್ತಾನೆ:—ಎಲೈ ವಿಪ್ರರೇ! ಪೂರ್ವದಲ್ಲಿ ಒಬ್ಬ ಕಳ್ಳನಿದ್ದನು. ಅವನು ಎಲ್ಲಾ ಧರ್ಮಗಳಿಗೂ ದೂರನಾದವನು. ಅವನು ಬ್ರಹ್ಮಹತ್ಯೆ, ಸುರಾಪಾನ, ಸುವರ್ಣ ಚೋರನೂ ಆಗಿದ್ದನು.

೨. ಆ ಮಹಾ ಪಾಪಿಯು ಯಾವಾಗಲೂ ಪತಿವ್ರತೆಯರಾದ ಪರಸ್ತ್ರೀಯರಲ್ಲಿಯೇ ಲಂಪಟನಾಗಿದ್ದನು. ಯಾವಾಗಲೂ ಕಳ್ಳರೊಡನೆ ಸೇರಿಕೊಂಡು ಜೂಜನ್ನೇ ಆಡುತ್ತಿದ್ದನು. ಅವನಿಗೆ ತಿಳಿವಳಿಕೆಯೆಂಬುದೇ ಇರಲಿಲ್ಲ.

೩. ಒಂದು ದಿನ ಜೂಜನ್ನಾಡುತ್ತಿದ್ದಾಗ ಇವನು ಬಹಳ ಹೆಚ್ಚಾದ ಹಣವನ್ನು ಸೋತುಬಿಟ್ಟನು. ಅದನ್ನು ಕೊಡದಿರಲು ಇವನ ಸಂಗಡಿಗರಾದ ಕಳ್ಳರೆಲ್ಲರೂ ಇವನನ್ನು ಹಿಡಿದು ಹೊಡೆಯುತ್ತಿದ್ದರೂ ಇವನು ಏನೂ ಹೇಳಲಿಲ್ಲ.

೪–೫. ಎಷ್ಟು ಪೀಡಿಸಿದರೂ ಈ ಪಾಪಿಷ್ಠನು ಸುಮ್ಮನೆಯೇ ಇದ್ದನು. ಆಗ ಕಳ್ಳರು "ಎಲವೋ! ಜೂಜಿನಲ್ಲಿ ನೀನು ಸೋತ ಹಣವನ್ನು ಕೊಡುವೆಯೋ ಇಲ್ಲವೋ ಸರಿಯಾಗಿ ಹೇಳು" ಎಂದರು. ಆಗ ಇವನು ನಾನು ಎಷ್ಟು ಹಣವನ್ನು ಸೋತಿರುವೆನೋ ಅಷ್ಟನ್ನೂ ಈ ರಾತ್ರಿಯೇ ಕೊಟ್ಟುಬಿಡುತ್ತೇನೆ ಎಂದು ಹೇಳಿದನು.

ತೈರ್ಮುಕ್ತಸ್ತೇನ ವಾಕ್ಯೇನ ಗತಾಸ್ತೇ ಕಿತವಾದಯಃ ।
ತದಾ ನಿಶೀಥಸಮಯೇ ಗತೋಽಸೌ ಶಿವಮಂದಿರಂ ॥ ೬ ॥
ಶಿರೋಽಧಿರುಹ್ಯ ಶಂಭೋಶ್ಚ ಘಂಟಾಮಾದಾತುಮುದ್ಯತಃ ।
ತಾವತ್ ಕೈಲಾಸಶಿಖರೇ ಶಂಭುಃ ಪ್ರೋವಾಚ ಕಿಂಕರಾನ್ ॥ ೭ ॥
ಅನೇನ ಯತ್ಕೃತಂ ಚಾದ್ಯ ಸರ್ವೇಷಾಮಧಿಕಂ ಭುವಿ ।
ಸರ್ವೇಷಾಮೇವ ಭಕ್ತಾನಾಂ ವರಿಷ್ಠೋಽಯಂ ಚ ಮತ್ಪ್ರಿಯಃ ॥ ೮ ॥
ಇತಿ ಪ್ರೋಕ್ತ್ವಾನಯಾಮಾಸ ವೀರಭದ್ರಾದಿಭಿರ್ಗಣೈಃ ।
ತೇ ಸರ್ವೇ ತ್ವರಿತಾ ಜಗ್ಮುಃ ಕೈಲಾಸಾಚ್ಛಿವವಲ್ಲಭಾತ್ ॥ ೯ ॥
ಸರ್ವೈರ್ಡಮರುನಾದೇನ ನಾದಿತಂ ಭುವನತ್ರಯಂ ।
ತಾನ್‌ದೃಷ್ಟ್ವಾ ಸಹಸೋತ್ತೀರ್ಯ ತಸ್ಕರೋಽಸೌ ದುರಾತ್ಮವಾನ್ ।
ಲಿಂಗಸ್ಯ ಮಸ್ತಕಾತ್ಸದ್ಯಃ ಪಲಾಯನಪರೋಽಭವತ್ ॥ ೧೦ ॥
ಪಲಾಯಮಾನಂ ತಂ ದೃಷ್ಟ್ವಾ ವೀರಭದ್ರಃ ಸಮಾಹ್ವಯತ್ ॥ ೧೧ ॥
ಕಸ್ಮಾದ್ಬಿಭೇಷಿ ಹೇ ಮಂದ ದೇವದೇವೋ ಮಹೇಶ್ವರಃ ।
ಪ್ರಸನ್ನಸ್ತವ ಜಾತೋಽದ್ಯ ಉದಾರಚರಿತೋಹ್ಯಸೌ ॥ ೧೨ ॥
ಇತ್ಯುಕ್ತ್ವಾ ತಂ ವಿಮಾನೇ ಚ ಕೃತ್ವಾ ಕೈಲಾಸಮಾಯಯೌ ।
ಪಾರ್ಷದೋಹಿ ಕೃತಸ್ತೇನ ತಸ್ಕರೋಹಿ ಮಹಾತ್ಮನಾ ॥ ೧೩ ॥

---

೬–೯. ಆ ಮಾತನ್ನು ಕೇಳಿ ಜೂಜುಕೋರರೆಲ್ಲರೂ ಇವನನ್ನು ಬಿಟ್ಟು ಬಿಟ್ಟರು. ಆಮೇಲೆ ಇವನು ಅರ್ಧರಾತ್ರಿಯಲ್ಲಿ ಶಿವದೇವಾಲಯಕ್ಕೆ ಹೋಗಿ ಅಲ್ಲಿ ಶಿವಲಿಂಗದ ಮಸ್ತಕದ ಮೇಲೇರಿ ಅಲ್ಲಿ ತೂಗಹಾಕಿದ್ದ ಘಂಟೆಯನ್ನು ತೆಗೆದುಕೊಳ್ಳಲು ಪ್ರಯತ್ನಿಸಿದನು. ಇಷ್ಟರಲ್ಲಿಯೇ ಕೈಲಾಸ ಪರ್ವತದ ಶಿಖರದಲ್ಲಿ ಪ್ರಭುವಾದ ಶಂಕರನು ತನ್ನ ಕಿಂಕರರನ್ನು ಕುರಿತು, "ಎಲೈ! ಈ ಕಳ್ಳನು ಮಾಡಿರುವ ಪುಣ್ಯವು ಭೂಲೋಕದಲ್ಲಿ ಎಲ್ಲರೂ ಮಾಡಿರುವುದಕ್ಕಿಂತಲೂ ಹೆಚ್ಚಾದುದು. ಇವನು ನನ್ನ ಎಲ್ಲಾ ಭಕ್ತರಿಗಿಂತಲೂ ನನಗೆ ಪ್ರಿಯನಾಗಿರುವನು" ಎಂದು ಹೇಳಿ ಅವನನ್ನು ಕರೆತರುವಂತೆ ವೀರಭದ್ರನೇ ಮೊದಲಾದ ಶಿವಗಣಗಳಿಗೆ ಬೆಸಸಿದನು. ಅವರೆಲ್ಲರೂ ಶಿವನಿಗೆ ಅತ್ಯಂತ ಪ್ರಿಯವಾದ ಆ ಕೈಲಾಸ ಪರ್ವತದಿಂದ ಜಾಗ್ರತೆಯಾಗಿ ಹೊರಟುಬಂದರು.

೧೦–೧೩. ಅವರೆಲ್ಲರ ಡಮರುಕಗಳ ನಾದದಿಂದ ಮೂರು ಲೋಕಗಳೂ ಪಡಿನುಡಿಗೊಂಡವು. ದುರಾತ್ಮನಾದ ಆ ಕಳ್ಳನಾದರೋ ಅವರೆಲ್ಲರನ್ನೂ ಕಂಡು ಶಿವಲಿಂಗದಿಂದ ತಟಕ್ಕನೆ ಕೆಳಕ್ಕಿಳಿದು ಓಡಿಹೋಗುವುದರಲ್ಲಿದ್ದನು. ಆಗ ವೀರಭದ್ರನು ಈ ರೀತಿ ಓಡಿಹೋಗುತ್ತಿರುವ ಅವನನ್ನು ಕರೆದು, "ಎಲವೋ ತಿಳಿಗೇಡಿಯೇ! ಏತಕ್ಕೆ ಹೆದರುವೆ? ದೇವದೇವನಾದ ಮಹೇಶ್ವರನು ನಿನಗೆ

**ತಸ್ಮಾದ್ಭಾವ್ಯಾ ಶಿವೇ ಭಕ್ತಿಃ ಸರ್ವೇಷಾಮಪಿ ದೇಹಿನಾಂ ।**
**ಪಶವೋಽಪಿ ಹಿ ಪೂಜ್ಯಾಃ ಸ್ಯುಃ ಕಿಂಪುನರ್ಮಾನವಾ ಭುವಿ ॥ ೧೪ ॥**
**ಯೇ ತಾರ್ಕಿಕಾಸ್ತರ್ಕಪರಾಸ್ತಥಾ ಮೀಮಾಂಸಕಾಶ್ಚಯೇ ।**
**ಅನ್ಯೋನ್ಯವಾದಿನಶ್ಚಾನ್ಯೇ ಚಾನ್ಯೇ ಹ್ಯಾತ್ಮವಿತರ್ಕಕಾಃ ॥ ೧೫ ॥**
**ಏಕವಾಕ್ಯಂ ನ ಕುರ್ವಂತಿ ಶಿವಾರ್ಚನಬಹಿಷ್ಕೃತಾಃ ।**
**ತರ್ಕೋ ಹಿ ಕ್ರಿಯತೇ ಯೈಶ್ಚ ತೇ ಸರ್ವೇ ಕಿಂ ಶಿವಂ ವಿನಾ ॥ ೧೬ ॥**
**ತಥಾ ಕಿಂ ಬಹುನೋಕ್ತೇನ ಸರ್ವೇಽಪಿ ಸ್ಥಿರಜಂಗಮಾಃ ।**
**ಪ್ರಾಣಿನೋಽಪಿ ಹಿ ಜಾಯಂತೇ ಕೇವಲಂ ಲಿಂಗಧಾರಿಣಃ ॥ ೧೭ ॥**
**ಪಿಂಡೀಯುಕ್ತಂ ಯಥಾ ಲಿಂಗಂ ಸ್ಥಾಪಿತಂ ಚ ಯಥಾಽಭವತ್ ।**
**ತಥಾಸರ್ವಾ ಲಿಂಗಯುಕ್ತಾ ಪಿಂಡೀಭೂತಾಸ್ತಥಾ ಸ್ತ್ರಿಯಃ ॥ ೧೮ ॥**
**ಶಿವಶಕ್ತಿಯುತಂ ಸರ್ವಂ ಜಗದೇತಚ್ಚರಾಚರಂ ।**
**ತಂ ಶಿವಂ ಮೌಢ್ಯತಸ್ತ್ಯಕ್ತ್ವಾ ಮೂಢಾಶ್ಚಾನ್ಯಂ ಭಜಂತಿ ಯೇ ॥ ೧೯ ॥**

---

ಪ್ರಸನ್ನನಾಗಿರುವನು. ಆ ಸ್ವಾಮಿಯು ಉದಾರಚರಿತನಲ್ಲವೆ" ಎಂದು ಹೇಳಿ ಅವನನ್ನು ವಿಮಾನದಲ್ಲಿ ಕುಳ್ಳಿರಿಸಿಕೊಂಡು ಕೈಲಾಸಕ್ಕೆ ಬಂದನು. ಆಗ ಮಹಾತ್ಮನಾದ ಶಂಕರನು ಆ ತಸ್ಕರನನ್ನು ತನ್ನ ಪಾರ್ಷದನನ್ನಾಗಿ ಮಾಡಿದನು.

೧೪. ಎಲೈ ಮುನಿಗಳಿರಾ! ಎಲ್ಲ ಮಾನವರೂ ಶಿವನಲ್ಲಿ ಭಕ್ತಿಯನ್ನು ತಾಳಬೇಕು. ಶಿವನಲ್ಲಿ ಭಕ್ತಿಯನ್ನಿಟ್ಟಿರುವ ಪಶುಗಳೂ ಪೂಜ್ಯಗಳಾಗುತ್ತವೆಯೆಂದ ಬಳಿಕ ಈ ಭೂಲೋಕದಲ್ಲಿರುವ ಮಾನವರ ವಿಷಯದಲ್ಲಿ ಹೇಳತಕ್ಕುದೇನು?

೧೫–೧೬. ತರ್ಕವಾದಗಳಲ್ಲಿ ಆಸಕ್ತರಾದ ತಾರ್ಕಿಕರೂ, ಮೀಮಾಂಸಕರೂ, ಪರಸ್ಪರವಾದ ವಿವಾದಗಳನ್ನು ಮಾಡುವವರೂ, ಆತ್ಮವಿಚಾರದಲ್ಲಿ ವಿತರ್ಕಮಾಡುವವರೂ ಯಾರಾರಿರುವರೋ ಅವರೆಲ್ಲರೂ ಶಿವಾರ್ಚನೆಯ ವಿಷಯದಲ್ಲಿ ಬಹಿಷ್ಕೃತರಾದುದರಿಂದ ಏಕವಾಕ್ಯತೆಯನ್ನೀಯುವುದಿಲ್ಲ. ಶಿವನ ವಿಚಾರವನ್ನು ಬಿಟ್ಟು ಮಾಡುವ ತರ್ಕವು ತರ್ಕವೆ? ಅಂತಹ ತರ್ಕವನ್ನು ಮಾಡುವವರು ಮಾನವರೇ?

೧೭–೧೮. ಅಯ್ಯಾ! ಹೆಚ್ಚಾಗಿ ಹೇಳುವುದರಿಂದೇನು? ಸ್ಥಾವರ ಜಂಗಮಗಳಾದ ಪ್ರಾಣಿಗಳೆಲ್ಲವೂ ಲಿಂಗಧಾರಿಗಳಾಗಿಯೇ ಹುಟ್ಟುತ್ತವೆ. ಶಿವಲಿಂಗವು ಪಿಂಡೀಯುಕ್ತವಾಗಿ ಸ್ಥಾಪಿತವಾದಂತೆಯೇ ಪುರುಷರು ಲಿಂಗಯುಕ್ತರಾಗಿಯೂ, ಸ್ತ್ರೀಯರು ಪಿಂಡೀಯುತರಾಗಿಯೂ ಆಗಿ ಜನಿಸಿದರು.

೧೯. ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ಶಿವಶಕ್ತಿಯಿಂದ ಕೂಡಿದುದಾಗಿರುವುದು. ಅಂತಹ ಶಿವನನ್ನು ತಿಳಿಗೇಡಿತನದಿಂದ ತೊರೆದು ಇತರ ದೈವಗಳನ್ನು ಸೇವಿಸುವವರೆಲ್ಲರೂ ಕೇವಲ ಗಾವಿಲರು.

ಧರ್ಮಮಾತ್ಯಂತಿಕಂ ತುಚ್ಛಂ ನಶ್ವರಂ ಕ್ಷಣಭಂಗುರಂ ।
ಯೋ ವಿಷ್ಣುಃ ಸಶಿವೋ ಜ್ಞೇಯೋ ಯಃ ಶಿವೋ ವಿಷ್ಣುರೇವ ಸಃ ॥೨೦॥
ಪೀಠಿಕಾ ವಿಷ್ಣುರೂಪಂ ಸ್ಯಾಲ್ಲಿಂಗರೂಪೀ ಮಹೇಶ್ವರಃ ।
ತಸ್ಮಾಲ್ಲಿಂಗಾರ್ಚನಂ ಶ್ರೇಷ್ಠಂ ಸರ್ವೇಷಾಮಪಿ ವೈ ದ್ವಿಜಾಃ ॥ ೨೧ ॥
ಬ್ರಹ್ಮಾ ಮಣಿಮಯಂ ಲಿಂಗಂ ಪೂಜಯತ್ಯನಿಶಂ ಶುಭಂ ।
ಇಂದ್ರೋ ರತ್ನಮಯಂ ಲಿಂಗಂ ಚಂದ್ರೋ ಮುಕ್ತಾಮಯಂ ತಥಾ ॥೨೨॥
ಭಾನುಸ್ತಾಮ್ರಮಯಂ ಲಿಂಗಂ ಪೂಜಯತ್ಯನಿಶಂ ಶುಭಂ ।
ರೌಕ್ಮಂ ಲಿಂಗಂ ಕುಬೇರಶ್ಚ ಪಾಶೀ ಚಾರಕ್ತಮೇವಚ ॥ ೨೩ ॥
ಯಮೋ ನೀಲಮಯಂ ಲಿಂಗಂ ರಾಜತಂ ನೈಋತಸ್ತಥಾ ।
ಕಾಶ್ಮೀರಂ ಪವನೋ ಲಿಂಗಮರ್ಚಯತ್ಯನಿಶಂ ವಿಭೋಃ ॥ ೨೪ ॥
ಏವಂ ತೇ ಲಿಂಗಿತಾಃ ಸರ್ವೇ ಲೋಕಪಾಲಾಃ ಸವಾಸವಾಃ ।
ತಥಾ ಸರ್ವೇಽಪಿ ಪಾತಾಳೇ ಗಂಧರ್ವಾಃ ಕಿಂನರೈಃ ಸಹ ॥ ೨೫ ॥
ದೈತ್ಯಾನಾಂ ವೈಷ್ಣವಾಃ ಕೇಚಿತ್ ಪ್ರಹ್ಲಾದ ಪ್ರಮುಖಾ ದ್ವಿಜಾಃ ।
ತಥಾ ಹಿ ರಾಕ್ಷಸಾನಾಂ ಚ ವಿಭೀಷಣಪುರೋಗಮಾಃ ॥ ೨೬ ॥

---

೨೦. ಅಯ್ಯಾ ಋಷಿಗಳಿರಾ! ಧರ್ಮಕ್ಕೆ ವ್ಯತಿರಿಕ್ತವಾದುದೆಲ್ಲವೂ ತುಚ್ಛವಾದುದು. ಅಲ್ಲದೆ ಒಂದು ಕ್ಷಣವಿದ್ದು ನಾಶವಾಗತಕ್ಕುದು. ವಿಷ್ಣುವೇ ಶಿವನು; ಶಿವನೇ ವಿಷ್ಣುವು.

೨೧. ಶಿವಲಿಂಗದ ಪೀಠವೇ ವಿಷ್ಣುರೂಪವಾದುದು. ಲಿಂಗರೂಪದಿಂದಿರುವವನೇ ಮಹೇಶ್ವರನು. ಆದುದರಿಂದೆಲೈ ಬ್ರಾಹ್ಮಣರಿರಾ! ಸಮಸ್ತರಿಗೂ ಶಿವಲಿಂಗಾರ್ಚನೆಯು ಶ್ರೇಷ್ಠವಾದುದು.

೨೨–೨೩. ಬ್ರಹ್ಮನು ಮಣಿಮಯಲಿಂಗವನ್ನು ಯಾವಾಗಲೂ ಅರ್ಚಿಸುತ್ತಿರುವನು. ಇಂದ್ರನು ರತ್ನಮಯ ಲಿಂಗವನ್ನೂ, ಚಂದ್ರನು ಮುಕ್ತಾಮಯ ಲಿಂಗವನ್ನೂ, ಸೂರ್ಯನು ತಾಮ್ರಮಯ ಲಿಂಗವನ್ನೂ ಪೂಜಿಸುತ್ತಿರುವರು. ಕುಬೇರನು ಸ್ವರ್ಣಲಿಂಗವನ್ನೂ, ವರುಣನು ಆರಕ್ತಲಿಂಗವನ್ನೂ ಪೂಜಿಸುವರು.

೨೪. ಯಮನು ನೀಲಮಣಿಮಯ ಲಿಂಗವನ್ನೂ, ನಿಋತಿಯು ರಾಜತ ಲಿಂಗವನ್ನೂ ಅರ್ಚಿಸುವನು. ಮಾರುತನು ಕಾಶ್ಮೀರ ಲಿಂಗವನ್ನರ್ಚಿಸುವನು.

೨೫. ಈ ರೀತಿ ಇಂದ್ರನೇ ಮೊದಲಾದ ಲೋಕಪಾಲಕರೆಲ್ಲರೂ ಶಿವಲಿಂಗಗಳನ್ನು ಅರ್ಚಿಸುತ್ತಾರೆ. ಅಂತೆಯೇ ಪಾತಾಳದಲ್ಲಿಯೂ ಕಿನ್ನರರೊಡಗೂಡಿದ ಎಲ್ಲರೂ ಶಿವಲಿಂಗಗಳನ್ನರ್ಚಿಸುತ್ತಾರೆ.

೨೬. ಎಲೈ ಬ್ರಾಹ್ಮಣರಿರಾ! ದೈತ್ಯರಲ್ಲಿ ವೈಷ್ಣವರಾಗಿರುವ ಪ್ರಹ್ಲಾದನೇ ಮೊದಲಾದವರೂ, ರಾಕ್ಷಸರಲ್ಲಿ ವಿಭೀಷಣನೇ ಮೊದಲಾದವರೂ ಶಿವಲಿಂಗವನ್ನು ಪೂಜಿಸುತ್ತಾರೆ.

ಬಲಿಶ್ಚ ನಮುಚಿಶ್ಚೈವ ಹಿರಣ್ಯಕಶಿಪುಸ್ತಥಾ ।
ವೃಷಪರ್ವಾ ವೃಷಶ್ಚೈವ ಸಂಹ್ರಾದೋ ಬಾಣ ಏವಚ ॥ ೨೭ ॥
ಏತೇ ಚಾನ್ಯೇ ಚ ಬಹವಃ ಶಿಷ್ಯಾಃ ಶುಕ್ರಸ್ಯ ಧೀಮತಃ ।
ಏವಂ ಶಿವಾರ್ಚನರತಾಃ ಸರ್ವೇ ತೇ ದೈತ್ಯದಾನವಾಃ ॥ ೨೮ ॥
ರಾಕ್ಷಸಾ ಏವತೇ ಸರ್ವೇ ಶಿವಪೂಜಾಽನ್ವಿತಾಃ ಸದಾ ।
ಹೇತಿಃ ಪ್ರಹೇತಿಃ ಸಂಯಾತಿರ್ವಿಘಸಃ ಪ್ರಘಸಸ್ತಥಾ ॥ ೨೯ ॥
ವಿದ್ಯುಜ್ಜಿಹ್ವಸ್ತೀಕ್ಷ್ಣದಂಷ್ಟ್ರೋ ಧೂಮ್ರಾಕ್ಷೋ ಭೀಮವಿಕ್ರಮಃ ।
ಮಾಲೀ ಚೈವ ಸುಮಾಲೀಚ ಮಾಲ್ಯವಾನತಿಭೀಷಣಃ ॥ ೩೦ ॥
ವಿದ್ಯುತ್ಕೇಶಸ್ತಡಿಜ್ಜಿಹ್ವೋ ರಾವಣಶ್ಚ ಮಹಾಬಲಃ ।
ಕುಂಭಕರ್ಣೋ ದುರಾಧರ್ಷೋ ವೇಗದರ್ಶೀ ಪ್ರತಾಪವಾನ್ ॥ ೩೧ ॥
ಏತೇ ಹಿ ರಾಕ್ಷಸಾಃ ಶ್ರೇಷ್ಠಾಃ ಶಿವಾರ್ಚನರತಾಃ ಸದಾ ।
ಲಿಂಗ ಮಭ್ಯರ್ಚ್ಯ ಚ ಸದಾ ಸಿದ್ಧಿಂ ಪ್ರಾಪ್ತಾಃ ಪುರಾತು ತೇ ॥ ೩೨ ॥
ರಾವಣೇನ ತಪಸ್ತಪ್ತಂ ಸರ್ವೇಷಾಮಪಿ ದುಃಸಹಂ ।
ತಪೋಧಿಪೋ ಮಹಾದೇವಸ್ತುತೋಷ ಚ ತದಾ ಭೃಶಂ ॥ ೩೩ ॥

---

೨೭–೨೮. ಬಲಿ, ನಮುಚಿ, ಹಿರಣ್ಯಕಶಿಪು, ವೃಷಪರ್ವ, ಸಂಹ್ರಾದ, ಬಾಣ ಮುಂತಾದ ಅನೇಕರೂ ಬುದ್ಧಿಶಾಲಿಯಾದ ಶುಕ್ರಾಚಾರ್ಯನ ಇತರ ಶಿಷ್ಯರೆಲ್ಲರೂ ಶಿವಲಿಂಗಗಳನ್ನು ಪೂಜಿಸುವರು. ಹೀಗೆ ದೈತ್ಯದಾನವರೆಲ್ಲರೂ ಶಿವಾರ್ಚನೆಯಲ್ಲಿಯೇ ಪ್ರೀತಿಯುಳ್ಳವರು.

೨೯. ಅಯ್ಯಾ ಋಷಿಗಳಿರಾ! ಈ ಮುಂದೆ ಹೇಳುವರೆಲ್ಲರೂ ಶಿವಪೂಜೆಯಲ್ಲಿ ತೊಡಗಿರುವ ರಾಕ್ಷಸರು. ಅವರೇ ಹೇತಿ, ಪ್ರಹೇತಿ, ಸಂಯಾತಿ, ವಿಘಸ, ಪ್ರಘಸ.

೩೦. ವಿದ್ಯುಜ್ಜಿಹ್ವ, ತೀಕ್ಷ್ಣದಂಷ್ಟ್ರ, ಭಯಂಕರ ಪರಾಕ್ರಮಿಯಾದ ಧೂಮ್ರಾಕ್ಷ, ಮಾಲಿ, ಸುಮಾಲಿ, ಅತಿ ಭಯಂಕರನಾದ ಮಾಲ್ಯವಂತ.

೩೧. ವಿದ್ಯುತ್ಕೇಶ, ತಡಿಜ್ಜಿಹ್ವ, ಮಹಾಬಲನಾದ ರಾವಣ, ಎದುರಿಸಲಸದಳನಾದ ಕುಂಭಕರ್ಣ, ಪ್ರತಾಪಿಯಾದ ವೇಗದರ್ಶಿ.

೩೨. ಇವರೆಲ್ಲರೂ ಶಿವಾರ್ಚನೆಯಲ್ಲಿ ಆಸಕ್ತರಾದ ರಾಕ್ಷಸೋತ್ತಮರು; ಎಲ್ಲರೂ ಪೂರ್ವದಲ್ಲಿ ಶಿವಲಿಂಗವನ್ನು ಪೂಜಿಸಿಯೇ ಸಿದ್ಧಿಯನ್ನು ಪಡೆದಿರುವವರು.

೩೩. ಇವರಲ್ಲಿ ಒಬ್ಬನಾದ ರಾವಣನು ಶಂಕರನನ್ನು ಕುರಿತು ಮತ್ತಾರಿಂದಲೂ ಮಾಡಲಸಾಧ್ಯವಾದ ತಪಸ್ಸನ್ನು ಮಾಡಿದನು. ಇದರಿಂದ ತಪಸ್ಸಿಗೆ ಒಡೆಯನಾದ ಶಂಕರನು ಬಹಳ ಸಂತೋಷಗೊಂಡನು.

ವರಾನ್ಪ್ರಾಯಚ್ಛತತದಾ ಸರ್ವೇಷಾಮಪಿ ದುರ್ಲಭಾನ್ ।
ಜ್ಞಾನಂ ವಿಜ್ಞಾನಸಹಿತಂ ಲಬ್ಧಂ ತೇನ ಸದಾಶಿವಾತ್ ॥ ೩೪ ॥
ಅಜೇಯತ್ವಂಚ ಸಂಗ್ರಾಮೇ ದ್ವೈಗುಣ್ಯಂ ಶಿರಸಾಮಪಿ ।
ಪಂಚವಕ್ತ್ರೋ ಮಹಾದೇವೋ ದಶವಕ್ತ್ರೋಽಥರಾವಣಃ ॥ ೩೫ ॥
ದೇವಾನೃಷೀನ್ ಪಿತೄಂಶ್ಚೈವ ನಿರ್ಜಿತ್ಯ ತಪಸಾ ವಿಭುಃ ।
ಮಹೇಶಸ್ಯ ಪ್ರಸಾದಾಚ್ಚ ಸರ್ವೇಷಾಮಧಿಕೋಽಭವತ್ ॥ ೩೬ ॥
ರಾಜಾ ತ್ರಿಕೂಟಾಧಿಪತಿರ್ಮಹೇಶೇನ ಕೃತೋ ಮಹಾನ್ ।
ಸರ್ವೇಷಾಂ ರಾಕ್ಷಸಾನಾಂ ಚ ಪರಮಾಸನಮಾಸ್ಥಿತಃ ॥ ೩೭ ॥
ತಪಸ್ವಿನಾಂ ಪರೀಕ್ಷಾರ್ಥೈ ಯದ್ವೃಷೀಣಾಂ ವಿಹಿಂಸನಂ ।
ಕೃತಂ ತೇನ ತದಾ ವಿಪ್ರಾ ರಾವಣೇನ ತಪಸ್ವಿನಾ ॥ ೩೮ ॥
ಅಜೇಯೋ ಹಿ ಮಹಾನ್ ಜಾತೋ ರಾವಣೋ ಲೋಕರಾವಣಃ ।
ಸೃಷ್ಟ್ಯಂತರಂ ಕೃತಂ ಯೇನ ಪ್ರಸಾದಾಚ್ಛಂಕರಸ್ಯಚ ॥ ೩೯ ॥
ಲೋಕಪಾಲಾ ಜಿತಾಸ್ತೇನ ಪ್ರತಾಪೇನ ತಪಸ್ವಿನಾ ।
ಬ್ರಹ್ಮಾಪಿ ವಿಜಿತೋ ಯೇನ ತಪಸಾ ಪರಮೇಣ ಹಿ ॥ ೪೦ ॥

---

೩೪–೩೫ ಆಗಲಾತನು ಯಾರಿಗೂ ದೊರಕಲಸಾಧ್ಯವಾದ ವರಗಳನ್ನು ಇವನಿಗೆ ದಯಪಾಲಿಸಿದನು. ಅಲ್ಲದೆ ಆ ವರಗಳೊಂದಿಗೇನೇ ಆ ರಾವಣಾಸುರನಿಗೆ ಜ್ಞಾನವಿಜ್ಞಾನಗಳೂ ದೊರೆತವು. ಅಯ್ಯಾ ಮುನಿಗಳಿರಾ! ಆ ರಾವಣನಿಗೆ ರಣಾಂಗಣದಲ್ಲಿ ಅಜೇಯತ್ವವೂ, ಇಮ್ಮಡಿಯಾದ ಶಿರಸ್ಸುಗಳೂ ಲಭಿಸಿದುವು. ಮಹಾದೇವನಿಗೆ ಐದು ಮುಖಗಳು; ರಾವಣನಿಗೆ ಹತ್ತು ಮುಖಗಳು.

೩೬. ಹೀಗೆ ವರಗಳನ್ನು ಪಡೆದ ಅಸುರಪ್ರಭುವಾದ ಆ ರಾವಣನು ತಪಸ್ಸಿನಿಂದಲೇ ದೇವತೆಗಳನ್ನೂ, ಋಷಿಗಳನ್ನೂ, ಪಿತೃದೇವತೆಗಳನ್ನೂ ಗೆದ್ದು ಮಹೇಶ್ವರನ ಪ್ರಸಾದದಿಂದ ಎಲ್ಲರಿಗಿಂತಲೂ ಹೆಚ್ಚಿನವನಾದನು.

೩೭–೩೮. ತರುವಾಯ ಮಹೇಶ್ವರನು ಈ ರಾವಣನನ್ನು ತ್ರಿಕೂಟಾಧಿ ಪತಿಯನ್ನಾಗಿ ಮಾಡಿದನು. ಎಲ್ಲ ರಾಕ್ಷಸರಿಗೂ ಒಡೆಯನಾಗಿ ಸಿಂಹಾಸನ ವನ್ನೇರಿದ ತರುವಾಯ ಮಹಾ ತಪಸ್ವಿಯಾದ ರಾವಣನು ತಪಸ್ವಿಗಳಾದ ಋಷಿಗಳ ತಪಸ್ಸನ್ನು ಪರೀಕ್ಷಿಸುವುದಕ್ಕಾಗಿ ಅವರನ್ನು ಹಿಂಸಿಸಿದನು.

೩೯. ಈ ರೀತಿ ಆ ರಾವಣಾಸುರನು, ಲೋಕವನ್ನೇ ಹಿಂಸಿಸುವವನೂ, ಯಾರಿಗೂ ಗೆಲ್ಲಲಸದಳನೂ ಆದನು. ಇಷ್ಟೆಯಲ್ಲದೆ ಇವನು ಈಶ್ವರನ ಪ್ರಸಾದ ದಿಂದ ಬೇರೆ ಸೃಷ್ಟಿಯನ್ನೂ ಮಾಡಿದನು.

೪೦. ತಪಸ್ವಿಯೂ, ಪರಾಕ್ರಮಿಯೂ ಆದ ಇವನು ಲೋಕಪಾಲಕ ರನ್ನಲ್ಲದೆ ಶ್ರೇಷ್ಠವಾದ ತನ್ನ ತಪಸ್ಸಿನಿಂದ ಬ್ರಹ್ಮನನ್ನೇ ಜಯಿಸಿಬಿಟ್ಟನು.

**ಅಮೃತಾಂಶುಕರೋ ಭೂತ್ವಾ ಜಿತೋ ಯೇನ ಶಶೀ ದ್ವಿಜಾಃ ।**
**ದಾಹಕತ್ವಾ ಜ್ಜಿತೋ ವಹ್ನಿರೀಶಃ ಕೈಲಾಸತೋಲನಾತ್ ॥ ೪೧ ॥**
**ಐಶ್ವರ್ಯೇಣ ಜಿತಶ್ಚೇಂದ್ರೋ ವಿಷ್ಣುಃ ಸರ್ವಗತಸ್ತಥಾ ।**
**ಲಿಂಗಾರ್ಚನ ಪ್ರಸಾದೇನ ತ್ರೈಲೋಕ್ಯಂ ಚ ವಶೀಕೃತಂ ॥ ೪೨ ॥**
**ತದಾ ಸರ್ವೇ ಸುರಗಣಾ ಬ್ರಹ್ಮವಿಷ್ಣುಪುರೋಗಮಾಃ ।**
**ಮೇರುಪೃಷ್ಠಂ ಸಮಾಸಾದ್ಯ ಸುಮಂತ್ರಂ ಚಕ್ರಿರೇ ತದಾ ॥ ೪೩ ॥**
**ಪೀಡಿತಾಃಸ್ಮೋ ರಾವಣೇನ ತಪಸಾ ದುಷ್ಕರೇಣ ವೈ ।**
**ಗೋಕರ್ಣಾಖ್ಯೇ ಗಿರೌ ದೇವಾಃ ಶ್ರೂಯತಾಂ ಪರಮಾದ್ಭುತಂ ॥ ೪೪ ॥**
**ಸಾಕ್ಷಾಲ್ಲಿಂಗಾರ್ಚನಂ ಯೇನ ಕೃತಮಸ್ತಿ ಮಹಾತ್ಮನಾ ।**
**ಜ್ಞಾನಜ್ಞೇಯಂ ಜ್ಞಾನಗಮ್ಯಂ ಯದ್ಯತ್ಪರಮಮದ್ಭುತಂ ।**
**ತತ್ಕೃತಂ ರಾವಣೇನೈವ ಸರ್ವೇಷಾಂ ದುರತಿಕ್ರಮಂ ॥ ೪೫ ॥**
**ವೈರಾಗ್ಯಂ ಪರಮಾಸ್ಥಾಯ ಔದಾರ್ಯಂ ಚ ತಥಾಽಧಿಕಂ ।**
**ತೇನೈವ ಮಮತಾ ತ್ಯಕ್ತಾ ರಾವಣೇನ ಮಹಾತ್ಮನಾ ॥ ೪೬ ॥**

---

೪೧. ಅಯ್ಯಾ ವಿಪ್ರರಿರಾ! ಇವನೇ ಅಮೃತಕಿರಣನಾಗಿ ಚಂದ್ರನನ್ನೂ ಗೆದ್ದನು. ಸುಡುವ ಶಕ್ತಿಯಿಂದ ಅಗ್ನಿಯನ್ನು ಗೆದ್ದನು. ತಟ್ಟತುದಿಗೆ ಕೈಲಾಸಗಿರಿಯನ್ನೇ ತೂಗಿ ಮಹೇಶ್ವರನನ್ನೂ ಗೆದ್ದನು.

೪೨. ಐಶ್ವರ್ಯದಿಂದ ಇವನು ಮಹೇಂದ್ರನನ್ನೂ, ಸರ್ವವ್ಯಾಪಕನಾದ ವಿಷ್ಣುವನ್ನೂ ಜಯಿಸಿದನು. ಹೀಗೆ ಲಿಂಗಾರ್ಚನೆಯ ಮಹಿಮೆಯಿಂದ ಇವನು ಮೂರು ಲೋಕಗಳನ್ನೂ ಸ್ವಾಧೀನಪಡಿಸಿಕೊಂಡನು.

೪೩. ಆಗ ಬ್ರಹ್ಮ ವಿಷ್ಣುಗಳೇ ಮೊದಲಾದ ದೇವ ಸಮೂಹದವರೆಲ್ಲರೂ ಮೇರುಪರ್ವತದ ತಪ್ಪಲಿಗೈತಂದು ಅಲ್ಲಿ ಮಂತ್ರಾಲೋಚನೆಯನ್ನೆಸಗಿದರು.

೪೪. "ಅಯ್ಯಾ ದೇವತೆಗಳಿರಾ! ಈಗ ಈ ರಾವಣನು ನಮ್ಮನ್ನೂ ಬಹಳವಾಗಿ ಪೀಡಿಸುತ್ತಿರುವನು. ಅಯ್ಯಾ! ಗೋಕರ್ಣ ಗಿರಿಯಲ್ಲಿನ ಪರಮಾದ್ಭುತವನ್ನೂ ಕೇಳಿದಿರಾ!

೪೫–೪೬. ಆ ಮಹಾತ್ಮನು ಅಲ್ಲಿ ತಾನೇ ಸಾಕ್ಷಾತ್ತಾಗಿ ಲಿಂಗಾರ್ಚನೆಯನ್ನೂ ಮಾಡಿರುವನು. ಜ್ಞಾನಶಕ್ತಿಯಿಂದಲೇ ತಿಳಿಯಬೇಕಾದುದೂ, ಜ್ಞಾನದಿಂದ ಪಡೆಯಲು ತಕ್ಕುದೂ, ಇತರರಾರಿಗೂ ಹೊಂದಲಸದಳವಾದುದೂ ಆದುದೇನುಂಟೋ ಅಂತಹ ಪರಮಾದ್ಭುತವಾದ ಪರಮ ವೈರಾಗ್ಯವನ್ನೂ ಪಡೆದುದೂ ಅಲ್ಲದೆ ಅದಕ್ಕಿಂತಲೂ ಹೆಚ್ಚಿನದಾದ ಔದಾರ್ಯವನ್ನೂ ಪಡೆದು ಆ ಮಹಾತ್ಮನಾದ ರಾವಣನು ಮಮತೆಯನ್ನೇ ತೊರೆದಿರುತ್ತಾನೆ.

ಸಂವತ್ಸರಸಹಸ್ರಾಚ್ಚ ಸ್ವಶಿರೋ ಹಿ ಮಹಾಭುಜಃ ।
ಕೃತ್ವಾ ಸ್ವಕರೇಣ ಲಿಂಗಸ್ಯ ಪೂಜನಾರ್ಥಂ ಸಮರ್ಪಯತ್ ॥ ೪೭ ॥
ರಾವಣಸ್ಯ ಕಬಂಧಂಚ ತದಗ್ರೇ ಚ ಸಮೀಪತಃ ।
ಯೋಗಧಾರಣಯಾ ಯುಕ್ತಂ ಪರಮೇಣ ಸಮಾಧಿನಾ ॥ ೪೮ ॥
ಲಿಂಗೇ ಲಯಂ ಸಮಾಧಾಯ ಕಯಾಪಿ ಕಲಯಾ ಸ್ಥಿತಂ ।
ಅನ್ಯಚ್ಛಿರೋ ವಿವೃಶ್ಚೈವ ತೇನಾಪಿ ಶಿವಪೂಜನಂ ।
ಕೃತಂ ನೈವಾನ್ಯ ಮುನಿನಾ ತಥಾ ಚೈವಾಪರೇಣ ಹಿ ॥ ೪೯ ॥
ಏವಂ ಶಿರಾಂಸ್ಯೇವ ಬಹೂನಿ ತೇನ
ಸಮರ್ಪಿತಾನ್ಯೇವ ಶಿವಾರ್ಚನಾರ್ಥೇ ।
ಭೂತ್ವಾ ಕಬಂಧೋ ಹಿ ಪುನಃ ಪುನಶ್ಚ
ತದಾ ಶಿವೋಽಸೌ ವರದೋ ಬಭೂವ ॥ ೫೦ ॥
ಮಯಾ ವಿನಾ ಸುರಸ್ತತ್ರ ಪಿಂಡೀಭೂತೇನ ವೈ ಪುರಾ ।
ವರಾನ್ವರಯ ಪೌಲಸ್ತ್ಯ ಯಥೇಷ್ಟಂ ತಾನ್ ದದಾಮ್ಯಹಂ ॥ ೫೧ ॥

---

೪೭. ಮಹಾಭುಜನಾದ ಆತನು ಒಂದು ಸಾವಿರ ವರುಷಗಳ ಕಾಲ ತನ್ನ ಕೈಯಿಂದಲೇ ಶಿವಪೂಜೆಗಾಗಿ ತನ್ನ ತಲೆಯನ್ನು ಕತ್ತರಿಸಿ ಶಿವಲಿಂಗಕ್ಕೆ ಅರ್ಪಿಸಿರುವನು.

೪೮. ಇಷ್ಟಾದರೂ ಆ ರಾವಣನ ಕಬಂಧವು ಆ ಸಮಯದಲ್ಲಿ ಆ ಶಿವಲಿಂಗದ ಬಳಿ ಯೋಗಧಾರಣೆ ಮಾಡಿ ಪರಮ ಸಮಾಧಿಯಲ್ಲಿರುವುದು.

೪೯. ಶಿವಲಿಂಗದಲ್ಲಿ ಮನಸ್ಸನ್ನು ಲಯಗೊಳಿಸಿ ಯಾವುದೋ ಒಂದು ಕಲೆಯಿಂದಿರುವ ಬೇರೊಂದು ತಲೆಯನ್ನು ಕತ್ತರಿಸಿ ಅದರಿಂದಲೂ ಶಿವಪೂಜೆಯನ್ನು ಮಾಡಿರುವನು. ಹೀಗೆ ಬೇರಾವ ಮುನಿಯಾಗಲಿ, ಅಂತೆಯೇ ಮತ್ತಾವನೇ ಆಗಲಿ ಮಾಡಿರುವುದಿಲ್ಲವು.

೫೦. ಹೀಗೆ ಆ ರಾವಣನು ಶಿವಪೂಜೆಗಾಗಿ ಅನೇಕಬಾರಿ ತನ್ನ ತಲೆಗಳನ್ನು ಕತ್ತರಿಸಿ ಅಡಿಗಡಿಗೂ ಕಬಂಧಮಾತ್ರನಾಗಿ ನಿಲ್ಲಲು ಶಿವನು ಅವನಿಗೆ ಪ್ರಸನ್ನನಾಗಿ ವರಗಳನ್ನು ನೀಡಿದನು.

೫೧. ಆಗ ಪರಶಿವನು ಪಿಂಡೀಭೂತನಾದ ನನ್ನನ್ನುಳಿದು ತಾನೇ ಆ ರಾವಣನನ್ನು ಕುರಿತು, 'ಎಲೈ ಪುಲಸ್ತ್ಯಬ್ರಹ್ಮನ ಮಗನಾದ ರಾವಣನೇ! ನಿನ್ನ ಇಷ್ಟಾನುಸಾರ ವರಗಳನ್ನು ಬೇಡು. ಅವುಗಳೆಲ್ಲವನ್ನೂ ಕೊಡುವೆನು' ಎಂದು ಹೇಳಿದನು.

ರಾವಣೇನ ತದಾ ಚೋಕ್ತಃ ಶಿವಃ ಪರಮಮಂಗಲಃ ।
ಯದಿ ಪ್ರಸನ್ನೋ ಭಗವನ್ ದೇಯೋ ಮೇ ವರ ಉತ್ತಮಃ ॥ ೫೨ ॥
ನ ಕಾಮಯೇಽನ್ಯಂ ಚ ವರಮಾಶ್ರಯೇ ತ್ವತ್ಪದಾಂಬುಜಂ ।
ಯಥಾ ತಥಾ ಪ್ರದಾತವ್ಯಂ ಯದ್ಯಸ್ತಿ ಚ ಕೃಪಾ ಮಯಿ ॥ ೫೩ ॥
ತದಾ ಸದಾಶಿವೇನೋಕ್ತೋ ರಾವಣೋ ಲೋಕರಾವಣಃ ।
ಮತ್ಪ್ರಸಾದಾಚ್ಚ ಸರ್ವಂ ತ್ವಂ ಪ್ರಾಪ್ಸ್ಯಸೇ ಮನಸೇಪ್ಸಿತಂ ॥ ೫೪ ॥
ಏವಂ ಪ್ರಾಪ್ತಂ ಶಿವಾತ್ಸರ್ವಂ ರಾವಣೇನ ಸುರೇಶ್ವರಾಃ ।
ತಸ್ಮಾತ್ಸರ್ವೈರ್ಭವದ್ಭಿಶ್ಚ ತಪಸಾ ಪರಮೇಣ ಹಿ ॥ ೫೫ ॥
ವಿಜೇತವ್ಯೋ ರಾವಣೋಽಯಮಿತಿ ಮೇ ಮನಸಿ ಸ್ಥಿತಂ ।
ಅಚ್ಯುತಸ್ಯ ವಚಃ ಶ್ರುತ್ವಾ ಬ್ರಹ್ಮಾದ್ಯಾ ದೇವತಾಗಣಾಃ ॥ ೫೬ ॥
ಚಿಂತಾಮಾಪೇದಿರೇ ಸರ್ವೇ ಚಿರಂ ತೇ ವಿಷಯಾನ್ವಿತಾಃ ।
ಬ್ರಹ್ಮಾಪಿ ಚೇಂದ್ರಿಯಗ್ರಸ್ತಃ ಸುತಾಂ ರಮಿತುಮುದ್ಯತಃ ॥ ೫೭ ॥
ಇಂದ್ರೋಽಹಿ ಜಾರಭಾವಾಚ್ಚ ಚಂದ್ರೋಽಹಿ ಗುರುತಲ್ಪಗಃ ।
ಯಮಃ ಕದರ್ಯಭಾವಾಚ್ಚ ಚಂಚಲತ್ವಾತ್ಸದಾಗತಿಃ ॥ ೫೮ ॥

---

೫೨–೫೩. ಆಗ ರಾವಣನು ಪರಮ ಮಂಗಲರೂಪನಾದ ಶಿವನನ್ನು ಕುರಿತು 'ಭಗವಂತ! ನೀನು ನನಗೆ ಪ್ರಸನ್ನನಾಗಿರುವೆಯೇ ಆದರೆ ನನ್ನಲ್ಲಿ ನಿನಗೆ ಕೃಪೆಯಿರುವುದೇ ಆದರೆ ಮತ್ತಾರನ್ನೂ ಬೇಡದೆ ಬಯಸದೆ ನಿನ್ನಡಿದಾವರೆಯೊಂದನ್ನೇ ಆಶ್ರಯಿಸಿರುವಂತೆ ವರವನ್ನನುಗ್ರಹಿಸು' ಎಂದು ಕೇಳಿದನು.

೫೪. ಆಗ ಸದಾಶಿವನು ಲೋಕ ರಾವಣನಾದ ಆ ರಾವಣನನ್ನು ಕುರಿತು, 'ಎಲೈ! ನನ್ನ ಪ್ರಸಾದದಿಂದ ನೀನು ಬಯಸುವುದೆಲ್ಲವನ್ನೂ ಪಡೆಯುವೆ' ಎಂದನು.

೫೫–೫೭. ಎಲೈ ದೇವತೆಗಳಿರಾ! ಹೀಗೆ ಆತನು ಶಿವನ ಅನುಗ್ರಹದಿಂದ ಸಮಸ್ತವನ್ನೂ ಪಡೆದಿರುತ್ತಾನೆ. ಆದುದರಿಂದ ನೀವು ಉತ್ತಮೋತ್ತಮವಾದ ತಪಸ್ಸಿನಿಂದಲೇ ಈ ರಾವಣನನ್ನು ಜಯಿಸಬೇಕೆಂದು ನನ್ನ ಮನಸ್ಸಿಗೆ ತೋರುತ್ತದೆ.'' ಎಲೈ ಶೌನಕಾದಿ ಮುನಿಗಳಿರಾ! ಅಚ್ಯುತನ ಈ ಮಾತನ್ನು ಕೇಳಿದ ಬಳಿಕ ಬ್ರಹ್ಮನೇ ಮೊದಲಾದ ಸಮಸ್ತ ದೇವತೆಗಳೂ ಚಿಂತೆಗೊಳಗಾದರು. ಯುಕ್ತಾಯುಕ್ತಗಳನ್ನೇ ಅರಿಯದ ಅವರೆಲ್ಲರೂ ವಿಷಯಾದಿಗಳಲ್ಲಿ ತೊಡಗಿದರು. ಬ್ರಹ್ಮನು ತನ್ನ ಮಗಳಾದ ಸರಸ್ವತಿಯಲ್ಲಿಯೇ ರಮಿಸಲುದ್ಯುಕ್ತನಾದನು.

೫೮. ಇಂದ್ರನು ಜಾರಭಾವದಿಂದ ಕೂಡಿದನು. ಚಂದ್ರನು ಗುರುಪತ್ನೀ ಗಮನ ಮಾಡಿದನು. ಯಮನು ನೀಚಭಾವವುಳ್ಳವನೂ, ವಾಯುವು ಚಿತ್ತ ಚಾಂಚಲ್ಯವುಳ್ಳವನೂ ಆದರು.

ಪಾವಕಃ ಸರ್ವಭಕ್ಷಿತ್ವಾತ್ತಥಾಽನ್ಯೇ ದೇವತಾಗಣಾಃ ।
ಅಶಕ್ತಾ ರಾವಣಂ ಜೇತುಂ ತಪಸಾ ಚ ವಿಜೃಂಭಿತಂ ॥ ೫೯ ॥
ಶೈಲಾದೋ ಹಿ ಮಹಾತೇಜಾ ಗಣಶ್ರೇಷ್ಠಃ ಪುರಾತನಃ ।
ಬುದ್ಧಿಮಾನ್ನೀತಿನಿಪುಣೋ ಮಹಾಬಲಪರಾಕ್ರಮಿ ॥ ೬೦ ॥
ಶಿವಪ್ರಿಯೋ ರುದ್ರರೂಪೀ ಮಹಾತ್ಮಾ
ಹ್ಯುವಾಚ ಸರ್ವಾನಥಚೇಂದ್ರ ಮುಖ್ಯಾನ್ ।
ಕಸ್ಮಾದ್ಯೂಯಂ ಸಂಭ್ರಮಾದಾಗತಾಶ್ಚ
ಏತತ್ಸರ್ವಂ ಕಥ್ಯತಾಂ ವಿಸ್ತರೇಣ ॥ ೬೧ ॥
ನಂದಿನಾ ಚ ತದಾ ಸರ್ವೇ ಪೃಷ್ಟಾಃ ಪ್ರೋಚುಸ್ತ್ವರಾನ್ವಿತಾಃ ॥ ೬೨ ॥

ದೇವಾ ಊಚುಃ :—
ರಾವಣೇನ ವಯಂ ಸರ್ವೇ ನಿರ್ಜಿತಾ ಮುನಿಭಿಃ ಸಹ ।
ಪ್ರಸಾದಯಿತುಮಾಯಾತಾಃ ಶಿವಂ ಲೋಕೇಶ್ವರೇಶ್ವರಂ ॥ ೬೩ ॥

---

೫೯. ಅಗ್ನಿಯಾದರೋ ಎಲ್ಲವನ್ನೂ ಭಕ್ಷಿಸುವವನಾದನು. ಅಂತೆಯೇ ಇತರ ದೇವತೆಗಳೂ ಚಪಲರಾದರು. ಇಂತಹರು ತಪಸ್ಸಿನಿಂದಲೇ ಉತ್ಕೃಷ್ಟತೆಯನ್ನು ಪಡೆದಿರುವ ಆ ರಾವಣನನ್ನು ಜಯಿಸಲು ಸಮರ್ಥರಾಗದೇ ಹೋದರು.

೬೦–೬೧. ಆಗ ಶಿವಗಣಗಳಲ್ಲಿ ಶ್ರೇಷ್ಠನೂ, ಮಹಾ ತೇಜಸ್ವಿಯೂ, ಬಹಳ ಹಳಬನೂ, ಬುದ್ಧಿವಂತನೂ, ನೀತಿನಿಪುಣನೂ, ಮಹಾಬಲ ಪರಾಕ್ರಮ ಶಾಲಿಯೂ, ಶಿವನಿಗೆ ಬಹಳ ಅಚ್ಚುಮೆಚ್ಚಿನವನೂ, ರುದ್ರರೂಪನೂ, ಮಹಾತ್ಮನೂ ಆದ ಶೈಲಾದನು (ನಂದಿಯು) ಇಂದ್ರನೇ ಮೊದಲಾದ ಅವರೆಲ್ಲರನ್ನೂ ಕುರಿತು "ಅಯ್ಯಾ ದೇವತೆಗಳಿರಾ! ನೀವೆಲ್ಲರೂ ಈ ರೀತಿ ಭಯಭ್ರಾಂತರಾಗಿ ಬಂದಿರುವಿರೇಕೆ? ಎಲ್ಲ ವಿಷಯವನ್ನೂ ವಿಸ್ತಾರವಾಗಿ ನನಗೆ ಹೇಳಿರಿ" ಎಂದು ಕೇಳಿದನು.

೬೨. ಆ ನಂದಿಯು ಈ ರೀತಿ ಕೇಳಲು ದೇವತೆಗಳೆಲ್ಲರೂ ತ್ವರೆಯುಳ್ಳವರಾಗಿ ಹೇಳಿದರು.

೬೩. ದೇವತೆಗಳು ಹೇಳುತ್ತಾರೆ:—"ಅಯ್ಯಾ ನಂದಿಯೇ! ಮುನಿಗಳೊಡಗೂಡಿದ ನಾವೆಲ್ಲರೂ ರಾವಣನಿಂದ ನಿರ್ಜಿತರಾಗಿ ಲೋಕೇಶ್ವರೇಶ್ವರನಾದ ಶಿವನನ್ನು ಪ್ರಸನ್ನನಾಗಿಸಲು ಇಲ್ಲಿಗೆ ಬಂದಿರುವೆವು."

ಪ್ರಹಸ್ಯ ಭಗವನ್ನಂದೀ ಬ್ರಹ್ಮಾಣಂ ವೈ ಹ್ಯುವಾಚಹ ।
ಕ್ವ ಯೂಯಂ ಕ್ವ ಶಿವಃ ಶಂಭುಸ್ತಪಸಾ ಪರಮೇಣಹಿ ।
ದ್ರಷ್ಟವ್ಯೋ ಹೃದಿ ಮಧ್ಯಸ್ಥಃ ಸೋಽದ್ಯ ದ್ರಷ್ಟುಂ ನ ಪಾರ್ಯತೇ ॥೬೪॥
ಯಾವದ್ಭಾವಾ ಹ್ಯನೇಕಾಶ್ಚ ಇಂದ್ರಿಯಾರ್ಥಾಸ್ತಥೈವ ಚ ।
ಯಾವಚ್ಚ ಮಮತಾಭಾವಾಸ್ತಾವದೀಶೋ ಹಿ ದುರ್ಲಭಃ ॥ ೬೫ ॥
ಜಿತೇಂದ್ರಿಯಾಣಾಂ ಶಾಂತಾನಾಂ ತನ್ನಿಷ್ಠಾನಾಂ ಮಹಾತ್ಮನಾಂ ।
ಸುಲಭೋ ಲಿಂಗರೂಪೀ ಸ್ಯಾದ್ಭವತಾಂ ಹಿ ಸುದುರ್ಲಭಃ ॥ ೬೬ ॥
ತದಾ ಬ್ರಹ್ಮಾದಯೋ ದೇವಾ ಋಷಯಶ್ಚ ವಿಪಶ್ಚಿತಃ ।
ಪ್ರಣಮ್ಯ ನಂದಿನಂ ಪ್ರಾಹುಃ ಕಸ್ಮಾತ್ತ್ವಂ ವಾನರಾನನಃ ।
ತತ್ಸರ್ವಂ ಕಥಯಾನ್ಯಚ್ಚ ರಾವಣಸ್ಯ ತಪೋಬಲಂ ॥ ೬೭ ॥

ನಂದೀಶ್ವರ ಉವಾಚ:—

ಕುಬೇರೋಽಧಿಕೃತಸ್ತೇನ ಶಂಕರೇಣ ಮಹಾತ್ಮನಾ ।
ಧನಾನಾಮಾಧಿಪತ್ಯೇಚ ತಂ ದ್ರಷ್ಟುಂ ರಾವಣೋಽತ್ರ ವೈ ॥ ೬೮ ॥

---

೬೪. ಆಗ ಭಗವಾನ್ ನಂದಿಯು ಘಟ್ಟಿಯಾಗಿ ನಕ್ಕು ಬ್ರಹ್ಮನನ್ನು ಕುರಿತು ಹೇಳುತ್ತಾನೆ:—ಅಯ್ಯಾ! ನೀವೆಲ್ಲಿ! ಆ ಶಿವನೆಲ್ಲಿ? ಆ ಶಂಭುವನ್ನು ಮಹತ್ತರವಾದ ತಪಸ್ಸಿನಿಂದಲೇ ನೋಡಬೇಕಲ್ಲವೆ! ಸರ್ವ ಭೂತಗಳ ಹೃದಯ ಮಧ್ಯದಲ್ಲಿ ನೆಲಸಿರುವ ಆತನನ್ನು ಈಗ ಈ ರೀತಿ ನೋಡಲು ಸಾಧ್ಯ ವಾಗುವುದಿಲ್ಲ.

೬೫. ಅಯ್ಯಾ! ಎದುವರೆಗೆ ಅನೇಕ ಭಾವಗಳೂ, ಇಂದ್ರಿಯಗಳಿಗೋಸುಗ ಬಗೆಬಗೆಯ ಬಯಕೆಗಳೂ ಇರುವುವೋ, ಎದುವರೆಗೆ ಮಮತೆಯಿರುತ್ತದೆಯೋ ಅದುವರೆಗೆ ಈಶ್ವರನು ದುರ್ಲಭನಾಗಿರುತ್ತಾನೆ.

೬೬. ಜಿತೇಂದ್ರಿಯರೂ, ಶಾಂತರೂ, ಆತನಲ್ಲಿಯೇ ಮನಸ್ಸನ್ನಿಟ್ಟು ನಿಷ್ಠೆಯಿಂದಿರುವವರೂ ಆದ ಮಹಾತ್ಮರಿಗೆ ಲಿಂಗರೂಪಿಯಾದ ಆ ಪರಶಿವನು ಸುಲಭವಾಗಿ ದೊರಕುತ್ತಾನೆ. ನಿಮ್ಮಂತಹರಿಗಾದರೋ ಆತನು ಬಹಳ ದುರ್ಲಭನೇ ಸರಿ.

೬೭. ನಂದಿಯು ಈ ರೀತಿ ನುಡಿದ ಬಳಿಕ ಬ್ರಹ್ಮಾದಿ ದೇವತೆಗಳೂ, ಜ್ಞಾನಿಗಳಾದ ಋಷಿಗಳೂ ಆತನನ್ನು ನಮಸ್ಕರಿಸಿ, "ನೀನು ಈ ರೀತಿ ವಾನರ ಮುಖನಾಗಲು ಕಾರಣವೇನು? ಅದೆಲ್ಲವನ್ನೂ ಹೇಳುವುದು ಮಾತ್ರವಲ್ಲದೆ ರಾವಣನ ತಪೋಬಲವನ್ನೂ ನಮಗೆ ತಿಳಿಯಹೇಳು" ಎಂದರು.

೬೮–೭೪. ನಂದೀಶ್ವರನು ಹೇಳುತ್ತಾನೆ:—ಅಯ್ಯಾ ದೇವತೆಗಳಿರಾ! ನಮ್ಮ ಶಂಕರನು ಕುಬೇರನನ್ನು ಧನಗಳಿಗೆಲ್ಲಾ ಒಡೆಯನನ್ನಾಗಿ ಮಾಡಿರುವನಷ್ಟೆ.

ಆಗಚ್ಛತ್ತ್ವರಯಾ ಯುಕ್ತಃ ಸಮಾರುಹ್ಯ ಸ್ವವಾಹನಂ ।
ಮಾಂ ದೃಷ್ಟ್ವಾ ಚಾಬ್ರವೀತ್ಕ್ರುದ್ಧಃ ಕುಬೇರೋಽಹ್ಯತ್ರ ಆಗತಃ ॥ ೬೯ ॥
ತ್ವಯಾ ದೃಷ್ಟೋಽಥ ವಾತ್ರಾಸೌ ಕಥ್ಯತಾಮವಿಲಂಬಿತಂ ।
ಕಿಂ ಕಾರ್ಯಂ ಧನದೇನಾದ್ಯ ಇತಿ ಪೃಷ್ಟೋ ಮಯಾ ಹಿ ಸಃ ॥ ೭೦ ॥
ತದೋವಾಚ ಮಹಾತೇಜಾ ರಾವಣೋ ಲೋಕರಾವಣಃ ।
ಮಯ್ಯಶ್ರಾದ್ಧಾನ್ವಿತೋ ಭೂತ್ವಾ ವಿಷಯಾತ್ಮಾ ಸುದುರ್ಮದಃ ॥ ೭೧ ॥
ಶಿಕ್ಷಾಪಯಿತುಮಾರಬ್ಧೋ ಮೈವಂ ಕಾರ್ಯಮಿತಿ ಪ್ರಭೋ ।
ಯಥಾಹಂ ಸುಶ್ರಿಯಾ ಯುಕ್ತ ಆಢ್ಯೋಽಹಂ ಬಲವಾನಹಂ ।
ತಥಾತ್ವಂ ಭವರೇ ಮೂಢ ಮಾ ಮೂಢತ್ವಮುಪಾರ್ಜಯ ॥ ೭೨ ॥
ಅಹಂ ಮೂಢಃ ಕೃತಸ್ತೇನ ಕುಬೇರೇಣ ಮಹಾತ್ಮನಾ ।
ಮಯಾ ನಿರಾಕೃತೋ ರೋಷಾತ್ತಪಸ್ತೇಪೇ ಸಗುಹ್ಯಕಃ ॥ ೭೩ ॥
ಕುಬೇರಃ ಸಹಿ ನೇದಾನೀಮಾಗತಸ್ತವ ಮಂದಿರಂ ।
ದೀಯತಾಂ ಚ ಕುಬೇರೋಽದ್ಯ ನಾತ್ರ ಕಾರ್ಯಾ ವಿಚಾರಣಾ ॥ ೭೪ ॥
ರಾವಣಸ್ಯ ವಚಃ ಶ್ರುತ್ವಾ ಹ್ಯವೋಚಂ ತ್ವರಿತೋಽಪ್ಯಹಂ ।
ಲಿಂಗಕೋಽಸಿ ಮಹಾಭಾಗ ತ್ವಮಹಂ ಚ ತಥಾವಿಧಃ ॥ ೭೫ ॥

---

ಅವನನ್ನು ಕಾಣಲೋಸುಗ ಆ ರಾವಣನು ತನ್ನ ವಾಹನವನ್ನೇರಿ ಬಹಳ ವೇಗ ದಿಂದಿಲ್ಲಿಗೆ ಬಂದನು. ಇಂತು ಇಲ್ಲಿಗೈತಂದ ಆ ರಾವಣನು ನನ್ನನ್ನು ಕಂಡು ಮುನಿಸಿನಿಂದ, "ಏನಯ್ಯಾ! ಕುಬೇರನಿಲ್ಲಿಗೆ ಬಂದಿರುವನೇ? ನೀನವನನ್ನು ನೋಡಿದೆಯಾ? ತಡಮಾಡದೆ ಉತ್ತರವನ್ನು ಹೇಳು" ಎಂದು ಕೇಳಿದನು. ಆಗ ನಾನು, "ಕುಬೇರನೊಡನೆ ನಿನಗಾವಕಾರ್ಯವಿರುವುದೋ!" ಎಂದೆನು. ಆಗ ಮಹಾ ತೇಜಸ್ವಿಯೂ, ಲೋಕವನ್ನೇ ರೋದನಗೊಳಿಸುವವನೂ ಆದ ರಾವಣನು ಹೇಳಿದನು: "ಎಲೈ ಪ್ರಭುವೇ! ವಿಷಯಲಂಪಟನೂ, ಅತಿ ಗರ್ವಿತನೂ ಆದ ಆ ಕುಬೇರನು ನನ್ನಲ್ಲಿ ಅಶ್ರದ್ಧೆಯನ್ನು ತೋರಿ—'ಎಲೆವೊ ಮೂಢನೇ! ಈ ರೀತಿ ಮಾಡಬೇಡ. ನೀನೂ ನನ್ನಂತೆಯೇ ಧನವಂತನೂ, ಆಢ್ಯನೂ, ಬಲಿಷ್ಠನೂ ಆಗು. ತಿಳಿಗೇಡಿತನವನ್ನು ಸಂಪಾದಿಸಬೇಡ' ಎಂದು ನನ್ನನ್ನು ದಂಡಿಸಲು ಮೊದಲಿಟ್ಟನು. ಆ ಗುಹ್ಯಕನು ನಾನು ನಿರಾಕರಿಸಿದ ಮೇಲೆ ರೋಷಗೊಂಡು ತಪಸ್ಸನ್ನು ಮಾಡಿದನು. ಈಗ ಅವನೇನಾದರೂ ನಿನ್ನ ಮನೆಗೆ ಬಂದಿರುವನೇ? ಹಾಗೇನಾದರೂ ಅವನು ನಿನ್ನ ಮನೆಯಲ್ಲಿದ್ದರೆ ನನಗೆ ಅವನನ್ನು ದೊರಕಿಸು. ಈ ವಿಷಯದಲ್ಲಿ ವಿಚಾರವು ಬೇಡ."

೭೫–೭೯. ರಾವಣನ ಈ ಮಾತನ್ನು ಕೇಳಿ ನಾನೂ ಕೂಡ ತ್ವರೆಯುಳ್ಳ ವನಾಗಿ ಅವನನ್ನು ಕುರಿತು, "ಎಲೈ ಮಹಾಭಾಗನೇ! ನೀನು ಶಿವಪೂಜಕ

ಉಭಯೋಃ ಸಮತಾಂ ಜ್ಞಾತ್ವಾ ವೃಥಾ ಜಲ್ಪಸಿ ದುರ್ಮತೇ ।
ಯಥೋಕ್ತಃ ಸತ್ವನಾದೀನ್ಯಾಂ ವದನಾರ್ಥೇ ಬಲೋದ್ಧತಃ ॥ ೭೬ ॥
ಯಥಾ ಭವದ್ಭಿಃ ಪೃಷ್ಟೋಽಹಂ ವದನಾರ್ಥೇ ಮಹಾತ್ಮಭಿಃ ।
ಪುರಾವೃತ್ತಂ ಮಯಾ ಪ್ರೋಕ್ತಂ ಶಿವಾರ್ಚನವಿಧೇಃ ಫಲಂ ॥ ೭೭ ॥
ಶಿವೇನ ದತ್ತಂ ಸಾರೂಪ್ಯಂ ನ ಗೃಹೀತಂ ಮಯಾ ತದಾ ।
ಯಾಚಿತಂ ಚ ಮಯಾ ಶಂಭೋರ್ವದನಂ ವಾನರಸ್ಯ ಚ ।
ಶಿವೇನ ಕೃಪಯಾ ದತ್ತಂ ಮಮ ಕಾರುಣ್ಯಶಾಲಿನಾ ॥ ೭೮ ॥
ನಿರಾಭಿಮಾನಿನೋ ಯೇ ಚ ನಿರ್ದಂಭಾ ನಿಷ್ಪರಿಗ್ರಹಾಃ ।
ಶಂಭೋಃ ಪ್ರಿಯಾಸ್ತೇ ವಿಜ್ಞೇಯಾಹ್ಯನ್ಯೇ ಶಿವಬಹಿಷ್ಕೃತಾಃ ॥ ೭೯ ॥
ತಥಾ ವದನ್ಮಯಾ ಸಾರ್ಧಂ ರಾವಣಸ್ತಪಸೋ ಬಲಾತ್ ।
ಮಯಾ ಚ ಯಾಚಿತಾನ್ಯೇವ ದಶವಕ್ತ್ರಾಣಿ ಧೀಮತಾ ॥ ೮೦ ॥
ಉಪಹಾಸಕರಂ ವಾಕ್ಯಂ ಪೌಲಸ್ತ್ಯಸ್ಯ ತದಾ ಸುರಾಃ ।
ಮಯಾ ತದಾ ಹಿ ಶಪ್ತೋಽಸೌ ರಾವಣೋ ಲೋಕರಾವಣಃ ॥ ೮೧ ॥

---

ನಾಗಿರುವೆ. ನಿನ್ನಂತೆಯೇ ನಾನೂ ಶಿವಪೂಜಕನಾಗಿರುವೆ. ಹೀಗೆ ನಾವಿಬ್ಬರೂ ಸಮವಾಗಿರುವುದನ್ನರಿತೂ ದುರ್ಮತಿಯಾದ ನೀನು ನಿಷ್ಪ್ರಯೋಜನವಾಗಿ ಈ ರೀತಿ ಗಳಹುತ್ತ ನನಗೆ ಆಜ್ಞೆಮಾಡುತ್ತಿರುವೆ" ಎಂದನು. ಅದನ್ನು ಕೇಳಿ ಆ ರಾವಣನು ನೀವು ಹೇಗೆ ನನ್ನ ಮುಖದ ವಿಷಯವನ್ನು ಕೇಳಿದರೋ ಹಾಗೆಯೇ ಕೇಳಿದನು. ಆಗ ನಾನು ಹಿಂದೆ ನಡೆದ ಸಂಗತಿಯನ್ನವನಿಗೆ ತಿಳಿಸಿದೆನು. "ಅಯ್ಯಾ! ಇದು ಶಿವಪೂಜೆಯ ಫಲವಾಗಿ ಬಂದುದು. ಶಿವನು ನನಗೆ ಪೂಜಾಫಲವಾಗಿ ಸಾರೂಪ್ಯವನ್ನಿತ್ತನು ಆದರೆ ನಾನದನ್ನು ತಿಗೆದು ಕೊಳ್ಳಲಿಲ್ಲವು. ಅಷ್ಟೆಯಲ್ಲದೆ ಆ ಶಂಭುವನ್ನು ಕುರಿತು, ನನಗೆ ವಾನರ ವದನವನ್ನು ದಯಪಾಲಿಸಬೇಕೆಂದು ಬೇಡಿದೆನು. ಕರುಣಾಶಾಲಿಯಾದ ಆ ಶಿವನು ಕೃಪೆಯಿಟ್ಟು ನನಗದನ್ನು ಕೊಟ್ಟನು. ಅಯ್ಯಾ ರಾವಣನೇ! ಯಾರು ಅಭಿಮಾನರಹಿತರೂ, ಗರ್ವರಹಿತರೂ, ಪರಿಗ್ರಹದೂರರೂ ಆಗಿರುವರೋ ಅವರೇ ಶಿವನಿಗೆ ಅತ್ಯಂತ ಪ್ರಿಯರೆಂದು ತಿಳಿ. ಇತರರೆಲ್ಲರೂ ಆತನಿಗೆ ದೂರರೇ!"

೮೦-೮೧. ಎಲೈ ದೇವತೆಗಳಿರಾ! ನಾನು ಈ ರೀತಿ ಹೇಳಿದ ಬಳಿಕ ಆ ರಾವಣನು ನನ್ನನ್ನು ಕುರಿತು, "ಎಲೈ! ನಾನೂ ಬುದ್ಧಿಶಾಲಿಯೇ! ಆ ಪರಮೇಶ್ವರನಲ್ಲಿ ಹತ್ತು ತಲೆಗಳನ್ನು ಬೇಡಿ ಪಡೆದೆನು" ಎಂದನು. ಈ ರೀತಿ ಪರಿಹಾಸಕರವಾಗಿ ನುಡಿದ ಲೋಕ ರಾವಣನಾದ ಆ ಪೌಲಸ್ತ್ಯನ ಮಾತನ್ನು ಕೇಳಿ ನಾನು ಅವನನ್ನು ಈ ರೀತಿ ಶಪಿಸಿದೆನು.

**ಈದೃಶಾನ್ಯೇವ ವಕ್ತ್ರಾಣಿ ಯೇಷಾಂ ವೈ ಸಂಭವಂತಿ ಹಿ ।**
**ತೈಃ ಸಮೇತೋ ಯದಾ ಕೋಽಪಿ ನರವರ್ಯೋ ಮಹಾತಪಾಃ ।**
**ಮಾಂ ಪುರಸ್ಕೃತ್ಯ ಸಹಸಾ ಹನಿಷ್ಯತಿ ನಸಂಶಯಃ ॥ ೮೨ ॥**
**ಏವಂ ಶಪ್ತೋ ಮಯಾ ಬ್ರಹ್ಮನ್ ರಾವಣೋ ಲೋಕರಾವಣಃ ।**
**ಅರ್ಚಿತಂ ಕೇವಲಂ ಲಿಂಗಂ ವಿನಾ ತೇನ ಮಹಾತ್ಮನಾ ॥ ೮೩ ॥**
**ಪೀಠಿಕಾರೂಪಸಂಸ್ಥೇನ ವಿನಾ ತೇನ ಸುರೋತ್ತಮಾಃ ।**
**ವಿಷ್ಣುನಾ ಹಿ ಮಹಾಭಾಗಾಸ್ತಸ್ಮಾತ್ಸರ್ವಂ ವಿಧಾಸ್ಯತಿ ॥ ೮೪ ॥**
**ದೇವದೇವೋ ಮಹಾದೇವೋ ವಿಷ್ಣುರೂಪೋ ಮಹೇಶ್ವರಃ ।**
**ಸರ್ವೇ ಯೂಯಂ ಪ್ರಾರ್ಥಯಂತು ವಿಷ್ಣುಂ ಸರ್ವಗುಹಾಶಯಂ ॥೮೫॥**
**ಅಹಂ ಹಿ ಸರ್ವದೇವಾನಾಂ ಪುರೋವರ್ತೀ ಭವಾಮ್ಯತಃ ।**
**ತೇ ಸರ್ವೇ ನಂದಿನೋ ವಾಕ್ಯಂ ಶ್ರುತ್ವಾ ಮುದಿತಮಾನಸಾಃ ।**
**ವೈಕುಂಠಮಾಗತಾ ಗೀರ್ಭಿರ್ವಿಷ್ಣುಂ ಸ್ತೋತುಂ ಪ್ರಚಕ್ರಿರೇ ॥ ೮೬ ॥**

**ದೇವಾ ಊಚುಃ:—**

**ನಮೋ ಭಗವತೇ ತುಭ್ಯಂ ದೇವದೇವ ಜಗತ್ಪತೇ ।**
**ತ್ವದಾಧಾರಮಿದಂ ಸರ್ವಂ ಜಗದೇತಚ್ಚರಾಚರಂ ॥ ೮೭ ॥**

---

೮೨. "ಎಲೆವೊ ರಾವಣಾ! ನನ್ನಂತೆಯೇ ಮುಖಗಳಿರುವವರೊಡಗೂಡಿ ಒಬ್ಬಾನೊಬ್ಬ ಮಹಾ ತಪಸ್ವಿಯಾದ ಪುರುಷಶ್ರೇಷ್ಠನುದಿಸಿ ನಿನ್ನನ್ನು ಕೊಲ್ಲುತ್ತಾನೆ ಇದರಲ್ಲಿ ಸಂಶಯವಿಲ್ಲವು"

೮೩–೮೬. "ಎಲೈ ಬ್ರಹ್ಮನೇ! ನಾನು ಪೂರ್ವದಲ್ಲಿ ಆ ಲೋಕರಾವಣನನ್ನು ಈ ರೀತಿ ಶಪಿಸಿದೆನು. ಅವನು ಪೀಠಿಕಾ ರೂಪದಿಂದಿರುವ ಮಹಾತ್ಮನಾದ ವಿಷ್ಣುವನ್ನು ಬಿಟ್ಟು ಕೇವಲ ಶಿವಲಿಂಗವೊಂದನ್ನೇ ಪೂಜಿಸಿರುತ್ತಾನೆ. ಎಲೈ ಮಹಾಭಾಗರಾದ ಸುರೋತ್ತಮರೇ! ಈ ಕಾರಣದಿಂದ ವಿಷ್ಣುವೇ ಸಮಸ್ತವನ್ನೂ ಆಗಮಾಡುತ್ತಾನೆ. ದೇವ ದೇವನೂ, ಮಹಾದೇವನೂ ಆದ ಮಹೇಶ್ವರನು ವಿಷ್ಣುರೂಪಿಯಾದವನು. ಸಮಸ್ತರ ಹೃದಯಗಹ್ವರಗಳಲ್ಲಿಯೂ ನೆಲಸಿದ ಆ ವಿಷ್ಣುವನ್ನು ಈಗ ನೀವೆಲ್ಲರೂ ಪ್ರಾರ್ಥಿಸಿರಿ. ನಾನು ದೇವತೆಗಳಾದ ನಿಮ್ಮೆಲ್ಲರಿಗೂ ಮುಂದಾಳಾಗಿರುತ್ತೇನೆ." ಈ ರೀತಿ ನುಡಿದ ನಂದಿಕೇಶ್ವರನ ಮಾತನ್ನು ಕೇಳಿ ದೇವತೆಗಳೆಲ್ಲರೂ ಸಂತುಷ್ಟಮಾನಸರಾಗಿ ವೈಕುಂಠಲೋಕಕ್ಕೆ ಬಂದು ಸ್ತುತಿವಾಕ್ಯಗಳಿಂದ ಶ್ರೀಮನ್ಮಹಾವಿಷ್ಣುವನ್ನು ಪ್ರಾರ್ಥಿಸಿದರು.

೮೭. ದೇವತೆಗಳು ಹೇಳುತ್ತಾರೆ.—"ದೇವದೇವ! ಜಗತ್ಪತೀ! ಷಡ್ಗುಣೈಶ್ವರ್ಯ ಸಂಪನ್ನನಾದ ನಿನಗೆ ನಮೋನಮಃ! ಓ ಸ್ವಾಮಿಯೇ! ಚರಾಚರಾತ್ಮಕವಾದ ಈ ಜಗತ್ತೆಲ್ಲವೂ ನಿನ್ನನ್ನೇ ಆಧಾರವನ್ನಾಗಿ ಉಳ್ಳುದು.

ಏತಲ್ಲಿಂಗಂ ತ್ವಯಾ ವಿಷ್ಣೋ ಧೃತಂ ವೈ ಪಿಂಡಿರೂಪಿಣಾ ।
ಮಹಾ ವಿಷ್ಣುಸ್ವರೂಪೇಣ ಘಾತಿತೌ ಮಧುಕೈಟಭೌ ॥ ೮೮ ॥
ತಥಾ ಕಮಠರೂಪೇಣ ಧೃತೋ ವೈ ಮಂದರಾಚಲಃ ।
ವರಾಹ ರೂಪಮಾಸ್ಥಾಯ ಹಿರಣ್ಯಾಕ್ಷೋ ಹತಸ್ತ್ವಯಾ ॥ ೮೯ ॥
ಹಿರಣ್ಯಕಶಿಪುರ್ದೈತ್ಯೋ ಹತೋ ನೃಹರಿ ರೂಪಿಣಾ ।
ತ್ವಯಾ ಚೈವ ಬಲಿರ್ಬದ್ಧೋ ದೈತ್ಯೋ ವಾಮನರೂಪಿಣಾ ॥ ೯೦ ॥
ಭೃಗೂಣಾಮನ್ವಯೇ ಭೂತ್ವಾ ಕೃತವೀರ್ಯಾತ್ಮಜೋ ಹತಃ ।
ಹಿತೋಽಪ್ಯಸ್ಮಾನ್ಮಹಾವಿಷ್ಣೋ ತಥೈವ ಪರಿಪಾಲಯ ॥ ೯೧ ॥
ರಾವಣಸ್ಯ ಭಯಾದಸ್ಮಾನ್ ತ್ರಾತುಂ ಭೂಯೋಽರ್ಹಸಿ ತ್ವರಂ ॥ ೯೨ ॥
ಏವಂ ಸಂಪ್ರಾರ್ಥಿತೋ ದೇವೈರ್ಭಗವಾನ್ಭೂತಭಾವನಃ ।
ಉವಾಚ ಚ ಸುರಾನ್‌ಸರ್ವಾನ್ ವಾಸುದೇವೋ ಜಗನ್ಮಯಃ ॥ ೯೩ ॥
ಹೇ ದೇವಾಃ ಶ್ರೂಯತಾಂ ವಾಕ್ಯಂ ಪ್ರಸ್ತಾವಸದೃಶಂ ಮಹತ್ ।
ಶೈಲಾದಂ ಚ ಪುರಸ್ಕೃತ್ಯ ಸರ್ವೇ ಯೂಯಂ ತ್ವರಾನ್ವಿತಾಃ ।
ಅವತಾರಾನ್‌ಪ್ರಕುರ್ವಂತು ವಾನರೀಂ ತನುಮಾಶ್ರಿತಾಃ ॥ ೯೪ ॥

---

೮೮–೯೦. ಪೂರ್ವದಲ್ಲಿ ನೀನು ಶ್ರೀ ಶಿವಲಿಂಗವನ್ನು ಪೀಠಿಕಾ ರೂಪದಿಂದ ಧರಿಸಿದೆ. ಮಹಾವಿಷ್ಣುಸ್ವರೂಪದಿಂದ ನೀನು ಪೂರ್ವದಲ್ಲಿ ವೇದಚೋರರಾದ ಮಧುಕೈಟಭರನ್ನು ಸಂಹರಿಸಿದೆ. ಅಂತೆಯೇ ಕಮಠರೂಪವನ್ನು ತಾಳಿ ಮಂದರಪರ್ವತವನ್ನುದ್ಧರಿಸಿದೆ. ವರಾಹ ರೂಪವನ್ನು ತಾಳಿ ಹಿರಣ್ಯಾಕ್ಷನನ್ನು ಸಂಹರಿಸಿದೆ. ನರಹರಿರೂಪನಾದ ನಿನ್ನಿಂದ ಹಿರಣ್ಯಕಶಿಪುವು ಹತನಾದನು. ವಾಮನರೂಪಿಯಾದ ನಿನ್ನಿಂದಲೇ ಬಲಿಚಕ್ರವರ್ತಿಯು ಬಂಧನಕ್ಕೊಳಗಾದನು.

೯೧–೯೨. ಭೃಗುಋಷಿಯ ವಂಶದಲ್ಲಿ ಪರಶುರಾಮನಾಗಿ ಜನಿಸಿ ಕೃತವೀರ್ಯನ ಮಗನಾದ ಕಾರ್ತವೀರ್ಯಾರ್ಜುನನನ್ನು ಸಂಹರಿಸಿದೆ. ಎಲೈ ವಿಷ್ಣುವೇ! ಇಂತಹ ಪ್ರಭಾವಶಾಲಿಯಾದ ನೀನು ಈಗಲೂ ನಮ್ಮನ್ನು ಪರಿಪಾಲಿಸುವವನಾಗು. ರಾವಣನ ಭಯದಿಂದ ನಮ್ಮನ್ನು ರಕ್ಷಿಸಲು ನೀನು ಯೋಗ್ಯನಾಗಬೇಕು.''

೯೩–೯೪. ದೇವತೆಗಳೆಲ್ಲರೂ ಈ ರೀತಿ ಸ್ತುತಿಸಿ ಪ್ರಾರ್ಥಿಸಲು ಜಗನ್ಮಯನೂ, ಭೂತಭಾವನೂ ಆದ ಭಗವಾನ್ ವಿಷ್ಣುವು ಅವರೆಲ್ಲರನ್ನೂ ಕುರಿತು, ''ಎಲೈ ದೇವತೆಗಳಿರಾ! ಸಮಯೋಚಿತವಾದ ಈ ನನ್ನ ಮಹಾವಾಕ್ಯವನ್ನು ಕೇಳಿರಿ. ಈಗ ನೀವೆಲ್ಲರೂ ಈ ಶೈಲಾದ ನಂದಿಯನ್ನು ಮುಂದುಮಾಡಿಕೊಂಡು ವಾನರ ಶರೀರಿಗಳಾಗಿ ಭೂಲೋಕದಲ್ಲಿ ಅವತರಿಸಿರಿ.

ಅಹಂ ಹಿ ಮಾನುಷೋ ಭೂತ್ವಾ ಹ್ಯಜ್ಞಾನೇನ ಸಮಾವೃತಃ ।
ಸಂಭವಿಷ್ಯಾಮ್ಯಯೋಧ್ಯಾಯಾಂ ಗೃಹೇ ದಶರಥಸ್ಯ ಚ ।
ಬ್ರಹ್ಮವಿದ್ಯಾ ಸಹಾಯೋಽಸ್ಮಿ ಭವತಾಂ ಕಾರ್ಯಸಿದ್ಧಯೇ ॥ ೯೫ ॥
ಜನಕಸ್ಯ ಗೃಹೇ ಸಾಕ್ಷಾದ್ಬ್ರಹ್ಮವಿದ್ಯಾ ಜನಿಷ್ಯತಿ ।
ಭಕ್ತೋಹಿ ರಾವಣಃ ಸಾಕ್ಷಾಚ್ಛಿವಧ್ಯಾನಪರಾಯಣಃ ॥ ೯೬ ॥
ತಪಸಾ ಮಹತಾ ಯುಕ್ತೋ ಬ್ರಹ್ಮವಿದ್ಯಾಂ ಯದೇಚ್ಛತಿ ।
ತದಾ ಸುಸಾಧ್ಯೋ ಭವತಿ ಪುರುಷೋ ಧರ್ಮನಿರ್ಜಿತಃ ॥ ೯೭ ॥
ಏವಂ ಸಂಭಾಷ್ಯ ಭಗವಾನ್ವಿಷ್ಣುಃ ಪರಮಮಂಗಲಃ ।
ವಾಲೀ ಚೇಂದ್ರಾಂಶ ಸಂಭೂತಃ ಸುಗ್ರೀವೋಂಶುಮತಃ ಸುತಃ ॥ ೯೮ ॥
ತಥಾ ಬ್ರಹ್ಮಾಂಶಸಂಭೂತೋ ಜಾಂಬವಾನೃಕ್ಷಕುಂಜರಃ ।
ಶಿಲಾದಸ್ಯಹಿಯೋ ನಂದೀ ಶಿವಸ್ಯಾನುಚರಃ ಪ್ರಿಯಃ ॥ ೯೯ ॥
ಯೋ ವೈ ಚೈಕಾದಶೋ ರುದ್ರೋ ಹನುಮಾನ್ಸ ಮಹಾಕಪಿಃ ।
ಅವತೀರ್ಣಃ ಸಹಾಯಾರ್ಥಂ ವಿಷ್ಣೋರಮಿತತೇಜಸಃ ॥ ೧೦೦ ॥

---

೯೫. ನಾನೂ ಕೂಡ ಅಜ್ಞಾನದಿಂದ ಕೂಡಿದ ಮಾನವನಾಗಿ, ಅಯೋಧ್ಯೆಯಲ್ಲಿರುವ ದಶರಥರಾಯನ ಮನೆಯಲ್ಲಿ ಅವತರಿಸುತ್ತೇನೆ. ನಾನು ನಿಮ್ಮ ಕಾರ್ಯಸಿದ್ಧಿಗಾಗಿ ಬ್ರಹ್ಮವಿದ್ಯೆಯ ಸಹಾಯವನ್ನು ಪಡೆಯುತ್ತೇನೆ.

೯೬-೯೭. ಸಾಕ್ಷಾತ್ ಬ್ರಹ್ಮವಿದ್ಯೆಯು ಜನಕರಾಯನ ಮನೆಯಲ್ಲಿ ಜನಿಸುತ್ತಾಳೆ. ಅಯ್ಯಾ ದೇವತೆಗಳಿರಾ! ಸಾಕ್ಷಾತ್ ಶಿವಧ್ಯಾನ ಪರಾಯಣನಾದ ಆ ರಾವಣನು ಮಹಾಭಕ್ತನಲ್ಲವೆ! ಅಂತಹನು ಮಹತ್ತರವಾದ ತಪಸ್ಸಿನಿಂದ ಕೂಡಿದವನಾದುದರಿಂದ ಆ ಬ್ರಹ್ಮವಿದ್ಯೆಯನ್ನು ಯಾವಾಗ ಅಪೇಕ್ಷಿಸುತ್ತಾನೆಯೋ ಆಗಲೇ ಧರ್ಮದೂರನಾಗುವ ಅವನು ಸುಲಭವಾಗಿ ಜಯಿಸಲು ಸಾಧ್ಯನಾಗುತ್ತಾನೆ" ಎಂದು ಹೇಳಿದನು.

೯೮. ಈ ರೀತಿ ನುಡಿದ ಬಳಿಕ, ಪೂಜ್ಯನೂ, ಪರಮಮಂಗಲರೂಪನೂ ಆದ ವಿಷ್ಣುವು ಅಲ್ಲಿಯೇ ಅಂತರ್ಧಾನನಾದನು. ತರುವಾಯ ದೇವತೆಗಳೆಲ್ಲರೂ ವಾನರರಾಗಿ ಜನಿಸಿದರು. ಅವರಲ್ಲಿ ಇಂದ್ರನ ಅಂಶದಿಂದ ವಾಲಿಯು ಹುಟ್ಟಿದನು. ಸೂರ್ಯನ ಅಂಶದಿಂದ ಸುಗ್ರೀವನುದಿಸಿದನು.

೯೯-೧೦೦. ಅಂತೆಯೇ ಋಕ್ಷಶ್ರೇಷ್ಠನಾದ ಜಾಂಬುವಂತನು ಬ್ರಹ್ಮನ ಅಂಶದಿಂದ ಜನಿಸಿದನು. ಯಾವನು ಶಿಲಾದನ ಮಗನಾದ ನಂದಿಯೋ, ಯಾವನು ಶಿವನ ಅನುಚರನೂ, ಪ್ರಿಯನೂ ಆದವನೋ, ಯಾವನು ಹನ್ನೊಂದನೆಯ ರುದ್ರನೋ ಆತನೇ ಮಹಾ ಕಪಿಯಾದ ಹನುಮಂತನಾಗಿ ಅಪಾರ ತೇಜಸ್ವಿಯಾದ ಶ್ರೀಮನ್ಮಹಾವಿಷ್ಣುವಿನ ಸಹಾಯಾರ್ಥವಾಗಿ ಅವತರಿಸಿದನು.

ಮೈಂದಾದಯೋಽಥ ಕಪಯಸ್ತೇ ಸರ್ವೇ ಸುರಸತ್ತಮಾಃ ।
ಏವಂ ಸರ್ವೇ ಸುರಗಣಾ ಅವತೇರುರ್ಯಥಾತಥಂ ॥ ೧೦೧ ॥
ತಥೈವ ವಿಷ್ಣುರುತ್ಪನ್ನಃ ಕೌಸಲ್ಯಾನಂದವರ್ಧನಃ ।
ವಿಶ್ವಸ್ಯ ರಮಣಾಚ್ಚೈವ ರಾಮ ಇತ್ಯುಚ್ಯತೇ ಬುಧೈಃ ॥ ೧೦೨ ॥
ಶೇಷೋಽಪಿ ಭಕ್ತ್ಯಾ ವಿಷ್ಣೋಶ್ಚ ತಪಸಾವತರದ್ಭುವಿ ॥ ೧೦೩ ॥
ದೋರ್ದಂಡಾವಪಿ ವಿಷ್ಣೋಶ್ಚ ಅವತೀರ್ಣೌ ಪ್ರತಾಪಿನೌ ।
ಶತ್ರುಘ್ನ ಭರತಾಖ್ಯೌ ಚ ವಿಖ್ಯಾತೌ ಭುವನತ್ರಯೇ ॥ ೧೦೪ ॥
ಮಿಥಿಲಾಧಿಪತೇಃ ಕನ್ಯಾ ಯಾ ಉಕ್ತಾ ಬ್ರಹ್ಮವಾದಿಭಿಃ ।
ಸಾ ಬ್ರಹ್ಮವಿದ್ಯಾಽವತರತ್ಸುರಾಣಾಂ ಕಾರ್ಯಸಿದ್ಧಯೇ ॥ ೧೦೫ ॥
ಸೀತಾ ಜಾತಾ ಲಾಂಗಲಸ್ಯ ಇಯಂ ಭೂಮಿವಿಕರ್ಷಣಾತ್ ।
ತಸ್ಮಾತ್ಸೀತೇತಿ ವಿಖ್ಯಾತಾ ವಿದ್ಯಾಸಾನ್ವೀಕ್ಷಿಕೀ ತದಾ ।
ಮಿಥಿಲಾಯಾಂ ಸಮುತ್ಪನ್ನಾ ಮೈಥಿಲೀತ್ಯಭಿಧೀಯತೇ ॥ ೧೦೬ ॥

---

೧೦೧. ಇತರ ಸುರಸತ್ತಮರೆಲ್ಲರೂ ಮೈಂದಾದಿ ಕಪಿಗಳಾದರು. ಈ ರೀತಿ ದೇವತೆಗಳೆಲ್ಲರೂ ಕಪಿಗಳಾಗಿ ಅವತರಿಸಿದರು.

೧೦೨. ಹಾಗೆಯೇ ವಿಷ್ಣುವೂ ಸಹ ದಶರಥನ ಜ್ಯೇಷ್ಠ ಪತ್ನಿಯಾದ ಕೌಸಲ್ಯೆಯ ಸಂತೋಷವನ್ನು ಬೆಳೆಸುವವನಾಗಿ ಅವಳ ಮಗನಾಗಿ ಅವತರಿಸಿಸಿದನು. ಲೋಕವನ್ನು ಆನಂದಗೊಳಿಸುವವನಾದುದರಿಂದ ಪಂಡಿತರು ಅವನನ್ನು ರಾಮನೆಂದು ಕರೆದರು

೧೦೩. ಮಹಾವಿಷ್ಣುವಿನ ಹಾಸಗೆಯಾದ ಆದಿಶೇಷನೂ ಸಹ ಸ್ವಾಮಿಯಲ್ಲಿನ ಭಕ್ತಿಯಿಂದಲೂ, ತನ್ನ ತಪಃಪ್ರಭಾವದಿಂದಲೂ ಲಕ್ಷ್ಮಣನೆಂಬ ಹೆಸರಿನಿಂದವತರಿಸಿದನು.

೧೦೪. ವಿಷ್ಣುವಿನ ಮಹಾ ಪರಾಕ್ರಮಶಾಲಿಗಳಾದ ದೋರ್ದಂಡಗಳೆರಡೂ ಮೂರು ಲೋಕಗಳಲ್ಲಿಯೂ ಪ್ರಸಿದ್ಧರಾದ ಭರತ ಶತ್ರುಘ್ನರಾಗಿ ಅವತರಿಸಿದುವು.

೧೦೫–೧೦೬. ಯಾವಾಕೆಯನ್ನು ಬ್ರಹ್ಮವಾದಿಗಳು ಬ್ರಹ್ಮವಿದ್ಯೆಯೆನ್ನುವರೋ, ಆಕೆಯೇ ದೇವತೆಗಳ ಕಾರ್ಯಸಿದ್ಧಿಗಾಗಿ ಮಿಥಿಲಾಧಿಪತಿಯಾದ ಜನಕರಾಯನ ಮಗಳಾಗಿ ಹುಟ್ಟಿದಳು. ಜನಕನು ಭೂಮಿಯನ್ನುಳುವಾಗ ಆತನ ನೇಗಿಲ ತುದಿಯಿಂದ ಹುಟ್ಟಿದವಳಾದುದರಿಂದ ಆ ಆನ್ವೀಕ್ಷಿಕೀವಿದ್ಯೆಯು ಸೀತೆಯೆಂದು ಹೆಸರಾದಳು. ಆಕೆಯು ಮಿಥಿಲೆಯಲ್ಲಿ ಜನಿಸಿದಳಾದುದರಿಂದ ಮೈಥಿಲಿಯೆನಿಸಿದಳು.

**ಜನಕಸ್ಯ ಕುಲೇ ಜಾತಾ ವಿಶ್ರುತಾ ಜನಕಾತ್ಮಜಾ ।**
**ಖ್ಯಾತಾ ವೇದವತೀ ಪೂರ್ವಂ ಬ್ರಹ್ಮವಿದ್ಯಾಘನಾಶಿನೀ ।**
**ಸಾ ದತ್ತಾ ಜನಕೇನೈವ ವಿಷ್ಣವೇ ಪರಮಾತ್ಮನೇ ॥ ೧೦೭ ॥**
**ತಯಾಥ ವಿದ್ಯಯಾ ಸಾರ್ಧಂ ದೇವದೇವೋ ಜಗತ್ಪತಿಃ ।**
**ಉಗ್ರೇ ತಪಸಿ ಲೀನೋಽಸೌ ವಿಷ್ಣುಃ ಪರಮಮಂಗಲಃ ॥ ೧೦೮ ॥**
**ರಾವಣಂ ಜೇತುಕಾಮೋ ವೈ ರಾಮೋ ರಾಜೀವಲೋಚನಃ ।**
**ಅರಣ್ಯವಾಸಮಕರೋದ್ದೇವಾನಾಂ ಕಾರ್ಯಸಿದ್ಧಯೇ ॥ ೧೦೯ ॥**
**ಶೇಷಾವತಾರೋಽಪಿ ಮಹಾಂಸ್ತಪಃ ಪರಮದುಷ್ಕರಂ ।**
**ತತಾಪ ಪರಯಾ ಶಕ್ತ್ಯಾ ದೇವಾನಾಂ ಕಾರ್ಯಸಿದ್ಧಯೇ ॥ ೧೧೦ ॥**
**ಶತ್ರುಘ್ನೋ ಭರತಶ್ಚೈವ ತೇಪತುಃ ಪರಮಂ ತಪಃ ॥ ೧೧೧ ॥**
**ತತೋಽಸೌ ತಪಸಾ ಯುಕ್ತಃ ಸಾರ್ಧಂ ತದ್ದೇವತಾ ಗಣೈಃ ।**
**ಸಗಣಂ ರಾವಣಂ ರಾಮಃ ಷಡ್ಭಿರ್ಮಾಸೈರಜೀಹನತ್ ।**
**ವಿಷ್ಣುನಾ ಘಾತಿತಃ ಶಸ್ತ್ರೈಃ ಶಿವಸಾರೂಪ್ಯಮಾಪ್ತವಾನ್ ॥ ೧೧೨ ॥**

---

೧೦೭. ಜನಕನ ವಂಶದಲ್ಲಿ ಜನಿಸಿದುದರಿಂದ ಆಕೆಯು ಜನಕಾತ್ಮಜೆ ಯೆಂದು ಪ್ರಸಿದ್ಧಳಾದಳು. ಅಘನಾಶಿನಿಯೂ, ಬ್ರಹ್ಮವಿದ್ಯೆಯೂ ಆದ ಈಕೆಯು ಹಿಂದೆ ವೇದವತಿಯೆಂದು ಹೆಸರಾಗಿದ್ದಳು. ಜನಕರಾಯನು ಈಕೆಯನ್ನು ಪರಮಾತ್ಮನಾದ ವಿಷ್ಣುವಿಗೆ ತಾನಾಗಿಯೇ ಮದುವೆ ಮಾಡಿಕೊಟ್ಟನು.

೧೦೮. ದೇವದೇವನೂ, ಜಗತ್ಪತಿಯೂ, ಪರಮಮಂಗಲನೂ (ರಾಮನು) ಆದ ಆ ವಿಷ್ಣುವು ಆ ವಿದ್ಯೆಯೊಡನೆ ಉಗ್ರವಾದ ತಪಸ್ಸಿನಲ್ಲಿ ಲೀನನಾದನು.

೧೦೯. ತರುವಾಯ ರಾಜೀವಲೋಚನನಾದ ಆ ಶ್ರೀರಾಮನು ರಾವಣ ನನ್ನು ಜಯಿಸಬಯಸಿ ಆ ಕಾರ್ಯವನ್ನು ಸಾಧಿಸಲೋಸುಗ ಅರಣ್ಯವಾಸವನ್ನೂ ಮಾಡಿದನು.

೧೧೦. ಆದಿಶೇಷಾವತಾರವಾದ ಲಕ್ಷ್ಮಣನೂ ಸಹ ದೇವತೆಗಳ ಕಾರ್ಯ ಸಿದ್ಧಿಗೋಸುಗ ತನ್ನ ಸಾಮರ್ಥ್ಯದಿಂದ ಪರಮ ದುಷ್ಕರವಾದ ಮಹತ್ತರ ತಪಸ್ಸನ್ನೆಸಗಿದನು.

೧೧೧. ಭರತ ಶತ್ರುಘ್ನರೂ ಸಹ ಶ್ರೇಷ್ಠವಾದ ತಪಸ್ಸನ್ನು ಮಾಡಿದರು.

೧೧೨. ತರುವಾಯ ಈ ರೀತಿ ತಪೋಯುಕ್ತನಾದ ಆ ರಾಮನು ವಾನರ ರೂಪಿಗಳಾದ ಆ ದೇವತೆಗಳ ಸಮೂಹಗಳಿಂದೊಡಗೂಡಿದವನಾಗಿ ಆರುತಿಂಗಳು ಗಳಲ್ಲಿಯೇ ಬಂಧುಬಳಗಗಳೊಡಗೂಡಿದ ಆ ರಾವಣನನ್ನು ಸಂಹರಿಸಿದನು. ಹೀಗೆ ಶ್ರೀಮನ್ಮಹಾವಿಷ್ಣುವಿನ ಶಸ್ತ್ರಗಳಿಂದ ಸಂಹೃತನಾದ ರಾವಣನು ಶಿವ ಸಾರೂಪ್ಯವನ್ನು ಹೊಂದಿದನು.

**ಸಗಣಃ ಸಪುನಃ ಸದ್ಯೋ ಬಂಧುಭಿಃ ಸಹ ಸುವ್ರತಾಃ ॥ ೧೧೩ ॥**
**ಶಿವಪ್ರಸಾದಾತ್ಸಕಲಂ ದ್ವೈತಾದ್ವೈತಮವಾಪ ಹ ।**
**ದ್ವೈತಾದ್ವೈತವಿವೇಕಾರ್ಥಮೃಷಯೋ ಹ್ಯತ್ರ ಮೋಹಿತಾಃ ।**
**ತತ್ಸರ್ವಂ ಪ್ರಾಪ್ನುವಂತೀಹ ಶಿವಾರ್ಚನರತಾ ನರಾಃ ॥ ೧೧೪ ॥**
**ಯೇಽರ್ಚಯಂತಿ ಶಿವಂ ನಿತ್ಯಂ ಲಿಂಗರೂಪಿಣಮೇವಚ ।**
**ಸ್ತ್ರಿಯೋ ವಾಪ್ಯಥವಾ ಶೂದ್ರಾಃ ಶ್ವಪಚಾ ಹ್ಯಂತ್ಯವಾಸಿನಃ ।**
**ತಂ ಶಿವಂ ಪ್ರಾಪ್ನುವಂತ್ಯೇವ ಸರ್ವದುಃಖೋಪನಾಶಿನಂ ॥ ೧೧೫ ॥**
**ಪಶವೋಽಪಿ ಪರಂ ಯಾತಾಃ ಕಿಂಪುನರ್ಮಾನುಷಾದಯಃ ॥ ೧೧೬ ॥**
**ಯೇ ದ್ವಿಜಾ ಬ್ರಹ್ಮಚರ್ಯೇಣ ತಪಃ ಪರಮುಮಾಸ್ಥಿತಾಃ ।**
**ವರ್ಷೈರನೇಕೈರ್ಯಜ್ಞಾನಾಂ ತೇಽಪಿ ಸ್ವರ್ಗಪರಾಭವನ್ ॥ ೧೧೭ ॥**
**ಜ್ಯೋತಿಷ್ಟೋಮೋ ವಾಜಪೇಯೋ ಹ್ಯತಿರಾತ್ರಾದಯೋ ಹ್ಯಮೀ ।**
**ಯಜ್ಞಾಃ ಸ್ವರ್ಗಂ ಪ್ರಯಚ್ಛಂತಿ ಸತ್ರಿಣಾಂ ನಾತ್ರಸಂಶಯಃ ॥ ೧೧೮ ॥**

---

೧೧೩. ಅಯ್ಯಾ ಮುನಿಗಳಿರಾ! ಆ ರಾವಣನು ತಾನೊಬ್ಬನೇ ಅಲ್ಲದೆ ತನ್ನ ಗುಂಪಿನೊಡನೆಯೂ, ತನ್ನ ಬಂಧುಗಳೊಡನೆಯೂ ಶಿವಲೋಕವನ್ನು ಸೇರಿ ಶಿವಸಾರೂಪ್ಯವನ್ನು ಪಡೆದನು.

೧೧೪. ಅವನು ಶಿವನ ಪ್ರಸಾದದಿಂದ ಸಂಪೂರ್ಣವಾದ ದ್ವೈತಾದ್ವೈತಗಳೆರಡನ್ನೂ ಹೊಂದಿದನು. ಈ ದ್ವೈತಾದ್ವೈತ ವಿವೇಕಕ್ಕಾಗಿ ಈ ಭೂಲೋಕದಲ್ಲಿರುವ ಋಷಿಗಳೆಲ್ಲರೂ ಮೋಹಗೊಳ್ಳುತ್ತಾರೆ. ಶಿವಪೂಜಾರತರಾದ ಮಾನವರು ಈ ಭೂಲೋಕದಲ್ಲಿ ಅದೆಲ್ಲವನ್ನೂ ಪಡೆಯುವರು.

೧೧೫. ಯಾರು ಪ್ರತಿನಿತ್ಯವೂ ಲಿಂಗರೂಪಿಯಾದ ಶಿವನನ್ನರ್ಚಿಸುತ್ತಾರೆಯೋ ಅವರು ಸ್ತ್ರೀಯರಾಗಲಿ, ಶೂದ್ರರಾಗಿರಲಿ, ಶ್ವಪಚರಾಗಿರಲಿ, ಅಂತ್ಯಜರಾಗಿರಲಿ ಯಾರೇ ಆಗಲಿ ಅವರೆಲ್ಲರೂ ಸಮಸ್ತ ದುಃಖಗಳನ್ನೂ ನಾಶಗೊಳಿಸುವ ಶಿವನನ್ನು ಹೊಂದಿಯೇ ಹೊಂದುತ್ತಾರೆ.

೧೧೬. ಪಶುಗಳು ಸಹ ಶಿವಲೋಕವನ್ನು ಸೇರಿರುವೆಂದಬಳಿಕ ಮಾನವಾದಿಗಳ ವಿಷಯದಲ್ಲಿ ಹೇಳತಕ್ಕುದೇನು. ಅವರು ನಿಸ್ಸಂದೇಹವಾಗಿಯೂ ಪರಮಪದವಿಯನ್ನು ಪಡೆದೇ ಪಡೆಯುತ್ತಾರೆ.

೧೧೭. ಯಾವ ಬ್ರಾಹ್ಮಣರು ಬ್ರಹ್ಮಚರ್ಯದಿಂದ ಅನೇಕ ವರ್ಷಗಳ ಕಾಲ ಶ್ರೇಷ್ಠವಾದ ತಪಸ್ಸನ್ನಾಚರಿಸಿ ಯಜ್ಞಗಳನ್ನು ಮಾಡುವರೋ ಅವರು ಸ್ವರ್ಗಕಾಮುಕರಾಗುತ್ತಾರೆ.

೧೧೮. ಜ್ಯೋತಿಷ್ಟೋಮ, ವಾಜಪೇಯ, ಅತಿರಾತ್ರ ಮುಂತಾದ ಯಜ್ಞಗಳೆಲ್ಲವೂ ಸೋಮಯಾಜಿಗಳಿಗೆ ಸ್ವರ್ಗವನ್ನು ದೊರಕಿಸುವುದರಲ್ಲಿ ಸಂಶಯವಿಲ್ಲ.

ತತ್ರ ಸ್ವರ್ಗಸುಖಂ ಭುಕ್ತ್ವಾ ಪುಣ್ಯಕ್ಷಯಕರಂ ಮಹತ್ ।
ಪುಣ್ಯಕ್ಷಯೇಽಪಿ ಯಜ್ವಾನೋ ಮರ್ತ್ಯಲೋಕಂ ಪತಂತಿ ವೈ ॥ ೧೧೯ ॥
ಪತಿತಾನಾಂ ಚ ಸಂಸಾರೇ ದೈವಾದ್ಬುದ್ಧಿಃ ಪ್ರಜಾಯತೇ ।
ಗುಣತ್ರಯಮಯೀ ವಿಪ್ರಾಸ್ತಾಸು ತಾಸ್ವಿಹ ಯೋನಿಷು ॥ ೧೨೦ ॥
ಯಥಾ ಸತ್ತ್ವಂ ಸಂಭವತಿ ಸತ್ತ್ವಯುಕ್ತಭವಂ ನರಾಃ ।
ರಾಜಸಾಶ್ಚ ತಥಾ ಜ್ಞೇಯಾಸ್ತಾಮಸಾಶ್ಚೈವ ಭೋದ್ವಿಜಾಃ ॥ ೧೨೧ ॥
ಏವಂ ಸಂಸಾರ ಚಕ್ರೇಽಸ್ಮಿನ್ಭ್ರಮಿತಾ ಬಹವೋ ಜನಾಃ ।
ಯದೃಚ್ಛಯಾ ದೈವಗತ್ಯಾ ಶಿವಂ ಸಂಸೇವತೇ ನರಃ ॥ ೧೨೨ ॥
ಶಿವಧ್ಯಾನಪರಾಣಾಂಚ ನರಾಣಾಂ ಯತಚೇತಸಾಂ ।
ಮಾಯಾನಿರಸನಂ ಸದ್ಯೋ ಭವಿಷ್ಯತಿ ನಚಾನ್ಯಥಾ ॥ ೧೨೩ ॥
ಮಾಯಾನಿರಸನಾತ್ಸದ್ಯೋ ನಶ್ಯತ್ಯೇವ ಗುಣತ್ರಯಂ ।
ಯದಾ ಗುಣತ್ರಯಾತೀತೋ ಭವತೀಹ ಸಮುಕ್ತಿಭಾಕ್ ॥ ೧೨೪ ॥

---

೧೧೯. ಆದರೆ ಅವರೆಲ್ಲರೂ ಆ ಸ್ವರ್ಗದಲ್ಲಿ ಬಹಳಮಟ್ಟಿಗೆ ಪುಣ್ಯವನ್ನು ನಾಶಗೊಳಿಸುವ ಅಸ್ಥಿರ ಸುಖಗಳನ್ನನುಭವಿಸಿ ಮತ್ತೆ ಮರ್ತ್ಯಲೋಕಕ್ಕೆ ಬೀಳುತ್ತಾರೆ.

೧೨೦. ಈ ರೀತಿ ಭೂಲೋಕಕ್ಕೆ ಬಿದ್ದ ಆ ವಿಪ್ರರಿಗೆ ಅದೃಷ್ಟವಶದಿಂದ ಆಯಾ ಜನ್ಮಗಳಿಗನುಗುಣವಾಗಿ ಸತ್ವರಜಸ್ತಮೋಗುಣಮಯವಾದ ಬುದ್ಧಿ ಯುಂಟಾಗುತ್ತದೆ.

೧೨೧. ಆ ಮಾನವರು ಸತ್ವಯುಕ್ತರಾಗಿದ್ದರೆ ಸತ್ವಗುಣವೇ ಅವರಿ ಗುಂಟಾಗುವುದು. ರಾಜಸರು, ತಾಮಸರೂ ಅಂತೆಯೇ ಎಂದು ತಿಳಿಯ ಬೇಕು.

೧೨೨. ಈ ರೀತಿ ಸಂಸಾರಚಕ್ರದಲ್ಲಿ ಅನೇಕ ಜನರು ಅಲೆದಾಡುವರು. ಅಕಸ್ಮಾತ್ತಾಗಿಯೂ, ದೈವಯೋಗದಿಂದಲೂ ಯಾವನೋ ಒಬ್ಬ ಮಾನವನು ಮಾತ್ರ ಶಿವನನ್ನು ಸೇವಿಸುತ್ತಾನೆ.

೧೨೩. ಶಿವಧ್ಯಾನಪರಾಯಣರಾಗಿ, ಸ್ಥಿರಚಿತ್ತರಾಗಿ, ಯೋಗಯುಕ್ತ ರಾಗಿರುವ ಮಾನವರಿಗೆ ಅಜ್ಞಾನವು ಕಳೆದು ಜ್ಞಾನವುಂಟಾಗುವುದರಲ್ಲಿ ಸಂದೇಹವಿಲ್ಲವು.

೧೨೪. ಈ ರೀತಿ ಮಾಯಾನಿರಸನವಾದೊಡನೆಯೇ ಸತ್ವರಜಸ್ತಮೋ ಗುಣಗಳು ಮೂರೂ ಕಳೆದುಹೋಗುತ್ತವೆ. ಯಾವಾಗ ಮಾನವನು ಮೂರೂ ಗುಣಗಳಿಗೆ ಮೀರಿದವನಾಗುವನೋ ಆಗಲೇ ಅವನು ಮುಕ್ತಿಗೆ ಯೋಗ್ಯ ನಾಗುತ್ತಾನೆ.

**ತಸ್ಮಾಲ್ಲಿಂಗಾರ್ಚನಂ ಭಾವ್ಯಂ ಸರ್ವೇಷಾಮಪಿ ದೇಹಿನಾಂ ।**
**ಲಿಂಗರೂಪೀ ಶಿವೋ ಭೂತ್ವಾ ತ್ರಾಯತೇ ಸಚರಾಚರಂ ॥ ೧೨೫ ॥**
**ಪುರಾ ಭವದ್ಭಿಃ ಪೃಷ್ಟೋಽಹಂ ಲಿಂಗರೂಪೀ ಕಥಂ ಶಿವಃ ।**
**ತತ್ಸರ್ವಂ ಕಥಿತಂ ವಿಪ್ರಾ ಯಾಥಾತಥ್ಯೇನ ಸಂಪ್ರತಿ ॥ ೧೨೬ ॥**
**ಕಥಂ ಗರಂ ಭಕ್ಷಿತವಾನ್ ಭವೋ ಲೋಕಮಹೇಶ್ವರಃ ।**
**ತತ್ಸರ್ವಂ ಶ್ರೂಯತಾಂ ವಿಪ್ರಾ ಯಥಾವತ್ಕಥಯಾಮಿ ವಃ ॥ ೧೨೭ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ ಶಿವಶಾಸ್ತ್ರೇ "ಶಿವಲಿಂಗಾರ್ಚನ ಮಹಾತ್ಮ್ಯಕಥನೇ ಶ್ರೀರಾಮಾವತಾರ ಕಥಾವರ್ಣನಂ"ನಾಮ ಅಷ್ಟಮೋಽಧ್ಯಾಯಃ**

---

೧೨೫. ಆದುದರಿಂದೆಲ್ಲೈ ಮುನಿಗಳಿರಾ! ಸಮಸ್ತಮಾನವರೂ ಲಿಂಗಾರ್ಚನೆಯನ್ನು ಮಾಡಬೇಕು. ಶಿವನು ಲಿಂಗರೂಪಿಯಾಗಿ ಚರಾಚರಾತ್ಮಕವಾದ ಈ ಪ್ರಪಂಚವನ್ನು ರಕ್ಷಿಸುವನು.

೧೨೬. ಎಲ್ಲೈ ವಿಪ್ರರೇ! ನೀವು ಹಿಂದೆ ಶಿವನು ಲಿಂಗರೂಪಿಯಾದುದೆಂತೆಂದು ನನ್ನನ್ನು ಪ್ರಶ್ನಿಸಿದಿರಿ. ಈಗ ನಾನದೆಲ್ಲವನ್ನೂ ನಿಮಗೆ ವಿಶದವಾಗಿ ಹೇಳಿರುವೆನು.

೧೨೭. ಇನ್ನು ಲೋಕಮಹೇಶ್ವರನಾದ ಆ ವರಶಿವನು ವಿಷಪಾನ ಮಾಡಿದುದೆಂತು ಮೊದಲಾದ ವಿಷಯಗಳೆಲ್ಲವನ್ನೂ ನಿಮಗೆ ಇದ್ದುದನ್ನಿದ್ದಂತೆಯೇ ಹೇಳುವೆನು; ಕೇಳಿರಿ."

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಶಿವಲಿಂಗಾರ್ಚನ ಮಹಾತ್ಮ್ಯ ಕಥನದಲ್ಲಿ ಶ್ರೀ ರಾಮಾವತಾರ ವೃತ್ತಾಂತಕಥನ"ವೆಂಬ ಎಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ನವಮೋಽಧ್ಯಾಯಃ

### ದೇವರಾಜಸ್ಯ ರಾಜ್ಯಭ್ರಷ್ಟತ್ವಕಥಾಕಥನಂ

**ಲೋಮಶ ಉವಾಚ :—**

**ಏಕದಾತು ಸಭಾಮಧ್ಯ ಆಸ್ಥಿತೊ ದೇವರಾಟ್ ಸ್ವಯಂ ।**
**ಲೋಕಪಾಲೈಃ ಪರಿವೃತೋ ದೇವೈಶ್ಚ ಋಷಿಭಿಸ್ತಥಾ ॥ ೧ ॥**
**ಅಪ್ಸರೋಗಣ ಸಂವೀತೋ ಗಂಧರ್ವೈಶ್ಚ ಪುರಸ್ಕೃತಃ ।**
**ಉಪಗೀಯಮಾನವಿಜಯಃ ಸಿದ್ಧವಿದ್ಯಾಧರೈರಪಿ ॥ ೨ ॥**
**ತದಾ ಶಿಷ್ಯೈಃ ಪರಿವೃತೋ ದೇವರಾಜಗುರುಃ ಸುಧೀಃ ।**
**ಆಗತೋಽಸೌ ಮಹಾಭಾಗೋ ಬೃಹಸ್ಪತಿರುದಾರಧೀಃ ॥ ೩ ॥**
**ತಂ ದೃಷ್ಟ್ವಾ ಸಹಸಾ ದೇವಾಃ ಪ್ರಣೇಮುಃ ಸಮುಪಸ್ಥಿತಾಃ ।**
**ಇಂದ್ರೋಽಪಿ ದದೃಶೇ ತತ್ರ ಪ್ರಾಪ್ತಂ ವಾಚಸ್ಪತಿಂ ತದಾ ॥ ೪ ॥**
**ನೋವಾಚ ಕಿಂಚಿದ್ದುರ್ಮೇಧಾ ವಚೋ ಮಾನಪುರಃಸರಂ ।**
**ನಾಹ್ವಾನಂ ನಾಸನಂತಸ್ಯ ನ ವಿಸರ್ಜನಮೇವಚ ॥ ೫ ॥**

---

### ಕನ್ನಡದ ಅನುವಾದ

#### ದೇವರಾಜನು ರಾಜ್ಯಭ್ರಷ್ಟನಾದುದು

೧. ಲೋಮಶನು ಹೇಳುತ್ತಾನೆ :—ಅಯ್ಯಾ ಋಷಿಗಳಿರಾ! ಒಂದಾನೊಂದು ದಿನ, ಮಹೇಂದ್ರನು ಅಷ್ಟದಿಕ್ಪಾಲಕರಿಂದಲೂ, ಋಷಿಗಳಿಂದಲೂ ಕೂಡಿ ಸಭೆಯ ಮಧ್ಯದಲ್ಲಿ ಸುಖಾಸೀನನಾಗಿದ್ದನು.

೨. ಆಗ ಸಿದ್ಧವಿದ್ಯಾಧರರು ಅಪ್ಸರೋಗಣಗಳಿಂದಲೂ, ಗಂಧರ್ವರಿಂದಲೂ ಬಳಸಲಾಗಿದ್ದ ಆ ಮಹೇಂದ್ರನ ವಿಜಯ ಗೀತಗಳನ್ನು ಹಾಡುತ್ತಿದ್ದರು.

೩. ಆ ಸಮಯದಲ್ಲಿ ಮಹಾ ಬುದ್ಧಿಶಾಲಿಯೂ, ಪ್ರಾಜ್ಞನೂ, ಮಹಾಭಾಗ್ಯಶಾಲಿಯೂ, ಮಹೇಂದ್ರನಿಗೆ ಗುರುವೂ ಆದ ಬೃಹಸ್ಪತಿಯು ತನ್ನ ಶಿಷ್ಯರೊಡಗೂಡಿ ಅಲ್ಲಿಗೆ ಬಿಜಯಮಾಡಿದನು.

೪–೫. ಆತನನ್ನು ಕಂಡೊಡನೆಯೇ ಅಲ್ಲಿದ್ದ ದೇವತೆಗಳೆಲ್ಲರೂ ಎದ್ದು ನಿಂತು ನಮಸ್ಕರಿಸಿದರು. ದುರ್ಬುದ್ಧಿಯಾದ ಮಹೇಂದ್ರನಾದರೋ ಆ ವಾಚಸ್ಪತಿಯನ್ನು ಕಂಡೂ ಸನ್ಮಾನಪುರಸ್ಸರವಾದ ಒಂದು ಮಾತನ್ನೂ ಆಡಲಿಲ್ಲವು, ದಮಮಾಡಿಸಬೇಕೆನ್ನಲೂ ಇಲ್ಲ; ಇಲ್ಲಿ ಕುಳಿತುಕೊಳ್ಳಬೇಕೆಂದು ಆಸನವನ್ನೂ ಕೊಡಲಿಲ್ಲ, ಕಡೆಗೆ ಆತನನ್ನು ಹೋಗೆಂದು ಕಳುಹಿಸಿಕೊಡಲೂ ಇಲ್ಲವು.

ಶಕ್ರಂ ಪ್ರಮತ್ತಂ ಜ್ಞಾತ್ವಾಥ ಮದಾದ್ರಾಜ್ಯಸ್ಯ ದುರ್ಮತಿಂ ।
ತಿರೋಧಾನಮನುಪ್ರಾಪ್ತೋ ಬೃಹಸ್ಪತೀ ರುಷಾನ್ವಿತಃ ॥ ೬ ॥
ಗತೇ ದೇವಗುರೌ ತಸ್ಮಿಸ್ತ್ವನ್ಮನಸ್ಕಾಃಭವನ್ಸುರಾಃ ।
ಯಕ್ಷಾ ನಾಗಾಃ ಸಗಂಧರ್ವಾ ಋಷಯೋಽಪಿ ತಥಾ ದ್ವಿಜಾಃ ॥ ೭ ॥
ಗಾಂಧರ್ವಸ್ಯಾವಸಾನೇತು ಲಬ್ಧಸಂಜ್ಞೋ ಹರಿಃ ಸುರಾನ್ ।
ಪಪ್ರಚ್ಛ ತ್ವರಿತೇನೈವ ಕ್ವಗತೋ ಹಿ ಮಹಾತಪಾಃ ॥ ೮ ॥
ತದೈವ ನಾರದೇನೋಕ್ತಃ ಶಕ್ರೋ ದೇವಾಧಿಪಸ್ತಥಾ ।
ತ್ವಯಾ ಕೃತಾ ಹ್ಯವಜ್ಞಾಚ ಗುರೋರ್ನಾಸ್ತ್ಯತ್ರ ಸಂಶಯಃ ॥ ೯ ॥
ಗುರೋರವಜ್ಞಯಾ ರಾಜ್ಯಂ ಗತಂ ತೇ ಬಲಸೂದನ ।
ತಸ್ಮಾತ್ಕ್ಷಮಾಪಣೀಯೋಽಸೌ ಸರ್ವಭಾವೇನಹಿತ್ವಯಾ ॥ ೧೦ ॥
ಏತಚ್ಛ್ರುತ್ವಾ ವಚಸ್ತಸ್ಯ ನಾರದಸ್ಯ ಮಹಾತ್ಮನಃ ।
ಆಸನಾತ್ಸಹಸೋತ್ಥಾಯ ತೈಃ ಸರ್ವೈಃ ಪರಿವಾರಿತಃ ।
ಆಗಚ್ಛತ್ತ್ವರಯಾ ಶಕ್ರೋ ಗುರೋರ್ಗೇಹಮತಂದ್ರಿತಃ ॥ ೧೧ ॥

---

೬. ಆ ಬೃಹಸ್ಪತಿಯು ದುರ್ಮತಿಯಾದ ಮಹೇಂದ್ರನು ರಾಜ್ಯಮದದಿಂದ ಮದಿಸಿಹೋಗಿರುವುದನ್ನು ತಿಳಿದುಕೊಂಡು ರೋಷಗೊಂಡು ಅಲ್ಲಿಯೇ ಅಂತರ್ಧಾನವಾದನು.

೭. ದೇವಗುರುವು ಅಂತರ್ಧಾನವಾದಕೂಡಲೇ ಸಭೆಯಲ್ಲಿದ್ದ ದೇವತೆಗಳೆಲ್ಲರೂ ಮನಕುಗ್ಗಿಹೋದರು. ಯಕ್ಷರು, ನಾಗರು, ಗಂಧರ್ವರೊಡಗೂಡಿದ ಋಷಿಗಳು ಎಲ್ಲರೂ ತಳಮಳಗೊಂಡರು.

೮. ಸಭೆಯಲ್ಲಿ ಸಂಗೀತವು ಮುಗಿದ ಬಳಿಕ ಮಹೇಂದ್ರನಿಗೆ ಎಚ್ಚರವಾಗಿ ಅವನು ಅವಸರದಿಂದ ಅಲ್ಲಿದ್ದ ದೇವತೆಗಳನ್ನು ಕುರಿತು, "ಎಲೈ! ಆ ಮಹಾತಪಸ್ವಿಯೆಲ್ಲಿಹೋದನು" ಎಂದು ಕೇಳಿದನು.

೯–೧೦. ಆಗ ನಾರದಮಹರ್ಷಿಯು ಆ ದೇವತೆಗಳೊಡೆಯನನ್ನು ಕುರಿತು, "ಅಯ್ಯಾ ಮಹೇಂದ್ರನೇ! ಈಗ ನೀನು ಗುರುವನ್ನು ಅಪಮಾನಗೊಳಿಸಿದೆಯೆಂಬುದರಲ್ಲಿ ಸಂಶಯವಿಲ್ಲವು. ಎಲೈ ಬಲಾಸುರ ಸಂಹಾರಿಯಾದ ದೇವರಾಜನೇ! ಆ ಗುರುವಿನ ಅಪಮಾನದಿಂದ ನಿನ್ನ ರಾಜ್ಯವೂ ನಾಶವಾಯಿತೆಂದು ತಿಳಿ. ಆದುದರಿಂದ ನೀನೀಗಲೇ ಸರ್ವಪ್ರಯತ್ನದಿಂದಲೂ ಆತನ ಕ್ಷಮಾಪಣೆಯನ್ನು ಪಡೆಯಬೇಕು" ಎಂದು ಹೇಳಿದನು.

೧೧. ನಾರದನ ಈ ಮಾತುಗಳನ್ನು ಕೇಳಿ ದೇವೇಂದ್ರನು ಕೂಡಲೇ ಸಿಂಹಾಸನವನ್ನು ಬಿಟ್ಟೆದ್ದು ಸಮಸ್ತ ದೇವತೆಗಳೊಡನೆಯೇ ಬಹುಜಾಗ್ರತೆಯಾಗಿ ಗುರುವಾದ ಬೃಹಸ್ಪತಿಯ ಮನೆಗೆ ಬಂದನು.

ದೃಷ್ಟ್ವಾ ತಾರಾಂ ಪ್ರಣಮ್ಯಾಽದೌ ಕ್ವಗತೋ ಹಿ ಮಹಾತಪಾಃ ।
ನಜಾನಾಮೀತ್ಯುವಾಚೇದಂ ತಾರಾ ಶಕ್ರಂ ನಿರೀಕ್ಷತೀ ॥ ೧೨ ॥
ತದಾ ಚಿಂತಾನ್ವಿತೋ ಭೂತ್ವಾ ಶಕ್ರಃ ಸ್ವಗೃಹಮಾವ್ರಜತ್ ।
ಏತಸ್ಮಿನ್ನಂತರೇ ಸ್ವರ್ಗೇ ಹ್ಯನಿಷ್ಟಾನ್ಯದ್ಭುತಾನಿಚ ॥ ೧೩ ॥
ಅಭವನ್ ಸರ್ವದುಃಖಾರ್ಥೇ ಶಕ್ರಸ್ಯ ಚ ಮಹಾತ್ಮನಃ ।
ಪಾತಾಲಸ್ಥೇನ ಬಲಿನಾ ಜ್ಞಾತಂ ಶಕ್ರಸ್ಯ ಚೇಷ್ಟಿತಂ ॥ ೧೪ ॥
ಯಯೌ ದೈತ್ಯೈಃ ಪರಿವೃತಃ ಪಾತಾಲಾದಮರಾವತೀಂ ।
ತದಾ ಯುದ್ಧಮತೀವಾಸೀದ್ದೇವಾನಾಂ ದಾನವೈಃ ಸಹ ॥ ೧೫ ॥
ದೇವಾಃ ಪರಾಜಿತಾಃ ದೈತ್ಯೈ ರಾಜ್ಯಂ ಶಕ್ರಸ್ಯ ತತ್ಕ್ಷಣಾತ್ ।
ಸಂಪ್ರಾಪ್ತಂ ಸಕಲಂ ತಸ್ಯ ಮೂಢಸ್ಯ ಚ ದುರಾತ್ಮನಃ ॥ ೧೬ ॥
ನೀತಂ ಸರ್ವಪ್ರಯತ್ನೇನ ಪಾತಾಲಂ ತ್ವರಿತಂ ಗತಾಃ ।
ಶುಕ್ರಪ್ರಸಾದಾತ್ತೇ ಸರ್ವೇ ತಥಾ ವಿಜಯಿನೋಽಭವನ್ ॥ ೧೭ ॥
ಶಕ್ರೋಽಪಿ ನಿಃಶ್ರೀಕೋ ಜಾತೋ ದೇವೈಸ್ತ್ಯಕ್ತಸ್ತತೋ ಭೃಶಂ ।
ದೇವೀ ತಿರೋಧಾನಗತಾ ಬಭೂವ ಕಮಲೇಕ್ಷಣಾ ॥ ೧೮ ॥

---

೧೨. ಅಲ್ಲಿ ಅವನು ಗುರುಪತ್ನಿಯಾದ ತಾರಾದೇವಿಯನ್ನು ನಮಸ್ಕರಿಸಿ "ತಾಯೇ! ಮಹಾ ತಪಸ್ವಿಯಾದ ಬೃಹಸ್ಪತಿಯು ಎಲ್ಲಿಹೋದನು?" ಎಂದು ಕೇಳಲು ಆಕೆಯು ಅವನನ್ನೇ ದಿಟ್ಟಿಸಿ "ನನಗೆ ತಿಳಿಯದು" ಎಂದು ಹೇಳಿದಳು.

೧೩–೧೪. ಆಗ ಶಕ್ರನು ಚಿಂತಾನ್ವಿತನಾಗಿ ತನ್ನ ಮನೆಗೈತಂದನು. ಈ ನಡುವೆ, ಸ್ವರ್ಗದಲ್ಲಿ ಅದ್ಭುತ ಅನಿಷ್ಟಗಳು ತಲೆದೋರಿದವು. ಅವೆಲ್ಲವೂ ದೇವೇಂದ್ರನಿಗೆ ಕಷ್ಟವನ್ನೇ ಸೂಚಿಸತಕ್ಕುವುಗಳಾಗಿದ್ದವು. ಹೀಗಿರಲು ಅತ್ತ ಪಾತಾಳಲೋಕದಲ್ಲಿ ಬಲಿಯು ಶಕ್ರನೆಸಗಿದ ಗುರ್ವಪಮಾನದ ವಿಷಯ ತಿಳಿದನು.

೧೫. ಕೂಡಲೇ ಅವನು ದೈತ್ಯರೊಡನೆ ಪಾತಾಳದಿಂದ ಹೊರಹೊರಟು ಅಮರಾವತಿಗೆ ಬಂದುಬಿಟ್ಟನು. ದೇವತೆಗಳಿಗೂ ದೈತ್ಯರಿಗೂ ತೀವ್ರವಾದ ಕಾಳಗವು ನಡೆಯಿತು.

೧೬–೧೮. ಒಂದು ಕ್ಷಣಕಾಲದಲ್ಲಿಯೇ ದೈತ್ಯರು ದೇವತೆಗಳನ್ನು ಸೋಲಿಸಿ ತಿಳಿಗೇಡಿಯೂ, ದುರಾತ್ಮನೂ ಆದ ದೇವೇಂದ್ರನ ರಾಜ್ಯವೆಲ್ಲವನ್ನೂ ಸರ್ವ ಪ್ರಯತ್ನದಿಂದಲೂ ತೆಗೆದುಕೊಂಡು ಮತ್ತೆ ಪಾತಾಳಲೋಕಕ್ಕೆ ಜಾಗ್ರತೆಯಾಗಿ ಹೊರಟುಹೋದರು. ಹೀಗೆ ಆ ದೈತ್ಯರು ತಮ್ಮ ಗುರುಗಳಾದ ಶುಕ್ರಾಚಾರ್ಯರ ಅನುಗ್ರಹದಿಂದ ವಿಜಯಿಗಳಾದರು. ದೇವೇಂದ್ರನಾದರೋ ದರಿದ್ರನಾಗಿ ಹೋದನು. ಅವನನ್ನಾಶ್ರಯಿಸಿದ ಕಮಲೇಕ್ಷಣೆಯಾದ ಶ್ರೀದೇವಿಯೂ ಸಹ ಕಣ್ಣಿಗೆ ಕಾಣಿಸದೆ ಅಂತರ್ಧಾನವಾದಳು.

ಐರಾವತೋ ಮಹಾನಾಗಸ್ತಥೈವೋಚ್ಚೈಃಶ್ರವಾ ಹಯಃ ।
ಏವಮಾದೀನಿ ರತ್ನಾನಿ ಅನೇಕಾನಿ ಬಹೂನ್ಯಪಿ ।
ನೀತಾನಿ ಸಹಸಾ ದೈತ್ಯೈರ್ಲೋಭಾದಸಾಧುವೃತ್ತಿಭಿಃ ॥ ೧೯ ॥
ಪುಣ್ಯಭಾಂಜಿ ಚ ತಾನ್ಯೇವ ಪತಿತಾನಿ ಚ ಸಾಗರೇ ।
ತದಾ ಸವಿಸ್ಮಯಾವಿಷ್ಟೋ ಬಲಿರಾಹ ಗುರುಂಪ್ರತಿ ॥ ೨೦ ॥
ದೇವಾನ್ನಿರ್ಜಿತ್ಯ ಚಾಸ್ಮಾಭಿರಾನೀತಾನಿ ಬಹೂನಿ ಚ ।
ರತ್ನಾನಿ ತು ಸಮುದ್ರೇಽಥ ಪತಿತಾನಿ ತದದ್ಭುತಂ ॥ ೨೧ ॥
ಬಲೇಸ್ತದ್ವಚನಂ ಶ್ರುತ್ವಾ ಉಶನಾ ಪ್ರತ್ಯುವಾಚ ತಂ ।
ಅಶ್ವಮೇಧಶತೇನೈವ ಸುರರಾಜ್ಯಂ ಭವಿಷ್ಯತಿ ।
ದೀಕ್ಷಿತಸ್ಯ ನ ಸಂದೇಹಸ್ತಸ್ಮಾದ್ಭೋಕ್ತಾ ಸ ಏವಚ ॥ ೨೨ ॥
ಅಶ್ವಮೇಧಂ ವಿನಾ ಕಿಂಚಿತ್ಸ್ವರ್ಗಂ ಭೋಕ್ತುಂ ನಪಾರ್ಯತೇ ॥ ೨೩ ॥
ಗುರೋರ್ವಚನಮಾಜ್ಞಾಯ ತೂಷ್ಣೀಂಭೂತೋ ಬಲಿಸ್ತತಃ ।
ಬಭೂವ ದೇವೈಃ ಸಾರ್ಧಂ ಚ ಯಥೋಚಿತಮಕಾರಯತ್ ॥ ೨೪ ॥

---

೧೯. ಆಗ ದುರ್ನಡತೆಯವರಾದ ದೈತ್ಯರು, ಅಮರಾವತಿಯ ಮಹಾ ಗಜವಾದ ಐರಾವತವನ್ನೂ, ಅಶ್ವಶ್ರೇಷ್ಠವಾದ ಉಚ್ಚೈಶ್ರವಸ್ಸನ್ನೂ, ಇನ್ನೂ ಇತರ ಅನೇಕ ರತ್ನಗಳನ್ನೂ ಬಲಾತ್ಕಾರವಾಗಿ ಪಾತಾಳಕ್ಕೊಯ್ದರು.

೨೦-೨೧. ಹೀಗೆ ಒಯ್ಯುತ್ತಿರುವಾಗ ಮಹಾ ಪುಣ್ಯಶಾಲಿಗಳಾದ ಆ ಐರಾವತಾದಿಗಳು ತಾವಾಗಿಯೇ ಸಮುದ್ರದಲ್ಲಿ ಬಿದ್ದುಹೋದುವು. ಆಗ ದಾನವೇಶ್ವರನಾದ ಬಲಿಯು ಆಶ್ಚರ್ಯಪಟ್ಟು ತನ್ನ ಗುರುವಾದ ಶುಕ್ರಾಚಾರ್ಯರನ್ನು ಕುರಿತು, "ಗುರುವೇ! ನಾವು ದೇವತೆಗಳನ್ನು ಯುದ್ಧದಲ್ಲಿ ಸೋಲಿಸಿ ಅಮರಾವತಿಯಲ್ಲಿದ್ದ ಅನೇಕ ರತ್ನಗಳನ್ನು ತಂದೆವು. ಆದರೆ ಅವುಗಳೆಲ್ಲವೂ ಸಮುದ್ರದಲ್ಲಿ ಬಿದ್ದುಹೋದುವು. ಇದು ಬಹಳ ಆಶ್ಚರ್ಯಕರವಾಗಿರುವುದು!" ಎಂದು ಹೇಳಿದನು.

೨೨-೨೩. ಬಲಿಯ ಈ ಮಾತನ್ನು ಕೇಳಿ ಶುಕ್ರಾಚಾರ್ಯನು ಅವನನ್ನು ಕುರಿತು, "ಅಯ್ಯಾ ಬಲಿಯೇ! ದೇವರಾಜ್ಯವು ನೂರು ಅಶ್ವಮೇಧಯಾಗಗಳನ್ನು ಮಾಡುವ ದೀಕ್ಷಿತನಿಗೆ ಮಾತ್ರ ದೊರಕುತ್ತದೆ. ಆ ಯಾಗಗಳನ್ನು ಮಾಡಿರುವವನೇ ಅದನ್ನು ಅನುಭವಿಸಲುಳ್ಳವನು. ಶತಾಶ್ವಮೇಧಯಾಗಗಳನ್ನು ಮಾಡದೆ ಸ್ವರ್ಗಲೋಕದ ರಾಜ್ಯವನ್ನನುಭವಿಸಲು ಸ್ವಲ್ಪವೂ ಸಾಧ್ಯವಾಗುವುದಿಲ್ಲ" ಎಂದು ಹೇಳಿದನು.

೨೪. ಆಗ ಬಲಿಯು ಗುರುವಿನ ಮಾತನ್ನರಿತುಕೊಂಡು ಏನೂ ಹೇಳದೆ ಸುಮ್ಮನಾಗಿ ದೇವತೆಗಳೊಡನೆ ಯಥೋಚಿತ ಸಂಧಿಯನ್ನು ಮಾಡಿಕೊಂಡನು.

ಇಂದ್ರೋಽಪಿ ಶೋಚ್ಯತಾಂ ಪ್ರಾಪ್ತೋ ಜಗಾಮ ಪರಮೇಷ್ಠಿನಂ ।
ವಿಜ್ಞಾಪಯಾಮಾಸ ತಥಾ ಸರ್ವಂ ರಾಜ್ಯಭಯಾದಿಕಂ ॥ ೨೫ ॥
ಶಕ್ರಸ್ಯ ವಚನಂ ಶ್ರುತ್ವಾ ಪರಮೇಷ್ಠೀ ಉವಾಚ ಹ ॥ ೨೬ ॥
ಸಂಮಿಲಿತ್ವಾ ಸುರಾನ್ ಸರ್ವಾಂಸ್ತ್ವಯಾ ಸಾಕಂ ತ್ವರಾನ್ವಿತಾಃ ।
ಆರಾಧನಾರ್ಥಂ ಗಚ್ಛಾಮೋ ವಿಷ್ಣುಂ ಸರ್ವೇಶ್ವರೇಶ್ವರಂ ॥ ೨೭ ॥
ತಥೇತಿ ಗತ್ವಾ ತೇ ಸರ್ವೇ ಶಕ್ರಾದ್ಯಾ ಲೋಕಪಾಲಕಾಃ ।
ಬ್ರಹ್ಮಾಣಂ ಚ ಪುರಸ್ಕೃತ್ಯ ತಟಂ ಕ್ಷೀರಾರ್ಣವಸ್ಯ ಚ ।
ಪ್ರಾಪ್ಯೋಪವಿಶ್ಯ ತೇ ಸರ್ವೇ ಹರಿಂ ಸ್ತೋತುಂ ಪ್ರಚಕ್ರಮುಃ ॥ ೨೮ ॥

ಬ್ರಹ್ಮೋವಾಚ :—

ದೇವದೇವ ಜಗನ್ನಾಥ ಸುರಾಸುರನಮಸ್ಕೃತ ।
ಪುಣ್ಯಶ್ಲೋಕಾವ್ಯಯಾನಂತ ಪರಮಾತ್ಮನ್ನಮೋಽಸ್ತು ತೇ ॥ ೨೯ ॥
ಯಜ್ಞೋಽಸಿ ಯಜ್ಞರೂಪೋಽಸಿ ಯಜ್ಞಾಂಗೋಽಸಿ ರಮಾಪತೇ ।
ತತೋಽದ್ಯ ಕೃಪಯಾ ವಿಷ್ಣೋ ದೇವಾನಾಂ ವರದೋ ಭವ ॥ ೩೦ ॥

---

೨೫. ಆಗ ದೇವೇಂದ್ರನು ಬಹಳ ದುರವಸ್ಥೆಗೀಡಾಗಿ ಬ್ರಹ್ಮನ ಬಳಿಗೆ ಬಂದು ತನ್ನ ರಾಜ್ಯಕ್ಕೆ ಬಂದಿರುವ ಭಯವೇ ಮೊದಲಾದ ಎಲ್ಲ ಸಂಗತಿಗಳನ್ನೂ ಆತನಲ್ಲಿ ಅರಿಕೆಮಾಡಿಕೊಂಡನು.

೨೬–೨೮. ಶಕ್ರನ ಮಾತನ್ನಾಲಿಸಿ ಆ ಬ್ರಹ್ಮನು ಅವನನ್ನು ಕುರಿತು "ಅಯ್ಯಾ! ದೇವತೆಗಳೆಲ್ಲರನ್ನೂ ಒಟ್ಟುಗೂಡಿಸಿಕೊಂಡು, ಈಗ ನಾವೆಲ್ಲರೂ ಸರ್ವೇಶ್ವರನಾದ ಶ್ರೀಮನ್ಮಹಾವಿಷ್ಣುವನ್ನಾರಾಧಿಸಲು ಜಾಗ್ರತೆಯಾಗಿ ವೈಕುಂಠಕ್ಕೆ ಹೋಗೋಣ" ಎಂದು ಹೇಳಿದನು. ಆಗ ಇಂದ್ರನೇ ಮೊದಲಾದ ಲೋಕಪಾಲಕರೆಲ್ಲರೂ, ಹಾಗೆಯೇ ಆಗಲೆಂದು ಹೇಳಿ ಬ್ರಹ್ಮದೇವನನ್ನು ಮುಂದಾಳನ್ನಾಗಿಸಿಕೊಂಡು ಕ್ಷೀರಸಮುದ್ರದ ತೀರಕ್ಕೆ ಬಂದುನಿಂತು ಶ್ರೀಹರಿಯನ್ನು ಸ್ತುತಿಸಲು ಆರಂಭಿಸಿದರು.

೨೯. ಬ್ರಹ್ಮನು ಹೇಳುತ್ತಾನೆ:—"ಎಲೈ ದೇವ ದೇವನೇ! ನೀನು ಜಗತ್ತಿಗೆಲ್ಲ ಒಡೆಯನು. ಸುರರಿಂದಲೂ, ಅಸುರರಿಂದಲೂ ನೀನು ನಮಸ್ಕೃತನಾದವನು. ನೀನೇ ಪುಣ್ಯಶ್ಲೋಕನು! ಅವ್ಯಯನೂ, ಅನಂತನೂ, ಪರಮಾತ್ಮನೂ ಆದ ಅಂತಹ ನಿನಗೆ ನಮಸ್ಕಾರವು!

೩೦–೩೧. ಯಜ್ಞವೇ ನೀನಾಗಿರುವೆ; ನೀನೇ ಯಜ್ಞರೂಪನು; ಎಲೈ ರಮಾಪತಿಯೇ! ಯಜ್ಞಾಂಗನೂ ನೀನೇ! ಆದುದರಿಂದಲೈ ವಿಷ್ಣುವೇ! ಈಗ ಈ ದೇವತೆಗಳಿಗೆ ನೀನು ವರವನ್ನು ದಯಪಾಲಿಸಬೇಕು. ಶತಕ್ರತುವಾದ ಈ ಮಹೇಂದ್ರನು ಗುರುವಾದ ಬೃಹಸ್ಪತ್ಯಾಚಾರ್ಯನನ್ನು ತಿರಸ್ಕರಿಸಿ ಅದರ

**ಗುರೋರವಜ್ಞಯಾ ಚಾದ್ಯ ಭ್ರಷ್ಟರಾಜ್ಯಃ ಶತಕ್ರತುಃ ।**
**ಜಾತಃ ಸುರರ್ಷಿಭಿಃ ಸಾಕಂ ತಸ್ಮಾದೇನಂ ಸಮುದ್ಧರ ॥ ೩೧ ॥**

**ಶ್ರೀ ಭಗವಾನುವಾಚ :—**

**ಗುರೋರವಜ್ಞಯಾ ಸರ್ವಂ ನಶ್ಯತೀತಿ ಕಿಮದ್ಭುತಂ ।**
**ಯೇ ಪಾಪಿನೋ ಹ್ಯಧರ್ಮಿಷ್ಠಾಃ ಕೇವಲಂ ವಿಷಯಾತ್ಮಕಾಃ ।**
**ಪತಿತಾ ನಿಂದಿತಾ ಯೈಶ್ಚ ನಿರ್ದೈವಾಸ್ತೇ ನ ಸಂಶಯಃ ॥ ೩೨ ॥**
**ಅನೇನ ಯತ್ಕೃತಂ ಬ್ರಹ್ಮನ್ ಸದ್ಯಸ್ತತ್ಫಲಮಾಗತಂ ।**
**ಕರ್ಮಣಾಚಾಸ್ಯ ಶಕ್ರಸ್ಯ ಸರ್ವೇಷಾಂ ಸಂಕಟಾಗಮಃ ॥ ೩೩ ॥**
**ವಿಪರೀತೋ ಯದಾ ಕಾಲಃ ಪುರುಷಸ್ಯ ಭವೇತ್ತದಾ ।**
**ಭೂತಮೈತ್ರೀಂ ಪ್ರಕುರ್ವಂತಿ ಸರ್ವಕಾರ್ಯಾರ್ಥಸಿದ್ಧಯೇ ॥ ೩೪ ॥**
**ತೇನೈವ ಕಾರಣೇನೇಂದ್ರ ಮದೀಯಂ ವಚನಂ ಕುರು । [ ೩೫ ॥**
**ಕಾರ್ಯಹೇತೋಸ್ತ್ವಯಾ ಕಾರ್ಯೋ ದೈತ್ಯೈಃ ಸಹ ಸಮಾಗಮಃ ॥**
**ಏವಂ ಭಗವತಾದಿಷ್ಟಃ ಶಕ್ರಃ ಪರಮ ಬುದ್ಧಿಮಾನ್ ।**
**ಅಮರಾವತೀಂ ಯಯೌ ಹಿತ್ವಾ ಸುತಲಂ ದೈವತೈಃ ಸಹ ॥ ೩೬ ॥**

---

ಫಲವಾಗಿ ರಾಜ್ಯವನ್ನು ಕಳೆದುಕೊಂಡು ದೇವರ್ಷಿಗಳೊಡನೆ ನಿನ್ನನ್ನು ಶರಣು ಹೊಕ್ಕಿರುವನು. ಇವನನ್ನುದ್ಧರಿಸು.''

೩೨. ಶ್ರೀಮನ್ನಾರಾಯಣನು ಹೇಳುತ್ತಾನೆ:—''ಗುರುಗಳನ್ನು ತಿರಸ್ಕರಿಸುವುದರಿಂದ ಎಲ್ಲವೂ ನಾಶವಾಗುವುದೆಂಬುದರಲ್ಲಿ ಆಶ್ಚರ್ಯವೇನಿರುವುದು. ಯಾವ ಪಾಪಿಗಳು, ಅಧರ್ಮಿಷ್ಠರಾಗಿ, ಕೇವಲ ಕಾಮಾದಿ ವಿಷಯಗಳಲ್ಲಿ ತೊಡಗುವರೋ, ಯಾರು ತಾಯಿ ತಂದೆಗಳನ್ನು ನಿಂದಿಸುತ್ತಾರೆಯೋ ಅವರಿಗೆ ದೈವಸಹಾಯವೇ ಇರುವುದಿಲ್ಲವಲ್ಲದೆ ಅವರೇ ನಾಸ್ತಿಕರೆನಿಸುತ್ತಾರೆ. ಇದರಲ್ಲಿ ಸಂಶಯವಿಲ್ಲವು.

೩೩–೩೫. ಅಯ್ಯಾ ಬ್ರಹ್ಮನೇ! ಈ ದೇವೇಂದ್ರನು ಯಾವ ಪಾಪವನ್ನೆಸಗಿದನೋ ಅದಕ್ಕೆ ತಕ್ಕ ಫಲವೇ ಇವನಿಗುಂಟಾಯಿತು. ಇವನು ಮಾಡಿದ ಕರ್ಮದಿಂದ ಎಲ್ಲರಿಗೂ ಕಷ್ಟವೊದಗಿತು. ಅಯ್ಯಾ ಮಹೇಂದ್ರನೇ! ಆದದ್ದಾಗಿ ಹೋಯಿತು. ಮನುಷ್ಯನಿಗೆ ಯಾವಾಗ ವಿಪರೀತಕಾಲವೊದಗುವುದೋ ಆಗಲೇ ಅವನು ಸಮಸ್ತ ಕಾರ್ಯಸಿದ್ಧಿಗೋಸ್ಕರ ಸಮಸ್ತ ಭೂತಗಳಲ್ಲಿಯೂ ಗೆಳೆತನವನ್ನು ಮಾಡಿಕೊಳ್ಳುತ್ತಾನೆ. ಆದುದರಿಂದ ಈಗ ನನ್ನ ಮಾತಿನಂತೆ ನಡೆ. ಈಗ ನೀನು ನಿನ್ನ ಕಾರ್ಯಸಾಧನೆಗಾಗಿ ಆ ದೈತ್ಯರೊಡನೆ ಸ್ನೇಹವನ್ನು ಮಾಡಿಕೊಳ್ಳುವವನಾಗು.''

೩೬–೩೭. ಷಡ್ಗುಣೈಶ್ವರ್ಯಸಂಪನ್ನನಾದ ಶ್ರೀಮನ್ನಾರಾಯಣನಿಂತು ನುಡಿದ ತರುವಾಯ ಬುದ್ಧಿಶಾಲಿಯಾದ ದೇವೇಂದ್ರನು ಆತನ ಅಪ್ಪಣೆಯ

**ಇಂದ್ರಂ ಸಮಾಗತಂ ಶ್ರುತ್ವಾ ಇಂದ್ರಸೇನೋ ರುಷಾನ್ವಿತಃ ।**
**ಬಭೂವ ಸಹ ಸೈನ್ಯೇನ ಹಂತುಕಾಮಃ ಪುರಂದರಂ ॥ ೩೭ ॥**
**ನಾರದೇನ ತದಾ ದೈತ್ಯಾ ಬಲಿಶ್ಚ ಬಲಿನಾಂ ವರಃ ।**
**ನಿವಾರಿತಸ್ತದ್ವಧಾಚ್ಚ ವಾಕ್ಯೈರುಚ್ಚಾವಚೈಸ್ತಥಾ ॥ ೩೮ ॥**
**ಋಷೇಸ್ತಸ್ಯೈವ ವಚನಾತ್ತ್ಯಕ್ತಮನ್ಯುರ್ಬಲಿಸ್ತದಾ ।**
**ಬಭೂವ ಸಹಸೈನ್ಯೇನ ಹ್ಯಾಗತೋಹಿ ಶತಕ್ರತುಃ ॥ ೩೯ ॥**
**ಇಂದ್ರಸೇನೇನ ದೃಷ್ಟೋಽಸೌ ಲೋಕಪಾಲೈಃ ಸಮಾವೃತಃ ।**
**ಉವಾಚ ತ್ವರಯಾ ಯುಕ್ತಃ ಪ್ರಹಸನ್ನಿವ ದೇವರಾಟ್ ॥ ೪೦ ॥**
**ಕಸ್ಮಾದಿಹಾಗತಃ ಶಕ್ರ ಸುತಲಂ ಪ್ರತಿ ಕಥ್ಯತಾಂ ।**
**ತಸ್ಯೈತದ್ವಚನಂ ಶ್ರುತ್ವಾ ಸ್ಮಯಮಾನ ಉವಾಚ ತಂ ॥ ೪೧ ॥**
**ವಯಂ ಕಶ್ಯಪದಾಯಾದಾ ಯೂಯಂ ಸರ್ವೇ ತಥೈವಚ ।**
**ಯಥಾ ವಯಂ ತಥಾ ಯೂಯಂ ವಿಗ್ರಹೋ ಹಿ ನಿರರ್ಥಕಃ ॥ ೪೨ ॥**

---

ಪ್ರಕಾರ ಅಮರಾವತಿಯನ್ನು ತೊರೆದು ದೇವತೆಗಳೊಡನೆ ಬಲಿಚಕ್ರವರ್ತಿಯಿದ್ದ ಸುತಲಲೋಕಕ್ಕೆ ಬಂದನು. ಈ ರೀತಿ ಮಹೇಂದ್ರನು ತನ್ನ ಲೋಕಕ್ಕೆ ಬಂದುದನ್ನು ಕಂಡು ಇಂದ್ರಸೇನನಾದ ಆ ಬಲಿದಾನವನು ಸೈನ್ಯಸಮೇತನಾಗಿ ಅವನನ್ನು ಕೊಲ್ಲಬಯಸಿದನು.

೩೮–೩೯. ಆಗ ನಾರದಮುನಿಯು ಮಹಾಬಲಿಷ್ಠನಾದ ಆ ಬಲಿದಾನವನಿಗೂ ಅವನ ಕಡೆಯ ಇತರ ದಾನವರಿಗೂ ಉತ್ತಮೋತ್ತಮವಾದ ಮಾತುಗಳನ್ನು ಹೇಳಿ ಸಮಾಧಾನಗೊಳಿಸಿ ಅವರೆಲ್ಲರನ್ನೂ ತಡೆದನು. ಆ ಋಷಿಯ ಮಾತಿನಂತೆಯೇ ಬಲಿಯು ರೋಷವನ್ನು ತೊರೆದು ಸುಮ್ಮನಾದನು. ಅಂತೆಯೇ ಅವನ ಸೇನೆಯೂ ಸುಮ್ಮನಾಯಿತು. ದೇವೇಂದ್ರನು ಸುತಲಲೋಕಕ್ಕೆ ಬಂದೇಬಿಟ್ಟನು.

೪೦. ಇಂದ್ರಸೇನನಾದ ಬಲಿಯು ದೇವತೆಗಳೊಡಗೂಡಿದ ಆ ಮಹೇಂದ್ರನನ್ನು ನೋಡಿದೊಡನೆಯೇ ನಸುನಗುತ್ತ ಅವನನ್ನು ಕುರಿತು ಜಾಗ್ರತೆಯಾಗಿ ಇಂತೆಂದನು.

೪೧–೪೨. "ಅಯ್ಯಾ ಶಕ್ರನೇ! ನೀನು ಈ ದೇವತೆಗಳೆಲ್ಲರೊಡನೆ ನಮ್ಮ ಈ ಸುತಲಲೋಕಕ್ಕೆ ಬಂದುದೇಕೆ? ಹೇಳು." ಈ ಮಾತನ್ನು ಕೇಳಿ ಇಂದ್ರನು ನಗುತ್ತಲೇ ಅವನನ್ನು ಕುರಿತು, ನಾವೂ ಕಶ್ಯಪನ ಮಕ್ಕಳು; ನೀವೂ ಕಶ್ಯಪನ ಮಕ್ಕಳೇ! ನಾವೆಂತೊ ನೀವೂ ಅಂತೆಯೇ! ನಮ್ಮಿಬ್ಬರಲ್ಲಿ ಭೇದವೇನು. ಆದುದರಿಂದ ನಮ್ಮನಮ್ಮಲ್ಲಿ ಕಾಳಗವು ನಿಷ್ಪ್ರಯೋಜನಕರವಾದುದು.

ಮಮ ರಾಜ್ಯಂ ಕ್ಷಣೇನೈವ ನೀತಂ ದೈವವಶಾತ್ತ್ವಯಾ ।
ತಥಾ ಹ್ಯೇತಾನಿ ತಾನ್ಯೇವ ರತ್ನಾನಿ ಸುಬಹೂನ್ಯಪಿ ।
ಗತಾನಿ ತತ್ಕ್ಷಣಾದೇವ ಯತ್ನನೀತಾನಿ ವೈ ತ್ವಯಾ ॥ ೪೩ ॥
ತಸ್ಮಾದ್ವಿಮರ್ಶಃ ಕರ್ತವ್ಯಃ ಪುರುಷೇಣ ವಿಪಶ್ಚಿತಾ ।
ವಿಮರ್ಶಾಜ್ಜಾಯತೇ ಜ್ಞಾನಂ ಜ್ಞಾನಾನ್ಮೋಕ್ಷೋ ಭವಿಷ್ಯತಿ ॥ ೪೪ ॥
ಕಿಂತು ಮೇ ಬತ ಉಕ್ತೇನ ಜಾನೇನ ನ ತವಾಗ್ರತಃ ।
ಶರಣಾರ್ಥೀ ಹ್ಯಹಂ ಪ್ರಾಪ್ತಃ ಸುರೈಃ ಸಹ ತವಾಂತಿಕಂ ॥ ೪೫ ॥
ಏತಚ್ಛ್ರುತ್ವಾತು ಶಕ್ರಸ್ಯ ವಾಕ್ಯಂ ವಾಕ್ಯವಿದಾಂ ವರಃ ।
ಪ್ರಹಸ್ಯೋವಾಚ ಮತಿಮಾನ್ ಶಕ್ರಂ ಪ್ರತಿ ಬಲಿಸ್ತದಾ ॥ ೪೬ ॥
ತ್ವಮಾಗತೋಽಸಿ ದೇವೇಂದ್ರ ಕಿಮಿತ್ಯೇತನ್ನವೇದ್ಮ್ಯಹಂ ॥ ೪೭ ॥
ಶಕ್ರಸ್ತದ್ವಚನಂ ಶ್ರುತ್ವಾ ಹ್ಯಶ್ರುಪೂರ್ಣಾಕುಲೇಕ್ಷಣಃ ।
ಕಿಂಚಿನ್ನೋವಾಚ ತತ್ರೈನಂ ನಾರದೋ ವಾಕ್ಯಮಬ್ರವೀತ್ ॥ ೪೮ ॥
ಬಲೇ ತ್ವಂ ಕಿಂ ನಜಾನಾಸಿ ಕಾರ್ಯಾಕಾರ್ಯವಿಚಾರಣಾಂ ।
ಧರ್ಮೋ ಹಿ ಮಹತಾಮೇಷಃ ಶರಣಾಗತಪಾಲನಂ ॥ ೪೯ ॥

---

೪೩. ಅದೃಷ್ಟವಶದಿಂದ ನೀನು ಕ್ಷಣಮಾತ್ರದಲ್ಲಿಯೇ ನನ್ನ ರಾಜ್ಯವನ್ನು ತೆಗೆದುಕೊಂಡೆ. ಅಂತೆಯೇ ಅಲ್ಲಿದ್ದ ಅನೇಕ ರತ್ನಗಳನ್ನೂ ಒಯ್ದುತಂದೆ. ಆದರೆ ಅವೆಲ್ಲವೂ ಆ ಕ್ಷಣದಲ್ಲಿಯೇ ಕಳೆದುಹೋದುವು.

೪೪. ಆದುದರಿಂದ ಬುದ್ಧಿವಂತನಾದ ಪುರುಷನು ಯಾವಾಗಲೂ ಈ ವಿಷಯವನ್ನು ವಿಮರ್ಶಿಸಬೇಕು. ವಿಮರ್ಶೆಯಿಂದ ಜ್ಞಾನವುಂಟಾಗುತ್ತದೆ. ಜ್ಞಾನದಿಂದಲೇ ಮೋಕ್ಷವೂ ದೊರಕುತ್ತದೆ.

೪೫. ಆದರೆ ನಾನು ಅದೆಲ್ಲವನ್ನೂ ನಿನ್ನ ಮುಂದೆ ಹೇಳಿ ಪ್ರಯೋಜನ ವೇನು? ಈಗ ನಾನು ನಿನ್ನ ಬಳಿಗೆ ಶರಣಾಗತನಾಗಿ ಬಂದಿರುವೆನು.

೪೬–೪೭. ದೇವೇಂದ್ರನಾಡಿದ ಈ ಮಾತನ್ನು ಕೇಳಿ, ಮಾತುಬಲ್ಲವರಲ್ಲಿ ಬಹುಜಾಣನಾದ ಬಲಿಯು ನಕ್ಕು ಅವನನ್ನು ಕುರಿತು, "ದೇವೇಂದ್ರ! ನೀನು ಶರಣಾಗತನಾಗಿಯೇ ಬಂದಿರುವೆಯೋ, ಅಥವಾ ಕಾರ್ಯಾರ್ಥಿಯಾಗಿ ಬಂದಿರು ವೆಯೋ ನನಗೆ ತಿಳಿಯದಾಗಿದೆ" ಎಂದನು.

೪೮–೫೦. ದೇವೇಂದ್ರನದನ್ನು ಕೇಳಿ ತುಂಬಿಬಂದ ಕಣ್ಣೀರುಳ್ಳವನಾಗಿ ಏನೂ ಮಾತನಾಡದೆ ಸುಮ್ಮನಾದನು. ಆಗ ನಾರದನು ಬಲಿದಾನವನನ್ನು ಕುರಿತು, "ಅಯ್ಯಾ ಬಲಿಯೇ! ಕಾರ್ಯಾಕಾರ್ಯ ವಿಚಾರವನ್ನು ನೀನು ತಿಳಿಯದವನೇ! ಶರಣಾಗತರನ್ನು ಸಂರಕ್ಷಿಸುವುದೆಂಬುದು ಮಹಾತ್ಮರಾದವರಿಗೆ ಧರ್ಮವಾದುದು. ಯಾವ ಮಾನವರು ಶರಣಾಗತನನ್ನೂ, ವಿಪ್ರನನ್ನೂ,

ಶರಣಾಗತಂ ಚ ವಿಪ್ರಂ ಚ ರೋಗಿಣಂ ವೃದ್ಧಮೇವ ಚ ।
ಯ ಏತಾನ್ನ ಚ ರಕ್ಷಂತಿ ತೇ ವೈ ಬ್ರಹಹನೋ ನರಾಃ ॥ ೫೦ ॥
ಶರಣಾಗತಶಬ್ದೇನ ಆಗತಸ್ತವ ಸನ್ನಿಧೌ ।
ಸಂರಕ್ಷಣಾಯ ಯೋಗ್ಯಶ್ಚ ತ್ವಯಾ ನಾಸ್ತ್ಯತ್ರ ಸಂಶಯಃ ॥ ೫೧ ॥
ಏವಮುಕ್ತೋ ನಾರದೇನ ತದಾ ದೈತ್ಯಪತಿಃ ಸ್ವಯಂ ।
ವಿಮೃಶ್ಯ ಪರಯಾ ಬುದ್ಧ್ಯಾ ಕಾರ್ಯಾಕಾರ್ಯವಿಚಾರಣಾಂ ।
ಶಕ್ರಂ ಪ್ರಪೂಜಯಾಮಾಸ ಬಹುಮಾನಪುರಸ್ಸರಂ ।
ಲೋಕಪಾಲೈಃ ಸಮೇತಂ ಚ ತಥಾ ಸುರಗಣೈಃ ಸಹ ॥ ೫೨ ॥
ಪ್ರತ್ಯಯಾರ್ಥಂ ಚ ಸತ್ತ್ವಾನಿ ಹ್ಯನೇಕಾನಿ ವ್ರತಾನಿ ವೈ ।
ಬಲಿಪ್ರತ್ಯಯಭೂತಾನಿ ಚಕಾರ ಪುರಂದರಃ ॥ ೫೩ ॥
ಏವಂ ಸ ಸಮಯಂ ಕೃತ್ವಾ ಶಕ್ರಃ ಸ್ವಾರ್ಥಪರಾಯಣಃ ।
ಬಲಿನಾ ಸಹ ಚಾವಾತ್ಸೀದರ್ಥಶಾಸ್ತ್ರಪರೋ ಮಹಾನ್ ॥ ೫೪ ॥
ಏವಂ ನಿವಸತಸ್ತಸ್ಯ ಸುತಲೇಽಪಿ ಶತಕ್ರತೋಃ ।
ವತ್ಸರಾ ಬಹವೋ ಹ್ಯಾಸಂಸ್ತದಾ ಬುದ್ಧಿಮಕಲ್ಪಯತ್ ।
ಸಂಸ್ಮೃತ್ಯ ವಚನಂ ವಿಷ್ಣೋರ್ವಿಮೃಶ್ಯಚ ಪುನಃ ಪುನಃ ॥ ೫೫ ॥

---

ರೋಗಿಯನ್ನೂ, ಮುದುಕನನ್ನೂ ಕಾಪಾಡುವುದಿಲ್ಲವೋ ಅವರು ಬ್ರಹ್ಮಹತ್ಯಾ ಪಾತಕಕ್ಕೊಳಗಾಗುತ್ತಾರೆ.

೫೧–೫೨. ಈ ದೇವೇಂದ್ರನಾದರೊ, "ನಾನು ಶರಣಾಗತನಾಗಿ ಬಂದಿರುವೆನು" ಎಂದು ಹೇಳಿಕೊಂಡು ನಿನ್ನ ಸನ್ನಿಧಿಗೆ ಬಂದಿರುತ್ತಾನೆ. ಇವನು ನಿನ್ನ ಸಂರಕ್ಷಣೆಗೆ ಯೋಗ್ಯನೂ ಆಗಿರುವನು. ಇದರಲ್ಲಿ ಸಂಶಯವಿರುವುದಿಲ್ಲ" ಎಂದು ಹೇಳಿದನು. ನಾರದನಾಡಿದ ಈ ಮಾತುಗಳನ್ನು ಕೇಳಿ ದೈತ್ಯಪತಿಯಾದ ಬಲಿಯು ತನ್ನ ಸೂಕ್ಷ್ಮಬುದ್ಧಿಯಿಂದ ತಾನೇ ಕಾರ್ಯಾಕಾರ್ಯಗಳನ್ನು ವಿಮರ್ಶಿಸಿಕೊಂಡು ಆ ತರುವಾಯ ಲೋಕಪಾಲಕರಿಂದಲೂ, ದೇವಸಮೂಹಗಳಿಂದಲೂ ಕೂಡಿದ ಆ ದೇವೇಂದ್ರನನ್ನು ಗೌರವಿಸಿ ಪೂಜಿಸಿದನು.

೫೩. ತರುವಾಯ ದೇವೇಂದ್ರನು ಬಲಿದಾನವನಿಗೆ ನಂಬುಗೆಯನ್ನು ಹುಟ್ಟಿಸಲೋಸುಗ ಸಾತ್ವಿಕಗಳಾದ ಅನೇಕ ದಾನಗಳನ್ನು ಮಾಡಿದನು.

೫೪–೫೫. ಹೀಗೆ ಸ್ವಾರ್ಥಪರಾಯಣನಾದ ಆ ಪುರಂದರನು ಸಮಯವನ್ನೇ ನಿರೀಕ್ಷಿಸುತ್ತ ರಾಜ್ಯವನ್ನು ಮತ್ತೆ ಸಂಪಾದಿಸುವುದರಲ್ಲಿಯೇ ಆಸಕ್ತನಾಗಿ ಆ ವಿಷಯವನ್ನು ಹೇಳುವ ಅರ್ಥಶಾಸ್ತ್ರವನ್ನೇ ಅನುಸರಿಸುತ್ತ ಆ ಬಲಿಯೊಡನೆಯೇ ವಾಸಮಾಡುತ್ತಿದ್ದನು. ಅವನು ಹೀಗೆ ಸುತಲ ಲೋಕದಲ್ಲಿ ವಾಸಿಸುತ್ತಿರಲು ಅನೇಕ ಸಂವತ್ಸರಗಳು ಕಳೆದುಹೋದುವು. ಆ ಬಳಿಕ ಶ್ರೀಮನ್ಮಹಾ

**ಏಕದಾತು ಸಭಾಮಧ್ಯ ಆಸೀನೋ ದೇವರಾಟ್ ಸ್ವಯಂ ।**
**ಉವಾಚ ಪ್ರಹಸನ್ವಾಕ್ಯಂ ಬಲಿಮುದ್ದಿಶ್ಯ ನೀತಿಮಾನ್ ॥ ೫೬ ॥**
**ಪ್ರಾಪ್ತವ್ಯಾನಿ ತ್ವಯಾ ವೀರ ಅಸ್ಮಾಕಂ ಚ ತ್ವಯಾ ಬಲೇ ।**
**ಗಜಾದೀನಿ ಬಹೂನ್ಯೇವ ರತ್ನಾನಿ ವಿವಿಧಾನಿ ಚ ॥ ೫೭ ॥**
**ಗತಾನಿ ತತ್ಕ್ಷಣಾದೇವ ಸಾಗರೇ ಪತಿತಾನಿ ವೈ ।**
**ಪ್ರಯತ್ನೋಹಿ ಪ್ರಕರ್ತವ್ಯೋ ಹ್ಯಸ್ಮಾಭಿಸ್ತ್ವರಯಾನ್ವಿತೈಃ ॥ ೫೮ ॥**
**ತೇಷಾಂ ಚೋದ್ಧರಣೇ ದೈತ್ಯ ರತ್ನಾನಾಮಿಹ ಸಾಗರಾತ್ ।**
**ತರ್ಹಿ ನಿರ್ಮಥನಂ ಕಾರ್ಯಂ ಭವತಾ ಕಾರ್ಯಸಿದ್ಧಯೇ ॥ ೫೯ ॥**
**ಬಲಿಃ ಪ್ರವರ್ತಿತಸ್ತೇನ ಶಕ್ರೇಣ ಸುರಸೂದನಃ ।**
**ಉವಾಚ ಶಕ್ರಂ ತ್ವರಿತಃ ಕೇನೇದಂ ಮಥನಂ ಭವೇತ್ ॥ ೬೦ ॥**
**ತದಾ ನಭೋಗತಾ ವಾಣೀ ಮೇಘಗಂಭೀರನಿಃಸ್ವನಾ ।**
**ಉವಾಚ ದೇವಾ ದೈತ್ಯಾಶ್ಚ ಮಥಧ್ವಂ ಕ್ಷೀರಸಾಗರಂ ॥ ೬೧ ॥**

---

ವಿಷ್ಣುವು ಹೇಳಿದ್ದ ಮಾತನ್ನು ನೆನಿಸಿಕೊಂಡು ಅದನ್ನು ಅನೇಕಸಲ ಚೆನ್ನಾಗಿ ವಿಮರ್ಶೆ ಮಾಡಿಕೊಂಡು ಆಮೇಲೆ ಬಲಿಯೊಡನೆ ಅದನ್ನು ಪ್ರಸ್ತಾಪಿಸಲು ಮನಸ್ಸುಮಾಡಿದನು.

೫೬-೫೭. ಒಂದಾನೊಂದು ದಿನ ರಾಜನೀತಿಯನ್ನರಿತ ಆ ದೇವರಾಜನು, ಬಲೀಂದ್ರನು ಸಭೆಯಲ್ಲಿ ಕುಳಿತಿರುವಾಗ ತಾನೇ ಆತನನ್ನು ಕುರಿತು ಸಂತೋಷದ ನಗೆಯನ್ನು ಸೂಸುತ್ತ, "ಎಲೈ ವೀರನಾದ ಬಲಿರಾಜನೇ! ಈಗ ನೀವೂ, ನಾವೂ ಒಟ್ಟಿಗೆ ಸೇರಿ ಕಳೆದುಹೋಗಿರುವ ಗಜೋತ್ತಮವಾದ ಐರಾವತವೇ ಮೊದಲಾದ ಆ ವಿವಿಧ ರತ್ನಗಳನ್ನು ಮತ್ತೆ ಸಂಪಾದಿಸಬಾರದೇಕೆ?

೫೮. ಅವುಗಳನ್ನಿಲ್ಲಿಗೆ ತೆಗೆದುಕೊಂಡುಬರುತ್ತಿದ್ದ ಕ್ಷಣದಲ್ಲಿಯೇ ಅವೆಲ್ಲವೂ ಸಮುದ್ರದಲ್ಲಿ ಬಿದ್ದುಹೋದುವಲ್ಲವೆ? ಈಗ ಅವುಗಳನ್ನು ಸಂಪಾದಿಸಲು ನಾವೆಲ್ಲರೂ ಜಾಗ್ರತೆಯಾಗಿ ಪ್ರಯತ್ನಿಸಬೇಕಾಗಿರುವುದು.

೫೯. ಎಲೈ ದೈತ್ಯನೇ! ಆ ರತ್ನಗಳೆಲ್ಲವನ್ನೂ ಸಮುದ್ರದಿಂದೀಚೆಗೆ ತೆಗೆಯಬೇಕಾದರೆ, ನೀನು ಆ ಕಾರ್ಯಸಿದ್ಧಿಗಾಗಿ ಆ ಸಮುದ್ರವನ್ನೇ ಕಡೆಯಬೇಕು" ಎಂದು ಹೇಳಿದನು.

೬೦. ಹೀಗೆ ದೇವೇಂದ್ರನು ಪ್ರೇರೇಪಿಸಲು, ಸುರಶತ್ರುವಾದ ಬಲಿಯು ಆತುರನಾಗಿ ಅವನನ್ನು ಕುರಿತು, "ಅಯ್ಯಾ! ಈ ಸಮುದ್ರ ಮಥನವು ಯಾರಿಂದ ಹೇಗೆ ಸಾಧ್ಯವಾದೀತು?" ಎಂದನು.

೬೧. ಆ ಸಮಯದಲ್ಲಿ ಆಕಾಶವಾಣಿಯೂ ಮೇಘ ಗಂಭೀರಧ್ವನಿಯಿಂದ "ಎಲೈ ದೇವದಾನವರಿರಾ! ನೀವು ಕ್ಷೀರಸಾಗರವನ್ನು ಮಥಿಸಿರಿ.

ಭವತಾಂ ಬಲವೃದ್ಧಿಶ್ಚ ಭವಿಷ್ಯತಿ ನ ಸಂಶಯಃ ॥ ೬೨ ॥
ಮಂದರಂ ಚೈವ ಮಂಥಾನಂ ರಜ್ಜುಂ ಕುರುತ ವಾಸುಕಿಂ ।
ಪಶ್ಚಾತ್‌ದೇವಾಶ್ಚ ದೈತ್ಯಾಶ್ಚ ಮೇಲಯಿತ್ವಾ ವಿಮಥ್ಯತಾಂ ॥ ೬೩ ॥
ನಭೋಗತಾಂ ಚ ತಾಂ ವಾಣೀಂ ನಿಶಮ್ಯಾಥ ತದಾ ಸುರಾಃ ।
ದೈತ್ಯೈಃ ಸಾರ್ಧಂ ತತಃ ಸರ್ವೇ ಉದ್ಯಮಂ ಚಕ್ರುರುದ್ಯತಾಃ ॥ ೬೪ ॥
ಪಾತಾಲಾನ್ನಿರ್ಗತಾಸ್ಸರ್ವೇ ತದಾ ತೇಽಥ ಸುರಾಸುರಾಃ ।
ಆಜಗ್ಮುರತುಲಂ ಸರ್ವೇ ಮಂದರಂ ಪರ್ವತೋತ್ತಮಂ ॥ ೬೫ ॥
ದೈತ್ಯಾಶ್ಚ ಕೋಟಿಸಂಖ್ಯಾಕಾಸ್ತಥಾ ದೇವಾ ನ ಸಂಶಯಃ ।
ಉದ್ಯುಕ್ತಾಃ ಸಹಸಾ ಪ್ರಾಯಯುರ್ಮಂದರಂ ಕನಕಪ್ರಭಂ ॥ ೬೬ ॥
ಸರತ್ನಂ ವರ್ತುಲಾಕಾರಂ ಸ್ಥೂಲಂ ಚೈವ ಮಹಾಪ್ರಭಂ ।
ಅನೇಕರತ್ನಸಂವೀತಂ ನಾನಾದ್ರುಮಸಿಷೇವಿತಂ ॥ ೬೭ ॥
ಚಂದನೈಃ ಪಾರಿಜಾತೈಶ್ಚ ನಾಗಪುನ್ನಾಗ ಚಂಪಕೈಃ ।
ನಾನಾಮೃಗಗಣಾಕೀರ್ಣಂ ಸಿಂಹಶಾರ್ದೂಲಸೇವಿತಂ ॥ ೬೮ ॥
ಏವಂ ವಿಧಂ ಮಹಾಶೈಲಂ ದೃಷ್ಟ್ವಾ ತೇ ಸುರಸತ್ತಮಾಃ ।
ಊಚುಃ ಪ್ರಾಂಜಲಯಃ ಸರ್ವೇ ತದಾ ತೇ ಸುರಸತ್ತಮಾಃ ॥ ೬೯ ॥

---

೬೨–೬೩. ಇದರಿಂದ ನಿಮ್ಮ ಬಲವು ಹೆಚ್ಚುವುದರಲ್ಲಿ ಸಂದೇಹವಿಲ್ಲವು. ನೀವು ಮಂದರಗಿರಿಯನ್ನು ಕಡಗೋಲನ್ನಾಗಿಯೂ, ವಾಸುಕಿಯನ್ನು ಹಗ್ಗವನ್ನಾಗಿಯೂ ಮಾಡಿಕೊಂಡು ಒಟ್ಟಿಗೆ ಸೇರಿ ಕ್ಷೀರಸಾಗರವನ್ನು ಮಥಿಸಿರಿ" ಎಂದು ಹೇಳಿತು.

೬೪. ಆಕಾಶವಾಣಿಯ ನುಡಿಯನ್ನು ಕೇಳಿದ ಬಳಿಕ ದೇವತೆಗಳೆಲ್ಲರೂ ದೈತ್ಯರೊಡನೆ ಕ್ಷೀರಸಾಗರವನ್ನು ಮಥಿಸಲು ಎಲ್ಲ ಪ್ರಯತ್ನಗಳನ್ನೂ ಮಾಡಿದರು.

೬೫–೬೯. ಸುರಾಸುರರೆಲ್ಲರೂ ಪಾತಾಳಲೋಕದಿಂದ ಹೊರಗೆ ಬಂದರು. ಆ ಬಳಿಕ ಅವರೆಲ್ಲರೂ ಪರ್ವತೋತ್ತಮವಾದ ಮಂದರದ ಬಳಿಗೈದಿದರು. ಹೀಗೆ ಅಲ್ಲಿಗೈತಂದ ದೇವದಾನವರ ಸಂಖ್ಯೆಯು ಕೋಟ್ಯಂತರಗಳಾಗಿದ್ದಿತು. ಇವರೆಲ್ಲರೂ ಪ್ರಯತ್ನಪೂರ್ವಕವಾಗಿ ಸ್ವರ್ಣಕಾಂತಿಯುಳ್ಳ ಆ ಗಿರಿಯ ಬಳಿಗೈದಿದರು. ಗುಂಡಾಗಿಯೂ, ದಪ್ಪವಾಗಿಯೂ, ಮಹಾ ಕಾಂತಿ ಸಮನ್ವಿತವಾಗಿಯೂ, ವಿವಿಧ ರತ್ನರಂಜಿತವಾಗಿಯೂ, ಬಗೆಬಗೆಯ ವೃಕ್ಷಗಳಿಂದ ತುಂಬಿದುದಾಗಿಯೂ, ಚಂದನ, ಪಾರಿಜಾತ, ನಾಗ, ಪುನ್ನಾಗ, ಚಂಪಕ ಮೊದಲಾದ ಪುಷ್ಪತರುಗಳಿಂದ ದಟ್ಟವಾಗಿಯೂ, ಸಿಂಹ ಶಾರ್ದೂಲಾದಿ ಅನೇಕ ಮೃಗಗಳಿಂದ ಕೂಡಿದುದಾಗಿಯೂ ಇರುವ ಆ ಮಹಾ ಪರ್ವತವನ್ನು ಕಂಡು ಆ ದೇವದಾನವರೆಲ್ಲರೂ ಅದಕ್ಕೆ ಕೈಮುಗಿದು ಅದನ್ನು ಕುರಿತು ಹೇಳಿದರು :

ದೇವಾ ಊಚುಃ:—
ಅದ್ರೇ ಸುರಾ ವಯಂ ಸರ್ವೇ ವಿಜ್ಞಪ್ತುಮಿಹ ಚಾಗತಾಃ ।
ತಚ್ಛೃಣುಷ್ವ ಮಹಾಶೈಲ ಪರೇಷಾಮುಪಕಾರಕ ॥ ೨೦ ॥
ಏವಮುಕ್ತಸ್ತದಾ ಶೈಲೋ ದೇವೈರ್ದೈತ್ಯೈಃ ಸ ಮಂದರಃ ।
ಉವಾಚ ನಿಃಸೃತೋ ಭೂತ್ವಾಪರಂ ವಿಗ್ರಹವಾನ್ವಚಃ ॥ ೨೧ ॥
ತೇನ ರೂಪೇಣ ರೂಢೀ ಸ ಪರ್ವತೋ ಮಂದರಾಚಲಃ ।
ಕಿಮರ್ಥಮಾಗತಾಃ ಸರ್ವೇ ಮತ್ಸಮೀಪಂ ತದುಚ್ಯತಾಂ ॥ ೨೨ ॥
ತದಾ ಬಲಿರುವಾಚೇದಂ ಪ್ರಸ್ತಾವಸದೃಶಂ ವಚಃ ।
ಇಂದ್ರೋsಪಿ ತ್ವರಯಾ ಯುಕ್ತೋ ಬಭಾಷೇ ಸೂನೃತಂ ವಚಃ ॥ ೨೩ ॥
ಅಸ್ಮಾಭಿಃ ಸಹ ಕಾರ್ಯಾರ್ಥೇ ಭವತ್ವಂ ಮಂದರಾಚಲ ।
ಅಮೃತೋತ್ಪಾದನಾರ್ಥೇ ತ್ವಂ ಮಂಥಾನಂ ಭವ ಸುವ್ರತ ॥ ೨೪ ॥
ತಥೇತಿ ಮತ್ವಾ ತದ್ವಾಕ್ಯಂ ದೇವಾನಾಂ ಕಾರ್ಯಸಿದ್ಧಯೇ ।
ಊಚೇ ದೇವಾಸುರಾಂಶ್ಚೇದಮಿಂದ್ರಂ ಪ್ರತಿ ವಿಶೇಷತಃ ॥ ೨೫ ॥
ಛೇದಿತೌ ಚ ತ್ವಯಾ ಪಕ್ಷೌ ವಜ್ರೇಣ ಶತಪರ್ವಣಾ ।
ಗಂತುಂ ಕಥಂ ಸಮರ್ಥೋsಹಂ ಭವತಾಂ ಕಾರ್ಯಸಿದ್ಧಯೇ ॥ ೨೬ ॥

---

೨೦. ದೇವತೆಗಳು ಹೇಳುತ್ತಾರೆ:—"ಎಲೈ ಮಹಾಶೈಲನಾದ ಮಂದರಗಿರಿಯೇ! ಈ ದಾನವರೂ, ನಾವೂ ಎಲ್ಲರೂ ನಿನ್ನಲ್ಲಿ ಒಂದು ವಿಷಯವನ್ನು ಅರಿಕೆಮಾಡಿಕೊಳ್ಳಲು ಬಂದಿರುವೆವು. ಪರೋಪಕಾರಿಯಾದ ನೀನು ಅದನ್ನು ಲಾಲಿಸಬೇಕು."

೨೧–೨೪. ದೇವದಾನವರಿಂತೆನಲು, ಮಂದರಗಿರಿಯು ಮೂರ್ತಿಮತ್ತಾಗಿ ಕಣ್ಗೊಳಿಸಿ ಮೇಲಕ್ಕೆ ಬಂದು, ಸಮಯಕ್ಕೆ ತಕ್ಕಂತೆ ಅವರೆಲ್ಲರನ್ನೂ ಕುರಿತು, "ಅಯ್ಯಾ! ನೀವೆಲ್ಲರೂ ಈಗ ನನ್ನಲ್ಲಿಗೆ ಬಂದಿರುವುದೇಕೆಂಬ ವಿಷಯವನ್ನು ಹೇಳಿರಿ" ಎಂದನು. ಆಗ ಬಲಿಯೂ, ಇಂದ್ರನೂ ಏಕಕಂಠದಿಂದ ಸಮಯಕ್ಕೆ ತಕ್ಕಂತೆಯೇ ಆ ಗಿರಿರಾಜನನ್ನು ಕುರಿತು ಬಹುಮಾನಪೂರ್ವಕವಾಗಿ, "ಅಯ್ಯಾ ಮಂದರಗಿರಿಯೇ! ಈಗ ನೀನು ನಮ್ಮ ಕಾರ್ಯಸಿದ್ಧಿಗೆ ಸಹಾಯಕನಾಗಬೇಕು. ಅಮೃತವನ್ನು ಸಂಪಾದಿಸಲು ನಾವೆಸಗುವ ಕ್ಷೀರಸಾಗರಮಥನಕ್ಕೆ ನೀನು ಕಡಗೋಲಾಗಿ ಉಪಕಾರಮಾಡು" ಎಂದರು.

೨೫–೨೬. ಆಗ ಮಂದರಾದ್ರಿಯು ಹಾಗೆಯೇ ಆಗಲೆಂದು ಆ ದೇವತೆಗಳ ಕಾರ್ಯಸಿದ್ಧಿಗೆ ನೆರವಾಗಲೊಪ್ಪಿ ಅಲ್ಲಿದ್ದ ದೇವದಾನವರನ್ನು, ಅವರಲ್ಲಿಯೂ ಮುಖ್ಯವಾಗಿ ದೇವೇಂದ್ರನನ್ನು ಕುರಿತು, ಎಲೈ ದೇವೇಂದ್ರನೇ! ಪೂರ್ವದಲ್ಲಿ ನೀನು ಶತಪರ್ವಸಮನ್ವಿತವಾದ ವಜ್ರಾಯುಧದಿಂದ ನನ್ನ ರೆಕ್ಕೆಗಳನ್ನು ಕತ್ತರಿಸಿ

ತದಾ ದೇವಸುರಾಃ ಸರ್ವೇ ಸ್ತೂಯಮಾನಾ ಮಹಾಚಲಂ ।
ಉತ್ಪಾಟಯೋಯುರತುಲಂ ಮಂದರಂ ಚ ತತೋಽದ್ಭುತಂ ॥ ೭೭ ॥
ಕ್ಷೀರಾರ್ಣವಂ ನೇತುಕಾಮಾಹ್ಯಶಕ್ತಾಸ್ತೇ ತತೋಽಭವನ್ ।
ಪರ್ವತಃ ಪತಿತಃ ಸದ್ಯೋ ದೇವದೈತ್ಯೋಪರಿ ಧ್ರುವಂ ॥ ೭೮ ॥
ಕೇಚಿದ್ಭಗ್ನಾ ಮೃತಾಃ ಕೇಚಿತ್ಕೇಚಿನ್ಮೂರ್ಛಾಪರಾಽಭವನ್ ।
ಪರೀವಾದರತಾಃ ಕೇಚಿತ್ಕೇಚಿತ್ಕ್ಲೇಶತ್ವಮಾಗತಾಃ ॥ ೭೯ ॥
ಏವಂ ಭಗ್ನೋದ್ಯಮಾ ಜಾತಾ ಅಸುರಾಃ ಸುರದಾನವಾಃ ।
ಚಿಂತಾಂ ಚ ಪರಮಾಂ ಪ್ರಾಪ್ತಾಸ್ತುಷ್ಟುವುರ್ಜಗದೀಶ್ವರಂ ॥ ೮೦ ॥
ರಕ್ಷ ರಕ್ಷ ಮಹಾವಿಷ್ಣೋ ಶರಣಾಗತವತ್ಸಲ ।
ತ್ವಯಾ ತತಮಿದಂ ಸರ್ವಂ ಜಂಗಮಾಜಂಗಮಂ ಚ ಯತ್ ॥ ೮೧ ॥
ದೇವಾನಾಂ ಕಾರ್ಯಸಿದ್ಧ್ಯರ್ಥಂ ಪ್ರಾದುರ್ಭೂತೋ ಹರಿಸ್ತದಾ ।
ತಾನ್ ದೃಷ್ಟ್ವಾ ಸಹಸಾ ವಿಷ್ಣುರ್ಗರುಡೋಪರಿ ಸಂಸ್ಥಿತಃ ॥ ೮೨ ॥
ಲೀಲಯಾ ಪರ್ವತಶ್ರೇಷ್ಠಮುತ್ಥಾಪ್ಯಾರೋಪಯತ್ ಕ್ಷಣಾತ್ ।
ಗರುತ್ಮತಿ ತದಾ ದೇವಃ ಸರ್ವೇಷಾಮಭಯಂ ದದೌ ॥ ೮೩ ॥

---

ಹಾಕಿದೆ. ಅಂತಹ ನಾನು ಈ ಸಮಯದಲ್ಲಿ ನಿಮ್ಮ ಕಾರ್ಯಸಿದ್ಧಿಗಾಗಿ ಹೇಗೆ ತಾನೆ ಬರಲು ಸಮರ್ಥನಾದೇನು? ಎಂದು ಹೇಳಿದನು.

೭೭–೮೦. ಹೀಗೆ ಅಂತು ಇಂತು ಆ ಪರ್ವತರಾಜನು ಸಹಾಯವೆಸಗಲೊಪ್ಪಿದ ಬಳಿಕ ಆ ದೇವದಾನವರೆಲ್ಲರೂ ಅವನನ್ನು ಕೊಂಡಾಡಿದರು. ಆಮೇಲೆ ಅವರೆಲ್ಲರೂ ಒಗ್ಗೂಡಿ ಮಹಾಪರ್ವತವಾದ ಆ ಮಂದರವನ್ನೆತ್ತಿ ಕ್ಷೀರಸಮುದ್ರಕ್ಕೊಯ್ಯಲು ಪ್ರಯತ್ನಿಸಿ, ಹಾಗೆ ಮಾಡಲು ಅಸಮರ್ಥರಾದರು. ಅವರು ಮೇಲಕ್ಕೆತ್ತಿದ ಆ ಗಿರಿಯು ಅವರೆಲ್ಲರಮೇಲೂ ಬಲವಾಗಿ ಬಿದ್ದಿತು. ಆಗ ಕೆಲವರಿಗೆ ಕೈಕಾಲುಗಳೇ ಮುರಿಯಿತು; ಕೆಲವರು ಮಡಿದೇ ಹೋದರು. ಕೆಲವರು ಮೂರ್ಛೆಯೊಂದಿದರು. ಕೆಲವರು ಮಾತ್ರ ಆ ಪರ್ವತವನ್ನು ಬಯ್ಯತೊಡಗಿದರು. ಹೀಗೆ ಆ ದೇವದಾನವರೆಲ್ಲರೂ ತಮ್ಮ ಪ್ರಯತ್ನವು ವಿಫಲವಾಗಲು ಎಚ್ಚೆತ್ತುಕೊಂಡು ಜಗದೀಶ್ವರನಾದ ವಿಷ್ಣುವನ್ನು ಈ ರೀತಿ ಸ್ತುತಿಸಿದರು.

೮೧–೮೩. "ಎಲೈ ವಿಷ್ಣುವೇ! ಶರಣಾಗತವತ್ಸಲನೇ!! ನಮ್ಮನ್ನು ಕಾಪಾಡು ಕಾಪಾಡು! ಸ್ಥಾವರಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ನಿನ್ನಿಂದಲೇ ವ್ಯಾಪ್ತವಾಗಿರುವುದಲ್ಲವೆ!" ಆಗ ಶ್ರೀಹರಿಯು ದೇವತೆಗಳ ಕಾರ್ಯಸಿದ್ಧಿಗಾಗಿ ಅಲ್ಲಿಯೇ ಕಣ್ಗೊಳಿಸಿ ಅವರನ್ನು ನೋಡಿ ತರುವಾಯ ಒಂದು ಕ್ಷಣಮಾತ್ರದಲ್ಲಿಯೇ ಬಹು ಸುಲಭವಾಗಿ ಆ ಮಂದರಾದ್ರಿಯನ್ನು ಮೇಲಕ್ಕೆತ್ತಿ ಗರುಡನ ಮೇಲಿಟ್ಟು ಎಲ್ಲರಿಗೂ ಅಭಯವನ್ನಿತ್ತನು.

ತತ ಉತ್ಥಾಯ ತಂ ದೇವೋ ಕ್ಷೀರೋದಸ್ಯೋತ್ತರಂ ತಟಂ ।
ನೀತ್ವಾ ತಂ ಪರ್ವತಂ ವೃದ್ಧಂ ನಿಕ್ಷಿಪ್ಯಾಪ್ಸು ತತೋ ಯಯೌ ॥ ೮೪ ॥
ತದಾ ಸರ್ವೇ ಸುರಗಣಾಃ ಸಮಾಗತ್ಯಾಸುರೈಃ ಸಹ ।
ವಾಸುಕಿಂಚ ಸಮಾದಾಯ ಚಕ್ರಿರೇ ಸಮಯಂಚ ತಂ ॥ ೮೫ ॥
ಮಂಥಾನಂ ಮಂದರಂ ಚೈವ ವಾಸುಕಿಂ ರಜ್ಜುಮೇವಚ ।
ಕೃತ್ವಾ ಸುರಾಽಸುರಾಃ ಸರ್ವೇ ಮಮಂಥುಃ ಕ್ಷೀರಸಾಗರಂ ॥ ೮೬ ॥
ಕ್ಷೀರಾಬ್ಧೇರ್ಮಥ್ಯಮಾನಸ್ಯ ಪರ್ವತೋ ಹಿ ರಸಾತಲಂ ।
ಗತಃ ಸ ತಕ್ಷಣಾದೇವ ಕೂರ್ಮೋ ಭೂತ್ವಾ ರಮಾಪತಿಃ ।
ಉದ್ಧೃತಸ್ತತ್ಕ್ಷಣಾದೇವ ತದದ್ಭುತಮಿವಾಭವತ್ ॥ ೮೭ ॥
ಭ್ರಾಮ್ಯಮಾಣಸ್ತತಃ ಶೈಲೋ ನೋದಿತಃ ಸುರದಾನವೈಃ ।
ಭ್ರಮಮಾಣೋ ನಿರಾಧಾರೋ ಬೋಧಶ್ಚೇವ ಗುರುಂ ವಿನಾ ॥ ೮೮ ॥
ಪರಮಾತ್ಮಾ ತದಾ ವಿಷ್ಣುರಾಧಾರೋ ಮಂದರಸ್ಯಚ ।
ದೋರ್ಭಿಶ್ಚತುರ್ಭಿಃ ಸಂಗೃಹ್ಯ ಮಮಂಥಾಬ್ಧಿಂ ಸುಖಾವಹಂ ॥ ೮೯ ॥
ತದಾ ಸುರಾಸುರಾಸ್ಸರ್ವೇ ಮಮಂಥುಃ ಕ್ಷೀರಸಾಗರಂ ।
ಏಕೀಭೂತ್ವಾ ಬಲೇನೈವಮತಿಮಾತ್ರಂ ಬಲೋತ್ಕಟಾಃ ॥ ೯೦ ॥

---

೮೪. ತರುವಾಯ ಆ ಸ್ವಾಮಿಯು ಬಹಳ ಹಳದಾದ ಆ ಮಂದರಗಿರಿಯನ್ನು ಕ್ಷೀರಸಾಗರದ ತೀರಕ್ಕೆ ಕೊಂಡೊಯ್ದು ನೀರಿನಲ್ಲಿರಿಸಿ ಹೊರಟುಹೋದನು.

೮೫–೮೭. ಆಮೇಲೆ ಆ ದೇವಸಮೂಹದವರೆಲ್ಲರೂ ದಾನವರೊಡನೆ ಹೊರಟು ವಾಸುಕಿಯ ಬಳಿಗೈದಿ ಅವನನ್ನೊಪ್ಪಿಸಿ ಹೊತ್ತು ತಂದರು; ಮಂದರವನ್ನು ಕಡಗೋಲನ್ನಾಗಿಯೂ, ವಾಸುಕಿಯನ್ನು ಹಗ್ಗವನ್ನಾಗಿಯೂ ಮಾಡಿಕೊಂಡು ಕ್ಷೀರಸಾಗರವನ್ನು ಮಥಿಸತೊಡಗಿದರು. ಸಮುದ್ರವನ್ನು ಮಥಿಸಲಾರಂಭಿಸಿದೊಡನೆಯೇ ಕಡಗೋಲಾಗಿದ್ದ ಮಂದರಗಿರಿಯು ಕ್ಷಣಮಾತ್ರದಲ್ಲಿಯೇ ರಸಾತಲಕ್ಕೆ ಹೊರಟುಹೋಯಿತು. ಆ ಕೂಡಲೇ ಲಕ್ಷ್ಮೀಪತಿಯಾದ ಶ್ರೀಮನ್ನಾರಾಯಣನು ಕಮಠ ರೂಪವನ್ನು ತಾಳಿ ಅದನ್ನು ಮೇಲಕ್ಕೆತ್ತಿದನು. ಆ ಕಾರ್ಯವು ಪರಮಾಶ್ಚರ್ಯಕರವಾಗಿ ಪರಿಣಮಿಸಿತು.

೮೮–೯೦. ತರುವಾಯ ದೇವ ದೈತ್ಯರೆಲ್ಲರೂ ಕಡಲನ್ನು ಕಡೆಯುತ್ತಿರಲು ನಿರಾಧಾರವಾದ ಆ ಪರ್ವತವು, ಗುರುವಿಲ್ಲದ ತಿಳಿವಿನಂತೆ ಅತ್ತಿತ್ತ ತಿರುಗಲಾರಂಭಿಸಿತು. ಆಗ ಪರಮಾತ್ಮನಾದ ಶ್ರೀಮನ್ಮಹಾವಿಷ್ಣುವು ಆ ಪರ್ವತಕ್ಕೆ ಆಧಾರವಾಗಿ ನಿಂತು ತನ್ನ ನಾಲ್ಕೂ ತೋಳುಗಳಿಂದದನ್ನು ಬಹು ಲೀಲಾಜಾಲವಾಗಿ ತಬ್ಬಿ ಹಿಡಿದು ಕ್ಷೀರಸಾಗರವನ್ನು ಮಥಿಸಿದನು. ಆಗ ಸುರಾಸುರರೆಲ್ಲರೂ ಒಟ್ಟುಗೂಡಿ ತಮ್ಮ ಬಲವನ್ನೆಲ್ಲ ಬಿಟ್ಟು ಆ ಸಾಗರವನ್ನು ಕಡೆಯತೊಡಗಿದರು.

ಪೃಷ್ಠಕಂಠೋರು ಜಾನ್ವಂತಃ ಕಮಠಸ್ಯ ಮಹಾತ್ಮನಃ ।
ತಥಾಽಸೌ ಪರ್ವತಶ್ರೇಷ್ಠೋ ವಜ್ರಸಾರಮಯೋ ದೃಢಃ ।
ಉಭಯೋರ್ಘರ್ಷಣಾದೇವ ಬಡವಾಗ್ನಿಃ ಸಮುತ್ಥಿತಃ ॥ ೯೧ ॥
ಹಲಾಹಲಂ ಚ ಸಂಜಾತಂ ತದ್ದೃಷ್ಟ್ವಾ ನಾರದೇನ ಹಿ ।
ತತೋ ದೇವಾನುವಾಚೇದಂ ದೇವರ್ಷಿರಮಿತದ್ಯುತಿಃ ॥ ೯೨ ॥
ನ ಕಾರ್ಯಂ ಮಥನಂ ಚಾಬ್ಧೇರ್ಭವದ್ಭಿರಧುನಾಽಖಿಲೈಃ ।
ಪ್ರಾರ್ಥಯಧ್ವಂ ಶಿವಂ ದೇವಾಃ ಸರ್ವೇ ದಕ್ಷಸ್ಯ ಯಾಜನಂ ।
ತದ್ವಿಸ್ಮೃತಂ ಚ ವೋ ಯಾತಂ ವೀರಭದ್ರೇಣ ಯತ್ಕೃತಂ ॥ ೯೩ ॥

ತಸ್ಮಾಚ್ಛಿವಃ ಸ್ಮರ್ಯತಾಂ ಚಾಶು ದೇವಾಃ
ಪರಃ ಪರಾಣಾಮಪಿ ವಾಽಪರಶ್ಚ ।
ಪರಾತ್ಪರಃ ಪರಮಾನಂದ ರೂಪೋ
ಯೋಗಿಧ್ಯೇಯೋ ನಿಷ್ಪ್ರಪಂಚೋ ಹ್ಯರೂಪಃ ॥ ೯೪ ॥

ತೇ ಮಥ್ಯಮಾನಾಸ್ತ್ವರಿತಾ ದೇವಾಃ ಸ್ವಾತ್ಮಾರ್ಥಸಾಧಕಾಃ ।
ಅಭಿಲಾಷಪರಾಃ ಸರ್ವೇ ನ ಶೃಣ್ವಂತಿ ಯತೋ ಜಡಾಃ ॥ ೯೫ ॥

---

೯೧–೯೪. ಆಗಲಾದರೋ ಬಹಳ ದೊಡ್ಡ ದೇಹವುಳ್ಳ ಆ ಕಮಠ ಮೂರ್ತಿಯ ಬೆನ್ನು, ಕುತ್ತಿಗೆ, ಜಾನು ಪ್ರದೇಶಗಳೂ, ಪರ್ವತೋತ್ತಮವಾದ ಮಂದರವೂ ವಜ್ರಾಯುಧದಂತೆ ಅತ್ಯಂತ ಕಠಿನವಾಗಿದ್ದುದರಿಂದ ಅವೆರಡರ ಘರ್ಷಣದಿಂದ ದಳ್ಳುರಿಯೆದ್ದಿತು. ಅಂತೆಯೇ ಹಾಲಾಹಲ ವಿಷವೂ ಹುಟ್ಟಿತು. ಅದನ್ನು ಕಂಡು ದೇವರ್ಷಿಯಾದ ನಾರದನು ದೇವತೆಗಳನ್ನು ಕುರಿತು, "ಅಯ್ಯಾ! ಈಗ ನೀವು ಈ ಸಮುದ್ರಮಥನವನ್ನು ನಿಲ್ಲಿಸಿ ಪರಶಿವನನ್ನು ಸ್ತುತಿಸಿ, ಪ್ರಾರ್ಥಿಸಿರಿ. ಎಲೈ! ನೀವು ಆ ಶಿವನನ್ನು ಬಿಟ್ಟು ಈ ಕಾರ್ಯವನ್ನೆಸಗುತ್ತಿರುವಿರಿ. ಹಿಂದೆ ದಕ್ಷಬ್ರಹ್ಮನ ಯಾಗದಲ್ಲಿ ವೀರಭದ್ರನು ಮಾಡಿದ ಅದ್ಭುತವೆಲ್ಲವನ್ನೂ ನೀವು ಆಗಲೇ ಮರೆತುಹೋದಿರೇನು? ಆದುದರಿಂದೆಲೈ ದೇವತೆಗಳಿರಾ! ಎಲ್ಲರಿಗಿಂತಲೂ ಶ್ರೇಷ್ಠನಾದವನೂ, ಪರಾತ್ಪರನೂ, ಪರಮಾನಂದ ಸ್ವರೂಪನೂ, ಯೋಗಿಗಳಿಂದ ಧ್ಯಾನಿಸಲ್ಪಟ್ಟವನೂ, ಪ್ರಪಂಚದೂರನೂ, ನಿರಾಕಾರನೂ ಆದ ಆ ಸದಾಶಿವನನ್ನು ಜಾಗ್ರತೆಯಾಗಿ ಸ್ಮರಿಸಿರಿ; ಪ್ರಾರ್ಥಿಸಿರಿ; ಪೂಜಿಸಿರಿ" ಎಂದು ಹೇಳಿದನು.

೯೫. ಪೂಜ್ಯನಾದ ನಾರದಮಹರ್ಷಿಯು ಈ ರೀತಿ ಹಿತೋಕ್ತಿಯನ್ನಾಡಿದರೂ ಸಹ, ಕೇವಲ ಸ್ವಾರ್ಥವನ್ನೇ ಸಾಧಿಸುವದರಲ್ಲಿ ತೊಡಗಿ ಸಮುದ್ರವನ್ನು ಕಡೆಯುತ್ತಿದ್ದವರೂ, ಅಭಿಲಾಷೆಯೊಡಗೂಡಿದವರೂ, ಸೋಂಬರೂ ಆದ ಆ ದೇವತೆಗಳು ಅದನ್ನು ಕಿವಿಗೆ ಹಾಕಿಕೊಳ್ಳಲಿಲ್ಲವು.

ಉಪದೇಶೈಶ್ಚ ಬಹುಭಿರ್ನೋಪದೇಶ್ಯಾಃ ಕದಾಚನ ।
ತೇ ರಾಗ ದ್ವೇಷಸಂಘಾತಾಃ ಸರ್ವೇ ಶಿವಪರಾಙ್ಮುಖಾಃ ॥ ೯೬ ॥
ಕೇವಲೋದ್ಯಮಸಂವೀತಾ ಮಮಂಥುಃ ಕ್ಷೀರಸಾಗರಂ ।
ಅತಿನಿರ್ಮಥನಾಜ್ಜಾತಂ ಕ್ಷೀರಾಬ್ಧೇಶ್ಚ ಹಲಾಹಲಂ ॥ ೯೭ ॥
ತ್ರೈಲೋಕ್ಯದಹನೇ ಪ್ರೌಢಂ ವ್ಯಾಪ್ತಂ ಹಂತುಂ ದಿವೌಕಸಃ ।
ಅಥ ಊರ್ಧ್ವಂ ದಿಶಃ ಸರ್ವಾ ವ್ಯಾಪ್ತಂ ಕೃತ್ಸ್ನಂ ನಭಸ್ಥಲಂ ।
ಗ್ರಸಿತುಂ ಸರ್ವಭೂತಾನಾಂ ಕಾಲಕೂಟಂ ಸಮುಥ್ಯಯಾತ್ ॥ ೯೮ ॥

ದೃಷ್ಟ್ವಾ ಬೃಹಂತಂ ಸ್ವಕರಸ್ಥಮೋಜಸಾ
ತಂ ಸರ್ಪರಾಜಂ ಸಹಪರ್ವತೇನ ।
ತತ್ರೈವ ಹಿತ್ವಾ ಪ್ರಯಯುಸ್ತದಾನೀಂ
ಪಲಾಯಮಾನಾಹ್ಯಸುರೈಃ ಸಮೇತಾಃ ॥ ೯೯ ॥

ತಥೈವ ಸರ್ವಋಷಯೋ ಭೃಗ್ವಾದ್ಯಾಃ ಶತಶಸ್ತತಃ ।
ದಕ್ಷಸ್ಯ ಯಜನಂ ತೇನ ಯಥಾ ಜಾತಂ ತಥಾಭವತ್ ॥ ೧೦೦ ॥

---

೯೬. ರಾಗದ್ವೇಷಗಳ ಗುಂಪಿನಿಂದ ಕೂಡಿ, ಶಿವನ ವಿಷಯದಲ್ಲಿ ಪರಾಙ್ಮುಖರಾಗಿರುವವರಿಗೆ, ಯಾರೂ ಯಾವ ಉಪದೇಶವನ್ನೂ ಮಾಡಬಾರದು.

೯೭. ಅಯ್ಯಾ ಮುನಿಗಳಿರಾ! ಹೀಗೆ ಆ ದೇವತೆಗಳು ನಾರದನ ನುಡಿಯನ್ನು ಕೇಳದೆ ಆ ಕ್ಷೀರಸಾಗರವನ್ನು ನಿಷ್ಪ್ರಯೋಜನವಾಗಿ ಕಡೆಯುವ ಪ್ರಯತ್ನದಲ್ಲಿಯೇ ತೊಡಗಿದರು.

೯೮. ಬಹಳವಾಗಿ ಕಡೆಯುವಿಕೆಯಿಂದ, ಮೂರು ಲೋಕಗಳನ್ನೂ ಸುಡಲು ಸಮರ್ಥವಾದ ಹಾಲಾಹಲ ವಿಷವು ದೇವತೆಗಳೆಲ್ಲರನ್ನೂ ಸಂಹರಿಸಲು ಆ ಕ್ಷೀರಸಾಗರದಿಂದ ಹುಟ್ಟಿಬಂದಿತು. ಆ ಮಹಾ ವಿಷವು ದಶದಿಶೆಗಳನ್ನೂ, ಗಗನತಲವನ್ನೂ, ಸಮಸ್ತ ಭೂತಗಳನ್ನೂ, ಕಡೆಗೆ ಸಮಸ್ತ ಪ್ರಪಂಚವನ್ನೂ ಕಬಳಿಸುವುದಾಗಿ ಅಟ್ಟಿ ಬಂದಿತು.

೯೯. ಆಗಲಾ ದೇವತೆಗಳು, ಈ ರೀತಿ ಎತ್ತೆತ್ತಲೂ ಹರಡಿ ಅಟ್ಟಿಬರುತ್ತಿರುವ ಮಹಾ ಕಾಲಕೂಟವನ್ನು ಕಂಡು ತಮ್ಮ ಕೈಯಲ್ಲಿದ್ದ ವಾಸುಕಿಯನ್ನೂ ಪರ್ವತವನ್ನೂ ಅಲ್ಲಿಯೇ ತೊರೆದು ಅಸುರರೊಡಗೂಡಿ ಪಲಾಯನವಾಗಿ ಹೋದರು.

೧೦೦. ಅಂತೆಯೇ ಭೃಗುವೇ ಮೊದಲಾದ ನೂರಾರು ಋಷಿಗಳೂ ಆ ಸ್ಥಳವನ್ನು ಬಿಟ್ಟು ಓಡಿಹೋದರು. ಅಂತು ಪೂರ್ವದಲ್ಲಿ ದಕ್ಷನ ಯಾಗವೆಂತೋ ಅಂತೆಯೇ ಶಿವನನ್ನುಳಿದು ಮಾಡಿದ ಸಮುದ್ರಮಥನವೂ ಭಗ್ನವಾಯಿತು.

**ಸತ್ಯಲೋಕಂ ಗತಾಃ ಸರ್ವೇ ಭೃಗುಣಾ ನೋದಿತಾ ಭೃಶಂ ।**
**ವೇದವಾಕ್ಯೈಶ್ಚ ವಿವಿಧೈಃ ಕಾಲಕೂಟಂ ಪ್ರಶಾಮ್ಯತಿ ।**
**ದೇವಾ ನಾಸ್ತ್ಯತ್ರ ಸಂದೇಹಃ ಸತ್ಯಂ ಸತ್ಯಂ ವದಾಮಿ ವಃ ॥ ೧೦೧ ॥**
**ಭೃಗುಣೋಕ್ತಂ ವಚಃ ಶೃತ್ವಾ ಕಾಲಕೂಟವಿಷಾರ್ದಿತಾಃ ।**
**ಸತ್ಯಲೋಕಂ ಸಮಾಸಾದ್ಯ ಬ್ರಹ್ಮಾಣಂ ಶರಣಂ ಯಯುಃ ॥ ೧೦೨ ॥**
**ತದಾ ಜಾಜ್ವಲ್ಯಮಾನಂ ವೈ ಕಾಲಕೂಟಂ ಪ್ರಭೋಜ್ಜ್ವಲಂ ।**
**ದೃಷ್ಟ್ವಾ ಬ್ರಹ್ಮಾಥ ತಾನ್ದೃಷ್ಟ್ವಾ ಹ್ಯಕಾರ್ಯಜ್ಞಾನ್ಸುರಾಸುರಾನ್ ।**
**ತೇಷಾಂ ಶಪಿತುಮಾರೇಭೇ ನಾರದೇನ ನಿವಾರಿತಃ ॥ ೧೦೩ ॥**

ಬ್ರಹ್ಮೋವಾಚ :—

**ಅಕಾರ್ಯಂ ಕಿಂ ಕೃತಂ ದೇವಾಃ ಕಸ್ಮಾತ್ ಕ್ಷೋಭೋಯಮುದ್ಯತಃ ।**
**ಈಶ್ವರಸ್ಯ ಚ ಜಾತೋಽದ್ಯ ನಾನ್ಯಥಾ ಮಮ ಭಾಷಿತಂ ॥ ೧೦೪ ॥**
**ತತೋ ದೇವೈಃ ಪರಿವೃತೋ ವೇದೋಪನಿಷದೈಸ್ತಥಾ ।**
**ನಾನಾಗಮೈಃ ಪರಿವೃತಃ ಕಾಲಕೂಟ ಭಯಾದ್ಯಯೌ ॥ ೧೦೫ ॥**

---

೧೦೧–೧೦೨. ಆಗ ಭೃಗುವು "ಎಲೈ ದೇವತೆಗಳಿರಾ! ಬಗೆಬಗೆಯ ವೇದ ವಾಕ್ಯಗಳಿಂದ ಈ ಕಾಲಕೂಟ ಮಹಾವಿಷವು ಶಾಂತವಾಗುತ್ತದೆ. ಇದೋ ನಾನು ಈ ವಿಷಯವನ್ನು ಸತ್ಯವಾಗಿ ಹೇಳುತ್ತಿದ್ದೇನೆ ಕೇಳಿರಿ" ಎಂದು ಬಹಳ ವಾಗಿ ಆ ದೇವತೆಗಳನ್ನು ಪ್ರೇರೇಪಿಸಲು, ಅವರೆಲ್ಲರೂ ಸತ್ಯಲೋಕಕ್ಕೆ ಬಂದರು. ಹೀಗೆ ಕಾಲಕೂಟದ ಹಿಂಸೆಗೊಳಗಾದ ಆ ದೇವತೆಗಳು ಭೃಗುವಿನ ಮಾತಿನಂತೆ ಸತ್ಯಲೋಕಕ್ಕೆ ಬಂದು ಬ್ರಹ್ಮನನ್ನು ಮೊರೆಹೊಕ್ಕರು.

೧೦೩. ಆಗ ಬ್ರಹ್ಮದೇವನು, ಪ್ರಭೆಯಿಂದ ಉಜ್ಜ್ವಲವಾಗಿ ಧಗಧಗ ನುರಿಯುತ್ತಿರುವ ಕಾಲಕೂಟ ವಿಷವನ್ನೂ, ಅದರ ಹಿಂಸೆಗೊಳಗಾದ ಕಾರ್ಯಾ ಕಾರ್ಯವನ್ನರಿಯದ ಅಜ್ಞಾನಿಗಳಾದ ಆ ದೇವತೆಗಳನ್ನೂ ಕಂಡು ಕೂಡಲೇ ಅವರನ್ನು ಶಪಿಸುವುದರಲ್ಲಿರಲು, ನಾರದನು ಹಾಗೆ ಶಪಿಸಕೂಡದೆಂದು ಆತನನ್ನು ತಡೆದನು.

೧೦೪–೧೦೫. ಆಗ ಬ್ರಹ್ಮನು ಹೇಳುತ್ತಾನೆ:—"ಎಲೈ ದೇವತೆಗಳಿರಾ! ನೀವೆಂತಹ ಅಕಾರ್ಯವನ್ನು ಮಾಡಿದಿರಿ! ಈ ಕ್ಷೋಭೆಯು ಯಾರ ದೆಸೆಯಿಂದುಂಟಾಗಿರುವುದೆಂಬುದನ್ನು ನೀವು ಬಲ್ಲಿರಾ? ಇದು ಖಂಡಿತವಾಗಿಯೂ ಆ ಪರಮೇಶ್ವರನಿಂದಲೇ ಉಂಟಾಗಿರುವುದು. ನನ್ನ ಮಾತು ಸುಳ್ಳಲ್ಲ." ಇಂತು ನುಡಿದ ಬಳಿಕ, ಆ ಕಮಲಾಸನನು ಆ ಕಾಲಕೂಟ ಭಯದಿಂದ ತಾನೂ ಸಹ ಕೂಡಲೇ ವೇದೋಪನಿಷತ್ತುಗಳನ್ನೂ, ಬಗೆಬಗೆಯ ಆಗಮಗಳನ್ನೂ ತೆಗೆದು ಕೊಂಡು ಆ ದೇವತೆಗಳೊಡನೆಯೇ, ಸತ್ಯಲೋಕವನ್ನು ತೊರೆದು ಹೊರಟನು.

**ತತಶ್ಚಿಂತಾನ್ವಿತಾ ದೇವಾ ಇದಮೂಚುಃ ಪರಸ್ಪರಂ ।**
**ಅವಿದ್ಯಾಕಾಮಸಂವೀತಾಃ ಕುರ್ಯಾಮಃ ಶಂಕರಂ ಚ ಕಂ ॥ ೧೦೬ ॥**
**ಬ್ರಹ್ಮಾಣಂ ಚ ಪುರಸ್ಕೃತ್ಯ ತದಾ ದೇವಾಸ್ತ್ವರಾನ್ವಿತಾಃ ।**
**ವೈಕುಂಠಮಾಗಮನ್ಸರ್ವೇ ಕಾಲಕೂಟಭಯಾರ್ದಿತಾಃ ॥ ೧೦೭ ॥**

**ಬ್ರಹ್ಮಾದಯಶ್ಚರ್ಷಿಗಣಾಶ್ಚ ತದಾ ಪರೇಶಂ**
**ವಿಷ್ಣುಂ ಪುರಾಣಪುರುಷಂ ಪ್ರಭವಿಷ್ಣುಮೀಶಂ ।**
**ವೈಕುಂಠಮಾಶ್ರಿತಮಧೋಕ್ಷಜಮಾಧವಂ ತೇ**
**ಸರ್ವೇ ಸುರಾಸುರಗಣಾಃ ಶರಣಂ ಪ್ರಯಾತಾಃ ॥ ೧೦೮ ॥**

**ತಾವತ್ಪ್ರವೃದ್ಧಂ ಸುಮಹತ್ಕಾಲಕೂಟಂ ಸಮಭ್ಯಯಾತ್ ।**
**ದಗ್ಧ್ವಾಥೋ ಬ್ರಹ್ಮಣೋ ಲೋಕಂ ವೈಕುಂಠ ಚ ದದಾಹ ವೈ ॥ ೧೦೯ ॥**
**ಕಾಲಕೂಟಾಗ್ನಿನಾ ದಗ್ಧೋ ವಿಷ್ಣುಃ ಸರ್ವಗುಹಾಶಯಃ ।**
**ಪಾರ್ಷದ್ಯೈಃ ಸಹಿತಃ ಸದ್ಯಸ್ತಮಾಲಸದೃಶಚ್ಛವಿಃ ॥ ೧೧೦ ॥**
**ವೈಕುಂಠಂ ಚ ಸುನೀಲಂ ಚ ಸರ್ವಲೋಕೈಃ ಸಮಾವೃತಂ ।**
**ಜಲಕಲ್ಮಷಸಂವೀತಾಃ ಸರ್ವೇ ಲೋಕಾಸ್ತದಾಭವನ್ ॥ ೧೧೧ ॥**

---

೧೦೬–೧೦೭. ಆಗ ದೇವತೆಗಳೆಲ್ಲರೂ ಚಿಂತೆಗೊಳಗಾಗಿ ತಂತಮ್ಮಲ್ಲಿಯೇ "ಅಕ್ಕಟಾ! ಕೇವಲ ಅಜ್ಞಾನದಿಂದಲೂ ಕಾಮದಿಂದಲೂ ಕೂಡಿದ ನಾವು ಮಂಗಳ ಕರವಾದ ಯಾವ ಕಾರ್ಯವನ್ನುತಾನೆ ಮಾಡಿಯೇವು" ಎಂದುಕೊಂಡರು. ತರುವಾಯ ಅವರೆಲ್ಲರೂ ಆ ಕಾಲಕೂಟಭಯದಿಂದ ಪೀಡಿತರಾಗಿ ಬ್ರಹ್ಮದೇವ ನನ್ನು ಮುಂದಿರಿಸಿಕೊಂಡು ಬಹಳ ಜಾಗ್ರತೆಯಾಗಿಯೇ ವೈಕುಂಠಕ್ಕೆ ಬಂದರು.

೧೦೮. ಹೀಗೆ ವೈಕುಂಠಕ್ಕೆ ಬಂದ ಬ್ರಹ್ಮಾದಿಗಳೂ, ಋಷಿಸಮೂಹಗಳೂ, ಸುರಾಸುರ ಸಮೂಹಗಳೂ, ಪರೇಶನಾಗಿಯೂ, ಪುರಾಣಪುರುಷನಾಗಿಯೂ, ಪ್ರಭಾವಶಾಲಿಯಾಗಿಯೂ, ಈಶ್ವರನಾಗಿಯೂ, ವೈಕುಂಠವಾಸಿಯಾಗಿಯೂ, ಅಧೋಕ್ಷಜನೂ, ಲಕ್ಷ್ಮೀರಮಣನೂ ಆಗಿಯೂ ಇರುವ ಶ್ರೀಮನ್ಮಹಾವಿಷ್ಣು ವನ್ನು ಮೊರೆಹೊಕ್ಕರು.

೧೦೯–೧೧೧. ಅಷ್ಟರಲ್ಲಿಯೇ ಆ ಕಾಲಕೂಟ ಮಹಾವಿಷವು ಬಹಳವಾಗಿ ಹೆಚ್ಚಿ ಎತ್ತೆತ್ತಲೂ ಮುತ್ತಿ ಬಂದು ಭೂಲೋಕವನ್ನು ಸುಟ್ಟು, ಆ ತರುವಾಯ ಬ್ರಹ್ಮಲೋಕವನ್ನೂ, ಕಡೆಗೆ ವೈಕುಂಠಲೋಕವನ್ನೂ ಸುಟ್ಟಿತು. ಸಮಸ್ತ ಭೂತಗಳ ಹೃದಯನಿವಾಸಿಯಾದ ವಿಷ್ಣುವೂ ಸಹ, ತನ್ನ ಸೇವಕರೊಡನೆ ಆ ಕಾಲಕೂಟಾಗ್ನಿಯಿಂದ ಸುಡಲಾದವನಾಗಿ ತಮಾಲಸಮಾನವಾದ ನೀಲ ಕಾಂತಿಯುಳ್ಳವನಾದನು. ವೈಕುಂಠವೂ ನೀಲವರ್ಣವಾಯಿತು. ಸಮಸ್ತ ಲೋಕಗಳೂ ಆ ಜಲಕಲ್ಮಷವಾದ ಕಾಲಕೂಟದಿಂದ ತುಂಬಿಹೋದುವು.

ಅಷ್ಟಾವರಣಸಂವೀತಂ ಬ್ರಹ್ಮಾಂಡಂ ಬ್ರಹ್ಮಣಾ ಸಹ ।
ಭಸ್ಮೀಭೂತಂ ಚಕಾರಾಶು ಜಲಕಲ್ಮಷಮುದ್ಭುತಂ ॥ ೧೧೨ ॥
ನೋ ಭೂಮಿರ್ನಜಲಂ ಚಾಗ್ನಿರ್ನ ವಾಯುರ್ನ ನಭಸ್ತದಾ ।
ನಾಹಂಕಾರೋ ನಚ ಮಹಾನ್ಮೂಲಾವಿದ್ಯಾ ತಥೈವಚ ।
ಶಿವಸ್ಯ ಕೋಪಾತ್ಸಂಜಾತಂ ತದಾ ಭಸ್ಮಾಕುಲಂ ಜಗತ್ ॥ ೧೧೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ
"ದೇವರಾಜಸ್ಯ ರಾಜ್ಯಭ್ರಷ್ಟಕಥಾಕಥನಂ" ನಾಮ ನವಮೋಽಧ್ಯಾಯಃ

---

೧೧೨–೧೧೩. ಭಯಂಕರವಾದ ಆ ವಿಷವು ಅಷ್ಟಾವರಣಗಳಿಂದಲೂ ಬ್ರಹ್ಮನಿಂದಲೂ ಕೂಡಿದ ಬ್ರಹ್ಮಾಂಡವನ್ನೇ ವ್ಯಾಪಿಸಿ ಸುಟ್ಟು ಬೂದಿಮಾಡಿತು. ಆಗ ಭೂಮಿ, ನೀರು, ಬೆಂಕಿ, ಗಾಳಿ, ಆಕಾಶ, ಅಹಂಕಾರ, ಮಹತ್ತರವಾದ ಮೂಲಾವಿದ್ಯಾ ಇವು ಯಾವುವೂ ಗೋಚರವಾಗಲಿಲ್ಲವು. ಜಗತ್ತೇ ಈಶ್ವರನ ಕೋಪದಿಂದ ಉದಿಸಿದ ಆ ಮಹಾವಿಷದಿಂದ ಸುಟ್ಟು ಬೂದಿಯಾಗಿಹೋಯಿತು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ
"ದೇವರಾಜನು ರಾಜ್ಯಭ್ರಷ್ಟನಾದುದು" ಎಂಬ
ಒಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ದಶಮೋಽಧ್ಯಾಯಃ

## ಶಿವಕೃತ ವಿಷಭಕ್ಷಣ ಕಥಾಕಥನಂ

**ಮುನಯ ಊಚುಃ:—**

**ಯತ್ತ್ವಯಾ ಕಥಿತಂ ಬ್ರಹ್ಮನ್‌ಬ್ರಹ್ಮಾಂಡಂ ಸಚರಾಚರಂ ।**
**ಭಸ್ಮೀಭೂತಂ ರುದ್ರಕೋಪಾತ್ಕಾಲಕೂಟಾಗ್ನಿನಾಽಖಿಲಂ ॥ ೧ ॥**
**ಬ್ರಹ್ಮಾಂಡಾಂತರತಃ ಕಿಂತು ರುದ್ರಂ ಮನ್ಯಾಮಹೇ ವಯಂ ।**
**ತದಾ ಚರಾಚರಂ ನಷ್ಟಂ ಬ್ರಹ್ಮವಿಷ್ಣುಪುರೋಗಮಂ ॥ ೨ ॥**
**ಭಸ್ಮೀಭೂತಂ ರುದ್ರಕೋಪಾತ್ಕಥಂ ಸೃಷ್ಟಿಃ ಪ್ರವರ್ತಿತಾ ।**
**ಕುತೋ ಬ್ರಹ್ಮಾ ಚ ವಿಷ್ಣುಶ್ಚ ಕುತಶ್ಚಂದ್ರಪುರೋಗಮಾಃ ॥ ೩ ॥**
**ಅನ್ಯೇ ಸುರಾಸುರಾಃ ಕುತ್ರ ಭಸ್ಮೀಭೂತಾ ಲಯಂಗತಾಃ ।**
**ಅತ ಊರ್ಧ್ವಂ ಕಿಮಭವತ್ಸರ್ವಂ ವಕ್ತುಮಿಹಾರ್ಹಸಿ ॥ ೪ ॥**
**ವ್ಯಾಸಪ್ರಸಾದಾದಖಿಲಂ ವೇತ್ಥ ತ್ವಂ ನಾಪರೋ ಹಿ ತತ್ ।**
**ತಸ್ಮಾತ್ ಜ್ಞಾನಮಯಂ ಶಾಸ್ತ್ರಂ ತಜ್ಜ್ಞಾನಾಸಿ ನ ಚಾಪರಃ ॥ ೫ ॥**

---

## ಕನ್ನಡದ ಅನುವಾದ

### ಶಿವಕೃತ ವಿಷಭಕ್ಷಣ ಕಥಾಕಥನ

೧–೫. ಮುನಿಗಳು ಕೇಳುತ್ತಾರೆ:—"ಎಲೈ ಲೋಮಶಮಹರ್ಷಿಯೇ! ನೀನು, ರುದ್ರಕೋಪಾಗ್ನಿಯಿಂದುದಿಸಿದ ಆ ಕಾಲಕೂಟ ಮಹಾವಿಷದಿಂದ ಚರಾಚರ ಪ್ರಾಣಿಗಳೊಡಗೂಡಿದ ಬ್ರಹ್ಮಾಂಡವೆಲ್ಲವೂ ಸಂಪೂರ್ಣವಾಗಿ ಸುಟ್ಟು ಬೂದಿಯಾಗಿ ಹೋಯಿತೆಂದು ಹೇಳಿದೆಯಲ್ಲವೆ! ಆದರೆ ನಾವೆಲ್ಲರೂ, ರುದ್ರನೂ ಸಹ ಬ್ರಹ್ಮಾಂಡದಲ್ಲಿಯೇ ಸೇರಿದವನೆಂದು ತಿಳಿದಿರುವೆವು. ಚರಾಚರಾತ್ಮಕವೂ, ಬ್ರಹ್ಮವಿಷ್ಣು ಸಹಿತವೂ ಆದ ಇಂತಹ ಬ್ರಹ್ಮಾಂಡವೇ ರುದ್ರಕೋಪದಿಂದ ಭಸ್ಮವಾಗಿಹೋಗಲು ಮತ್ತೆ ಸೃಷ್ಟಿಯು ನಡೆದುದೆಂತು? ಬ್ರಹ್ಮನೆತ್ತ, ವಿಷ್ಣುವೆಲ್ಲಿ? ಚಂದ್ರನೇ ಮೊದಲಾದವರೆಲ್ಲಿ? ಇತರ ಸುರಾಸುರರು ಭಸ್ಮೀಭೂತರಾಗಿ ಎಲ್ಲಿ ಲಯವಾದರು? ಆಮೇಲೇನಾಯಿತು? ಈ ಎಲ್ಲ ವಿಷಯಗಳನ್ನೂ ನಮಗೆ ಅಪ್ಪಣೆ ಕೊಡಿಸುವವನಾಗು. ಎಲೈ ಮುನಿಯೇ! ಪೂಜ್ಯರಾದ ವ್ಯಾಸಮಹರ್ಷಿಗಳಿಂದ ನೀನು ಈ ವಿಷಯಗಳೆಲ್ಲವನ್ನೂ ಚೆನ್ನಾಗಿ ತಿಳಿದಿರುವೆ. ನಿನ್ನಂತೆ ತಿಳಿದವರು ಮತ್ತಾರೂ ಇರುವುದಿಲ್ಲ. ನೀನು ಆ ವ್ಯಾಸಮುನಿಯಿಂದ ಜ್ಞಾನಮಯವಾದ (ಮೋಕ್ಷ) ಶಾಸ್ತ್ರವನ್ನೂ ಬಲ್ಲವನಾಗಿರುವೆ."

**ಇತಿ ಪೃಷ್ಟಸ್ತದಾ ಸರ್ವೈರ್ಮುನಿಭಿರ್ಭಾವಿತಾತ್ಮಭಿಃ ।**
**ಸೂತೋ ವ್ಯಾಸಂ ನಮಸ್ಕೃತ್ಯ ವಾಕ್ಯಂ ಚೇದಮಥಾಬ್ರವೀತ್ ॥ ೬ ॥**

**ಲೋಮಶ ಉವಾಚ :—**

**ಯದಾ ಬ್ರಹ್ಮಾಂಡಮಧ್ಯಸ್ಥಾ ವ್ಯಾಪ್ತಾ ದೇವಾ ವಿಷಾಗ್ನಿನಾ ।**
**ಹರಿಬ್ರಹ್ಮಾದಯೋ ಹ್ಯೇತೇ ಲೋಕಪಾಲಾಃ ಸವಾಸವಾಃ ।**
**ತದಾ ವಿಜ್ಞಾಪಿತಃ ಶಂಭುರ್ಹೇರಂಬೇನ ಮಹಾತ್ಮನಾ ॥ ೭ ॥**

**ಹೇರಂಬ ಉವಾಚ :—**

**ಹೇ ರುದ್ರ ಹೇ ಮಹಾದೇವ ಹೇ ಸ್ಥಾಣೋ ಹೇ ಜಗತ್ಪತೇ ।**
**ಮಯಾ ವಿಘ್ನಂ ವಿನೋದೇನ ಕೃತಂ ತೇಷಾಂ ಸುದುರ್ಜಯಂ ॥ ೮ ॥**
**ಭಯೋ ನಮತಿ ಮೋಹಾತ್ತ್ವಾಂ ನಾರ್ಚಯಂತಿ ಚ ಮಾಮಪಿ ।**
**ಉದ್ಯೋಗಂ ಯೇ ಪ್ರಕುರ್ವಂತಿ ತೇಷಾಂ ಕ್ಲೇಶೋಽಧಿಕೋ ಭವೇತ್ ॥೯॥**
**ಏವಮಭ್ಯರ್ಥಿತಸ್ತೇನ ಪಿನಾಕೀ ವೃಷಭಧ್ವಜಃ ।**
**ವಿಘ್ನಾಂಧಕಾರಸೂರ್ಯೇಣ ಗಣಾಧಿಪತಿನಾ ತದಾ ॥ ೧೦ ॥**
**ಲಿಂಗರೂಪೋಽಬ್ರವೀಚ್ಛಂಭುರ್ನಿರಾಕಾರೋ ನಿರಾಮಯಃ ।**
**ನಿರಂಜನೋ ವ್ಯೋಮಕೇಶಃ ಕಪರ್ದೀ ನೀಲಲೋಹಿತಃ ॥ ೧೧ ॥**

---

೬. ಆತ್ಮಜ್ಞಾನಿಗಳಾದ ಆ ಶೌನಕಾದಿ ಮಹರ್ಷಿಗಳು ಈ ರೀತಿ ಪ್ರಶ್ನಿಸಿದ ತರುವಾಯ, ಲೋಮಶನಾದ ಸೂತಮುನಿಯು ಗುರುವಾದ ವ್ಯಾಸಮುನಿಗೆ ಮಣಿದು ಈ ರೀತಿ ಹೇಳಿದನು.

೭–೯. ಲೋಮಶನು ಹೇಳುತ್ತಾನೆ :–ಯಾವಾಗ ಬ್ರಹ್ಮಾಂಡಮಧ್ಯದಲ್ಲಿದ್ದ ದೇವತೆಗಳೂ, ಬ್ರಹ್ಮವಿಷ್ಣು ಮೊದಲಾದ ಲೋಕಪಾಲಕರೂ, ಮಹೇಂದ್ರ ಸಹಿತ ರಾಗಿ ವಿಷಾಗ್ನಿಯಿಂದ ವ್ಯಾಪ್ತರಾದರೋ, ಆಗ ಮಹಾತ್ಮನಾದ ಗಣಪತಿಯು ಶಂಭುವನ್ನು ಕುರಿತಿಂತೆಂದನು. ಹೇರಂಬನು ಹೇಳುತ್ತಾನೆ:—“ ಎಲೈ ರುದ್ರನೇ ! ಮಹಾದೇವನೂ, ಸ್ಥಾಣುವೂ ಆದ ಓ ಜಗತ್ಪತಿಯೇ! ಆ ದೇವತೆಗಳೆಲ್ಲರಿಗೂ ಜಯಿಸಲಸಾಧ್ಯವಾದ ವಿಘ್ನವನ್ನು ನಾನೇ ವಿನೋದಕ್ಕಾಗಿ ಉಂಟುಮಾಡಿದೆನು. ಎಲೈ ಶಂಕರನೇ! ಯಾರಾದರೆ ಭಯದಿಂದಲೂ, ಚಿತ್ತಭ್ರಾಂತಿಯಿಂದಲೂ (ತಿಳಿಗೇಡಿತನದಿಂದಲೂ) ನಿನ್ನನ್ನೂ ನನ್ನನ್ನೂ ಪೂಜಿಸದೆ ಕಾರ್ಯವನ್ನು ಮೊದಲುಮಾಡುವರೋ ಅವರಿಗೆ ಈ ರೀತಿಯೇ ವಿಘ್ನಗಳುಂಟಾಗುತ್ತವೆ.”

೧೦–೧೧. ವಿಘ್ನವೆಂಬ ಕತ್ತಲೆಗೆ ಸೂರ್ಯಪ್ರಾಯನಾದ ಶ್ರೀ ಗಣಪತಿಯು ಈ ರೀತಿ ನುಡಿಯಲು, ವೃಷಭವಾಹನನೂ, ಪಿನಾಕಿಯೂ, ನಿರಾಕಾರನೂ, ನಿರಾಮಯನೂ, ಲಿಂಗರೂಪಿಯೂ, ನಿರಂಜನನೂ, ವ್ಯೋಮಕೇಶನೂ, ಕಪರ್ದಿಯೂ, ನೀಲಲೋಹಿತನೂ ಆದ ಆ ಪರಶಿವನು ಅವನನ್ನು ಕುರಿತು ಹೀಗೆಂದನು.

ಮಹೇಶ್ವರ ಉವಾಚ :—
ಹೇರಂಬ ಶೃಣು ಮೇ ವಾಕ್ಯಂ ಶ್ರದ್ಧಯಾ ಪರಯಾ ಯುತಃ ।
ಅಹಂಕಾರಾತ್ಮಕಂ ಚೈವ ಜಗದೇತಚ್ಚರಾಚರಂ ॥ ೧೨ ॥
ಸ್ಥಿತಂ ಕರೋತ್ಯಹಂಕಾರಃ ಪ್ರಲೋಯುತ್ಪತ್ತಿಮೇವಚ ।
ಜಗದಾದೌ ಗಣಪತೇ ತದಾ ವಿಜ್ಞಪ್ತಿಮಾತ್ರತಃ ॥ ೧೩ ॥
ಮಾಯಾವಿರಹಿತಂ ಶಾಂತಂ ದ್ವೈತಾದ್ವೈತಪರಂ ಸದಾ ।
ಜ್ಞಪ್ತಿಮಾತ್ರಸ್ವರೂಪಂ ತತ್ಸದಾನಂದೈಕಲಕ್ಷಣಂ ॥ ೧೪ ॥
ಗಣಪತಿರುವಾಚ :—
ಯದಿ ತ್ವಂ ಕೇವಲೋಹ್ಯಾತ್ಮಾ ಪರಮಾನಂದಲಕ್ಷಣಃ ।
ತಸ್ಮಾತ್ತ್ವದಪರಂ ಕಿಂಚಿನ್ನಾನ್ಯದಸ್ತಿ ಪರಂತಪ ॥ ೧೫ ॥
ನಾನಾರೂಪಂ ಕಥಂ ಜಾತಂ ಸುರಾಸುರವಿಲಕ್ಷಣಂ ।
ವಿಚಿತ್ರಂ ಮೋಹಜನನಂ ತ್ರಿಭಿರ್ದೇವೈಶ್ಚ ಲಕ್ಷಿತಂ ॥ ೧೬ ॥
ಭೂತಗ್ರಾಮೈಶ್ಚತುರ್ಭಿಶ್ಚ ನಾನಾಭೇದೈಃ ಸಮನ್ವಿತೈಃ ।
ಜಾತಂ ಸಂಸಾರಚಕ್ರಂ ಚ ನಿತ್ಯಾನಿತ್ಯವಿಲಕ್ಷಣಂ ॥ ೧೭ ॥

---

೧೨. ಮಹೇಶ್ವರನು ಹೇಳುತ್ತಾನೆ:— "ಎಲೈ ಹೇರಂಬನೇ! ಈಗ ನಾನಾಡುವ ಮಾತುಗಳನ್ನು ಶ್ರದ್ಧೆಯಿಂದ ಕೇಳು. ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ಅಹಂಕಾರಾತ್ಮಕವಾದುದು.

೧೩. ಈ ಅಹಂಕಾರವೇ ಪ್ರಪಂಚದ ಸೃಷ್ಟಿ ಸ್ಥಿತಿ ಲಯಗಳನ್ನು ಮಾಡುತ್ತದೆ. ಎಲೈ ಗಣಪತಿಯೇ! ಈ ರೀತಿ ಅಹಂಕಾರವು ಮೊದಲಲ್ಲಿ ವಿಜ್ಞಪ್ತಿಯಿಂದ ಮಾತ್ರವೇ ಇದ್ದು ಈ ಜಗತ್ತನ್ನು ಸೃಜಿಸುತ್ತದೆ.

೧೪. ಆದುದರಿಂದ ಯಾವುದು ಮಾಯೆಯಿಂದ ದೂರವಾಗಿ, ಶಾಂತವೂ, ದ್ವೈತಾದ್ವೈತಪರವೂ ಆಗಿ, ಜ್ಞಪ್ತಿಯೊಂದೇ ಸ್ವರೂಪವಾಗಿರುವುದೋ ಅದೇ ಆತ್ಮವು. ಅದು ಸದಾನಂದವೆಂಬ ಲಕ್ಷಣವುಳ್ಳುದಾಗಿರುತ್ತದೆ."

೧೫–೧೬. ಗಣಪತಿಯು ಕೇಳುತ್ತಾನೆ:—ಎಲೈ ಪರಂತಪನೇ! ನೀನೇ ಪರಮಾನಂದ ಲಕ್ಷಣನಾದ ಕೇವಲ ಆತ್ಮನಾದರೆ ನಿನಗಿಂತಲೂ ಬೇರೆಯಾದುದು ಯಾವುದೂ ಇರುವುದಿಲ್ಲವಷ್ಟೆ. ನಿಜಸ್ಥಿತಿಯು ಹೀಗಿರುವಾಗ ವಿಚಿತ್ರವೂ, ಭ್ರಾಂತಿಯನ್ನುಂಟುಮಾಡುವುದೂ, ಬ್ರಹ್ಮ ವಿಷ್ಣು ಶಿವರೆಂಬ ಮೂವರು ದೇವತೆಗಳನ್ನೊಳಕೊಂಡುದೂ, ಸುರಾಸುರರಿಂದ ವಿಲಕ್ಷಣವಾದುದೂ ಆದ ಈ ಸಂಸಾರ ಚಕ್ರವುಂಟಾದುದೆಂತು ?

೧೭. ಅದರಲ್ಲಿಯೂ ಈ ಸಂಸಾರ ಚಕ್ರವು ಅಂಡಜ, ಸ್ವೇದಜ, ಜರಾಯುಜ, ಉದ್ಭಿಜ್ಜ ಎಂಬ ನಾಲ್ಕು ಭೂತಭೇದಗಳಿಂದಲೂ, ಇನ್ನೂ ಇತರ ಭೇದಗಳಿಂದಲೂ ಕೂಡಿ ನಿತ್ಯಾನಿತ್ಯ ಲಕ್ಷಣವಾಗಿರುವುದು.

**ಪರಸ್ಪರವಿರೋಧೇನ ಜ್ಞಾನವಾದೇನ ಮೋಹಿತಾಃ ।**
**ಕರ್ಮವಾದರತಾಃ ಕೇಚಿತ್ಕೇಚಿತ್ಸ್ವಗುಣಮಾಶ್ರಿತಾಃ ॥ ೧೮ ॥**
**ಜ್ಞಾನನಿಷ್ಠಾಶ್ಚ ಯೇ ಕೇಚಿತ್ಪರಸ್ಪರವಿರೋಧಿನಃ ।**
**ಏವಂ ಸಂಶಯಮಾಪನ್ನಂ ತ್ರಾಹಿ ಮಾಂ ವೃಷಭಧ್ವಜ ॥ ೧೯ ॥**
**ಅಹಂ ಗಣಶ್ಚ ಕುತ್ರತ್ಯಾಃ ಕ್ವಚಾಯಂ ವೃಷಭಃ ಪ್ರಭೋ ।**
**ಏತೇ ಚಾನ್ಯೇ ಚ ಬಹವಃ ಕುತೋ ಜಾತಾಶ್ಚ ಕುತ್ರವೈ ॥ ೨೦ ॥**
**ಕೃತಾಃ ಸರ್ವೇ ಮಹಾಭಾಗಾಃ ಸಾತ್ತ್ವಿಕಾ ರಾಜಸಾಶ್ಚವೈ ।**
**ಪ್ರಹಸ್ಯ ಭಗವಾಂಚ್ಛಂಭುರ್ಗಣೇಶಂ ವಕ್ತುಮುದ್ಯತಃ ॥ ೨೧ ॥**

**ಮಹೇಶ ಉವಾಚ :—**

**ಕಾಲಶಕ್ತ್ಯಾ ಚ ಜಾತಾನಿ ರಜಃ ಸತ್ವತಮಾಂಸಿ ಚ ।**
**ತೈರಾವೃತಂ ಜಗತ್ಸರ್ವಂ ಸದೇವಾಸುರಮಾನುಷಂ ॥ ೨೨ ॥**
**ಪರಿದೃಶ್ಯಮಾನಮೇತಚ್ಚಾನಶ್ವರಂ ಪರಮಾರ್ಥತಃ ।**
**ವಿದ್ಧ್ಯೇತತ್ಸರ್ವಸಿದ್ಧೈವ ಕೃತಕತ್ವಾಚ್ಚ ನಶ್ವರಂ ॥ ೨೩ ॥**

---

೧೮–೧೯. ಇದರಲ್ಲಿರುವವರಾದರೋ ಪರಸ್ಪರ ವಿರೋಧವಾದ ಜ್ಞಾನವಾದಗಳಿಂದ ಭ್ರಾಂತರಾಗಿರುತ್ತಾರೆ. ಕೆಲವರು ಕರ್ಮವಾದಗಳಲ್ಲಿ ಆಸಕ್ತರಾದವರು. ಕೆಲವರು ತಂತಮ್ಮ ಸಾತ್ವಿಕಾದಿ ಗುಣಗಳನ್ನೇ ನೆಮ್ಮಿರುವರು. ಇನ್ನು ಜ್ಞಾನನಿಷ್ಠರಾದ ಕೆಲವರಾರುಂಟೋ ಅವರು ಒಬ್ಬರಿಗೊಬ್ಬರು ವಿರೋಧಿಗಳಾಗಿರುವರು. ಎಲೈ ವೃಷಭಧ್ವಜನೇ! ನನಗೆ ಈ ರೀತಿ ಸಂಶಯವುಂಟಾಗಿರುವುದು, ಇದನ್ನು ಪರಿಹರಿಸಿ ನನ್ನನ್ನು ಕಾಪಾಡು.

೨೦. ಎಲೈ ಪ್ರಭುವೇ! ನಾನೂ, ಈ ಶಿವಗಣಗಳೂ, ಈ ವೃಷಭವೂ ಎಲ್ಲಿಯವರು? ಇನ್ನುಳಿದ ಈ ಅಸಂಖ್ಯಾತ ಮಂದಿ ದೇವದಾನವರೆಲ್ಲರೂ ಎಲ್ಲಿ ಹುಟ್ಟಿದರು?

೨೧. ಇವರೆಲ್ಲರೂ ಸಾತ್ವಿಕರೂ, ರಾಜಸರೂ ಆದುದು ಹೇಗೆ? ಮಹಾಗಣಾಧಿಪತಿಯು ಈ ರೀತಿ ಪ್ರಶ್ನಿಸಲು, ಭಗವಾನ್ ಶಂಭುವು ನಸುನಗುತ್ತ ಅವನನ್ನು ಕುರಿತು ಹೇಳತೊಡಗಿದನು.

೨೨. ಮಹೇಶ್ವರನು ಹೇಳುತ್ತಾನೆ:—ಅಯ್ಯಾ ಗಣಪತಿಯೇ! ಕಾಲಶಕ್ತಿಯಿಂದ ಈ ಸತ್ವರಜಸ್ಸುಗಳುಂಟಾದುವು. ಅವುಗಳಿಂದಲೇ ದೇವಾಸುರರಿಂದಲೂ, ಮಾನವರಿಂದಲೂ ಕೂಡಿದ ಈ ಜಗತ್ತು ತುಂಬಿಹೋಯಿತು.

೨೩. ಅಯ್ಯಾ! ಕಣ್ಣಿಗೆ ಕಾಣಿಸುವ ಈ ಎಲ್ಲವೂ ಪರಮಾರ್ಥವಾಗಿ ನಶ್ವರವಾದುದಲ್ಲ. ಆದರೆ ಕೃತಕವಾದುದರಿಂದ ಈ ಸರ್ವಸಿದ್ಧಿಯೇ ನಶ್ವರವಾದುದೆಂದು ತಿಳಿ.

ಲೋಮಶ ಉವಾಚ :—

ಯಾವದ್ಗಣೇಶಸಂಯುಕ್ತೋ ಭಾಷಮಾಣಃ ಸದಾಶಿವಃ ।
ಲಿಂಗರೂಪೀ ವಿಶ್ವರೂಪಃ ಪ್ರಾದುರ್ಭೂತಾ ಸದಾಶಿವಾತ್ ॥ ೨೪ ॥
ಶಿವರೂಪಾ ಜಗದ್ಯೋನಿಃ ಕಾರ್ಯಕಾರಣ ರೂಪಿಣೀ ।
ಲಿಂಗರೂಪೀ ಸ ಭಗವನ್ನಿಮಗ್ನಸ್ತತ್ಕ್ಷಣಾದಭೂತ್ ॥ ೨೫ ॥
ಏಕಾ ಸ್ಥಿತಾ ಪರಾಶಕ್ತಿ ರ್ಬ್ರಹ್ಮವಿದ್ಯಾತ್ಮಲಕ್ಷಣಾ ।
ಗಣೇಶೋ ವಿಸ್ಮಯಾವಿಷ್ಟೋ ಹ್ಯವಲೋಕನತತ್ಪರಃ ॥ ೨೬ ॥

ಋಷಯ ಊಚುಃ :—

ಪ್ರಕೃತ್ಯಂತರ್ಗತಂ ಸರ್ವಂ ಜಗದೇತಚ್ಚರಾಚರಂ ।
ಗಣೇಶಸ್ಯ ಪೃಥಕ್ತ್ವಂ ಚ ಕಥಂಜಾತಂ ತದುಚ್ಯತಾಂ ॥ ೨೭ ॥

ಲೋಮಶ ಉವಾಚ :—

ಸಾಕ್ಷಾತ್ಪ್ರಕೃತ್ಯಾಃ ಸಂಭೂತೋ ಗಣೇಶೋ ಭಗವಾನಭೂತ್ ।
ಯಥಾರೂಪಃ ಶಿವಃ ಸಾಕ್ಷಾತ್ತದ್ರೂಪೋ ಹಿ ಗಣೇಶ್ವರಃ ॥ ೨೮ ॥
ಶಿವೇನ ಸಹಸಂಗ್ರಾಮೋ ಹ್ಯಭೂತ್ತಸ್ಯ ಮಹಾತ್ಮನಃ ।
ಅಜ್ಞಾನಾತ್ಪ್ರಾಕೃತೋ ಭೂತ್ವಾ ಬಹುಕಾಲಂ ನಿರಂತರಂ ॥ ೨೯ ॥

---

೨೪. ಲೋಮಶನು ಹೇಳುತ್ತಾನೆ :—ಎಲೈ ಮುನಿಗಳಿರಾ! ಈ ಪ್ರಕಾರ ಸದಾಶಿವನು ಗಣೇಶನೊಡನೆ ಮಾತನಾಡುತ್ತಿರುವಂತೆಯೇ ಆತನಿಂದ ಲಿಂಗ ರೂಪದ ವಿಶ್ವರೂಪವುಂಟಾಯಿತು.

೨೫. ಕಾರ್ಯಕಾರಣರೂಪನೂ, ಜಗತ್ತಿಗೆಲ್ಲವೂ ಮೂಲಕಾರಣನೂ, ಲಿಂಗರೂಪನೂ ಆದ ಪರಶಿವನು ಆ ಕ್ಷಣದಲ್ಲಿಯೇ ಅಂತರ್ಧಾನವಾದನು.

೨೬. ಆಗ ಎತ್ತೆತ್ತಲೂ ಒಂದೇ ಒಂದಾದ ಬ್ರಹ್ಮವಿತ್ತುಗಳ ಆತ್ಮಲಕ್ಷಣ ವಾದ ಪರಾಶಕ್ತಿಯೊಂದೇ ನಿಂತಿತು. ಆ ಸಮಯದಲ್ಲಿ ಗಣೇಶನು ಆಶ್ಚರ್ಯ ಭರಿತನಾಗಿ ಅದನ್ನೇ ನೋಡುವುದರಲ್ಲಿ ಆಸಕ್ತನಾದನು.

೨೭. ಋಷಿಗಳು ಕೇಳುತ್ತಾರೆ:—ಎಲೈ ಋಷಿಯೇ! ಈ ಚರಾಚರ ಪ್ರಪಂಚವೆಲ್ಲವೂ ಪ್ರಕೃತಿಯಲ್ಲಿಯೇ ಸೇರಿದುದಲ್ಲವೆ? ಹೀಗಿರುವಾಗ ಗಣೇಶನು ಮಾತ್ರ ಅದರಿಂದ ಬೇರೆಯಾಗಿ ನಿಂತುದೆಂತು? ಈ ವಿಷಯವನ್ನು ಹೇಳು.

೨೮. ಲೋಮಶನು ಹೇಳುತ್ತಾನೆ :—ಅಯ್ಯಾ ಶೌನಕಾದಿಗಳಿರಾ! ಪೂಜ್ಯ ನಾದ ಗಣೇಶನು ಪ್ರಕೃತಿಯ ಸಾಕ್ಷಾತ್ ಪುತ್ರನು. ಸಾಕ್ಷಾತ್ ಶಿವನು ಯಾವ ರೂಪದಿಂದಿರುವನೋ ಗಣೇಶನೂ ಅದೇ ರೂಪದಿಂದಿರುವನು.

೨೯. ಆದರೆ ಒಂದಾನೊಂದು ಕಾಲದಲ್ಲಿ ಮಹಾತ್ಮನಾದ ಆ ಗಣಪತಿಯು ಅಜ್ಞಾನದಿಂದ ಗಾವಿಲನಾಗಿ ಶಿವನೊಡನೆ ಬಹುಕಾಲ ಕಾಳಗ ಮಾಡಿದನು.

ತಸ್ಯ ದೃಷ್ಟ್ವಾ ಹ್ಯಜೇಯತ್ವಂ ಗಜಾರೂಢಸ್ಯ ತತ್ತದಾ ।
ತ್ರಿಶೂಲೇನಾಹನಚ್ಛಂಭುಃ ಸಗಜಂ ತಮಪಾತಯತ್ ॥ ೩೦ ॥
ತದಾ ಸ್ತುತೋ ಮಹಾದೇವಃ ಪರಶಕ್ತ್ಯಾ ಪರಂತಪಃ ।
ಪರಶಕ್ತಿಮುವಾಚೇದಂ ವರಂ ವರಯ ಶೋಭನೇ ॥ ೩೧ ॥
ತದಾ ವೃತೋ ಮಹಾದೇವೋ ವರೇಣ ಪರಮೇಣ ಹಿ ।
ಯೋಽಯಂ ತ್ವಯಾ ಹತೋ ದೇವ ಮಮ ಪುತ್ರೋ ನ ಸಂಶಯಃ ॥
ತ್ವಾಂ ನ ಜಾನಾತ್ಯಯಂ ಮೂಢಃ ಪ್ರಕೃತ್ಯಂಶಸಮುದ್ಭವಃ ।
ತಸ್ಮಾತ್ತತ್ಪುತ್ರಂ ಜೀವಯೇಮಂ ಮಮ ತುಷ್ಟ್ಯರ್ಥಮೇವಚ ॥ ೩೩ ॥
ಪ್ರಹಸ್ಯ ಭಗವಾನ್ರುದ್ರೋ ಮಾಯಾಪುತ್ರಮಜೀವಯತ್ ।
ಸಿಂಧುರವದನೇನೈವ ಮುಖೇ ಸ ಸಮಯೋಜಯತ್ ॥ ೩೪ ॥
ತದಾ ಗಜಾನನೋ ಜಾತಃ ಪ್ರಸಾದಚ್ಛಂಕರಸ್ಯ ಚ ।
ಮಾಯಾಪುತ್ರೋಽಪಿ ನಿರ್ಮಾಯೋ ಜ್ಞಾನವಾನ್ಸಂಬಭೂವ ಹ ॥ ೩೫ ॥
ಆತ್ಮಜ್ಞಾನಾಮೃತೇನೈವ ನಿತ್ಯತೃಪ್ತೋ ನಿರಾಮಯಃ ।
ಸಮಾಧಿಸಂಸ್ಥಿತೋ ರೌದ್ರಃ ಕಾಲಕಾಲಾಂತಕೋಽಭವತ್ ॥ ೩೬ ॥

---

೩೦. ಆಗ ಪರಶಿವನು, ಆ ಗಣೇಶನು ಅಜೇಯನಾಗಿರುವುದನ್ನು ಕಂಡು ಗಜಾರೂಢನಾಗಿದ್ದ ಅವನನ್ನು ತ್ರಿಶೂಲದಿಂದ ಹೊಡೆದು, ಆ ಗಜದೊಡನೆಯೇ ನೆಲಕ್ಕೆ ಬೀಳಿಸಿದನು.

೩೧–೩೩. ಆಗ ಗಣೇಶನ ಜನನಿಯಾದ ಪರಾಶಕ್ತಿಯು ಪರಂತಪನಾದ ಆ ಪರಶಿವನನ್ನು ಪರಮ ಭಕ್ತಿಯಿಂದ ಸ್ತುತಿಸಿದಳು. ಆಗಲಾತನು ಆಕೆಯನ್ನು ಕುರಿತು, "ಎಲೌ ಮಂಗಳಾಂಗಿ! ವರವನ್ನು ಬೇಡು "ಎಂದನು. ಆಗಲಾಕೆಯು ಆ ಮಹಾದೇವನನ್ನು ಕುರಿತು, "ದೇವ! ನೀನು ಸಂಹರಿಸಿರುವ ಈ ಗಣೇಶನು ನನ್ನ ಮಗನೆಂಬುದರಲ್ಲಿ ಸಂಶಯವಿಲ್ಲವಷ್ಟೆ. ನನ್ನ ಅಂಶದಿಂದ ಜನಿಸಿರುವ ಈ ಮೂಢನು ನಿನ್ನ ಸ್ವರೂಪವನ್ನು ತಿಳಿಯದೆಹೋದನು. ಆದುದರಿಂದ ನನ್ನ ಸಂತೋಷಕ್ಕಾಗಿಯಾದರೂ ಇವನನ್ನು ಬದುಕಿಸಿಕೊಡು" ಎಂದು ವರವನ್ನು ಬೇಡಿದಳು.

೩೪–೩೫. ಆಗ ಭಗವಾನ್ ರುದ್ರನು ನಕ್ಕು, ಆನೆಯ ಮುಖವನ್ನು ಮಾಯೆಯ ಮಗನಾದ ಅವನ ಮುಂಡಕ್ಕೆ ಕೂಡಿಸಿ ಅವನನ್ನು ಬದುಕಿಸಿದನು. ಆಗ ಶ್ರೀಶಂಕರನ ಅನುಗ್ರಹದಿಂದ ಆ ಗಣೇಶನು ಗಜಾನನಾದನು. ಬಳಿಕ ಅವನು ಮಾಯೆಯ (ಪ್ರಕೃತಿಯ) ಮಗನಾದರೂ ಮಾಯೆಯಿಲ್ಲದವನಾಗಿ ಜ್ಞಾನಿಯಾದನು.

೩೬. ಆತ್ಮಜ್ಞಾನವೆಂಬ ಅಮೃತದಿಂದ ತೃಪ್ತನಾಗಿ, ನಿರಾಮಯನೂ, ಸಮಾಧಿಸಂಸ್ಥಿತನೂ ಆದ ರುದ್ರಪುತ್ರನು ಕಾಲಕಾಲನಿಗೂ ಅಂತಕನಾದನು.

ಯೋಗದಂಡಾರ್ಥಮುತ್ಪಾಟ್ಯ ಸ್ವಕೀಯಂ ದಶನಂ ಮಹತ್ ।
ಕರೇ ಗೃಹ್ಯ ಗಣಾಧ್ಯಕ್ಷಃ ಶಬ್ದಬ್ರಹ್ಮಾತಿವರ್ತತೇ ।
ಋದ್ಧಿಸಿದ್ಧಿದ್ವಯೇನೈವ ಏಕತ್ವೇನ ವಿರಾಜಿತಃ ॥ ೩೭ ॥
ಯೇತೇ ಗಣಾಶ್ಚ ವಿಘ್ನಾಶ್ಚ ಯೇ ಚಾನ್ಯೇಽಭ್ಯದಿಕಾ ಭುವಿ ।
ತೇಷಾಮಪಿ ಪತಿರ್ಜಾತಃ ಕೃತೋಽಸೌ ಶಂಭುನಾ ತದಾ ॥ ೩೮ ॥
ತಸ್ಮಾದ್ವಿಲೋಕಯಾಮಾಸ ಪ್ರಕೃತಿಂ ವಿಶ್ವರೂಪಿಣೀಂ ।
ಪೃಥಕ್ಸ್ಥಿತ್ವಾಗ್ರತೋಽಜಾನಾಲ್ಲಿಂಗಂ ಪ್ರಕೃತಿಮೇವ ಚ ।
ದದರ್ಶ ವಿಮಲಂ ಲಿಂಗಂ ಪ್ರಕೃತಿಸ್ಥಿಂ ಸ್ವಭಾವತಃ ॥ ೩೯ ॥
ಆತ್ಮಾನಂ ಚ ಗಣೈಃ ಸಾರ್ಧಂ ತಥೈವ ಚ ಜಗತ್ರಯಂ ।
ಲೀನಂ ಲಿಂಗೇ ಸಮಸ್ತಂ ತದ್ಧೇರಂಬೋ ಜ್ಞಾನವಾನಪಿ ॥ ೪೦ ॥
ಮುಮೋಹ ಚ ಪುನಃ ಸಂಜ್ಞಾಂ ಪ್ರತಿಲಭ್ಯ ಪ್ರಯತ್ನತಃ
ನನಾಮ ಶಿರಸಾ ತಾಭ್ಯಾಮೀಶಾಭ್ಯಾಂ ಸ ಗಣೇಶ್ವರಃ ॥ ೪೧ ॥
ತದಾ ದದರ್ಶ ತತ್ರೈವ ಲೋಕಸಂಹಾರಕಾರಕಂ ।
ಬ್ರಹ್ಮಾಣಂ ಚೈವ ರುದ್ರಂಚ ವಿಷ್ಣುಂ ಚೈವ ಸದಾಶಿವಂ ॥ ೪೨ ॥

---

೩೭. ಅವನು ಯೋಗದಂಡಕ್ಕಾಗಿ ತನ್ನ ದಂತವನ್ನೇ ಕಿತ್ತು ಕೈಯಲ್ಲಿ ಹಿಡಿದು ಗಣಾಧ್ಯಕ್ಷನಾಗಿ ಶಬ್ದಬ್ರಹ್ಮಕ್ಕೂ ಮೀರಿದವನಾಗಿ, ಋದ್ಧಿಸಿದ್ಧಿಗಳೆರಡರೊಡನೆಯೂ ಏಕತ್ವವನ್ನು ಪಡೆದು ವಿರಾಜಿಸಿದನು.

೩೮. ಆಗ ಶಂಭುವು ಅವನನ್ನು ಗಣಗಳೂ, ವಿಘ್ನಗಳೂ, ಅಂತೆಯೇ ಭೂಲೋಕದಲ್ಲಿ ವಾಸವಾಗಿರುವ ಇನ್ನೂ ಇತರ ವಿಘ್ನಗಣಗಳು ಮೊದಲಾದ ಎಲ್ಲಕ್ಕೂ ಒಡೆಯನನ್ನಾಗಿ ಮಾಡಿದನು.

೩೯–೪೧. ಎಲೈ ಋಷಿಗಳಿರಾ! ಈ ಕಾರಣದಿಂದ ಆ ಗಣೇಶನು ಬೇರೆಯಾಗಿದ್ದುಕೊಂಡೇ ವಿಶ್ವರೂಪಿಣಿಯಾದ ಪ್ರಕೃತಿಯನ್ನು ಕಂಡು, ಆ ಲಿಂಗವನ್ನೂ ಪ್ರಕೃತಿಯನ್ನೂ ತಿಳಿದುಕೊಂಡನು. ಆ ಗಣೇಶನು ವಿಮಲವಾದ ಆ ಲಿಂಗವು ಸ್ವಾಭಾವಿಕವಾಗಿಯೇ ಪ್ರಕೃತಿಯಲ್ಲಿರುವುದನ್ನು ಕಂಡನು. ಅಂತೆಯೇ ಗಣಗಳೊಡಗೂಡಿದ ತಾನೂ, ಮೂರು ಲೋಕಗಳೂ ಎಲ್ಲವೂ ಆ ಲಿಂಗದಲ್ಲಿ ಅಡಗಿರುವುದನ್ನು ಕಂಡು ಮಹಾಜ್ಞಾನಿಯಾದರೂ ಮೂರ್ಛೆಗೊಂಡು ಮತ್ತೆ ಪ್ರಜ್ಞೆಹೊಂದಿ ಪ್ರಯತ್ನಪೂರ್ವಕವಾಗಿ ಆ ಪ್ರಕೃತಿ ಪುರುಷರಿಗೆ ತಲೆಬಾಗಿ ನಮಸ್ಕರಿಸಿದನು.

೪೨. ಅಯ್ಯಾ ವಿಪ್ರರೇ! ಆ ಸಮಯದಲ್ಲಿ ಗಣಪತಿಯು ಆ ಲಿಂಗದಲ್ಲಿಯೇ ಲೋಕಸಂಹಾರಕಾರಕನಾದ ರುದ್ರನನ್ನೂ, ಸೃಷ್ಟಿಕರ್ತನಾದ ಬ್ರಹ್ಮನನ್ನೂ, ಪಾಲನಕರ್ತನಾದ ವಿಷ್ಣುವನ್ನೂ, ಸದಾಶಿವನನ್ನೂ ಕಂಡನು.

ದದರ್ಶ ಪ್ರೇತತುಲ್ಯಾನಿ ಲಿಂಗಶಕ್ತ್ಯಾತ್ಮಕಾನಿ ಚ ।
ಬ್ರಹ್ಮಾಂಡಗೋಲಕಾನ್ಯೇವ ಕೋಟಿಶಃ ಪರಮಾಣುವತ್ ॥ ೪೩ ॥
ಲೀಯಂತೇ ಚ ವಿಲೀಯಂತೇ ಮಹೇಶೇ ಲಿಂಗರೂಪಿಣಿ ।
ಪ್ರಕೃತ್ಯಂತರ್ಗತಂ ಲಿಂಗಂ ಲಿಂಗಸ್ಯಾಂತರ್ಗತಾ ಚ ಸಾ ॥ ೪೪ ॥
ಶಕ್ತ್ಯಾ ಲಿಂಗಂ ಚ ಸಂಚ್ಛನ್ನಂ ತದಾ ಸರ್ವಮದೃಶತ ।
ಲಿಂಗೇನ ಶಕ್ತಿಃ ಸಂಚ್ಛನ್ನಾ ಪರಸ್ಪರಮವರ್ತತ ॥ ೪೫ ॥
ಶಿವಾಭ್ಯಾಂ ಸಂಶ್ರಿತಂ ಲೋಕಂ ಜಗದೇತಚ್ಚರಾಚರಂ ।
ಗಣೇಶೋಽವಾಪ ತತ್ ಜ್ಞಾನಂ ಪರೇಽಪಿ ತಥಾಽವಿದನ್ ॥ ೪೬ ॥
ತದೋವಾಚ ಮಹಾತೇಜಾ ಗಣಾಧ್ಯಕ್ಷೋ ಗಣೈಃ ಸಹ ।
ಸಶಕ್ತಿಕಂ ಸ್ತೂಯಮಾನಃ ಶಕ್ತ್ಯಾ ಚ ಪರಯಾ ತದಾ ॥ ೪೭ ॥

ಗಣೇಶ ಉವಾಚ :—

ನಮಾಮಿ ದೇವಂ ಶಕ್ತ್ಯಾನ್ವಿತಂ ಜ್ಞಾನರೂಪಂ
ಪ್ರಸನ್ನಂ ಜ್ಞಾನಾತ್ಪರಂ ಪರಮಂ ಜ್ಯೋತಿರೂಪಂ ।
ರೂಪಾತ್ಪರಂ ಪರಮಂ ತತ್ತ್ವರೂಪಂ
ಪರಮಂ ಮಂಗಲಂ ಚಾನಂದಾಖ್ಯಂ ನಿಷ್ಕಲಂ ನಿರ್ವಿಷಾದಂ ॥

---

೪೩–೪೪. ಇಷ್ಟೆಯಲ್ಲದೆ ಅಲ್ಲಿಯೇ ಬ್ರಹ್ಮಾಂಡಗೋಳಕಗಳೆಲ್ಲವೂ ಆ ಲಿಂಗ ಶಕ್ತಿಗೊಳಗಾಗಿ ಪ್ರೇತಸಮಾನಗಳಾಗಿ, ಕೇವಲ ಪರಮಾಣುಗಳಂತಿರುವುದನ್ನೂ ಕಂಡನು. ಇವುಗಳೆಲ್ಲವೂ ಮಹೇಶ್ವರನ ಆ ಲಿಂಗದಲ್ಲಿ ಅಡಗುವುದನ್ನೂ, ಅಡಗಿಯೇಹೋಗುವುದನ್ನೂ ಕಂಡನಲ್ಲದೆ ಪ್ರಕೃತಿಯಲ್ಲಿ ಪರಶಿವಲಿಂಗವಡಗಿರುವುದನ್ನೂ, ಪರಶಿವಲಿಂಗದಲ್ಲಿ ಪ್ರಕೃತಿಯಡಗಿರುವುದನ್ನೂ ಕಂಡನು.

೪೫. ಶಕ್ತಿಯಿಂದ ಲಿಂಗವು ಮುಚ್ಚಿರುವುದನ್ನೂ, ಲಿಂಗದಿಂದ ಶಕ್ತಿಯು ಮುಚ್ಚಿರುವುದನ್ನೂ ಹೀಗೆ ಆ ಶಿವಲಿಂಗವೂ, ಶಕ್ತಿ (ಪ್ರಕೃತಿ)ಯೂ ಒಂದರೊಡನೊಂದು ಕೂಡಿಕೊಂಡಿರುವುದನ್ನೂ ಸಮಸ್ತವನ್ನೂ ಕಂಡನು.

೪೬–೪೭. ಲೋಕವೆಲ್ಲವೂ ಈ ರೀತಿ ಪ್ರಕೃತಿಪುರುಷರ ಸ್ವರೂಪರಾದ ಪಾರ್ವತೀ ಪರಮೇಶ್ವರರನ್ನು ಮೊರೆಹೊಕ್ಕಿರುವುದೆಂಬ ತಿಳಿವನ್ನು ಆ ಗಣೇಶನೊಬ್ಬನೇ ಅಲ್ಲದೆ ಇತರರೂ ತಿಳಿದರು. ಆ ಸಮಯದಲ್ಲಿ ಮಹಾತೇಜಸ್ವಿಯಾದ ಆ ಗಣಾಧ್ಯಕ್ಷನು ತನ್ನ ಗಣಗಳೊಡಗೂಡಿ ಶಕ್ತಿಸಹಿತನಾದ ಆ ಸದಾಶಿವನನ್ನು ಪರಮ ಭಕ್ತಿಯಿಂದ ಸ್ತುತಿಸುವವನಾಗಿ ಹೀಗೆಂದನು :

೪೮–೫೦. ಗಣೇಶನು ಹೇಳುತ್ತಾನೆ:—"ಶಕ್ತಿಸಹಿತನಾಗಿ, ಜ್ಞಾನಸ್ವರೂಪನಾಗಿ, ಪ್ರಸನ್ನನೂ, ಜ್ಞಾನಕ್ಕಿಂತಲೂ ಮಿಗಿಲಾದವನೂ, ಪರಮ ಜ್ಯೋತಿಸ್ವರೂಪನೂ, ರೂಪಕ್ಕಿಂತಲೂ ಉತ್ತಮವಾದ ತತ್ತ್ವರೂಪನಾಗಿ, ತತ್ತ್ವಕ್ಕಿಂತಲೂ ಉತ್ತಮವಾದ ಮಂಗಲಸ್ವರೂಪನಾಗಿ ನಿಷ್ಕಲ್ಮಷವೂ, ವಿಷಾದರಹಿತವೂ

**ಧೂಮಾತ್ಪರಮಯೋ ವಹ್ನಿರ್ಧೂಮವತ್ಪ್ರತಿಭಾಸತೇ ।**
**ಪ್ರಕೃತ್ಯಂತರ್ಗತಸ್ತ್ವಂ ಹಿ ಲಕ್ಷ್ಯಸೇ ಜ್ಞಾನಸಂಭವಃ ।**
**ಪ್ರಕೃತ್ಯಂತರ್ಗತಸ್ತ್ವಂ ಹಿ ಮಾಯಾ ವ್ಯಕ್ತಿರಿತೀಯಸೇ ॥ ೪೯ ॥**

**ಏವಂ ವಿಧಸ್ತ್ವಂ ಭಗವನ್ಸ್ವಮಾಯಯಾ**
**ಸೃಜಸ್ಯಥೋ ಲುಂಪಸಿ ಪಾಸಿ ವಿಶ್ವಂ ।**
**ಅಸ್ಮಾದ್ಗರಾತ್ಸರ್ವಮಿದಂ ಪ್ರನಷ್ಟಂ**
**ಸಬ್ರಹ್ಮವಿಪ್ರೇಂದ್ರಯುತಂ ಚರಾಚರಂ ॥ ೫೦ ॥**

**ಯಥಾ ಪುರಾಸೀತ್ ಭಗವನ್ಮಹೇಶ**
**ತ್ರೈಲೋಕ್ಯನಾಥೋಽಸಿ ಚರಾಚರಾತ್ಮಾ ।**
**ಕುರುಷ್ವ ಶೀಘ್ರಂ ಸಹ ಜೀವಲೋಕಂ**
**ಚರಾಚರಂ ತತ್ಸಕಲಂ ಪ್ರದಗ್ಧಂ ॥ ೫೧ ॥**

**ಲೋಮಶ ಉವಾಚ :—**

**ಏವಂ ಸ್ತುತೋ ಗಣೇಶೇನ ಭಗವಾನ್ಭೂತಭಾವನಃ ।**
**ಯದುತ್ಥಿತಂ ಕಾಲಕೂಟಂ ಲೋಕಸಂಹಾರಕಾರಕಂ ॥ ೫೨ ॥**

---

ಆಗಿ ಆನಂದಸ್ವರೂಪನಾಗಿರುವ ಸ್ವಾಮಿಯನ್ನು ನಾನು ನಮಸ್ಕರಿಸುತ್ತೇನೆ. ಹೊಗೆಗಿಂತಲೂ ಹೆಚ್ಚಾಗಿ, ಕಾದ ಕಬ್ಬಿಣದ ಬೆಂಕಿಯು ಹೇಗೆ ಧೂಮದಂತೆಯೇ ತೋರುತ್ತದೆಯೋ ಹಾಗೆಯೇ ಜ್ಞಾನಸಂಭವನಾದ ನೀನು ಪ್ರಕೃತಿಯಲ್ಲಿ ಅಂತರ್ಗತನಾಗಿರುವಂತೆ ತೋರುವೆ! ಹೀಗೆ ಪ್ರಕೃತಿಯಲ್ಲಿ ಅಂತರ್ಗತನಾದ ವನು ಮಾಯಾವ್ಯಕ್ತಿ (ಮಾಯೆಯ ಮೂಲಕ ಪ್ರಕಟವಾಗುವವನು) ಯೆಂದು ಹೇಳಲ್ಪಡುತ್ತೀಯೆ! ಎಲೈ ಭಗವಂತನೇ! ಇಂತಿರುವ ನೀನು ನಿನ್ನ ಮಾಯೆ ಯಿಂದಲೇ ಈ ವಿಶ್ವವೆಲ್ಲವನ್ನೂ ಸೃಜಿಸುವೆ, ಸಂಹರಿಸುವೆ, ಪಾಲಿಸುವೆ. ಪ್ರಕೃತದಲ್ಲಿಯಾದರೋ ಈ ಕಾಲಕೂಟ ವಿಷದಿಂದ ಬ್ರಹ್ಮನಿಂದಲೂ, ಬ್ರಾಹ್ಮಣ ರಿಂದಲೂ, ಇಂದ್ರಾದಿಗಳಿಂದಲೂ ಕೂಡಿದ ಚರಾಚರಾತ್ಮಕವಾದ ಈ ಬ್ರಹ್ಮಾಂಡ ವೆಲ್ಲವೂ ನಾಶವಾಗಿಹೋಗಿರುವುದು.

೫೧. ಎಲೈ ಮಹೇಶ್ವರನೇ! ನೀನು ಚರಾಚರಾತ್ಮಕವಾದ ಈ ಪ್ರಪಂಚ ಸ್ವರೂಪನಾದವನು; ಮೂರು ಲೋಕಗಳಿಗೂ ನೀನೇ ಒಡೆಯನಾಗಿರುವೆ. ಆದುದರಿಂದ ದಯಾಮಯನಾದ ನೀನು ಈಗ ಸುಟ್ಟುಹೋಗಿರುವ ಈ ಪ್ರಪಂಚ ವೆಲ್ಲವನ್ನೂ ಜೀವಕೋಶಸಹಿತವಾಗಿ ಹಿಂದೆ ಹೇಗಿದ್ದಿತೋ ಹಾಗೆಯೇ ಜಾಗ್ರತೆ ಯಾಗಿ ಸೃಷ್ಟಿಮಾಡುವವನಾಗು.''

೫೨-೫೪. ಲೋಮಶನು ಹೇಳುತ್ತಾನೆ:— ಈ ರೀತಿ ಸರ್ವಭೂತಾಂತ ರ್ಯಾಮಿಯೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಪರಮೇಶ್ವರನನ್ನು ಆ ಗಣಪತಿಯು ಸ್ತುತಿಸಿದನು. ಆ ಸಮಯದಲ್ಲಿ ಎಲ್ಲ ಲೋಕಗಳನ್ನೂ ಸಂಹಾರ

ಲಿಂಗರೂಪೇಣ ತದ್ಗ್ರಸ್ತಂ ವಿಮಲಂ ಚಾಕರೋತ್ತದಾ ।
ಸ ದೇವಾಸುರಮರ್ತ್ಯಾಂಶ್ಚ ಸರ್ವಾಣಿ ತ್ರಿಜಗಂತಿ ಚ ।
ತತ್ಕ್ಷಣಾದ್ರಕ್ಷಿತಾನ್ಯೇವ ಕೃಪಯಾ ಪರಯಾ ಯುತಃ ॥ ೫೩ ॥
ಬ್ರಹ್ಮಾ ವಿಷ್ಣುಃ ಸುರೇಂದ್ರಶ್ಚ ಲೋಕಪಾಲಾಃ ಸಹರ್ಷಯಃ ।
ಯಕ್ಷಾ ವಿದ್ಯಾಧರಾಃ ಸಿದ್ಧಾ ಗಂಧರ್ವಾಪ್ಸರಸಾಂ ಗಣಾಃ ।
ಉತ್ಥಿತಾಶ್ಚೈವ ತೇ ಸರ್ವೇ ನಿದ್ರಾಪರಿಗತಾ ಇವ ॥ ೫೪ ॥
ವಿಸ್ಮಯೇನ ಸಮಾವಿಷ್ಟಾ ಬಭೂವುರ್ಜಾತಸಾಧ್ವಸಾಃ ।
ಸರ್ವೇ ದೇವಾ ಸುರಾಶ್ಚೈವ ಊಚುರಾಶ್ಚರ್ಯವತ್ತತಃ ॥ ೫೫ ॥
ಕ್ವ ಕಾಲಕೂಟಂ ಸುಮಹದ್ಯೇನ ವಿದ್ರಾವಿತಾ ವಯಂ ।
ಮೃತಪ್ರಾಯಾಃ ಕೃತಾಃ ಸದ್ಯಃ ಸ ಲೋಕಪಾಲಕಾಹ್ಯಮೀ ॥ ೫೬ ॥
ಇತ್ಯಬ್ರುವಂಸ್ತದಾ ದೈತ್ಯಾಸ್ತೂಷ್ಣೀಂಭೂತಾಸ್ತದಾ ಸ್ಥಿತಾಃ ।
ಶಕ್ರಾದಯೋ ಲೋಕಪಾಲಾಃ ವಿಷ್ಣುಂ ಸರ್ವೇಶ್ವರೇಶ್ವರಂ ।
ಬ್ರಹ್ಮಾಣಂ ಚ ಪುರಸ್ಕೃತ್ಯ ಇದಮೂಚುಃ ಸಮೇಧಿತಾಃ ॥ ೫೭ ॥

---

ಮಾಡಲು ಹುಟ್ಟಿದ್ದ ಆ ಕಾಲಕೂಟ ವಿಷವನ್ನು ಆ ಸದಾಶಿವನು ಲಿಂಗರೂಪ ದಿಂದಲೇ ಕಬಳಿಸಿ ಜಗತ್ತೆಲ್ಲವನ್ನೂ ನಿರ್ಮಲಗೊಳಿಸಿದನು. ಹೀಗೆ ಆ ದೇವನು ಕರುಣಾಮೂರ್ತಿಯಾದುದರಿಂದ ಕ್ಷಣದಲ್ಲಿಯೇ ದೇವಾಸುರ ಸಮೂಹಗಳನ್ನೂ, ಮೂರು ಲೋಕಗಳನ್ನೂ ಕಾಪಾಡಿದನು. ಆಗ ಬ್ರಹ್ಮನೂ, ವಿಷ್ಣುವೂ, ದೇವೇಂದ್ರನೂ, ಲೋಕಪಾಲಕರೂ, ಋಷಿಗಳೊಡಗೂಡಿದ ಯಕ್ಷ, ವಿದ್ಯಾಧರ, ಗಂಧರ್ವರೂ, ಅಪ್ಸರೋಗಣಗಳೂ ನಿದ್ರೆಯಿಂದ ತಿಳಿದೆದ್ದವರಂತೆ ಮೇಲಕ್ಕೆದ್ದರು.

೫೫–೬೦. ಆ ಸಮಯದಲ್ಲಿ ಆ ದೇವಾಸುರರೆಲ್ಲರೂ ಪರಮಾಶ್ಚರ್ಯಭರಿತ ರಾಗಿ, ಅದೇ ಆಶ್ಚರ್ಯದಿಂದಲೇ, "ಯಾವುದರಿಂದ ಲೋಕಪಾಲಕರೊಡ ಗೂಡಿದ ನಾವೆಲ್ಲರೂ ಓಡಿಸಲ್ಪಟ್ಟು, ಮೃತಪ್ರಾಯರಾಗಿ ಮಾಡಲಾದೆವೋ ಮಹತ್ತರವಾದ ಆ ಕಾಲಕೂಟ ಮಹಾ ವಿಷವೆಲ್ಲಿ?" ಎಂದು ಹೇಳಿದರು. ದೇವತೆ ಗಳು ಈ ರೀತಿ ಹೇಳುತ್ತಿರಲು, ದೈತ್ಯರೆಲ್ಲರೂ ಏನೂ ಹೇಳದೆ ಸುಮ್ಮನಿದ್ದರು. ಆಗ ದೇವೇಂದ್ರನೇ ಮೊದಲಾದ ಲೋಕಪಾಲಕರೆಲ್ಲರೂ ಬ್ರಹ್ಮನನ್ನು ಮುಂದಿರಿಸಿ ಕೊಂಡು ಸರ್ವೇಶ್ವರನಾದ ವಿಷ್ಣುವನ್ನು ಗೌರವಿಸಿ ಅವನನ್ನು ಕುರಿತು, "ಎಲೈ ವಿಷ್ಣುವೇ! ಅಲ್ಪಬುದ್ಧಿಯುವರಾದ ನಾವು ಯಾರಿಂದ ಈ ವಿಪತ್ತನ್ನು ದಾಟದೆವೆಂಬುದನ್ನರಿಯೆವು" ಎಂದರು. ಆಗ ಪೂಜ್ಯನಾದ ವಿಷ್ಣುವು ನಕ್ಕು, ಬ್ರಹ್ಮನೊಡನೆಯೂ ಆ ದೇವತೆಗಳೊಡನೆಯೂ ಸಮಾಧಿಮಗ್ನನಾದನು. ಹೀಗೆ ಚಿತ್ತೈಕಾಗ್ರದಿಂದ ಅವರೆಲ್ಲರೂ ಸಮಾಧಿಮಗ್ನರಾಗಿ ತತ್ತ್ವಜ್ಞಾನದಿಂದ ಕಾಮ ಕ್ರೋಧಾದಿ ಅರಿಷಡ್ವರ್ಗಗಳನ್ನೊತ್ತಿ ತಮ್ಮತಮ್ಮಲ್ಲಿಯೇ ನೆಲಗೊಂಡಿರುವ

ಕೇನೇದಂ ಕಾರಿತಂ ವಿಷ್ಣೋ ನ ವಿದಾಮೋಽಲ್ಪಮೇಧಸಃ ।
ತದಾ ಪ್ರಹಸ್ಯ ಭಗವಾನ್ಬ್ರಹ್ಮಣಾ ಸಹಿತೈಃ ಸುರೈಃ ॥ ೫೮ ॥
ಸಮಾಧಿಮಗಮನ್ಸರ್ವೇಽಪ್ಯೇಕಾಗ್ರಮನಸಸ್ತದಾ ।
ತತ್ತ್ವಜ್ಞಾನೇನ ನಿರ್ಧೃತ್ಯ ಕಾಮಕ್ರೋಧಾದಿಕಾನ್ ದ್ವಿಜಾಃ ॥ ೫೯ ॥
ತದಾತ್ಮನಿ ಸ್ಥಿತಂ ಲಿಂಗಮಪಶ್ಯನ್ ವಿಬುಧಾದಯಃ ।
ವಿಷ್ಣುಂ ಪುರಸ್ಕೃತ್ಯ ತದಾ ತುಷ್ಟುವುಃ ಪರಮಾರ್ಥತಃ ॥ ೬೦ ॥
ಆತ್ಮನಾ ಪರಮಾತ್ಮಾನಂ ಯೋಗಿನಃ ಪರ್ಯುಪಾಸತೇ ॥ ೬೧ ॥
ಲಿಂಗಮೇವ ಪರಂ ಜ್ಞಾನಂ ಲಿಂಗಮೇವ ಪರಂತಪಃ ।
ಲಿಂಗಮೇವ ಪರೋ ಧರ್ಮೋ ಲಿಂಗಮೇವ ಪರಾಗತಿಃ ।
ತಸ್ಮಾಲ್ಲಿಂಗಾತ್ಪರತರಂ ಯಚ್ಚ ಕಿಂ ಚಿನ್ನವಿದ್ಯತೇ ॥ ೬೨ ॥
ಏವಂ ಬ್ರುವಂತೋ ಹಿ ತದಾ ಸುರಾಸುರಾಃ
ಸ ಲೋಕಪಾಲಾ ಋಷಿಭಿಶ್ಚ ಸಾಕಂ ।
ವಿಷ್ಣುಂ ಪುರಸ್ಕೃತ್ಯ ತಮಾಲವರ್ಣಂ
ಶಂಭುಂ ಶರಣ್ಯಂ ಶರಣಂ ಪ್ರಪನ್ನಾಃ ॥ ೬೩ ॥
ತ್ರಾಹಿ ತ್ರಾಹಿ ಮಹಾದೇವ ಕೃಪಾಲೋ ಪರಮೇಶ್ವರ ।
ಪುರಾ ತ್ರಾತಾ ಯಥಾ ಸರ್ವೇ ತಥಾ ತ್ವಂ ತ್ರಾತುಮರ್ಹಸಿ ॥ ೬೪ ॥

---

ಲಿಂಗರೂಪಿಯಾದ ಪರಶಿವನನ್ನು ಕಂಡರು. ಇಷ್ಟೆಯಲ್ಲದೆ ಅವರೆಲ್ಲರೂ ಅದೇ ಸಮಯದಲ್ಲಿಯೇ ವಿಷ್ಣುವನ್ನು ಮುಂದುಮಾಡಿಕೊಂಡು ಆ ಪರಶಿವನನ್ನು ಪರಮಾರ್ಥವಾಗಿ ಸ್ತುತಿಸಿದರು.

೬೧. ಅಯ್ಯಾ ದ್ವಿಜರೇ! ಯೋಗಿಗಳಾದವರು ಆತ್ಮನಿಂದಲೇ (ಮನಸ್ಸಿನಲ್ಲಿಯೇ ಅಂತರ್ಮುಖವಾಗಿ) ಪರಮಾತ್ಮನನ್ನು ಸ್ತುತಿಸುವರಷ್ಟೆ!

೬೨. ಲಿಂಗವೇ ಶ್ರೇಷ್ಠವಾದ ಜ್ಞಾನವು (ಜ್ಞಾನಸ್ವರೂಪವಾದುದು); ಲಿಂಗವೇ ಶ್ರೇಷ್ಠವಾದ ತಪಸ್ಸು; ಲಿಂಗವೇ ಶ್ರೇಷ್ಠವಾದ ಧರ್ಮ, ಲಿಂಗವೇ ಪರಮಗತಿ (ಪರಮಪದ–ಮುಕ್ತಿಸ್ಥಾನ). ಆದುದರಿಂದ ಲಿಂಗಕ್ಕಿಂತಲೂ ಶ್ರೇಷ್ಠವಾದುದು ಯಾವುದೂ ಇರುವುದಿಲ್ಲ.

೬೩. ಅಯ್ಯಾ ಮುನಿಗಳಿರಾ! ಈ ರೀತಿಯಾಗಿ ಹೇಳುತ್ತ, ಆ ಸುರಾಸುರರೂ, ಲೋಕಪಾಲಕರೂ ಋಷಿಗಳೊಡಗೂಡಿ ತಮಾಲವರ್ಣನಾದ ವಿಷ್ಣುವನ್ನು ಮುಂದಿಟ್ಟುಕೊಂಡು ಶರಣ್ಯನಾದ ಆ ಶಂಭುವನ್ನೇ ಶರಣುಹೊಕ್ಕರು.

೬೪. "ಮಹಾದೇವ, ಕೃಪಾಳು, ಪರಮೇಶ್ವರಾ! ಕಾಪಾಡು ಕಾಪಾಡು. ಎಲೈ ಸ್ವಾಮಿಯೇ! ಪೂರ್ವದಲ್ಲಿ ನೀನು ನಮ್ಮನ್ನು ಸಂರಕ್ಷಿಸಿದಂತೆಯೇ ಈಗಲೂ ಸಂರಕ್ಷಿಸಬೇಕು.

ತದ್ದೇವ ದೇವ ಭವತಶ್ಚರಣಾರವಿಂದಂ
ಸೇವಾನುಬಂಧ ಮಹಿಮಾನಮನಂತರೂಪಂ ।
ತ್ವದಾಶ್ರಿತಂ ಯತ್ಪರಮಾನುಕಂಪಯಾ
ನಮೋಽಸ್ತು ತೇ ದೇವವರ ಪ್ರಸೀದ ॥ ೬೫ ॥
ಲಿಂಗಸ್ವರೂಪ ಮಧ್ಯಸ್ಥೋ ಭಗವಾನ್ ಭೂತಭಾವನಃ ।
ಸರ್ವೈಃ ಸುರಗಣೈಃ ಸಾಕಂ ಬಭಾಷೇದಂ ರಮಾಪತಿಃ ॥ ೬೬ ॥
ತ್ವಂ ಲಿಂಗರೂಪೀ ಭಗವನ್ನ್ಯಜತಾಮಭಯಪ್ರದಃ ।
ವಿಷ್ಣುನಾ ಸಂಸ್ತುತೋ ದೇವೋ ಲಿಂಗರೂಪೀ ಮಹೇಶ್ವರಃ ॥ ೬೭ ॥
ಮೃತಾಸ್ತ್ರಾತಾ ಗರಾತ್ಸರ್ವೇ ತಸ್ಮಾತ್ ಮೃತ್ಯುಂಜಯ ಪ್ರಭೋ ।
ರಕ್ಷ ರಕ್ಷ ಮಹಾಕಾಲ ತ್ರಿಪುರಾಂತ ನಮೋಽಸ್ತುತೇ ॥ ೬೮ ॥
ವಿಷ್ಣುನಾ ಸಂಸ್ತುತೋ ದೇವೋ ಲಿಂಗರೂಪೀ ಮಹೇಶ್ವರಃ ।
ಪ್ರಾದುರ್ಬಭೂವ ಸಾಂಬೋಽಥ ಬೋಧಯನ್ನಿವ ತಾನ್‌ಸುರಾನ್ ॥೬೯॥
ಹೇ ವಿಷ್ಣೋ ಹೇ ಸುರಾಃ ಸರ್ವೇ ಋಷಯಃ ಶ್ರೂಯತಾಮಿದಂ ।
ಮನ್ಯತೇಽಪಿ ಹಿ ಸಂಸಾರೇ ಅನಿತ್ಯೇ ನಿತ್ಯತಾಕುಲಂ ॥ ೭೦ ॥

---

೬೫. ಎಲೈ ದೇವದೇವನೇ! ನಮ್ಮೆಲ್ಲರಿಗೂ ನೀನೇ ರಕ್ಷಕನಾದುದರಿಂದ ಸೇವೆಗೈಯಲು ತಕ್ಕುದೂ, ಮಹಿಮೆಯೊಡಗೂಡಿದುದೂ, ಅನಂತರೂಪವಾದುದೂ ಆದ ನಿನ್ನ ಪಾದಾರವಿಂದವನ್ನು ನಾವೆಲ್ಲರೂ ಶರಣುಹೊಕ್ಕಿರುವೆವು. ನಿನ್ನನ್ನೇ ಆಶ್ರಯಿಸಿರುವ ಈ ಜಗತ್ತೆಲ್ಲವನ್ನೂ ಪರಮಕೃಪೆಯಿಂದ ಕಾಪಾಡು! ಪ್ರಸನ್ನನಾಗು! ದೇವವರ; ಇದೋ ನಿನಗೆ ನಮಸ್ಕಾರವು!!"

೬೬–೬೭. ಹೀಗೆ ಆ ದೇವತೆಗಳೆಲ್ಲರೂ ಆ ಪರಮೇಶ್ವರನನ್ನು ಸ್ತುತಿಸಿದ ತರುವಾಯ, ಆ ಪರಶಿವ ಲಿಂಗದ ನಡುವೆಯೇ ನೆಲಸಿದ್ದ ಭೂತಭಾವನನೂ, ಪೂಜ್ಯನೂ, ಲಕ್ಷ್ಮೀಪತಿಯೂ ಆದ ಶ್ರೀಮನ್ನಾರಾಯಣನೂ ಸಹ ಆ ದೇವತಾ ಸಮೂಹಗಳೊಡಗೂಡಿ, "ಓ ಸ್ವಾಮಿಯೇ! ಲಿಂಗರೂಪಿಯೂ, ಭಗವಂತನೂ ಆದ ನೀನು ಲೋಕಗಳೆಲ್ಲಕ್ಕೂ ಅಭಯವನ್ನು ಕೊಡುವಾತನು.

೬೮–೭೧. ಎಲೈ ಪ್ರಭುವೇ! ನೀನು ಸಮಸ್ತರನ್ನೂ ಈ ಕಾಲಕೂಟ ವಿಷದಿಂದ ಕಾಪಾಡಿದೆಯಾಗಿ ಮೃತ್ಯುಂಜಯನಾಗಿರುವೆ! ಎಲೈ ಮಹಾಕಾಲನೆ! ತ್ರಿಪುರಾಂತಕನೇ!! ಕಾಪಾಡು ಕಾಪಾಡು; ನಿನಗೆ ನಮಸ್ಕಾರವು" ಎಂದು ಸ್ತುತಿಸಿದನು. ಎಲೈ ಮುನಿಗಳಿರಾ! ಈ ಪ್ರಕಾರ ವಿಷ್ಣುವು ಲಿಂಗರೂಪಿಯಾದ ಆ ಮಹೇಶ್ವರನನ್ನು ಸ್ತುತಿಸಲು, ಆತನು ಅಂಬಿಕೆಯೊಡನೆ ಪ್ರತ್ಯಕ್ಷನಾಗಿ ಆ ದೇವತೆಗಳಿಗೆ ಉಪದೇಶಿಸುವನೋ ಎಂಬಂತೆ ಅವರೆಲ್ಲರನ್ನೂ ಕುರಿತು, "ಎಲೈ ವಿಷ್ಣುವೇ! ಎಲೈ ದೇವತೆಗಳಿರಾ! ಋಷಿಗಳಿರಾ! ನೀವೆಲ್ಲರೂ ನನ್ನ

ಅವಿಲೋಕಯತಾಽಽತ್ಮಾನಮಾತ್ಮನಾ ವಿಬುಧಾದಯಃ ।
ಕಿಂ ಯಜ್ಞೈಃ ಕಿಂ ತಪೋಭಿಶ್ಚ ಕಿಮುದ್ಯೋಗೇನ ಕರ್ಮಣಾಂ ॥ ೭೧ ॥
ಏಕತ್ವೇನ ಪೃಥಕ್ತ್ವೇನ ಕಿಂಚಿನ್ನೈವ ಪ್ರಯೋಜನಂ ।
ಯುಸ್ಮಾದ್ಭವದ್ಭಿರ್ಮಿಲಿತೈಃ ಕೃತಂ ಯತ್ಕರ್ಮ ದುಷ್ಕರಂ ॥ ೭೨ ॥
ಕ್ಷೀರಾಬ್ಧೇರ್ಮಥನಂ ತತ್ತು ಅಮೃತಾರ್ಥಂ ಕಥಂ ಕೃತಂ ।
ಮೃತ್ಯುಂಜಯಂ ನಿರಾಕೃತ್ಯ ಅವಿಜ್ಞಾಯ ಚ ಮಾಂ ಸದಾ ॥ ೭೩ ॥
ತಸ್ಮಾತ್ಸರ್ವೇ ಮೃತ್ಯುಮುಖಂ ಪತಿತಾ ನೈ ನ ಸಂಶಯಃ ।
ಅಸ್ಮಾಭಿರ್ನಿರ್ಮಿತೋ ದೇವೋ ಗಣೇಶಃ ಕಾರ್ಯಸಿದ್ಧಯೇ ॥ ೭೪ ॥
ನ ನಮಂತಿ ಗಣೇಶಂಚ ದುರ್ಗಾಂ ಚೈವ ತಥಾವಿಧಾಂ ।
ಕ್ಲೇಶಭಾಜೋ ಭವಿಷ್ಯಂತಿ ನಾತ್ರ ಕಾರ್ಯಾ ವಿಚಾರಣಾ ॥ ೭೫ ॥
ಯೂಯಂ ಸರ್ವೇ ತ್ವಧರ್ಮಿಷ್ಠಾಃ ಸ್ತಬ್ಧಾಃ ಪಂಡಿತಮಾನಿನಃ ।
ಕಾರ್ಯಾಕಾರ್ಯಮವಿಜ್ಞಾಯ ಕೇವಲಂ ಮಾನಮೋಹಿತಾಃ ॥ ೭೬ ॥

---

ಮಾತನ್ನು ಕೇಳಿರಿ. ಆತ್ಮದಿಂದಲೇ ಪರಮಾತ್ಮನನ್ನು ನೋಡದ ನೀವು ಮಾಡುವ ಯಜ್ಞಗಳಿಂದಾಗಲಿ, ತಪಸ್ಸುಗಳಿಂದಾಗಲಿ, ಇತರ ಪ್ರಯತ್ನಗಳಿಂದಾಗಲಿ ಏನುತಾನೆ ಪ್ರಯೋಜನವಾದೀತು ?

೭೨–೭೪. ನೀವೆಲ್ಲರೂ ಒಟ್ಟುಗೂಡಿ ಅವುಗಳನ್ನೆಸಗಿದರೂ, ಬೇರೆಬೇರೆ ಯಾಗಿಯೇ ಮಾಡಿದರೂ ಸ್ವಲ್ಪವೂ ಪ್ರಯೋಜನವಿರುವುದಿಲ್ಲ. ನೀವೆಲ್ಲರೂ ಅಮೃತವನ್ನು ಪಡೆಯುವುದಕ್ಕಾಗಿ ಒಟ್ಟಿಗೆ ಸೇರಿ ಮೃತ್ಯುಂಜಯನಾದ ನನ್ನನ್ನು ನಿರಾಕರಿಸಿ, ಕಡೆಗೆ ನನ್ನನ್ನು ಸ್ಮರಿಸದೆಯೇ ಮಹಾದುಷ್ಕರವಾದ ಈ ಕ್ಷೀರ ಸಮುದ್ರದ ಮಥನವನ್ನು ಹೇಗೆತಾನೆ ಮಾಡಿದಿರಿ? ಅದರಿಂದ ನಿಮಗೆ ಯಾವ ಫಲವು ದೊರೆಯಿತು ? ಈಗ ನೀವೆಲ್ಲರೂ ಮೃತ್ಯುಮುಖದಲ್ಲಿ ಬಿದ್ದಿರೆಂಬುದರಲ್ಲಿ ಸಂಶಯವಿಲ್ಲ. ಎಲೈ ದೇವತೆಗಳಿರಾ! ಸಮಸ್ತರ ಕಾರ್ಯಸಿದ್ಧಿಗಾಗಿಯೇ ನಾನು ಗಣೇಶನನ್ನು ನಿರ್ಮಿಸಿದೆನು.

೭೫. ಯಾರು ಈ ಗಣೇಶನನ್ನೂ, ಅಂತೆಯೇ ಮಹಿಮಾಶಾಲಿನಿಯಾದ ದುರ್ಗಾದೇವಿಯನ್ನೂ ನಮಸ್ಕರಿಸುವುದಿಲ್ಲವೋ ಅವರೆಲ್ಲರೂ ಕ್ಲೇಶಭಾಜನರಾಗು ವುದರಲ್ಲಿ ಸಂದೇಹವಿಲ್ಲವು.

೭೬. ನೀವೆಲ್ಲರೂ ಅಧರ್ಮಿಷ್ಠರು ; ಸ್ತಬ್ಧರು, ನಾವೇ ಪಂಡಿತರೆಂದು ತಿಳಿದಿರುವವರು ; ಇದು ಮಾಡತಕ್ಕ ಕೆಲಸ, ಇದು ಮಾಡಬಾರದ ಕೆಲಸ ಎಂಬುದನ್ನರಿತುಕೊಳ್ಳದೆ ಕೇವಲ ಮಾನವೊಂದರಿಂದಲೇ ಮೋಹಿತರಾಗಿರು ವವರು, ದುರಹಂಕಾರಿಗಳು.

**ತಸ್ಮಾತ್ಕಾಲಮುಖೇ ಸರ್ವೇ ಪತಿತಾ ನಾತ್ರ ಸಂಶಯಃ ।**
**ಸರ್ವೇ ಶ್ರುತಿಪರಾ ಯೂಯಮಿಂದ್ರಾದ್ಯಾ ದೇವತಾ ಗಣಾಃ ॥ ೭೭ ॥**
**ಪ್ರರೋಚನಪರಾಃ ಸರ್ವೇ ಕ್ಷುದ್ರಾಶ್ಚೇಂದ್ರಾದಯೋ ವೃಥಾ ।**
**ನಾತ್ಮಾನಂ ಚ ಪ್ರಪಂಚೇನ ವೇತ್ಸಿ ತ್ವಂ ಹಿ ಶಚೀಪತೇ ॥ ೭೮ ॥**
**ಕೃತಃ ಪ್ರಯತ್ನೋ ಹಿ ಮಹಾನಮೃತಾರ್ಥಂ ತ್ವಯಾ ಶಠ ।**
**ಅಶ್ವಮೇಧಶತೇನೈವ ಯದ್ರಾಜ್ಯಂ ಪ್ರಾಪ್ತವಾನಸಿ ।**
**ಅಪಿತಚ್ಚ ಪರಾಧೀನಂ ತನ್ನ ಜಾನಾಸಿ ದುರ್ಮತೇ ॥ ೭೯ ॥**
**ಯೈರ್ವೇದವಾಕ್ಯೈಸ್ತ್ವಂ ಮೂಢ ಸಂಸ್ತುತೋಽಸಿ ತಪಸ್ವಿಭಿಃ ।**
**ತೇ ಮೂಢಾಸ್ತೋಷಯಂತಿ ತ್ವಾಂ ತತ್ತದ್ರಾಗಪರಾಯಣಾಃ ॥ ೮೦ ॥**
**ವಿಷ್ಣೋ ತ್ವಂ ಚ ಪಕ್ಷಪಾತಾನ್ನ ಜಾನಾಸಿ ಹಿತಾಹಿತಂ ।**
**ಕೇಚಿದ್ಧತಾಸ್ತ್ವಯಾ ವಿಷ್ಣೋ ರಕ್ಷಿತಾಶ್ಚೈವ ಕೇಚನ ॥ ೮೧ ॥**
**ಇಚ್ಛಾಯುಕ್ತಸ್ತ್ವಮತ್ರೈವ ಸದಾ ಬಾಲಕುಚೇಷ್ಟಿತಃ ।**
**ಯೇಽನ್ಯೇ ಚ ಲೋಕಪಾಃ ಸರ್ವೇ ತೇಷಾಂ ವಾರ್ತಾ ಕುತಸ್ತ್ವಿಹ ॥೮೨॥**

---

೭೭. ಆದುದರಿಂದ ಶ್ರುತಿಯೊಂದನ್ನೇ ನೆಚ್ಚಿಕೊಂಡಿರುವ ಇಂದ್ರನೇ ಮೊದಲಾದ ನೀವೆಲ್ಲರೂ ಮೃತ್ಯುವಿನ ಬಾಯಿಯಲ್ಲಿ ಬಿದ್ದಿರೆಂಬುದರಲ್ಲಿ ಸಂಶಯವಿಲ್ಲವು.

೭೮. ಇಂದ್ರನಾದಿಯಾದ ನೀವೆಲ್ಲರೂ ನಿಷ್ಫಲವಾಗಿ ಕ್ಷುದ್ರರೂ, ವಿಷಯಾಸಕ್ತರೂ ಆಗಿರುವಿರಿ. ಎಲೆವೋ ಶಚೀಪತಿಯೇ! ನೀನು ನಿನ್ನನ್ನೇ ಚೆನ್ನಾಗಿ ತಿಳಿದುಕೊಂಡಿಲ್ಲ. ನಿನಗೆ ಜ್ಞಾನವೆಂಬುದೇ ಇರುವುದಿಲ್ಲ.

೭೯. ಎಲೈ ಶಠನೇ! ನೀನು ಇಂತಹ ಅಮೃತಮಥನಕ್ಕಾಗಿ ಈ ಮಹಾ ಪ್ರಯತ್ನವನ್ನು ಮಾಡಿದೆಯಲ್ಲವೆ? ಎಲೆವೋ ದುರ್ಬುದ್ಧಿಯೇ! ನೀನು ನೂರು ಅಶ್ವಮೇಧ ಯಾಗಗಳನ್ನು ಮಾಡಿ ಸಂಪಾದಿಸಿದ ಯಾವ ರಾಜ್ಯವಿದ್ದಿತೋ ಆ ದೇವರಾಜ್ಯವೂ ಇತರರ ಪಾಲಾಗಿಹೋಯಿತು. ಅದನ್ನು ನೀನರಿಯೆ.

೮೦. ಎಲಾ ಮೂಢನೇ! ನಿನ್ನನ್ನು ವೇದವಾಕ್ಯಗಳಿಂದ ಹೊಗಳುವ ತಪಸ್ವಿಗಳೆಲ್ಲರೂ ಮೂಢರೇ! ಅವರು ಆಯಾ ಬಯಕೆಗಳನ್ನು ಈಡೇರಿಸಿಕೊಳ್ಳುವುದರಲ್ಲಿಯೇ ಆಸಕ್ತರಾಗಿ ಅಂತು ನಿನ್ನನ್ನು ಸ್ತೋತ್ರಮಾಡುತ್ತಾರೆ!

೮೧. ಎಲೈ ವಿಷ್ಣುವೇ! ನೀನು ಪಕ್ಷಪಾತಿಯಾದುದರಿಂದ ಹಿತಾಹಿತಗಳನ್ನು ತಿಳಿಯೆ. ಕೆಲವರು ನಿನ್ನಿಂದ ಮಡಿದರು. ಕೆಲವರನ್ನು ನೀನು ಕಾಪಾಡಿದೆ.

೮೨–೮೩. ಯಾವಾಗಲೂ ಹುಡುಗಾಟಿಕೆಯುವನಾದ ನೀನು ಇಂತಹದರಲ್ಲಿಯೇ ಆಸಕ್ತನಾದವನು. ಇನ್ನು ಇತರ ಲೋಕಪಾಲಕರ ಸುದ್ದಿಯೇನು. ಅವರೂ ಅಂತೆಯೇ ಅಜ್ಞಾನಿಗಳು. ಹೇಗೆಹೇಗೋ ಮಾಡಿದ ಕಾರ್ಯವು ಹೇಗೆ ಹೇಗೋ ಆಗಿಹೋಗುತ್ತದೆ. ಯುಕ್ತಾಯುಕ್ತ ವಿವೇಚನೆಯಿಂದ ಆರಂಭಿಸಿದ

ಅನ್ಯಥಾ ಹಿ ಕೃತೇ ಹ್ಯರ್ಥೇ ಅನ್ಯಥಾತ್ವಂ ಭವಿಷ್ಯತಿ ।
ಕಾರ್ಯಸಿದ್ಧಿರ್ಭವೇದ್ಯೇನ ಭವದ್ಭಿರ್ವಿಸ್ಮೃತಂ ಚ ತತ್ ॥ ೮೩ ॥
ಯೇನಾದ್ಯ ರಕ್ಷಿತಾಃ ಸರ್ವೇ ಕಾಲಕೂಟಮಹಾಭಯಾತ್ ।
ಯೇನ ನೀಲೀ ಕೃತೋ ವಿಷ್ಣುರ್ಯೇನ ಸರ್ವೇ ಪರಾಜಿತಾಃ ॥ ೮೪ ॥
ಲೋಕಾ ಭಸ್ಮೀಕೃತಾ ಯೇನ ತಸ್ಮಾದ್ಯೇನಾಽಪಿ ರಕ್ಷಿತಾಃ ।
ತಸ್ಯಾರ್ಚನವಿಧಿಃ ಕಾರ್ಯೋ ಗಣೇಶಸ್ಯ ಮಹಾತ್ಮನಃ ॥ ೮೫ ॥
ಕರ್ಮಾರಂಭೇ ತು ವಿಘ್ನೇಶಂ ಯೇ ನಾರ್ಚಂತಿ ಗಣಾಧಿಪಂ ।
ಕಾರ್ಯಸಿದ್ಧಿರ್ನತೇಷಾಂ ವೈ ಭವೇತ್ತು ಭವತಾಂ ಯಥಾ ॥ ೮೬ ॥

ಏತನ್ಮಹೇಶಸ್ಯ ವಚೋ ನಿಶಮ್ಯ
ಸುರಾಸುರಾಃ ಕಿನ್ನರ ಚಾರಣಾಶ್ಚ ।
ಪೂಜಾ ವಿಧಾನಂ ಪರಮಾರ್ಥತೋಽಪಿ
ಪಪ್ರಚ್ಛುರೇನಂ ಚ ತದಾ ಗಿರೀಶಂ ॥ ೮೭ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ ಸಮುದ್ರಮಂಥನಾಖ್ಯಾನೇ "ಶಿವಕೃತ ವಿಷಭಕ್ಷಣ ಕಥಾಕಥನಂ" ನಾಮ ದಶಮೋಽಧ್ಯಾಯಃ

---

ಕಾರ್ಯವು ವಿಫಲವಾಗುವುದಿಲ್ಲವೆಂಬುದರಲ್ಲಿ ಸಂಶಯವಿರುವುದಿಲ್ಲ. ಅಯ್ಯಾ! ಯಾವುದರಿಂದ ಕಾರ್ಯಸಿದ್ಧಿಯುಂಟಾಗುವುದೆಂಬುದನ್ನು ನೀವು ಮರೆತುಹೋದಿರಿ.

೮೪–೮೫. ಈಗ ಈ ಕಾಲಕೂಟ ಮಹಾವಿಷದ ಭಯದಿಂದ ಎಲ್ಲರನ್ನೂ ಯಾರು ಕಾಪಾಡಿದನೋ, ಯಾವನು ವಿಷ್ಣುವನ್ನೇ ನೀಲವರ್ಣನನ್ನಾಗಿಸಿ ಎಲ್ಲರನ್ನೂ ಪರಾಜಯಗೊಳಿಸಿದನೋ, ಯಾವನು ಲೋಕವೆಲ್ಲವನ್ನೂ ಸುಟ್ಟು ಬೂದಿಮಾಡಿ ಆ ಬಳಿಕ ಅದನ್ನು ಉದ್ಧರಿಸಿದನೋ ಅಂತಹ ಮಹಾತ್ಮನಾದ ಗಣೇಶನನ್ನು ನೀವು ವಿಧಿಪೂರ್ವಕವಾಗಿ ಪೂಜಿಸಬೇಕು.

೮೬. ಯಾರು ಕಾರ್ಯವನ್ನು ಮೊದಲುಮಾಡುವ ಮುನ್ನ ಗಣಾಧಿಪನಾದ ವಿಘ್ನೇಶ್ವರನನ್ನು ಪೂಜಿಸುವುದಿಲ್ಲವೋ ಅವರೆಲ್ಲರಿಗೂ ಈಗ ನಿಮಗೆಂತೋ ಅಂತೆಯೇ ಕಾರ್ಯಸಿದ್ಧಿಯಾಗುವುದಿಲ್ಲವು."

೮೭. ಈ ರೀತಿ ನುಡಿದ ಆ ಮಹೇಶ್ವರನ ಮಾತುಗಳನ್ನು ಕೇಳಿ ಅಲ್ಲಿದ್ದ ಸುರಾಸುರರೂ, ಕಿನ್ನರ ಚಾರಣರೂ ಆ ಗಿರೀಶನನ್ನು ಕುರಿತು ಗಣೇಶ್ವರನ ಪೂಜಾವಿಧಾನವೆಂತೆಂದು ಪರಮಾರ್ಥವಾಗಿಯೆ ಪ್ರಶ್ನಿಸಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಶಿವಕೃತ ವಿಷಭಕ್ಷಣ ಕಥಾಕಥನ" ಎಂಬ ಹತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಥ ಏಕಾದಶೋಽಧ್ಯಾಯಃ

## ಶ್ರೀ ಮಹಾಲಕ್ಷ್ಮೀಪ್ರಾದುರ್ಭಾವವರ್ಣನಂ

**ಮಹೇಶ್ವರ ಉವಾಚ :—**

**ಪ್ರತಿಪಕ್ಷೇ ಚತುರ್ಥ್ಯಾಂ ತು ಪೂಜನೀಯೋ ಗಣಾಧಿಪಃ ।**
**ಸ್ನಾತ್ವಾ ಶುಕ್ಲತಿಲೈಃ ಶುದ್ಧೈಃ ಶುಕ್ಲಪಕ್ಷೇ ಸದಾನೃಭಿಃ ॥ ೧ ॥**
**ಕೃತ್ವಾ ಚಾವಶ್ಯಕಂ ಸರ್ವಂ ಗಣೇಶಸ್ಯಾರ್ಚನಕ್ರಿಯಾಂ ।**
**ಪ್ರಯತ್ನೇನೈವ ಕುರ್ವಂತಿ ಗಂಧಮಾಲ್ಯಾಕ್ಷತಾದಿಭಿಃ ॥ ೨ ॥**
**ಧ್ಯಾನಮಾದೌ ಪ್ರಕರ್ತವ್ಯಂ ಗಣೇಶಸ್ಯ ಯಥಾವಿಧಿ ।**
**ಆಗಮೋ ಬಹವೋ ಜಾತಾ ಗಣೇಶಸ್ಯ ಯಥಾ ಮಮ ॥ ೩ ॥**
**ಬಹುಧೋಪಾಸಕಾ ಯಸ್ಮಾತ್ತಮಃ ಸತ್ತ್ವರಜೋನ್ವಿತಾಃ ।**
**ಗಣಭೇದೇನ ತಾನ್ಯೇವ ನಾಮಾನಿ ಬಹುಧಾಭವನ್ ॥ ೪ ॥**
**ಪಂಚವಕ್ತ್ರೋ ಗಣಾಧ್ಯಕ್ಷೋ ದಶಬಾಹುಸ್ತ್ರಿಲೋಚನಃ ।**
**ಕಾಂತಸ್ಫಟಿಕಸಂಕಾಶೋ ನೀಲಕಂಠೋ ಗಜಾನನಃ ॥ ೫ ॥**

---

### ಕನ್ನಡದ ಅನುವಾದ

#### ಶ್ರೀ ಮಹಾಲಕ್ಷ್ಮೀ ಪ್ರಾದುರ್ಭಾವವರ್ಣನ

೧. ಮಹೇಶ್ವರನು ಹೇಳುತ್ತಾನೆ:—“ಅಯ್ಯಾ ದೇವತೆಗಳಿರಾ! ಮಾನವರು ಪ್ರತಿ ಶುಕ್ಲಪಕ್ಷದ ಚತುರ್ಥಿಯಲ್ಲಿಯೂ ಸ್ನಾನಮಾಡಿ ಶುದ್ಧರಾಗಿ ಶ್ರೀ ಗಣಾಧಿಪತಿಯನ್ನು ಬಿಳಿಯ ಎಳ್ಳಿನಿಂದ ಪೂಜಿಸಬೇಕು.

೨. ಆವಶ್ಯಕವಾದ ಎಲ್ಲ ಉಪಕರಣಗಳನ್ನೂ ಸಿದ್ಧಪಡಿಸಿಕೊಂಡು ಗಂಧ ಪುಷ್ಪಾಕ್ಷತೆಗಳಿಂದ ಗಣಾಧಿಪತಿಯನ್ನು ಅರ್ಚಿಸಬೇಕು.

೩. ಮೊದಲು ವಿಧಿಪೂರ್ವಕವಾಗಿ ಆ ಗಣಪತಿಯನ್ನು ಧ್ಯಾನಿಸಬೇಕು. ಗಣೇಶನ ಪೂಜಾ ವಿಷಯವನ್ನು ಕುರಿತ ಆಗಮಗಳು ನನ್ನ ಪೂಜಾಕಲ್ಪವನ್ನು ಕುರಿತಂತೆಯೇ ಅನೇಕವಾಗಿರುವುವು.

೪. ಉಪಾಸಕರು ಸತ್ವ ರಜಸ್ಸು ತಮಸ್ಸು ಎಂಬ ಗುಣಗಳಿಂದ ಕೂಡಿದವರಾಗಿರುತ್ತಾರೆಯಾದುದರಿಂದ ಗುಣಭೇದದಿಂದ ಆ ಗಣಪತಿಯ ನಾಮಗಳೇ ಅನೇಕವಾದುವು.

೫. ಅಯ್ಯಾ ದೇವತೆಗಳಿರಾ! ಗಣಾಧ್ಯಕ್ಷನಾದ ಗಜಾನನು ಪಂಚವಕ್ತ್ರನೂ, ದಶಭುಜನೂ, ನೀಲಕಂಠನೂ, ಮನೋಹರವಾದ ಸ್ಫಟಿಕಮಣಿಯ ಕಾಂತಿಯುಳ್ಳವನೂ ಆಗಿರುವನು.

**ಮುಖಾನಿ ತಸ್ಯ ಪಂಚೈವ ಕಥಯಾಮಿ ಯಥಾತಥಂ ॥ ೬ ॥**
**ಮಧ್ಯಮಂ ತು ಮುಖಂ ಗೌರಂ ಚತುರ್ದಂತಂ ತ್ರಿಲೋಚನಂ ।**
**ಶುಂಡಾ ದಂಡಮನೋಜ್ಞಂ ಚ ಪುಷ್ಕರೇ ಮೋದಕಾನ್ವಿತಂ ॥ ೭ ॥**
**ತಥಾನ್ಯತ್ಪೀತವರ್ಣಂ ಚ ನೀಲಂ ಚ ಶುಭಲಕ್ಷಣಂ ।**
**ಪಿಂಗಲಂ ಚ ತಥಾ ಶುಭ್ರಂ ಗಣೇಶಸ್ಯ ಶುಭಾನನಂ ॥ ೮ ॥**
**ತಥಾ ದಶಭುಜೇಷ್ವೇವ ಹ್ಯಾಯುಧಾನಿ ಬ್ರವೀಮಿ ವಃ ।**
**ಪಾಶಂ ಪರಶುಪದ್ಮೇ ಚ ಅಂಕುಶಂ ದಂತಮೇವ ಚ ॥ ೯ ॥**
**ಅಕ್ಷಮಾಲಾಂ ಲಾಂಗಲಂ ಚ ಮುಸಲಂ ವರದಂ ತಥಾ ।**
**ಪೂರ್ಣಂ ಚ ಮೋದಕೈಃ ಪಾತ್ರಂ ಪಾಣಿನಾ ಚ ವಿಚಿಂತಯೇತ್ ॥ ೧೦ ॥**
**ಲಂಬೋದರಂ ವಿರೂಪಾಕ್ಷಂ ನಿವೀತಂ ಮೇಖಲಾನ್ವಿತಂ ।**
**ಯೋಗಾಸನೇ ಚೋಪವಿಷ್ಟಂ ಚಂದ್ರಲೇಖಾಂಕಶೇಖರಂ ॥ ೧೧ ॥**
**ಧ್ಯಾನಂ ಚ ಸಾತ್ತ್ವಿಕಂ ಜ್ಞೇಯಂ ರಾಜಸಂ ಹಿ ಶೃಣಾಮಿವ ।**
**ಶುದ್ಧಚಾಮೀಕರಾಭಾಸಂ ಗಜಾನನಮಲೌಕಿಕಂ ॥ ೧೨ ॥**

---

೬. ಆತನಿಗೆ ಐದೇ ಮುಖಗಳಿರುವವು. ಅವುಗಳನ್ನು ಯಥಾವತ್ತಾಗಿ ಹೇಳುವೆನು; ಕೇಳಿರಿ.

೭. ಆ ಗಣೇಶನ ಮಂಗಳಕರವಾದ ನಡುವಣ ಮುಖವು ಗೌರವರ್ಣವುಳ್ಳುದೂ, ನಾಲ್ಕು ದಂತಗಳುಳ್ಳುದೂ, ಸೊಂಡಿಲಿನಿಂದ ಮನೋಹರವಾದುದೂ, ಆ ಸೊಂಡಿಲಿನ ತುದಿಯಲ್ಲಿ ಕಡುಬನ್ನುಳ್ಳುದೂ ಆಗಿರುವುದು.

೮. ಅಂತೆಯೇ ಇನ್ನೊಂದು ಪೀತ(ಹಳದಿ) ವರ್ಣವುಳ್ಳುದೂ, ಮತ್ತೊಂದು ನೀಲವರ್ಣದ್ದೂ, ಮಗದೊಂದು ಶುಭಲಕ್ಷಣವುಳ್ಳ ಪಿಂಗಳವರ್ಣವುಳ್ಳುದೂ, ಆ ಸೊಂಡಿಲಿನ ಶುಭ್ರವರ್ಣವಾದುದೂ ಆಗಿರುವುದು.

೯. ಇದರಂತೆಯೇ ಆತನ ಹತ್ತು ಕೈಯ್ಗಳಲ್ಲಿಯೂ ಇರುವ ಆಯುಧಗಳನ್ನೂ ಹೇಳುವೆನು; ಕೇಳಿರಿ. ಪಾಶ, ಪರಶು, ಪದ್ಮ, ಅಂಕುಶ, ದಂತ, ಅಕ್ಷಮಾಲೆ, ಲಾಂಗಲ (ನೇಗಿಲು), ಮುಸಲ, ವರದಮುದ್ರೆ, ಮೋದಕಗಳು ತುಂಬಿದ ಪಾತ್ರೆ—ಇವುಗಳೇ ಆ ಹತ್ತು ಆಯುಧಗಳು.

೧೦–೧೧. ಲಂಬೋದರನಾಗಿ, ವಿರೂಪಾಕ್ಷನಾಗಿ, ನಿವೀತನಾಗಿ, ಮೇಖಲೆ (ಉಡದಾರದಿಂದ)ಯೊಡಗೂಡಿ, ಯೋಗಾಸನದಲ್ಲಿ ಕುಳಿತು ಚಂದ್ರಶೇಖರನಾಗಿರುವ ಆ ಮಹಾಗಣಾಧಿಪತಿಯನ್ನು ಈ ರೀತಿ ಧ್ಯಾನಿಸಬೇಕು.

೧೨. ಮಾನವರಿಗೆ ಗಣಪತಿಯ ಧ್ಯಾನವು ಸಾತ್ವಿಕ ರಾಜಸ ತಾಮಸ ಭೇದದಿಂದ ಮೂರು ಬಗೆಯಾಗಿ ಹೇಳಲಾಗುತ್ತದೆ. ಶುದ್ಧ ಚಾಮೀಕರಾಭಾಸನೂ, ಅಲೌಕಿಕನೂ ಆದವನನ್ನಾಗಿ ಸಾತ್ವಿಕರು ಧ್ಯಾನಿಸುತ್ತಾರೆ.

**ಚತುರ್ಭುಜಂ ತ್ರಿನಯನಮೇಕದಂತಂ ಮಹೋದರಂ ।**
**ಪಾಶಾಂಕುಶಧರಂ ದೇವಂ ದಂತಮೋದಕಪಾತ್ರಕಂ ॥ ೧೩ ॥**
**ನೀಲಂ ಚ ತಾಮಸಂ ಧ್ಯಾನಮೇವಂ ತ್ರಿವಿಧಮುಚ್ಯತೇ ।**
**ತತಃ ಪೂಜಾ ಪ್ರಕರ್ತವ್ಯಾ ಭವದ್ಭಿಃ ಶೀಘ್ರಮೇವ ಚ ॥ ೧೪ ॥**
**ಏಕವಿಂಶತಿದೂರ್ವಾಭಿರ್ದ್ವಾಭ್ಯಾಂ ನಾಮ್ನಾ ಪೃಥಕ್ಪೃಥಕ್ ।**
**ಸರ್ವನಾಮಾಭಿರೇಕೈವ ದೀಯತೇ ಗಣನಾಯಕೇ ॥ ೧೫ ॥**
**ತಥೈವ ನಾಮಭಿರ್ದೇಯಾ ಏಕವಿಂಶತಿ ಮೋದಕಾಃ ।**
**ದಶನಾಮಾನ್ಯಹಂ ವಕ್ಷ್ಯೇ ಪೂಜನಾರ್ಥಂ ಪೃಥಕ್ಪೃಥಕ್ ॥ ೧೬ ॥**
**ಗಣಾಧಿಪ ನಮಸ್ತೇಽಸ್ತು ಉಮಾಪುತ್ರಾಘನಾಶನ ।**
**ವಿನಾಯಕೇಶ ಪುತ್ರೇತಿ ಸರ್ವಸಿದ್ಧಿಪ್ರದಾಯಕ ॥ ೧೭ ॥**
**ಏಕದಂತೇಭವಕ್ತ್ರೇತಿ ತಥಾ ಮೂಷಕವಾಹನ ।**
**ಕುಮಾರಗುರವೇ ತುಭ್ಯಂ ಪೂಜನೀಯಃ ಪ್ರಯತ್ನತಃ ॥ ೧೮ ॥**
**ಏವಮುಕ್ತ್ವಾ ಸುರಾನ್ಸದ್ಯಃ ಪರಿಷ್ವಜ್ಯ ಚ ಸಾದರಂ ।**
**ವಿಷ್ಣುಂ ಗುಹಾಶಯಂ ಸದ್ಯೋ ಬ್ರಹ್ಮಾಣಂ ಚ ಸದಾಶಿವಃ ॥ ೧೯ ॥**

---

೧೩-೧೪. ಚತುರ್ಭುಜನನ್ನಾಗಿಯೂ, ತ್ರಿಣಯನನ್ನಾಗಿಯೂ, ಏಕದಂತನನ್ನಾಗಿಯೂ, ಮಹೋದರನನ್ನಾಗಿಯೂ ರಾಜಸರು ಗಣೇಶನನ್ನು ಧ್ಯಾನಿಸುವರು. ಪಾಶಾಂಕುಶಧರನಾಗಿ, ದಂತ ಮೋದಕ ಪಾತ್ರೆಗಳುಳ್ಳವನಾಗಿ ನೀಲವರ್ಣನಾಗಿ ತಾಮಸರು ಧ್ಯಾನಿಸುತ್ತಾರೆ. ಹೀಗೆ ಧ್ಯಾನವು ಮೂರು ಬಗೆಯೆಂದು ಹೇಳಿದೆ.

೧೫. ಅಯ್ಯಾ ದೇವತೆಗಳಿರಾ! ಹೀಗೆ ಧ್ಯಾನವಾದ ಬಳಿಕ ಏಕವಿಂಶತಿ (ಇಪ್ಪತ್ತೊಂದು) ನಾಮಗಳಿಂದ ಒಂದೊಂದು ನಾಮಕ್ಕೊ ಒಂದೊಂದು ಗರಿಕೆಯಂತೆ ಆ ಗಣಪತಿಯನ್ನು ಪೂಜೆ ಮಾಡಬೇಕು

೧೬. ಅಂತೆಯೇ ಅದೇ ನಾಮಗಳಿಂದ ಇಪ್ಪತ್ತೊಂದು ಕಡಬುಗಳನ್ನು ಆ ಸ್ವಾಮಿಗೆ ಸಮರ್ಪಿಸಬೇಕು. ಈಗ ನಾನು ಆ ಗಣಪತಿಯ ಪೂಜೆಗಾಗಿ ಬೇರೆ ಬೇರೆಯಾಗಿ ಹತ್ತು ಹೆಸರು (ದಶನಾಮ)ಗಳನ್ನು ಹೇಳುವೆನು; ಕೇಳಿರಿ.

೧೭-೧೮. ಗಣಾಧಿಪ ನಿನಗೆ ನಮಸ್ಕಾರವು; ಉಮಾಪುತ್ರ, ಅಘನಾಶನ, ವಿನಾಯಕ, ಈಶಪುತ್ರ, ಸರ್ವಸಿದ್ಧಿಪ್ರದಾಯಕ, ಏಕದಂತ, ಇಭವಕ್ತ್ರ, ಮೂಷಕವಾಹನ, ಕುಮಾರಗುರು, ನಿನಗೆ ನಮಸ್ಕಾರವು. ಈ ರೀತಿ ಹೇಳಿಕೊಂಡು ಪ್ರಯತ್ನಪೂರ್ವಕವಾಗಿ ಆತನನ್ನರ್ಚಿಸಬೇಕು.

೧೯ ಈ ಪ್ರಕಾರವಾಗಿ ದೇವತೆಗಳೆಲ್ಲರಿಗೂ ಹೇಳಿದ ಬಳಿಕ ಆ ಸದಾಶಿವನು ಗುಹಾಶಯನಾದ ವಿಷ್ಣುವನ್ನು ಆದರದಿಂದ ಆಲಿಂಗಿಸಿ, ಬ್ರಹ್ಮನನ್ನೂ ಅಪ್ಪಿಕೊಂಡನು.

**ತಿರೋಧಾನಗತಃ ಸದ್ಯಃ ಶಂಭುಃ ಪರಮಶೋಭನಃ ।**
**ಪ್ರಣಮ್ಯ ಶಂಭುಂ ತೇ ಸರ್ವೇ ಗಣಾಧ್ಯಕ್ಷಾರ್ಚನೇ ರತಾಃ ॥ ೨೦ ॥**
**ತತಃ ಸಂಪೂಜ್ಯ ವಿಧಿವದ್ಗಣಾಧ್ಯಕ್ಷಾರ್ಚನೇ ರತಾಃ ।**
**ಉಪಚಾರೈರನೇಕೈಶ್ಚ ದೂರ್ವಾಭಿಶ್ಚ ಪೃಥಕ್ಪೃಥಕ್ ॥ ೨೧ ॥**
**ಸಂತುಷ್ಟೋ ಹಿ ಗಣಾಧ್ಯಕ್ಷೋ ದೇವಾನಾಂ ವರದೋಽಭವತ್ ।**
**ಪ್ರದಕ್ಷಿಣಂ ಸಮಸ್ಕೃತ್ಯ ತೈಃ ಸರ್ವೈರಭಿತೋಷಿತಃ ॥ ೨೨ ॥**
**ತಮೋ ಗುಣಾನ್ವಿತಾಃ ಸರ್ವೇ ಹ್ಯಸುರಾ ನಾಭ್ಯಪೂಜಯನ್ ।**
**ಉಪಹಾಸಪರಾಸ್ತೇ ದೇವಾನ್ಪ್ರತ್ಯಸುರೋತ್ತಮಾಃ ॥ ೨೩ ॥**
**ಪೂಜಯಿತ್ವಾ ಶಂಕರಂ ತೇ ಪುನಃ ಕ್ಷೀರಾರ್ಣವಂ ಯಯುಃ ।**
**ಬ್ರಹ್ಮಾ ವಿಷ್ಣುಶ್ಚ ಋಷಯೋ ದೇವಾ ದೈತ್ಯಾ ಸುರೋತ್ತಮಾಃ ॥ ೨೪ ॥**
**ಮಂಥಾನಂ ಮಂದರಂ ಕೃತ್ವಾ ರಜ್ಜುಂ ಕೃತ್ವಾಥ ವಾಸುಕಿಂ ।**
**ಮಮಂಥುಶ್ಚ ತದಾ ದೇವಾ ವಿಷ್ಣುಂ ಕೃತ್ವಾಥ ಸನ್ನಿಧೌ ॥ ೨೫ ॥**
**ಮಥ್ಯಮಾನೇ ತದಾಬ್ಧೌ ಚ ನಿರ್ಗತಶ್ಚಂದ್ರ ಅಗ್ರತಃ ।**
**ಪೀಯೂಷಪೂರ್ಣಃ ಸರ್ವೇಷಾಂ ದೇವಾನಾಂ ಕಾರ್ಯಸಿದ್ಧಯೇ ॥**

---

೨೦–೨೧. ತರುವಾಯ ಪರಮ ಮಂಗಳಕರನಾದ ಆ ಶಂಭುವು ಅಲ್ಲಿಯೇ ಅಂತರ್ಧಾನವಾದನು. ತರುವಾಯ ದೇವತೆಗಳೆಲ್ಲರೂ ಆತನನ್ನು ನಮಸ್ಕರಿಸಿ ಗಣಾಧ್ಯಕ್ಷನ ಪೂಜೆಯಲ್ಲಿ ಆಸಕ್ತರಾದರು. ಹೀಗೆ ಆ ಪೂಜೆಯಲ್ಲಿ ತೊಡಗಿದ ಅವರೆಲ್ಲರೂ ಪರಮೇಶ್ವರನು ಹೇಳಿದ ರೀತಿಯಲ್ಲಿಯೇ ವಿಧಿಪೂರ್ವಕವಾಗಿ ಅನೇಕ ಉಪಚಾರಗಳಿಂದಲೂ, ಬೇರೆಬೇರೆಯಾಗಿ ಆತನನ್ನು ಪೂಜಿಸಿದರು.

೨೨–೨೬. ಇದರಿಂದ ಆ ಗಣಪನು ಸಂತುಷ್ಟನಾಗಿ ಅವರೆಲ್ಲರಿಗೂ ವರದಾಯಕನಾದನು. ಆಗಲಾ ದೇವತೆಗಳೆಲ್ಲರೂ ಆತನನ್ನು ಪ್ರದಕ್ಷಿಣಪೂರ್ವಕವಾಗಿ ನಮಸ್ಕರಿಸಿದರು. ಆದರೆ ಕೇವಲ ತಮೋಗುಣದಿಂದ ಕೂಡಿದ ದೈತ್ಯರು ಆತನನ್ನು ಪೂಜಿಸಲಿಲ್ಲವಲ್ಲದೆ, ಆತನ ಪೂಜೆಯನ್ನೆಸಗಿದ ದೇವತೆಗಳನ್ನು ಹಾಸ್ಯಮಾಡುವುದರಲ್ಲಿಯೂ ತೊಡಗಿದರು. ಬಳಿಕ ದೇವತೆಗಳು ಶಂಕರಪ್ರಿಯೆಯಾದ ದುರ್ಗಾಂಬಿಕೆಯನ್ನು ಪೂಜಿಸಿ ಕ್ಷೀರಸಮುದ್ರದ ತೀರಕ್ಕೆ ಬಂದರು. ಬ್ರಹ್ಮ, ವಿಷ್ಣು, ಋಷಿಗಳು, ದೇವದಾನವರೂ, ಇತರ ಸುರೋತ್ತಮರೂ ಮತ್ತೆ ಮಂದರಗಿರಿಯನ್ನು ಕಡಗೋಲನ್ನಾಗಿಯೂ, ವಾಸುಕಿಯನ್ನು ಹಗ್ಗವನ್ನಾಗಿಯೂ ಮಾಡಿಕೊಂಡು ಕ್ಷೀರಸಾಗರವನ್ನು ಕಡೆಯಲು ಮೊದಲುಮಾಡಿದರು. ಕ್ಷೀರಸಮುದ್ರವನ್ನು ಕಡೆಯುತ್ತಿರುವಲ್ಲಿ ಮೊಟ್ಟಮೊದಲು ಚಂದ್ರನುದಿಸಿದನು. ಆತನು ಅಮೃತಪೂರ್ಣನಾಗಿ ದೇವತೆಗಳೆಲ್ಲರಿಗೂ ಕಾರ್ಯಸಿದ್ಧಿಯನ್ನುಂಟು ಮಾಡುವುದಕ್ಕಾಗಿಯೇ ಆ ಕ್ಷೀರಸಮುದ್ರದಿಂದ ಮೊದಲಲ್ಲಿಯೇ ಉದಿಸಿದನು.

ಶೌನಕ ಉವಾಚ:—

ಅರ್ಣವೇ ಕಿಂ ಪುರಾ ಚಂದ್ರೋ ನಿಕ್ಷಿಪ್ತಃ ಕೇನ ಸುವ್ರತ ।
ಗಜಾದಿಕಾನಿ ರತ್ನಾನಿ ಕಥಿತಾನಿ ತ್ವಯಾ ಪುರಾ ॥ ೨೭ ॥
ಏತತ್ಸರ್ವಂ ಸಮಾಸೇನ ಆದೌ ಕಥಯ ಮೇ ಪ್ರಭೋ ।
ಜ್ಞಾತ್ವಾ ಸರ್ವೇ ವಯಂ ಸೂತ ಪಶ್ಚಾದಾಕರ್ಣಯಾಮಹೇ ॥ ೨೮ ॥
ತೇಷಾಂ ತದ್ವಚನಂ ಶ್ರುತ್ವಾ ಸೂತೋ ವಾಕ್ಯಮುಪಾದದೇ ॥ ೨೯ ॥
ಚಂದ್ರ ಆಪೋಮಯೋ ವಿಪ್ರಾ ಅತ್ರಿಪುತ್ರೋ ಗುಣಾನ್ವಿತಃ ।
ಉತ್ಪನ್ನೋ ಹ್ಯನುಸೂಯಾಯಾಂ ಬ್ರಹ್ಮಣೋಽಂಶಾತ್ಸಮುದ್ಭವಃ ।
ರುದ್ರಸ್ಯಾಂಶಾದ್ಧಿ ದೂರ್ವಾಸಾ ವಿಷ್ಣೋರಂಶಾತ್ತು ದತ್ತಕಃ ॥ ೩೦ ॥
ಕ್ಷೀರಾಬ್ಧಿಂ ಮಥ್ಯಮಾನಂ ತು ದೃಷ್ಟ್ವಾ ಚಂದ್ರೋ ಮುದಾನ್ವಿತಃ ।
ಕ್ಷೀರಾಬ್ಧಿರಪಿ ಚಂದ್ರಂ ಚ ದೃಷ್ಟ್ವಾ ಸೋಽಪ್ಯುತ್ಸುಕೋಽಭವತ್ ॥ ೩೧ ॥
ಪ್ರವಿಷ್ಟಶ್ಚ ಭಯಪ್ರೀತ್ಯಾ ಶೃಣ್ವತಾಂ ಭೋ ದ್ವಿಜೋತ್ತಮಾಃ ।
ಚಂದ್ರೋ ಹ್ಯಮೃತಪೂರ್ಣೋಽಭೂದಗ್ರತೋ ದೇವಸನ್ನಿಧೌ ॥ ೩೨ ॥

---

೨೭–೨೮. ಶೌನಕನು ಕೇಳುತ್ತಾನೆ.— "ಎಲೈ ಸುವ್ರತನಾದ ಸೂತ ಪುರಾಣಿಕನೇ ! ನೀನು ಐರಾವತವೇ ಮೊದಲಾದ ರತ್ನಗಳನ್ನು ಕ್ಷೀರಸಮುದ್ರದಲ್ಲಿ ಹಾಕಿದ ವಿಚಾರವನ್ನು ತಿಳಿಸಿರುವೆ. ಆದರೆ ಚಂದ್ರನನ್ನು ಆ ಕ್ಷೀರಾರ್ಣವದಲ್ಲಿ ಹಾಕಿದವರಾರು? ಎಲೈ ಪ್ರಭುವೆ! ಈ ವೃತ್ತಾಂತವನ್ನು ಮೊದಲು ವಿಸ್ತಾರವಾಗಿ ತಿಳಿಯಪಡಿಸು. ಇದನ್ನು ತಿಳಿದುಕೊಂಡು ಆಮೇಲೆ ಉಳಿದ ಸಂಗತಿಯನ್ನು ಕೇಳುತ್ತೇವೆ."

೨೯. ಈ ರೀತಿ ನುಡಿದ ಶೌನಕಾದಿ ಮುನಿಗಳ ಮಾತುಗಳನ್ನು ಕೇಳಿ ಸೂತಪುರಾಣಿಕನು ಹೇಳಿದನು.

೩೦. ಅಯ್ಯಾ ವಿಪ್ರರೇ! ಚಂದ್ರನು ಜಲಮಯನಾದವನು. ಸುಗುಣಸಂಪನ್ನನಾದ ಆತನು ಅತ್ರಿಮಹಾಮುನಿಯ ಪುತ್ರನು. ಬ್ರಹ್ಮನ ಅಂಶದಿಂದ ಅತ್ರಿಪತ್ನಿಯಾದ ಅನಸೂಯಾದೇವಿಯಲ್ಲಿ ಜನಿಸಿದವನು. ರುದ್ರನ ಅಂಶದಿಂದ ದೂರ್ವಾಸನೂ, ವಿಷ್ಣುವಿನ ಅಂಶದಿಂದ ದತ್ತಾತ್ರೇಯನೂ ಜನಿಸಿದರು.

೩೧–೩೨. ಈ ಚಂದ್ರನು, ದೇವತೆಗಳು ಕ್ಷೀರಸಾಗರವನ್ನು ಮಥಿಸುತ್ತಿರುವುದನ್ನು ಕಂಡು ಹರ್ಷಮಗ್ನನಾದನು. ಅಂತೆಯೇ ಕ್ಷೀರಸಮುದ್ರ ರಾಜನೂ ಈತನನ್ನು ಕಂಡು ಪ್ರೀತಿಯುಳ್ಳವನಾದನು. ಈ ರೀತಿ ಇವರಿಬ್ಬರೂ ಪರಸ್ಪರ ಪ್ರೀತಿಯಿಂದ ಒಬ್ಬರೊಡನೊಬ್ಬರು ಸೇರಿಕೊಂಡರು. ಆದುದರಿಂದಲೈ ದ್ವಿಜರೇ! ಚಂದ್ರನು ಕ್ಷೀರಸಾಗರಮಥನ ಕಾಲದಲ್ಲಿ ಉದಿಸಿದನು. ಈತನು ಈ ರೀತಿ ಮೊದಲು ಆವಿರ್ಭವಿಸಿ ಆ ದೇವತೆಗಳ ಸನ್ನಿಧಿಯಲ್ಲಿ ಅಮೃತಪೂರ್ಣನಾದನು.

ದೃಷ್ಟ್ವಾ ಚ ಕಾಂತಿಂ ತ್ವರಿತೋಽಥ ಚಂದ್ರೋ
ನೀರಾಜಿತೋ ದೇವಗಣೈಸ್ತದಾನೀಂ ।
ವಾದಿತ್ರಘೋಷೈ ಸ್ತುಮುಲೈರನೇಕೈ-
ರ್ಮೃದಂಗ ಶಂಖೈಃ ಪಟಹೈರನೇಕೈಃ ॥ ೩೩ ॥
ನಮುಶ್ಚಕ್ರುಶ್ಚ ತೇ ಸರ್ವೇ ಸಸುರಾಸುರದಾನವಾಃ ।
ತದಾ ಗರ್ಗಂ ಪೃಚ್ಛಮಾನಾ ಬಲಂ ಚಂದ್ರಸ್ಯ ತತ್ತ್ವತಃ ॥ ೩೪ ॥
ಗರ್ಗೇಣೋಕ್ತಾಸ್ತದಾ ದೇವಾಃ ಸರ್ವೇಷಾಂ ಬಲಮುದ್ಯತೈ ।
ಕೇಂದ್ರಸ್ಥಾನ ಗತಾಃ ಸರ್ವೇ ಭವತಾಮುತ್ತಮಾಗ್ರಹಾಃ ॥ ೩೫ ॥
ಚಂದ್ರಂ ಗುರುಃ ಸಮಾಯಾತೋ ಬುಧಶ್ಚೈವ ಸಮಾಗತಃ ।
ಆದಿತ್ಯಶ್ಚ ತಥಾ ಶುಕ್ರಃ ಶನಿರಂಗಾರಕೋ ಮಹಾನ್ ॥ ೩೬ ॥
ತಸ್ಮಾಚ್ಚಂದ್ರಬಲಂ ಶ್ರೇಷ್ಠಂ ಭವತಾಂ ಕಾರ್ಯಸಿದ್ಧಯೇ ।
ಗೋಮಂತಸಂಜ್ಞಕೋನಾಮ ಮುಹೂರ್ತೋಽಯಂ ಜಯಪ್ರದಃ ॥
ಏವಮಾಶ್ವಾಸಿತಾ ದೇವಾ ಗರ್ಗೇಣೈವ ಮಹಾತ್ಮನಾ ।
ಮಮಂಥುರಬ್ಧಿಂ ತ್ವರಿತಾ ಗರ್ಜಮಾನಾ ಮಹಾಬಲಾಃ ॥ ೩೮ ॥

---

೩೩–೩೪. ಆಗಲಾ ಚಂದ್ರನ ಕಾಂತಿಯನ್ನು ಕಂಡು ದೇವತೆಗಳೆಲ್ಲರೂ ತುತ್ತೂರಿ, ಪಟಹ ಮೊದಲಾದ ಬಗೆಬಗೆಯ ವಾದ್ಯಗಳು ಮೊಳಗುತ್ತಿರಲು ಆತನಿಗೆ ನೀರಾಜನ ಮಾಡಿದರು. ಆ ತರುವಾಯ ದೇವದಾನವರೆಲ್ಲರೂ ಗರ್ಗಮುನಿಯನ್ನು ನಮಸ್ಕರಿಸಿ ಈ ರೀತಿ ಆವಿರ್ಭವಿಸಿದ ಚಂದ್ರನ ಬಲವೆಂತೆಂದು ಕೇಳಿದರು.

೩೫. ಗರ್ಗಮುನಿಯು, "ಅಯ್ಯಾ ದೇವತೆಗಳಿರಾ ! ಈ ಚಂದ್ರೋದಯವು ನಿಮ್ಮೆಲ್ಲರಿಗೂ ಮಂಗಳಕರವಾಗಿರುವುದು. ಗ್ರಹದೇವತೆಗಳೆಲ್ಲರೂ ಉಚ್ಚಸ್ಥಾನ ಗಳಲ್ಲಿದ್ದು ನಿಮಗೆ ಉತ್ತಮ ಫಲಗಳನ್ನು ಕೊಡುವವರಾಗಿರುವರು.

೩೬. ಗುರುವಾದ ಬೃಹಸ್ಪತಿಯೂ, ಬುಧನೂ, ಸೂರ್ಯನೂ, ಶುಕ್ರನೂ, ಶನಿಯೂ, ಮಹಾತ್ಮನಾದ ಅಂಗಾರಕನೂ ಈ ಚಂದ್ರನೊಡನೆ ಸೇರಿರುತ್ತಾರೆ.

೩೭. ಆದುದರಿಂದ ಈ ಚಂದ್ರಬಲವು ನಿಮ್ಮ ಕಾರ್ಯಸಿದ್ಧಿಗೆ ಶ್ರೇಷ್ಠ ವಾಗಿರುವುದು. ಈಗಣ ಮುಹೂರ್ತವಾದರೋ ಗೋಮಂತವೆಂದು ಹೆಸರಾದುದು. ಇದು ಎಲ್ಲರಿಗೂ ಜಯವನ್ನುಂಟುಮಾಡುವಂತಹದು" ಎಂದು ಹೇಳಿದನು.

೩೮. ಮಹಾತ್ಮನಾದ ಗರ್ಗಮುನಿಯು ಈ ರೀತಿ ದೇವತೆಗಳೆಲ್ಲರಿಗೂ ನಂಬುಗೆಯನ್ನು ಕೊಟ್ಟು ಸಮಾಧಾನಗೊಳಿಸಿದ ತರುವಾಯ ಮಹಾಬಲರಾದ ಅವರೆಲ್ಲರೂ ತ್ವರೆಯುಳ್ಳವರಾಗಿ ಉತ್ಸಾಹದಿಂದ ಗರ್ಜನೆಗಳನ್ನು ಮಾಡಿಕೊಂಡು ಆ ಕ್ಷೀರಸಾಗರವನ್ನು ಮತ್ತೆ ಮಥಿಸತೊಡಗಿದರು.

ದ್ವಿಗುಣಂ ಬಲಮಾಪನ್ನಾ ಮಹಾತ್ಮಾನೋ ದೃಢವ್ರತಾಃ ।
ಮಹೇಶಂ ಸ್ಮರಮಾಣಾಸ್ತೇ ಗಣೇಶಂಚ ಪುನಃ ಪುನಃ ॥ ೩೯ ॥
ನಿರ್ಮಥ್ಯಮಾನಾದುದಧೇರ್ಗರ್ಜಮಾನಾಚ್ಚ ಸರ್ವಶಃ ।
ನಿರ್ಗತಾ ಸುರಭಿಃ ಸಾಕ್ಷಾದ್ದೇವಾನಾಂ ಕಾರ್ಯಸಿದ್ಧಯೇ ॥ ೪೦ ॥
ತುಷ್ಟಾ ಕಪಿಲವರ್ಣಾ ಸಾ ಊಧೋಭಾರೇಣ ಭೂಯಸಾ ।
ತರಂಗೋಪರಿಗಚ್ಛಂತೀ ಶನಕೈಃ ಶನಕೈಸ್ತತಃ ॥ ೪೧ ॥
ಕಾಮಧೇನುಂ ಸಮಾಯಾಂತೀಂ ದೃಷ್ಟ್ವಾ ಸರ್ವೇ ಸುರಾಸುರಾಃ ।
ಪುಷ್ಪವರ್ಷೇಣ ಮಹತಾ ವವರ್ಷುರಮಿತಪ್ರಭಾಂ ॥ ೪೨ ॥
ತದಾ ತೂರ್ಯಾಣ್ಯನೇಕಾನಿ ನೇದುರ್ವಾದ್ಯಾನ್ಯನೇಕಶಃ ।
ಆನೀತಾ ಜಲಮಧ್ಯಾಚ್ಚ ಸಂವೃತಾ ಗೋಶತೈರಪಿ ॥ ೪೩ ॥
ತಾಸು ನೀಲಾಶ್ಚ ಕೃಷ್ಣಾಶ್ಚ ಕಪಿಲಾಶ್ಚ ಕಪಿಂಜಲಾಃ ।
ಬಭ್ರವಃ ಶ್ಯಾಮಕಾ ರಕ್ತಾ ಜಂಬೂವರ್ಣಾಶ್ಚ ಪಿಂಗಳಾಃ ।
ಆಭಿರ್ಯುಕ್ತಾ ತದಾಗೋಭಿಃ ಸುರಭಿಃ ಪ್ರತ್ಯದೃಶ್ಯತ ॥ ೪೪ ॥

---

೩೯. ಅಯ್ಯಾ ವಿಪ್ರರೇ! ಮಹಾತ್ಮರೂ, ದೃಢವಾದ ವ್ರತವುಳ್ಳವರೂ ಆದ ಆ ದೇವದಾನವರು ಪರಮೇಶ್ವರನನ್ನೂ ಗಣೇಶನನ್ನೂ ಸ್ಮರಿಸುತ್ತ ಇಮ್ಮಡಿ ಯಾದ ಬಲವನ್ನು ಪಡೆದು ಆ ಸಮುದ್ರವನ್ನು ಇನ್ನೂ ಬಲವಾಗಿ ಕಡೆದರು.

೪೦. ಹೀಗೆ ಅವರು ಉತ್ಸಾಹಪೂರಿತರಾಗಿ ಗರ್ಜಿಸುತ್ತ ಆ ಕಡಲನ್ನು ಕಡೆಯುತ್ತಿರಲು ಅವರ ಕಾರ್ಯಸಿದ್ಧಿಗಾಗಿ ಸಾಕ್ಷಾತ್ ಕಾಮಧೇನುವು ಹೊರಬಂದಿತು.

೪೧. ಕಪಿಲವರ್ಣವುಳ್ಳದಾಗಿದ್ದ ಆ ಸುರಭಿಯು ಸಂತೋಷವನ್ನು ಸೂಸುತ್ತ ದೊಡ್ಡದಾದ ಕೆಚ್ಚಲಭಾರದಿಂದ ಬಗ್ಗಿ ಆ ಕಡಲಿನ ತೆರೆಗಳಮೇಲೆಯೇ ಮೆಲ್ಲಮೆಲ್ಲಗೆ ನಡೆದು ಬಂದಿತು.

೪೨. ಅಪಾರವಾದ ಕಾಂತಿಯಿಂದೊಡಗೂಡಿ ಬರುತ್ತಿರುವ ಆ ಕಾಮಧೇನು ವನ್ನು ಕಂಡು ಅಲ್ಲಿದ್ದ ದೇವತೆಗಳೆಲ್ಲರೂ ಅದರಮೇಲೆ ಬಹಳ ಹೂಮಳೆಗರೆದರು.

೪೩–೪೪. ಅನೇಕ ತುತ್ತೂರಿಗಳೂ, ವಿವಿಧ ವಾದ್ಯಗಳೂ ಮೊಳಗು ತ್ತಿರಲು, ಅವರು ನೂರಾರು ಗೋವುಗಳೊಡಗೂಡಿದ ಆ ಸುರಭಿಯನ್ನು ನೀರಿ ನಿಂದ ಹೊರಕ್ಕೆ ಕರೆತಂದರು. ಹೀಗೆ ಆ ಕಾಮಧೇನುವಿನೊಡನೆ ಬಂದ ಆಕಳುಗಳಲ್ಲಿ ಕೆಲವು ನೀಲವರ್ಣದವು; ಕೆಲವು ಕಪಿಲವರ್ಣದವು; ಕೆಲವು ಕಪಿಂಜಲ ಬಣ್ಣದವು; ಕೆಲವು ಕಂದುಬಣ್ಣದವು; ಕೆಲವು ಕಪ್ಪುಬಣ್ಣದವು; ಕೆಲವು ನೇರಿಳೆಯ ಬಣ್ಣದವು; ಇನ್ನೂ ಕೆಲವು ಪಿಂಗಲ ವರ್ಣದವು. ಹೀಗೆ ಆ ಸುರಭಿಯು ಈ ವಿಧವಾದ ಅನೇಕ ಆಕಳುಗಳೊಡನೆ ಕಣ್ಗೊಳಿಸಿತು.

ಅಸುರಾಸುರಸಂಪೀತಾಂ ಕಾಮಧೇನುಂ ಯಯಾಚಿರೇ ।
ಋಷಯೋ ಹರ್ಷಸಂಯುಕ್ತಾ ದೇವಾನ್ದೈತ್ಯಾಂಶ್ಚ ತಕ್ಷಣಾತ್ ॥ ೪೫ ॥
ಸರ್ವೇಭ್ಯಶ್ಚೈವ ವಿಪ್ರೇಭ್ಯೋ ನಾನಾಗೋತ್ರೇಭ್ಯ ಏವ ಚ ।
ಸುರಭೀ ಸಹಿತಾ ಗಾವೋ ದಾತವ್ಯಾ ನಾತ್ರಸಂಶಯಃ ॥ ೪೬ ॥
ತೈರ್ಯಾಚಿತಾಸ್ತೇಽತ್ರ ಸುರಾಸುರಾಶ್ಚ
ದದುಶ್ಚ ತಾ ಗಾಃ ಶಿವತೋಷಣಾಯ ।
ತೈಃ ಸ್ವೀಕೃತಾಸ್ತಾ ಋಷಿಭಿಃ ಸುಮಂಗಲ್ಯೈ-
ರ್ಮಹಾತ್ಮಭಿಃ ಪುಣ್ಯತಮೈಃ ಸುರಭ್ಯಃ ॥ ೪೭ ॥
ಪುಣ್ಯಾಹಂ ಮುನಿಭಿಃ ಸರ್ವೈಃ ಕಾರಿತಾಸ್ತೇ ತದಾಸುರಾಃ ।
ದೇವಾನಾಂ ಕಾರ್ಯಸಿದ್ಧ್ಯರ್ಥಮಸುರಾಣಾಂ ಕ್ಷಯಾಯಚ ॥ ೪೮ ॥
ಪುನಃ ಸರ್ವೇ ಸುಸಂರಬ್ಧಾ ಮಮಂಥುಃ ಕ್ಷೀರಸಾಗರಂ ।
ಮಥ್ಯಮಾನಾತ್ತದಾ ತಸ್ಮಾದುದಧೇಶ್ಚ ತಥಾಽಭವತ್ ॥ ೪೯ ॥
ಕಲ್ಪವೃಕ್ಷಃ ಪಾರಿಜಾತಶ್ಚೂತಃ ಸಂತಾನಕಸ್ತಥಾ ।
ತಾನ್‌ದ್ರುಮಾನೇಕತಃ ಕೃತ್ವಾ ಗಂಧರ್ವನಗರೋಪಮಾನ್ ।
ಮಮಂಥುರುಗ್ರಂ ತ್ವರಿತಾಃ ಪುನಃ ಕ್ಷೀರಾರ್ಣವಂ ಬುಧಾಃ ॥ ೫೦ ॥

---

೪೫. ಆ ತರುವಾಯ ಅಲ್ಲಿದ್ದ ಋಷಿಗಳೆಲ್ಲರೂ ಸಂತೋಷಭರಿತರಾಗಿ ಆ ಕ್ಷಣದಲ್ಲಿಯೇ ಆ ಗೋವುಗಳನ್ನು ತಮಗೆ ದಾನಮಾಡಬೇಕೆಂದು ದೇವ ದಾನವರನ್ನು ಬೇಡಿದರು.

೪೬. ಅಯ್ಯಾ ಶೌನಕಾದಿಗಳಿರಾ! ಲೋಕದಲ್ಲಿ ಸಮಸ್ತರೂ ನಾನಾ ಗೋತ್ರಗಳವರಾದ ವಿಪ್ರರಿಗೆ ಕಾಮಧೇನುವಿಗೆ ಸಮಾನವಾದ ಆಕಳುಗಳನ್ನು ದಾನಮಾಡಬೇಕು.

೪೭. ತರುವಾಯ ಆ ದೇವತೆಗಳೂ, ದಾನವರೂ ಈರ್ವರೂ ಸಹ, ಈ ರೀತಿ ಯಾಚನೆ ಮಾಡಿದ ಆ ಮಹರ್ಷಿಗಳಿಗೆ ಶಿವಪ್ರೀತ್ಯರ್ಥವಾಗಿ ಆ ಗೋವುಗಳೆಲ್ಲ ವನ್ನೂ ದಾನಮಾಡಿದರು. ಮಹಾತ್ಮರೂ, ಪರಮಮಂಗಳ ಸ್ವರೂಪರೂ, ಮಹಾ ಪುಣ್ಯಶಾಲಿಗಳೂ ಆದ ಆ ಋಷಿಗಳು ಅವುಗಳನ್ನು ಸಂತೋಷದಿಂದ ಸ್ವೀಕರಿಸಿದರು.

೪೮. ಆ ಸಮಯದಲ್ಲಿ ದೇವತೆಗಳು ಆ ಮಹರ್ಷಿಗಳಿಂದ ತಮ್ಮ ಕಾರ್ಯ ಸಿದ್ಧಿಗಾಗಿಯೂ, ಅಸುರರ ನಾಶಕ್ಕಾಗಿಯೂ ಪುಣ್ಯಾಹವಾಚನವನ್ನು ಮಾಡಿ ಸಿದರು.

೪೯–೫೦. ಇದಾದ ಬಳಿಕ ಆ ದೇವದಾನವರು ಮತ್ತೆ ಮಹಾ ಪ್ರಯತ್ನ ದಿಂದ ಆ ಪಾಲ್ಗಡಲನ್ನು ಬಲವಾಗಿ ಕಡೆದರು. ಹೀಗೆಯೇ ಕಡೆಯುತ್ತಿರಲು

ನಿರ್ಮಥ್ಯಮಾನಾದುದಧೇರಭವತ್ಸೂರ್ಯವರ್ಚಸಂ ।
ರತ್ನಾನಾಮುತ್ತಮಂ ರತ್ನಂ ಕೌಸ್ತುಭಾಖ್ಯಂ ಮಹಾಪ್ರಭಂ ॥ ೫೧ ॥
ಸ್ವಕೀಯೇನ ಪ್ರಕಾಶೇನ ಭಾಸಯಂತಂ ಜಗತ್ರಯಂ ।
ಚಿಂತಾಮಣಿಂ ಪುರಸ್ಕೃತ್ಯ ಕೌಸ್ತುಭಂ ದದೃಶುರ್ಹಿ ತೇ ॥ ೫೨ ॥
ಸರ್ವೇ ಸುರಾ ದದುಸ್ತಂ ವೈ ಕೌಸ್ತುಭಂ ವಿಷ್ಣವೇ ತದಾ ।
ಚಿಂತಾಮಣಿಂ ತತಃ ಕೃತ್ವಾ ಮಧ್ಯೇಚೈವ ಸುರಾಸುರಾಃ ।
ಮಮಂಥುಃ ಪುನರೇವಾಬ್ಧಿಂ ಗರ್ಜಂತಸ್ತೇ ಬಲೋತ್ಕಟಾಃ ॥ ೫೩ ॥
ಮಥ್ಯಮಾನಾತ್ತತಸ್ತಸ್ಮಾದುಚ್ಚೈಃ ಶ್ರವಾಃ ಸಮುದ್ಭುತಂ ।
ಬಭೂವ ಅಶ್ವೋ ರತ್ನಾನಾಂ ಪುನರೈರಾವತೋ ಗಜಃ ॥ ೫೪ ॥
ತಥೈವ ಗಜರತ್ನಂ ಚ ಚತುಃಷಷ್ಟ್ಯಾ ಸಮನ್ವಿತಂ ।
ಗಜಾನಾಂ ಪಾಂಡುರಾಣಾಂ ಚ ಚತುರ್ದಂತಂ ಮದಾನ್ವಿತಂ ॥ ೫೫ ॥
ತಾನ್‌ಸರ್ವಾನ್ಮಧ್ಯತಃ ಕೃತ್ವಾ ಪುನಶ್ಚೈವ ಮಮಂಥಿರೇ ।
ನಿರ್ಮಥ್ಯಮಾನಾದುದಧೇರ್ನಿಗತಾನಿ ಬಹೂನ್ಯಥ ॥ ೫೬ ॥

---

ಆ ಕಡಲಿನಿಂದ ಕಲ್ಪವೃಕ್ಷ, ಪಾರಿಜಾತ, ಚೂತ, ಸಂತಾನಕ ಎಂಬ ದಿವ್ಯ ವೃಕ್ಷಗಳು ಉದ್ಭವಿಸಿದುವು. ಗಂಧರ್ವನಗರಗಳನ್ನು ಹೋಲುತ್ತಿದ್ದ ಆ ವೃಕ್ಷ ಗಳೆಲ್ಲವನ್ನೂ ಒಕ್ಕಡೆಗಿಟ್ಟು ಮತ್ತೆ ಸಮುದ್ರಮಥನವನ್ನು ಮುಂದುವರಿಸಿದರು.

೫೧–೫೨. ಹೀಗೆಯೇ ಮಥನಮಾಡುತ್ತಿರಲು ಆ ಕಡಲಿನಿಂದ ಸೂರ್ಯ ಕಾಂತಿಯೊಡಗೂಡಿ ಬೆಳಗುತ್ತಿರುವುದೂ, ರತ್ನಗಳಲ್ಲೆಲ್ಲಾ ಉತ್ತಮ ರತ್ನ ವಾದುದೂ ಆದ ಕೌಸ್ತುಭವೆಂಬ ರತ್ನವು ತನ್ನ ಕಾಂತಿಯಿಂದಲೇ ಮೂರು ಲೋಕಗಳನ್ನೂ ಬೆಳಗಿಸುತ್ತ ಚಿಂತಾಮಣಿಯೆಂಬ ಮತ್ತೊಂದು ರತ್ನದೊಡಗೂಡಿ ಉದಿಸಿತು.

೫೩. ಆಗ ದೇವತೆಗಳೆಲ್ಲರೂ ಆ ಕೌಸ್ತುಭಮಣಿಯನ್ನು ಶ್ರೀಮನ್ಮಹಾ ವಿಷ್ಣುವಿಗೆ ಒಪ್ಪಿಸಿ ಚಿಂತಾಮಣಿ ರತ್ನವನ್ನು ಮಾತ್ರ ತಮ್ಮಲ್ಲಿಟ್ಟುಕೊಂಡು ಮತ್ತಷ್ಟು ಬಲಶಾಲಿಗಳಾಗಿ ಮತ್ತೆಯೂ ಸಾಗರವನ್ನು ಮಥಿಸತೊಡಗಿದರು.

೫೪–೫೫. ಆಗಲಾ ಕ್ಷೀರಸಮುದ್ರದಿಂದ ಮಹಾ ರತ್ನವಾದ ಉಚ್ಚೈಃ ಶ್ರವಸ್ಸೆಂಬ ಕುದುರೆಯು ಹುಟ್ಟಿತು. ಅದರೊಡನೆ ಐರಾವತವೆಂಬ ಗಜವೂ ಮೇಲಕ್ಕೆ ಬಂದಿತು. ಆ ಗಜದೊಡನೆಯೇ ನಾಲ್ಕು ದಂತಗಳುಳ್ಳವಾಗಿ, ಮದೋದಕವನ್ನು ಸುರಿಸುತ್ತಿರುವ ಅರುವತ್ತುನಾಲ್ಕು ಬಿಳಿಯಾನೆಗಳು ಹೊರ ಬಂದುವು.

೫೬. ದೇವತೆಗಳೇ ಅವುಗಳನ್ನೂ ತಮ್ಮ ಮಧ್ಯದಲ್ಲಿ ಬಿಟ್ಟುಕೊಂಡು ಮತ್ತೆ ಮಥನಮಾಡಿದರು.

ಮದಿರಾ ವಿಜಯಾ ಭೃಂಗೀ ತಥಾ ಲಶುನಗೃಂಜನಾಃ ।
ಅತೀವ ಉನ್ಮಾದಕರೋ ಧುತ್ತೂರಃ ಪುಷ್ಕರಸ್ತಥಾ ॥ ೫೭ ॥
ಸ್ಥಾಪಿತಾನ್ಯೇಕಪದ್ಯೇ ನ ತೀರೇ ನದನದೀಪತೇಃ ।
ಪುನಶ್ಚ ತೇ ತತ್ರ ಮಹಾ ಸುರೇಂದ್ರಾ ಮಮಂಥುರಬ್ಧಿಂ ಸುರಸತ್ತಮೈಸ್ಸಹ॥
ನಿರ್ಮಥ್ಯಮಾನಾದುದಧೇಸ್ತದಾನೀಂ
ಯಾ ದಿವ್ಯಲಕ್ಷ್ಮೀರ್ಭುವನೈಕನಾಥಾ ।
ಆನ್ವೀಕ್ಷಕೀಂ ಬ್ರಹ್ಮವಿದೋವದಂತಿ
ತಥಾ ಚಾನ್ಯೇ ಮೂಲವಿದ್ಯಾಂ ಗೃಣಂತಿ ॥ ೫೯ ॥
ಬ್ರಹ್ಮವಿದ್ಯಾಂ ಕೇಚಿದಾಹುಃ ಸಮರ್ಥಾಃ
ಕೇಚಿತ್ಸಿದ್ಧಿಮೃದ್ಧಿಮಾಜ್ಞಾ ಮಥಾಶಾಂ ।
ಯಾಂ ವೈಷ್ಣವೀಂ ಯೋಗಿನಃ ಕೇಚಿದಾಹು
ಸ್ತಥಾ ಚ ಮಾಯಾಂ ಮಾಯಿನೋ ನಿತ್ಯಯುಕ್ತಾಃ ॥
ವದಂತಿ ಸರ್ವೇ ಕೇನಸಿದ್ಧಾಂತಯುಕ್ತಾಂ ಯಾಂ ।
ಯೋಗಮಾಯಾಂ ಜ್ಞಾನಶಕ್ತ್ಯನ್ವಿತಾ ಯೇ ॥ ೬೧ ॥

---

೫೭. ಈ ರೀತಿ ಕಡೆಯುತ್ತಿರುವಲ್ಲಿ ಆ ಕಡಲಿಂದಲೇ, ಮದಿರೆ, ವಿಜಯೆ, ಭೃಂಗಿ, ಲಶುನ, ಗೃಂಜನ, ಅತ್ಯುನ್ಮಾದವನ್ನುಂಟುಮಾಡುವ ಧುತ್ತೂರ, ಪುಷ್ಕರ ಮೊದಲಾದ ಅನೇಕ ವಸ್ತುಗಳು ಹುಟ್ಟಿದುವು.

೫೮. ದೇವತೆಗಳು ಅವುಗಳೆಲ್ಲವನ್ನೂ ನದನದೀಪತಿಯಾದ ಆ ಸಮುದ್ರದ ತೀರದಲ್ಲಿರಿಸಿ ದಾನವರೊಡಗೂಡಿ ಮತ್ತೆ ಮಥನಮಾಡಲಾರಂಭಿಸಿದರು.

೫೯. ಹೀಗೆ ಮಥನಮಾಡುತ್ತಿರಲು ಪ್ರಪಂಚಕ್ಕೆಲ್ಲ ಒಬ್ಬಳೇ ಒಡತಿ ಯೆನಿಸಿದ ದಿವ್ಯಲಕ್ಷ್ಮಿಯು ಆವಿರ್ಭವಿಸಿದಳು. ಈಕೆಯನ್ನು ಬ್ರಹ್ಮಜ್ಞಾನಿಗಳು ಆನ್ವೀಕ್ಷಕಿಯೆಂದು ಕರೆಯುತ್ತಾರೆ. ಇನ್ನು ಕೆಲವರು ಈ ದೇವಿಯನ್ನೇ ಮೂಲವಿದ್ಯೆಯೆನ್ನುತ್ತಾರೆ.

೬೦. ಕೆಲವರು ಈಕೆಯನ್ನು ಬ್ರಹ್ಮವಿದ್ಯೆಯೆಂದೂ ಹೇಳುವರು. ಪ್ರಾಜ್ಞ ರಾದ ಮತ್ತೆ ಕೆಲವರು ಈಕೆಯನ್ನೇ ಸಿದ್ಧಿಯೆಂದೂ, ಋದ್ಧಿಯೆಂದೂ, ಆಜ್ಞಾ ಯೆಂದೂ, ಆಶಾಯೆಂದೂ ಕರೆಯುತ್ತಾರೆ. ಈ ಮಹಾದೇವಿಯನ್ನೇ ಕೆಲವರು ಯೋಗಿಗಳು ವೈಷ್ಣವಿಯೆಂದು ಹೇಳುವರು. ಮಾಯಾವಿದರಾದ ಕೆಲವರು ನಿತ್ಯಯುಕ್ತರು ಈಕೆಯನ್ನೇ ಮಾಯೆಯೆನ್ನುತ್ತಾರೆ.

೬೧. ಎಲೈ ಶೌನಕಾದಿಗಳಿರಾ! ಸಮಸ್ತರೂ ಈಕೆಯನ್ನೇ ಕೇನೋಪ ನಿಷತ್ತಿನಲ್ಲಿ ಪ್ರತಿಪಾದಿತೆಯಾಗಿರುವ ಉಮಾ (ಶಕ್ತಿ) ದೇವಿಯೆಂದೂ, ಜ್ಞಾನ ಶಕ್ತಿಯೊಡಗೂಡಿದ ಇನ್ನೂ ಕೆಲವರು ಯೋಗಮಾಯಾ ಎಂದೂ ಹೇಳುತ್ತಾರೆ.

ದದೃಶುಸ್ತಾಂ ಮಹಾಲಕ್ಷ್ಮೀಮಾಯಾಂತೀಂ ಶನಕೈಸ್ತದಾ ।
ಗೌರಾಂ ಯುವತೀಂ ಸ್ನಿಗ್ಧಾಂ ಪದ್ಮಕಿಂಜಲ್ಕಭೂಷಣಾಂ ॥ ೬೨ ॥
ಸುಸ್ಮಿತಾಂ ಸುದ್ವಿಜಾಂ ಶ್ಯಾಮಾಂ ನವಯೌವನಭೂಷಣಾಂ ।
ವಿಚಿತ್ರವಸ್ತ್ರಾಭರಣ ರತ್ನಾನೇಕೋದ್ಯತಪ್ರಭಾಂ ॥ ೬೩ ॥
ಬಿಂಬೋಷ್ಠೀಂ ಸುನಸಾಂ ತನ್ವೀಂ ಸುಗ್ರೀವಾಂ ಚಾರುಲೋಚನಾಂ ।
ಸುಮಧ್ಯಾಂ ಚಾರುಜಘನಾಂ ಬೃಹತ್ಕಟಿತಟಾಂ ತಥಾ ॥ ೬೪ ॥
ನಾನಾರತ್ನಪ್ರದೀಪ್ತೈಶ್ಚ ನೀರಾಜಿತಮುಖಾಂಬುಜಾಂ ।
ಚಾರುಪ್ರಸನ್ನವದನಾಂ ಹಾರನೂಪುರಶೋಭಿತಾಂ ॥ ೬೫ ॥
ಮೂರ್ಧನಿ ಧ್ರಿಯಮಾಣೇನ ಛತ್ರೇಣಾಪಿ ವಿರಾಜಿತಾಂ ।
ಚಾಮರೈರ್ವಿಜ್ಯಮಾನಾಂ ತಾಂ ಗಂಗಾಕಲ್ಲೋಲಲೋಹಿತೈಃ ॥ ೬೬ ॥
ಪಾಂಡುರಂ ಗಜಮಾರೂಢಾಂ ಸ್ತೂಯಮಾನಾಂ ಮಹರ್ಷಿಭಿಃ ।
ಸುರದ್ರುಮಪುಷ್ಪಮಾಲಾಂ ಬಿಭ್ರತೀಂ ಮಲ್ಲಿಕಾಯುತಾಂ ॥ ೬೭ ॥
ಕರಾಗ್ರೇ ಧ್ರಿಯಮಾಣಾಂ ತಾಂ ದೃಷ್ಟ್ವಾ ದೇವಾಃ ಸಮುತ್ಸುಕಾಃ ।
ಆಲೋಕನಪರಾ ಯಾವತ್ತಾವತ್ತಾನ್ ದದೃಶೇ ಹ್ಯಸೌ ॥ ೬೮ ॥

---

೬೨–೬೮. ಆಗಲಾ ಕ್ಷೀರಸಾಗರ ಮಧ್ಯದಿಂದ ಮೆಲ್ಲಮೆಲ್ಲನೈತರುತ್ತಿರುವ ಆ ಮಹಾಲಕ್ಷ್ಮೀ ದೇವಿಯನ್ನು ಎಲ್ಲರೂ ಕಂಡರು. ಗೌರವರ್ಣವುಳ್ಳವಳಾಗಿ, ಯುವತಿಯಾಗಿ, ಸ್ನೇಹಮಯಿಯಾಗಿ, ಕಮಲಕೇಸರಗಳಿಂದಲಂಕೃತೆಯಾಗಿ, ನಸುನಗೆಯನ್ನು ಬೀರುತ್ತ, ಸೊಗಸಾದ ದಂತಪಂಕ್ತಿಯುಳ್ಳ ನವಯೌವನ ಭೂಷಿತೆಯಾದ ಸುಂದರಿಯಾಗಿ, ವಿಚಿತ್ರವಾದ ಬಗೆ ಬಗೆಯ ವಸ್ತ್ರಾಭರಣಗಳಿಂದಲೂ, ರತ್ನಗಳಿಂದಲೂ ಕಾಂತಿಯನ್ನು ಹೊರಚಿಮ್ಮುತ್ತ, ತೊಂಡೆ ಹಣ್ಣಿನಂತೆ ಕೆಂಪೊಗೆವ ಚೆಂದುಟಿಗಳೊಡಗೂಡಿ, ಸುಂದರವಾದ ಮೂಗೂ, ಅಂದವಾದ ಕಂಠವೂ, ಮನೋಹರವಾದ ಕಣ್ಣುಗಳೂ ಉಳ್ಳವಳಾಗಿ, ಒಳ್ಳೆಯ ತೆಳ್ಳನೆಯ ನಡುವೂ, ಸೊಗಸಾದ ಜಘನಪ್ರದೇಶಗಳೂ, ಬೃಹನ್ನಿತಂಬಗಳೂ ಉಳ್ಳವಳಾಗಿ ಗಂಗಾನದಿಯ ತೆರೆಗಳಂತೆ ಕೇಸರವರ್ಣವುಳ್ಳ ಚಾಮರಗಳಿಂದ ವೀಜಿತೆಯಾಗಿ, ಪಾಂಡುರ (ಬಿಳಿಯ) ವರ್ಣದ ಆನೆಯನ್ನೇರಿ, ಮಹರ್ಷಿಗಳೆಲ್ಲರಿಂದಲೂ ಸ್ತುತಿಸಲಾದವಳಾಗಿ, ಮಲ್ಲಿಗೆಯೊಡಗೂಡಿದ ಕಲ್ಪವೃಕ್ಷದ ಹೂಗಳ ಮಾಲೆಯನ್ನು ಕೈಯಲ್ಲಿ ಹಿಡಿದು ಆ ಕ್ಷೀರಸಾಗರದಲ್ಲಿ ಮೆಲ್ಲಮೆಲ್ಲನೈತರುತ್ತಿರುವ ಆ ದೇವಿಯನ್ನು ದೇವದಾನವರೆಲ್ಲರೂ ಆಶ್ಚರ್ಯಭರಿತರಾಗಿ ನೋಡಿದರು. ಅವರೆಲ್ಲರೂ ಆ ದೇವಿಯನ್ನು ನೋಡಲಾಸಕ್ತರಾದ ಕ್ಷಣದಲ್ಲಿಯೇ ಆಕೆಯೂ ಅವರನ್ನು ದೃಷ್ಟಿಸಿ ನೋಡಿದಳು. ಆ ದೇವಿಯು, ತಾಯಿಯು ತನ್ನ ಸ್ವಂತ ಮಕ್ಕಳನ್ನೆಂತೋ ಅಂತು, ಆ ದೇವತೆಗಳು, ದಾನವರು, ಸಿದ್ಧ ಚಾರಣರು, ಪನ್ನಗರು ಮೊದಲಾದ ಎಲ್ಲರನ್ನೂ ಕೃಪಾದೃಷ್ಟಿಯಿಂದ ನೋಡಿದಳು.

ದೇವಾಂಶ್ಚ ದಾನವಾಂಶ್ಚೈವ ಸಿದ್ಧಚಾರಣಪನ್ನಗಾನ್ ।
ಯಥಾ ಮಾತಾ ಸ್ವಪುತ್ರಾಂಶ್ಚ ಮಹಾಲಕ್ಷ್ಮೀಸ್ತಥಾ ಸತೀ ॥ ೬೯ ॥
ಆಲೋಕಿತಾಸ್ತಥಾ ದೇವಾಸ್ತಯಾ ಲಕ್ಷ್ಮ್ಯಾಶ್ರಿಯಾನ್ವಿತಾಃ ।
ಸಂಜಾತಾ ತತ್ಕ್ಷಣಾದೇವ ರಾಜ್ಯಲಕ್ಷಣಲಕ್ಷಿತಾಃ ।
ದೈತ್ಯಾಸ್ತೇ ನಿಃಶ್ರೀಕಾ ಜಾತಾ ಯೇ ಶ್ರಿಯಾಽನವಿಲೋಕಿತಾಃ ॥ ೭೦ ॥

ನಿರೀಕ್ಷ್ಯಮಾಣಾ ಚ ತದಾ ಮುಕುಂದಂ
ತಮಾಲನೀಲಂ ಸು ಕಪೋಲನಾಸಂ ।
ವಿಭ್ರಾಜಮಾನಂ ವಪುಷಾ ಪರೇಣ
ಶ್ರೀವತ್ಸಲಕ್ಷ್ಮಂ ಸದಯಾವಲೋಕಂ ॥ ೭೧ ॥
ದೃಷ್ಟ್ವಾ ತದೈವ ಸಹಸಾ ವನಮಾಲಯಾನ್ವಿತಾ
ಲಕ್ಷ್ಮೀರ್ಗಜಾದವತತಾರ ಸುವಿಸ್ಮಯಂತೀ ।
ಕಂಠೇ ಸಸರ್ಜ ಪುರುಷಸ್ಯ ಪರಸ್ಯ ವಿಷ್ಣೋ-
ರ್ಮಾಲಾಂ ಶ್ರಿಯಾ ವಿರಚಿತಾಂ ಭ್ರಮರೈರುಪೇತಾಂ ॥ ೭೨॥
ವಾಮಾಂಗಮಾಶ್ರಿತ್ಯ ತದಾ ಮಹಾತ್ಮನಃ
ಸೋಽಪಾವಿಶತ್ತತ್ರ ಸಮೀಕ್ಷ್ಯ ತಾವುಭೌ ।
ಸುರಾಃ ಸ ದೈತ್ಯಾ ಮುದಮಾಪುರದ್ಭುತಾಂ
ಸಿದ್ಧಾಪ್ಸರಃ ಕಿನ್ನರ ಚಾರಣಾಶ್ಚ ॥ ೭೩ ॥

---

೬೯–೭೦. ಈ ರೀತಿ ಆ ದೇವಿಯು ದೇವತೆಗಳನ್ನು ದೃಷ್ಟಿಸಿ ನೋಡಿದೊಡನೆಯೇ ಅವರೆಲ್ಲರೂ ಐಶ್ವರ್ಯ (ಕಾಂತಿ) ಸಂಪನ್ನರಾಗಿ ರಾಜ್ಯಲಕ್ಷಣ ಲಕ್ಷಿತರಾದರು. ದೈತ್ಯರನ್ನು ಆಕೆಯು ದೃಷ್ಟಿಸಲಿಲ್ಲವಾಗಿ ಅವರೆಲ್ಲರೂ ನಿಃಶ್ರೀಕ (ಕಾಂತಿಹೀನ)ರಾದರು.

೭೧–೭೨. ತರುವಾಯ, ಆ ಮಹಾಲಕ್ಷ್ಮಿಯು ತಮಾಲನೀಲನಾಗಿ, ಸೊಗಸಾದ ಕಪೋಲವೂ, ನಾಸಿಕೆಯೂ ಉಳ್ಳವನಾಗಿ, ಒಳ್ಳೆಯ ಚೆಲುವಿನಿಂದ ಬೆಳಗುತ್ತ, ಶ್ರೀವತ್ಸಲಾಂಛನನಾಗಿ, ಕೃಪಾಪೂರ್ಣದೃಷ್ಟಿಯುಳ್ಳವನಾಗಿ ಕಣ್ಗೊಳಿಸುತ್ತಿರುವ ಮುಕುಂದ (ನಾರಾಯಣ)ನನ್ನು ನೋಡಿ, ಒಡನೆಯೇ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುತ್ತ ಬಹುಬೇಗನೆ ವನಮಾಲೆಯೊಡನೆಯೇ ಆನೆಯಿಂದಿಳಿದು ತಾನೇ ಕಟ್ಟಿದುದೂ, ದುಂಬಿಗಳೊಡಗೂಡಿದುದೂ ಆದ ಆ ಮಾಲಿಕೆಯನ್ನು ಆತನ ಕೊರಳಿಗೆ ಹಾಕಿದಳು.

೭೩. ಶ್ರೀದೇವಿಯು ಆ ಬಳಿಕ ವಿಷ್ಣುವಿನ ವಾಮಾಂಗವನ್ನಾಶ್ರಯಿಸಿದಳು. ಆ ಲಕ್ಷ್ಮೀನಾರಾಯಣರೀರ್ವರನ್ನೂ ಕಂಡು ದೇವತೆಗಳೂ,ದಾನವರೂ,ಸಿದ್ಧರೂ, ಅಪ್ಸರರೂ, ಕಿನ್ನರರೂ, ಚಾರಣರೂ ಅದ್ಭುತವಾದ ಆನಂದವನ್ನು ಹೊಂದಿದರು.

**ಸರ್ವೇಷಾಮೇವಲೋಕಾನಾಮೈಕಪದ್ಯೇನ ಸರ್ವಶಃ ।**
**ಹರ್ಷೋ ಮಹಾನಭೂತ್ತತ್ರ ಲಕ್ಷ್ಮೀನಾರಾಯಣಾಗಮೇ ॥ ೭೪ ॥**
**ಲಕ್ಷ್ಮ್ಯಾವೃತೋ ಮಹಾವಿಷ್ಣುರ್ಲಕ್ಷ್ಮೀಸ್ತೇನೈವಸಂವೃತಾ ।**
**ಏವಂ ಪರಸ್ಪರಂ ಪ್ರೀತ್ಯಾ ಹ್ಯವಲೋಕನ ತತ್ಪರೌ ॥ ೭೫ ॥**
**ಶಂಖಾಶ್ಚ ಪಟಹಾಶ್ಚೈವ ಮೃದಂಗಾನಕಗೋಮುಖಾಃ ।**
**ಭೇರ್ಯಶ್ಚ ಝರ್ಝರೀಣಾಂ ಚ ಸ ಶಬ್ದಸ್ತುಮುಲೋಭವತ್ ॥ ೭೬ ॥**
**ಭಭೂವ ಗಾಯಕಾನಾಂ ಚ ಗಾಯನಂ ಸುಮಹತ್ತದಾ ।**
**ತತಾನಿ ವಿತತಾನ್ಯೇವ ಘನಾನಿ ಸುಷಿರಾಣಿ ಚ ॥ ೭೭ ॥**
**ಏವಂ ವಾದ್ಯಪ್ರಭೇದೈಶ್ಚ ವಿಷ್ಣುಂ ಸರ್ವಾತ್ಮನಾ ಹರಿಂ ।**
**ಅತೋಷಯನ್ಸಗೀತಜ್ಞಾ ಗಂಧರ್ವಾಪ್ಸರಸಾಂಗಣಾಃ ॥ ೭೮ ॥**
**ತಥಾ ಜಗುರ್ನಾರದ ತುಂಬುರಾದಯೋ**
**ಗಂಧರ್ವ ಯಕ್ಷಾಃ ಸುರಸಿದ್ಧಸಂಘಾಃ ।**
**ಸಂಸೇವಮಾನಾಃ ಪರಮಾತ್ಮರೂಪಂ**
**ನಾರಾಯಣಂ ದೇವ ಮಗಾಧಭೋಧಂ ॥ ೭೯ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಸಮುದ್ರಮಥನಾಖ್ಯಾನೇ ಲಕ್ಷ್ಮೀಪ್ರಾದುರ್ಭಾವವರ್ಣನಂ"ನಾಮ ಏಕಾದಶೋಽಧ್ಯಾಯಃ**

---

೭೪–೭೯. ಅಯ್ಯಾ ಮುನಿಗಳಿರಾ! ಶ್ರೀ ಲಕ್ಷ್ಮೀನಾರಾಯಣರೀರ್ವರೂ ಈ ರೀತಿ ಸೇರಿದ ಆ ಸಮಯದಲ್ಲಿ ಎಲ್ಲ ಲೋಕಗಳಿಗೂ ಏಕಕಾಲದಲ್ಲಿಯೇ ಆನಂದವುಂಟಾಯಿತು. ಹೀಗೆ ಆ ಮಹಾಲಕ್ಷ್ಮಿಯು ಮಹಾವಿಷ್ಣುವನ್ನು ವರಿಸಿದಳು. ಬಳಿಕ ಆ ದೇವದೇವಿಯರೀರ್ವರೂ ಪರಸ್ಪರ ಪ್ರೀತಿಯಿಂದ ಒಬ್ಬರನ್ನೊಬ್ಬರು ನೋಡುವುದರಲ್ಲಿ ಆಸಕ್ತರಾದರು. ಆಗ ಶಂಖಗಳು, ಪಟಹಗಳು, ಮೃಂದಗ, ಆನಕ, ಗೋಮುಖ, ಭೇರಿ, ಝರ್ಝರಿ ಮೊದಲಾದ ದಿವ್ಯವಾದ್ಯಗಳ ಧ್ವನಿಯು ತುಮುಲವಾಯಿತು. ಅದೇ ಸಮಯದಲ್ಲಿ ದೇವಗಾಯಕರ ಘನವಾದ ಗಾಯನವೂ ನಡೆಯಿತು. ಗಂಭೀರಗಳೂ, ಮನೋಹರಗಳೂ ಆದ ಪಂಚಮಹಾ ವಾದ್ಯಗಳು ಮೊಳಗಿದುವು. ಹೀಗೆ ಗಂಧರ್ವರೂ, ಅಪ್ಸರರೂ ಗುಂಪು ಗುಂಪಾಗಿ ಸೇರಿ ಅನೇಕ ವಾದ್ಯಸಂಗೀತಗಳಿಂದ ಶ್ರೀಮನ್ಮಹಾವಿಷ್ಣುವನ್ನು ಮನಸಾರ ಸಂತೋಷಗೊಳಿಸಿದರು. ಅಂತೆಯೇ ನಾರದ ತುಂಬುರರೂ, ಯಕ್ಷಗಂಧರ್ವರೂ, ಸುರರೂ, ಸಿದ್ಧರೂ, ಪರಮಾತ್ಮರೂಪನೂ, ಅಗಾಧಬೋಧನೂ ಆದ ಆ ಶ್ರೀಮನ್ನಾರಾಯಣನನ್ನು ಅನನ್ಯಭಕ್ತಿಯಿಂದ ಸೇವಿಸಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ
"ಶ್ರೀಮಹಾಲಕ್ಷ್ಮೀಪ್ರಾದುರ್ಭಾವವರ್ಣನ"ವೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ದ್ವಾದಶೋಽಧ್ಯಾಯಃ

### ಸಮುದ್ರಮಥನಾಖ್ಯಾನೇ — ದೇವಾನಾಮಮೃತಪ್ರಾಶನ ವೃತ್ತಾಂತಕಥನಂ

ಲೋಮಶ ಉವಾಚ :—

**ಪ್ರಣಮ್ಯ ಪರಮಾತ್ಮಾನಂ ರಮಾಯುಕ್ತಂ ಜನಾರ್ದನಂ ।**
**ಅಮೃತಾರ್ಥಂ ಮಮಂಥುಸ್ತೇ ಸುರಾಸುರಗಣಾಃ ಪುನಃ ॥ ೧ ॥**
**ಉದಧೇರ್ಮಥ್ಯಮಾನಾಚ್ಚ ನಿರ್ಗತಃ ಸುಮಹಾಯಶಾಃ ।**
**ಧನ್ವಂತರಿತಿ ಖ್ಯಾತೋ ಯುವಾ ಮೃತ್ಯುಂಜಯಃ ಪರಃ ॥ ೨ ॥**
**ಪಾಣಿಭ್ಯಾಂ ಪೂರ್ಣಕಲಶಂ ಸುಧಾಯಾಃ ಪರಿಗೃಹ್ಯ ವೈ ।**
**ಯಾವತ್ಸರ್ವೇ ಸುರಾಃ ಸರ್ವೇ ನಿರೀಕ್ಷಂತೇ ಮನೋಹರಂ ॥ ೩ ॥**
**ತದಾ ದೈತ್ಯಾಃ ಸಮಂ ಗತ್ವಾ ಹರ್ತುಕಾಮಾ ಬಲಾದಿವ ।**
**ಸುಧಾಯಾ ಪೂರ್ಣಕಲಶಂ ಧನ್ವಂತರಿಕರೇ ಸ್ಥಿತಂ ॥ ೪ ॥**
**ಯಾವತ್ತರಂಗಮಾಲಾಭಿರಾವೃತೋಽಭೂದ್ಭಿಷಕ್ತಮಃ ।**
**ಶನೈಃ ಶನೈಃ ಸಮಾಯಾತೋ ದೃಷ್ಟೋಽಸೌ ವೃಷಪರ್ವಣಾ ॥ ೫ ॥**

---

### ಕನ್ನಡದ ಅನುವಾದ

#### ಸಮುದ್ರಮಥನಾಖ್ಯಾನ — ದೇವತೆಗಳ ಅಮೃತಪ್ರಾಶನ

೧. ಲೋಮಶನು ಹೇಳುತ್ತಾನೆ:—ಎಲೈ ಶೌನಕಾದಿ ಮುನಿಗಳಿರಾ! ಆಮೇಲೆ ದೇವದಾನವರೆಲ್ಲರೂ ಶ್ರೀ ಲಕ್ಷ್ಮೀಸಮೇತನೂ ಪರಮಾತ್ಮನೂ ಆದ ಜನಾರ್ದನನನ್ನು ನಮಸ್ಕರಿಸಿ, ಮತ್ತೆ ಕ್ಷೀರಸಾಗರವನ್ನು ಮಥಿಸಲಾರಂಭಿಸಿದರು.

೨. ಹೀಗೆ ಮಥನ ಮಾಡುತ್ತಿರಲು ಆ ಸಾಗರದಿಂದ ಮಹಾ ಕೀರ್ತಿಶಾಲಿಯೂ, ಎರಡನೆಯ ಮೃತ್ಯುಂಜಯನೆಂದು ಪ್ರಸಿದ್ಧನೂ ಆದ ಧನ್ವಂತರಿಯು ಉದಿಸಿದನು.

೩–೪. ಅಮೃತಪೂರ್ಣವಾದ ಕಲಶವನ್ನು ಕೈಯಲ್ಲಿ ಹಿಡಿದು ಮನೋಹರವಾಗಿ ಬೆಳಗುತ್ತಿರುವ ಆತನನ್ನು ದೇವತೆಗಳೆಲ್ಲರೂ ನೋಡುತ್ತಿರುವಷ್ಟರಲ್ಲಿಯೇ, ದೈತ್ಯರೆಲ್ಲರೂ ಒಟ್ಟಿಗೆ ನುಗ್ಗಿಹೋಗಿ ಆ ಕಲಶವನ್ನು ಬಲಾತ್ಕಾರದಿಂದ ಕಸಿದುಕೊಳ್ಳಬಯಸಿದರು.

೫. ಆ ವೈದ್ಯಶ್ರೇಷ್ಠನಾದರೋ ಕ್ಷೀರಸಾಗರದ ತರಂಗಮಾಲೆಗಳ ಮೇಲೆ ಮೆಲ್ಲ ಮೆಲ್ಲನೆ ನಡೆದು ಬರುತ್ತಿರುವಂತೆಯೇ ದೈತ್ಯರಾಜನಾದ ಆ ವೃಷಪರ್ವನು (ಬಲಿಯು) ಅವನನ್ನು ಕಂಡನು.

ಕರಸ್ಥಃ ಕಲಶಸ್ತಸ್ಯ ಹೃತಸ್ತೇನ ಬಲಾದಿವ ।
ಅಸುರಾಶ್ಚ ತತಃ ಸರ್ವೇ ಜಗರ್ಜುರತಿಭೀಷಣಂ ॥ ೬ ॥
ಕಲಶಂ ಸುಧಯಾ ಪೂರ್ಣಂ ಗೃಹೀತ್ವಾ ತೇ ಸಮುತ್ಸುಕಾಃ ।
ದೈತ್ಯಾಃ ಪಾತಾಲಮಾಜಗ್ಮುಸ್ತದಾ ದೇವಾ ಭ್ರಮಾನ್ವಿತಾಃ ॥ ೭ ॥
ಅನುಜಗ್ಮುಃ ಸುಸನ್ನದ್ಧಾಯೋದ್ಧುಕಾಮಾಶ್ಚ ತೈಃ ಸಹ ।
ತದಾ ದೇವಾನ್‌ಸಮಾಲೋಕ್ಯ ಬಲಿರೇವಮಭಾಷತ ॥ ೮ ॥

ಬಲಿರುವಾಚ :—

ವಯಂತು ಕೇವಲಂ ದೇವಾಃ ಸುಧಯಾ ಪರಿತೋಷಿತಾಃ ।
ಶೀಘ್ರಮೇವ ಪ್ರಗಂತವ್ಯಂ ಭವದ್ಭಿಶ್ಚ ಸುರೋತ್ತಮೈಃ ॥ ೯ ॥
ತ್ರಿವಿಷ್ಟಪಂ ಮುದಾಯುಕ್ತೈಃ ಕಿಮಸ್ಮಾಭಿಃ ಪ್ರಯೋಜನಂ ।
ಪುರಾಸ್ಮಾಭಿಃ ಕೃತಂ ಮೈತ್ರಂ ಭವದ್ಭಿಃ ಸ್ವಾರ್ಥತತ್ಪರೈಃ ।
ಅಧುನಾ ವಿದಿತಂ ತತ್ತು ನಾತ್ರಕಾರ್ಯಾ ವಿಚಾರಣಾ ॥ ೧೦ ॥
ಏವಂ ನಿರ್ಭರ್ತ್ಸಿತಾಸ್ತೇನ ಬಲಿನಾ ಸುರಸತ್ತಮಾಃ ।
ಯಥಾಗತೇನ ಮಾರ್ಗೇಣ ಜಗ್ಮುರ್ನಾರಾಯಣಂ ಪ್ರಭುಂ ॥ ೧೧ ॥

---

೬–೭. ಇಂತು ಕಂಡಕೂಡಲೇ ಆ ಬಲಿಯು ಧನ್ವಂತರಿಯ ಕೈಯಲ್ಲಿದ್ದ ಆ ಅಮೃತ ಕಲಶವನ್ನು ಬಲಾತ್ಕಾರವಾಗಿ ಕಿತ್ತುಕೊಂಡನು. ಆಗ ದಾನವರೆಲ್ಲರೂ ಮಹಾನಂದಭರಿತರಾಗಿ, ಬಹು ಭಯಂಕರವಾಗಿ ಗರ್ಜಿಸಿದರು. ಅವರೆಲ್ಲರೂ ಆ ಸುಧಾಪೂರ್ಣ ಕಲಶವನ್ನು ತೆಗೆದುಕೊಂಡು ಮಹೋತ್ಸಾಹಪೂರಿತರಾಗಿ ಪಾತಾಳಲೋಕಕ್ಕೆ ಹೊರಟುಹೋದರು. ಆಗ ದೇವತೆಗಳು ಮುಂದೇನುಮಾಡುವುದಕ್ಕೂ ದಿಕ್ಕುತೋಚದೆ ಕಕ್ಕುಬಿಕ್ಕಾದರು.

೮. ಕಡೆಗೆ ಅವರೆಲ್ಲರೂ ಆ ದಾನವರೊಡನೆ ಕಾಳಗಮಾಡಲು ಸಿದ್ಧರಾದರು. ಅವರನ್ನು ಕಂಡು ಬಲಿಯು ಈ ರೀತಿ ಹೇಳಿದನು.

೯–೧೦. ಬಲಿಯು ಹೇಳುತ್ತಾನೆ:—ಅಯ್ಯಾ ದೇವತೆಗಳಿರಾ! ನಾವು ಕೇವಲ ಈ ಅಮೃತದಿಂದಲೇ ತೃಪ್ತರಾಗಿರುವೆವು. ದೇವಶ್ರೇಷ್ಠರಾದ ನೀವೆಲ್ಲರೂ ಜಾಗ್ರತೆಯಾಗಿ ನಿಮ್ಮ ಸ್ವರ್ಗಲೋಕಕ್ಕೆ ಹೊರಟುಹೋಗಿರಿ. ಇನ್ನು ನಮ್ಮಿಂದ ನಿಮಗಾವ ಪ್ರಯೋಜನವಿರುವುದು? ಸ್ವಾರ್ಥಪರರಾದ ನೀವು ಪೂರ್ವದಲ್ಲಿ ನಮ್ಮೊಡನೆ ಗೆಳೆತನವನ್ನು ಮಾಡಿಕೊಂಡುದೇಕೆಂಬುದು ನಮಗೆ ಇದೀಗ ತಿಳಿಯಿತು. ಈ ವಿಷಯದಲ್ಲಿ ಈಗ ಯಾವ ಚರ್ಚೆಯೂ ಬೇಕಿಲ್ಲ.

೧೧. ಬಲಿಯು ಈ ರೀತಿ ಹೆದರಿಸಿ ನುಡಿದೊಡನೆ ಆ ಸುರಸತ್ತಮರೆಲ್ಲರೂ ಬಂದ ದಾರಿಯನ್ನು ಹಿಡಿದು ಹಿಂತಿರುಗಿ ತಮ್ಮ ಸ್ವಾಮಿಯಾದ ನಾರಾಯಣನನ್ನು ಮೊರೆಹೊಕ್ಕರು.

**ತಂ ದೃಷ್ಟ್ವಾ ವಿಷ್ಣುನಾ ಸರ್ವೇ ಸುರಾ ಭಗ್ನಮನೋರಥಾಃ ।**
**ಆಶ್ವಾಸಿತಾ ವಚೋಭಿಶ್ಚ ನಾನಾನುನಯಕೋವಿದೈಃ ॥ ೧೨ ॥**
**ಮಾ ತ್ರಾಸಂ ಕುರುತಾತ್ರಾರ್ಥೆ ಆನಯಿಷ್ಯಾಮಿ ತಾಂ ಸುಧಾಂ ।**
**ಏವಮಾಭಾಷ್ಯ ಭಗವಾನ್ಮುಕುಂದೋಽನಾಥಸಂಶ್ರಯಃ ॥ ೧೩ ॥**
**ಸ್ಥಾಪಯಿತ್ವಾ ಸುರಾನ್ ಸರ್ವಾನ್ ತತ್ರೈವ ಮಧುಸೂದನಃ ।**
**ಮೋಹಿನೀರೂಪಮಾಸ್ಥಾಯ ದೈತ್ಯಾನಾಮಗ್ರತೋಽಭವತ್ ॥ ೧೪ ॥**
**ತಾವದ್ದೈತ್ಯಾಃ ಸುಸಂರಬ್ಧಾಃ ಪರಸ್ಪರಮಥಾಬ್ರುವನ್ ।**
**ವಿವಾದಃ ಸರ್ವದೈತ್ಯಾನಾಮಮೃತಾರ್ಥೇ ತದಾಽಭವತ್ ॥ ೧೫ ॥**
**ಏವಂ ಪ್ರವರ್ತಮಾನೇ ತು ಮೋಹಿನೀರೂಪಮಾಶ್ರಿತಾಂ ।**
**ದೃಷ್ಟ್ವಾ ಯೋಷಾಂ ತದಾ ದೈವಾತ್ಸರ್ವಭೂತಮನೋರಮಾಂ ॥ ೧೬ ॥**
**ವಿಸ್ಮಯೇನ ಸಮಾವಿಷ್ಟಾ ಬಭೂವುಸ್ತೃಷಿತೇಕ್ಷಣಾಃ ।**
**ತಾಂ ಸಂಮಾಸ್ಯ ತದಾ ದೈತ್ಯರಾಜೋ ಬಲಿರುವಾಚ ಹ ॥ ೧೭ ॥**

**ಬಲಿರುವಾಚ :—**

**ಸುಧಾ ತ್ವಯಾ ವಿಭಕ್ತವ್ಯಾ ಸರ್ವೇಷಾಂ ಗತಿಹೇತವೇ ।**
**ಶೀಘ್ರತ್ವೇನ ಮಹಾಭಾಗೇ ಕುರುಷ್ವ ವಚನಂ ಮಮ ॥ ೧೮ ॥**

---

೧೨–೧೪. ಈ ರೀತಿ ತನ್ನನ್ನು ಮೊರೆಹೊಕ್ಕುಬಂದ ಭಗ್ನಮನೋರಥರಾದ ಆ ದೇವತೆಗಳನ್ನು ಕಂಡು, ಅನೇಕ ಬಗೆಯಿಂದ ಸಮಾಧಾನ ಮಾಡಲು ಬಲ್ಲವನಾದ ಆ ಶ್ರೀಮನ್ನಾರಾಯಣನು, "ಎಲೈ ದೇವತೆಗಳಿರಾ! ನೀವು ಹೆದರಬೇಡಿರಿ. ನಾನು ಆ ಅಮೃತ ಕಲಶವನ್ನು ತರುತ್ತೇನೆ" ಎಂದು ಹೇಳಿದನು. ಆಶ್ರಿತರಕ್ಷಕನಾದ ಆ ಮಧುಸೂದನನು ಹೀಗೆ ಹೇಳಿ, ದೇವತೆಗಳೆಲ್ಲರನ್ನೂ ಅಲ್ಲಿಯೇ ಇರಗೊಳಿಸಿ ತಾನು ದಿವ್ಯವಾದ ಮೋಹಿನೀ ರೂಪವನ್ನು ತಾಳಿದವನಾಗಿ ಆ ದೈತ್ಯರ ಮುಂದೆ ಅವತರಿಸಿದನು.

೧೫–೧೭. ಅಷ್ಟರಲ್ಲಿ ಆ ದೈತ್ಯರಲ್ಲಿಯೇ ಅಮೃತಕ್ಕಾಗಿ ಪರಸ್ಪರ ವಿವಾದ ಹುಟ್ಟಿತು. ಹೀಗೆ ವಿವಾದವು ನಡೆಯುತ್ತಿರಲು ಅವರೆಲ್ಲರೂ ಸಮಸ್ತ ಭೂತಗಳ ಮನಸ್ಸನ್ನೂ ಸೆಳೆಯುವ ಸೌಂದರ್ಯದಿಂದ ಕೂಡಿ ಅತ್ಯಪರೂಪವಾಗಿ ಕಂಗೊಳಿಸುತ್ತಿರುವ ಮೋಹಿನೀರೂಪವನ್ನು ತಾಳಿರುವ ಶ್ರೀಮನ್ನಾರಾಯಣನನ್ನು ನೋಡಿದರು. ಒಡನೆಯೇ ಅವರು ಆಕೆಯನ್ನು ಹಸಿದ ಕಂಗಳಿಂದ ನೋಡತೊಡಗಿದರು. ದೈತ್ಯರಾಜನಾದ ಬಲಿಯಾದರೋ ಆಕೆಯನ್ನು ಗೌರವಿಸಿ ಹೀಗೆಂದನು.

೧೮. ಬಲಿಯು ಹೇಳುತ್ತಾನೆ:— "ಎಲೌ ಮಹಾಭಾಗ್ಯಶಾಲಿನಿಯೇ! ಇದೋ, ನಾನು ಅಪ್ಪಣೆಯಿತ್ತಿರುವೆನು. ಈಗ ನೀನು ನಮ್ಮೆಲ್ಲರ ಜೀವಿಕೆಗಾಗಿ ಈ ಅಮೃತವನ್ನು ಹಂಚುವವಳಾಗು."

**ಏವಮುಕ್ತ್ವಾ ಹ್ಯುವಾಚೇದಂ ಸ್ಮಯಮಾನಾ ಬಲಿಂ ಪ್ರತಿ ।**
**ಸ್ತ್ರೀಣಾಂ ನೈವ ಚ ವಿಶ್ವಾಸಃ ಕರ್ತವ್ಯೋ ಹಿ ವಿಪಶ್ಚಿತಾ ॥ ೧೯ ॥**
**ಅನೃತಂ ಸಾಹಸಂ ಮಾಯಾ ಮೂರ್ಖತ್ವಮತಿಲೋಭತಾ ।**
**ಅಶೌಚಂ ನಿರ್ಘೃಣತ್ವಂ ಚ ಸ್ತ್ರೀಣಾಂ ದೋಷಾಃ ಸ್ವಭಾವಜಾಃ ॥ ೨೦ ॥**
**ನಿಃಸ್ನೇಹತ್ವಂ ಚ ವಿಜ್ಞೇಯಂ ಧೂರ್ತತ್ವಂ ಚೈವ ತತ್ತ್ವತಃ ।**
**ಸ್ವಸ್ತ್ರೀಣಾಂ ಚೈವ ವಿಜ್ಞೇಯಾ ದೋಷಾ ನಾಸ್ತ್ಯತ್ರ ಸಂಶಯಃ ॥ ೨೧ ॥**
**ಯಥೈವ ಶ್ವಾಪದಾನಾಂ ಚ ವೃಕಾ ಹಿಂಸಾಪರಾಯಣಾಃ ।**
**ಕಾಕಾ ಯಥಾಂಡಜಾನಾಂ ಚ ಶ್ವಾಪದಾನಾಂ ಚ ಜಂಬುಕಾಃ ।**
**ಧೂರ್ತಾ ತಥಾ ಮನುಷ್ಯಾಣಾಂ ಸ್ತ್ರೀ ಜ್ಞೇಯಾ ಸತತಂ ಬುಧೈಃ ॥ ೨೨ ॥**
**ಮಯಾ ಸಹ ಭವದ್ಭಿಶ್ಚ ಕಥಂ ಸಖ್ಯಂ ಪ್ರವರ್ತತೇ ।**
**ಸರ್ವಥಾಽತ್ರ ನ ವಿಜ್ಞೇಯಾಃ ಕೇ ಯೂಯಂ ಚೈವ ಕಾ ಹ್ಯಹಂ ॥ ೨೩ ॥**
**ತಸ್ಮಾದ್ಭವದ್ಭಿಃ ಸಂಚಿಂತ್ಯ ಕಾರ್ಯಾಕಾರ್ಯವಿಚಕ್ಷಣೈಃ ।**
**ಕರ್ತವ್ಯಂ ಪರಯಾ ಬುದ್ಧ್ಯಾ ಪ್ರಯಾತಾಽಸುರಸತ್ತಮಾಃ ॥ ೨೪ ॥**

---

೧೯–೨೧. ಆಗಲಾ ಮೋಹಿನಿಯು ಆ ಬಲಿಯನ್ನು ಕುರಿತು ನಸುನಗುತ್ತಾ, "ಅಯ್ಯಾ! ಬುದ್ಧಿಶಾಲಿಯಾದವನು ಹೆಂಗಸರನ್ನು ನಂಬಬಾರದು. ಸುಳ್ಳು, ತಟವಟ, ಸಾಹಸ, ಮೋಸ, ಮೊಂಡುತನ, ಜಿಪುಣತನ, ಕೊಳಕು (ಅಶೌಚ), ದಯೆಯಿಲ್ಲದಿರುವುದು(ಕಾಠಿನ್ಯ) ಇವೆಲ್ಲವೂ ಹೆಂಗಸರಿಗೆ ಸಹಜವಾದ ದೋಷಗಳು. ಇಷ್ಟೆಯಲ್ಲದೆ ಸ್ನೇಹವಿಲ್ಲದಿರುವುದು, ಧೂರ್ತತನ ಇವೂ ಹೆಂಗಸರಲ್ಲಿರುತ್ತವೆಂದು ತಿಳಿಯಬೇಕು. ಪಂಡಿತನಾದವನು ಈ ದೋಷಗಳನ್ನು ತನ್ನ ಸ್ವಂತ ಸ್ತ್ರೀಯರಲ್ಲಿಯೂ ಇರುತ್ತವೆಯೆಂದು ತಿಳಿಯತಕ್ಕದು. ಇದರಲ್ಲಿ ಸಂಶಯವಿಲ್ಲವು.

೨೨–೨೩. ತೋಳಗಳು, ನರಿಗಳು, ನಾಯಿಗಳಿಗೂ, ಕಾಗೆಗಳು ಮೊಟ್ಟೆಗಳಿಂದ ಹುಟ್ಟುವ ಇತರ ಪಕ್ಷಿಗಳಿಗೂ, ಹೇಗೆ ಹಿಂಸೆಯನ್ನುಂಟುಮಾಡುವುದರಲ್ಲಿಯೇ ತೊಡಗಿರುತ್ತವೆಯೋ, ಸಾಧುಗಳಾದ ಮಾನವರನ್ನು ತೊಂದರೆಗೊಳಿಸುವುದರಲ್ಲಿಯೇ ತುಂಟರು ಹೇಗೆ ಆಸಕ್ತರಾಗಿರುತ್ತಾರೆಯೋ ಹಾಗೆಯೇ ಈ ಹೆಂಗಸರೂ ಪುರುಷಹಿಂಸಕರೆಂದು ತಿಳಿಯಬೇಕು. ಅಯ್ಯಾ! ನೀವು ಯಾರೆಂಬುದು ಖಂಡಿತವಾಗಿಯೂ ನನಗೆ ತಿಳಿಯದು; ಅಂತೆಯೇ ನಾನಾರೆಂಬುದೂ ನಿಮಗೆ ಗೊತ್ತಿಲ್ಲ. ಹೀಗಿರುವಲ್ಲಿ ನನಗೂ ನಿಮಗೂ ಸ್ನೇಹವು ಬೆಳೆಯುವುದೆಂತು?

೨೪. ಆದಕಾರಣ ಎಲೈ ಅಸುರಶ್ರೇಷ್ಠರೇ! ಕಾರ್ಯಾಕಾರ್ಯಗಳಲ್ಲಿ ಬಹಳ ಕುಶಲರಾದ ನೀವು ಈಗಲೇ ಏಕಾಂತವಾದೊಂದು ಸ್ಥಳಕ್ಕೆ ಹೋಗಿ ಶ್ರೇಷ್ಠವಾದ ನಿಮ್ಮ ಬುದ್ಧಿಯಿಂದ ಎಲ್ಲವನ್ನೂ ಚೆನ್ನಾಗಿ ಆಲೋಚಿಸಿಕೊಂಡು ಬಂದು ಈ ಅಮೃತ ಕಲಶವನ್ನು ನನ್ನ ಕೈಗೆ ಕೊಡಿರಿ" ಎಂದು ಹೇಳಿದಳು.

ಬಲಿರುವಾಚ :—

ಯಾಸ್ತ್ವಯಾ ಕಥಿತಾ ನಾರ್ಯೋ ಗ್ರಾಮ್ಯಾ ಗ್ರಾಮ್ಯಜನಪ್ರಿಯಾಃ ।
ತಾಸಾಂ ತ್ವತ್ಕಥ್ಯಮಾನಾನಾಂ ಮಧ್ಯಗಾ ನಾಸಿ ಶೋಭನೇ ॥ ೨೫ ॥
ಕಿಂ ತ್ವಯಾ ಬಹುನೋಕ್ತೇನ ಕುರುಷ್ವ ವಚನಂ ಹಿ ನಃ ।
ಸಾ ಮೋಹಿನೀದಂ ಪ್ರೋವಾಚ ಬಲೇರ್ವಾಕ್ಯಾದನಂತರಂ ॥ ೨೬ ॥
ಕರಿಷ್ಯಾಮಿ ಚ ತೇ ವಾಕ್ಯಂ ಸೂಕ್ತಾಸೂಕ್ತಮಿತಿ ಪ್ರಭೋ ॥ ೨೭ ॥

ಬಲಿರುವಾಚ :—

ಅದ್ಯಾಮೃತಂ ಚ ಸರ್ವೇಷಾಂ ವಿಭಜಸ್ವ ಯಥಾ ತಥಂ ।
ತ್ವಯಾ ದತ್ತಂ ಚ ಗೃಹ್ಣೀಮಃ ಸತ್ಯಂ ಸತ್ಯಂ ವದಾಮಿ ತೇ ॥ ೨೮ ॥
ಏವಮುಕ್ತಾ ತದಾ ದೇವೀ ಮೋಹಿನೀ ಸರ್ವಮಂಗಳಾ ।
ಉವಾಚಾಥಾಸುರಾನ್ಸರ್ವಾನ್ರೋಚಯಂಲ್ಲೌಕಿಕೀಂ ಸ್ಥಿತಿಂ ॥ ೨೯ ॥

ಭಗವಾನುವಾಚ :—

ಯೂಯಂ ಸರ್ವೇ ಕೃತಾರ್ಥಾಶ್ಚ ಜಾತಾ ದೈವೇನ ಕೇನಚಿತ್ ।
ಅದ್ಯೋಪವಾಸಸಂಯುಕ್ತಾ ಅಮೃತಸ್ಯಾಧಿವಾಸನಂ ॥ ೩೦ ॥

---

೨೫–೨೬. ಬಲಿಯು ಹೇಳುತ್ತಾನೆ:— ಎಲೆ ಶೋಭನೇ! ಈಗ ನೀನು ಹೇಳಿದಂತಹ ಹೆಂಗಳೆಲ್ಲ ಸುಸಂಸ್ಕೃತರಲ್ಲ ; ಅವರು ಕೇವಲ ಗ್ರಾಮ್ಯರು ; ಅವರು ಅಸಂಸ್ಕೃತರಾದ ಜನಗಳಿಗೆ ಮಾತ್ರ ಪ್ರಿಯರು. ಅಂತಹರಲ್ಲಿ ನೀನು ಎಣಿಕೆಗೆ ಬರುವವಳಲ್ಲವು. ನೀನು ಸುಮ್ಮನೆ ಬಹಳವಾಗಿ ಹೇಳಿ ಏನು ಪ್ರಯೋಜನ? ನಾವು ಹೇಳಿದಂತೆ ಮಾಡು.'' ಹೀಗೆ ಬಲಿಯು ಮಾತನಾಡಿ ಮುಗಿಸಿದ ಮೇಲೆ ಆ ಮೋಹಿನಿಯು ಮತ್ತೆ ಅವನನ್ನು ಕುರಿತು ಹೇಳಿದಳು.

೨೭–೩೦. "ಎಲೈ ಪ್ರಭುವೇ! ನೀನಾಡಿದ ನುಡಿಯು ಯುಕ್ತವೋ ಅಲ್ಲವೋ ಹೇಗಾದರೂ ಇರಲಿ. ನಾನು ಅಂತೆಯೇ ಮಾಡುತ್ತೇನೆ.'' ಬಲಿಯು ಹೇಳುತ್ತಾನೆ:—"ಎಲಾ! ಈಗ ನೀನು ಈ ಅಮೃತವನ್ನು ನಮ್ಮೆಲ್ಲರಿಗೂ ಸರಿಯಾಗಿ ಹಂಚಿಕೊಡಬೇಕು. ನೀನು ಕೊಟ್ಟುದನ್ನು ನಾವು ತೆಗೆದುಕೊಳ್ಳುತ್ತೇವೆ. ಇದು ಸತ್ಯವಾದುದೆಂದು ನಿನಗೆ ಮಾತು ಕೊಡುತ್ತೇನೆ.'' ಬಲಿ ದಾನವೇಂದ್ರನೀರೀತಿ ನುಡಿದ ತರುವಾಯ ಸರ್ವಮಂಗಳೆಯಾದ ಆ ಮೋಹಿನೀ ದೇವಿಯು ಲೌಕಿಕಸ್ಥಿತಿಗನುಗುಣವಾಗಿ ಅಲ್ಲಿದ್ದ ದಾನವರೆಲ್ಲರನ್ನೂ ಕುರಿತು ಈ ರೀತಿ ಹೇಳಿದಳು. ಮೋಹಿನೀ ರೂಪಧರನಾದ ಭಗವಂತನು ಹೇಳುತ್ತಾನೆ:— "ಎಲೈ ದಾನವರೇ! ಈಗ ನೀವು ಅದೃಷ್ಟವಶದಿಂದ ಈ ಸಮುದ್ರಮಥನ ಕಾರ್ಯದಲ್ಲಿ ಕೃತಾರ್ಥರಾಗಿರುವಿರಿ. ಆದುದರಿಂದ ನೀವಿಂದು ಈ ಅಮೃತ ಕಲಶದ ಸಮೀಪದಲ್ಲಿಯೇ ಇದ್ದು ಉಪವಾಸವ್ರತವನ್ನೆಸಗಿರಿ.

ಕ್ರಿಯತಾಮಸುರಶ್ರೇಷ್ಠಾಃ ಶುಭೇಚ್ಛಾ ಕಿಂಚಿದಸ್ತಿ ವಃ ।
ಶ್ವೋ ಭೃತೇ ಪಾರಣಂ ಕುರ್ಯಾದ್ವ್ರತಾರ್ಚನರತಿಶ್ಚ ವಃ ॥ ೩೧ ॥
ನ್ಯಾಯೋಪಾರ್ಜಿತ ವಿತ್ತೇನ ದಶಮಾಂಶೇನ ಧೀಮತಾ ।
ಕರ್ತವ್ಯೋ ವಿನಿಯೋಗಶ್ಚ ಈಶಪ್ರೀತ್ಯರ್ಥಹೇತವೇ ॥ ೩೨ ॥
ತಥೇತಿ ಮತ್ವಾ ತೇ ಸರ್ವೇ ಯಥೋಕ್ತಂ ದೇವಮಾಯಯಾ ।
ಚಕ್ರುಸ್ತಥೈವ ದೈತೇಯಾ ಮೋಹಿತಾ ನಾತಿಕೋವಿದಾಃ ॥ ೩೩ ॥
ಮಯಾಸುರೇಣ ಚ ತದಾ ಭವನಾನಿ ಕೃತಾನಿ ವೈ ।
ಮನೋಜ್ಞಾನಿ ಮಹಾರ್ಹಾಣಿ ಸುಪ್ರಭಾಣಿ ಮಹಾಂತಿ ಚ ॥ ೩೪ ॥
ತೇಷೂಪವಿಷ್ಟಾಸ್ತೇ ಸರ್ವೇ ಸುಸ್ನಾತಾಃ ಸಮಲಂಕೃತಾಃ ।
ಸ್ಥಾಪಯಿತ್ವಾ ಸುಸಂರಬ್ಧಾಃ ಪೂರ್ಣಂ ಕಲಶಮಗ್ರತಃ ॥ ೩೫ ॥
ರಾತ್ರೌ ಜಾಗರಣಂ ಸರ್ವೈಃ ಕೃತಂ ಪರಮಯಾ ಮುದಾ ।
ಅಥೋಪಾಸಪ್ರವೃತ್ತೇ ಚ ಪ್ರಾತಃಸ್ನಾನಯುತಾಭವನ್ ॥ ೩೬ ॥

---

೩೧. ಅಯ್ಯಾ ಅಸುರಶ್ರೇಷ್ಠರೇ! ನಿಮಗೇನಾದರೂ ಒಳ್ಳೆಯದಾಗ ಬೇಕೆಂದು ಬಯಕೆಯಿದ್ದರೆ ಈ ರೀತಿ ವ್ರತವನ್ನಾಚರಿಸಬೇಕು. ನಾಳೆ ಬೆಳಗಾಗುತ್ತಲೇ ಈ ವ್ರತಾಚರಣದ ಫಲವಾಗಿ ಪಾರಣೆಯನ್ನು ಮಾಡತಕ್ಕದು.

೩೨. ಇದೂ ಅಲ್ಲದೆ, ಬುದ್ಧಿವಂತನಾದವನು ನ್ಯಾಯವಾಗಿ ತಾನು ಸಂಪಾದಿಸಿದ ಹಣದಲ್ಲಿ ಹತ್ತನೆಯ ಒಂದು ಪಾಲನ್ನು ಈಶ್ವರಪ್ರೀತ್ಯರ್ಥವಾಗಿ ಇತರರಿಗೆ ದಾನ ಮಾಡಬೇಕು.''

೩೩. ಮೋಹಿನೀ ರೂಪಿಯಾದ ಆ ದೇವಮಾಯೆಯು ಇಂತು ನುಡಿಯಲು ನೀತಿಕೋವಿದರಾದ ಆ ದಾನವರೆಲ್ಲರೂ ಅದಕ್ಕೆ ಮರುಳಾಗಿ ಅಂತೆಯೇ ಮಾಡಿದರು.

೩೪. ಆಗ ಮಯಾಸುರನು ಅವರಿಗಾಗಿ ಅಲ್ಲಿಯೇ ಮನೋಹರಗಳೂ, ಬಹು ಯೋಗ್ಯಗಳೂ, ಒಳ್ಳೆಯ ಕಾಂತಿಯುಳ್ಳವುಗಳೂ, ಬಹು ವಿಸ್ತಾರವಾದವುಗಳೂ ಆದ ಚೆಲುವಾದ ಮನೆಗಳನ್ನು ನಿರ್ಮಿಸಿದನು.

೩೫–೩೬. ದಾನವರೆಲ್ಲರೂ ಆ ಮನೆಗಳಲ್ಲಿ ತಂಗಿ ವಿಧಿವತ್ತಾಗಿ ಸ್ನಾನ ಮಾಡಿ, ಅಲಂಕರಿಸಿಕೊಂಡು ಬಹಳ ಜಾಗರೂಕತೆಯಿಂದಲೂ, ಪ್ರಯತ್ನ ಪೂರ್ವಕವಾಗಿಯೂ ಆ ಅಮೃತ ಕಲಶವನ್ನು ಅಲ್ಲಿಯೇ ಸ್ಥಾಪನೆ ಮಾಡಿ ಬಹು ಸಂತೋಷಾತಿಶಯದಿಂದ ಆ ರಾತ್ರಿಯೆಲ್ಲ ಜಾಗರಣೆ ಮಾಡಿದರು. ತರುವಾಯ ಮಾರನೆಯ ದಿನ ಬೆಳಗಾಗುತ್ತಲೇ ಅವರು ಪ್ರಾತಸ್ನಾನಗಳನ್ನು ಮಾಡಿದರು.

ಅಸುರಾ ಬಲಿಮುಖ್ಯಾಶ್ಚ ಪಂಙ್ಕ್ತಿಭೂತಾ ಯಥಾಕ್ರಮಂ ।
ಸರ್ವಮಾವಶ್ಯಕಂ ಕೃತ್ವಾ ತದಾ ಪಾನರತಾಭವನ್ ॥ ೩೭ ॥
ಬಲಿಶ್ಚ ವೃಷಪರ್ವಾಚ ನಮುಚಿಃ ಶಂಖ ಏವ ಚ ।
ಸುದಂಷ್ಟ್ರಶ್ಚೈವ ಸಂಹ್ಲಾದೀ ಕಾಲನೇಮಿರ್ವಿಭೀಷಣಃ ॥ ೩೮ ॥
ವಾತಾಪಿರಿಲ್ವಲಃ ಕುಂಭೋ ನಿಕುಂಭಃ ಪ್ರಚ್ಛದಸ್ತಥಾ ।
ತಥಾ ಸುಂದೋಪಸುಂದೌ ಚ ನಿಶುಂಭಃ ಶುಂಭ ಏವಚ ॥ ೩೯ ॥
ಮಹಿಷೋ ಮಹಿಷಾಕ್ಷಶ್ಚ ಬಿಡಾಲಾಕ್ಷಃ ಪ್ರತಾಪವಾನ್ ।
ಚಿಕ್ಷುರಾಖ್ಯೋ ಮಹಾಬಾಹುರ್ಜೃಂಭಣೋ ವೃಷಾಸುರಃ ॥ ೪೦ ॥
ವಿಬಾಹುರ್ಬಾಹುಕೋ ಘೋರಸ್ತಥಾ ವೈ ಘೋರದರ್ಶನಃ ।
ಏತೇ ಚಾನ್ಯೇ ಚ ಬಹವೋ ದೈತ್ಯದಾನವರಾಕ್ಷಸಾಃ ।
ಯಥಾಕ್ರಮಂ ಚೋಪವಿಷ್ಟಾ ರಾಹುಃ ಕೇತುಸ್ತಥೈವ ಚ ॥ ೪೧ ॥
ತೇಷಾಂ ತು ಕೋಟಿಸಂಖ್ಯಾನಾಂ ದೈತ್ಯಾನಾಂ ಪಂಙ್ಕ್ತಿರಾಸ್ಥಿತಾ ॥ ೪೨ ॥
ತತಸ್ತಯಾ ತದಾ ದೇವ್ಯಾ ಅಮೃತಾರ್ಥಂ ಹಿ ವೈ ದ್ವಿಜಾಃ ।
ಯಜ್ಜಾತಂ ತಚ್ಛೃಣುಧ್ವಂ ಹಿ ತಯಾ ದೇವ್ಯಾ ಕೃತಂ ಮಹತ್ ॥ ೪೩ ॥
ಸರ್ವೇ ವಿಜ್ಞಾಪಿತಾಃ ಸದ್ಯೋ ಗೃಹೀತಕಲಶಾ ತದಾ ।
ಶೋಭಯಾ ಪರಯಾ ಯುಕ್ತಾ ಸಾಕ್ಷಾತ್ಸಾ ವಿಷ್ಣುಮೋಹಿನೀ ॥ ೪೪ ॥

---

೩೭–೪೨. ಇದಾದಮೇಲೆ ಬಲಿಯೇ ಮೊದಲಾದ ಆ ದಾನವರೆಲ್ಲರೂ ಸಾಲಾಗಿ ಕುಳಿತು ಆ ಸಮಯದಲ್ಲಿ ಅವಶ್ಯವಾಗಿಯೂ ಮಾಡಬೇಕಾದ ಮಂಗಳ ಕಾರ್ಯಗಳೆಲ್ಲವನ್ನೂ ಮಾಡಿ ಮುಗಿಸಿ ಅಮೃತವನ್ನು ಕುಡಿಯಬಯಸಿದರು. ಆ ಸಮಯದಲ್ಲಿ ಬಲಿ, ವೃಷಪರ್ವ, ನಮುಚಿ, ಶಂಖ, ಸುದಂಷ್ಟ್ರ, ಸಂಹ್ರಾದಿ, ಕಾಲನೇಮಿ, ವಿಭೀಷಣ, ವಾತಾಪಿ, ಇಲ್ವಲ, ಕುಂಭ, ನಿಕುಂಭ, ಪ್ರಚ್ಛದ, ಸುಂದ, ಉಪಸುಂದ, ಶುಂಭ, ನಿಶುಂಭ, ಮಹಿಷ, ಮಹಿಷಾಕ್ಷ, ಮಹಾ ಪರಾಕ್ರಮಿಯಾದ ಬಿಡಾಲಾಕ್ಷ, ಚಿಕ್ಷುರ, ಮಹಾಬಾಹುವಾದ ಜೃಂಭಣ, ವೃಷ, ವಿಬಾಹು, ಬಾಹುಕ, ಘೋರ, ಘೋರದರ್ಶನ, ರಾಹು ಇವರೇ ಮೊದಲಾದ ಇನ್ನೂ ಅನೇಕ ಮಂದಿ ದೈತ್ಯದಾನವ ರಾಕ್ಷಸರೆಲ್ಲರೂ ಅವರವರ ಅಂತಸ್ತಿಗೆ ತಕ್ಕಂತೆ ಕ್ರಮವಾಗಿ ಸಾಲುಗಟ್ಟಿ ಕುಳಿತರು. ಹೀಗೆ ಆ ಪಂಕ್ತಿಯಲ್ಲಿ ಕೋಟ್ಯಂತರ ದಾನವರಿದ್ದರು.

೪೩–೪೪. ಅಯ್ಯಾ ದ್ವಿಜರೇ! ಆ ಸಮಯದಲ್ಲಿ ಮೋಹಿನೀ ದೇವಿಯು ಆ ಅಮೃತದ ಹಂಚಿಕೆಗಾಗಿ ಯಾವ ಮಹತ್ತರವಾದ ಕಾರ್ಯವನ್ನು ಮಾಡಿದಳು, ಅದುದೇನು, ಎಂಬುದನ್ನು ಹೇಳುವೆನು, ಕೇಳಿರಿ. ತರುವಾಯ ಆ ವಿಷ್ಣು ಮೋಹಿನಿಯು ಶ್ರೇಷ್ಠವಾದ ಕಾಂತಿಯಿಂದ ಬೆಳಗುತ್ತ ಅಮೃತ

ಕರಸ್ಥೇನ ತದಾ ದೇವೀ ಕಲಶೇನ ವಿರಾಜಿತಾ ।
ಶುಶುಭೇ ಪರಯಾ ಕಾಂತ್ಯಾ ಜಗನ್ಮಂಗಲಮಂಗಲಾ ॥ ೪೫ ॥
ಪರಿವೇಷಧರಾಃ ಸರ್ವೇ ಸುರಾಸ್ತೇ ಹ್ಯಸುರಾಂತಿಕಂ ।
ಆಗತಾಸ್ತತ್ಕ್ಷಣಾದೇವ ಯತ್ರ ತೇ ಹ್ಯಸುರೋತ್ತಮಾಃ ॥ ೪೬ ॥
ತಾನ್ ದೃಷ್ಟ್ವಾ ಮೋಹಿನೀ ಸದ್ಯ ಉವಾಚ ಪ್ರಮುದೋತ್ತಮಾ ॥ ೪೭ ॥
ಮೋಹಿನ್ಯುವಾಚ :—
ಏತೇ ಹ್ಯತಿಥಯೋ ಜ್ಞೇಯಾ ಧರ್ಮಸರ್ವಸ್ವಸಾಧನಾಃ ।
ಏಭ್ಯೋ ದೇಯಂ ಯಥಾಶಕ್ತ್ಯಾ ಯದಿಸತ್ಯಂ ವಚೋ ಮಮ ।
ಪ್ರಮಾಣಂ ಭವತಾಂ ಚಾದ್ಯ ಕುರುಧ್ವಂ ಮಾ ವಿಲಂಬಥ ॥ ೪೮ ॥
ಪರೇಷಾಮುಪಕಾರಂ ಚ ಯೇ ಕುರ್ವಂತಿ ಸ್ವಶಕ್ತಿತಃ ।
ಧನ್ಯಾಸ್ತೇ ಚೈವ ವಿಜ್ಞೇಯಾಃ ಪವಿತ್ರಾ ಲೋಕಪಾಲಕಾಃ ॥ ೪೯ ॥
ಕೇವಲಾತ್ಮೋದರಾರ್ಥಾಯ ಉದ್ಯೋಗಂ ಯೇ ಪ್ರಕುರ್ವತೇ ।
ತೇ ಕ್ಲೇಶಭಾಗಿನೋ ಜ್ಞೇಯಾ ನಾತ್ರ ಕಾರ್ಯಾ ವಿಚಾರಣಾ ॥ ೫೦ ॥

---

ಕಲಶವನ್ನು ಕೈಗೆ ತೆಗೆದುಕೊಂಡು ಅಲ್ಲಿ ಕುಳಿತಿದ್ದ ದಾನವರೆಲ್ಲರಲ್ಲಿಯೂ ಹೀಗೆ ವಿಜ್ಞಾಪನೆ ಮಾಡಿದಳು.

೪೫. ಆ ಸಮಯದಲ್ಲಿ ಜಗನ್ಮಂಗಳಮಂಗಳೆಯಾದ ಆ ದೇವಿಯು ಒಂದು ಕೈಯಲ್ಲಿ ಅಮೃತಕಲಶವನ್ನೂ, ಮತ್ತೊಂದು ಕೈಯಲ್ಲಿ ಸೌಟನ್ನೂ ಹಿಡಿದು ಅತಿಶಯವಾದ ಕಾಂತಿಯಿಂದ ವಿರಾಜಿಸುತ್ತಿದ್ದಳು.

೪೬. ಆ ಕ್ಷಣದಲ್ಲಿಯೇ ಅತ್ತ ಸ್ವರ್ಗದಲ್ಲಿದ್ದ ದೇವತೆಗಳೆಲ್ಲರೂ ಮಾರು ವೇಷಗಳನ್ನು ಹಾಕಿಕೊಂಡು ಆ ದಾನವರ ಬಳಿಗೈದಿದರು.

೪೭. ಆಗಲಾ ಪ್ರಮದೋತ್ತಮೆಯಾದ ಮೋಹಿನೀ ದೇವಿಯು ಅವರನ್ನು ಕಂಡು, ಇತ್ತ ದೈತ್ಯರೆಲ್ಲರನ್ನೂ ಕುರಿತು ಹೀಗೆ ಹೇಳಿದಳು.

೪೮. ಮೋಹಿನಿಯು ಹೇಳುವಳು :— ಅಯ್ಯಾ! ಸಂಪೂರ್ಣವಾಗಿ ಧರ್ಮವನ್ನು ಸಂಪಾದಿಸಬಯಸಿರುವ ದಾನವರಿರಾ! ಈಗ ಇಲ್ಲಿಗೈತಂದಿರುವ ಇವರೆಲ್ಲರನ್ನೂ ಅತಿಥಿಗಳನ್ನಾಗಿ ತಿಳಿಯಬೇಕಷ್ಟೆ! ನನ್ನ ಮಾತು ಸತ್ಯವಾಗಿದ್ದಲ್ಲಿ ಇವರಿಗೂ ಈ ಅಮೃತವನ್ನು ಕೊಡಬೇಕಲ್ಲವೆ? ಆದಕಾರಣ ಇವರಿಗೂ ಅಮೃತವನ್ನು ಹಂಚಿಕೊಡುತ್ತೇವೆಂದು ಪ್ರಮಾಣಮಾಡಿರಿ. ತಡಮಾಡಬೇಡಿರಿ.

೪೯–೫೦. ಯಾರು ತಮ್ಮ ಶಕ್ತ್ಯನುಸಾರ ಇತರರಿಗೆ ಉಪಕಾರ ಮಾಡುತ್ತಾರೆಯೋ ಅವರೇ ಧನ್ಯರು. ಅವರೇ ಪವಿತ್ರರು; ಲೋಕಪಾಲಕರೂ ಅವರೇ! ಕೇವಲ ತಮ್ಮ ಹೊಟ್ಟೆಗಾಗಿಯೇ ಯಾರು ಪ್ರಯತ್ನಮಾಡುತ್ತಾರೆಯೋ ಅವರು ದುಃಖಕ್ಕೀಡಾಗುತ್ತಾರೆ. ಇದರಲ್ಲಿ ವಿಚಾರಮಾಡಬೇಕಾದುದೇನೂ ಇರುವುದಿಲ್ಲ.

**ತಸ್ಮಾದ್ವಿಭಜನಂ ಕಾರ್ಯಂ ಮಯ್ಯೈತಸ್ಯ ಶುಭವ್ರತಾಃ ।**
**ದೇವೇಭ್ಯಶ್ಚ ಪ್ರಯಚ್ಛಧ್ವಂ ಯುದ್ಧಿ ಚಾತ್ಮಪ್ರಿಯಾಪ್ರಿಯಂ ॥ ೫೧ ॥**
**ಇತ್ಯುಕ್ತೇ ವಚನೇ ದೇವ್ಯಾ ತಥಾ ಚಕ್ರುರತಂದ್ರಿತಾಃ ।**
**ಆಹ್ವಯಾಮಾಸುರಸುರಾಃ ಸರ್ವಾನ್ ದೇವಾನ್ ಸವಾಸವಾನ್ ॥ ೫೨ ॥**
**ಉಪವಿಷ್ಟಾಶ್ಚ ತೇ ಸರ್ವೇ ಅಮೃತಾರ್ಥಂ ಚ ಭೋ ದ್ವಿಜಾಃ ।**
**ತೇಷೂಪವಿಶ್ಯಮಾನೇಷು ಹ್ಯುವಾಚ ಪರಮಂ ವಚಃ ।**
**ಮೋಹಿನೀ ಸರ್ವಧರ್ಮಜ್ಞಾ ಅಸುರಾಣಾಂ ಸ್ಮಯನ್ನಿವ ॥ ೫೩ ॥**

ಮೋಹಿನ್ಯುವಾಚ :—

**ಆದೌ ಹ್ಯಭ್ಯಾಗತಾಃ ಪೂಜ್ಯಾ ಇತಿವೈ ವೈದಿಕೀ ಶ್ರುತಿಃ ॥ ೫೪ ॥**
**ತಸ್ಮಾದ್ಯೂಯಂ ವೇದಪರಾಃ ಸರ್ವೇ ವೇದಪರಾಯಣಾಃ ।**
**ಬ್ರುವಂತು ತ್ವರಿತೇನೈವ ಆದೌ ಕೇಷಾಂ ದದಾಮ್ಯಹಂ ।**
**ಅಮೃತಂ ಹಿ ಮಹಾಭಾಗಾ ಬಲಿಮುಖ್ಯಾ ವದಂತು ಭೋಃ ॥ ೫೫ ॥**
**ಬಲಿನೋಕ್ತಾ ತದಾ ದೇವೀ ಯತ್ತೇ ಮನಸಿ ರೋಚತೇ ।**
**ಸ್ವಾಮಿನೀ ತ್ವಂ ನ ಸಂದೇಹೋ ಹ್ಯಸ್ಮಾಕಂ ಸುಂದರಾನನೇ ॥ ೫೬ ॥**

---

೫೧–೫೨. ಆದುದರಿಂದೆಲೈ ದಾನವರೇ ! ನಿಮಗೆ ಇಷ್ಟವಿರಲಿ, ಇಲ್ಲದಿರಲಿ, ಹಿತವೋ ಅಹಿತವೋ ಏನೇ ಆಗಿರಲಿ ಈ ದೇವತೆಗಳಿಗೂ ಅಮೃತವನ್ನು ಹಂಚಿಕೊಡಿರಿ. ಆ ಮೋಹಿನಿಯು ಈ ರೀತಿ ಹೇಳಿದೊಡನೆಯೇ ಆ ದಾನವರೆಲ್ಲರೂ ಯಾವೊಂದು ಸಂಶಯವೂ ಇಲ್ಲದಂತೆ ಒಪ್ಪಿಕೊಂಡು ಅಂತೆಯೇ ಮಾಡಿದರು. ಅವರು ಅಲ್ಲಿ ಬಂದಿದ್ದ ಇಂದ್ರನೇ ಮೊದಲಾದ ಎಲ್ಲ ದೇವತೆಗಳನ್ನೂ ಬನ್ನಿರೆಂದು ಆಹ್ವಾನಿಸಿದರು.

೫೩. ಅಯ್ಯಾ ಬ್ರಾಹ್ಮಣರೇ ! ಆಗಲಾ ದೇವತೆಗಳೆಲ್ಲರೂ ಸಹ ಅಮೃತಪಾನಕ್ಕಾಗಿ ಬಂದು ಕುಳಿತರು. ಅವರು ಕುಳಿತುಕೊಳ್ಳುತ್ತಿರುವಂತೆಯೇ ಎಲ್ಲ ಧರ್ಮಗಳನ್ನೂ ಬಲ್ಲವಳಾದ ಆ ಮೋಹಿನಿಯು ಅಸುರರನ್ನು ಕುರಿತು ನಸುನಗುವಳೋ ಎಂಬಂತೆ ತೋರುತ್ತಾ ಇಂತೆಂದಳು.

೫೪. ಮೋಹಿನಿಯು ಹೇಳುವಳು :—“ ಎಲೈ ದೈತ್ಯರೇ ! ಎಲ್ಲರಿಗಿಂತಲೂ ಮುಂಚೆ ಅಭ್ಯಾಗತರನ್ನು ಗೌರವಿಸಬೇಕೆಂದು ವೇದಶ್ರುತಿಯಿದೆ.

೫೫–೫೬. ಆದ್ದರಿಂದ ವೇದಪರರೂ, ವೇದಪರಾಯಣರೂ ಆದ ನೀವೆಲ್ಲರೂ ಈಗ ನಾನು ಯಾರಿಗೆ ಮೊದಲು ಅಮೃತವನ್ನು ಹಂಚಿಕೊಡಬೇಕೆಂಬುದನ್ನು ಹೇಳಿರಿ. ಅಯ್ಯಾ ! ಮಹಾ ಪುಣ್ಯಶಾಲಿಗಳಾದ ಬಲಿಯೇ ಮೊದಲಾದ ನೀವೆಲ್ಲರೂ ಈ ವಿಷಯವನ್ನು ಚೆನ್ನಾಗಿ ಯೋಚಿಸಿ ನನಗೆ ಹೇಳಬೇಕು.” ಆಗ ಬಲಿದಾನವನು ಆ ಮೋಹಿನೀ ದೇವಿಯನ್ನು ಕುರಿತು, “ ಎಲೆ ಸುಂದರಾನನೇ !

ಏವಂ ಸಂಮಾನಿತಾತೇನ ಬಲಿನಾ ಭಾವಿತಾತ್ಮನಾ ।
ಪರಿವೇಷಣ ಕಾರ್ಯಾರ್ಥಂ ಕಲಶಂ ಗೃಹ್ಯ ಸತ್ವರಾ ॥ ೫೭ ॥

ತಸ್ಮಾನ್ನಗೇಂದ್ರ ಕರಭೋರುಲಸದ್ದುಕೂಲಾ
ಶ್ರೋಣೀತಟಾಲಸಗತಿರ್ಮದವಿಹ್ವಲಾಂಗೀ ।
ಸಾ ಕೂಜತೀ ಕನಕನೂಪುರ ಸಿಂಜಿತೇನ
ಕುಂಭಸ್ತನೀ ಕಲಶಪಾಣಿರಥಾವಿವೇಶ ॥ ೫೮ ॥

ತಾದಾತು ದೇವೀ ಪರಿವೇಷಯಂತೀ
ಸಾ ಮೋಹಿನೀ ದೇವಗಣಾಯ ಸಾಕ್ಷಾತ್ ।
ವವರ್ಷ ದೇವೇಷು ಸುಧಾರಸಂ ಪುನಃ
ಪುನಃ ಸುಧಾಹಾರ ರಸಾಮೃತಂ ಯಥಾ ॥ ೫೯ ॥

ಪುನಶ್ಚ ತೇ ದೇವಗಣಾಃ ಸುಧಾರಸಂ
ದತ್ತಂ ತಯಾ ಪರಯಾ ವಿಶ್ವಮೂರ್ತ್ಯಾ ।
ದೇವೇಂದ್ರ ಮುಖ್ಯಾಃ ಸಹ ಲೋಕಪಾಲಾ
ಗಂಧರ್ವ ಯಕ್ಷಾಪ್ಸರಸಾಂ ಗಣಾಶ್ಚ ॥ ೬೦ ॥

---

ನೀನು ನಮಗೆ ಒಡತಿಯೆಂಬುದರಲ್ಲಿ ಸಂದೇಹವಿಲ್ಲ. ನಿನ್ನ ಮನಸ್ಸಿಗೆ ಹೇಗೆ ತೋರುತ್ತದೆಯೋ ಹಾಗೆ ಮಾಡು'' ಎಂದು ಹೇಳಿದನು.

೫೭. ಆತ್ಮಜ್ಞಾನಿಯಾದ ಬಲಿಯು ಈ ರೀತಿ ನುಡಿದು ಗೌರವಿಸಿದ ಬಳಿಕ ಮೋಹಿನಿಯು ಅಮೃತವನ್ನು ಹಂಚುವುದಕ್ಕಾಗಿ ಅಮೃತ ಕಲಶವನ್ನು ಕೈಗೆ ತೆಗೆದುಕೊಂಡಳು.

೫೮–೫೯. ಆಗ ಮದದಾನೆಯ ಸೊಂಡಿಲನ್ನು ಹೋಲುವ ತೊಡೆಗಳುಳ್ಳವಳಾಗಿ, ಹೊಳೆಯುತ್ತಿರುವ ಪಟ್ಟುಸೀರೆಯುಟ್ಟು ಶೋಭಿಸುತ್ತಿರುವವಳಾಗಿ, ನಿತಂಬ ಭಾರದಿಂದ ಮೆಲುಮೆಲನೆ ನಡೆಯುತ್ತ, ಘಲುಘಲನೆ ದನಿಗೈಯುತ್ತಿರುವ ಚಿನ್ನದ ಕಾಲ್ಕಡಗಗಳಿಂದೊಪ್ಪಿ, ಕುಂಭಸ್ತನಿಯಾಗಿ ಕಣ್ಗೊಳಿಸುತ್ತಲಿದ್ದ ಆ ಮೋಹಿನಿಯು ಅಮೃತ ಕಲಶವನ್ನು ಕೈಯಲ್ಲಿ ಹಿಡಿದು ಅದನ್ನು ಹಂಚಲು ಮುಂದೆ ಬಂದಳು.

೬೦. ಆಗಲಾಕೆಯು ಸಾಕ್ಷಾತ್ತಾಗಿಯೇ ದೇವತೆಗಳಿಗೆ ಅಮೃತವನ್ನು ಧಾರೆ ಧಾರೆಯಾಗಿ ಬಾರಿಬಾರಿಗೂ ಎರೆಯುತ್ತ ಬಂದಳು. ದೇವೇಂದ್ರನೇ ಮೊದಲಾದ ಆ ದೇವತೆಗಳೂ, ಲೋಕಪಾಲಕರೂ, ಯಕ್ಷ ಗಂಧರ್ವರೂ, ಅಪ್ಸರರೂ ಈ ರೀತಿ ಆ ವಿಶ್ವಮೂರ್ತಿಯೆರೆದ ಸುಧಾರಸವನ್ನು ಅಡಿಗಡಿಗೂ ಪಾನಮಾಡಿದರು.

ಸರ್ವೇ ದೈತ್ಯಾ ಆಸನಸ್ಥಾಸ್ತದಾನೀಂ
ಚಿಂತಾನ್ವಿತಾಃ ಕ್ಷುಧಯಾ ಪೀಡಿತಾಶ್ಚ ।
ತೂಷ್ಣೀಂಭೂತಾ ಬಲಿಮುಖ್ಯಾ ದ್ವಿಜೇಂದ್ರಾ
ಮನಸ್ವಿನೋ ಧ್ಯಾನಪರಾ ಬಭೂವುಃ ॥ ೬೧ ॥
ತತಸ್ತಥಾ ವಿಧಾನ್ ದೃಷ್ಟ್ವಾ ದೈತ್ಯಾಂಸ್ತಾನ್ಮೋಹಮಾಶ್ರಿತಾನ್ ।
ತದಾ ರಾಹುಶ್ಚ ಕೇತುಶ್ಚ ದ್ವಾವೇತೌ ದೈತ್ಯಪುಂಗವೌ ॥ ೬೨ ॥
ದೇವಾನಾಂ ರೂಪಮಾಸ್ಥಾಯ ಅಮೃತಾರ್ಥಂ ತ್ವರಾನ್ವಿತೌ ।
ಉಪವಿಷ್ಟಾ ತದಾ ಪಂಙ್ಕ್ತ್ಯಾಂ ದೇವಾನಾಮಮೃತಾರ್ಥಿನೌ ॥ ೬೩ ॥
ಯದಾಮೃತಂ ಪಾತುಕಾಮೋ ರಾಹುಃ ಪರಮದುರ್ಜಯಃ ।
ಚಂದ್ರಾರ್ಕಾಭ್ಯಾಂ ಪ್ರಕಥಿತೋ ವಿಷ್ಣೋರಮಿತತೇಜಸಃ ॥ ೬೪ ॥
ತದಾ ತಸ್ಯ ಶಿರಶ್ಛಿನ್ನಂ ರಾಹೋರ್ದುರ್ವಿಗ್ರಹಸ್ಯ ಚ ।
ಶಿರೋ ಗಗನಮಾಪೇದೇ ಕಬಂಧಂ ಚ ಮಹೀತಲೇ ।
ಭ್ರಮಮಾಣಂ ತದಾ ಹ್ಯದ್ರೀಂಶ್ಚೂರ್ಣಯಾಮಾಸ ವೈ ತದಾ ॥ ೬೫ ॥
ಸಾದ್ರಿಶ್ಚ ಸರ್ವಭೂಲೋಕ ಶ್ಚೂರ್ಣಿತಶ್ಚ ತದಾಽಭವತ್ ।
ತಯಾ ತೇನ ಚ ದೇಹೇನ ಚೂರ್ಣಿತಂ ಸಚರಾಚರಂ ॥ ೬೬ ॥

---

೬೧. ಆಗ ತಮ್ಮ ತಮ್ಮ ಸ್ಥಳಗಳಲ್ಲಿಯೇ ಕುಳಿತಿದ್ದ ದಾನವರೆಲ್ಲರೂ ಹಸಿವಿನಿಂದ ಪೀಡಿತರಾಗಿದ್ದರೂ ಏನೂ ತೋಚದೆ ಚಿಂತೆಗೊಳಗಾದರು. ಸ್ಥಿರ ಚಿತ್ತರಾದ ಬಲಿಯೇ ಮೊದಲಾದವರು ಸುಮ್ಮನೆ ಕುಳಿತು ಧ್ಯಾನಮಗ್ನರಾದರು.

೬೨–೬೩. ಆ ಸಮಯದಲ್ಲಿ ದಾನವರೆಲ್ಲರೂ ಈ ರೀತಿ ಮರುಳಾಗಿಹೋಗಿರುವುದನ್ನು ಕಂಡು ದೈತ್ಯ ಶ್ರೇಷ್ಠರಾದ ರಾಹು ಕೇತುಗಳೀರ್ವರೂ ಅಮೃತ ಪಾನಮಾಡಲು ತ್ವರೆಯುಳ್ಳವರಾಗಿ ದೇವತೆಗಳ ರೂಪವನ್ನು ತಾಳಿ ಆ ದೇವತೆಗಳ ಪಂಕ್ತಿಯಲ್ಲಿ ಕುಳಿತರು.

೬೪. ಅವರಲ್ಲಿ ಪರಮ ದುರ್ಜಯನಾದ ರಾಹುವು ಯಾವಾಗ ಅಮೃತ ಪಾನಮಾಡಲೆಳಸಿದನೋ ಆಗ ಸೂರ್ಯ ಚಂದ್ರರೀರ್ವರೂ ಆ ವಿಷಯವನ್ನು ಮಹಾತೇಜಸ್ವಿಯಾದ ವಿಷ್ಣುವಿಗೆ ತಿಳಿಸಿದರು.

೬೫. ಆಗಲಾ ವಿಷ್ಣುವು ದುಷ್ಟನಾದ ರಾಹುವಿನ ತಲೆಯನ್ನು ಕಡಿದು ಹಾಕಿದನು. ಆ ಸಮಯದಲ್ಲಿ ಆ ಶಿರಸ್ಸು ಆಕಾಶವನ್ನು ಸೇರಿತು. ಅವನ ಮುಂಡವು ಮಾತ್ರ ನೆಲಕ್ಕೆ ಬಿದ್ದಿತು. ಇಂತು ಬಿದ್ದ ಆ ಕಬಂಧವು ಉರುಳಿ ಹೋಗುತ್ತ ಪರ್ವತಗಳೆಲ್ಲವನ್ನೂ ಪುಡಿಗುಟ್ಟಿತು.

೬೬. ಆಗ ಪರ್ವತಗಳೊಡಗೂಡಿದ ಭೂಮಿಯೇ ಪುಡಿಪುಡಿಯಾಗಿ ಹೋಯಿತು.

**ದೃಷ್ಟ್ವಾ ತದಾ ಮಹಾದೇವಸ್ತಸ್ಯೋಪರಿ ತು ಸಂಸ್ಥಿತಃ ।**
**ನಿವಾಸಃ ಸರ್ವದೇವಾನಾಂ ತಸ್ಯಾಃ ಪಾದತಲೇಽಭವತ್ ॥ ೬೭ ॥**
**ಪೀಡನಂ ತತ್ಸಮೀಪೇಽಥ ನಿವಾಸ ಇತಿ ನಾಮನ್ಯೈ ॥ ೬೮ ॥**
**ಮಹತಾಮಾಲಯಂ ಯಸ್ಮಾದ್ಯಸ್ಯಾಸ್ತಚ್ಚರಣಾಂಬುಜಂ ।**
**ಮಹಾಲಯೇತಿ ವಿಖ್ಯಾತಾ ಜಗತ್ರಯವಿಮೋಹಿನೀ ॥ ೬೯ ॥**
**ಕೇತುಶ್ಚ ಧೂಮರೂಪೋಽಸಾವಾಕಾಶೇ ವಿಲಯಂಗತಃ ।**
**ಸುಧಾಂ ಸಮರ್ಪ್ಯ ಚಂದ್ರಾಯ ತಿರೋಧಾನಗತೋಽಭವತ್ ॥ ೭೦ ॥**
**ವಾಸುದೇವೋ ಜಗದ್ಯೋನಿರ್ಜಗತಾಂ ಕಾರಣಂ ಪರಂ ।**
**ವಿಷ್ಣೋಃ ಪ್ರಸಾದಾತ್ತಜ್ಜಾತಂ ಸುರಾಣಾಂ ಕಾರ್ಯಸಿದ್ಧಿದಂ ॥ ೭೧ ॥**
**ಅಸುರಾಣಾಂ ವಿನಾಶಾಯ ಜಾತಂ ದೈವವಿಪರ್ಯಯಾತ್ ।**
**ವಿನಾ ದೈವೇನ ಜಾನೀಧ್ವಮುದ್ಯಮೋ ಹಿ ನಿರರ್ಥಕಃ ॥ ೭೨ ॥**
**ಯೌಗಪದ್ಯೇನ ತೈಃ ಸರ್ವೈಃ ಕ್ಷೀರಾಬ್ಧೇರ್ಮಂಥನಂ ಕೃತಂ ।**
**ಸಿದ್ಧಿರ್ಜಾತಾಹಿ ದೇವಾನಾಮಸಿದ್ಧಿರಸುರಾನ್ಪ್ರತಿ ॥ ೭೩ ॥**

---

೬೭–೬೯. ಈ ರೀತಿ ಆ ಮೋಹಿನಿಯಿಂದಲೂ, ಆ ರಾಹುವಿನ ಕಬಂಧದಿಂದಲೂ ಚರಾಚರಾತ್ಮಕವಾದ ಜಗತ್ತೇ ಚೂರ್ಣಿತವಾಗಿಹೋಯಿತು. ಇದನ್ನು ಕಂಡು ಮಹಾದೇವನು ಆ ಕಬಂಧದಮೇಲೇರಿ ನಿಂತನು. ಆಗಲವನ ಪಾದತಲವೇ ದೇವತೆಗಳೆಲ್ಲರಿಗೂ ನೆಲೆಯಾಯಿತು. ಆ ಪರಮೇಶ್ವರನ ಪಾದಸಮೀಪದಲ್ಲಾದ ಪೀಡನಸ್ಥಳವೇ ನಿವಾಸಸ್ಥಾನವೆನಿಸಿತು. ಆತನ ಪಾದಕಮಲವು ಮಹಾತ್ಮರಾದ ದೇವತೆಗಳಿಗೆ ನೆಲೆಯಾದುದರಿಂದ ಅದು ಮಹಾಲಯವೆಂದು ಹೆಸರಾಗಿ ಮೂರು ಲೋಕಗಳನ್ನೂ ಮೋಹಗೊಳಿಸುವುದಾಯಿತು.

೭೦–೭೧. ಅಯ್ಯಾ ವಿಪ್ರರೇ! ಇತ್ತ ಕೇತುವಾದರೋ ಹೊಗೆಯ ರೂಪವನ್ನು ತಾಳಿ ಆಕಾಶದಲ್ಲಿ ಅಡಗಿಕೊಂಡನು. ತರುವಾಯ ಆ ಮೋಹಿನೀರೂಪಧರನೂ, ಜಗತ್ಕಾರಣನೂ, ಪರಮಕಾರಣನೂ ಆದ ಆ ವಾಸುದೇವನು ಚಂದ್ರನಿಗೆ ಉಳಿದಿದ್ದ ಅಮೃತವೆಲ್ಲವನ್ನೂ ಕೊಟ್ಟು ಅಲ್ಲಿಯೇ ಅಂತರ್ಧಾನವಾದನು. ಅಯ್ಯಾ ಶೌನಕಾದಿಗಳಿರಾ! ಹೀಗೆ ವಿಷ್ಣುವಿನ ಅನುಗ್ರಹದಿಂದ ದೇವತೆಗಳಿಗೆ ಕಾರ್ಯಸಿದ್ಧಿಯಾಯಿತು.

೭೨–೭೩. ಅದೇ ಅಮೃಧಮಥನವೇ ಅದೃಷ್ಟವಿಪರ್ಯದಿಂದ ದಾನವರ ವಿನಾಶಕ್ಕೆ ಕಾರಣವಾಯಿತು. ದೈವಬಲವಿಲ್ಲದೆಹೋದರೆ ಯಾವ ಪ್ರಯತ್ನವೂ (ಕಾರ್ಯವೂ) ನಿರರ್ಥಕವೇ ಎಂದು ತಿಳಿಯಿರಿ. ದೇವದಾನವರಿಬ್ಬರೂ ಒಟ್ಟಾಗಿ ಸೇರಿಯೇ ಕ್ಷೀರಸಮುದ್ರವನ್ನು ಕಡೆದರು. ಆದರೇನು? ದೇವತೆಗಳಿಗೆ ಅಮೃತಸಿದ್ಧಿಯಾಯಿತಾಗಲಿ ದಾನವರಿಗಾಗಲಿಲ್ಲ.

ತತಶ್ಚ ತೇ ದೇವವರಾನ್ ಪ್ರಕೋಪಿತಾ
ದೈತ್ಯಾಶ್ಚ ಮಾಯಯಾ ಪ್ರವಿಮೋಹಿತಾಃ ಪುನಃ ।
ಅನೇಕ ಶಸ್ತ್ರಾಸ್ತ್ರಯುತಾಸ್ತದಾಽಭವನ್
ವಿಷ್ಣೌ ಗತೇ ಗರ್ಜಮಾನಾಸ್ತದಾನೀಂ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಸಮುದ್ರಮಥನಾಖ್ಯಾನೇ ದೇವಾನಾಮಮೃತಪ್ರಾಶನಂ" ನಾಮ ದ್ವಾದಶೋಽಧ್ಯಾಯಃ

---

೭೪. ಆ ಬಳಿಕ ಹೀಗೆ ವಿಷ್ಣುಮಾಯೆಯಿಂದ ಮೋಸಹೋದ ಆ ದಾನವರೆಲ್ಲರೂ ದೇವತೆಗಳಲ್ಲಿ ಕೋಪಗೊಂಡರು. ಅವರು ವಿಷ್ಣುವು ಅಂತರ್ಧಾನವಾದ ತರುವಾಯ ಅನೇಕ ಶಸ್ತ್ರಾಸ್ತ್ರಗಳನ್ನು ತೆಗೆದುಕೊಂಡು ಯುದ್ಧಮಾಡಬಯಸಿ ಗರ್ಜಿಸತೊಡಗಿದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಸಮುದ್ರಮಥನಾಖ್ಯಾನ – ದೇವತೆಗಳ ಅಮೃತಪ್ರಾಶನ" ವೆಂಬ ಹನ್ನೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಅಥ ತ್ರಯೋದಶೋಽಧ್ಯಾಯಃ

### ಸಮುದ್ರಮಥನಾಖ್ಯಾನೇ — ದೇವಾಸುರ ಸಂಗ್ರಾಮವರ್ಣನಂ

**ಲೋಮಶ ಉವಾಚ :—**

ತತಸ್ತೇ ಗರ್ಜಮಾನಾಶ್ಚ ಆಕ್ಷಿಪಂತಃ ಸುರಾನ್ರಣೇ ।
ಶತಕ್ರತುಪ್ರಮುಖ್ಯಾಂಸ್ತಾನ್ಮಹಾಬಲಪರಾಕ್ರಮಾನ್ ॥ ೧ ॥
ವಿಮಾನಮಾರುಹ್ಯ ತದಾ ಮಹಾತ್ಮಾ
ವೈರೋಚನಿಃ ಸರ್ವಬಲೇನ ಸಾರ್ಧಂ ।
ದೈತ್ಯೈಃ ಸಮೇತೋ ವಿವಿಧೈರ್ಮಹಾಬಲೈಃ
ಸುರಾನ್ಪ್ರದುದ್ರಾವ ಮಹಾಭಯಾವಹಂ ॥ ೨ ॥
ಸ್ವಾನಿರೂಪಾಣಿ ಬಿಭ್ರಂತಃ ಸಮಾಪೇತುಃ ಸಹಸ್ರಶಃ ।
ಕೇಚಿದ್ವ್ಯಾಘ್ರಾನ್ ಸಮಾರೂಢಾ ಮಹಿಷಾಂಶ್ಚ ತಥಾಪರೇ ॥ ೩ ॥
ಅಶ್ವಾನ್ಕೇಚಿತ್ಸಮಾರೂಢಾ ದ್ವಿಪಾನ್ಕೇಚಿತ್ತಥಾಪರೇ ।
ಸಿಂಹಾಂಸ್ತಥಾಪರೇ ರೂಢಾಃ ಶಾರ್ದೂಲಾಞ್ಶರಭಾಂಸ್ತಥಾ ॥ ೪ ॥

---

## ಕನ್ನಡದ ಅನುವಾದ

### ಸಮುದ್ರಮಥನ — ದೇವಾಸುರ ಸಂಗ್ರಾಮವರ್ಣನ

೧. ಲೋಮಶನು ಹೇಳುತ್ತಾನೆ —ಅಯ್ಯಾ ಶೌನಕಾದಿಗಳಿರಾ! ಆ ತರುವಾಯ, ದಾನವರೆಲ್ಲರೂ ರಣರಂಗದಲ್ಲಿ ನೇರಿ ಸಿಂಹನಾದಗಳನ್ನು ಮಾಡುತ್ತಲೂ, ಮಹಾ ಬಲಪರಾಕ್ರಮಿಗಳಾದ ದೇವೇಂದ್ರನೇ ಮೊದಲಾದ ದೇವತೆಗಳೆಲ್ಲರನ್ನೂ ಬಯ್ಯುತ್ತಲೂ ಇದ್ದರು.

೨. ಮಹಾತ್ಮನೂ, ವಿರೋಚನನ ಮಗನೂ ಆದ ಬಲಿಯು ತನ್ನ ಸೇನೆಯೊಡನೆಯೂ, ಮಹಾ ಬಲಿಷ್ಠರಾದ ಅನೇಕ ದೈತ್ಯ ಸೇನಾನಾಯಕರೊಡನೆಯೂ ಕೂಡಿ ಆ ದೇವತೆಗಳನ್ನು ಬಹು ಭಯಂಕರವಾಗಿ ಅಟ್ಟಿಬಂದನು.

೩–೬. ಆ ದೈತ್ಯದಾನವರು ತಂತಮ್ಮ ನಿಜರೂಪಗಳನ್ನು ತಾಳಿದವರಾಗಿ ಸಾವಿರಾರುಗಳಾಗಿ ಗುಂಪು ಕಟ್ಟಿಕೊಂಡು ಕಾಳೆಗಕ್ಕೆ ಮುನ್ನುಗ್ಗಿ ಬಂದರು. ಅವರಲ್ಲಿ ಕೆಲವರು ಹುಲಿಗಳನ್ನೂ, ಕೆಲವರು ಎಮ್ಮೆಗಳನ್ನೂ, ಕೆಲವರು ಕುದುರೆಗಳನ್ನೂ, ಕೆಲವರು ಆನೆಗಳನ್ನೂ, ಕೆಲವರು ಸಿಂಹಗಳನ್ನೂ, ಕೆಲವರು ಶಾರ್ದೂಲಗಳನ್ನೂ, ಕೆಲವರು ನವಿಲು, ರಾಜಹಂಸ, ಕೋಳಿಗಳನ್ನೂ ಏರಿ ಹೊರಟರು. ಇನ್ನು ಕೆಲವರು ಕುದುರೆಗಳನ್ನೇರಿಯೂ, ಮತ್ತೆ ಕೆಲವರು ವೇಗವಾಗಿ ಹೋಗುವ ಒಂಟೆಗಳನ್ನೇರಿಯೂ, ಕೆಲವರು ಆನೆಗಳನ್ನೂ, ಹೇಸರಕತ್ತೆಗಳನ್ನೂ ಏರಿಯೂ ಮುನ್ನುಗ್ಗಿ ಹೊರಟರು. ಅಂತೆಯೇ ಇತರ ಕೆಲವರು ಶಕಟ

ಮಯೂರಾನ್ರಾಜಹಂಸಾಂಶ್ಚ ಕುಕ್ಕುಟಾಂಶ್ಚ ತಥಾಪರೇ ।
ಕೇಚಿದ್ಧಯಾನ್ಸಮಾರೂಢಾ ಉಷ್ಟ್ರಾನಶ್ವತರಾನಪಿ ॥ ೫ ॥
ಗಜಾನ್ಖರಾನ್ಪರೇಚೈವ ಶಕಟಾಂಶ್ಚ ತಥಾಪರೇ ।
ಪಾದಾತಾ ಬಹವೋ ದೈತ್ಯಾಃ ಖಡ್ಗಶಕ್ತ್ಯೃಷ್ಟಿಪಾಣಯಃ ॥ ೬ ॥
ಪರಿಘಾಯುಧಿನಃ ಪಾಶಶೂಲಮುದ್ಗರಪಾಣಯಃ ।
ಅಸಿಲೋಮಾನ್ವಿತಾಃ ಕೇಚಿದ್ಭುಶುಂಡೀಪರಿಘಾಯುಧಾಃ ॥ ೭ ॥
ಹಯನಾಗರಥಾಂಶ್ಚಾನ್ಯೇ ಸಮಾರೂಢಾಃ ಪ್ರಹಾರಿಣಃ ।
ವಿಮಾನಾನಿ ಸಮಾರೂಢಾ ಬಲಿಮುಖ್ಯಾಃ ಸಹಸ್ರಶಃ ॥ ೮ ॥
ಸ್ಪರ್ಧಮಾನಾಸ್ತಥಾನ್ಯೋನ್ಯಂ ಗರ್ಜಂತಶ್ಚ ಮುಹುರ್ಮುಹುಃ ।
ವೃಷಪರ್ವಾ ಹ್ಯುವಾಚೇದಂ ಬಲಿನಂ ದೈತ್ಯಪುಂಗವಂ ॥ ೯ ॥
ತ್ವಯಾ ಕೃತಂ ಮಹಾಬಾಹೋ ಇಂದ್ರೇಣ ಸಹ ಸಂಗಮಂ ।
ವಿಶ್ವಾಸೋ ನೈವ ಕರ್ತವ್ಯೋ ದುಹೃದಾ ಚ ಕಥಂಚನ ॥ ೧೦ ॥
ಊನೇನಾಪಿ ಹಿ ತುಚ್ಛೇನ ವೈರಿಣಾಪಿ ಕಥಂಚನ ।
ಮೈತ್ರೀ ಬುದ್ಧಿಮತಾ ಕಾರ್ಯಾ ಆಪದ್ಯಪಿ ನಿವರ್ತತೇ ॥ ೧೧ ॥

---

ಗಳನ್ನೇರಿ ಹೊರಟರು. ಪದಾತಿಗಳಾದ ಅನೇಕ ದೈತ್ಯರು ಕತ್ತಿ, ಶಕ್ತಿ, ಕಠಾರಿಗಳೇ ಮೊದಲಾದ ಭಯಂಕರವಾದ ಆಯುಧಗಳನ್ನು ಕೈಯಲ್ಲಿ ಹಿಡಿದು ಕಾಳೆಗಕ್ಕೆ ನುಗ್ಗಿ ಹೊರಟರು.

೭–೧೦. ಅವರಲ್ಲಿ ಕೆಲವರು ಹಾರೆಗಳನ್ನೇ ಆಯುಧಗಳನ್ನಾಗಿಸಿಕೊಂಡವರು; ಪಾಶ, ಶೂಲ, ಮುದ್ಗರಗಳನ್ನು ಕೈಯಲ್ಲಿ ಹಿಡಿದವರು ಕೆಲವರು; ಅಸಿಲೋಮಗಳನ್ನು ಹಿಡಿದವರು ಕೆಲವರು; ಭುಶುಂಡಿ, ಪರಿಘಗಳನ್ನು ಹಿಡಿದವರು ಕೆಲವರು; ಆನೆ ಕುದುರೆಗಳನ್ನು ಹೂಡಿದ ರಥಗಳನ್ನೇರಿ ಕಾಳೆಗ ಮಾಡುವವರು ಕೆಲವರು; ಇವರೆಲ್ಲರೂ ಕಾಳೆಗಕ್ಕೆ ನುಗ್ಗಿ ಬಂದರು. ಹೀಗೆ ಬಲಿಯೇ ಮೊದಲಾದ ಸಾವಿರಾರು ಮಂದಿ ದಾನವರು ವಾಹನಗಳನ್ನೇರಿ ತಾಮುಂದು, ನಾಮುಂದು ಎಂಬದಾಗಿ ಒಬ್ಬೊಬ್ಬರೂ ಹುರುಡಿಸುತ್ತ, ಅಡಿಗಡಿಗೂ ಸಿಂಹನಾದಗಳನ್ನು ಮಾಡುತ್ತ ಹೊರಟರು. ಆಗ ದಾನವನಾದ ವೃಷಪರ್ವನು ದೈತ್ಯಶ್ರೇಷ್ಠನಾದ ಬಲಿಯನ್ನು ಕುರಿತು, "ಎಲೈ ಮಹಾಬಾಹುವೇ! ನೀನು ಇಂದ್ರನೊಡನೆ ಗೆಳೆತನವನ್ನು ಮಾಡಿದೆ. ಏನೇ ಆದರೂ ಮೋಸಗಾರರಲ್ಲಿ ಸ್ನೇಹವನ್ನು ಮಾಡಬಾರದು.

೧೧. ಹೆಳವನಾಗಲಿ, ಹೀನನಾಗಲಿ, ಹಗೆಯನಾಗಲಿ ಅವನೊಡನೆ ಬುದ್ಧಿವಂತನಾದವನು ಆಪತ್ಕಾಲಗಳಲ್ಲಿ ಸ್ನೇಹವನ್ನು ಮಾಡತಕ್ಕುದು. ಹಾಗೆ ಮಾಡಿದರೂ ಅವನು ಈ ರೀತಿ ಅಪಜಯವನ್ನು ಪಡೆಯುವುದಿಲ್ಲ.

ನ ವಿಶ್ವಸೇತ್ಪೂರ್ವವಿರೋಧಿನಾ ಕ್ವಚಿ-
ತ್ಪರಾಜಿತಾಃಸ್ಮೋಽಥಬಲೇ ತ್ವಯಾಧುನಾ ।
ಪುರಾಣದುಷ್ಟಾಃ ಕಥಮದ್ಯವೈ ಪುನ-
ರ್ಮಂತ್ರಂ ವಿಕರ್ತುಂ ನಚ ತೇ ಯತೇರನ್ ॥ ೧೨ ॥
ಇತ್ಯೂಚುಸ್ತೇ ದುರಾಧರ್ಷಾ ಯೋದ್ಧುಕಾಮಾ ವ್ಯವಸ್ಥಿತಾಃ ।
ಧ್ವಜೈಶ್ಛತ್ರೈಃ ಪತಾಕೈಶ್ಚ ರಣಭೂಮಿಮಮಂಡಯನ್ ॥ ೧೩ ॥
ಚಾಮರೈಶ್ಚ ದಿಶಃ ಸರ್ವಾ ಲೋಪಿತಂ ಚ ರಣಸ್ಥಲಂ ।
ತಥಾ ಸರ್ವೇ ಸುರಾಸ್ತತ್ರ ದೈತ್ಯಾನ್ಪ್ರತಿ ಸಮುತ್ಸುಕಾಃ ॥ ೧೪ ॥
ಪೀತ್ವಾಮೃತಂ ಮಹಾಭಾಗಾ ವಾಹನಾರುಹ್ಯ ದಂಶಿತಾಃ ।
ಗಜಾರೂಢೋ ಮಹೇಂದ್ರೋಽಪಿ ವಜ್ರಪಾಣಿಃ ಪ್ರತಾಪವಾನ್ ।
ಸೂರ್ಯಶ್ಚೋಚ್ಚೈಃಶ್ರವಾರೂಢೋ ಮೃಗಾರೂಢಶ್ಚ ಚಂದ್ರಮಾಃ ॥
ಛತ್ರಚಾಮರಸಂವೀತಾಃ ಶೋಭಿತಾ ವಿಜಯಶ್ರಿಯಾ ।
ಪ್ರಣಮ್ಯ ವಿಷ್ಣುಂ ತೇ ಸರ್ವ ಇಂದ್ರಾದ್ಯಾ ಜಯಕಾಂಕ್ಷಿಣಃ ॥ ೧೬ ॥

---

೧೨. ಎಂದಿಗೇ ಆಗಲಿ ಹಿಂದಿನಿಂದಲೂ ಹಗೆಯನಾದವನನ್ನು ನಂಬಬಾರದು. ಎಲೈ ಬಲಿಯೇ! ನೀನು ಈ ರೀತಿ ಹಿಂದಿನಿಂದಲೂ ನಮಗೆ ಶತ್ರುವಾಗಿರುವ ಈ ದೇವೇಂದ್ರನೊಡನೆ ಸ್ನೇಹವನ್ನು ಬೆಳೆಸಿದುದರ ನಿಮಿತ್ತವಾಗಿ ನಾವುಗಳೆಲ್ಲರೂ ಪರಾಜಯವನ್ನು ಪಡೆದೆವು. ಮೊದಲಿನಿಂದಲೂ ದುಷ್ಟರಾದ ಈ ದೇವತೆಗಳು ಈಗ ಮತ್ತೆ ದುರಾಲೋಚನೆಯನ್ನು ಮಾಡಿ ನಮಗೆ ಅಪಕಾರವನ್ನು ಮಾಡಲು ಪ್ರಯತ್ನಿಸದೆ ಹೋದಾರೆ'' ಎಂದು ಹೇಳಿದನು.

೧೩. ಎದುರಿಸಲಸದಳರಾದ ಆ ದೈತ್ಯದಾನವರು ಈ ರೀತಿ ಮಾತನಾಡುತ್ತಲೇ ಧ್ವಜಗಳಿಂದಲೂ, ಪತಾಕೆಗಳಿಂದಲೂ ಕೂಡಿ ದೇವತೆಗಳೊಡನೆ ಯುದ್ಧಮಾಡಬಯಸಿ ರಣರಂಗವನ್ನಲಂಕರಿಸಿದರು.

೧೪. ಆಗಲವರ ಚಾಮರಗಳಿಂದ ದಿಕ್ಕುಗಳೇ ಅಲ್ಲದೆ ಕಾಳಗದ ನೆಲವೇ ತುಂಬಿಹೋಯಿತು. ಆ ಸಮಯದಲ್ಲಿ ದೇವತೆಗಳೂ ನಹ ಆ ದಾನವರೊಡನೆ ಯುದ್ಧಮಾಡಲು ಉತ್ಸಾಹಿಗಳಾದರು.

೧೫-೧೬. ಅಮೃತವನ್ನು ಪಾನಮಾಡಿ ಮಹಾ ಭಾಗ್ಯಶಾಲಿಗಳಾಗಿದ್ದವರೂ ಜಯಕಾಂಕ್ಷಿಗಳೂ ಆದ ಇಂದ್ರನೇ ಮೊದಲಾದವರೆಲ್ಲರೂ ತಂತಮ್ಮ ವಾಹನಗಳನ್ನೇರಿ ಅಸ್ತ್ರಶಸ್ತ್ರಸಂಪನ್ನರಾಗಿ ರಣಭೂಮಿಗೆ ತೆರಳಿದರು. ಆಗ ಮಹಾ ಪರಾಕ್ರಮಿಯೂ, ವಜ್ರಪಾಣಿಯೂ ಆದ ದೇವೇಂದ್ರನು ಐರಾವತವನ್ನೇರಿ ಹೊರಟನು. ಸೂರ್ಯನು ಉಚ್ಚೈಃಶ್ರವಸ್ಸೆಂಬ ಅಶ್ವಶ್ರೇಷ್ಠವನ್ನೇರಿದನು. ಚಂದ್ರನು ಮೃಗವನ್ನೇರಿದನು. ಹೀಗೆ ಎಲ್ಲರೂ ವಾಹನಾರೂಢರಾಗಿ ಹೊರಟ

ತೇ ವಿಷ್ಣುನಾ ಹ್ಯನುಜ್ಞಾತಾ ಅಸುರಾನ್ ಪ್ರತಿ ವೈ ರುಷಾ ।
ಅಸುರಾಶ್ಚ ಮಹಾಕಾಯಾ ಭೀಮಾಶ್ಚ ಭೀಮವಿಕ್ರಮಾಃ ॥ ೧೭ ॥
ತೇಷಾಂ ಘೋರಮಭೂದ್ಯುದ್ಧಂ ದೇವಾನಾಂ ದಾನವೈಃ ಸಹ ।
ತುಮುಲಂ ಚ ಮಹಾಘೋರಂ ಸರ್ವಭೂತಭಯಾವಹಂ ॥ ೧೮ ॥
ಶರಧಾರಾನ್ವಿತಂ ಸರ್ವಂ ಬಭೂವ ಪರಮಾದ್ಭುತಂ ।
ತತಶ್ಚಟಚಟಾ ಶಬ್ದಾ ಬಭೂವುಶ್ಚ ದಿಶೋ ದಶ ॥ ೧೯ ॥
ತತೋ ನಿಮಿಷಮಾತ್ರೇಣ ಶರಘಾತಯುತಾಭವನ್ ।
ಶರತೋಮರನಾರಾಚೈರಾಹತಾಶ್ಚಾಪತನ್ ಭುವಿ ॥ ೨೦ ॥
ವಿಧ್ಯಮಾನಾಸ್ತಥಾ ಕೇಚಿದ್ವಿನಿಧುಶ್ಚಾಪರಾನ್ರಣೇ ।
ಭಲ್ಲೈರ್ಭಗ್ನಾಶ್ಚ ಪತಿತಾ ನಾರಾಚೈಃ ಶಕಲೀಕೃತಾಃ ॥ ೨೧ ॥

---

ಇಂದ್ರನಾದಿಯಾದ ಆ ದೇವತೆಗಳೆಲ್ಲರೂ ಜಯವನ್ನು ಬಯಸಿ ರಣರಂಗಕ್ಕೆ ಹೊರಟರು. ಛತ್ರಚಾಮರಗಳಿಂದೊಪ್ಪಿ ವಿಜಯಲಕ್ಷ್ಮಿಯಿಂದ ಬೆಳಗುತ್ತಲಿದ್ದ ಅವರೆಲ್ಲರೂ ಮೊದಲು ಶ್ರೀಮನ್ಮಹಾವಿಷ್ಣುವನ್ನು ನಮಸ್ಕರಿಸಿದರು.

೧೭. ಆತನು ಕಾಳೆಗಕ್ಕೆ ಅಪ್ಪಣೆಕೊಡಲು, ಅವರೆಲ್ಲರೂ ರೋಷಪೂರಿತರಾಗಿ ಆ ದಾನವರನ್ನಟ್ಟಿಬಂದರು. ಮಹಾಕಾಯರೂ, ಭಯಂಕರವಾದ ಕಣ್ಣುಗಳುಳ್ಳವರೂ, ಭಯಂಕರ ಪರಾಕ್ರಮಿಗಳೂ ಆದ ಅಸುರರೂ ಸಹ ಆ ದೇವತೆಗಳ ಮೇಲೆ ನುಗ್ಗಿಬಂದರು.

೧೮–೧೯. ಆಗಲಾ ದೇವದಾನವರಿಗೆ ತುಮುಲವೂ, ಮಹಾಘೋರವೂ ಸಮಸ್ತ ಭೂತಗಳಿಗೂ ಮಹಾಭಯವನ್ನು ಹುಟ್ಟಿಸುವುದೂ ಆದ ಘೋರ ಯುದ್ಧವು ನಡೆಯಿತು. ಎಲ್ಲೆಡೆಗಳಲ್ಲಿಯೂ ಕತ್ತಿಯ ಪೆಟ್ಟುಗಳು ಮೊದಲಾಯಿತು. ಆ ಸಮಯದಲ್ಲಿ ಹತ್ತೂ ದಿಕ್ಕುಗಳೆಲ್ಲವೂ ಚಟಚಟ ಶಬ್ದದಿಂದ ತುಂಬಿಹೋದುವು.

೨೦. ತರುವಾಯ ದಾನವರೆಲ್ಲರೂ ಒಂದು ನಿಮಿಷದಲ್ಲಿಯೇ ದೇವತೆಗಳ ಕತ್ತಿಯ ಪೆಟ್ಟುಗಳಿಂದಲೂ, ಬಾಣ ತೋಮರ ನಾರಾಚಗಳ ಹೊಡೆತಗಳಿಂದಲೂ ನೆಲಕ್ಕುರುಳಿಹೋದರು.

೨೧. ಆದರೂ ದಾನವರೂ ಸಹ ಆ ರಣಾಂಗಣದಲ್ಲಿ ಮುನ್ನುಗ್ಗಿ ಹೋಗಿ ದೇವತೆಗಳನ್ನೆಲ್ಲ ಹೊಡೆದುರುಳಿಸಲಾರಂಭಿಸಿದರು. ಆಗಲಾ ದೇವತೆಗಳ ಹೊಡೆತದಿಂದ ಕೆಲ ದಾನವರು ಮಡಿದರು. ಕೆಲವರು ಭಲ್ಲಾಯುಧಗಳಿಂದ ಕತ್ತರಿಸಿ ನೆಲಕ್ಕೆ ಬಿದ್ದರು; ಕೆಲವರು ನಾರಾಚಗಳ ಪೆಟ್ಟುಗಳಿಂದ ತುಂಡುತುಂಡಾಗಿ ಹೋದರು.

ಕೈಶ್ಚಿರಪ್ರಹಾರಿತಾಃ ಕೇಚಿದ್ದ್ವಿತ್ವಾ ದಾನವರಾಕ್ಷಸಾಃ ।
ಶಿಲೀಮುಖೈರ್ಮಾರಿತಾಶ್ಚ ಭಗ್ನಾಃ ಕೇಚಿಚ್ಚ ದಾನವಾಃ ॥ ೨೨ ॥
ಏವಂ ಭಗ್ನಂ ದಾನವಾನಾಂ ಚ ಸೈನ್ಯಂ
ದೃಷ್ಟ್ವಾ ದೇವಾ ಗರ್ಜಮಾನಾಃ ಸಮಂತಾತ್ ।
ಹೃಷ್ಟಾಃ ಸರ್ವೇ ಸಂಮಿಲಿತ್ವಾ ತದಾನೀಂ
ಲಬ್ಧ್ವಾ ಯುದ್ಧೇ ತೇ ಜಯಂ ಶ್ಲಾಘಯಂತೇ ॥ ೨೩ ॥
ಶಂಖವಾದಿತ್ರಘೋಷೇಣ ಪೂರಿತಂ ಚ ಜಗತ್ರಯಂ ।
ದೇವಾನ್ ಪ್ರತಿ ಕೃತಾಮರ್ಷಾ ದಾನವಾಸ್ತೇ ಮಹಾಬಲಾಃ ॥ ೨೪ ॥
ಬಲಿ ಪ್ರಭೃತಯಃ ಸರ್ವೇ ಸಂಭ್ರಮೇಣೋತ್ಥಿತಾಃ ಪುನಃ ।
ವಿಮಾನೈಃ ಸೂರ್ಯಸಂಕಾಶೈರನೇಕೈಶ್ಚ ಸಮನ್ವಿತಾಃ ॥ ೨೫ ॥
ದ್ವಂದ್ವಯುದ್ಧಂ ಸುತುಮುಲಂ ದೇವಾನಾಂ ದಾನವೈಃ ಸಹ ।
ಸಂಪ್ರವೃತ್ತಂ ಪುನಶ್ಚೈವ ಪರಸ್ಪರಜಿಗೀಷಯಾ ॥ ೨೬ ॥
ಬಲಿನಾ ದಾನವೇಂದ್ರೇಣ ಮಹೇಂದ್ರೋ ಯುಯುಧೇ ತದಾ ।
ತಥಾ ಯಮೋ ಮಹಾಬಾಹುರ್ನಮುಚ್ಯಾಸಹ ಸಂಗತಃ ॥ ೨೭ ॥
ನೈರ್ಋತಃ ಪ್ರಘಸೇನೈವ ಪಾಶೀ ಕುಂಭೇನ ಸಂಗತಃ ।
ನಿಕುಂಭೇನೈವ ಸುಮಹದ್ಯುದ್ಧಂ ಚಕ್ರೇ ಸದಾರಯುಃ ॥ ೨೮ ॥

---

೨೨–೨೩. ಕೆಲ ದಾನವರು ಕತ್ತಿಗಳಿಂದಲೂ, ಕೆಲವರು ಬಾಣಗಳಿಂದಲೂ ಪೆಟ್ಟುತಿಂದು ಬಿದ್ದುಹೋದರು. ಹೀಗೆ ಭಗ್ನವಾದ ಆ ದಾನವ ಸೇನೆಯನ್ನು ಕಂಡು ದೇವತೆಗಳೆಲ್ಲರೂ ಎತ್ತೆತ್ತಲೂ ಸಂತೋಷಗೊಂಡು ಒಟ್ಟಿಗೆ ಸೇರಿ ತಾವು ಪಡೆದ ಗೆಲುವನ್ನು ಕೊಂಡಾಡತೊಡಗಿದರು.

೨೪–೨೫. ಮೂರು ಲೋಕಗಳೂ ಅವರ ಶಂಖ ವಾದಿತ್ರಗಳ ಧ್ವನಿಯಿಂದ ತುಂಬಿಹೋದವು. ಆ ಸಮಯದಲ್ಲಿ ಮಹಾ ಪರಾಕ್ರಮಿಗಳಾದ ಬಲಿಯೇ ಮೊದಲಾದ ದಾನವರೆಲ್ಲರೂ ಮತ್ತಷ್ಟು ರೋಷಗೊಂಡು ಆ ದೇವತೆಗಳೊಡನೆ ಕಾಳಗ ಮಾಡಲು ಸಂಭ್ರಮವುಳ್ಳವರಾಗಿ ಸೂರ್ಯನಿಗೆ ಸಮಾನವಾದ ತೇಜಸ್ಸುಳ್ಳ ಅನೇಕ ವಾಹನಗಳನ್ನೇರಿ ಮುನ್ನುಗ್ಗಿಬಂದರು.

೨೬. ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಬಯಕೆಯುಳ್ಳ ಆ ದೇವತೆಗಳಿಗೂ, ದಾನವರಿಗೂ ಮತ್ತೆ ದ್ವಂದ್ವಯುದ್ಧವು ಮೊದಲಾಯಿತು.

೨೭–೨೮. ಆಗ ಮಹೇಂದ್ರನು ದಾನವೇಂದ್ರನಾದ ಬಲಿಯೊಡನೆ ಕಾದಿದನು. ಅಂತೆಯೇ ಮಹಾಬಾಹುವಾದ ಯಮನು ನಮುಚಿಯೊಡನೆ ಹೋರಿದನು. ನಿರ್ಋತಿಯು ಪ್ರಘಸನೊಡನೆಯೂ, ವರುಣನು ಕುಂಭನೊಡನೆಯೂ, ವಾಯುವು ನಿಕುಂಭನೊಡನೆಯೂ ಸೇರಿ ಬಹಳ ದೊಡ್ಡದಾಗಿ ಕಾಳೆಗಮಾಡಿದರು.

**ಸೋಮೇನ ಸಹ ರಾಹುಶ್ಚ ಯುದ್ಧಂ ಚಕ್ರೇ ಸುದಾರುಣಂ ।**
**ರಾಹುಣಾ ಚಂದ್ರದೇಹೋತ್ಥಮಮೃತಂ ಭಕ್ಷಿತಂ ತದಾ ।**
**ಸಂಪರ್ಕಾದಮೃತಸ್ಯೈವ ಯಥಾ ರಾಹುಸ್ತಥಾಭವತ್ ॥ ೨೯ ॥**
**ತಾನಿ ಸರ್ವಾಣಿ ದೃಷ್ಟಾನಿ ಶಂಭುನಾ ಪರಮೇಷ್ಠಿನಾ ।**
**ಆಶ್ರಯೋಽಹಂ ಚ ಸರ್ವೇಷಾಂ ಭೂತಾನಾಂ ನಾತ್ರಸಂಶಯಃ ।**
**ಅಸುರಾಣಾಂ ಸುರಾಣಾಂ ಚ ಸರ್ವೇಷಾಮಪಿ ವಲ್ಲಭಃ ॥ ೩೦ ॥**
**ಏವಮುಕ್ತಸ್ತದಾ ರಾಹುಃ ಪ್ರಣಮ್ಯ ಶಿರಸಾ ಶಿವಂ ।**
**ಮೌಲೌ ಸ್ಥಿತಸ್ತದಾ ಚಂದ್ರೋ ಅಮೃತಂ ವ್ಯಸೃಜದ್ಭಯಾತ್ ॥ ೩೧ ॥**
**ತೇನ ತಸ್ಯ ಹಿ ಜಾತಾನಿ ಶಿರಾಂಸಿ ಸುಬಹೂನ್ಯಪಿ ।**
**ಏಕಪದ್ಯೇನ ತೇಷಾಂ ಚ ಸ್ರಜಂ ಕೃತ್ವಾ ಮನೋಹರಂ ।**
**ಬಬಂಧ ಶಂಭುಃ ಶಿರಸಿ ಶಿರೋಭೂಷಣವತ್ಕೃತಂ ॥ ೩೨ ॥**
**ಅಶನಾತ್ಕಾಲಕೂಟಸ್ಯ ನೀಲಕಂಠೋಽಭವತ್ತದಾ ।**
**ದೇವಾನಾಂ ಕಾರ್ಯಸಿದ್ಧ್ಯರ್ಥಂ ಮುಂಡಮಾಲಾ ತಥಾಕೃತಾ ॥ ೩೩ ॥**
**ದಧಾರ ಶಿರಸಾ ತಾಂ ಚ ಮುಂಡಮಾಲಾಂ ಮಹೇಶ್ವರಃ ॥ ೩೪ ॥**

---

೨೯. ಆಗ ರಾಹುವು ಚಂದ್ರನೊಡನೆ ಭಯಂಕರವಾಗಿ ಕಾದಿದನಲ್ಲದೆ, ಅವನನ್ನು ಬಡಿದಾಗ ಅವನಿಂದ ಚಿಮ್ಮಿದ ಅಮೃತವೆಲ್ಲವನ್ನೂ ಪಾನಮಾಡಿದನು. ಆಗಲವನು ಆ ಅಮೃತದ ಸಂಪರ್ಕದಿಂದ ಮೊದಲಿನ ರಾಹುವೇ ಆದನು.

೩೦–೩೧. ಈ ಎಲ್ಲವನ್ನೂ ಪರಮೇಷ್ಠಿಯಾದ ಶಂಭುವು ನೋಡಿ, "ಎಲೈ ರಾಹುವೇ! ನಾನು ಸಮಸ್ತ ಭೂತಗಳಿಗೂ, ದೇವತೆಗಳಿಗೂ, ಅಸುರರಿಗೂ ಆಶ್ರಯಭೂತನಾದವನು. ನಾನು ಎಲ್ಲರಿಗೂ ಪ್ರಿಯನಾದವನು. ಇದರಲ್ಲಿ ಸಂಶಯವಿಲ್ಲ. ಆದುದರಿಂದೀಗ ನಾನು ಈ ಚಂದ್ರನಿಗೆ ಆಶ್ರಯವನ್ನು ಕೊಡುತ್ತೇನೆ" ಎಂದನು. ಪರಮೇಶ್ವರಿಂತೆನಲು ಆ ರಾಹುವು ಆತನಿಗೆ ಶಿರಸಾ ಪ್ರಣಾಮ ಮಾಡಿದನು. ಆಗ ಚಂದ್ರನು ಆ ರಾಹುವಿನ ಭಯದಿಂದ ತನ್ನಲ್ಲಿದ್ದ ಅಮೃತವೆಲ್ಲವನ್ನೂ ತೊರೆದು ಆ ಪರಶಿವನ ತಲೆಯಲ್ಲಿ ನಿಂತನು.

೩೨–೩೪. ಆಗಲಾ ರಾಹುವಿಗೆ ಅಮೃತಪಾನದ ಫಲವಾಗಿ ಅನೇಕ ಶಿರಸ್ಸುಗಳುಂಟಾದುವು. ಶಂಭುವು ಅವುಗಳೆಲ್ಲವನ್ನೂ ಒಟ್ಟುಗೂಡಿಸಿ ಮನೋಹರವಾದೊಂದು ಮಾಲೆಯನ್ನು ಮಾಡಿ ಅದನ್ನು ತನ್ನ ಕಂಠದಲ್ಲಿ ಧರಿಸಿ ಆ ಶಿರಸ್ಸುಗಳಿಗೆಲ್ಲ ಅಲಂಕಾರವನ್ನುಂಟುಮಾಡಿದನು. ಅಯ್ಯಾ ಶೌನಕಾದಿಗಳಿರಾ! ಪರಮೇಶ್ವರನು ಪೂರ್ವದಲ್ಲಿ ಕಾಲಕೂಟ ವಿಷವನ್ನು ಪಾನಮಾಡಿ ನೀಲಕಂಠನಾದನಷ್ಟೆ. ಈಗಲಾತನು ದೇವತೆಗಳ ಕಾರ್ಯಸಿದ್ಧಿಗಾಗಿ ಆ ರೀತಿ ಮುಂಡಮಾಲೆಯನ್ನು ಮಾಡಿ ತನ್ನ ಕೊರಳಲ್ಲಿ ತಾಳಿದನು.

ತಯಾ ಸ್ರಜಾಽಸೌ ಶುಶುಭೇ ಮಹಾತ್ಮಾ
ದೇವಾದಿದೇವಸ್ತ್ರಿಪುರಾಂತಕೋ ಹರಃ ।
ಗಜಾಸುರೋ ಯೇನ ನಿಪಾತಿತೋ ಮಹಾ
ನಥಾಂಧಕೋ ಯೇನ ಕೃತಶ್ಚ ಚೂರ್ಣಃ ॥ ೩೫ ॥
ಗಂಗಾ ಧೃತಾ ಯೇನ ಶಿರಸ್ಸು ಮಧ್ಯೇ
ಚಂದ್ರಂ ಚ ಚೂಡೇ ಕೃತವಾನ್ ಭಯಾವಹಃ ।
ವೇದಾಃ ಪುರಾಣಾನಿ ತಥಾಗಮಾಶ್ಚ
ತಥೈವ ನಾನಾ ಶ್ರುತಯೋಽಥ ಶಾಸ್ತ್ರಂ ॥ ೩೬ ॥
ಜಲ್ಪಂತಿ ನಾನಾಗಮಭೇದಭೇದೈ-
ರ್ಮೀಮಾಂಸಮಾನಾಶ್ಚ ಭವಂತಿ ಮೂಕಾಃ ।
ನಾನಾಗಮಾಚಾರ್ಯ ಮತಪ್ರಭೇದೈ-
ರ್ನಿರೂಪ್ಯಮಾಣೋ ಜಗದೇಕಬಂಧುಃ ॥ ೩೭ ॥
ಶಿವಂ ಹಿ ನಿತ್ಯಂ ಪರಮಾತ್ಮದೈವಂ
ವೇದೈಕವೇದ್ಯಂ ಪರಮಾತ್ಮದಿವ್ಯಂ ।
ವಿಹಾಯ ತಂ ಮೂಢಜನಾಃ ಪ್ರಮತ್ತಾಃ
ಶಿವಂ ನ ಜಾನಂತಿ ಪರಾತ್ಮರೂಪಂ ॥ ೩೮ ॥

---

೩೫–೩೭. ಮಹಾತ್ಮನೂ, ದೇವತೆಗಳಿಗೆಲ್ಲ ಆದಿದೇವನೂ, ತ್ರಿಪುರಾಂತಕನೂ ಆದ ಆ ಮಹೇಶ್ವರನು ಆ ಮುಂಡಮಾಲೆಯನ್ನು ಧರಿಸಿ ಬಹಳವಾಗಿ ಬೆಳಗಿದನು. ಯಾವ ಮಹಾತ್ಮನು ಗಜಾಸುರನನ್ನು ಸಂಹರಿಸಿದನೋ, ಯಾವಾತನು ಅಂಧಕದಾನವನ್ನು ಪುಡಿಗುಟ್ಟಿದನೋ, ಯಾವನು ಗಂಗೆಯನ್ನು ತಲೆಯಲ್ಲಿ ತಾಳಿದನೋ, ಯಾವಾತನು ಚಂದ್ರನನ್ನು ಮುಡಿಯಲ್ಲಿ ಮುಡಿದನೋ ಭಯನಿವಾರಕನಾದ ಆ ಪರಮೇಶ್ವರನನ್ನು ವೇದಗಳು. ಪುರಾಣಗಳು, ಆಗಮಗಳು, ಅಂತೆಯೇ ವಿವಿಧ ಶ್ರುತಿಗಳು, ಶಾಸ್ತ್ರಗಳು ಎಲ್ಲವೂ ಬಗೆಬಗೆಯಾಗಿ ಹೊಗಳುತ್ತವೆ. ಹೀಗೆ ಅನೇಕ ಆಗಮಗಳಲ್ಲಿನ ಭೇದಗಳಿಂದ ಶಿವನು ಹೀಗಿರುವನು ಹಾಗಿರುವನು ಎಂದು ಆತನ ವಿಷಯವನ್ನು ಕುರಿತು ತರ್ಕಮಾಡುವವರೂ ಅನೇಕಬಗೆಯ ಆಗಮಗಳ ಆಚಾರ್ಯರೂ, ಮತಿಭೇದಗಳ ಮೂಲಕ ಮತಭೇದಗಳನ್ನು ಮುಂದುಮಾಡಿಕೊಂಡು ಜಗದೇಕಬಂಧುವಾದ ಆ ಪರಶಿವನನ್ನು ನಿರೂಪಿಸುವವರೂ ಕಡೆಗೆ ಏನೂ ಹೇಳಲಾರದೆ ಮೂಕರಾಗಿಹೋಗುತ್ತಾರೆ.

೩೮. ನಿತ್ಯನೂ, ಶ್ರೇಷ್ಠವಾದ ಆತ್ಮಸ್ವರೂಪನೂ, ದೈವಸ್ವರೂಪನೂ, ಪರಮಾತ್ಮದಿವ್ಯನೂ ಆದ ಪರಶಿವನನ್ನು ಮೂಢಜನರು ಪ್ರಮತ್ತರಾಗಿ ತೊರೆದು ಬಿಡುತ್ತಾರೆ. ಅವರು ಪರಾತ್ಪರರೂಪನಾದ ಆ ಸ್ವಾಮಿಯನ್ನರಿಯದವರೇ ಸರಿ.

ಯೇನೈವ ಸೃಷ್ಟಂ ವಿಧೃತಂ ಚ ಯೇನ
ಯೇನ ಶ್ರಿತಂ ಯೇನ ಕೃತಂ ಸಮಗ್ರಂ ।
ಯಸ್ಯಾಂಶಭೂತಂ ಹಿ ಜಗತ್ಕದಾಚಿ
ದ್ವೇದಾಂತವೇದ್ಯಃ ಪರಮಾತ್ಮಾ ಶಿವಶ್ಚ ॥ ೩೯ ॥

ಆಢ್ಯೋ ವಾಪಿ ದರಿದ್ರೋ ವಾ ಉತ್ತಮೋಹ್ಯಧಮೋಽಪಿ ವಾ ।
ಶಿವಭಕ್ತಿರತೋ ನಿತ್ಯಂ ಶಿವ ಏವ ನ ಸಂಶಯಃ ॥ ೪೦ ॥

ಯೋಽಸೌ ಪರಕೃತಾಂ ಪೂಜಾಂ ಶಿವಸ್ಯೋಪರಿಶೋಭಿತಾಂ ।
ದೃಷ್ಟ್ವಾ ಸಂತೋಷಮಾಯಾತಿ ಪುಣ್ಯಂ ಪ್ರಾಪ್ನೋತಿ ತತ್ಸಮಂ ॥ ೪೧ ॥

ಯೇ ದೀಪಮಾಲಾಂ ಕುರ್ವಂತಿ ಕಾರ್ತಿಕ್ಯಾಂ ಶ್ರದ್ಧಯಾನ್ವಿತಾಃ ।
ಯಾವತ್ಕಾಲಂ ಪ್ರಜ್ವಲಂತಿ ದೀಪಾಸ್ತೇ ಲಿಂಗಮಗ್ರತಃ ।
ತಾವದ್ಯುಗಸಹಸ್ರಾಣಿ ದಾತಾ ಸ್ವರ್ಗೇ ಮಹೀಯತೇ ॥ ೪೨ ॥

ಕೌಸುಂಭತೈಲಸಂಯುಕ್ತಾ ದೀಪಾ ದತ್ತಾಃ ಶಿವಾಲಯೇ ।
ದಾತಾರಸ್ತೇಽಪಿ ಕೈಲಾಸೇ ಮೋದಂತೇ ಶಿವಸನ್ನಿಧೌ ॥ ೪೩ ॥

---

೩೯. ಯಾವನು ಈ ಜಗತ್ತೆಲ್ಲವನ್ನೂ ಸೃಜಿಸಿ ಹೊತ್ತಿರುವನೋ, ಇವೆಲ್ಲವೂ ಯಾರನ್ನು ಆಶ್ರಯಿಸಿ ಯಾವನ ಅಂಶಭೂತವಾಗಿಯೇ ಇರುವುದೋ ಆತನೇ ಉಪನಿಷತ್ತುಗಳಲ್ಲಿ ಪ್ರತಿಪಾದಿತನಾಗಿರುವ ಪರಮಾತ್ಮನಾದ ಪರಶಿವನು.

೪೦. ಶ್ರೀಮಂತನಾಗಲಿ, ದರಿದ್ರನಾಗಲಿ, ಉತ್ತಮನಾಗಲಿ, ಅಧಮನಾಗಲಿ, ಯಾವಾಗಲೂ ಯಾವನು ಶಿವಭಕ್ತಿಭರಿತನಾಗಿರುತ್ತಾನೆಯೋ ಅವನೇ ಶಿವನೆಂಬುದರಲ್ಲಿ ಸಂದೇಹವಿಲ್ಲವು.

೪೧. ಯಾವನು ಶಿವನಮೇಲೆ ಶೋಭಿಸುತ್ತಿರುವ ಇತರರೆಸಗಿದ ಪೂಜೆಯನ್ನು ನೋಡಿ ಆನಂದಗೊಳ್ಳುವನೋ ಅವನು ಆ ಶಿವಪೂಜೆ ಮಾಡಿದವನಿಗೆ ದೊರಕುವ ಪುಣ್ಯಕ್ಕೆ ಸಮಾನವಾದ ಪುಣ್ಯವನ್ನೇ ಪಡೆಯುತ್ತಾನೆ.

೪೨. ಯಾವ ದಾತೃವು ಶ್ರದ್ಧಾಭಕ್ತಿಗಳೊಡಗೂಡಿ ಕಾರ್ತೀಕ ಮಾಸದಲ್ಲಿ ಶಿವಲಿಂಗದ ಮುಂಗಡೆ ದೀಪಮಾಲೆಯನ್ನರ್ಪಿಸುವನೋ ಅವನು, ಆ ದೀಪಮಾಲೆಯು ಎಷ್ಟುರವರೆಗೆ ಬೆಳಗುತ್ತಿರುತ್ತದೆಯೋ ಅಷ್ಟು ಯುಗಗಳವರೆಗೆ ಸ್ವರ್ಗಲೋಕದಲ್ಲಿ ಸುಖವನ್ನನುಭವಿಸುತ್ತಾನೆ.

೪೩. ಶಿವನ ಸನ್ನಿಧಿಯಲ್ಲಿ ಕೌಸುಂಭ (ಹಿಪ್ಪೆ) ತೈಲದೀಪಗಳನ್ನಿಡುತ್ತಾರೆಯೋ ಅವರು ಕೈಲಾಸವನ್ನು ಸೇರಿ ಶಿವನ ಸನ್ನಿಧಿಯಲ್ಲಿ ಆನಂದವನ್ನನುಭವಿಸುತ್ತಾರೆ.

ಅತಸೀತೈಲಸಂಯುಕ್ತಾ ದೀಪಾ ದತ್ತಾಃ ಶಿವಾಲಯೇ ।
ದಾತಾರಸ್ತೇಽಪಿ ಕೈಲಾಸೇ ಮೋದಂತೇ ಶಿವಸನ್ನಿಧೌ ॥ ೪೪ ॥
ಜ್ಞಾನಿನೋಽಪಿ ಹಿ ಜಾಯಂತೇ ದೀಪದಾನ ಫಲೇನ ಹಿ ॥ ೪೫ ॥
ತಿಲತೈಲೇನ ಸಂಯುಕ್ತಾ ದೀಪಾ ದತ್ತಾ ಶಿವಾಲಯೇ ।
ತೇ ಶಿವಂ ಯಾಂತಿ ಸಂಯುಕ್ತಾಃ ಕುಲಾನಾಂ ಚ ಶತೇನ ವೈ ॥ ೪೬ ॥
ಘೃತಾಕ್ತಾ ಯೈಃ ಕೃತಾ ದೀಪಾ ದೀಪಿತಾಶ್ಚ ಶಿವಾಲಯೇ ।
ತೇ ಯಾಂತಿ ಪರಮಂ ಸ್ಥಾನಂ ಕುಲಲಕ್ಷಸಮನ್ವಿತಾಃ ॥ ೪೭ ॥
ಕರ್ಪೂರಾಗರುಧೂಪೈಶ್ಚ ಯೇ ಯಜಂತಿ ಸದಾಶಿವಂ ।
ಆರಾರ್ತಿಕಾಂ ಸ ಕರ್ಪೂರಾಂ ಯೇ ಕುರ್ವಂತಿ ದಿನೇ ದಿನೇ ।
ತೇ ಪ್ರಾಪ್ನುವಂತಿ ಸಾಯುಜ್ಯಂ ನಾತ್ರಕಾರ್ಯಾ ವಿಚಾರಣಾ ॥ ೪೮ ॥
ಏಕಕಾಲಂ ದ್ವಿಕಾಲಂ ವಾ ತ್ರಿಕಾಲಂ ಯೇ ಹ್ಯತಂದ್ರಿತಾಃ ।
ಲಿಂಗಾರ್ಚನಂ ಪ್ರಕುರ್ವಂತಿ ತೇ ರುದ್ರಾ ನಾತ್ರ ಸಂಶಯಃ ॥ ೪೯ ॥
ರುದ್ರಾಕ್ಷಧಾರಣಂ ಯೇ ಚ ಕುರ್ವಂತಿ ಶಿವಪೂಜನೇ ।
ದಾನೇ ತಪಸಿ ತೀರ್ಥೇ ಚ ಪರ್ವಕಾಲೇ ಹ್ಯತಂದ್ರಿತಾಃ ।
ತೇಷಾಂ ಯತ್ಸುಕೃತಂ ಸರ್ವಮನಂತಂ ಭವತಿ ದ್ವಿಜಾಃ ॥ ೫೦ ॥

---

೪೪–೪೮. ಅತಸೀ (ಅಗಸೆ) ತೈಲದ ದೀಪಗಳನ್ನು ಶಿವನ ಸನ್ನಿಧಿಯಲ್ಲಿ ಬೆಳಗಿಸುವವರೂ ಕೈಲಾಸವನ್ನು ಸೇರಿ ಶಿವಸನ್ನಿಧಿಯಲ್ಲಿ ಆನಂದಿಸುತ್ತಾರೆ. ಇಷ್ಟೆಯಲ್ಲದೆ ಅವರು ಆ ದೀಪದಾನದ ಫಲವಾಗಿ ಮುಂದಣ ಜನ್ಮದಲ್ಲಿ ಜ್ಞಾನಿಗಳಾಗಿ ಹುಟ್ಟುತ್ತಾರೆ. ಯಾರಾದರೆ ಎಳ್ಳೆಣ್ಣೆಯ ದೀಪಗಳಿಂದ ಶಿವಾಲಯಗಳನ್ನು ಬೆಳಗಿಸುವರೋ ಅವರು ನೂರು ಕುಲಗಳೊಡಗೂಡಿ ಶಿವಸಾನ್ನಿಧ್ಯವನ್ನು ಸೇರುತ್ತಾರೆ. ಶಿವಾಲಯಗಳಲ್ಲಿ ತುಪ್ಪದ ದೀಪಗಳನ್ನಿಡುವವರು ಲಕ್ಷಕುಲಗಳೊಡನೆ ಪರಮ ಪದವಿಯನ್ನು ಪಡೆಯುತ್ತಾರೆ. ಕರ್ಪೂರ, ಅಗರು, ಧೂಪಗಳಿಂದ ಯಾವಾಗಲೂ ಶಿವನನ್ನು ಪೂಜಿಸುವವರೂ, ಪ್ರತಿನಿತ್ಯವೂ ಶಿವನಿಗೆ ಕರ್ಪೂರದೊಡಗೂಡಿದ ಆರತಿಯನ್ನೇ ಮಾಡುವವರೂ ಸಾಯುಜ್ಯವನ್ನು ಪಡೆಯುವರೆಂಬುದರಲ್ಲಿ ಸಂದೇಹವಿರುವುದಿಲ್ಲ.

೪೯. ಯಾರು ಸ್ಥಿರಮನಸ್ಕರಾಗಿ ಒಂದು ವೇಳೆಯೋ, ಎರಡು ವೇಳೆಯೋ, ಮೂರು ವೇಳೆಯೋ . ಶಿವಲಿಂಗವನ್ನು ಪೂಜಿಸುತ್ತಾರೋ ಅವರು ಸಾಕ್ಷಾತ್ ರುದ್ರರೇ ಎಂಬುದರಲ್ಲಿ ಸಂಶಯವಿಲ್ಲವು.

೫೦. ಅಯ್ಯಾ ದ್ವಿಜರೇ ! ದಾನಮಾಡುವಾಗಲೂ, ತಪವನ್ನೆಸಗುವಾಗಲೂ, ಪರ್ವಕಾಲಗಳಲ್ಲಿಯೂ, ತೀರ್ಥಕ್ಷೇತ್ರಗಲ್ಲಯೂ ಸ್ಥಿರಮನಸ್ಸುಳ್ಳವರಾಗಿ

ರುದ್ರಾಕ್ಷಾ ಯೇ ಶಿವೇನೋಕ್ತಾಸ್ತಚ್ಛೃಣುಧ್ವಂ ದ್ವಿಜೋತ್ತಮಾಃ ।
ಆರಭ್ಯೈಕಮುಖಂ ತಾವದ್ಯಾವದ್ವಕ್ತ್ರಾಣಿ ಶೋಡಶ ।
ಏತೇಷಾಂ ದ್ವೌ ಚ ವಿಜ್ಞೇಯೌ ಶ್ರೇಷ್ಠೌ ತಾರಯಿತುಂ ದ್ವಿಜಾಃ ॥ ೫೧ ॥
ರುದ್ರಾಕ್ಷಾಣಾಂ ಪಂಚಮುಖಾಸ್ತಥಾ ಚೈಕಮುಖಸ್ಮೃತಃ ।
ಯೇ ಧಾರಯಂತ್ಯೇಕಮುಖಂ ರುದ್ರಾಕ್ಷ ಮನಿಶಂನರಾಃ ।
ರುದ್ರಲೋಕಂ ಚ ಗಚ್ಛಂತಿ ಮೋದಂತೇ ರುದ್ರಸನ್ನಿಧೌ ॥ ೫೨ ॥
ಜಪಸ್ತಪಃ ಕ್ರಿಯಾಯೋಗಃ ಸ್ನಾನಂ ದಾನಾರ್ಚನಾದಿಕಂ ।
ಕ್ರಿಯತೇ ಯಚ್ಛುಭಂ ಕರ್ಮ ಹ್ಯನಂತಂ ಚಾಕ್ಷಧಾರಣಾತ್ ॥ ೫೩ ॥
ಶುನಃ ಕಂಠನಿಬದ್ಧೋಽಪಿ ರುದ್ರಾಕ್ಷೋ ಯದಿ ವರ್ತತೇ ।
ಸೋಽಪಿ ಸಂತಾರಿತಸ್ತೇನ ನಾತ್ರ ಕಾರ್ಯಾ ವಿಚಾರಣಾ ॥ ೫೪ ॥
ತಥಾ ರುದ್ರಾಕ್ಷಸಂಬಂಧಾತ್ಪಾಪಮಪಿ ಕ್ಷಯಂ ವ್ರಜೇತ್ ।
ಏವಂ ಜ್ಞಾತ್ವಾ ಶುಭಂ ಕರ್ಮ ಕಾರ್ಯಂ ರುದ್ರಾಕ್ಷಬಂಧನಾತ್ ॥

---

ರುದ್ರಾಕ್ಷ ಮಾಲೆಗಳನ್ನು ಧರಿಸಿ ಶಿವನನ್ನರ್ಚಿಸುವರೋ ಅವರಿಗೆ ಅನಂತವಾದ ಪುಣ್ಯವು ಲಭಿಸುತ್ತದೆ.

೫೧. ಅಯ್ಯಾ ದ್ವಿಜೋತ್ತಮರೇ! ಶಿವನೇ ಅಪ್ಪಣೆಕೊಡಿಸಿರುವ ರುದ್ರಾಕ್ಷಗಳ ವಿಷಯವನ್ನು ನಿಮಗೀಗ ತಿಳಿಸುವೆನು; ಕೇಳಿರಿ. ರುದ್ರಾಕ್ಷ ಗಳಲ್ಲಿ ಒಂದು ಮುಖದಿಂದ ಮೊದಲುಗೊಂಡು ಹದಿನಾರು ಮುಖಗಳವರೆಗೂ ಇರುತ್ತವೆ. ಇವುಗಳಲ್ಲಿ ಭಕ್ತರನ್ನು ಕಡೆಹಾಯಿಸಲು ಪಂಚಮುಖ ಮತ್ತು ಏಕಮುಖ ರುದ್ರಾಕ್ಷಗಳೆರಡೇ ಉತ್ತಮವಾದುವೆಂದು ತಿಳಿಯತಕ್ಕುದು.

೫೨. ಯಾವ ಮಾನವರು ಯಾವಾಗಲೂ ಏಕಮುಖ ರುದ್ರಾಕ್ಷವನ್ನು ಧಾರಣೆಮಾಡಿರುತ್ತಾರೆಯೋ ಅವರು ರುದ್ರಲೋಕವನ್ನು ಸೇರಿ ಶಿವನ ಸನ್ನಿಧಿ ಯಲ್ಲಿ ಆನಂದಿಸುತ್ತಾರೆ.

೫೩. ಅಯ್ಯಾ ಶೌನಕಾದಿಗಳಿರಾ! ಶಿವಸನ್ನಿಧಿಯಲ್ಲಿ ಮಾಡಿದ ಜಪ, ತಪಗಳು, ಯೋಗ, ಸ್ನಾನ, ದಾನ ಮೊದಲಾದ ಪುಣ್ಯ ಕರ್ಮಗಳು ಎಲ್ಲವೂ ರುದ್ರಾಕ್ಷಧಾರಣದಿಂದ ಅನಂತವಾಗುತ್ತವೆ.

೫೪. ಕಡೆಗೆ, ಪರಮ ಪವಿತ್ರವಾದ ಆ ರುದ್ರಾಕ್ಷವು ನಾಯಿಯ ಕೊರಳಿ ನಲ್ಲಿದ್ದರೂ ಅದು ಅದರ ಮಾಹಾತ್ಮ್ಯದಿಂದ ಈ ಭವಸಾಗರವನ್ನು ಕಡೆಹಾಯು ತ್ತದೆಯೆಂಬುದರಲ್ಲಿ ವಿಚಾರವೇ ಮಾಡಬೇಕಾಗಿಲ್ಲ.

೫೫. ಅಂತೆಯೇ ಎಲ್ಲರೂ ರುದ್ರಾಕ್ಷಗಳನ್ನು ಧರಿಸುವುದರಿಂದ ಪಾಪ ಕ್ಷಯವಾಗುತ್ತದೆಯೆಂದು ತಿಳಿದು ಶುಭ ಕರ್ಮಗಳೆಲ್ಲವನ್ನೂ ರುದ್ರಾಕ್ಷಗಳನ್ನು ಧರಿಸಿಯೇ ಮಾಡತಕ್ಕುದು.

ತ್ರಿಪುಂಡ್ರಧಾರಣಂ ಏಷಾಂ ವಿಭೂತ್ಯಾ ಮಂತ್ರಪೂತಯಾ ।
ತೇ ರುದ್ರಲೋಕೇ ರುದ್ರಾಶ್ಚ ಭವಿಷ್ಯಂತಿ ನ ಸಂಶಯಃ ॥ ೫೬ ॥
ಕಪಿಲಾಯಾಶ್ಚ ಸಂಗೃಹ್ಯ ಗೋಮಯಂ ಚಾಂತರಿಕ್ಷಗಂ ।
ಶುಷ್ಕಂ ಕೃತ್ವಾಥ ಸಂದಾಹ್ಯಂ ವಿಭೂತ್ಯರ್ಥಂ ಶಿವಪ್ರಿಯೈಃ ॥ ೫೭ ॥
ವಿಭೂತೀತಿ ಸಮಾಖ್ಯಾತಾ ಸರ್ವಪಾಪಪ್ರಣಾಶಿನೀ ।
ಲಲಾಟೇಽಂಗುಷ್ಠರೇಖಾ ಚ ಆದೌ ಧಾರ್ಯಾ ಪ್ರಯತ್ನತಃ ॥ ೫೮ ॥
ಮಧ್ಯಮಾಂ ವರ್ಜಯಿತ್ವಾ ತು ಅಂಗುಲೀಕದ್ವಯೇನ ಚ ।
ಏವಂ ತ್ರಿರೇಖಸಂಯುಕ್ತೋ ಲಲಾಟೇ ಯಸ್ಯ ದೃಶ್ಯತೇ ।
ಸ ಶೈವಃ ಶಿವವತ್ ಜ್ಞೇಯೋ ದರ್ಶನಾತ್ಪಾಪನಾಶನಂ ॥ ೫೯ ॥
ಜಟಾಧರಾಶ್ಚ ಯೇ ಶೈವಾಃ ಸಪ್ತಪಂಚ ತಥಾ ನವ ।
ಜಟಾ ಯೇ ಸ್ಥಾಪಯಿಷ್ಯಂತಿ ಶೈವೇನ ವಿಧಿನಾ ಯುತಾಃ ॥ ೬೦ ॥
ತೇ ಶಿವಂ ಪ್ರಾಪ್ನುವಂತೀಹ ನಾತ್ರ ಕಾರ್ಯಾ ವಿಚಾರಣಾ ।
ರುದ್ರಾಕ್ಷಧಾರಣಂ ಕಾರ್ಯಂ ಶಿವಭಕ್ತೈರ್ವಿಶೇಷತಃ ॥ ೬೧ ॥

---

೫೬. ಮಂತ್ರ ಪುರಶ್ಚರಣಪೂರ್ವಕವಾಗಿ ಪವಿತ್ರವಾದ ವಿಭೂತಿಯಿಂದ ಯಾರು ತ್ರಿಪುಂಡ್ರವನ್ನು ಹಣೆಯಲ್ಲಿ ಧರಿಸುವರೋ ಅವರು ರುದ್ರಲೋಕದಲ್ಲಿ ಸಾಕ್ಷಾತ್ ರುದ್ರರೇ ಆಗುವರೆಂಬುದರಲ್ಲಿ ಸಂಶಯವಿರುವುದಿಲ್ಲವು.

೫೭–೫೯. ಈ ವಿಭೂತಿಯನ್ನು ಮಾಡುವ ವಿಧಾನವನ್ನು ಕೇಳಿರಿ; ಶಿವ ಭಕ್ತರಾದವರು ಕಪಿಲವರ್ಣದ ಗೋವಿನ ಗೋಮಯವನ್ನು ಅದು ಕೆಳಕ್ಕೆ ಬೀಳುತ್ತಿರುವಾಗಲೇ ಸಂಗ್ರಹಿಸಿ ತಂದು ಒಣಗಿಸಿ, ತರುವಾಯ ಅದನ್ನು ಸುಟ್ಟು ವಿಭೂತಿಯನ್ನಾಗಿಸಿ ತ್ರಿಪುಂಡ್ರಧಾರಣೆಗಾಗಿ ಸಿದ್ಧಪಡಿಸಿಕೊಳ್ಳಬೇಕು. ಈ ರೀತಿ ಸಿದ್ಧವಾದ ವಿಭೂತಿಯು ಎಲ್ಲ ಪಾಪಗಳನ್ನೂ ಕಳೆಯುವಂತಹುದಾಗುತ್ತದೆ. ಮೊದಲು ಈ ವಿಭೂತಿಯಿಂದ ಹಣೆಯಲ್ಲಿ ಅಂಗುಷ್ಠದಿಂದ ರೇಖೆಯನ್ನು ತಾಳಿ ಆ ಬಳಿಕ ನಡುವಣ ಬೆರಳನ್ನು ಬಿಟ್ಟು, ಉಳಿದೆರಡು ಬೆರಳುಗಳಿಂದ ಮತ್ತೆರಡು ರೇಖೆಗಳನ್ನು ಧರಿಸಬೇಕು. ಈ ರೀತಿಯಾಗಿ ಧರಿಸಿದ ಮೂರು ರೇಖೆಗಳೊಡಗೂಡಿದ ವಿಭೂತಿಯು ಯಾವನ ಹಣೆಯಲ್ಲಿ ಕಾಣುವದೋ ಅವನೇ ಶಿವಭಕ್ತನು (ಶೈವನು). ಅವನನ್ನು ಶಿವನನ್ನೆಂತೋ ಅಂತೇ ಭಾವಿಸತಕ್ಕುದು. ಅವನನ್ನು ಸಂದರ್ಶಿಸುವುದರಿಂದ ಪಾಪಗಳೆಲ್ಲವೂ ಕಳೆದುಹೋಗುತ್ತವೆ.

೬೦–೬೧. ಅಯ್ಯಾ ವಿಪ್ರರೇ! ಯಾರಾದರೇ ಶೈವಶಾಸ್ತ್ರಗಳಲ್ಲಿ ಹೇಳಿರುವ ವಿಧಾನದಿಂದ ಏಳು, ಐದು, ಒಂಬತ್ತು ಎಂಬ ಈ ಸಂಖ್ಯೆಯಿಂದ ಜಟೆಗಳನ್ನು ಧರಿಸುತ್ತಾರೆಯೋ ಅವರು ಶಿವನನ್ನೇ ಸೇರುತ್ತಾರೆಯೆಂಬುದರಲ್ಲಿ ಸಂದೇಹ ವಿಲ್ಲವು. ಶಿವಭಕ್ತರು ಮುಖ್ಯವಾಗಿ ರುದ್ರಾಕ್ಷಧಾರಣವನ್ನು ಮಾಡಲೇಬೇಕು.

ಅಲ್ಪೇನ ವಾ ಮಹತ್ತ್ವೇನ ಪೂಜಿತೋ ವಾ ಸದಾಶಿವಃ ।
ಕುಲಕೋಟಿಂ ಸಮುದ್ಧೃತ್ಯ ಶಿವೇನ ಸಹ ಮೋದತೇ ॥ ೬೨ ॥
ತಸ್ಮಾಚ್ಛಿವಾತ್ಪರತರಂ ನಾಸ್ತಿ ಕಿಂಚಿದ್ದ್ವಿಜೋತ್ತಮಾಃ ।
ಯದ್ದೈವಮುಚ್ಯತೇ ಶಾಸ್ತ್ರೇ ತತ್ಸರ್ವಂ ಶಿವಕಾರಣಂ ॥ ೬೩ ॥
ಶಿವೋ ದಾತಾ ಹಿ ಲೋಕಾನಾಂ ಕರ್ತಾ ಚೈವಾನುಮೋದಿತಾ ।
ಶಿವಶಕ್ತ್ಯಾತ್ಮಕಂ ವಿಶ್ವಂ ಜಾನೀಧ್ವಂ ಹಿ ದ್ವಿಜೋತ್ತಮಾಃ ॥ ೬೪ ॥
ಶಿವೇತಿ ದ್ವ್ಯಕ್ಷರಂ ನಾಮ ತ್ರಾಯತೇ ಮಹತೋ ಭಯಾತ್ ।
ತಸ್ಮಾಚ್ಛಿವಶ್ಚಿಂತ್ಯತಾಂ ವೈ ಸ್ಮರ್ಯತಾಂ ಚ ದ್ವಿಜೋತ್ತಮಾಃ ॥ ೬೫ ॥

ಋಷಯ ಊಚುಃ:—

ಸೋಮನಾಥಸ್ಯ ಮಾಹಾತ್ಮ್ಯಂ ಜ್ಞಾತಂ ತಸ್ಯ ಪ್ರಸಾದತಃ ।
ರಾಹೋಃ ಶಿರೋಭಯಾತ್ಸರ್ವೇ ರಕ್ಷಿತಾಃ ಪರಮೇಷ್ಠಿನಾ ॥ ೬೬ ॥
ಸುರಾಶ್ಚೇಂದ್ರಾದಯಶ್ಚಾನ್ಯೇ ತಸ್ಮಿನ್ಯುದ್ಧೇ ಸುದಾರುಣೇ ।
ಅತ ಊರ್ಧ್ವಂ ಸುರಾಃ ಸರ್ವೇ ಕಿಮಕುರ್ವತ ಉಚ್ಯತಾಂ ॥ ೬೭ ॥
ಶಿವಸ್ಯ ಮಹಿಮಾ ಸರ್ವಃ ಶ್ರುತಸ್ತ್ವನ್ಮುಖೋದ್ಗತಃ ।
ಅಥ ಯುದ್ಧಸ್ಯ ವೃತ್ತಾಂತಃ ಕಥ್ಯತಾಂ ಪರಮಾರ್ಥತಃ ॥ ೬೮ ॥

---

೬೨. ಸ್ವಲ್ಪವಾಗಿಯಾಗಲಿ, ವಿಶೇಷವಾಗಿಯಾಗಲಿ ಶಿವನನ್ನು ಪೂಜಿಸಿದುದೇ ಆದರೆ, ಆ ರೀತಿ ಪೂಜೆ ಮಾಡಿದವನು ಕುಲಕೋಟಿಗಳನ್ನುದ್ಧರಿಸಿ ಶಿವನೊಡನೆ ಸಮ ಸಮವಾಗಿ ಆನಂದಿಸುತ್ತಾನೆ.

೬೩. ಆದುದರಿಂದೆಲೈ ದ್ವಿಜೋತ್ತಮರೇ! ಈ ಲೋಕದಲ್ಲಿ ಶಿವನಿಗಿಂತಲೂ ಹೆಚ್ಚಾದ ದೈವವಾವುದೂ ಇರುವುದಿಲ್ಲವು. ಶಾಸ್ತ್ರಗಳಲ್ಲೆಲ್ಲ ಏನೇನು ಹೇಳುತ್ತದೆಯೋ ಅದೆಲ್ಲಕ್ಕೂ ಆ ಪರಶಿವನೇ ಕಾರಣನು.

೬೪-೬೫. ಶಿವನೇ ಎಲ್ಲರಿಗೂ ಎಲ್ಲವನ್ನೂ ಕೊಡುವಾತನು. ಕರ್ತನೂ, ಮಾಡಿದ ಶುಭಕಾರ್ಯಗಳನ್ನು ಅನುಮೋದಿಸುವವನೂ ಅವನೇ! ವಿಶ್ವವೇ ಶಿವಶಕ್ತ್ಯಾತ್ಮಕವಾದುದೆಂದು ತಿಳಿದುಕೊಳ್ಳಿರಿ. 'ಶಿವ' ಎಂಬ ಎರಡಕ್ಷರದ ಹೆಸರು ಮಾನವರನ್ನು ಮಹಾಭಯದಿಂದ ಸಂರಕ್ಷಿಸುತ್ತದೆ. ಆದುದರಿಂದೆಲೈ ದ್ವಿಜೋತ್ತಮರೇ! ನೀವೆಲ್ಲರೂ ಶಿವನನ್ನು ಧ್ಯಾನಿಸಿರಿ. ಆತನನ್ನೇ ಸ್ಮರಿಸಿರಿ.

೬೬-೬೮. ಋಷಿಗಳು ಕೇಳುತ್ತಾರೆ:— ಅಯ್ಯಾ ಸೂತಪುರಾಣಿಕನೇ! ಪರಮೇಶ್ವರನ ಅನುಗ್ರಹದಿಂದ ನಿನ್ನ ಮೂಲಕವಾಗಿ ಸೋಮನಾಥನಾದ ಆತನ ಮಾಹಾತ್ಮ್ಯವನ್ನು ತಿಳಿದುಕೊಂಡೆವು. ರಾಹುವಿನ ಶಿರಸ್ಸುಗಳ ಭಯದಿಂದ ಆ ಪರಮೇಶ್ವರನು ಇಂದ್ರನೇ ಮೊದಲಾದ ದೇವತೆಗಳೆಲ್ಲರನ್ನೂ ಸಂರಕ್ಷಿಸಿದ ಬಗೆಯನ್ನೂ ಕೇಳಿ ತಿಳಿದುದಾಯಿತು ಆ ತರುವಾಯ ದೇವತೆಗಳೇನು ಮಾಡಿದ

ಲೋಮಶ ಉವಾಚ:—

ಯದಾ ಹಿ ದೈತ್ಯೈಶ್ಚ ಪರಾಜಿತಾಃ ಸುರಾಃ
ಶಂಭುಂ ಚ ಸರ್ವೇ ಶರಣಂ ಪ್ರಪನ್ನಾಃ ।
ಶಿವಂ ಪ್ರಣೇಮುಃ ಸಹಸಾ ಸುರೋತ್ತಮಾ
ಯುದ್ಧಾಯ ಸರ್ವೇ ಚ ಮನೋ ದಧುಸ್ತದಾ ॥ ೬೯ ॥
ತಥೈವ ದೈತ್ಯಾ ಅಪಿ ಯುಧ್ಯಮಾನಾ
ಉತ್ಸಾಹಯುಕ್ತಾತಿಬಲಾಶ್ಚ ಸರ್ವೇ ।
ದೇವೈಃ ಸಮೇತಾಶ್ಚ ಪುನಃ ಪುನಶ್ಚ
ಯುದ್ಧಂ ಪ್ರಚಕ್ರುಃ ಪರಮಾಸ್ತ್ರಯುಕ್ತಾಃ ॥ ೭೦ ॥
ಏವಂ ಚ ಸರ್ವೇ ಹ್ಯಸುರಾಃ ಸುರಾಶ್ಚ
ಶಕ್ತ್ಯೃಷ್ಟಿಶೂಲೈಃ ಪರಿಘೈಃ ಪರಶ್ವಧೈಃ ।
ಜಯಾರ್ಥಿನೋಽಮರ್ಷಯುತಾಃ ಪರಸ್ಪರಂ
ಸಿಂಹಾ ಯಥಾ ಹೈಮವತೀಂ ದುರತ್ಯಯಾಃ ।
ನಿಹನ್ಯಮಾನಾ ಹ್ಯಸುರಾಃ ಸುರೈಸ್ತದಾ
ನಾನಾಸ್ತ್ರಯೋಗ್ಯೈಃ ಪರಮೈರ್ನಿಪೇತುಃ ॥ ೭೧ ॥
ಚಕ್ರುಸ್ತೇ ಸಕಲಾಮುರ್ವೀಂ ಮಾಂಸಶೋಣಿತಕರ್ದಮಾಂ ।
ಮಹೀಂ ವೃಕ್ಷಾದ್ರಿಸಂಯುಕ್ತಾಂ ಸಸಾಗರವನಾಂಕುರಾಂ ॥ ೭೨ ॥

---

ರೆಂಬುದನ್ನು ಹೇಳು. ಎಲೈ ಮುನಿಯೇ! ನಿನ್ನಿಂದ ಶಿವನ ಮಹಿಮೆಯೆಲ್ಲವನ್ನೂ ಕೇಳಿ ಧನ್ಯರಾದೆವು. ಇನ್ನು ಆ ದೇವಾಸುರ ಯುದ್ಧದ ಸುದ್ದಿಯನ್ನಿದ್ದುದನ್ನಿದ್ದಂತೆಯೇ ಹೇಳುವವನಾಗು.''

೬೯–೭೦. ಲೋಮಶನು ಹೇಳುತ್ತಾನೆ:—ಅಯ್ಯಾ ಶೌನಕಾದಿಗಳಿರಾ! ಯಾವಾಗ ದೇವತೆಗಳೆಲ್ಲರೂ ದೈತ್ಯರಿಂದ ಪರಾಜಯ ಹೊಂದಿದರೋ ಆಗ ಅವರು ಪರಮೇಶ್ವರನನ್ನು ಶರಣುಹೊಕ್ಕು ಆತನನ್ನು ನಮಸ್ಕರಿಸಿ, ಆಮೇಲೆ ಶ್ರೇಷ್ಠವಾದ ಅಸ್ತ್ರಶಸ್ತ್ರಗಳೊಡಗೂಡಿ ಒಟ್ಟಿಗೆ ಸೇರಿ ಮತ್ತೆ ಆ ದಾನವರೊಡನೆ ಕಾಳೆಗಕ್ಕೆ ಮನಸ್ಸು ಮಾಡಿದರು.

೭೧. ಹೀಗೆ ಆ ದೇವದಾನವರು ಶಕ್ತಿ, ಋಷ್ಟಿ, ಶೂಲ, ಪರಿಘ, ಪರಶ್ವಧ ಮೊದಲಾದ ಆಯುಧಗಳೊಡಗೂಡಿ ಮಹಾ ಬಲಿಷ್ಠರಾಗಿ, ಮಾರಲಸದಳವಾದ ಸಿಂಹಗಳು ಹೈಮವತಿಯನ್ನೆಂತೋ ಅಂತು ರೋಷಗೊಂಡು ಒಬ್ಬರನ್ನೊಬ್ಬರು ಗೆಲ್ಲಬೇಕೆಂಬ ಹುರುಡಿನಿಂದ ಕಾಳೆಗ ಮಾಡಿದರು. ಆಗ ಅಸುರರು ಸುರರ ಬಗೆ ಬಗೆಯ ಅಸ್ತ್ರಶಸ್ತ್ರಗಳ ಹೊಡೆತಗಳಿಂದ ಮುಡಿದುರುಳಿದರು.

೭೨. ಆಗಲಾ ದೇವತೆಗಳು ಮರಗಳು, ಬೆಟ್ಟಗಳು, ಸಮುದ್ರಗಳು,

ಶಿರಾಂಸಿ ಚ ಕಬಂಧಾನಿ ಕವಚಾನಿ ಮಹಾಂತಿ ಚ ।
ಧ್ವಜಾ ರಥಾಃ ಪತಾಕಾಶ್ಚ ಗಜವಾಜಿಶಿರಾಂಸಿ ಚ ॥ ೭೩ ॥
ವಹಂತ್ಯಶ್ಚಾಪಗಾಹ್ಯಾಸನ್ನದ್ಯೋ ಭೀರುಭಯಾವಹಾಃ ।
ಅಗಾಧಾಃ ಶೋಣಿತೋದಾಶ್ಚ ತರಂತೋ ಬ್ರಹ್ಮರಾಕ್ಷಸಾಃ ।
ತಾರಯಂತಿ ಪರಾನ್ಭೂತ ಪ್ರೇತ ಪ್ರಮಥರಾಕ್ಷಸಾನ್ ॥ ೭೪ ॥
ಶಾಕಿನೀ ಡಾಕಿನೀ ಸಂಘಾ ಯಕ್ಷಿಣ್ಯೋಽಥ ಸಹಸ್ರಶಃ ।
ನಾನಾಕೇಲಿಷು ಸಂಯುಕ್ತಾಃ ಪರಸ್ಪರ ಮುದಾನ್ವಿತಾಃ ॥ ೭೫ ॥
ಏವಂ ಚ ಕ್ರೀಡಮಾನಾಸ್ತೇ ಭೂತಪ್ರಮಥರಾಕ್ಷಸಾಃ ।
ರಣೇ ತಸ್ಮಿನ್ಮಹಾರೌದ್ರೇ ದೇವಾಸುರಸಮಾಗಮೇ ॥ ೭೬ ॥
ಬಲಿನಾಸಹ ದೇವೇಂದ್ರೋ ಯುಯುಧೇಽದ್ಭುತವಿಕ್ರಮಃ ।
ಶಕ್ತ್ಯಾ ಜಘಾನ ದೇವೇಂದ್ರಂ ವೈರೋಚನಿರಮರ್ಷಣಃ ॥ ೭೭ ॥
ತಾಂ ಶಕ್ತಿಂ ವಂಚಯಾಮಾಸ ಮಹೇಂದ್ರೋ ಲಘುವಿಕ್ರಮಃ ।
ಜಘಾನ ಸ ಬಲಿಂ ಯತ್ನಾದ್ವೈತ್ಯೇಂದ್ರಂ ಪರಮೇಣ ಹಿ ॥ ೭೮ ॥

---

ಕಾಡುಗಳು ಮೊದಲಾದವುಗಳೊಡಗೂಡಿದ ಈ ಅಖಂಡ ಭೂಮಂಡಲವೆಲ್ಲವನ್ನೂ ರಕ್ತಮಾಂಸಗಳ ಕೆಸರಿನಿಂದ ತುಂಬಿಹೋಗುವಂತೆ ಮಾಡಿದರು.

೭೩–೭೫. ತಲೆಗಳು, ಕಬಂಧಗಳು, ದೊಡ್ಡ ದೊಡ್ಡ ಕವಚಗಳು, ಧ್ವಜಗಳು, ರಥಗಳು, ಪತಾಕೆಗಳು, ಆನೆ ಕುದುರೆಗಳ ತಲೆಗಳು ಮುಂತಾದುವನ್ನು ಹೊತ್ತು ಹರಿದುಬರುತ್ತಲಿದ್ದ ಆ ಶೋಣಿತ ನದಿಗಳು ಭೀರುಗಳಾದವರಿಗೆ ಹೆದರಿಕೆಯನ್ನುಂಟುಮಾಡುವವುಗಳಾಗಿದ್ದುವು. ಅಗಾಧವಾದ ಆ ಶೋಣಿತ ನದಿಗಳಲ್ಲಿ ಬ್ರಹ್ಮರಾಕ್ಷಸರೂ, ಬಹು ಸಂಖ್ಯೆಯ ಭೂತ ಪ್ರೇತ ಪ್ರಮಥ ರಾಕ್ಷಸರೂ, ಸಂತೋಷದಿಂದ ತಾವೇತಾವಾಗಿ ಈಜಾಡುತ್ತಿದ್ದರು. ಶಾಕಿನಿ, ಡಾಕಿನಿಯರ ಸಮೂಹಗಳೂ, ಸಾವಿರಾರು ಮಂದಿ ಯಕ್ಷಿಣೀ ದೇವತೆಗಳೂ ಪರಸ್ಪರ ಸಂತೋಷದಿಂದ ಆ ಕಾಳೆಗದ ನೆಲದಲ್ಲಿ ಬಗೆಬಗೆಯ ಆಟಗಳನ್ನಾಡತೊಡಗಿದರು.

೭೬. ಹೀಗೆ ಆ ಭೂತ ಪ್ರಮಥ ರಾಕ್ಷಸರೆಲ್ಲರೂ ಬಹು ಭಯಂಕರವಾದ ಆ ದೇವಾಸುರ ಯುದ್ಧದಲ್ಲಿ ಯಾವೊಂದು ಅಡ್ಡಿ ಆತಂಕವೂ ಇಲ್ಲದೆ ಆಟವಾಡುತ್ತಿದ್ದರು.

೭೭–೭೯. ಆಗ ಮಹಾ ಪರಾಕ್ರಮಿಯಾದ ದೇವೇಂದ್ರನು ಬಲಿಯೊಡನೆ ಯುದ್ಧಮಾಡಿದನು. ಆ ಯುದ್ಧದಲ್ಲಿ ವಿರೋಚನನ ಮಗನಾದ ಆ ಬಲಿದಾನವನು ಬಹಳವಾಗಿ ಕೆರಳಿ ಶಕ್ತ್ಯಾಯುಧದಿಂದ ದೇವೇಂದ್ರನನ್ನು ಹೊಡೆದನು. ಶೀಘ್ರಪರಾಕ್ರಮಿಯಾದ ದೇವೇಂದ್ರನಾದರೋ ಆ ಶಕ್ತ್ಯಾಯುಧದ ಪೆಟ್ಟನ್ನು

ವಜ್ರೇಣ ಶತಧಾರೇಣ ಬಾಹೂಂಶ್ಚಿಚ್ಛೇದ ವಿಕ್ರಮೀ ।
ಗತಾಸುರಪತದ್ಭೂಮೌ ವಿಮಾನಾತ್ಸೂರ್ಯಸನ್ನಿಭಾತ್ ॥ ೭೯ ॥
ಪತಿತಂ ಚ ಬಲಿಂ ದೃಷ್ಟ್ವಾ ವೃಷಪರ್ವಾ ರುಷಾನ್ವಿತಃ ।
ವವರ್ಷ ಶರಧಾರಾಭಿಃ ಪಯೋದ ಇವ ಪರ್ವತಂ ॥ ೮೦ ॥
ಮಹೇಂದ್ರಂ ಸ ಗಜಂ ಚೈವ ಸಹಮಾನಂ ಶಿತಾಂಚ್ಛರಾನ್ ।
ತದಾ ಯುದ್ಧಮಭೂದ್ಘೋರಂ ಮಹೇಂದ್ರವೃಷಪರ್ವಣೋಃ ॥ ೮೧ ॥
ನಿಪಾತ್ಯ ವೃಷಪರ್ವಾಣಮಿಂದ್ರಃ ಪರಬಲಾರ್ದನಃ ॥ ೮೨ ॥
ತತೋ ವಜ್ರೇಣ ಮಹತಾ ದಾನವಾನವಧೀದ್ರಣೇ ।
ಶಿರಸಿ ಚ್ಛೇದಿತಾಃ ಕೇಚಿತ್ಕೇಚಿತ್ಕಂಧರತೋ ಹತಾಃ ॥ ೮೩ ॥
ವಿಹ್ವಲಾಶ್ಚ ಕೃತಾಃ ಕೇಚಿದಿಂದ್ರೇಣ ಕುಪಿತೇನ ಚ ।
ತಥಾ ಯಮೇನ ನಿಹತಾ ವಾಯುನಾ ವರುಣೇನ ಚ ॥ ೮೪ ॥
ಕುಬೇರೇಣ ಹತಾಶ್ಚಾನ್ಯೇ ನೈರ್ಋತೇನ ತಥಾಪರೇ ।
ಅಗ್ನಿನಾ ನಿಹತಾಃ ಕೇಚಿದೀಶೇನೈವ ವಿದಾರಿತಾಃ ॥ ೮೫ ॥

---

ಉಪಾಯವಾಗಿ ತಪ್ಪಿಸಿಕೊಂಡು ತನ್ನ ಶಕ್ತಿಯನ್ನೆಲ್ಲ ವಿನಿಯೋಗಿಸಿ ಆ ದೈತ್ಯೇಂದ್ರನನ್ನು ನೂರಲಗುಗಳುಳ್ಳ ವಜ್ರಾಯುಧದಿಂದ ಹೊಡೆದು ಅವನ ತೋಳನ್ನು ಕತ್ತರಿಸಿ ಕೆಡವಿದನು. ಆಗ ಬಲಿದಾನವನು ಸೂರ್ಯಸಮಾನವಾದ ತನ್ನ ವಿಮಾನದಿಂದ ಕೆಳಕ್ಕುರುಳಿಹೋದನು.

೮೦. ಈ ರೀತಿ ಬಲಿಯು ಬಿದ್ದುದನ್ನು ಕಂಡು, ವೃಷಪರ್ವನು ಬಹಳವಾಗಿ ರೋಷಗೊಂಡು ಐರಾವತವನ್ನೇರಿ ಕೂರಂಬುಗಳ ಹೊಡೆತಗಳನ್ನೂ ಸಹಿಸುತ್ತಿರುವ ಆ ದೇವೇಂದ್ರನ ಮೇಲೆ ಪರ್ವತದ ಮೇಲೆ ಮೇಘವು ಹೇಗೋ ಹಾಗೆ ಬಾಣದ ಮಳೆಯನ್ನು ಸುರಿಸಿದನು.

೮೧–೮೫. ಆ ಸಮಯದಲ್ಲಿ ಮಹೇಂದ್ರನಿಗೂ ಆ ವೃಷಪರ್ವನಿಗೂ ಭಯಂಕರವಾದ ಕಾಳೆಗವಾಯಿತು. ಆಗ ಶತ್ರುಗಳ ಬಲವನ್ನಡಗಿಸುವ ಆ ಮಹೇಂದ್ರನು ಮಹತ್ತರವಾದ ತನ್ನ ವಜ್ರಾಯುಧದಿಂದ ಆ ವೃಷಪರ್ವನನ್ನು ಹೊಡೆದು ಬೀಳಿಸಿ ಅಲ್ಲಿದ್ದ ಎಲ್ಲ ದಾನವರನ್ನೂ ಅದೇ ವಜ್ರಾಯುಧದಿಂದಲೇ ಹೊಡೆದು ಕೊಂದನು. ಆ ದಾನವರಲ್ಲಿ ಕೆಲವರು ಆ ವಜ್ರಾಯುಧದ ಪೆಟ್ಟಿನಿಂದ ಸೀಳಿಯೂ, ಕೆಲವರು ತಲೆಗಳು ಕತ್ತರಿಸಿಯೂ ಮಡಿದುರುಳಿಹೋದರು. ಬಹಳವಾಗಿ ಕನಲಿದ ಆ ದೇವರಾಜನು ಕೆಲವುಂದಿ ದಾನವರನ್ನು ಹೊಡೆದು ತತ್ತಳಿಸಿಹೋಗುವಂತೆ ಮಾಡಿದನು. ಅಂತೆಯೇ ಯಮನೂ, ವಾಯುವೂ, ವರುಣನೂ, ಕುಬೇರನೂ, ನಿರ್ಋತಿಯೂ, ಅಗ್ನಿಯೂ ಕೆಲಕೆಲವುಂದಿ ದಾನವರನ್ನು ಹೊಡೆದು ಕೆಡವಿದರು. ಕೆಲವರನ್ನಂತೂ ಶಿವನೇ ಸಿಗಿದುಹಾಕಿದನು.

ಏವಂ ತದಾ ತೈರ್ನಿಹತಾ ಬಲೀಯಸೋ
ಮಹಾಸುರಾ ವಿಕ್ರಮಶಾಲಿನಶ್ಚ ।
ಸುರೈಸ್ತು ಸರ್ವೈಃ ಸಹ ಲೋಕಪಾಲೈಃ
ಶಿವಪ್ರಸಾದಾಭಿಹತಸ್ತದಾನೀಂ ॥ ೮೬ ॥
ತದಾ ಮಹಾ ದೈತ್ಯವರೋ ದುರಾತ್ಮಾ
ಸ ಕಾಲನೇಮಿಃ ಪರಮಾಸ್ತ್ರಯುಕ್ತಃ ।
ಯಯೌ ತದಾನೀಂ ಸುರಸತ್ತಮಾಂಸ್ತಾನ್
ಹಂತುಂ ಸದಾ ಕ್ರೂರಮತಿಃ ಸ ಏಕಃ ॥ ೮೭ ॥
ಸಿಂಹಾರೂಢೋ ದಂಶಿತಶ್ಚ ತ್ರಿಶೂಲೇನ ಹಿ ಸಂಯುತಃ ।
ದೈತ್ಯಾನಾಮರ್ಬುದೇನೈವ ಸಿಂಹಾರೂಢೇನ ಸಂವೃತಃ ॥ ೮೮ ॥
ತೇ ಸಿಂಹಾಃ ದಂಶಿತಾಃ ಸರ್ವೇ ಮಹಾಬಲಪರಾಕ್ರಮಾಃ ।
ತೇಷು ಸಿಂಹೇಷು ಚಾರೂಢಾ ಮಹಾದೈತ್ಯಾಶ್ಚ ತತ್ಸಮಾಃ ॥ ೮೯ ॥
ಆಯಾಂತೀಂ ದೈತ್ಯಸೇನಾಂ ತಾಂ ಸರ್ವಾಂ ಸಿಂಹವಿಭೂಷಿತಾಂ ।
ಕಾಲನೇಮಿಯುತಾಂ ದೃಷ್ಟ್ವಾ ದೇವಾ ಇಂದ್ರಪುರೋಗಮಾಃ ।
ಭಯಮಾಜಗ್ಮುರತುಲಂ ತದಾ ಧ್ಯಾನಪರಾ ಭವನ್ ॥ ೯೦ ॥

---

೮೬. ಅಯ್ಯಾ ವಿಪ್ರರೇ! ಹೀಗೆ ಆ ದಾನವರೆಲ್ಲರೂ ಶಿವನ ಅನುಗ್ರಹವನ್ನು ಪಡೆದ ಆ ದೇವತೆಗಳಿಂದಲೂ, ಇಂದ್ರನಾದಿಯಾದ ಲೋಕಪಾಲಕರಿಂದಲೂ, ಮಹಾ ಬಲಿಷ್ಠರೂ, ಮಹಾ ಪರಾಕ್ರಮಶಾಲಿಗಳಾಗಿದ್ದರೂ ಘಾತಿತರಾಗಿ ಮಡಿದುಹೋದರು.

೮೭–೮೮. ತರುವಾಯ ಮಹಾ ದೈತ್ಯರಲ್ಲಿ ಶ್ರೇಷ್ಠನೂ, ದುರಾತ್ಮನೂ ಆದ ಕಾಲನೇಮಿಯೆಂಬ ಒಬ್ಬಾನೊಬ್ಬ ದಾನವನು ಉತ್ತಮಾಸ್ತ್ರಗಳೊಡಗೂಡಿದವನಾಗಿ ಆ ದೇವತೆಗಳೆಲ್ಲರನ್ನೂ ಕೊಲ್ಲಬೇಕೆಂಬ ಕ್ರೂರಬುದ್ಧಿಯಿಂದಲೇ ಕಾಳೆಗಕ್ಕೆ ನುಗ್ಗಿಬಂದನು. ಅವನು ಸಿಂಹವನ್ನೇರಿ ತ್ರಿಶೂಲವನ್ನು ಕೈಯಲ್ಲಿ ಹಿಡಿದು ಬಹು ಭಯಂಕರನಾಗಿದ್ದನು. ಸಿಂಹಗಳನ್ನೇರಿದ ಹತ್ತು ಕೋಟಿ ಮಂದಿ ದಾನವರು ಅವನನ್ನು ಹಿಂಬಾಲಿಸಿ ಬಂದರು.

೮೯. ಆ ದಾನವರೇರಿದ್ದ ಸಿಂಹಗಳಾದರೋ ಮಹಾ ಬಲಪರಾಕ್ರಮಗಳುಳ್ಳವಾಗಿ ಬಹು ಭಯಂಕರವಾಗಿದ್ದುವು. ಅವುಗಳನ್ನೇರಿದ್ದ ಆ ಮಹಾ ದಾನವರೂ ಸಹ ಅವುಗಳಂತೆಯೇ ಪರಾಕ್ರಮಿಗಳೂ ಭಯಂಕರರೂ ಆಗಿದ್ದರು.

೯೦–೯೧. ಈ ರೀತಿ ಕಾಲನೇಮಿಯನ್ನು ಮುಂದಿಟ್ಟುಕೊಂಡು ಸಿಂಹಗಳೊಡಗೂಡಿಬರುತ್ತಿರುವ ಆ ದಾನವರ ದೊಡ್ಡ ಸೈನ್ಯವನ್ನು ಕಂಡು ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ಬಹಳವಾಗಿ ಭಯಗೊಂಡು ಏನುಮಾಡುವುದಕ್ಕೂ

**ಕಿಂ ಕುರ್ಮೋಽದ್ಯ ವಯಂ ಸರ್ವೇ ಕಥಂ ಜೇಷ್ಯಾಮ ಚಾದ್ಭುತಂ ।**
**ಏತಾದೃಶಮಸಂಖ್ಯಾಕಮನೀಕಂ ಸಿಂಹಸಂವೃತಮ್ ॥ ೯೧ ॥**
**ಏವಂ ವಿಚಿಂತ್ಯಮಾನಾಸ್ತೇ ಹ್ಯಾಗತಸ್ತತ್ರ ನಾರದಃ ।**
**ನಾರದೇನ ಚ ತತ್ಸರ್ವಂ ಪುರಾವೃತ್ತಂ ಮಹತ್ತರಮ್ ॥ ೯೨ ॥**
**ಕಥಿತಂ ಚ ಮಹೇಂದ್ರಾಯ ಕಾಲನೇಮೇಸ್ತಪೋಬಲಮ್ ।**
**ಅಜೇಯತ್ವಂ ಚ ಸಂಗ್ರಾಮೇ ವರದಾನಬಲೇನ ತು ॥ ೯೩ ॥**
**ವಿಷ್ಣುಂ ವಿನಾ ವಯಂ ದೇವಾ ಅಶಕ್ತಾ ರಣಮಂಡಲೇ ।**
**ಜೇತುಂ ಚ ಸ ತತೋ ವಿಷ್ಣುಃ ಸ್ಮರ್ಯತಾಂ ಪರಮೇಶ್ವರಃ ॥ ೯೪ ॥**
**ತಮಾಲನೀಲೋ ವರದಃ ಸರ್ವೈರ್ವಿಜಯಕಾಂಕ್ಷಿಭಿಃ ॥ ೯೫ ॥**

**ದೇವಾ ಊಚುಃ—**

**ನಮಸ್ತುಭ್ಯಂ ಭಗವತೇ ನಮಸ್ತೇ ವಿಶ್ವಮಂಗಲ ।**
**ಶ್ರೀನಿವಾಸ ನಮಸ್ತುಭ್ಯಂ ಶ್ರೀಪತೇ ತೇ ನಮೋ ನಮಃ ॥ ೯೬ ॥**

---

ತೋರದೆ, "ಅಕ್ಕಟಾ! ನಾವು ಸಿಂಹಗಳೊಡಗೂಡಿ ಬರುತ್ತಿರುವ ಅಸಂಖ್ಯಾಕ ವಾದ ಈ ದಾನವರ ಭಯಂಕರ ಸೇನೆಯನ್ನು ಗೆಲ್ಲುವುದೆಂತು? ಈಗ ನಾವು ಮಾಡುವುದೇನು" ಎಂದು ಮುಂತಾಗಿ ಯೋಚಿಸತೊಡಗಿದರು.

೯೨. ಅವರು ಈ ರೀತಿ ಆಲೋಚಿಸುತ್ತಿರುವಂತೆಯೇ ದೇವರ್ಷಿಯಾದ ನಾರದನಲ್ಲಿಗೈತಂದನು. ಆತನು ಆ ಕಾಲನೇಮಿಯ ಮಹತ್ತರವಾದ ಪೂರ್ವ ವೃತ್ತಾಂತವೆಲ್ಲವನ್ನೂ ಇಂದ್ರನಿಗೆ ತಿಳಿಸಿದನು.

೯೩. ಆ ದಾನವನ ತಪೋಬಲ, ಸಂಗ್ರಾಮದಲ್ಲಿ ಅವನ ಅಜೇಯತ್ವ, ಅವನಿಗೆ ದೊರೆತ ವರ, ಅದರಿಂದ ಅವನಿಗುಂಟಾದ ಬಲ ಮುಂತಾದ ಎಲ್ಲ ಸುದ್ದಿಯನ್ನೂ ತಿಳಿಸಿದ ಬಳಿಕ ಆ ಮಹರ್ಷಿಯು, "ಅಯ್ಯಾ ದೇವತೆಗಳಿರಾ! ನಾವು ವಿಷ್ಣುವನ್ನುಳಿದು ರಣರಂಗದಲ್ಲಿ ಈ ದಾನವನನ್ನು ಜಯಿಸಲು ಅಶಕ್ತ ರಾಗಿರುವೆವು. ಆದುದರಿಂದ ಇವನನ್ನು ಗೆಲ್ಲಬಯಸಿರುವ ನೀವು ವರದನೂ, ತಮಾಲನೀಲನೂ, ಪರಮೇಶ್ವರನೂ ಆದ ಆ ಮಹಾವಿಷ್ಣುವನ್ನು ಸ್ಮರಿಸಿರಿ" ಎಂದು ಹೇಳಿದನು.

೯೪–೯೫. ಈ ರೀತಿ ನುಡಿದ ನಾರದಮುನಿಯ ಮಾತನ್ನು ಕೇಳಿ ಆ ದೇವತೆಗಳೆಲ್ಲರೂ ಸಂಕಲ್ಪಮಾತ್ರದಿಂದಲೇ ಶತ್ರುಬಲವನ್ನು ಮರ್ದನಮಾಡುವವನಾದ ಶ್ರೀ ಮಹಾವಿಷ್ಣುವನ್ನು ಸ್ಮರಿಸಿ, ಪರಮಾತ್ಮನಾದ ಆ ಸ್ವಾಮಿಯನ್ನು ಕುರಿತು ಹೀಗೆ ಸ್ತುತಿಸಿದರು.

೯೬–೯೭. ದೇವತೆಗಳು ಹೇಳುತ್ತಾರೆ:— "ಪ್ರಪಂಚಕ್ಕೇ ಮಂಗಳವನ್ನುಂಟುಮಾಡುವವನೂ, ಷಡ್ಗುಣೈಶ್ವರ್ಯಸಂಪನ್ನನೂ ಆದ ಓ ಸ್ವಾಮಿಯೇ!

ಅದ್ಯಾಸ್ಮಾನ್ ಭಯಭೀತಾಂ ಸ್ತ್ವಂ ಕಾಲನೇಮಿಭಯಾರ್ದಿತಾನ್ ।
ತ್ರಾತುಮರ್ಹಸಿ ದೈತ್ಯಾಚ್ಚ ದೇವಾನಾಮಭಯಪ್ರದ ॥ ೯೭ ॥
ಏವಂ ಧ್ಯಾತಃ ಸಂಸ್ಮೃತಶ್ಚ ಪ್ರಾದುರ್ಭೂತೋ ಹರಿಸ್ತದಾ ।
ನೀಲೋ ಗರುಡಮಾರುಹ್ಯ ಜಗತಾಮಭಯಪ್ರದಃ ॥ ೯೮ ॥
ಚಕ್ರಪಾಣಿಸ್ತದಾಯಾತೋ ದೇವಾನಾಂ ವಿಜಯಾಯ ಚ ।
ಗಗನಸ್ಥಂ ಮಹಾವಿಷ್ಣುಂ ಗರುಡೋಪರಿ ಸಂಸ್ಥಿತಂ ।
ಶ್ರೀವಾಸಮೇನಂ ದುರ್ಧರ್ಷಂ ಯೋದ್ಧುಕಾಮಂ ದದರ್ಶಿರೇ ॥ ೯೯ ॥

ತಥಾ ದೃಷ್ಟ್ವಾ ಕಾಲನೇಮಿಸ್ತದಾನೀಂ
ಪ್ರಹಸ್ಯಮಾನೋಽತಿರುಷಾ ಬಲಾನ್ವಿತಃ ।
ಕಸ್ತ್ವಂ ಮಹಾಭಾಗ ವರೇಣ್ಯರೂಪಃ
ಶ್ಯಾಮೋ ಯುವಾ ವಾರಣಮತ್ತವಿಕ್ರಮಃ ॥
ಕರೇ ಗೃಹೀತಂ ನಿಶಿತಂ ಮಹಾಪ್ರಭಂ
ಚಕ್ರಂಚ ಕಸ್ಮಾತ್ಕಥಯಸ್ವ ಮೇ ಪ್ರಭೋ ॥ ೧೦೦ ॥

---

ನಿನಗೆ ನಮಸ್ಕಾರವು!! ಎಲೈ ಶ್ರೀನಿವಾಸನೇ! ಶ್ರೀಪತಿಯೇ! ನಿನಗೆ ಅನೇಕ ನಮಸ್ಕಾರಗಳು!! ದೇವತೆಗಳಿಗೂ, ದೈತ್ಯರಿಗೂ ಅಭಯವನ್ನೀಯುವ ಓ ಪ್ರಭುವೇ! ಈಗ ಕಾಲನೇಮಿಯ ಭಯದಿಂದ ತತ್ತಳಿಸಿಹೋಗಿರುವ ನಮ್ಮನ್ನು ಕಾಪಾಡು."

೯೮. ದೇವತೆಗಳೆಲ್ಲರೂ ಈ ರೀತಿ ಸ್ತುತಿಸಿ ಧ್ಯಾನಿಸಿ ಸ್ಮರಿಸಿದೊಡನೆ ಜಗತ್ತಿಗೇ ಅಭಯಪ್ರದನೂ, ನೀಲವರ್ಣನೂ ಆದ ಆ ಮಹಾವಿಷ್ಣುವು ಗರುಡಾರೂಢನಾಗಿ ಅಲ್ಲಿಯೇ ಆವಿರ್ಭವಿಸಿದನು.

೯೯. ಈ ಪ್ರಕಾರವಾಗಿ ಆವಿರ್ಭವಿಸಿದ ಬಳಿಕ, ಚಕ್ರಪಾಣಿಯೂ, ಲಕ್ಷ್ಮೀರಮಣನೂ ಆದ ಆ ಪ್ರಭುವು ಗರುಡವಾಹನನಾಗಿಯೇ ಗಗನದಲ್ಲಿ ನಿಂತು ದೇವತೆಗಳ ವಿಜಯಕ್ಕಾಗಿ ಆ ದಾನವರೊಡನೆ ಯುದ್ಧಮಾಡಬಯಸಿದನು. ಅದನ್ನು ಕಂಡು ದೇವತೆಗಳೆಲ್ಲರೂ ಹರ್ಷಗೊಂಡರು.

೧೦೦. ಆಗ ಮಹಾಬಲಿಷ್ಠನಾದ ಕಾಲನೇಮಿಯಾದರೋ ಆ ಸ್ವಾಮಿಯನ್ನು ಕಂಡು ನಸುನಗುತ್ತ, ಬಳಿಕ ಬಹಳವಾಗಿ ರೋಷಗೊಂಡು, "ಎಲೈ ವಿಭುವೇ! ಶ್ರೇಷ್ಠವಾದ ರೂಪವುಳ್ಳವನೂ, ಮನೋಹರನೂ, ನೀಲವರ್ಣನೂ, ಯುವಕನೂ, ಮದದಾನೆಯಂತೆ ಪರಾಕ್ರಮವುಳ್ಳವನೂ ಆದ ನೀನಾರು? ಎಲೈ ಪ್ರಭುವೇ! ನೀನು ಆ ನಿನ್ನ ಕೈಯಲ್ಲಿ ಬಹು ಚೂಪಾದ ಚಕ್ರವನ್ನು ಹಿಡಿದಿರುವೆಯೇಕೆಂಬುದನ್ನು ಹೇಳು" ಎಂದನು.

ಶ್ರೀ ಭಗವಾನುವಾಚ :—

ಯುದ್ಧಾರ್ಥಮಿಹ ಚಾಯಾತೋ ದೇವಾನಾಂ ಕಾರ್ಯಸಿದ್ಧಯೇ ।
ತ್ವಂ ಸ್ಥಿರೋಽಭವ ರೇ ಮಂದ ದಹಾಮ್ಯದ್ಯ ನ ಸಂಶಯಃ ॥ ೧೦೧ ॥
ಶ್ರುತ್ವಾ ಭಗವತೋ ವಾಕ್ಯಂ ಕಾಲನೇಮಿಃ ಪ್ರತಾಪವಾನ್ ।
ಉವಾಚ ಋುಷಿತೋ ಭೂತ್ವಾ ಭಗವಂತಮಧೋಕ್ಷಜಂ ॥ ೧೦೨ ॥
ಮೂಲಭೂತೋ ಹಿ ದೇವಾನಾಂ ಭಗವನ್ಯುದ್ಧದುರ್ಮದಃ ।
ಯುದ್ಧಂ ಕುರು ಮಯಾ ಸಾರ್ಧಂ ಯದಿ ಶೂರೋಽಸಿ ಸಂಪ್ರತಿ ॥ ೧೦೩ ॥
ಪ್ರಹಸ್ಯ ಭಗವಾನ್ವಿಷ್ಣುರುವಾಚೇದಂ ಮಹಾಪ್ರಭುಃ ।
ಗಗನಸ್ಥೋ ಭವ ತ್ವಂ ಹಿ ಮಹೀಸ್ಥೋಽಹಂ ಭವಾಮಿ ವೈ ॥ ೧೦೪ ॥
ಅಪ್ರಶಸ್ತಂ ಚ ವಿಷಮಂ ಯುದ್ಧಂ ನೈವ ಯಥಾ ಭವೇತ್ ।
ತಥಾ ಕುರು ಮಹಾಬಾಹೋ ಗಗನೇ ವಾ ಮಹೀತಲೇ ॥ ೧೦೫ ॥

ತಥೇತಿ ಮತ್ವಾ ಸ ಮಹಾನುಭಾವೋ
ದೈತ್ಯೈಃ ಸಮೇತೋಽರ್ಬುದಸಂಖ್ಯಕೈಶ್ಚ ।
ಸಿಂಹೋಪರಿಸ್ಥೈಶ್ಚ ಮಹಾನುಭಾವೈ-
ರ್ಮಹಾಬಲೈಃ ಕ್ರೂರತರೈಸ್ತದಾನೀಂ ॥ ೧೦೬ ॥

---

೧೦೧–೧೦೭. ಶ್ರೀ ಭಗವಂತನು ಹೇಳುತ್ತಾನೆ :—" ಎಲೆವೊ ತಿಳಿಗೇಡೀ ! ನಾನು ದೇವತೆಗಳ ಕಾರ್ಯಸಿದ್ಧಿಗಾಗಿ ನಿನ್ನೊಡನೆ ಯುದ್ಧಮಾಡಲು ಬಂದಿರುವೆನು. ನೆಟ್ಟಗೆ ನಿಲ್ಲು. ನಿನ್ನನ್ನು ಸುಟ್ಟುಬಿಡುವೆನು. ಇದರಲ್ಲಿ ಸಂಶಯುವೇ ಇರುವುದಿಲ್ಲ." ಈ ರೀತಿ ನುಡಿದ ಆ ಸ್ವಾಮಿಯ ಮಾತನ್ನು ಕೇಳಿ ಪರಾಕ್ರಮಿಯಾದ ಕಾಲನೇಮಿಯು ಬಹಳವಾಗಿ ರೇಗಿ ಆ ಅಧೋಕ್ಷಜನನ್ನು ಕುರಿತು, " ಅಯ್ಯಾ! ನೀನು ದೇವತೆಗಳೆಲ್ಲರಿಗೂ ಮೂಲಭೂತನಾದವನು. ಯುದ್ಧದುರ್ಮದನಾದ ಶ್ರೀಮನ್ನಾರಾಯಣನು. ಇದನ್ನು ನಾನು ಬಲ್ಲೆ. ಇಂತಹ ನೀನು ನಿಜವಾಗಿಯೂ ಶೂರನೇ ಆಗಿದ್ದರೆ ನನ್ನೊಡನೆ ಯುದ್ಧಮಾಡು ನೆಲೆಯಾಗಿ ನಿಲ್ಲು" ಎಂದನು. ಆ ಮಹಾತೇಜನೂ, ಭಗವಂತನೂ ಆದ ವಿಷ್ಣುವು ನಸುನಕ್ಕು ಅವನನ್ನು ಕುರಿತು, " ಎಲೈ ! ನಾನು ಆಕಾಶದಲ್ಲಿ. ನೀನು ಭೂಮಿಯಲ್ಲಿ. ಹೀಗೆ ನಾವೀರ್ವರೂ ಒಂದೊಂದೆಡೆಯಲ್ಲಿರುವುದರಿಂದ ಯುದ್ಧವು ಪ್ರಶಸ್ತವಾಗಿರುವುದಿಲ್ಲ. ಆದುದರಿಂದ ಇದು ಸಮ ಸಮವಾಗಿ ನಡೆಯಬೇಕಾದರೆ, ಮಹಾಬಾಹುವಾದ ನೀನು ಗಗನದಲ್ಲಿಯೋ, ಭೂಮಿಯಲ್ಲಿಯೋ, ಎಲ್ಲಿಯೋ ಒಂದೆಡೆ ನಿಂತು ಕಾಳಗ ಮಾಡು" ಎಂದನು. ಮಹಾ ಪರಾಕ್ರಮಿಯಾದ ಆ ಕಾಲನೇಮಿ ದಾನವನು ಆಕಾಶದಲ್ಲಿಯೇ ಕಾಳಗ ಮಾಡುವುದಾಗಿ ಒಪ್ಪಿದನು. ಬಳಿಕ ಸಿಂಹಗಳನ್ನೇರಿರುವವರೂ, ಮಹಾನುಭಾವರೂ, ಮಹಾ

**ಗಗನಮಥ ಜಗಾಹೇ ಮಂದಮಂದಂ ಮಹಾತ್ಮಾ**
**ಹ್ಯಸುರಗಣಸಮೇತೋ ವಿಶ್ವರೂಪಂ ಜಿಘಾಂಸುಃ ।**
**ತ್ರಿಶಿಖಮಪರಮುಗ್ರಂ ಗೃಹ್ಯ ಸಂದೇಶಚೇಷ್ಟಾ**
**ದಶನವಿಕೃತವಕ್ರೋ ಯೋದ್ಧುಕಾಮೋ ಹರಿಂ ಸಃ ॥ ೧೦೭ ॥**

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಸಮುದ್ರಮಥನಾಖ್ಯಾನೇ ದೇವಾಸುರಸಂಗ್ರಾಮವರ್ಣನಂ" ನಾಮ ತ್ರಯೋದಶೋಽಧ್ಯಾಯಃ

---

ಬಲರೂ, ಮಹಾ ಕ್ರೂರರೂ ಆದ ಹತ್ತುಕೋಟಿ ಸಂಖ್ಯೆಯ ದಾನವ ಸೇನೆಯೊಡಗೂಡಿದ ಆ ಮಹಾತ್ಮನು ವಿಶ್ವರೂಪನಾದ ಆ ಮಹಾವಿಷ್ಣುವನ್ನು ಯುದ್ಧದಲ್ಲಿ ಹೊಡೆಯಬಯಸಿ ಬೇರೊಂದು ಬೆಂಕಿಯನ್ನೇ ಹೋಲುವ ಮಹಾ ಕ್ರೂರವಾದ ಖಡ್ಗವನ್ನು ಕೈಯಲ್ಲಿ ಹಿಡಿದು ಕಟಕಟನೆ ಧ್ವನಿಗೈಯುತ್ತಿರುವ ಹಲ್ಲುಗಳಿಂದ ಬಹು ವಿಕಾರವಾದ ಮುಖವುಳ್ಳವನಾಗಿ ಮೆಲ್ಲ ಮೆಲ್ಲನೆ ಅಂತರಿಕ್ಷವನ್ನಡರಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಸಮುದ್ರಮಥನ – ದೇವಾಸುರ ಸಂಗ್ರಾಮವರ್ಣನ"ವೆಂಬ ಹದಿಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಚತುರ್ದಶೋಽಧ್ಯಾಯಃ

### ಭಾರ್ಗವಕೃತ ಮೃತದೈತ್ಯಸಂಜೀವನವರ್ಣನಂ

ಲೋಮಶ ಉವಾಚ :—

ತತೋ ಯುದ್ಧಮತೀವಾಸೀದಸುರೈರ್ವಿಷ್ಣುನಾ ಸಹ ।
ತತಃ ಸಿಂಹಾಃ ಸಪಕ್ಷಾಸ್ತೇ ದಂಶಿತಾಃ ಪರಮಾದ್ಭುತಾಃ ॥ ೧ ॥
ಅಸುರೈರುಹ್ಯಮಾನಾಸ್ತೇ ಗರುತ್ಮಂತಂ ವ್ಯದಾರಯನ್ ।
ಸಿಂಹಾಸ್ತೇ ದಾರಿತಾಸ್ತೇನ ಖಂಡಶಶ್ಚ ವಿದಾರಿತಾಃ ॥ ೨ ॥
ವಿಷ್ಣುನಾ ಚ ತದಾ ದೈತ್ಯಾಶ್ಚಕ್ರೇಣ ಶಕಲೀಕೃತಾಃ ।
ಹತಾಂಸ್ತಾನಸುರಾನ್ದೃಷ್ಟ್ವಾ ಕಾಲನೇಮಿಃ ಪ್ರತಾಪವಾನ್ ॥ ೩ ॥
ತ್ರಿಶೂಲೇನಾಹನದ್ವಿಷ್ಣುಂ ರೋಷಪರ್ಯಾಕುಲೇಕ್ಷಣಃ ।
ತಮಾಯಾಂತಂ ಚ ಜಗೃಹೇ ಮುಕುಂದೋಽನಾಥಸಂಶ್ರಯಃ ॥ ೪ ॥
ಕರೇಣ ವಾಮೇನ ಜಘಾನ ಲೀಲಯಾ
ತಂ ಕಾಲನೇಮಿಂ ಹ್ಯಸುರಂ ಮಹಾಬಲಂ ।
ತೇನೈವ ಶೂಲೇನ ಸಮಾಹತೋಽಸೌ
ಮೂರ್ಧ್ನಾನ್ವಿತೋಽಸೌ ಸಹಸಾ ಪಪಾತ ॥ ೫ ॥

---

### ಕನ್ನಡದ ಅನುವಾದ

#### ಭಾರ್ಗವಕೃತ ಮೃತದೈತ್ಯಸಂಜೀವನವರ್ಣನ

೧–೩. ಲೋಮಶನು ಹೇಳುತ್ತಾನೆ :—ಎಲೈ ಮುನಿಗಳಿರಾ ! ತರುವಾಯ ಕಾಲನೇಮಿಯೇ ಮುಂತಾದ ಅಸುರರಿಗೂ, ಶ್ರೀಮನ್ಮಹಾವಿಷ್ಣುವಿಗೂ ಬಹಳ ಬಿರುಸಾದ ಕಾಳಗಕ್ಕೆ ಮೊದಲಾಯಿತು. ಆಗ, ಆ ದಾನವರೇರಿ ಕುಳಿತಿದ್ದ ಮಹಾ ಭಯಂಕರವಾದ ಸಿಂಹಗಳು ಕೆರಳಿ ಶ್ರೀಮನ್ನಾರಾಯಣನ ವಾಹನವಾದ ಗರುಡನನ್ನು ಸಿಗಿದುಹಾಕಿದವು. ಗರುಡನಾದರೋ ಸಿಂಹಗಳನ್ನು ಸಿಗಿದುದು ಮಾತ್ರವಲ್ಲದೆ ಅವುಗಳನ್ನು ತುಂಡು ತುಂಡುಗಳಾಗಿ ಕತ್ತರಿಸಿಹಾಕಿದನು.

೪–೫. ಅದೇ ಸಮಯದಲ್ಲಿಯೇ ವಿಷ್ಣುವೂ ಸಹ ಚಕ್ರಾಯುಧದಿಂದ ಆ ದೈತ್ಯರೆಲ್ಲರನ್ನೂ ತುಂಡರಿಸಿದನು. ಹೀಗೆ ತನ್ನ ಕಡೆಯ ದಾನವರೆಲ್ಲರೂ ಮಡಿದುದನ್ನು ಕಂಡು ಮಹಾ ಪರಾಕ್ರಮಿಯಾದ ಕಾಲನೇಮಿಯು ರೋಷದಿಂದ ಕೆರಳಿದ ಕಂಗಳುಳ್ಳವನಾಗಿ ತ್ರಿಶೂಲವನ್ನು ತೆಗೆದುಕೊಂಡು ಆ ವಿಷ್ಣುವನ್ನು ಹೊಡೆಯಲು ಬಹು ರಭಸವಾಗಿ ಮುನ್ನುಗ್ಗಿ ಹೊರಟನು. ಆಗ ಅನಾಥರಕ್ಷಕನಾದ ಆ ನಾರಾಯಣನು ಈ ರೀತಿ ತನ್ನ ಮೇಲೆ ಅಟ್ಟಿಬರುತ್ತಿರುವ ಮಹಾ ಬಲನಾದ ಆ ಕಾಲನೇಮಿಯನ್ನು ಕಂಡು ಲೀಲೆಯಿಂದಲೇ ಅವನನ್ನು ಹಿಡಿದು

**ಪತಿತಃ ಪುನರುತ್ಥಾಯ ಶನೈರುನ್ಮೀಲ್ಯ ಲೋಚನೇ ।**
**ಪುರತಃ ಸ್ಥಿತಮಾಲೋಕ್ಯ ವಿಷ್ಣುಂ ಸರ್ವಗುಹಾಶಯಮ್ ॥ ೬ ॥**
**ಲಬ್ಧಸಂಜ್ಞೋಽಬ್ರವೀದ್ವಾಕ್ಯಂ ಕಾಲನೇಮಿರ್ಮಹಾಬಲಃ ।**
**ತವ ಯುದ್ಧಂ ನ ದಾಸ್ಯಾಮಿ ನಾಸ್ತಿಲೋಕೇ ಸ್ಪೃಹಾ ಮಮ ॥ ೭ ॥**
**ಯೇ ಯೇಽಸುರಾ ಹತಾ ಯುದ್ಧೇ ಅಕ್ಷಯಂ ಲೋಕಮಾಪ್ನುಯುಃ ।**
**ಬ್ರಹ್ಮಣೋ ವಚನಾತ್ಸದ್ಯ ಇಂದ್ರೇಣ ಸಹಸಂಗತಾಃ ॥ ೮ ॥**
**ಭುಜಂತೋ ವಿವಿಧಾನ್ಭೋಗಾನ್‌ದೇವವದ್ವಿಚರಂತಿ ತೇ ।**
**ಇಂದ್ರೇಣ ಸಹಿತಾಃ ಸರ್ವೇ ಸಂಸಾರೇ ಚ ಪತಂತ್ಯಥ ॥ ೯ ॥**
**ತಸ್ಮಾದ್ಯುದ್ಧೇನ ಮರಣಂ ನ ಕಾಂಕ್ಷೇ ಕ್ಷಣಭಂಗುರಂ ।**
**ಅನ್ಯಜನ್ಮನಿ ಮೇ ವೀರ ವೈರಭಾವಾನ್ನ ಸಂಶಯಃ ।**
**ದಾತುಮರ್ಹಸಿ ಮೇ ನಾಥ ಕೈವಲ್ಯಂ ಕೇವಲಂ ಪರಂ ॥ ೧೦ ॥**

---

ತನ್ನೆಡಗೈಯಿಂದ ಅವನಿಗೆ ಬಲವಾದ ಪೆಟ್ಟನ್ನು ಕೊಟ್ಟನು. ತರುವಾಯ ಆ ದಾನವನು ಹಿಡಿದಿದ್ದ ತ್ರಿಶೂಲದಿಂದಲೇ ಅವನನ್ನು ಬಡಿದನು. ಆಗಲಾ ಕಾಲನೇಮಿಯು ಬಹು ಬೇಗನೆ ಮೂರ್ಛಿತನಾಗಿ ಬಿದ್ದುಹೋದನು.

೬–೭. ಈ ರೀತಿ ಮೂರ್ಛಿತನಾಗಿ ಬಿದ್ದ ಆ ದಾನವನು ಸ್ವಲ್ಪ ಹೊತ್ತಿನ ಮೇಲೆ ಮತ್ತೆ ಮೇಲಕ್ಕೆದ್ದು ಮೆಲ್ಲಮೆಲ್ಲನೆ ಕಣ್ಣುಗಳನ್ನು ಬಿಟ್ಟು, ತನ್ನ ಮುಂಗಡೆಯೇ ನಿಂತಿದ್ದ ಸರ್ವಭೂತಾಂತರ್ಯಾಮಿಯಾದ ಆ ವಿಷ್ಣುವನ್ನು ನೋಡಿದನು. ಆಗ ಅವನಿಗೆ ಜ್ಞಾನೋದಯವಾಯಿತು. ತರುವಾಯ ಆ ಮಹಾ ಬಲನು ಶ್ರೀಮನ್ನಾರಾಯಣನನ್ನು ಕುರಿತು, "ಎಲೈ ಪ್ರಭುವೇ! ಇನ್ನು ನಾನು ನಿನ್ನೊಡನೆ ಕಾಳಗ ಮಾಡುವುದಿಲ್ಲ. ನನಗೆ ಇನ್ನುಮೇಲೆ ಈ ಲೋಕದ ಆಸೆಯೂ ಇರುವುದಿಲ್ಲ.

೮–೧೦. ಈ ಯುದ್ಧದಲ್ಲಿ ಮಡಿದಿರುವ ಈ ದೈತ್ಯರೆಲ್ಲರಿಗೂ ಬ್ರಹ್ಮನಾಡಿದ ನುಡಿಯಂತೆ ಶಾಶ್ವತವಾದ ಉತ್ತಮ ಲೋಕಗಳು ದೊರಕುತ್ತವೆ. ಇವರೆಲ್ಲರೂ ಸ್ವರ್ಗವನ್ನು ಸೇರಿ ಇಂದ್ರನೊಡನೆ ಸಮಸಮವಾಗಿ ವಿವಿಧ ಭೋಗಗಳನ್ನನು ಭವಿಸುತ್ತ ದೇವತೆಗಳಂತೆಯೇ ಸಂಚರಿಸುತ್ತಿರುತ್ತಾರೆ. ಆ ತರುವಾಯ ಇಂದ್ರನೊಡನೆಯೇ ಮತ್ತೆ ಈ ಭೂಲೋಕದಲ್ಲಿ ಜನ್ಮವೆತ್ತಿ ಸಂಸಾರದಲ್ಲಿಯೂ ಬೀಳುತ್ತಾರೆ. ಎಲೈ ಸ್ವಾಮಿಯೇ! ಈ ಕಾರಣದಿಂದ ನಾನು ಈ ಯುದ್ಧದಲ್ಲಿ ಕ್ಷಣಭಂಗುರವಾದ ಮರಣವನ್ನು ಅಪೇಕ್ಷಿಸುವುದಿಲ್ಲ. (ನಾನು ಮತ್ತೆ ಮತ್ತೆ ಹುಟ್ಟಬಯಸುವುದಿಲ್ಲ.) ಎಲೈ ವೀರನೆ! ನನಗೆ ಇನ್ನೊಂದು ಜನ್ಮದಲ್ಲಿಯಾದರೂ ಇದೇ ವೈರಭಾವದಿಂದಲೇ ಶ್ರೇಷ್ಠವಾದ ಮೋಕ್ಷವನ್ನು ದಯಪಾಲಿಸು" ಎಂದು ಕೇಳಿಕೊಂಡನು.

ತಥೇತಿ ದೈತ್ಯಪ್ರವರೋ ನಿಪಾತಿತಃ
ಪರೇಣ ಪುಂಸಾ ಪರಮಾರ್ಥದೇನ ।
ದತ್ತ್ವಾಽಭಯಂ ದೇವತಾನಾಂ ತದಾನೀಂ
ತಥಾ ಸುಧಾಂ ದೇವತಾಭ್ಯಃ ಪ್ರದತ್ವಾ ॥ ೧೧ ॥
ಕಾಲನೇಮಿರ್ಹತೋ ದೈತ್ಯೋ ದೇವಾ ಜಾತಾಹ್ಯಕಂಟಕಾಃ ।
ಶಲ್ಯರೂಪೋ ಮಹಾನ್ಸದ್ಯೋ ವಿಷ್ಣುನಾ ಪ್ರಭವಿಷ್ಣುನಾ ॥ ೧೨ ॥
ತಿರೋಧಾನಂ ಗತಃ ಸದ್ಯೋ ಭಗವಾನ್ಕಮಲೇಕ್ಷಣಃ ।
ಇಂದ್ರೋಽಪಿ ಕದನಂ ಕೃತ್ವಾ ದೈತ್ಯಾನಾಂ ಪರಮಾದ್ಭುತಂ ॥ ೧೩ ॥
ಪತಿತಾನಾಂ ಕ್ಲೀಬರೂಪಾಣಾಂ ಭಗ್ನಾನಾಂ ಭೀತಚೇತಸಾಂ ।
ಮುಕ್ತಕಚ್ಛಶಿಖಾನಾಂ ಚ ಚಕ್ರೇ ಸ ಕದನಕ್ರಿಯಾಂ ॥ ೧೪ ॥
ಅರ್ಥಶಾಸ್ತ್ರಪರೋ ಭೂತ್ವಾ ಮಹೇಂದ್ರೋ ದುರತಿಕ್ರಮಃ ।
ದೈತ್ಯಾನಾಂ ಕಾಲರೂಪೋಽಸೌ ಶಚೀಪತಿರುದಾರಧೀಃ ॥ ೧೫ ॥
ಏವಂ ನಿಹನ್ಯಮಾನಾನಾಮಸುರಾಣಾಂ ಶಚೀಪತೇಃ ।
ನಿವಾರಣಾರ್ಥಂ ಭಗವಾನಾಗತೋ ನಾರದಸ್ತದಾ ॥ ೧೬ ॥

---

೧೧–೧೩. ಈ ಮಾತನ್ನು ಕೇಳಿ ಪರಮಪುರುಷನೂ, ಭಕ್ತರಿಗೆ ಪರಮಾರ್ಥವಾದ ಮೋಕ್ಷವನ್ನು ದಯೆಗೈಯುವವನೂ ಆದ ಶ್ರೀಮನ್ನಾರಾಯಣನು ಹಾಗೆಯೇ ಹಾಗಲೆಂದು ಹೇಳಿ ಅಭಯವಿತ್ತು ಅವನನ್ನು ಸಂಹರಿಸಿದನು. ಹೀಗೆ ಮಹಾ ಪ್ರಭಾವಶಾಲಿಯೂ, ಮಹಾತ್ಮನೂ, ಷಡ್ಗುಣೈಶ್ವರ್ಯಸಂಪನ್ನನೂ ಕಮಲೇಕ್ಷಣನೂ ಆದ ಆ ಮಹಾವಿಷ್ಣುವು ದೇವತೆಗಳೆಲ್ಲರಿಗೂ ಅಭಯವನ್ನಿತ್ತು ಅವರಿಗೆ ಅಮೃತವನ್ನೂ ಹಂಚಿಕೊಟ್ಟನು. ಅಲ್ಲದೆ ಕಾಳಗದಲ್ಲಿ ಮಡಿದ ಕಾಲನೇಮಿ ದೈತ್ಯನು ಶಲ್ಯರೂಪದಿಂದ ಅಂತರ್ಧಾನವಾದ ತರುವಾಯ ದೇವತೆಗಳೆಲ್ಲರೂ ನಿಷ್ಕಂಟಕರಾದುದನ್ನು ನೋಡಿ ತಾನೂ ಅಲ್ಲಿಯೇ ಅಂತರ್ಧಾನವಾದನು. ದೇವೇಂದ್ರನಾದರೋ ದೈತ್ಯರೊಡನೆ ಕಾಳಗವನ್ನೆಸಗಿ ಜಯಶಾಲಿಯಾದನು.

೧೪–೧೬. ಆದರೂ ದುರತಿಕ್ರಮನಾದ ಅವನು ಕೇವಲ ಅರ್ಥಶಾಸ್ತ್ರಪರನಾಗಿ ಕೆಳಗೆ ಬಿದ್ದಿರುವವರೂ, ದೈನ್ಯ ಸ್ಥಿತಿಯಲ್ಲಿರುವವರೂ, ಪೆಟ್ಟುತಿಂದವರೂ, ಹೆದರಿ ತತ್ತಳಿಸಿಹೋದ ಮನಸ್ಸುಳ್ಳವರೂ, ಕಚ್ಚೆಗಳು ಜಾರಿ, ಜುಟ್ಟುಗಳನ್ನು ಬಿರಿಹೊಯ್ದುಕೊಂಡಿರುವವರೂ ಆದ ದಾನವರೆಲ್ಲರಿಗೂ ಯಮಸ್ವರೂಪನಾಗಿ ಅವರೆಲ್ಲರನ್ನೂ ಹೊಡೆಯಲಾರಂಭಿಸಿದನು. ಬಹಳ ಬುದ್ಧಿವಂತನಾದ ಆ ಶಚೀಪತಿಯು ಕೇವಲ ಅರ್ಥಶಾಸ್ತ್ರಪರನಾಗಿ ಈ ರೀತಿ ದೈನ್ಯಾವಸ್ಥೆಯಲ್ಲಿದ್ದ ಆ ದಾನವರನ್ನು ಹೊಡೆಯುತ್ತಿರುವುದನ್ನು ನೋಡಿ ಅವನನ್ನು ತಡೆಯಲೋಸುಗ ಪೂಜ್ಯನಾದ ನಾರದ ಮುನಿಯು ಅಲ್ಲಿಗೈತಂದು ಅವನನ್ನು ಕುರಿತು ಹೀಗೆಂದನು.

ನಾರದ ಉವಾಚ:—

ಯುದ್ಧೇ ಹತಾಶ್ಚ ಯೇ ವೀರಾ ಹ್ಯಸುರಾ ರಣಮಂಡಲೇ ।
ತೇಷಾಮನು ಕಥಂ ಕರ್ತಾ ಭೀತಾನಾಂ ಚ ವಿಹಿಂಸನಂ ॥ ೧೭ ॥
ಯೇ ಭೀತಾಂಶ್ಚ ಪ್ರಪನ್ನಾಂಶ್ಚ ಘಾತಯಂತಿ ಮಹೋದ್ಧತಾಃ ।
ಬ್ರಹ್ಮಘ್ನಾಸ್ತೇಽಪಿ ವಿಜ್ಞೇಯಾ ಮಹಾಪಾತಕಸಂಯುತಾಃ ॥ ೧೮ ॥
ತಸ್ಮಾತ್ತ್ವಯಾ ನ ಕರ್ತವ್ಯಂ ಮನಸಾಪಿ ವಿಹಿಂಸನಂ ।
ಏವಮುಕ್ತಸ್ತದಾ ಶಕ್ರೋ ನಾರದೇನ ಮಹಾತ್ಮನಾ ।
ಸುರಸೇನಾನ್ವಿತಃ ಸದ್ಯ ಆಗತೋ ಹಿ ತ್ರಿವಿಷ್ಟಪಂ ॥ ೧೯ ॥
ತದಾ ಸರ್ವೇ ಸುರಗಣಾಃ ಸುಹೃದ್ಭಿಶ್ಚ ಪರಸ್ಪರಂ ।
ಬಭೂವುರ್ಮುದಿತಾಃ ಸರ್ವೇ ಯಕ್ಷಗಂಧರ್ವಕಿಂನರಾಃ ॥ ೨೦ ॥
ತದಾ ಇಂದ್ರೋಽಮರಾವತ್ಯಾಂ ಸಹ ಶಚ್ಯಾಭಿಷೇಚಿತಃ ॥ ೨೧ ॥
ದೇವರ್ಷಿಪ್ರಮುಖೈಶ್ಚೈವ ಬ್ರಹ್ಮರ್ಷಿ ಪ್ರಮುಖೈಸ್ತಥಾ ।
ಶಕ್ರೋಽಪಿ ವಿಜಯಂ ಪ್ರಾಪ್ತಃ ಪ್ರಸಾದಾಚ್ಛಂಕರಸ್ಯ ಚ ॥ ೨೨ ॥

---

೧೭–೧೮. ನಾರದನು ಹೇಳುತ್ತಾನೆ:—"ಅಯ್ಯಾ ವೀರನಾದ ದೇವೇಂದ್ರನೇ! ಯುದ್ಧಭೂಮಿಯಲ್ಲಿ ಗಾಸಿಹೊಂದಿ ಬಿದ್ದಿರುವವರೂ, ಹೆದರಿರುವವರೂ ಆದ ಈ ದೈತ್ಯರನ್ನು ಏತಕ್ಕೆ ಮತ್ತೆ ಮತ್ತೆ ಹಿಂಸಿಸುತ್ತಿರುವೆ? ಯಾರಾದರೆ, ಹೆದರಿರುವವರನ್ನೂ, ದೈನ್ಯದಿಂದ ಶರಣುಹೊಂದಿದವರನ್ನೂ ಗರ್ವದಿಂದ ಘಾತಿಸುತ್ತಾರೆಯೋ ಅವರು ಬ್ರಹ್ಮಹತ್ಯೆ ಮಾಡಿದ ಮಹಾ ಪಾಪಿಗಳೆಂದೇ ತಿಳಿಯಬೇಕು.

೧೯. ಆದುದರಿಂದ ನೀನು ಈ ದೈತ್ಯರನ್ನು ಮನಸ್ಸಿನಿಂದಲೂ ಹಿಂಸೆ ಮಾಡಲೆಳಸಬೇಡ." ಮಹಾತ್ಮನಾದ ನಾರದ ಮುನಿಯು ಹೀಗೆ ಹೇಳಿದಬಳಿಕ ದೇವೇಂದ್ರನು ದಾನವರನ್ನು ಹಿಂಸಿಸುವುದನ್ನು ತೊರೆದು ದೇವಸೇನೆಯೊಡಗೂಡಿ ಸ್ವರ್ಗಲೋಕಕ್ಕೆ ಬಂದನು.

೨೦. ಆಗ ಸಮಸ್ತ ದೇವಸಮೂಹದವರೂ, ಯಕ್ಷ ಗಂಧರ್ವ ಕಿನ್ನರರೂ ತಂತಮ್ಮ ಮಿತ್ರರೊಡಗೂಡಿ ಪರಸ್ಪರವಾಗಿ ಸಂತೋಷದಿಂದ ನಲಿದಾಡಿದರು.

೨೧–೨೨. ತರುವಾಯ ದೇವರ್ಷಿಗಳೂ, ಬ್ರಹ್ಮರ್ಷಿಗಳೂ ಆ ದೇವೇಂದ್ರನನ್ನು ಶಚೀದೇವಿಯೊಡನೆ ಅಮರಾವತಿಯ ಸಿಂಹಾಸನದಲ್ಲಿ ಕುಳ್ಳಿರಿಸಿ ಮತ್ತೆ ರಾಜ್ಯಾಭಿಷೇಕ ಮಾಡಿದರು. ಎಲೈ ವಿಪ್ರರೇ! ಹೀಗೆ ಆ ದೇವೇಂದ್ರನು ಶಂಕರನ ಅನುಗ್ರಹದಿಂದ ವಿಜಯವನ್ನು ಪಡೆದನು.

ತದಾ ಮಹೋತ್ಸವೋ ವಿಪ್ರಾ ದೇವಲೋಕೇ ಮಹಾನಭೂತ್ ।
ಶಂಖಾಶ್ಚ ಪಟಹಾಶ್ಚೈವ ಮೃದಂಗಮುರಜಾ ಅಪಿ ।
ತಥಾನಕಾಶ್ಚ ಭೇರ್ಯಶ್ಚ ನೇದುರ್ದುಂದುಭಯಃ ಸಮಂ ॥ ೨೩ ॥
ಗಾಯಕಾಶ್ಚೈವ ಗಂಧರ್ವಾಃ ಕಿನ್ನರಾಶ್ಚಾಪ್ಸರಸೋ ಗಣಾಃ ।
ನನೃತುರ್ಜಗುಸ್ತುಷ್ಟುವುಶ್ಚ ಸಿದ್ಧಚಾರಣಗುಹ್ಯಕಾಃ ॥ ೨೪ ॥
ಏವಂ ವಿಜಯಮಾಪನ್ನಃ ಶಕ್ರೋ ದೇವೇಶ್ವರಸ್ತದಾ ।
ದೇವೈರ್ಹತಾಸ್ತದಾ ದೈತ್ಯಾಃ ಪತಿತಾಸ್ತೇ ಮಹೀತಲೇ ॥ ೨೫ ॥
ಗತಾಸವೋ ಮಹಾತ್ಮಾನೋ ಬಲಿಪ್ರಮುಖತೋ ಹ್ಯಮೀ ।
ತಪಸ್ತಪ್ತುಂ ಪುರಾ ವಿಪ್ರೋ ಭಾರ್ಗವೋ ಮಾನಸೋತ್ತರಂ ॥ ೨೬ ॥
ಗತಃ ಶಿಷ್ಯೈಃ ಪರಿವೃತಸ್ತಸ್ಮಾದ್ಯುದ್ಧಂ ನವೇದ ತತ್ ।
ಅವಶೇಷಾಶ್ಚ ಯೇ ದೈತ್ಯಾಸ್ತೇ ಗತಾ ಭಾರ್ಗವಂ ಪ್ರತಿ ॥ ೨೭ ॥
ಕಥಿತಂ ವೈ ಮಹದ್ವೃತ್ತಮಸುರಾಣಾಂ ಕ್ಷಯಾವಹಂ ।
ನಿಶಮ್ಯ ಮನ್ಯುಮಾವಿಷ್ಟೋ ಹ್ಯಾಗತೋ ಭೃಗುನಂದನಃ ॥ ೨೮ ॥
ಶಿಷ್ಯೈಃ ಪರಿವೃತೋಽಭೂತ್ವಾ ಮೃತಾಂಸ್ತಾನಸುರಾನಪಿ ।
ವಿದ್ಯಯಾ ಮೃತಜೀವಿನ್ಯಾ ಪತಿತಾನ್ ಸಮಜೀವಯತ್ ॥ ೨೯ ॥

---

೨೩–೨೫. ಆ ಸಮಯದಲ್ಲಿ ದೇವಲೋಕದಲ್ಲಿ ಬಹು ದೊಡ್ಡ ಉತ್ಸವವು ಮಹಾ ವೈಭವದಿಂದ ನಡೆಯಿತು. ಎತ್ತೆತ್ತಲೂ ಶಂಖ, ಪಟಹ, ಮೃದಂಗ, ಮುರಜ, ಆನಕ, ಭೇರಿ, ದುಂದುಭಿ ಮೊದಲಾದ ದೇವವಾದ್ಯಗಳು ಮೊಳಗಿದುವು. ಗಾಯಕರಾದ ಗಂಧರ್ವರೂ, ಕಿನ್ನರರೂ, ಅಪ್ಸರರೂ, ಸಿದ್ಧ-ಚಾರಣ-ಗುಹ್ಯಕರೂ ಹಾಡಿ ಕುಣಿದು ಸಂತೋಷಗೊಂಡರು. ಹೀಗೆ ದೇವರಾಜನಾದ ಶಕ್ರನು ವಿಜಯವನ್ನು ಪಡೆದನು. ಇತ್ತ ಮಹಾತ್ಮರಾದ ಬಲಿ ಮೊದಲಾದ ದೈತ್ಯರಾದರೋ ಆ ದೇವತೆಗಳಿಂದ ಮಡಿದು ಭೂಮಿಯಲ್ಲಿ ಬಿದ್ದರು.

೨೬–೩೧. ಎಲೈ ಶೌನಕಾದಿ ವಿಪ್ರರಿರಾ! ಈ ನಡುವೆ ಭೃಗುನಂದನನಾದ ಶುಕ್ರಾಚಾರ್ಯನು ಶಿಷ್ಯರೊಡನೆ ಪೂರ್ವದಲ್ಲಿಯೇ ಮಾನಸ ಸರೋವರಕ್ಕೆ ಹೋಗಿದ್ದುದರಿಂದ ಆತನಿಗೆ ಈ ಯುದ್ಧದ ಸುದ್ದಿಯೇ ತಿಳಿದಿರಲಿಲ್ಲ. ಆಗ ಆ ಕಾಳಗದಲ್ಲಿ ಕಳೆದುಳಿದ ದಾನವರೆಲ್ಲರೂ ಆತನ ಬಳಿಗೈದಿ ಅಸುರರಿಗೆ ವಿನಾಶವನ್ನುಂಟುಮಾಡಿದ ಆ ಕಾಳಗದ ಸುದ್ದಿಯೆಲ್ಲವನ್ನೂ ತಿಳಿಸಿದರು. ಇದನ್ನು ಕೇಳಿದೊಡನೆಯೇ ಆ ಭೃಗುನಂದನನು ಕುಪಿತನಾಗಿ ಅಲ್ಲಿಂದ ಹಿಂತಿರುಗಿ ಬಂದನು. ಆತನು ಶಿಷ್ಯರೊಡಗೂಡಿ ಅಲ್ಲಿಗೈತಂದು ಅಸುರರೆಲ್ಲರೂ ಮಡಿದು ಹೋಗಿದ್ದರೂ ಅವರೆಲ್ಲರನ್ನೂ ತನ್ನಲ್ಲಿದ್ದ ಮೃತಸಂಜೀವಿನೀ ವಿದ್ಯೆಯಿಂದ ಮತ್ತೆ ಬದುಕಿಸಿದನು. ಆಗ ದಾನವರೆಲ್ಲರೂ ನಿದ್ರೆ ಕಳೆದೆಚ್ಚತ್ತವರಂತೆ ಎದ್ದು ಕುಳಿತರು.

ನಿದ್ರಾಪಾಯಗತಾ ಯದ್ವದುತ್ಥಿತಾಸ್ತೇ ತದಾಽಸುರಾಃ ।
ಉತ್ಥಿತಃ ಸ ಬಲಿಃ ಪ್ರಾಹ ಭಾರ್ಗವಂ ಹ್ಯಮಿತದ್ಯುತಿಂ ॥ ೩೦ ॥
ಜೀವಿತೇನ ಕಿಮದ್ಯೈವ ಮಮನಾಸ್ತಿ ಪ್ರಯೋಜನಂ ।
ಪಾತಿತಸ್ತ್ರಿದಶೇಂದ್ರೇಣ ಯಥಾ ಕಾಪುರುಷಸ್ತಥಾ ॥ ೩೧ ॥
ಬಲಿನೋಕ್ತಂ ವಚಃ ಶ್ರುತ್ವಾ ಶುಕ್ರೋ ವಚನಮಬ್ರವೀತ್ ।
ಮನಸ್ವಿನೋ ಹಿ ಯೇ ಶೂರಾಃ ಪತಂತಿ ಸಮರೇ ಬುಧಾಃ ॥ ೩೨ ॥
ಯೇ ಶಸ್ತ್ರೇಣ ಹತಾಃ ಸದ್ಯೋ ಮ್ರಿಯಮಾಣಾ ವ್ರಜಂತಿ ವೈ ।
ತ್ರಿವಿಷ್ಟಪಂ ನ ಸಂದೇಹ ಇತಿ ವೇದಾನುಶಾಸನಂ ॥ ೩೩ ॥
ಏವಮಾಶ್ವಾಸಯಾಮಾಸ ಬಲಿನಂ ಭೃಗುನಂದನಃ ।
ತಪಸ್ತತಾಪ ವಿವಿಧಂ ದೈತ್ಯಾನಾಂ ಸಿದ್ಧಿದಾಯಕಂ ॥ ೩೪ ॥
ತಥಾ ದೈತ್ಯಾಃ ಗತಾ ಸರ್ವೇ ಭೃಗುಣಾಚ ಪ್ರಚೋದಿತಾಃ ।
ಪಾತಾಲಮವಸತ್ಸರ್ವೇ ಬಲಿಮುಖ್ಯಾಃ ಸುಖೇನ ವೈ ॥ ೩೫ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ದೇವಾಸುರಸಂಗ್ರಾಮೇ ಭಾರ್ಗವೇಣ ಮೃತದೈತ್ಯಸಂಜೀವನವರ್ಣನಂ" ನಾಮ ಚತುರ್ದಶೋಽಧ್ಯಾಯಃ

---

ಅಂತೆಯೇ ಮೂರ್ಛೆ ತಿಳಿದೆದ್ದ ದೈತ್ಯರಾಜನಾದ ಬಲಿಯು ಗುರುವಾದ ಶುಕ್ರನನ್ನು ಕುರಿತು, "ಗುರುವೇ! ಈಗ ನಾನು ಬದುಕಿದುದರಿಂದ ನನಗಾವ ಪ್ರಯೋಜನವೂ ಆಗುವಂತಿಲ್ಲ. ನಾವೆಲ್ಲರೂ ದೇವೇಂದ್ರನಿಂದ ಕಾಪುರುಷರಂತೆ (ದುರ್ಬಲರಂತೆ) ಬೀಳಿಸಲಾದೆವು" ಎಂದು ಹೇಳಿದನು.

೩೨–೩೫. ಬಲಿಯ ಈ ಮಾತನ್ನು ಕೇಳಿ ಶುಕ್ರಾಚಾರ್ಯನು, "ಅಯ್ಯಾ ದೈತ್ಯನೇ! ಸ್ಥಿರಮನಸ್ಕರಾದ ಶೂರರೂ, ಪಂಡಿತರೂ ಸಹ ಕಾಳಗಗಳಲ್ಲಿ ಬಿದ್ದು ಹೋಗುತ್ತಾರೆ. ಹಾಗೆ ಶಸ್ತ್ರದಿಂದ ಮಡಿದವರೆಲ್ಲರೂ ಕೂಡಲೇ ಸ್ವರ್ಗಲೋಕವನ್ನು ಸೇರುತ್ತಾರೆಯೆಂದು ವೇದವಾಕ್ಯವಿರುವುದು. ಅದರಲ್ಲಿ ಸಂದೇಹವಿಲ್ಲವು" ಎಂದನು. ಈ ರೀತಿ ನುಡಿದು ಬಲಿಯನ್ನು ಸಮಾಧಾನಗೊಳಿಸಿದ ಬಳಿಕ ಆ ಶುಕ್ರಾಚಾರ್ಯನು ದೈತ್ಯರಿಗೆ ಕಾರ್ಯಸಿದ್ಧಿಯಾಗಲೋಸುಗ ಬಗೆಬಗೆಯ ತಪಸ್ಸುಗಳನ್ನು ಮಾಡಿದನು. ಅಂತೆಯೇ ಆತನ ಉಪದೇಶದಂತೆ ಬಲಿಯೇ ಮೊದಲಾದ ದಾನವರೆಲ್ಲರೂ ಪಾತಾಳಲೋಕಕ್ಕೆ ಹೋಗಿ ಯಾವ ಹವ್ಯಾಸವೂ ಇಲ್ಲದೆ ಸುಖವಾಗಿ ವಾಸಮಾಡತೊಡಗಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಭಾರ್ಗವಕೃತ ಮೃತದೈತ್ಯಸಂಜೀವನವರ್ಣನ"ವೆಂಬ ಹದಿನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಪಂಚದಶೋಽಧ್ಯಾಯಃ

**ದೇವೇಂದ್ರ ಸ್ವರಾಜ್ಯಾಭಿಷೇಕವೃತ್ತಾಂತೇ, ತಸ್ಯ ಬ್ರಹ್ಮಹತ್ಯೋಽಪದುೃತೌ**
**ನಹುಷ ಯಯಾತಿ ಭೂಪುಣ್ಯಕ್ಷಯ ವೃತ್ತಾಂತವರ್ಣನಂ**

**ಋಷಯ ಊಚು :—**

**ರಾಜ್ಯಂ ಪ್ರಾಪ್ತೋ ಹಿ ದೇವೇಂದ್ರಃ ಕಥಿತಸ್ತೇ ಗುರುಂ ವಿನಾ ।**
**ಗುರೋರವಜ್ಞಯಾ ಜಾತೋ ರಾಜ್ಯಭ್ರಂಶೋ ಹಿ ತಸ್ಯತು ॥ ೧ ॥**
**ಕೇನ ಪ್ರಣೋದಿತಶ್ಚೇಂದ್ರೋ ಬಭೂವ ಚಿರಮಾಸನೇ ।**
**ತತ್ಸರ್ವಂ ಕಥಯಾಶುತ್ವಂ ಪರಂ ಕೌತೂಹಲಂ ಹಿ ನಃ ॥ ೨ ॥**

**ಲೋಮಶ ಉವಾಚ :—**

**ಗುರುಣಾಪಿ ವಿನಾ ರಾಜ್ಯಂ ಕೃತವಾನ್ಸ ಶಚೀಪತಿಃ ।**
**ವಿಶ್ವರೂಪೋಕ್ತವಿಧಿನಾ ಇಂದ್ರೋ ರಾಜ್ಯೇ ಸ್ಥಿತೋ ಮಹಾನ್ ॥ ೩ ॥**
**ವಿಶ್ವಕರ್ಮಸುತೋ ವಿಪ್ರಾ ವಿಶ್ವರೂಪೋ ಮಹಾನೃಷಿಃ ।**
**ಪುರೋಹಿತೋಽಥ ಶಕ್ರಸ್ಯ ಯಾಜಕಶ್ಚಾಭವತ್ತದಾ ॥ ೪ ॥**

---

### ಕನ್ನಡದ ಅನುವಾದ

**ದೇವೇಂದ್ರನ ಸ್ವರಾಜ್ಯಾಭಿಷೇಕ — ನಹುಷ ಯಯಾತಿ ಭೂಪುಣ್ಯಕ್ಷಯ ವೃತ್ತಾಂತವರ್ಣನ**

೧. ಋಷಿಗಳು ಕೇಳುತ್ತಾರೆ:—"ಎಲೈ ಸೂತಪುರಾಣಿಕನೇ! ಈಗ ನೀನು, ಮಹೇಂದ್ರನು ಗುರುವಿನ ಅನುಗ್ರಹವಿಲ್ಲದೆಯೇ ರಾಜ್ಯವನ್ನು ಪಡೆದ ಸುದ್ದಿಯನ್ನು ಹೇಳಿದೆ. ಆದರೆ ಅವನು ಗುರುವನ್ನು ತಿರಸ್ಕರಿಸಿದುದರಿಂದಲೇ ಅವನಿಗೆ ರಾಜ್ಯಭ್ರಂಶವಾಯಿತಲ್ಲವೆ?

೨. ಹೀಗಿರುವಾಗ ಇಂದ್ರನನ್ನು ಸ್ವರ್ಗಸಿಂಹಾಸನದಲ್ಲಿ ಶಾಶ್ವತವಾಗಿ ಪ್ರತಿಷ್ಠಿಸಿದವರಾರು? ಈ ವೃತ್ತಾಂತವೆಲ್ಲವನ್ನೂ ಜಾಗ್ರತೆಯಾಗಿ ಅಪ್ಪಣೆ ಕೊಡಿಸು. ಕೇಳಲು ನಮಗೆ ಬಹಳ ಕುತೂಹಲವಾಗಿರುವುದು."

೩. ಲೋಮಶನು ಹೇಳುತ್ತಾನೆ:—ಅಯ್ಯಾ ಶೌನಕಾದಿಗಳಿರಾ! ಮಹಾತ್ಮನಾದ ಆ ಶಚೀಪತಿಯು ಗುರುವನ್ನು ಬಿಟ್ಟೇ ರಾಜ್ಯಭಾರ ಮಾಡಿದನು. ಅವನು, ವಿಶ್ವರೂಪನು ಹೇಳಿದ ವಿಧಾನದಿಂದಲೇ ತನ್ನ ರಾಜ್ಯದಲ್ಲಿ ಪಟ್ಟಾಭಿಷಿಕ್ತನಾಗಿ ನೆಲೆಯಾಗಿ ನಿಂತನು.

೪. ಈ ವಿಶ್ವರೂಪನಾದರೋ ವಿಶ್ವಕರ್ಮನ ಮಗನು; ಮಹಾ ತಪಸ್ವಿ. ಇವನೇ ದೇವೇಂದ್ರನಿಗೆ ಪುರೋಹಿತನೂ, ಯಾಜಕನೂ ಆದನು.

**ತಸ್ಮಿನ್ಯಜ್ಞೇಽವಧಾನ್ಯೈಶ್ಚ ಯಜನೇ ಅಸುರಾನ್‌ಸುರಾನ್ ।**
**ಮನುಷ್ಯಾಂಶ್ಚೈವ ತ್ರಿಶಿರಾ ಅಪರೋಕ್ಷಂ ಶಚೀಪತೇಃ ॥ ೫ ॥**
**ದೇವಾನ್ದದಾತಿ ಸಾಕ್ರೋಶಂ ದೈತ್ಯಾಂಸ್ತೂಷ್ಣೀಮಥಾದದಾತ್ ।**
**ಮನುಷ್ಯಾನ್ಮಧ್ಯಪಾತೇನ ಪ್ರತ್ಯಹಂ ಸಾಗ್ರಹಾತ್ ದ್ವಿಜಃ ॥ ೬ ॥**
**ಏಕದಾತು ಮಹೇಂದ್ರೇಣ ಸೂಚಿತೋ ಗುರುಲಾಘವಾತ್ ।**
**ಅಲಕ್ಷ್ಯಮಾಣೇನ ತದಾ ಜ್ಞಾತಂ ತಸ್ಯ ಚಿಕೀರ್ಷಿತಂ ॥ ೭ ॥**
**ದೈತ್ಯಾನಾಂ ಕಾರ್ಯಸಿದ್ಧ್ಯರ್ಥಮವಧಾನಂ ಪ್ರಯಚ್ಛತಿ ।**
**ಅಸೌ ಪುರೋಹಿತೋಽಸ್ಮಾಕಂ ಪರೇಷಾಂ ಚ ಫಲಪ್ರದಃ ॥ ೮ ॥**
**ಇತಿ ಮತ್ವಾ ತದಾ ಶಕ್ರೋ ವಜ್ರೇಣ ಶತಪರ್ವಣಾ ।**
**ಚಿಚ್ಛೇದ ತಚ್ಛಿರಾಂಸ್ಯೇವ ತತ್ಕ್ಷಣಾದಭವದ್ವಧಃ ॥ ೯ ॥**
**ಯೇನಾಕರೋತ್ಸೋಮಪಾನಮಜಾಯಂತ ಕಪಿಂಜಲಾಃ ।**
**ತತೋಽನ್ಯೇನ ಸುರಾಪಾನಾತ್ಕಲವಿಂಕಾಭವನ್ಮುಖಾತ್ ॥ ೧೦ ॥**

---

೫. ತ್ರಿಶಿರ (ಮೂರು ತಲೆಗಳುಳ್ಳವ) ನಾದ ಈ ವಿಶ್ವರೂಪನು ತಾನು ಮಾಡುತ್ತಿದ್ದ ಆ ಯಜ್ಞದಲ್ಲಿ ದೇವೇಂದ್ರನಿಗೆ ತಿಳಿಯದಂತೆಯೇ ಅಸುರರಿಗೂ, ಸುರರಿಗೂ, ಮಾನವರಿಗೂ ಅವದಾನವನ್ನು ಕೊಡುತ್ತಿದ್ದನು.

೬. ಹೀಗೆ ಆ ಬ್ರಾಹ್ಮಣನು ಅವದಾನವನ್ನು ಕೊಡುವಾಗ ದೇವತೆಗಳಿಗೆ ಆಕ್ರೋಶದೊಡನೆಯೂ, ಅಸುರರಿಗೆ ಏನೊಂದೂ ಮಾತನಾಡದೆ ಮೌನವಾಗಿಯೂ, ಗ್ರಹಗಳಿಗೂ ಮನುಷ್ಯರಿಗೂ ಮಧ್ಯವೃತ್ತಿಯಿಂದಲೂ ಅವದಾನ ಕೊಡುತ್ತಿದ್ದನು.

೭-೯. ಒಂದಾನೊಂದು ದಿನ ಮಹೇಂದ್ರನು ಗುರುವಿನಲ್ಲಿ ಏನೋ ಒಂದು ಅಪನಂಬಿಕೆಯಿಂದಲೂ, ಲಾಘವದಿಂದಲೂ, ತನ್ನ ಲಕ್ಷ್ಯವೇ ಇಲ್ಲದೆ ಅವನು ಮಾಡಿದುದೆಲ್ಲವನ್ನೂ ಕಣ್ಣಾರ ಕಂಡನು. "ಆಹಾ! ಈ ನಮ್ಮ ಪುರೋಹಿತನು ದೈತ್ಯರ ಕಾರ್ಯಸಿದ್ಧಿಗಾಗಿ ಅವರಿಗೀರೀತಿ ಅವದಾನವನ್ನು ಕೊಡುತ್ತಿರುವನು. ಇವನು ಇತರರಿಗೆ ಉಪಕಾರಿಯಾಗಿಯೂ, ನಮಗೆ ಅಪಕಾರಿಯಾಗಿಯೂ ಇರುವನು" ಎಂದು ಯೋಚಿಸಿದನು. ಕೂಡಲೇ ಅವನು ತನ್ನ ಕೈಯಲ್ಲಿದ್ದ ನೂರಲಗುಗಳುಳ್ಳ ವಜ್ರಾಯುಧದಿಂದ ಅವನ ತಲೆಗಳನ್ನು ಒಮ್ಮೆಲೇ ಕಡಿದು ಹಾಕಿದನು. ಕೂಡಲೇ ಆ ಬ್ರಾಹ್ಮಣನ ವಧೆಯಾಗಿಹೋಯಿತು.

೧೦. ಆ ಸಮಯದಲ್ಲಿ ವಿಪ್ರನಾದ ಆ ವಿಶ್ವರೂಪನು ಯಾವ ಮುಖದಿಂದ ಸೋಮಪಾನ ಮಾಡಿದ್ದನೋ ಆ ಮುಖದಿಂದ ಕಪಿಂಜಲಗಳೂ, ಯಾವ ಮುಖದಿಂದ ಸುರಾಪಾನ ಮಾಡಿದ್ದನೋ ಆ ಮುಖದಿಂದ ಕಲವಿಂಕಗಳೂ ಹುಟ್ಟಿದವು.

ಅನ್ಯಾನನಾದಜಾಯಂತ ತಿತ್ತಿರಾ ವಿಶ್ವರೂಪಿಣಃ ।
ಏವಂ ಹತೋ ವಿಶ್ವರೂಪಃ ಶಕ್ರೇಣ ಮಂದಭಾಗಿನಾ ॥ ೧೧ ॥
ಬ್ರಹ್ಯಹತ್ಯಾ ತದೋದ್ಭೂತಾ ದುರ್ಧರ್ಷಾ ಚ ಭಯಾವಹಾ ।
ದುರ್ಧರ್ಷಾ ದುರ್ಮುಖಾ ದುಷ್ಟಾ ಚಂಡಾಲರಜಸಾನ್ವಿತಾ ॥ ೧೨ ॥
ಬ್ರಹ್ಮಹತ್ಯಾ ಸುರಾಪಾನಂ ಸ್ತೇಯಂ ಗುರ್ವಂಗನಾಗಮಃ ।
ಇತ್ಯೇಷಾಮುಪ್ಯಘಪತಾಮಿದಮೇವ ಚ ನಿಷ್ಕೃತಿಃ ॥ ೧೩ ॥
ನಾಮ ವ್ಯಾಹರಣಂ ವಿಷ್ಣೋರ್ಯತಸ್ತದ್ವಿಷಯಾಮತಿಃ ।
ತ್ರಿಶಿರಾ ಧೂಮ್ರಹಸ್ತಾ ಸಾ ಶಕ್ರಂ ಗ್ರಸ್ತುಮುಪಾಯಯೌ ॥ ೧೪ ॥
ತತೋ ಭಯೇನ ಮಹತಾ ಪಲಾಯನ ಪರೋಽಭವತ್ ।
ಪಲಾಯಮಾನಂ ತಂ ದೃಷ್ಟ್ವಾ ಹ್ಯನುಯಾತಾ ಭಯಾವಹಾ ॥ ೧೫ ॥
ಯತೋ ಧಾವತಿ ಸಾಽಧಾವತ್ತಿಷ್ಠಂತಮನುತಿಷ್ಠತಿ ।
ಅಂಗಕೃತಾ ಯಥಾ ಛಾಯಾ ಶಕ್ರಸ್ಯ ಪರಿವೇಷ್ಟಿತುಂ ।
ಆಯಾತಿ ತಾವತ್ಸಹಸಾ ಇಂದ್ರೋಽಪ್ಯಪ್ಸು ನ್ಯಮಜ್ಜತ ॥ ೧೬ ॥
ಶೀಘ್ರತ್ವೇನ ಯಥಾ ವಿಪ್ರಾಶ್ಚಿರಂತನಜಲೇಚರಃ ॥ ೧೭ ॥

---

೧೧. ಅವನ ಮತ್ತೊಂದು ಮುಖದಿಂದ ತಿತ್ತಿರಗಳುಂಟಾದುವು. ಮಂದಭಾಗಿಯಾದ ದೇವೇಂದ್ರನು ಈ ರೀತಿ ಆ ವಿಶ್ವರೂಪನನ್ನು ವಧಿಸಿದನು.

೧೨. ಕೂಡಲೇ ನಾಶಗೊಳಿಸಲಸದಳವೂ, ವಿಕಾರಮುಖವುಳ್ಳದೂ, ಬಹು ಕೆಟ್ಟದೂ, ಚಂಡಾಲರ ಹೊಲೆಯೊಡಗೂಡಿದುದೂ ಆದ ಭಯಂಕರ ಬ್ರಹ್ಮಹತ್ಯೆಯು ಹುಟ್ಟಿತು.

೧೩. ಬ್ರಹ್ಮಹತ್ಯೆ, ಸುರಾಪಾನ, ಸ್ತೇಯ, ಗುರುಸ್ತ್ರೀಗಮನ ಮುಂತಾದವುಗಳನ್ನು ಮಾಡಿದ ಪಾಪಿಗಳಿಗೆ ಇದೇ ಫಲವು!

೧೪. ಆಗ ವಿಷ್ಣುನಾಮಗಳನ್ನುಚ್ಚರಿಸುತ್ತ, ಅವನಲ್ಲಿಯೇ ನೆಲೆಗೊಳಿಸಿದ ಮನಸ್ಸುಳ್ಳ ತ್ರಿಶಿರನಾದ ಆ ವಿಶ್ವರೂಪನು ಬೂದಿಯ ಕೈಯುಳ್ಳವನಾಗಿ ಆ ದೇವೇಂದ್ರನನ್ನು ನುಂಗಲು ಬಂದನು.

೧೫. ಆಗಲಾ ಮಹೇಂದ್ರನು ಅವನ ಭಯದಿಂದ ಓಡಲು ಮೊದಲಿಟ್ಟನು. ಅದನ್ನು ಕಂಡು ಆ ತ್ರಿಶಿರನ ಬ್ರಹ್ಮಹತ್ಯೆಯೂ ಅವನನ್ನು ಅಟ್ಟಿಹೋಯಿತು.

೧೬–೧೭. ದೇವೇಂದ್ರನು ಎತ್ತ ಓಡಿದರೆ ಅತ್ತಲೇ ಓಡುತ್ತಲೂ, ಅವನು ಎಲ್ಲಿ ನಿಂತರೆ ಅಲ್ಲಿಯೇ ನಿಲ್ಲುತ್ತಲೂ ಆ ಬ್ರಹ್ಮಹತ್ಯೆಯು ಮೈಯ ನೆರಳಿನಂತೆ ಹಿಂಬಾಲಿಸಿ ಬರುತ್ತ ಅವನನ್ನು ಸುತ್ತಿಕೊಳ್ಳುವುದರಲ್ಲಿರಲು ಅವನು ಶೀಘ್ರತ್ವದಲ್ಲಿ ಚಿರಂತನ ಜಲಚರನಾದ ಮತ್ಸ್ಯಮೂರ್ತಿಯಂತೆ ಜಾಗ್ರತೆಯಾಗಿ ನೀರಿನಲ್ಲಿ ಮುಳುಗಿಕೊಂಡನು.

ಏವಂ ದಿವ್ಯ ಶತಂ ಪೂರ್ಣಂ ವರ್ಷಾಣಾಂ ಚ ಶಚೀಪತೇಃ ।
ವಸತಸ್ತಸ್ಯ ದುಃಖೇನ ತಥಾ ಚೈವ ಶತದ್ವಯಂ ।
ಅರಾಜಕಂ ತದಾ ಜಾತಂ ನಾಕಪೃಷ್ಠೇ ಭಯಾವಹಂ ॥ ೧೮ ॥
ತದಾ ಚಿಂತಾನ್ವಿತಾ ದೇವಾ ಋಷಯೋಽಪಿ ತಪಸ್ವಿನಃ ।
ತ್ರೈಲೋಕ್ಯಂ ಚಾಽಽಪದಾಗ್ರಸ್ತಂ ಬಭೂವ ಚ ತದಾ ದ್ವಿಜಾಃ ॥ ೧೯ ॥
ಏಕೋಽಪಿ ಬ್ರಹ್ಮಹಾ ಯತ್ರ ರಾಷ್ಟ್ರೇ ವಸತಿ ನಿರ್ಭಯಃ ।
ಅಕಾಲಮರಣಂ ತತ್ರ ಸಾಧೂನಾಮುಪಜಾಯತೇ ॥ ೨೦ ॥
ರಾಜಾ ಪಾಪಯುತೋ ಯಸ್ಮಿನ್ರಾಷ್ಟ್ರೇ ವಸತಿ ತತ್ರವೈ ।
ದುರ್ಭಿಕ್ಷಂ ಚೈವ ಮರಣಂ ತಥೈವೋಪದ್ರವಾ ದ್ವಿಜಾಃ ॥ ೨೧ ॥
ಭವಂತಿ ಬಹವೋಽನರ್ಥಾಃ ಪ್ರಜಾನಾಂ ನಾಶಹೇತವೇ ।
ತಸ್ಮಾದ್ರಾಜ್ಞಾ ತು ಕರ್ತವ್ಯೋ ಧರ್ಮಃ ಶ್ರದ್ಧಾಪರೇಣ ಹಿ ॥ ೨೨ ॥
ತಥಾ ಪ್ರಕೃತಯೋ ರಾಜ್ಞಃ ಶುಚಿತ್ವೇನ ಪ್ರತಿಷ್ಠಿತಾಃ ।
ಇಂದ್ರೇಣ ಚ ಕೃತಂ ಪಾಪಂ ತೇನ ಪಾಪೇನ ವೈ ದ್ವಿಜಾಃ ।
ನಾನಾವಿಧೈರ್ಮಹಾತಾಪೈಃ ಸೋಪದ್ರವಮಭೂಜ್ಜಗತ್ ॥ ೨೩ ॥

---

೧೮. ಹೀಗೆ ಆ ಮಹೇಂದ್ರನು ದುಃಖದಿಂದ ನೀರಿನಲ್ಲಿ ವಾಸಮಾಡತೊಡಗಲು ಮುನ್ನೂರು ದಿವ್ಯ ವರ್ಷಗಳು ಕಳೆದುಹೋಯಿತು. ಅತ್ತ ಸ್ವರ್ಗಲೋಕದಲ್ಲಿ ಭಯಂಕರವಾದ ಅರಾಜಕವುಂಟಾಯಿತು.

೧೯. ಎಲೈ ವಿಪ್ರರೇ! ಆಗ ದೇವತೆಗಳೂ, ತಪಸ್ವಿಗಳಾದ ಋಷಿಗಳೂ ಚಿಂತೆಗೀಡಾದರು. ಮೂರು ಲೋಕಗಳೂ ಆಪತ್ತಿಗೆ ತುತ್ತಾದುವು.

೨೦–೨೧. ಯಾವ ದೇಶದಲ್ಲಿ ಬ್ರಹ್ಮಹತ್ಯೆ ಮಾಡಿದವನು ಒಬ್ಬನಾದರೂ ಸರಿಯೇ, ನಿರ್ಭಯವಾಗಿರುತ್ತಾನೆಯೋ ಆ ರಾಷ್ಟ್ರದಲ್ಲಿ ಸತ್ಪುರುಷರಿಗೆ ಅಕಾಲದಲ್ಲಿ ಸಾವುಂಟಾಗುತ್ತದೆ. ಯಾವ ರಾಜ್ಯದಲ್ಲಿ ಪಾಪಕರ್ಮಗಳನ್ನು ಮಾಡುವ ರಾಜನು ವಾಸವಾಗಿರುತ್ತಾನೆಯೋ ಆ ರಾಜ್ಯದಲ್ಲಿ ದುರ್ಭಿಕ್ಷವೂ, ಅಕಾಲ ಮರಣಗಳೂ, ರೋಗಾದ್ಯುಪದ್ರವಗಳೂ ಉಂಟಾಗುತ್ತವೆ.

೨೨. ಇಷ್ಟೆಯಲ್ಲದೆ ರಾಜ್ಯದಲ್ಲಿ ಪ್ರಜೆಗಳಿಗೆ ನಾಶಕರವಾದ ಅನೇಕ ಬಗೆಯ ಅನರ್ಥಗಳೂ ಉಂಟಾಗುತ್ತವೆ. ಆದುದರಿಂದ ರಾಜನಾದವನು ಶ್ರದ್ಧಾವಂತನಾಗಿ ಯಾವಾಗಲೂ ಧರ್ಮಕಾರ್ಯಗಳನ್ನೇ ಮಾಡುತ್ತಿರಬೇಕು.

೨೩. ಅದೇ ರೀತಿಯಾಗಿ ಪ್ರಜೆಗಳೂ ಸಹ ರಾಜನ ಶುಚಿತ್ವವನ್ನನುಸರಿಸಿ ಧರ್ಮಪರರಾಗಿರಬೇಕು. ಅಯ್ಯಾ ವಿಪ್ರರೇ! ಇಂದ್ರನೇನೋ ಬ್ರಹ್ಮಹತ್ಯಾ ಪಾತಕವನ್ನು ಮಾಡಿದನಷ್ಟೆ. ಅದರಿಂದ ಪ್ರಪಂಚವೇ ಬಗೆಬಗೆಯ ಮಹಾ ತಾಪಗಳಿಂದಲೂ, ಉಪದ್ರವಗಳಿಂದಲೂ ತುಂಬಿಹೋಯಿತು.

ಶೌನಕ ಉವಾಚ:—

ಅಶ್ವಮೇಧಶತೇನೈವ ಪ್ರಾಪ್ತಂ ರಾಜ್ಯಂ ಮಹತ್ತರಂ ।
ದೇವಾನಾಮಖಿಲಂ ಸೂತ ಕಸ್ಮಾದ್ವಿಘ್ನಮಜಾಯತ ।
ಶಕ್ರಸ್ಯ ಚ ಮಹಾಭಾಗ ಯಥಾವತ್ಕಥಯಸ್ವನಃ ॥ ೨೪ ॥

ಸೂತ ಉವಾಚ:—

ದೇವಾನಾಂ ದಾನವಾನಾಂ ಚ ಮನುಷ್ಯಾಣಾ ವಿಶೇಷತಃ ।
ಕರ್ಮೈರೇವ ಸುಖದುಃಖಾನಾಂ ಹೇತುಭೂತಂ ನ ಸಂಶಯಃ ॥ ೨೫ ॥
ಇಂದ್ರೇಣ ಚ ಕೃತಂ ವಿಪ್ರಾ ಮಹದ್ಭೂತಂ ಜುಗುಪ್ಸಿತಂ ।
ಗುರೋರವಜ್ಞಾ ಚ ಕೃತಾ ವಿಶ್ವರೂಪವಧಃ ಕೃತಃ ॥ ೨೬ ॥
ಗೌತಮಸ್ಯ ಗುರೋಃ ಪತ್ನೀ ಸೇವಿತಾ ತಸ್ಯ ತತ್ಫಲಂ ।
ಪ್ರಾಪ್ತಂ ಮಹೇಂದ್ರೇಣ ಚಿರಂ ಯಸ್ಯ ನಾಸ್ತಿ ಪ್ರತಿಕ್ರಿಯಾ ॥ ೨೭ ॥
ಯೇ ಹಿ ದುಷ್ಕೃತಕರ್ಮಾಣೋ ನ ಕುರ್ವಂತಿ ಚ ನಿಷ್ಕೃತಿಂ ।
ದುರ್ದಶಾಂ ಪ್ರಾಪ್ನುವಂತ್ಯೇತೇ ಯಥೈಚೇಂದಃ ಶತಕ್ರತುಃ ॥ ೨೮ ॥

---

೨೪–೨೬. ಶೌನಕನು ಕೇಳುತ್ತಾನೆ:— "ಅಯ್ಯಾ ಸೂತಪುರಾಣಿಕನೇ! ಮಹೇಂದ್ರನು ನೂರು ಅಶ್ವಮೇಧಯಾಗಗಳನ್ನು ಮಾಡಿಯಲ್ಲವೆ ಮಹತ್ತರವಾದ ದೇವರಾಜ್ಯವನ್ನು ಪಡೆದುದು? ಮಹಾಭಾಗ! ಇಂತಹ ಆ ದೇವೇಂದ್ರನಿಗೂ ಈ ರೀತಿ ವಿಘ್ನವುಂಟಾದುದೆಂತು? ಈ ವಿಷಯವನ್ನು ನಮಗೆ ತಿಳಿಸಬೇಕು" ಎಂಬೀ ಪ್ರಕಾರ ನುಡಿದ ಅವನ ಮಾತನ್ನು ಕೇಳಿ ಲೋಮಶಮುನಿಯು ಅವನನ್ನೂ ಇತರ ಮುನಿಗಳನ್ನೂ ಕುರಿತು ಹೇಳುತ್ತಾನೆ:— ಎಲೈ ವಿಪ್ರರೇ! ದೇವತೆಗಳ ಮತ್ತು ದಾನವರ, ಮುಖ್ಯವಾಗಿ ಮಾನವರ ಸುಖದುಃಖಗಳಿಗೆ ಕರ್ಮವೇ ಕಾರಣವೆಂಬುದರಲ್ಲಿ ಸಂಶಯವಿರುವುದಿಲ್ಲ. ಎಲೈ ಶೌನಕಾದಿಗಳಿರಾ! ಇಂದ್ರನು ಬಹು ಅಸಹ್ಯಕರವಾದ ಪಾಪಗಳನ್ನೆಲ್ಲ ಮಾಡಿದನು. ಗುರುವಾದ ಬೃಹಸ್ಪತ್ಯಾಚಾರ್ಯನನ್ನು ತಿರಸ್ಕರಿಸಿದನು; ಪುರೋಹಿತನಾದ ವಿಶ್ವರೂಪನನ್ನು ವಧಿಸಿದನು.

೨೭. ಗುರುವಾದ ಗೌತಮಮುನಿಯ ಪತ್ನಿ, ಅಹಲ್ಯೆಯನ್ನು ಉಪಭೋಗಿಸಿ ಅದಕ್ಕೆ ತಕ್ಕ ಫಲವನ್ನೂ ಪಡೆದನು. ಈಗಲೂ ಅದಕ್ಕೆ ಪ್ರತೀಕಾರವೇ ಇರುವುದಿಲ್ಲ.

೨೮–೩೦. ಅಯ್ಯಾ ವಿಪ್ರರೇ! ಯಾರು ಪಾಪಗಳನ್ನು ಮಾಡಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳುವುದಿಲ್ಲವೋ ಅವರೆಲ್ಲರೂ ಈ ದೇವೇಂದ್ರನಂತೆ ದುರ್ದಶೆಯನ್ನು ಹೊಂದುತ್ತಾರೆ. ಆದುದರಿಂದ ದುಷ್ಕೃತ್ಯದಿಂದ ಬಂದ ಸಮಸ್ತ ಪಾಪಗಳೂ ನಿವಾರಣೆಯಾಗಲೋಸುಗ ಕರ್ತನಾದವನು ಕೂಡಲೇ ಶಾಸ್ತ್ರೋಕ್ತ

ದುಷ್ಕೃತೋಽಪಾರ್ಜಿತಸ್ಯಾತಃ ಪ್ರಾಯಶ್ಚಿತ್ತಂ ಹಿ ತತ್ಕ್ಷಣಾತ್ ।
ಕರ್ತವ್ಯಂ ವಿಧಿವದ್ವಿಪ್ರಾಃ ಸರ್ವಪಾಪೋಪಶಾಂತಯೇ ॥ ೨೯ ॥
ಉಪಪಾತಕ ಮಧ್ಯಸ್ಥಂ ಮಹಾಪಾತಕಿ ತಾಂ ವ್ರಜೇತ್ ॥ ೩೦ ॥
ತತಃ ಸ್ವಧರ್ಮನಿಷ್ಠಾಂ ಚ ಯೇ ಕುರ್ವಂತಿ ಸದಾ ನರಾಃ ।
ಪ್ರಾತರ್ಮಧ್ಯಾಹ್ನ ಸಾಯಾಹ್ನೇ ತೇಷಾಂ ಪಾಪಂ ವಿನಶ್ಯತಿ ॥ ೩೧ ॥
ಪ್ರಾಪ್ನುವಂತ್ಯುತ್ತಮಂ ಲೋಕಂ ನಾತ್ರ ಕಾರ್ಯಾ ವಿಚಾರಣಾ ।
ತಸ್ಮಾದಸೌ ದುರಾಚಾರಃ ಪ್ರಾಪ್ತೋ ವೈ ಕರ್ಮಣಃ ಫಲಂ ॥ ೩೨ ॥
ಸಪ್ರಧಾರ್ಯ ತದಾ ಸರ್ವೇ ಲೋಕಪಾಲಾಸ್ತ್ವರಾನ್ವಿತಾಃ ।
ಬೃಹಸ್ಪತಿಮುಪಾಗಮ್ಯ ಸರ್ವಮಾತ್ಮನಿಧಿಷ್ಟಿತಂ ।
ಕಥಯಾಮಾಸುರವ್ಯಗ್ರಾ ಇಂದ್ರಸ್ಯ ಚ ಗುರುಂ ಪ್ರತಿ ॥ ೩೩ ॥
ದೇವೈರುಕ್ತವಚೋ ವಿಪ್ರಾ ನಿಶಮ್ಯ ಚ ಬೃಹಸ್ಪತಿಃ ।
ಅರಾಜಕಂ ಚ ಸಂಪ್ರಾಪ್ತಂ ಚಿಂತಯಾಮಾಸ ಬುದ್ಧಿಮಾನ್ ॥ ೩೪ ॥

---

ವಾಗಿ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳಬೇಕು. ಈ ರೀತಿ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದರೆ ಸಣ್ಣಪುಟ್ಟ ಪಾಪಗಳೂ ಮಹಾಪಾತಕಗಳಾಗಿ ಪರಿಣಮಿಸುತ್ತವೆ.

೩೧-೩೨. ಆದುದರಿಂದ ಪ್ರಾಯಶ್ಚಿತ್ತವು ಮುಖ್ಯ. ಯಾವ ಮಾನವರು ನಿತ್ಯವೂ ಬೆಳಗ್ಗೆ, ಮಧ್ಯಾಹ್ನ, ಸಾಯಂಕಾಲ ಎಂಬ ಈ ಮೂರು ಕಾಲಗಳಲ್ಲಿಯೂ ತಂತಮ್ಮ ಧರ್ಮಕ್ಕನುಗುಣವಾಗಿ ಸ್ನಾನ ಸಂಧ್ಯಾವಂದನೆಗಳನ್ನು ಮಾಡುತ್ತಾರೆಯೋ ಅವರ ಪಾಪಗಳೆಲ್ಲವೂ ಅಂದಂದೇ ಕಳೆದುಹೋಗುತ್ತಿರುತ್ತವೆ. ಅವರು ಪುಣ್ಯಭಾಗಿಗಳಾಗಿ ಉತ್ತಮ ಲೋಕಗಳನ್ನೂ ಪಡೆಯುತ್ತಾರೆಯೆಂಬುವರಲ್ಲಿ ಸಂದೇಹವಿರುವುದಿಲ್ಲ. ಎಲೈ ವಿಪ್ರರೇ! ಈ ಮಹೇಂದ್ರನು ತಾನು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಮಾಡಿಕೊಳ್ಳದಿದ್ದುದರಿಂದ ತಾನು ಮಾಡಿದ ಆ ಕರ್ಮಕ್ಕೆ ತಕ್ಕ ಫಲವನ್ನು ಹೊಂದಿದನು.

೩೩. ತರುವಾಯ ಲೋಕಪಾಲಕರೆಲ್ಲರೂ ಜಾಗ್ರತೆಯಾಗಿ ಸಭೆ ಸೇರಿ ಮಾಡಬೇಕಾದ ಕಾರ್ಯವನ್ನು ನಿಶ್ಚಯಿಸಿಕೊಂಡು, ಕೂಡಲೇ ಗುರುಗಳಾದ ಬೃಹಸ್ಪತ್ಯಾಚಾರ್ಯರಲ್ಲಿಗೆ ಬಂದು ಇಂದ್ರನು ಮಾಡಿದ ಪಾಪಕರ್ಮದ ವೃತ್ತಾಂತವೆಲ್ಲವನ್ನೂ ಇದ್ದುದನ್ನಿದ್ದಂತೆಯೇ ನಿಧಾನವಾಗಿ ಆತನಿಗೆ ಅರಿಕೆ ಮಾಡಿದರು.

೩೪. ಈ ರೀತಿ ಆ ದೇವತೆಗಳು ಹೇಳಿದುದೆಲ್ಲವನ್ನೂ ಕೇಳಿ ಮಹಾ ಬುದ್ಧಿಶಾಲಿಯಾದ ಆ ಬೃಹಸ್ಪತಿಯು ದೇವರಾಜ್ಯವು ಅರಾಜಕವಾದುದನ್ನು ಕುರಿತು ಈ ರೀತಿ ಯೋಚಿಸಿದನು.

ಕಿಂ ಕಾರ್ಯಂ ಚಾದ್ಯ ಕರ್ತವ್ಯಂ ಕಥಂ ಶ್ರೇಯೋ ಭವಿಷ್ಯತಿ ।
ದೇವಾನಾಂ ಚಾದ್ಯ ಲೋಕಾನಾಮೃಷೀಣಾಂ ಭಾವಿತಾತ್ಮನಾಂ ॥ ೩೫ ॥
ಮನಸ್ಯೇವ ಚ ತತ್ಸರ್ವಂ ಕಾರ್ಯಾಕಾರ್ಯಂ ವಿಚಾರ್ಯ ಚ ।
ಜಗಾಮ ಶಕ್ರಂ ತ್ವರಿತೋ ದೇವೈಃ ಸಹ ಮಹಾಯಶಾಃ ॥ ೩೬ ॥
ಪ್ರಾಪ್ತೋ ಜಲಾಶಯಂ ತಂ ಚ ಯತ್ರಾಸ್ತೇ ಹಿ ಪುರಂದರಃ ।
ಯಸ್ಯತೀರೇ ಸ್ಥಿತಾ ಹತ್ಯಾ ಚಂಡಾಲೀವ ಭಯಾವಹಾ ॥ ೩೭ ॥
ತತ್ರೋಪವಿಷ್ಟಾಸ್ತೇ ಸರ್ವೇ ದೇವಾ ಋಷಿಗಣಾನ್ವಿತಾಃ ।
ಆಹ್ವಾನಂ ಚ ಕೃತಂ ತಸ್ಯ ಶಕ್ರಸ್ಯ ಗುರುಣಾ ಸ್ವಯಂ ॥ ೩೮ ॥
ಸಮುತ್ಥಿತಸ್ತತಃ ಶಕ್ರೋ ದದರ್ಶ ಸ್ವಗುರುಂ ತದಾ ।
ಬಾಷ್ಪಪೂರಿತವಕ್ತ್ರೋ ಹಿ ಬೃಹಸ್ಪತಿಮಭಾಷತ ॥ ೩೯ ॥
ಪ್ರಣಿಪತ್ಯ ಚ ತತ್ರಸ್ಥಾನ್ಕೃತಾಂಜಲಿಮಭಾಷತ ।
ತದಾ ದೀನಮುಖೋ ಭೂತ್ವಾ ಮನಸಾ ಸಂವಿಮೃಶ್ಯ ಚ ॥ ೪೦ ॥
ಸ್ವಯಮೇವ ಕೃತಂ ಪೂರ್ವಮಜ್ಞಾನಲಕ್ಷಣಂ ಮಹತ್ ।
ಅಥುನೈವ ಮಯಾ ಕಾರ್ಯಂ ಕಿಂ ಕರ್ತವ್ಯಂ ವದ ಪ್ರಭೋ ॥ ೪೧ ॥

---

೩೫–೩೬. "ಈಗ ಯಾವ ಕಾರ್ಯವನ್ನು ಮಾಡಬೇಕು? ಯಾವ ಕಾರ್ಯವನ್ನು ಮಾಡಿದರೆ ದೇವತೆಗಳಿಗೂ, ಸಮಸ್ತ ಲೋಕಗಳಿಗೂ, ಆತ್ಮ ಜ್ಞಾನಿಗಳಾದ ಋಷಿಗಳಿಗೂ ಶ್ರೇಯಸ್ಸುಂಟಾಗುತ್ತದೆ" ಎಂಬಿವೇ ಮೊದಲಾದ ಎಲ್ಲ ವಿಚಾರಗಳನ್ನೂ ಮನಸ್ಸಿನಲ್ಲಿಯೇ ಆಲೋಚಿಸಿಕೊಂಡ ಬಳಿಕ, ಮಹಾ ಯಶಸ್ವಿಯಾದ ಆ ಬೃಹಸ್ಪತಿಯು ಕೂಡಲೇ ದೇವೇಂದ್ರನನ್ನು ನೋಡಿಬರಲು ಹೊರಟನು.

೩೭. ತರುವಾಯ ಆ ದೇವಗುರುವು ದೇವೇಂದ್ರನಡಗಿದ್ದ ಸರೋವರದ ಬಳಿಗೈದಿ, ಅದರ ದಡದಲ್ಲಿಯೇ ಚಂಡಾಲಿಯಂತೆ ಭಯಂಕರವಾಗಿದ್ದ ಆ ಬ್ರಹ್ಮ ಹತ್ಯೆಯೂ ಕುಳಿತಿದ್ದುದನ್ನು ಕಂಡನು.

೩೮. ಆಗ ದೇವತೆಗಳೆಲ್ಲರೂ ಋಷಿಗಳೊಡನೆ ಅಲ್ಲಿಯೇ ಕುಳಿತರು. ಬಳಿಕ ಬೃಹಸ್ಪತಿಯು ತಾನೇ ಆ ದೇವೇಂದ್ರನನ್ನು ಹೊರಗೆ ಬಾರೆಂದು ಕರೆದನು.

೩೯–೪೧. ಆಗಲಾ ದೇವೇಂದ್ರನು ಆ ಸರೋವರದಿಂದ ಮೇಲಕ್ಕೆದ್ದು ಬಂದು ತನ್ನ ಗುರುವನ್ನು ನೋಡಿ ಕಂಬನಿದುಂಬಿದ ಮುಖವುಳ್ಳವನಾಗಿ ಆತನಿಗೆ ಮಣಿದು, ಅಲ್ಲಿದ್ದ ಎಲ್ಲರನ್ನೂ ಕುರಿತು, ಹೇಳಬೇಕಾದುದನ್ನು ತಾನೇ ಮನಸ್ಸಿ ನಲ್ಲಿ ವಿಮರ್ಶೆ ಮಾಡಿಕೊಂಡು, "ಓ ಸ್ವಾಮಿಯೇ! ಪೂರ್ವದಲ್ಲಿ ನಾನಾಗಿಯೇ ತಿಳುವಳಿಕೆಯಿಲ್ಲದೆ ದೊಡ್ಡ ತಪ್ಪನ್ನು ಮಾಡಿದೆನು. ಈಗ ನಾನು ಮಾಡಬೇಕಾದ ಕಾರ್ಯವೇನಿರುವುದು? ಅದನ್ನು ಅಪ್ಪಣೆ ಕೊಡಿಸು" ಎಂದನು.

**ಪ್ರಹಸ್ಯೋವಾಚ ಭಗವಾನ್ಬೃಹಸ್ಪತಿರುದಾರಧೀಃ ।**
**ಪುರಾ ತ್ವಯಾ ಕೃತಂ ಯಚ್ಚ ತಸ್ಯೇದಂ ಕರ್ಮಣಃ ಫಲಂ ॥ ೪೨ ॥**
**ಮಾಂ ಚೋದ್ದಿಶ್ಯ ಭೋ ಇಂದ್ರ ತದ್ಭೋಗಾದೇವ ಸಂಶಯಃ ।**
**ಪ್ರಾಯಶ್ಚಿತ್ತಂ ಹಿ ಹತ್ಯಾಯಾ ನ ದೃಷ್ಟಂ ಸ್ಮೃತಿಕಾರಿಭಿಃ ॥ ೪೩ ॥**
**ಅಜ್ಞಾನತೋ ಹಿ ಯಜ್ಜಾತಂ ಪಾಪಂ ತಸ್ಯ ಪ್ರತಿಕ್ರಿಯಾ ।**
**ಕಥಿತಾ ಧರ್ಮಶಾಸ್ತ್ರಜ್ಞೈಃ ಸಕಾಮಾಯ ನ ವಿದ್ಯತೇ ॥ ೪೪ ॥**
**ಸಕಾಮೇನ ಕೃತಂ ಪಾಪಮಕಾಮಂ ನೈವ ಜಾಯತೇ ।**
**ತಾಭ್ಯಾಂ ವಿಷಯಭೇದೇನ ಪ್ರಾಯಶ್ಚಿತ್ತಂ ವಿಧೀಯತೇ ॥ ೪೫ ॥**
**ಮರಣಾಂತೋ ವಿಧಿಃ ಕಾರ್ಯೋ ಕಾಮೇನ ಹಿ ಕೃತೇನ ಹಿ ।**
**ಅಜ್ಞಾನಜನಿತೇ ಪಾಪೇ ಪ್ರಾಯಶ್ಚಿತ್ತಂ ವಿಧೀಯತೇ ॥ ೪೬ ॥**
**ತಸ್ಮಾತ್ತ್ವಯಾ ಕೃತಂ ಯಚ್ಚ ಸ್ವಯಮೇವ ಹತೋ ದ್ವಿಜಃ ।**
**ಪುರೋಹಿತಶ್ಚ ವಿದ್ವಾಂಶ್ಚ ತಸ್ಮಾನ್ನಾಸ್ತಿ ಪ್ರತಿಕ್ರಿಯಾ ॥ ೪೭ ॥**
**ಯಾವನ್ಮರಣಮಭ್ಯೇತಿ ತಾವದಪ್ಸು ಸ್ಥಿರೋ ಭವ ॥ ೪೮ ॥**
**ಶತಾಶ್ವಮೇಧ ಸಂಜ್ಞಂ ಚ ಯತ್ಫಲಂ ತವ ದುರ್ಮತೇ ।**
**ತನ್ನಷ್ಟಂ ತಕ್ಷಣಾದೇವ ಘಾತಿತೋ ಹಿ ದ್ವಿಜೋ ಯದಾ ॥ ೪೯ ॥**

---

೪೨–೪೪. ಉದಾರಬುದ್ಧಿಯಾದ ಬೃಹಸ್ಪತಿಯು ನಸುನಕ್ಕು, ಅವನನ್ನು ಕುರಿತು ಹೀಗೆ ಹೇಳಿದನು. "ಅಯ್ಯಾ ದೇವೇಂದ್ರನೇ! ನೀನು ಹಿಂದೆ ನನ್ನ ವಿಷಯದಲ್ಲಿ ಮಾಡಿದ ಪಾಪಕ್ಕೆ ಈಗ ನೀನನುಭವಿಸುತ್ತಿರುವುದೇ ಫಲವು. ಅದಂತಿರಲಿ. ಬ್ರಹ್ಮಹತ್ಯೆಗೆ ಸ್ಮೃತಿಕಾರರಾರೂ ಪ್ರಾಯಶ್ಚಿತ್ತವನ್ನು ಹೇಳಿಯೇ ಇಲ್ಲ. ತಿಳುವಳಿಕೆಯಿಲ್ಲದೆ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವುಂಟು. ಅದನ್ನು ಧರ್ಮಶಾಸ್ತ್ರವನ್ನರಿತವರು ಹೇಳಿರುತ್ತಾರೆ. ಆದರೆ ತಿಳಿದೂ ತಿಳಿದೂ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವಿರುವುದಿಲ್ಲ.

೪೫. ತಿಳುವಳಿಕೆಯಿದ್ದು ಮಾಡಿದ ಪಾಪವು ಗೊತ್ತಿಲ್ಲದೆ ಮಾಡಿದುದಾಗುವುದಿಲ್ಲ. ಇದೂ ಅಲ್ಲದೆ ಜ್ಞಾನಾಜ್ಞಾನಗಳಿಂದೆಸಗಿದ ಪಾಪಗಳೆರಡಕ್ಕೂ ವಿಷಯ ಭೇದಗಳಿಂದ ಪ್ರಾಯಶ್ಚಿತ್ತವು ವಿಧಿಸಲಾಗುತ್ತದೆ.

೪೬–೪೯. ಜ್ಞಾನವಿದ್ದು ಮಾಡಿದ ಪಾಪಕ್ಕೆ ಮರಣವೇ ಪ್ರಾಯಶ್ಚಿತ್ತವು. ಅಜ್ಞಾನದಿಂದ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವು ವಿಧಿಸಲಾಗಿದೆ. ಮಹೇಂದ್ರಾ! ನೀನು ತಿಳಿದೇ ಮಾಡಿದ ಕೃತ್ಯದಿಂದ ಬ್ರಾಹ್ಮಣನೂ, ಪುರೋಹಿತನೂ, ವಿದ್ವಾಂಸನೂ ಆದ ಆ ವಿಶ್ವರೂಪನು ಮಡಿದನಲ್ಲವೆ! ಆದುದರಿಂದ ಆ ಪಾಪಕ್ಕೆ ಪ್ರತೀಕಾರವೇ ಇರುವುದಿಲ್ಲ. ಆದಕಾರಣ ನಿನಗೆ ಸಾವು ಬರುವವರೆಗೂ ನೀರಿನಲ್ಲಿ ನೆಲೆಯಾಗಿರು. ಎಲೆವೋ ದುರ್ಬುದ್ಧಿಯೇ! ಯಾವಾಗ ನೀನು ಆ ಬ್ರಾಹ್ಮಣನನ್ನು

**ಸಚ್ಛಿದ್ರೇ ಚ ಯಥಾ ತೋಯಂ ನ ತಿಷ್ಠತಿ ಘಟೇಽಣ್ವಪಿ ।**
**ತಥೈವ ಸುಕೃತಂ ಪಾಪೇ ಹೀಯತೇ ಚ ಪ್ರದಕ್ಷಿಣಂ ॥ ೫೦ ॥**
**ತಸ್ಮಾಚ್ಚ ದೈವಸಂಯೋಗಾತ್ಪ್ರಾಪ್ತಂ ಸ್ವರ್ಗಾದಿಕಂ ಚ ಯೈಃ ।**
**ಯಥೋಕ್ತಂ ತದ್ಭವೇತ್ತೇಷಾಂ ಧರ್ಮಿಷ್ಠಾನಾಂ ನ ಸಂಶಯಃ ॥ ೫೧ ॥**
**ಏತಚ್ಛ್ರುತ್ವಾ ವಚಸ್ತಸ್ಯ ಶಕ್ರೋ ವಚನಮಬ್ರವೀತ್ ।**
**ಕುಕರ್ಮಣಾ ಮದೀಯೇನ ಪ್ರಾಪ್ತಮೇತನ್ನ ಸಂಶಯಃ ॥ ೫೨ ॥**
**ಅಮರಾವತೀಮಾಶು ತ್ವಂ ಗಚ್ಛ ದೇವರ್ಷಿಭಿಃ ಸಹ ।**
**ಲೋಕಾನಾಂ ಕಾರ್ಯಸಿದ್ಧ್ಯರ್ಥೇ ದೇವಾನಾಂ ಚ ಬೃಹಸ್ಪತೇ ।**
**ಇಂದ್ರಂ ಕುರು ಮಹಾಭಾಗ ಯಸ್ತೇ ಮನಸಿ ರೋಚತೇ ॥ ೫೩ ॥**
**ಯಥಾ ಮೃತಸ್ತಥಾಹಂ ವೈ ಬ್ರಹ್ಮಹತ್ಯಾವೃತೋ ಮಹಾನ್ ।**
**ರಾಗದ್ವೇಷಸಮುತ್ಥೇನ ಪಾಪೇನಾಸ್ಮಿ ಪರಿಪ್ಲುತಃ ॥ ೫೪ ॥**
**ತಸ್ಮಾತ್ತ್ವರಾನ್ವಿತಾ ಯೂಯಂ ದೇವರಾಜಾನಮಾಶುವೈ ।**
**ಕುರ್ವಂತು ಮದನುಜ್ಞಾತಾಃ ಸತ್ಯಂ ಪ್ರತಿವದಾಮಿ ವಃ ॥ ೫೫ ॥**

---

ಕೊಂದೆಯೋ ಆಗಲೇ ನೀನು ಮಾಡಿದ್ದ ನೂರು ಅಶ್ವಮೇಧಯಾಗಗಳ ಫಲವು ನಾಶವಾಗಿಹೋಯಿತು.

೫೦. ಒಡೆದ ಮಡಕೆಯಲ್ಲಿ ನೀರು ಹೇಗೆ ನಿಲ್ಲುವುದಿಲ್ಲವೋ ಹಾಗೆಯೇ ಪಾಪಿಯಾದವನಲ್ಲಿ, ಪುಷ್ಕಲವಾದ ದಕ್ಷಿಣೆಗಳೊಡನೆಸಗಿದ ಯಾಗಾದಿ ಪುಣ್ಯ ಕರ್ಮಫಲಗಳೂ ನಿಲ್ಲುವುದಿಲ್ಲವು.

೫೧. ಆದಕಾರಣ ದೈವಾಧೀನದಿಂದಲೇ ಸ್ವರ್ಗಾದಿ ಲೋಕಗಳನ್ನು ಪಡೆದಿರುವ ಧರ್ಮಿಷ್ಠರಿಗೆ ಮಾತ್ರ ಅವು ಹಿಂದೆ ಹೇಳಿದ ರೀತಿಯಲ್ಲಿಯೇ ಲಭಿಸುತ್ತವೆ. ಇದರಲ್ಲಿ ಸಂಶಯವಿಲ್ಲವು.''

೫೨. ಗುರುವಾದ ಬೃಹಸ್ಪತಿಯಾಡಿದ ಈ ಮಾತನ್ನು ಆ ಮಹೇಂದ್ರನು ಕೇಳಿ, ''ನಿಜ! ನಾನು ಮಾಡಿದ ಪಾಪಕೃತ್ಯದಿಂದಲೇ ಈ ಫಲವನ್ನು ಪಡೆದೆನೆಂಬುದರಲ್ಲಿ ಸಂಶಯವಿಲ್ಲವು.

೫೩-೫೫. ಆದುದರಿಂದೆಲೈ ಬೃಹಸ್ಪತಿಯೇ! ನೀನೀಗ ಈ ದೇವರ್ಷಿಗಳೊಡನೆ ದೇವತೆಗಳ ಕಾರ್ಯಸಿದ್ಧಿಗಾಗಿಯೇ ಜಾಗ್ರತೆಯಾಗಿ ಅಮರಾವತಿಗೆ ಹೋಗಿ ನಿನ್ನ ಮನಸ್ಸಿಗೆ ಯಾರು ರುಚಿಸುವರೋ ಅವರನ್ನು ಇಂದ್ರನನ್ನಾಗಿ ಅಭಿಷೇಕ ಮಾಡು. ಬ್ರಹ್ಮಹತ್ಯೆಯೊಡಗೂಡಿದ ನಾನು ಮೃತನಿಗೆ ಸಮಾನನೇ ಆಗಿರುವೆನು. ಈಗ ನಾನು ರಾಗದ್ವೇಷಗಳಿಂದ ಮಾಡಿದ ಪಾಪದಲ್ಲಿ ಮುಳುಗಿ ಹೋಗಿದ್ದೇನೆ. ಇಂತಹ ನನ್ನಿಂದ ಯಾರಿಗೂ ಯಾವ ಪ್ರಯೋಜನವೂ ಆಗಲಾರದು. ಆದುದರಿಂದ ನೀವುಗಳೆಲ್ಲರೂ ಜಾಗ್ರತೆಯಾಗಿ ಅಮರಾವತಿಗೆ

**ಏವಮುಕ್ತ್ವಾಸ್ತದಾ ಸರ್ವೇ ಬೃಹಸ್ಪತಿಪುರೋಗಮಾಃ ।**
**ಏತ್ಯಾಮರಾವತೀಂ ತೂರ್ಣಂ ಪುರಂದರವಿಚೇಷ್ಟಿತಂ ।**
**ಕಥಯಾಮಾಸುರವ್ಯಗ್ರಾಃ ಶಚೀಂ ಪ್ರತಿ ಯಥಾತಥಾ ॥ ೫೬ ॥**
**ರಾಜ್ಯಸ್ಯ ಹೇತೋಃ ಕಿಂ ಕಾರ್ಯಂ ವಿಮೃಶಂತಃ ಪರಸ್ಪರಂ ॥ ೫೭ ॥**
**ಏವಂ ವಿಮೃಶಮಾನಾನಾಂ ದೇವಾನಾಂ ತತ್ರ ನಾರದಃ ।**
**ಯದೃಚ್ಛಯಾಗತಸ್ತತ್ರ ದೇವರ್ಷಿರಮಿತದ್ಯುತಿಃ ॥ ೫೮ ॥**
**ಉವಾಚ ಪೂಜಿತೋ ದೇವಾನ್ಕಸ್ಮಾದ್ಯೂಯಂ ವಿಚೇತಸಃ ।**
**ತೇನೋಕ್ತಾಃ ಕಥಯಾಮಾಸುಃ ಸರ್ವಂ ಶಕ್ರಸ್ಯ ಚೇಷ್ಟಿತಂ ॥ ೫೯ ॥**
**ಗತಿಮಿಂದ್ರಸ್ಯ ಚೇಂದ್ರತ್ವಮೇನಸಾ ಪರಮೇಣತು ।**
**ತತಃ ಪ್ರೋವಾಚ ತಾನ್‌ದೇವಾನ್‌ದೇವರ್ಷಿರ್ನಾರದೋ ವಚಃ ॥ ೬೦ ॥**
**ಯೂಯಂ ದೇವಾಶ್ಚ ಸರ್ವಜ್ಞಾಸ್ತಪಸಾ ವಿಕ್ರಮೇಣ ಚ ।**
**ತಸ್ಮಾದಿಂದ್ರೋ ಹಿ ಕರ್ತವ್ಯೋ ನಹುಷಃ ಸೋಮವಂಶಜಃ ॥ ೬೧ ॥**

---

ಹೋಗಿ ನನ್ನ ಒಪ್ಪಿಗೆಯಿಂದಲೇ ಯಾರನ್ನಾದರೂ ದೇವರಾಜನನ್ನಾಗಿಸಿರಿ. ಈ ಮಾತನ್ನು ನಾನು ಸತ್ಯವಾಗಿ ಹೇಳುತ್ತಿದ್ದೇನೆ'' ಎಂದು ಹೇಳಿದನು.

೫೬. ಮಹೇಂದ್ರನಿಂತು ನುಡಿಯಲು, ಆ ದೇವತೆಗಳೆಲ್ಲರೂ ಆ ಬೃಹಸ್ಪತಿಯೊಡನೆ ಅಮರಾವತಿಗೈತಂದು ಶಚೀದೇವಿಯನ್ನು ಕಂಡು ಆಕೆಗೆ ಮಹೇಂದ್ರನು ಹೇಳಿದುದೆಲ್ಲವನ್ನೂ ಇದ್ದುದನ್ನಿದ್ದಂತೆ ಅರಿಕೆ ಮಾಡಿದರು.

೫೭. ತರುವಾಯ ಅವರೆಲ್ಲರೂ ರಾಜ್ಯಕ್ಕೋಸುಗ ಮಾಡಬೇಕಾದ ಕಾರ್ಯವೇನೆಂದು ತಮ್ಮಲ್ಲಿಯೇ ವಿಮರ್ಶೆಮಾಡತೊಡಗಿದರು.

೫೮. ಅವರಿಂತು ಆಲೋಚಿಸುತ್ತಿರುವಂತೆಯೇ ದೇವರ್ಷಿಯೂ, ಮಹಾತೇಜಸ್ವಿಯೂ ಆದ ನಾರದನು ಇದ್ದಕ್ಕಿದ್ದಂತೆಯೇ ಅಲ್ಲಿಗೆ ಬಂದನು.

೫೯-೬೨. ದೇವತೆಗಳೆಲ್ಲರೂ ಪೂಜಿಸಿ ಗೌರವಿಸಿದ ಬಳಿಕ ಆತನು ಮನಕುಗ್ಗಿರುವ ಅವರೆಲ್ಲರನ್ನೂ ಕುರಿತು ಏನು ವಿಚಾರವೆಂದು ಕೇಳಿದನು. ಅದಕ್ಕೆ ಅವರು ಮಹೇಂದ್ರನ ವೃತ್ತಾಂತವೆಲ್ಲವನ್ನೂ ತಿಳಿಸಿ, ''ಎಲೈ ಮುನಿಯೇ! ಈಗ ಇಂದ್ರನ ಇಂದ್ರತ್ವವೇ ಮಹತ್ತರವಾದ ಆ ಬ್ರಹ್ಮಹತ್ಯೆಯ ದೆಸೆಯಿಂದ ನಾಶವಾಗಿಹೋಗಿದೆ'' ಎಂದರು. ಆಗ ದೇವರ್ಷಿಯು ಅವರನ್ನು ಕುರಿತು, ''ಅಯ್ಯಾ ದೇವತೆಗಳಿರಾ! ನೀವೆಲ್ಲರೂ ತಪಸ್ಸಿನಿಂದಲೂ, ಪರಾಕ್ರಮದಿಂದಲೂ ಸರ್ವಜ್ಞರಾಗಿರುವವರು. ನಿಮಗೆ ತಿಳಿಯದ ವಿಷಯವೇನಿರುವುದು? ಆದರೂ ನಾನು ಹೇಳಬೇಕಾದುದನ್ನು ಹೇಳುತ್ತೇನೆ; ಕೇಳಿರಿ. ಈಗ ನೀವು ಚಂದ್ರವಂಶದವನಾದ ನಹುಷನನ್ನು ಇಂದ್ರನನ್ನಾಗಿ ಮಾಡಬೇಕು. ಅವನನ್ನು ಕರೆತಂದು ಈ ದೇವರಾಜ್ಯದಲ್ಲಿ ಜಾಗ್ರತೆಯಾಗಿ ಅಭಿಷೇಕ ಮಾಡಿರಿ. ಅಯ್ಯಾ

ಸೋऽಸ್ಮಿನ್ರಾಷ್ಟ್ರೇ ಪ್ರತಿಷ್ಠಾಪ್ಯಸ್ತ್ವರಿತೇನೇವ ನಿರ್ಜರಾಃ ।
ಏಕೋನಮಶ್ವಮೇಧಾನಾಂ ಶತಂ ತೇನ ಮಹಾತ್ಮನಾ ।
ಕೃತಮಸ್ತಿ ಮಹಾಭಾಗಾ ನಹುಷೇಣ ಚ ಯಜ್ವನಾ ॥ ೬೨ ॥
ಶಚ್ಯಾ ಶ್ರುತಂ ತದ್ವಾಕ್ಯಂ ನಾರದಸ್ಯ ಮುಖೋದ್ಗತಂ ।
ಗತಾಂತಃಪುರಮುದ್ವಿಗ್ನಾ ಬಾಷ್ಪಪೂರಿತಲೋಚನಾ ॥ ೬೩ ॥
ನಾರದಸ್ಯ ವಚಃ ಶ್ರುತ್ವಾ ಸರ್ವೇ ದೇವಾಃ ನ್ವಮೋದಯನ್ ॥ ೬೪ ॥
ನಹುಷಂ ರಾಜ್ಯಮಾರೋಢುಮೈಕಪದ್ಯೇನ ತೇ ಯದಾ ।
ಆನೀತೋ ಹಿ ತದಾ ರಾಜಾ ನಹುಷೋ ಹ್ಯಮರಾವತೀಂ ॥ ೬೫ ॥
ರಾಜ್ಯಂ ದತ್ತಂ ಮಹೇಂದ್ರಸ್ಯ ಸುರೈಃ ಸರ್ವೈರ್ಮಹರ್ಷಿಭಿಃ ।
ತದಾಗಸ್ತ್ಯಾದಯಃ ಸರ್ವೇ ನಹುಷಂ ಪರ್ಯುಪಾಸತ ॥ ೬೬ ॥
ಗಂಧರ್ವಾಪ್ಸರಸೋ ಯಕ್ಷವಿದ್ಯಾಧರ ಮಹೋರಗಾಃ ।
ಯಕ್ಷಾಃ ಸುಪರ್ಣಾಃ ಪತಗಾ ಯೇ ಚಾನ್ಯೇ ಸ್ವರ್ಗವಾಸಿನಃ ॥ ೬೭ ॥
ತದಾ ಮಹೋತ್ಸವೋ ಜಾತೋ ದೇವಪುರ್ಯಾಂ ನಿರಂತರಃ ।
ಶಂಖತೂರ್ಯಮೃದಂಗಾನಿ ನೇದುರ್ದುಂದುಭಯಃ ಸಮಂ ॥ ೬೮ ॥
ಗಾಯಕಾಶ್ಚ ಜಗುಸ್ತತ್ರ ತದಾ ವಾದ್ಯಾನಿ ವಾದಕಾಃ ।
ನರ್ತಕಾ ನನೃತುಸ್ತತ್ರ ತಥಾ ರಾಜ್ಯಮಹೋತ್ಸವೇ ॥ ೬೯ ॥

---

ಪುಣ್ಯಾತ್ಮರಿರಾ! ಆ ಮಹಾತ್ಮನೂ ಸೋಮಯಾಜಿಯಾಗಿ ಒಂದು ಕಡಮೆಯಾಗಿ ನೂರು ಅಶ್ವಮೇಧಯಾಗಗಳನ್ನು ಮಾಡಿರುವನು" ಎಂದು ಹೇಳಿದನು.

೬೩. ಅಯ್ಯಾ ಮುನಿಗಳಿರಾ! ಈ ರೀತಿ ನುಡಿದ ನಾರದಮುನಿಯ ಮಾತು ಶಚೀದೇವಿಗೆ ಕೇಳಿಸಿತು. ಆಕೆಯು ಕೂಡಲೇ ಕಣ್ಣೀರಿಡುತ್ತ ಅಂತಃಪುರಕ್ಕೆ ಹೊರಟುಹೋದಳು.

೬೪–೬೭. ದೇವತೆಗಳೆಲ್ಲರೂ ನಾರದನ ಈ ಮಾತನ್ನು ಅನುಮೋದಿಸಿದರು. ಕೂಡಲೇ ಅವರೆಲ್ಲರೂ ನಹುಷನನ್ನು ಇಂದ್ರಪಟ್ಟಕ್ಕೇರಿಸಲು ಕೂಡಲೇ ಹೋಗಿ ಅವನನ್ನು ಕರೆತಂದರು. ಬಳಿಕ ದೇವತೆಗಳೂ, ಮಹರ್ಷಿಗಳೂ ಎಲ್ಲರೂ ಸೇರಿ ಅವನಿಗೆ ಮಹೇಂದ್ರನ ರಾಜ್ಯವನ್ನು ಕೊಟ್ಟರು. ಆಗ ಅಗಸ್ತ್ಯನೇ ಮೊದಲಾದ ಮಹರ್ಷಿಗಳೂ, ಗಂಧರ್ವರೂ, ಅಪ್ಸರರೂ, ಯಕ್ಷವಿದ್ಯಾಧರಪನ್ನಗರೂ, ಗರುಡರೂ, ಪತಗರೂ, ಇನ್ನೂ ಇತರ ಸ್ವರ್ಗವಾಸಿಗಳೂ ಆ ನಹುಷನನ್ನು ಓಲೈಸಿದರು.

೬೮–೬೯. ಆಗ ಅಮರಾವತಿಯಲ್ಲಿ ಬಹುಕಾಲ ನಿರಂತರವಾದ ಮಹೋತ್ಸವವು ಬೆಳೆಯಿತು. ಶಂಖ, ತುತ್ತೂರಿ, ಮೃದಂಗ ದುಂದುಭಿ ಮೊದಲಾದ ವಾದ್ಯಗಳು ಭೋರ್ಗರೆದವು. ದೇವಗಾಯಕರೆಲ್ಲರೂ ಗಾನಮಾಡಿದರು.

ಅಭಿಷೇಕಸ್ತದಾ ತತ್ರ ಬೃಹಸ್ಪತಿಪುರೋಗಮೈಃ ॥ ೭೦ ॥
ಅರ್ಚಿತೋ ದೇವಸೂಕ್ತೈಶ್ಚ ಯಥಾವದ್ಗ್ರಹಪೂಜನಂ ।
ಕೃತವಾಂಶ್ಚೈವ ಋಷಿಭಿರ್ವಿದ್ವದ್ಭಿರ್ಭಾವಿತಾತ್ಮಭಿಃ ॥ ೭೧ ॥
ತಥಾ ಚ ಸರ್ವೈಃ ಪರಿಪೂಜಿತೋ ಮಹಾ-
ನ್ರಾಜಾ ಸುರಾಣಾಂ ನಹುಷಸ್ತದಾನೀಂ ।
ಇಂದ್ರಾಸನೇ ಚೇಂದ್ರಸಮಾನರೂಪಃ
ಸಂಸ್ತೂಯಮಾನಃ ಪರಮೇಣ ವರ್ಚಸಾ ॥ ೭೨ ॥
ಸುಗಂಧ ದೀಪೈಶ್ಚ ಸುವಾಸನಾಯುತೋಽ-
ಲಂಕಾರಭೋಗೈಃ ಸುವಿರಾಜಿತಾಂಗಃ ।
ಬಭೌ ತದಾನೀಂ ನಹುಷೋ ಮುನೀಂದ್ರೈಃ
ಸಂಸ್ತೂಯಮಾನೋ ಹಿ ತಥಾಽಸುರೇಂದ್ರೈಃ ॥ ೭೩ ॥
ಇತಿ ಪರಮ ಕಲಾನ್ವಿತೋಽಸೌ
ಸುರಮುನಿ ವರಗಣೈಶ್ಚ ಪೂಜ್ಯಮಾನಃ ।
ನಹುಷ ನೃಪವರೋಽಭವತ್ತದಾನೀಂ
ಹೃದಿ ಮಹತಾ ಹೃಚ್ಛಯೇನ ತಪ್ತಃ ॥ ೭೪ ॥

ನಹುಷ ಉವಾಚ :—

ಇಂದ್ರಾಣೀ ಕಥಮದ್ಯೈವ ನಾಯಾತಿ ಮಮ ಸನ್ನಿಧೌ ।
ತಾಂಚಾಹ್ವಯತ ಶೀಘ್ರಂ ಭೋ ಮಾ ವಿಲಂಬಿತುಮರ್ಹಥ ॥ ೭೫ ॥

---

ಅಂತೆಯೇ ಇತರ ದೇವವಾದ್ಯಗಾರರು ವಾದ್ಯಗಳನ್ನು ಬಾಜಿಸಿದರು. ನರ್ತಕರು ಆ ನಹುಷನ ರಾಜ್ಯಾಭಿಷೇಕ ಮಹೋತ್ಸವದಲ್ಲಿ ನರ್ತನ ಮಾಡಿದರು.

೭೦–೭೫. ಈ ರೀತಿ ಆ ನಹುಷನು ಬೃಹಸ್ಪತಿಯೇ ಮೊದಲಾದವರಿಂದ ಇಂದ್ರಪದವಿಯಲ್ಲಿ ಪಟ್ಟಾಭಿಷಿಕ್ತನಾಗಿ, ದೇವಸೂಕ್ತಗಳಿಂದ ಪೂಜಿತನಾಗಿ ವಿದ್ವಾಂಸರೂ, ಜ್ಞಾನಿಗಳೂ ಆದ ಮಹರ್ಷಿಗಳೊಡಗೂಡಿ ಶಾಸ್ತ್ರೋಕ್ತವಾಗಿ ಗ್ರಹಪೂಜೆಯನ್ನು ಮಾಡಿದನು. ಅಂತೆಯೇ ಆ ರಾಜನು ದೇವತೆಗಳೆಲ್ಲರಿಂದಲೂ ಪೂಜಿತನಾಗಿ ಅವರಿಗೆ ದೊರೆಯಾಗಿ ಸ್ವರ್ಗ ಸಿಂಹಾಸನದಲ್ಲಿ ಕುಳಿತು ಇಂದ್ರನಿಗೆ ಸಮಾನವಾದ ರೂಪವುಳ್ಳವನಾಗಿ, ಆ ಮಹಾ ತೇಜಸ್ಸಿನಿಂದಲೇ ಎಲ್ಲರಿಂದಲೂ ಸಂಸ್ತೂಯಮಾನನಾಗಿ, ಸುಗಂಧವನ್ನು ಬೀರುತ್ತಿರುವ ದೀಪಗಳಿಂದಲೂ, ಒಳ್ಳೆಯ ಪಟ್ಟುವಸ್ತ್ರಗಳಿಂದಲೂ, ಇತರ ಅಲಂಕಾರ ಭೋಗಗಳಿಂದಲೂ ಬೆಳಗುತ್ತಿರುವ ದೇಹವುಳ್ಳವನಾಗಿ ದೇವಮುನಿಗಳೂ, ಸುರಶ್ರೇಷ್ಠರೂ ತನ್ನನ್ನು ಹೊಗಳುತ್ತಿರಲು ಬಹಳವಾಗಿ ಬೆಳಗಿದನು. ಹೀಗೆ ಶ್ರೇಷ್ಠವಾದ ಸಮಸ್ತ ಕಳೆಗಳಿಂದಲೂ ಕೂಡಿ, ಸುರಮುನಿಶ್ರೇಷ್ಠರ ಸಮೂಹದಿಂದ

**ನಹುಷಸ್ಯ ವಚಃ ಶ್ರುತ್ವಾ ಬೃಹಸ್ಪತಿರುದಾರಧೀಃ ।**
**ಶಚೀಭವನಮಾಸಾದ್ಯ ಉವಾಚ ಚ ಸವಿಸ್ತರಂ ॥ ೭೬ ॥**
**ಶಕ್ರಸ್ಯ ದುರ್ನಿಮಿತ್ತೇನ ಹ್ಯಾನೀತೋ ನಹುಷೋಽತ್ರವೈ ।**
**ರಾಜ್ಯಾರ್ಥೇ ಭಾಮಿನೀ ತ್ವಂ ಚ ಅರ್ಧಾಸನಗತಾಭವ ॥ ೭೭ ॥**
**ಶಚೀ ಪ್ರಹಸ್ಯ ಚೋವಾಚ ಬೃಹಸ್ಪತಿಮಕಲ್ಮಷಂ ।**
**ಅಸೌ ನ ಪರಿಪೂರ್ಣೋ ಹಿ ಯಜ್ಞೈಃ ಶಕ್ರಾಸನೇ ಸ್ಥಿತಃ ।**
**ಏಕೋನಮಶ್ವಮೇಧಾನಾಂ ಶತಂ ಕೃತಮನೇನ ವೈ ॥ ೭೮ ॥**
**ತಸ್ಮಾನ್ನಯೋಗ್ಯೋ ಮಾಂ ಪ್ರಾಪ್ತುಂ ತತ್ತ್ವತೋಹಿ ವಿಮೃಶ್ಯತಾಂ ।**
**ಯದಿ ಮಾಂ ಸಾಭಿಲಾಷೋಹಿ ಪರಸ್ತ್ರಿಯಮಚೇತನಃ ।**
**ಆವಾಹ್ಯ ವಾಹನೇನೈವ ಅತ್ರಾಗತ್ಯ ಲಭೇತ ಮಾಂ ॥ ೭೯ ॥**
**ತಥೇತಿ ಗತ್ವಾ ತ್ವರಿತೋ ಬೃಹಸ್ಪತಿರುವಾಚ ತಂ ।**
**ನಹುಷಂ ಕಾಮಸಂತಪ್ತಂ ಶಚ್ಯೋಕ್ತಂ ಚ ಯಥಾತಥಂ ॥ ೮೦ ॥**

---

ಪೂಜೆಗೊಂಡ ಆ ನಹುಷನೃಪಾಲನು ಕಾಮಪಿಪಾಸೆಯಿಂದ ಮನಸ್ಸಿನಲ್ಲಿಯೇ ಬೇಯುತ್ತ, "ಎಲೈ ದೇವತೆಗಳಿರಾ! ಇಂದ್ರಾಣಿಯು ನನ್ನ ಬಳಿಗೇಕೆ ಬರಲಿಲ್ಲ. ಅವಳನ್ನು ಜಾಗ್ರತೆಯಾಗಿ ಕರೆದು ತನ್ನಿರಿ. ತಡಮಾಡಬೇಡಿರಿ" ಎಂದನು.

೭೬–೭೭. ಈ ರೀತಿ ನುಡಿದ ಆತನ ಮಾತನ್ನು ಕೇಳಿ ಮಹಾಬುದ್ಧಿಶಾಲಿಯಾದ ಬೃಹಸ್ಪತಿಯು ಕೂಡಲೇ ಶಚೀದೇವಿಯ ಭವನಕ್ಕೆ ಬಂದು ಅವಳಿಗೆ ಈ ವೃತ್ತಾಂತವನ್ನು ವಿಸ್ತಾರವಾಗಿ ತಿಳಿಸಿ ಆಕೆಯನ್ನು ಕುರಿತು, "ಎಲೆ ಭಾಮಿನಿ! ದೇವೇಂದ್ರನ ದುರಾಚಾರದ ಸಲುವಾಗಿ ಅವನ ಇಂದ್ರತ್ವವು ನಾಶವಾದುದರಿಂದ ನಹುಷನನ್ನು ಇಂದ್ರನನ್ನಾಗಿ ಇಲ್ಲಿಗೆ ಕರೆತಂದುದಾಯಿತು. ಈಗ ನೀನು ಅವನೊಡನೆ ಅರ್ಧಾಸನವನ್ನಲಂಕರಿಸು" ಎಂದನು.

೭೮–೮೦. ಆಗ ಶಚಿಯು ನಿಷ್ಕಲ್ಮಷನಾದ ಆ ಬೃಹಸ್ಪತಿಯನ್ನು ಕುರಿತು, ನಸುನಕ್ಕು, "ಎಲೈ ಗುರುವೇ! ಈ ನಹುಷನು ನೂರು ಅಶ್ವಮೇಧಗಳನ್ನು ಪೂರ್ತಿಯಾಗಿ ಮಾಡದೆಯೇ ಇಂದ್ರಪದವಿಯನ್ನೇರಿರುವನು. ಇವನು ತೊಂಬತ್ತೊಂಬತ್ತು ಯಾಗಗಳನ್ನು ಮಾತ್ರವೇ ಮಾಡಿರುವನಲ್ಲವೆ? ಆದುದರಿಂದ ನನ್ನನ್ನು ಪಡೆಯಲು ಇವನು ಯೋಗ್ಯನೇ ಅಲ್ಲವು. ಚೆನ್ನಾಗಿ ವಿಮರ್ಶಿಸುವವನಾಗು. ಹೇಗಾದರೂ ಆಗಲಿ, ಅವನು ತಿಳಿಗೇಡಿಯಾಗಿ ಪರಸ್ತ್ರೀಯಾದ ನನ್ನನ್ನು ಕಾಮಿಸುವುದಾದರೆ ಅವನೇ ವಾಹನವನ್ನೇರಿ ಬಂದು ನನ್ನನ್ನು ಹೊಂದಲಿ" ಎಂದು ಹೇಳಿದಳು. ಬೃಹಸ್ಪತಿಯು ಹಾಗೆಯೇ ಆಗಲೆಂದು ಹೇಳಿ ನಹುಷನ ಬಳಿಗೆ ಬಂದು ಕಾಮಸಂತಪ್ತನಾದ ಅವನಿಗೆ ಶಚೀದೇವಿಯು ಹೇಳಿದ ಮಾತುಗಳೆಲ್ಲವನ್ನೂ ಇದ್ದುದನ್ನಿದ್ದಂತೆಯೇ ತಿಳಿಸಿದನು.

ತಥೇತಿ ಮತ್ವಾ ರಾಜಾಸೌ ನಹುಷಃ ಕಾಮಮೋಹಿತಃ ।
ವಿಮೃಶ್ಯ ಪರಯಾ ಬುದ್ಧ್ಯಾ ಅವಾಹ್ಯಂ ಕಿಂ ಪ್ರಶಸ್ಯತೇ ॥ ೮೧ ॥
ಸ ಬುದ್ಧ್ಯಾ ಚ ಚಿರಂ ಸ್ಮೃತ್ವಾ ಬ್ರಾಹ್ಮಣಾಶ್ಚ ತಪಸ್ವಿನಃ ।
ಅವಾಹ್ಯಾಶ್ಚ ಭವಂತ್ಯಸ್ಮಾದಾತ್ಮಾನಂ ವಾಹಯಾಮ್ಯಹಂ ॥ ೮೨ ॥
ದ್ವಾಭ್ಯಾಂ ಚ ತಸ್ಯಾಃ ಪ್ರಾಪ್ತ್ಯರ್ಥಮಿತಿ ಮೇ ಹೃದಿವರ್ತತೇ ।
ಶಿಬಿಕಾಂ ಚ ದದೌ ತಾಭ್ಯಾಂ ದ್ವಿಜಾಭ್ಯಾಂ ಕಾಮಮೋಹಿತಃ ॥ ೮೩ ॥
ಉಪವಿಶ್ಯ ತದಾ ತಸ್ಯಾಂ ಶಿಬಿಕಾಯಾಂ ಸಮಾಹಿತಃ ।
ಸರ್ಪ ಸರ್ಪೇತಿ ವಚನಾನ್ನೋದಯಾಮಾಸ ತೌ ತದಾ ॥ ೮೪ ॥
ಅಗಸ್ತ್ಯಃ ಶಿಬಿಕಾವಾಹೀ ತತಃ ಕ್ರುದ್ಧೋಽಶಪನ್ನೃಪಂ ।
ವಿಪ್ರಾಣಾಮವಮಂತಾತ್ವಮುನ್ಮತ್ತೋಽಜಗರೋ ಭವ ॥ ೮೫ ॥
ಶಾಪೋಕ್ತಿಮಾತ್ರತೋ ರಾಜಾ ಪತಿತೋ ಬ್ರಾಹ್ಮಣಸ್ಯ ಹಿ ।
ತತ್ರೈವಾಜಗರೋ ಭೂತ್ವಾ ವಿಪ್ರಶಾಪೋ ದುರತ್ಯಯಃ ॥ ೮೬ ॥
ಯಥಾ ಹಿ ನಹುಷೋ ಜಾತಸ್ತಥಾ ಸರ್ವೇಽಪಿ ತಾದೃಶಾಃ ।
ವಿಪ್ರಾಣಾಮವಮಾನೇನ ಪತಂತಿ ನಿರಯೇಽಶುಚೌ ॥ ೮೭ ॥

---

೮೧–೮೪. ಕೇವಲ ಕಾಮಮೋಹಿತನಾದ ಆ ರಾಜನು ಹಾಗೆಯೇ ಆಗಲೆಂದೊಪ್ಪಿಕೊಂಡು, "ಶಚಿಯ ಭವನಕ್ಕೆ ಹೋಗಲು ಯಾವ ವಾಹನವು ಶ್ರೇಷ್ಠವಾದುದು" ಎಂದು ತನ್ನ ಮನಸ್ಸಿನಲ್ಲಿಯೇ ಚೆನ್ನಾಗಿ ಆಲೋಚಿಸಿ, "ತಪಸ್ವಿಗಳಾದ ಈ ಬ್ರಾಹ್ಮಣರು ನನ್ನ ವಾಹನವನ್ನು ಹೊರುತ್ತಾರೆ. ಇವರಿಂದಲೇ ಅದನ್ನು ಹೊರಸಿಕೊಂಡು ಅಲ್ಲಿಗೆ ಹೋಗುತ್ತೇನೆ. ಆ ಶಚಿಯನ್ನು ಹೊಂದಲು ಇಬ್ಬರು ಬ್ರಾಹ್ಮಣರಿಂದ ನನ್ನ ಪಲ್ಲಕ್ಕಿಯನ್ನು ಹೊರಸಿಕೊಂಡು ಹೋಗಬೇಕೆಂದು ನನಗೆ ಮನಸ್ಸಿರುವುದು" ಎಂದು ನಿಶ್ಚಯಿಸಿಕೊಂಡನು. ತರುವಾಯ ಕಾಮಮೋಹಿತನಾದ ಅವನು ಮಹರ್ಷಿಗಳಿರ್ವರ ಮೇಲೆ ಪಲ್ಲಕ್ಕಿಯನ್ನು ಹೊರಿಸಿ ಅದರಲ್ಲಿ ನಿರಾತಂಕವಾಗಿ ಕುಳಿತುಕೊಂಡು "ನಡೆಯಿರಿ, ನಡೆಯಿರಿ!" (ಸರ್ಪ ಸರ್ಪ) ಎಂದು ಅವರನ್ನು ತ್ವರೆಗೊಳಿಸಿದನು.

೮೫–೮೬. ಆಗ, ಆ ವಾಹಕರಲ್ಲೊಬ್ಬನಾದ ಅಗಸ್ತ್ಯಮಹರ್ಷಿಯು ಬಹಳವಾಗಿ ಕೋಪಗೊಂಡು, "ಬ್ರಾಹ್ಮಣರನ್ನು ಅಪಮಾನಗೊಳಿಸುವ ಉನ್ಮತ್ತನೇ! ನೀನು ಈಗಲೇ ಅಜಗರವಾಗಿ ಹೋಗು" ಎಂದು ಅವನನ್ನು ಶಪಿಸಿದನು. ಆತನ ಶಾಪವಚನದಿಂದ ಆ ನಹುಷನು ಅಲ್ಲಿಯೇ ಅಜಗರವಾಗಿ ಬಿದ್ದುಹೋದನು. ಅಯ್ಯಾ ಶೌನಕಾದಿಗಳಿರಾ! ಬ್ರಾಹ್ಮಣ ಶಾಪವು ಮೀರಲಸದಳವಾದುದಷ್ಟೆ!

೮೭. ಬ್ರಾಹ್ಮಣರನ್ನು ಅಪಮಾನಗೊಳಿಸಿದವರೆಲ್ಲರೂ ನಹುಷನಂತೆಯೇ ಅಶುಚಿಯಾದ ನರಕದಲ್ಲಿ ಬೀಳುತ್ತಾರೆ.

ತಸ್ಮಾತ್ಸರ್ವಪ್ರಯತ್ನೇನ ಪದಂ ಪ್ರಾಪ್ಯ ವಿಚಕ್ಷಣೈಃ ।
ಅಪ್ರಮತ್ತೈರ್ನರೈರ್ಭಾವ್ಯಮಿಹಾಮುತ್ರ ಚ ಲಬ್ಧಯೇ ॥ ೮೮ ॥
ತಥೈವ ನಹುಷಃ ಸರ್ಪೋ ಜಾತೋಽರಣ್ಯೇ ಮಹಾಭಯೇ ।
ಏವಂ ಚೈವಾಭವತ್ತತ್ರ ದೇವಲೋಕೇ ಹ್ಯರಾಜಕಂ ॥ ೮೯ ॥
ತಥೈವ ತೇ ಸುರಾಃ ಸರ್ವೇ ವಿಸ್ಮಯಾವಿಷ್ಟಚೇತಸಃ ।
ಅಹೋ ಬತಮಹತ್ಕಷ್ಟಂ ಪ್ರಾಪ್ತಂ ರಾಜ್ಞಾಹ್ಯನೇನ ವೈ ॥ ೯೦ ॥
ನ ಮರ್ತ್ಯಲೋಕೋ ನ ಸ್ವರ್ಗೋ ಜಾತೋಽಹ್ಯಸ್ಯ ದುರಾತ್ಮನಃ ।
ಸತಾಮವಜ್ಞಯಾ ಸದ್ಯಃ ಸುಕೃತಂ ದಗ್ಧಮೇವ ಹಿ ॥ ೯೧ ॥
ಯಾಜ್ಞಿಕೋ ಹ್ಯಪರೋ ಲೋಕೇ ಕಥ್ಯತಾಂ ಚ ಮಹಾಮುನೇ ।
ತದೋವಾಚ ಮಹಾತೇಜಾ ನಾರದೋ ಮುನಿಸತ್ತಮಃ ॥ ೯೨ ॥
ಯಯಾತಿಂ ಚ ಮಹಾಭಾಗಾ ಆನಯುಧ್ವಂ ತ್ವರಾನ್ವಿತಾಃ ।
ದೇವದೂತಾಸ್ತು ವೈ ತೂರ್ಣಂ ಯಯಾತಿಂ ದ್ರುತಮಾನಯನ್ ॥ ೯೩ ॥
ವಿಮಾನಮಾರುಹ್ಯ ತದಾ ಮಹಾತ್ಮಾ
ಯಯೌ ದಿವಂ ದೇವದೂತೈಃ ಸಮೇತಃ ।
ಪುರಸ್ಕೃತೋ ದೇವವರೈಸ್ತದಾನೀಂ
ತಥೋರಗೈರ್ಯಕ್ಷಗಂಧರ್ವಸಿದ್ಧೈಃ ॥ ೯೪ ॥

---

೮೮–೯೧. ಆದುದರಿಂದ ಎಷ್ಟೋ ಪ್ರಯತ್ನಮಾಡಿ ದೊಡ್ಡ ಪದವಿಗೆ ಬರುವ ವಿಚಕ್ಷಣರಾದ ಮಾನವರು ಇಹಪರಗಳೆರಡನ್ನೂ ಸಾಧಿಸುವುದರಲ್ಲಿ ಬಹು ಎಚ್ಚರಿಕೆಯಿಂದಿರಬೇಕು. ಈ ರೀತಿ ಆ ನಹುಷನು ಭಯಂಕರಾರಣ್ಯದಲ್ಲಿ ಸರ್ಪವಾಗಿ ಬಿದ್ದುಹೋದನು. ಹೀಗೆ ದೇವಲೋಕವು ಮತ್ತೆ ಅರಾಜಕವಾಯಿತು. ಅದನ್ನು ಕಂಡು ದೇವತೆಗಳೆಲ್ಲರಿಗೂ ಆಶ್ಚರ್ಯವಾಯಿತು. ಅವರೆಲ್ಲರೂ "ಅಯ್ಯೋ ಪಾಪ! ಈ ರಾಜನಿಗೆ ಎಂತಹ ಕಷ್ಟವು ಪ್ರಾಪ್ತವಾಯಿತು! ಈ ದುರಾತ್ಮನಿಗೆ ಮರ್ತ್ಯಲೋಕ ಸ್ವರ್ಗಲೋಕಗಳೆರಡೂ ಇಲ್ಲವಾಯಿತು. ಸತ್ಪುರುಷರನ್ನು ತಿರಸ್ಕರಿಸಿದುದರಿಂದ ಇವನು ಮಾಡಿದ ಪುಣ್ಯವೆಲ್ಲ ದಗ್ಧವಾಗಿಹೋಯಿತು!

೯೨–೯೪. ಎಲೈ ದೇವರ್ಷಿಯೇ! ಈ ಲೋಕದಲ್ಲಿ ನೂರು ಅಶ್ವಮೇಧಗಳನ್ನು ಮಾಡಿರುವ ಇನ್ನೊಬ್ಬನಾವನನ್ನಾದರೂ ತಿಳಿಸು" ಎಂದರು. ಆಗ ಮುನಿಶ್ರೇಷ್ಠನಾದ ನಾರದನು, "ಎಲೈ ಮಹಾಭಾಗರೇ! ನೀವು ಈಗಲೇ ಯಯಾತಿಯನ್ನು ಜಾಗ್ರತೆಯಾಗಿ ಇಲ್ಲಿಗೆ ಕರೆದುತನ್ನಿರಿ" ಎಂದನು. ಕೂಡಲೇ ದೇವದೂತರು ಹೊರಟು ಆ ಯಯಾತಿಯನ್ನು ಜಾಗ್ರತೆಯಾಗಿ ಕರೆತಂದರು. ಆ ಮಹಾತ್ಮನು ದೇವದೂತರೊಡನೆ ವಿಮಾನಾರೂಢನಾಗಿ ಸ್ವರ್ಗಲೋಕಕ್ಕೆ ಬಂದು ದೇವಶ್ರೇಷ್ಠರಿಂದಲೂ, ಯಕ್ಷ ಗಂಧರ್ವ ಸಿದ್ಧರಿಂದಲೂ ಗೌರವಿಸಲ್ಪ

ಆಯಾತಃ ಸೋಽಮರಾವತ್ಯಾಂ ತ್ರಿದಶೈರಭಿತೋಽಷಿತಃ ।
ಇಂದ್ರಾಸನೇ ಚೋಪವಿಷ್ಟೋ ಬಭಾಷೇ ಚ ಸ ಸತ್ವರಂ ॥ ೯೫ ॥
ನಾರದೇನೈವ ಮುಕ್ತಸ್ತು ತ್ವಂ ರಾಜಾ ಯಾಜ್ಞಿಕೋ ಹ್ಯಸಿ ।
ಸತಾಮವಜ್ಞಯಾ ಪ್ರಾಪ್ತೋ ನಹುಷೋ ದಂದಶೂಕತಾಂ ॥ ೯೬ ॥
ಯೇ ಪ್ರಾಪ್ನುವಂತಿ ಧರ್ಮಿಷ್ಠಾ ದೈವೇನ ಪರಮಂ ಪದಂ ।
ಪ್ರಾಕ್ತನೇನೈವ ಮೂಢಾಸ್ತೇ ನ ಪಶ್ಯಂತಿ ಶುಭಾಶುಭಂ ॥ ೯೭ ॥
ಪತಂತಿ ನರಕೇ ಘೋರೇ ಸ್ತಬ್ಧಾ ವೈ ನಾತ್ರಸಂಶಯಃ ॥ ೯೮ ॥

ಯಯಾತಿರುವಾಚ :—

ಯೈಃ ಕೃತಂ ಚಾಮಿತಂ ಪುಣ್ಯಂ ತೇಷಾಂ ವಿಘ್ನಃ ಪ್ರಜಾಯತೇ ।
ಅಲ್ಪಕತ್ವೇನ ದೇವರ್ಷೇ ವಿದ್ಧಿ ಸರ್ವಂ ಪರಂ ಮಮ ॥ ೯೯ ॥
ಮಹಾದಾನಾನಿ ದತ್ತಾನಿ ಅನ್ನದಾನಯುತಾನಿ ಚ ।
ಗೋದಾನಾನಿ ಬಹೂನ್ಯೇವ ಭೂಮಿದಾನಯುತಾನಿ ಚ ॥ ೧೦೦ ॥
ತಥೈವ ಸರ್ವಾಣ್ಯಪಿ ಚೋತ್ತಮಾನಿ
ದಾನಾನಿ ಚೋಕ್ತಾನಿ ಮುನೀಷಿಭಿರ್ಯದಾ ।
ಏತಾನಿ ಸರ್ವಾಣಿ ಮಯಾ ತದೈವ
ದತ್ತಾನಿ ಕಾಲೇ ಚ ಮಹಾ ವಿಧಾನತಃ ॥ ೧೦೧ ॥

---

ಟ್ಟವನಾಗಿ ಅಮರಾವತಿಯ ಇಂದ್ರಪದವಿಯಲ್ಲಿ ಪಟ್ಟಾಭಿಷಿಕ್ತನಾದನು. ಆ ಯಯಾತಿರಾಯನು ಇಂದ್ರಾಸನದಲ್ಲಿ ಕುಳಿತು ಬಹಳವಾಗಿ ಶೋಭಿಸಿದನು.

೯೬. ಆಗ ನಾರದನು ಅವನನ್ನು ಕುರಿತು, "ಎಲೈ ಯಯಾತಿಯೇ! ನೀನು ನೂರು ಅಶ್ವಮೇಧಗಳನ್ನು ಮಾಡಿರುವೆ. ಈಗ ದೇವರಾಜನಾಗಿಯೂ ಇರುವೆ. ಈ ಹಿಂದೆ ನಹುಷನು ಇದೇ ದೇವರಾಜ್ಯವನ್ನು ಪಡೆದನು. ಆದರೆ ಅವನು ಅವನ ಪಾಪಕರ್ಮದಿಂದಲೇ ಸರ್ಪವಾಗಿಹೋದನು.

೯೭. ಧರ್ಮಿಷ್ಠರಾದ ಯಾರು ಹಿಂದಿನ ಪುಣ್ಯವಶದಿಂದ ಪರಮಪದವಿಯನ್ನು ಪಡೆಯುವರೋ ಅವರು ತಿಳಿಗೇಡಿಗಳಾಗಿ ಒಳ್ಳೇದು ಕೆಟ್ಟದುಗಳನ್ನು ಕುರಿತು ಆಲೋಚಿಸುವುದೇ ಇಲ್ಲವು.

೯೮. ಅಂತಹರು ಸ್ತಬ್ಧರಾಗಿ ಘೋರವಾದ ನರಕದಲ್ಲಿಯೇ ಬೀಳುವರೆಂಬುದರಲ್ಲಿ ಸಂಶಯವಿಲ್ಲವು" ಎಂದನು.

೯೯-೧೦೧. ಯಯಾತಿಯು ಹೇಳುತ್ತಾನೆ:—"ಎಲೈ ದೇವರ್ಷಿಯೇ! ಬಹಳವಾಗಿ ಪುಣ್ಯ ಮಾಡದವರಿಗೆ ಅಂತಹ ವಿಘ್ನಗಳುಂಟಾಗುತ್ತವೆ. ನಾನೇನು ಅಷ್ಟೊಂದು ಪುಣ್ಯವನ್ನು ಮಾಡಿಲ್ಲ. ಆದರೂ ಸ್ವಲ್ಪದರಲ್ಲಿಯೇ ಹೇಳುತ್ತೇನೆ; ಕೇಳು. ನಾನು ಅನ್ನದಾನಗಳೊಡನೆ ಮಹಾದಾನಗಳನ್ನು ಮಾಡಿರುತ್ತೇನೆ;

ಯಜ್ಞೈರಿಷ್ಟಂ ವಾಜಪೇಯಾತಿರಾತ್ರೈ
ರ್ಜ್ಯೋತಿಷ್ಟೋಮೈ ರಾಜಸೂಯಾದಿಭಿಶ್ಚ ।
ಶಾಸ್ತ್ರಪ್ರೋಕ್ತೈರಶ್ವಮೇಧಾದಿಭಿಶ್ಚ
ಯೂಪೈರೇಷಾಲಂಕೃತಾ ಭೂಃ ಸಮಂತಾತ್ ॥ ೧೦೨ ॥
ದೇವದೇವೋ ಜಗನ್ನಾಥ ಇಷ್ಟೋ ಯಜ್ಞೈರನೇಕಶಃ ।
ಗಾಲವಾಯ ಪುರಾ ದತ್ತಾ ಕನ್ಯಾತ್ವೇಷಾ ಚ ಮಾಧವೀ ॥ ೧೦೩ ॥
ಪತ್ನೀತ್ವೇನ ಚತುರ್ಭ್ಯಶ್ಚ ದತ್ತಾಃ ಕನ್ಯಾ ಮುನೇ ತದಾ ।
ಗಾಲವಸ್ಯ ಗುರೋರರ್ಥೇ ವಿಶ್ವಾಮಿತ್ರಸ್ಯ ಧೀಮತಃ ॥ ೧೦೪ ॥
ಏವಂ ಭೂತಾನ್ಯನೇಕಾನಿ ಸುಕೃತಾನಿ ಮಯಾ ಪುರಾ ।
ಮಹಾಂತಿ ಚ ಬಹೂನ್ಯೇವ ತಾನಿ ವಕ್ತುಂ ನ ಪಾರ್ಯತೇ ॥ ೧೦೫ ॥
ಭೂಯಃ ಪೃಷ್ಟಃ ಸರ್ವದೇವೈಃ ಸ ರಾಜಾ
ಕೃತಂ ಸರ್ವಂ ಗುಪ್ತಮೇವಂ ಯಥಾರ್ಥಂ ।
ವಿಜ್ಞಾತುಮಿಚ್ಛಾಮ ಯಥಾರ್ಥತೋಽಪಿ
ಸರ್ವೇ ವಯಂ ಶ್ರೋತುಕಾಮಾ ಯಯಾತೇ ॥ ೧೦೬ ॥

---

ಭೂದಾನಗಳೊಡಗೂಡಿದ ಅನೇಕ ಗೋದಾನಗಳನ್ನು ಮಾಡಿರುತ್ತೇನೆ. ಹಾಗೆಯೇ ಜ್ಞಾನಿಗಳಾದವರು ಯಾವ ಯಾವ ದಾನಗಳು ಶ್ರೇಷ್ಠಗಳೆಂದು ಹೇಳಿರುವರೋ ಆ ಎಲ್ಲ ದಾನಗಳನ್ನೂ ನಾನು ಆಯಾ ಶುಭ ಸಮಯಗಳಲ್ಲಿ ಶಾಸ್ತ್ರೋಕ್ತವಾದ ರೀತಿಯಲ್ಲಿಯೇ ಮಾಡಿರುತ್ತೇನೆ.

೧೦೨. ವಾಜಪೇಯ, ಅತಿರಾತ್ರ, ಜ್ಯೋತಿಷ್ಟೋಮ, ರಾಜಸೂಯ, ಅಶ್ವಮೇಧ ಮೊದಲಾಗಿ ಶಾಸ್ತ್ರಗಳಲ್ಲಿ ಎಷ್ಟು ಯಾಗಗಳು ಹೇಳಲಾಗಿವೆಯೋ ಅಷ್ಟನ್ನೂ ಮಾಡಿರುತ್ತೇನೆ. ಈಗಲೂ ಅವುಗಳಿಗಾಗಿ ರಚಿಸಿದ ಯೂಪಸ್ತಂಭಗಳಿಂದಲೇ ಭೂಮಿಯು ಎತ್ತೆತ್ತಲೂ ಅಲಂಕೃತವಾಗಿದೆ.

೧೦೩–೧೦೬. ಹೀಗೆ ದೇವದೇವನಾದ ಜಗನ್ನಾಥನನ್ನು ಅನೇಕ ಯಜ್ಞಗಳಿಂದ ಸಂತೋಷಗೊಳಿಸಿರುತ್ತೇನೆ. ಹಿಂದೆ ಗಾಲವಮುನಿಗೆ ಮಾಧವೀ ಎಂಬ ಕನ್ಯೆಯನ್ನು ಭಾರ್ಯಾರ್ಥವಾಗಿ ದಾನಮಾಡಿದೆನು. ಇದೇ ಮುನಿಗೇ ಆತನ ಗುರುವಾದ ವಿಶ್ವಾಮಿತ್ರನಿಗೆ ಗುರುದಕ್ಷಿಣೆ ಕೊಡಲು ನಾಲ್ವರು ಕನ್ಯೆಯರನ್ನು ಕೊಟ್ಟೆನು. ನಾನು ಪೂರ್ವದಲ್ಲಿ ಇಂತಹ ಅನೇಕ ಪುಣ್ಯಗಳನ್ನು ಮಾಡಿರುವೆನು. ಅವುಗಳೆಲ್ಲ ಬಹಳ ದೊಡ್ಡವು; ಅಸಂಖ್ಯಾತವಾದುವು. ಆದುದರಿಂದ ಅವುಗಳನ್ನು ಹೇಳಿ ಮುಗಿಸಲಾಗುವುದಿಲ್ಲ.'' ಆಗ ದೇವತೆಗಳೆಲ್ಲರೂ, '' ಅಯ್ಯಾ ಯಯಾತಿಯೇ! ನೀನು ಗೋಪ್ಯವಾಗಿಯೂ, ಪ್ರಕಟವಾಗಿಯೂ ಇನ್ನೂ ಯಾವ ಯಾವ ಪುಣ್ಯಕಾರ್ಯಗಳನ್ನು ಮಾಡಿರುವೆಯೋ ಅವುಗಳೆಲ್ಲವನ್ನೂ

ವಚೋ ನಿಶಮ್ಯ ದೇವಾನಾಂ ಯಯಾತಿರಮಿತದ್ಯುತಿಃ ।
ಕಥಯಾಮಾಸ ತತ್ಸರ್ವಂ ಪುಣ್ಯಶೇಷಂ ಯಥಾರ್ಥತಃ ॥ ೧೦೭ ॥
ಕಥಿತಂ ಸರ್ವಮೇತಚ್ಚ ನಿಃಶೇಷಂ ವ್ಯಾಸವತ್ತದಾ ।
ಸ್ವಪುಣ್ಯಕಥನೇನೈವ ಯಯಾತಿರಪತದ್ಭುವಿ ॥ ೧೦೮ ॥
ತತ್ಕ್ಷಣಾದೇವ ಸರ್ವೇಷಾಂ ಸುರಾಣಾಂ ತತ್ರ ಪಶ್ಯತಾಂ ।
ಏವಮೇವ ತಥಾ ಜಾತಮರಾಜಕಮತಂದ್ರಿತಂ ॥ ೧೦೯ ॥
ಅನ್ಯೋ ನ ದೃಶ್ಯತೇ ಲೋಕೇ ಯಾಜ್ಞಿಕೋ ಯೋ ಹಿ ತತ್ರ ವೈ ।
ಶಕ್ರಾಸನೇಽಭಿಷೇಕಾರ್ಥಂ ಶ್ರೂಯತಾಂ ಹಿ ದ್ವಿಜೋತ್ತಮಾಃ ॥ ೧೧೦ ॥

ಸರ್ವೇ ಸುರಾಶ್ಚ ಋಷಯೋಽಥ ಮಹಾ ಫಣೀಂದ್ರಾ
ಗಂಧರ್ವ ಯಕ್ಷ ಖಗಚಾರಣ ಕಿಂನರಾಶ್ಚ ।
ವಿದ್ಯಾಧರಾಃ ಸುರಗಣಾಪ್ಸರಸಾಂ ಗಣಾಶ್ಚ
ಚಿಂತಾಪರಾಃ ಸಮಭವನ್ಮನುಜಾಸ್ತಥೈವ ॥ ೧೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಶಿವಶಾಸ್ತ್ರೇ ದೇವೇಂದ್ರ ಸ್ವರಾಜ್ಯಾಭಿಷೇಕವೃತ್ತಾಂತೇ ದೇವೇಂದ್ರಸ್ಯ ಬ್ರಹ್ಮಹತ್ಯೋಪದ್ರುತೌ ನಹುಷಶಾಪ ಯಯಾತಿ ಭೂಪುಣ್ಯಕ್ಷಯವೃತ್ತಾಂತವರ್ಣನಂ" ನಾಮ ಪಂಚದಶೋಽಧ್ಯಾಯಃ

---

ಯಥಾರ್ಥವಾಗಿ ತಿಳಿಸುವವನಾಗು. ಅದನ್ನು ಕೇಳಲು ನಮಗೆ ಬಹಳ ಕುತೂಹಲವಾಗಿರುವುದು"ಎಂದು ಕೇಳಿದರು.

೧೦೮–೧೦೯. ಆಗಲಾ ಯಯಾತಿರಾಯನು ವ್ಯಾಸಮುನಿಯು ಪುರಾಣ ಗಳನ್ನೆಂತೋ, ಅಂತು ತಾನು ಮಾಡಿದ ಪುಣ್ಯ ಕಾರ್ಯಗಳೆಲ್ಲವನ್ನೂ ಸಂಪೂರ್ಣ ವಾಗಿ ಹೇಳಿಬಿಟ್ಟನು. ಹೀಗೆ ತನ್ನ ಪುಣ್ಯವನ್ನು ತಾನೇ ಹೇಳುತ್ತಿರುವಂತೆಯೇ ಅವೆಲ್ಲವೂ ಕ್ಷೀಣವಾಗಿ ದೇವತೆಗಳು ನೋಡುತ್ತಿರುವಂತೆಯೇ ನೆಲಕ್ಕೆ ಬಿದ್ದು ಹೋದನು. ಅತಂದ್ರಿತವಾದ ದೇವರಾಜ್ಯವು ಮತ್ತೆ ಅರಾಜಕವಾಯಿತು.

೧೧೦–೧೧೧. ಆಗ ದೇವೇಂದ್ರನ ಸಿಂಹಾಸನದಲ್ಲಿ ಕುಳ್ಳಿರಿಸಿ ಅಭಿಷೇಕ ಮಾಡಲು ಯಾವ ಯಾಜ್ಞಿಕನೂ ಲೋಕದಲ್ಲಿ ಕಾಣಲಿಲ್ಲ. ಅದನ್ನು ಕಂಡು ದೇವತೆಗಳೂ, ಋಷಿಗಳೂ, ಪನ್ನಗರೂ, ಗಂಧರ್ವ ಯಕ್ಷ ಖಗ ಚಾರಣ ಕಿನ್ನರರೂ, ವಿದ್ಯಾಧರರೂ, ಇತರ ದೇವತೆಗಳೂ, ಅಪ್ಸರರೂ, ಮಾನವರೂ ಚಿಂತೆಗೀಡಾದರು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ದೇವೇಂದ್ರನ ಸ್ವರಾಜ್ಯಾಭಿಷೇಕ– ನಹುಷ ಯಯಾತಿ ಭೂಪುಣ್ಯಕ್ಷಯ ವೃತ್ತಾಂತವರ್ಣನ" ಎಂಬ ಹದಿನೈದನೆಯ ಅಧ್ಯಾಯವು ಮುಗಿದುದು

ಶ್ರೀಃ

## ಷೋಡಶೋಽಧ್ಯಾಯಃ

### ದೇವಕೃತಾಸ್ಥಿಯಾಚನಾ — ದಧೀಚಿ ದೇಹತ್ಯಾಗಃ

**ಲೋಮಶ ಉವಾಚ :—**

**ತತಃ ಶಚೀ ತಾನ್ಪ್ರೋವಾಚ ವಾಚಂ ಧರ್ಮಾರ್ಥಸಂಯುತಾಂ ।**
**ಮಾ ಚಿಂತಾ ಕ್ರಿಯತಾಂ ದೇವಾ ಬೃಹಸ್ಪತಿಪುರೋಗಮಾಃ ॥ ೧ ॥**
**ಗಚ್ಛತ ತ್ವರಿತಾಃ ಸರ್ವೇ ಶಕ್ರಂ ದ್ರಷ್ಟುಂ ವಿಚಕ್ಷಣಾಃ ।**
**ಬ್ರಹ್ಮಹತ್ಯಾಭಿಭೂತೋಽಸೌ ಯತ್ರಾಸ್ತೇ ಸುರಸತ್ತಮಃ ॥ ೨ ॥**
**ಬಹೂನಾಂ ಕಾರಣೇನೈವ ವಿಶ್ವರೂಪೋ ಹಿ ಮಂದಧೀಃ ।**
**ಹತಸ್ತೇನ ಮಹೇಂದ್ರೇಣ ಸರ್ವೈಃ ಸೋಽಪಿ ನಿರಾಕೃತಃ ॥ ೩ ॥**
**ತಸ್ಮಾತ್ಸರ್ವೈರ್ಭವದ್ಭಿಶ್ಚ ಗಂತವ್ಯಂ ಯತ್ರ ಸಪ್ರಭುಃ ।**
**ಅವಜ್ಞಾ ಹಿ ಕೃತಾ ಪೂರ್ವಂ ಮಹೇಂದ್ರೇಣ ತವಾನಘ ॥ ೪ ॥**
**ಅವಜ್ಞಾಮಾತ್ರಕ್ಸ್ಮಿಬ್ಧೇನ ತ್ವಯಾ ಶಪ್ತಃ ಪುರಂದರಃ ।**
**ತಥೈವ ಶಪಿತಶ್ಚಾಸಿ ಮಯಾ ತ್ವಂ ಹಿ ಬೃಹಸ್ಪತೇ ॥ ೫ ॥**
**ನಿರಸ್ತೋಽಪಿ ಹಿ ತಸ್ಮಾತ್ತ್ವಮವಸಾನ ಪರೋಭವ ॥ ೬ ॥**

---

## ಕನ್ನಡದ ಅನುವಾದ

### ದೇವಕೃತಾಸ್ಥಿಯಾಚನಾ — ದಧೀಚಿಮುನಿಯ ಆತ್ಮತ್ಯಾಗ

೧–೬. ಲೋಮಶನು ಹೇಳುತ್ತಾನೆ:—ಅಯ್ಯಾ ಶೌನಕಾದಿ ಮಹರ್ಷಿಗಳಿರಾ! ಆಗ ಶಚೀದೇವಿಯು ಬೃಹಸ್ಪತಿಯೇ ಮೊದಲಾದ ಆ ದೇವತೆಗಳೆಲ್ಲರನ್ನೂ ಕುರಿತು, "ಎಲೈ! ನೀವು ಚಿಂತಿಸಬೇಡಿರಿ. ವಿಚಕ್ಷಣರಾದ ನೀವೆಲ್ಲರೂ ಈಗಲೇ ಮಹೇಂದ್ರನು ಬ್ರಹ್ಮಹತ್ಯೆಯಿಂದ ತಿರಸ್ಕೃತನಾಗಿ ಅಡಗಿರುವ ಪ್ರದೇಶಕ್ಕೆ ಜಾಗ್ರತೆಯಾಗಿ ಹೋಗಿರಿ. ಆತನು ತಿಳಿಗೇಡಿಯಾದ ಆ ವಿಶ್ವರೂಪನನ್ನು ಸಂಹರಿಸಿದುದಕ್ಕೆ ಅನೇಕ ಕಾರಣಗಳುಂಟು. ಅದನ್ನರಿತುಕೊಳ್ಳದೆ ನೀವೆಲ್ಲರೂ ಅವನನ್ನು ನಿರಾಕರಿಸಿ ಹೊರದೂಡಿದಿರಿ. ಆದುದರಿಂದ ನೀವೀಗ ಆ ಪ್ರಭುವಿರುವ ಪ್ರದೇಶಕ್ಕೆ ಹೋಗಲೇಬೇಕು. ಎಲೈ ಬೃಹಸ್ಪತಿಯೇ! ಪೂರ್ವದಲ್ಲಿ ನನ್ನ ಸ್ವಾಮಿಯು ನಿನ್ನನ್ನು ಅಪಮಾನಗೊಳಿಸಿದುದೇನೋ ದಿಟ. ಅಷ್ಟರಿಂದಲೇ ನೀನು ಕೋಪಗೊಂಡು ಅವನನ್ನು ಶಪಿಸಿದೆ. ಅಂತೆಯೇ ನಾನೂ ನಿನ್ನನ್ನು ಶಪಿಸುತ್ತೇನೆ. ನೀನು ಬದುಕಿದ್ದರೂ ಸತ್ತಂತೆಯೇ ಆಗು.

**ಯಥಾ ಮದರ್ಥಮಾನೀತೌ ಶಕ್ರೇ ಜೀವತಿ ತಾವುಭೌ ।**
**ತ್ವಯಿ ಜೀವತಿ ಭೋ ಬ್ರಹ್ಮನ್ಕಾರ್ಯಂ ತವ ಕರಿಷ್ಯತಿ ॥ ೭ ॥**
**ಕೋಽಪಿ ಸೌಭಾಗ್ಯವಾಂಲ್ಲೋಕೇ ತವಕ್ಷೇತ್ರೇ ಜನಿಷ್ಯತಿ ।**
**ಪುತ್ರಂ ವಿಖ್ಯಾತನಾಮಾನಮತ್ರ ನೈವಾಸ್ತಿ ಸಂಶಯಃ ॥ ೮ ॥**
**ಗಚ್ಛ ಶೀಘ್ರಂ ಸುರೈಃ ಸಾರ್ಧಂ ಶಕ್ರಮಾನಯ ಮಾಚಿರಂ ।**
**ಪ್ರಯಾಸಿ ತ್ವರಿತೋ ನೋ ಚೇತ್ಪುನಃ ಶಾಪಂ ದದಾಮಿ ತೇ ॥ ೯ ॥**
**ಶಚ್ಯೋಕ್ತಂ ವಚನಂ ಶ್ರುತ್ವಾ ಸುರೈಃ ಸಾರ್ಧಂ ಜಗಾಮ ಸಃ ।**
**ಪುರಂದರಂ ಗತಾಃ ಸರ್ವೇ ಬ್ರಹ್ಮಹತ್ಯಾಭಿಪೀಡಿತಂ ॥ ೧೦ ॥**
**ಸರಸಸ್ತೀರಮಾಸಾದ್ಯ ತೇ ಶಕ್ರಂ ಚಾಭ್ಯವಾದಯನ್ ।**
**ದೃಷ್ಟ್ವಾಃ ಶಕ್ರೇಣ ತೇ ಸರ್ವೇ ತದಾಹ್ಯಪ್ಸು ಸ್ಥಿತೇನ ವೈ ॥ ೧೧ ॥**
**ಉವಾಚ ದೇವಾನ್ದೇವೇಶಃ ಕಾಸ್ಮಾದ್ಯೂಯಮಿಹಾಗತಾಃ ।**
**ಅಹಂ ಹಿ ಪಾತಕಗ್ರಸ್ತೋ ಬ್ರಹ್ಮಹತ್ಯಾಪರಿಪ್ಲುತಃ ।**
**ಅಪ್ಸು ತಿಷ್ಠಾಮಿ ಭೋ ದೇವಾ ಏಕಾಕೀ ತಪಸಾನ್ವಿತಃ ॥ ೧೨ ॥**

---

೭–೮. ದೇವೇಂದ್ರನು ಜೀವಂತನಾಗಿದ್ದರೂ ನನಗಾಗಿ ಆ ನಹುಷ ಯಯಾತಿಗಳನ್ನು ನೀನು ಕರೆತಂದೆಯಾಗಿ ನೀನು ಬದುಕಿರುವಂತೆಯೇ ನಿನ್ನ ಕಾಂತೆಗೂ ಯಾವನೋ ಸೌಭಾಗ್ಯವಂತನು ಉಪಪತಿಯಾಗಿ ಪ್ರಸಿದ್ಧನಾದ ಮಗನೋರ್ವನನ್ನು ಪಡೆಯುತ್ತಾನೆ. ಇದರಲ್ಲಿ ಸಂಶಯವಿಲ್ಲ.

೯. ಈಗ ನೀನು ಈ ದೇವತೆಗಳೆಲ್ಲರೊಡನೆ ಜಾಗ್ರತೆಯಾಗಿ ಹೋಗಿ ಆ ದೇವೇಂದ್ರನನ್ನು ಕರೆದುಕೊಂಡು ಬರುವವನಾಗು. ಹಾಗೆ ನೀನು ಹೋಗದಿದ್ದರೆ ನಿನ್ನನ್ನು ಮತ್ತೆ ಶಪಿಸುತ್ತೇನೆ" ಎಂದು ಹೇಳಿದಳು.

೧೦. ಶಚಿಯು ನುಡಿದ ಈ ಮಾತುಗಳನ್ನುಕೇಳಿ ಬೃಹಸ್ಪತಿಯು ಭಯದಿಂದ ತತ್ತಳಿಸಿ ಕೂಡಲೇ ದೇವತೆಗಳೊಡನೆ ಹೊರಟು, ಬ್ರಹ್ಮಹತ್ಯೆಯಿಂದ ತಿರಸ್ಕೃತನಾದ ಆ ದೇವೇಂದ್ರನು ಅಡಗಿಕೊಂಡಿದ್ದ ಸರಸ್ಸಿನ ಬಳಿಗೆ ಬಂದನು.

೧೧–೧೨. ಆ ಸರೋವರದ ತೀರಕ್ಕೆ ಬಂದಮೇಲೆ ಅಲ್ಲಿ ಅಡಗಿಕೊಂಡಿದ್ದ ಆತನನ್ನು ಕಂಡು ದೇವತೆಗಳೆಲ್ಲರೂ ನಮಸ್ಕರಿಸಿದರು. ಇಂದ್ರನು ನೀರಿನಲ್ಲಿದ್ದೇ ಅವರೆಲ್ಲರನ್ನೂ ಕಂಡು, "ಎಲೈ! ನೀವೆಲ್ಲರೂ ಪುನಃ ಇಲ್ಲಿಗೇಕೆ ಬಂದಿರಿ. ನಾನು ಪಾಪಗ್ರಸ್ತನಾಗಿರುವೆನು. ಬ್ರಹ್ಮಹತ್ಯೆಯು ನನ್ನನ್ನು ಮುತ್ತಿಕುಳಿತಿರುವುದು. ಆದುದರಿಂದ ನೀವು ನನ್ನನ್ನು ಬಿಟ್ಟುಬಿಡಿ. ನಾನು ಈ ಸರೋವರದ ಜಲದಲ್ಲಿಯೇ ಒಂಟಿಯಾಗಿ ತಪಸ್ಸುಮಾಡುತ್ತ ವಾಸಮಾಡುತ್ತೇನೆ" ಎಂದನು.

ತಚ್ಛ್ರುತ್ವಾ ವಚನಂ ತಸ್ಯ ಸರ್ವೇ ದೇವಾ ಶತಕ್ರತೋಃ ।
ಊಚುರ್ವಿಹ್ವಲಿತಾ ಏನಂ ದೇವರಾಜಾನಮುದ್ಭುತಂ ॥ ೧೩ ॥
ಏತಾದೃಶಂ ನ ವಾಚ್ಯಂ ತೇ ಪರೇಷಾಮುಪಕಾರಕಂ ।
ಕೃತಂ ತ್ವಯೈವ ಯತ್ಕರ್ಮ ವಿಶ್ವರೂಪವಧಾದಿಕಂ ॥ ೧೪ ॥
ವಿಶ್ವಕರ್ಮಸುತೇನೈವ ಕೃತಂ ಯಾಜನಮುದ್ಭುತಂ ।
ಯೇನ ದೇವಾಃ ಕ್ಷಯಂ ಯಾಂತಿ ಋಷಯೋಽಪಿ ಮಹಾಪ್ರಭಾಃ ॥
ತಸ್ಮಾದ್ಧತಸ್ತ್ವಯಾ ದೇವ ಪರೇಷಾಮುಪಕಾರತಃ ।
ತತಃ ಸರ್ವೇ ವಯಂ ಪ್ರಾಪ್ತಾಸ್ತ್ವಾಂ ನೇತುಮಮರಾವತೀಂ ॥ ೧೬ ॥
ಏವಂ ವಿವದಮಾನೇಷು ದೇವೇಷು ಚ ತದಾಽಬ್ರವೀತ್ ।
ಬ್ರಹ್ಮಹತ್ಯಾ ತ್ವರಾಯುಕ್ತಾ ದೇವೇಂದ್ರಂ ವರಯಾಮ್ಯಹಂ ॥ ೧೭ ॥
ತದಾ ಬೃಹಸ್ಪತಿರ್ವಾಕ್ಯಮುವಾಚ ಸಹಸೈವ ತು ॥ ೧೮ ॥

ಬೃಹಸ್ಪತಿರುವಾಚ :—

ವಾಸಾರ್ಥಂ ಚ ಕರಿಷ್ಯಾಮಃ ಸ್ಥಾನಾನಿ ತವ ಸಾಂಪ್ರತಂ ।
ಪ್ರಸಾಂತ್ವಿತಾ ತದಾ ಹತ್ಯಾ ದೇವೈಸ್ತತ್ಕಾರ್ಯಗೌರವಾತ್ ॥ ೧೯ ॥

---

೧೩–೧೪. ಆ ಮಾತನ್ನು ಕೇಳಿ ದೇವತೆಗಳೆಲ್ಲರೂ ಕುಗ್ಗಿದ ಮನಸ್ಸುಳ್ಳವರಾಗಿ ಮಹಾಪರಾಕ್ರಮಿಯಾದ ಆ ದೇವೇಂದ್ರನನ್ನು ಕುರಿತು, "ಎಲೈ ಪ್ರಭುವೇ! ನೀನು ಈ ರೀತಿ ಶತ್ರುಗಳಿಗೆ ಉಪಕಾರವಾಗುವಂತಹ ಮಾತನ್ನಾಡಬಾರದು. ನೀನು ವಿಶ್ವರೂಪನ ವಧೆಯೇ ಮೊದಲಾದ ಕಾರ್ಯಗಳನ್ನು ಮಾಡಿದೆನೆಂದು ಚಿಂತಿಸಿ ಭಯದಿಂದಿಲ್ಲಿ ಸೇರಿ ಕಾಲವನ್ನು ಕಳೆಯುತ್ತಿರುವೆ.

೧೫–೧೯. ಆ ವಿಶ್ವಕರ್ಮನ ಮಗನಾದರೋ ಆಗ ಒಂದು ಯಾಗವನ್ನು ಮಾಡುತ್ತಿದ್ದನು. ಅದರಿಂದ ದೇವತೆಗಳೂ, ಮಹಾತೇಜಸ್ವಿಗಳಾದ ಮಹರ್ಷಿಗಳೂ ಕ್ಷಯಿಸಿಹೋಗುತ್ತಿದ್ದರು. ಆ ಕಾರಣದಿಂದ ನೀನು ಅವನನ್ನು ವಧಿಸಿ ಪರೋಪಕಾರವನ್ನೆಸಗಿದೆ. ಆದುದರಿಂದಲೇ ಈಗ ನಾವೆಲ್ಲರೂ ನಿನ್ನನ್ನು ಅಮರಾವತಿಗೆ ಕರೆದೊಯ್ಯಲು ಬಂದಿರುವೆವು" ಎಂದು ಹೇಳಿದರು. ದೇವತೆಗಳು ಹೀಗೆ ಹೇಳುತ್ತಿರುವಂತೆಯೇ ಗುರುವಾದ ಬೃಹಸ್ಪತಿಯೂ ತ್ವರೆಯುಳ್ಳವನಾಗಿ, "ಅಯ್ಯಾ ದೇವತೆಗಳಿರಾ! ದೇವೇಂದ್ರನು ಬ್ರಹ್ಮಹತ್ಯಾದೋಷದಿಂದ ತಿರಸ್ಕೃತನಾಗಿದ್ದರೂ ಅವನನ್ನು ನಾನು ಇಂದ್ರನನ್ನಾಗಿ ವರಣಮಾಡುತ್ತೇನೆ" ಎಂದು ಹೇಳಿ, ಅಲ್ಲಿಯೇ ಕುಳಿತಿರುವ ಆ ಹತ್ಯೆಯನ್ನು ಕುರಿತು, "ಎಲೌ ಬ್ರಹ್ಮಹತ್ಯೆಯೇ! ನಿನಗೆ ವಾಸಮಾಡಲು ಸ್ಥಾನಗಳನ್ನು ಕಲ್ಪಿಸಿಕೊಡುತ್ತೇವೆ" ಎಂದನು. ದೇವತೆಗಳ ಕಾರ್ಯಸಿದ್ಧಿಗಾಗಿ ಆ ಬೃಹಸ್ಪತಿಯು ಹೇಳಿದ ಈ ಮಾತನ್ನು ಕೇಳಿ ಆ ಬ್ರಹ್ಮಹತ್ಯೆಯು ಸಮಾಧಾನ ಹೊಂದಿತು.

ವಿಮೃಶ್ಯ ಸರ್ವೇ ವಿಭಜುಶ್ಚತುರ್ಧಾ
ಹತ್ಯಾಂ ಸುರಾಸ್ತೇ ಋಷಯೋ ಮನೀಷಿಣಃ ।
ಯಕ್ಷಾಃ ಪಿಶಾಚಾ ಉರಗಾಃ ಪತಂಗಾ
ಸ್ತಥಾ ಚ ಸರ್ವೇ ಸುರಸಿದ್ಧಚಾರಣಾಃ ॥ ೨೦ ॥
ಆದೌ ಕ್ಷಮಾಂ ಪ್ರತಿ ತದಾ ಊಚುಃ ಸರ್ವೇ ದಿವೌಕಸಃ ।
ಹೇ ಕ್ಷಮೇಽಂಶಸ್ತ್ವಯಾ ಗ್ರಾಹ್ಯೋ ಹತ್ಯಾಯಾಃ ಕಾರ್ಯಸಿದ್ಧಯೇ ॥
ಸುರಾಣಾಂ ತದ್ವಚಃ ಶ್ರುತ್ವಾ ಧರಿತ್ರೀ ಕಂಪಿತಾಽವದತ್ ।
ಕಥಂ ಗ್ರಾಹ್ಯೋ ಮಯಾ ಹ್ಯಂಶೋ ಹತ್ಯಾಯಾಸ್ತ್ವದ್ವಿಮೃಶ್ಯತಾಂ ॥೨೨॥
ಅಹಂ ಹಿ ಸರ್ವಭೂತಾನಾಂ ಧಾತ್ರೀ ವಿಶ್ವಂ ಧರಾಮ್ಯಹಂ ।
ಅಪವಿತ್ರಾ ಭವಿಷ್ಯಾಮಿ ಏನಸಾ ಸಂವೃತಾ ಭೃಶಂ ॥ ೨೩ ॥
ಪೃಥ್ವ್ಯಾಸ್ತದ್ವಚನಂ ಶ್ರುತ್ವಾ ಬೃಹಸ್ಪತಿರುವಾಚ ತಾಂ ।
ಮಾಭೈಷೀಶ್ಚಾರುಸರ್ವಾಂಗೀ ನಿಷ್ಪಾಪಾಸಿ ನ ಚಾನ್ಯಥಾ ॥ ೨೪ ॥
ಯದಾ ಯದುಕುಲೇ ಶ್ರೀಮಾನ್ವಾಸುದೇವೋ ಭವಿಷ್ಯತಿ ।
ತದಾ ತತ್ಪದವಿನ್ಯಾಸಾನ್ನಿಷ್ಪಾಪಾ ತ್ವಂ ಭವಿಷ್ಯಸಿ ॥ ೨೫ ॥
ಕುರು ವಾಕ್ಯಂ ತ್ವಮಸ್ಮಾಕಂ ನಾತ್ರ ಕಾರ್ಯಾ ವಿಚಾರಣಾ ॥ ೨೬ ॥

---

೨೦–೨೧. ತರುವಾಯ ಅಲ್ಲಿದ್ದ ದೇವತೆಗಳೂ, ಬುದ್ಧಿಶಾಲಿಗಳಾದ ಮಹರ್ಷಿಗಳೂ, ಯಕ್ಷರೂ, ಪಿಶಾಚರೂ, ಗರುಡ ಪನ್ನಗರೂ, ಸಿದ್ಧಚಾರಣರೂ ಎಲ್ಲರೂ ಸೇರಿ ಚೆನ್ನಾಗಿ ಆಲೋಚಿಸಿ ಆ ಬ್ರಹ್ಮಹತ್ಯೆಯನ್ನು ನಾಲ್ಕು ಭಾಗಗಳಾಗಿ ವಿಭಾಗ ಮಾಡಿದರು. ಅವರು ಮೊದಲು ಭೂಮಿಯನ್ನು ಕುರಿತು, “ಎಲೈ ಭೂಮಿಯೇ! ಈಗ ನೀನು ದೇವತೆಗಳ ಕಾರ್ಯಸಿದ್ಧಿಗಾಗಿ ಈ ಬ್ರಹ್ಮಹತ್ಯೆಯಲ್ಲಿ ಒಂದು ಭಾಗವನ್ನು ತೆಗೆದುಕೊಳ್ಳುವವಳಾಗು” ಎಂದರು.

೨೨–೨೪. ದೇವತೆಗಳ ಈ ಮಾತನ್ನು ಕೇಳಿ ಭೂಮಿಯು ಭಯದಿಂದ ನಡುಗುತ್ತ ಅವರನ್ನು ಕುರಿತು, “ಎಲೈ ದೇವತೆಗಳಿರಾ! ನಾನು ಈ ಹತ್ಯೆಯ ಭಾಗವನ್ನು ಹೇಗೆತಾನೆ ತೆಗೆದುಕೊಳ್ಳಲಿ. ನಾನು ಸಮಸ್ತ ಭೂತಗಳಿಗೂ ಧಾತ್ರಿಯಾಗಿ ವಿಶ್ವವನ್ನೇ ಹೊತ್ತಿರುವೆನಲ್ಲವೆ! ಈ ಪಾಪದಿಂದ ನಾನು ಬಹು ಮಟ್ಟಿಗೆ ಅಪರಿಶುದ್ಧಳಾಗುತ್ತೇನೆ” ಎಂದಳು. ಭೂದೇವಿಯ ಈ ನುಡಿಯನ್ನಾಲಿಸಿ ಬೃಹಸ್ಪತಿಯು ಅವಳನ್ನು ಕುರಿತು, “ಎಲೆ ಧರಿತ್ರೀ! ನೀನು ಹೆದರಬೇಡ. ನೀನು ನಿಷ್ಪಾಪಳಾಗಿರುವೆ. ಇದರಲ್ಲಿ ಸಂಶಯವಿಲ್ಲವು.

೨೫–೩೨. ಯಾವಾಗ ಶ್ರೀಮನ್ನಾರಾಯಣನು ಯದುವಂಶದಲ್ಲಿ ಅವತರಿಸುವನೋ ಆಗ ಆತನ ಪಾದವಿನ್ಯಾಸದಿಂದ ನಿನ್ನ ದೋಷಗಳೆಲ್ಲವೂ ನಿವೃತ್ತಿಯಾಗುತ್ತವೆ. ಈ ಕಳಂಕವು ನಿನ್ನಿಂದ ದೂರವಾಗುವುದು. ಈಗ ಯಾವ

ಇತ್ಯುಕ್ತ್ವಾ ಪೃಥಿವೀ ತೇಷಾಂ ನಿಷ್ಪಾಪಾ ಸಾಕರೋದ್ವಚಃ ।
ತತೋ ವೃಕ್ಷಾನ್ಸಮಾಹೂಯ ಸರ್ವೇ ದೇವಾಽಬ್ರುವನ್ವಚಃ ॥ ೨೭ ॥
ಹತ್ಯಾಂಶೋ ಹಿ ಗೃಹೀತವ್ಯೋ ಭವದ್ಭಿಃ ಕಾರ್ಯಸಿದ್ಧಯೇ ।
ಏವಮುಕ್ತಾಽಬ್ರುವನ್ವೃಕ್ಷಾ ದೇವಾನ್ಸರ್ವೇ ಸಮಾಗತಾಃ ॥ ೨೮ ॥
ವಯಂ ಸರ್ವೇ ತಥಾ ಭೂತಾಸ್ತಾಪಸಾನಾಂ ಫಲಪ್ರದಾಃ ।
ತದಾ ಹತ್ಯಾನ್ವಿತಾಃ ಸರ್ವೇ ಭವಿಷ್ಯಂತಿ ತಪಸ್ವಿನಃ ॥ ೨೯ ॥
ಪಾಪಿನೋ ಹಿ ಮಹಾಭಾಗಾಸ್ತಸ್ಮಾತ್ಸರ್ವಂ ವಿಮೃಶ್ಯತಾಂ ।
ತದಾ ಪುರೋಧಸಾ ಚೋಕ್ತಾಃ ಸರ್ವೇ ವೃಕ್ಷಾಃ ಸಮಾಗತಾಃ ॥ ೩೦ ॥
ಮಾ ಚಿಂತಾ ಕ್ರಿಯತಾಂ ಸರ್ವೈಃ ಪ್ರಸಾದಾಚ್ಚ ಶತಕ್ರತೋಃ ।
ಛೇದಿತಾಶ್ಚೈವ ಸರ್ವೇ ವೈ ಹ್ಯನೇಕಾಂಶತ್ವಮಾಗತಾಃ ॥ ೩೧ ॥
ತತೋ ವಿಟಪಿನೋ ನಿತ್ಯಂ ಯೂಯಂ ಸರ್ವೇ ಭವಿಷ್ಯಥ ।
ಇತ್ಯುಕ್ತಾಸ್ತೇ ತದಾ ಸರ್ವೇಽಗೃಹ್ಣನ್ ಹತ್ಯಾಂ ವಿಭಾಗಶಃ ॥ ೩೨ ॥
ತತೋ ಹ್ಯಪಃ ಸಮಾಹೂಯ ಊಚುಃ ಸರ್ವೇ ದಿವೌಕಸಃ ।
ಅದ್ಭಿಶ್ಚ ಗೃಹ್ಯತಾಮದ್ಯ ಹತ್ಯಾಂಶಃ ಕಾರ್ಯಸಿದ್ಧಯೇ ॥ ೩೩ ॥

---

ಯೋಚನೆಯನ್ನೂ ಮಾಡದೆ ನಾವು ಹೇಳಿದಂತೆ ಮಾಡು" ಎಂದನು. ಬೃಹಸ್ಪತಿಯು ಹೀಗೆ ಹೇಳಿದ ತರುವಾಯ ಭೂದೇವಿಯು ತಾನು ನಿಷ್ಪಾಪಳಾದರೂ ಆ ಬ್ರಹ್ಮಹತ್ಯೆಯ ಅಂಶವೊಂದನ್ನು ತೆಗೆದುಕೊಂಡಳು. ಬಳಿಕ ಆ ದೇವತೆಗಳು ವೃಕ್ಷಗಳೆಲ್ಲವನ್ನೂ ಕರೆದು, "ಎಲೈ! ನೀವು ದೇವತೆಗಳ ಕಾರ್ಯಸಿದ್ಧಿಗಾಗಿ ಈ ಬ್ರಹ್ಮಹತ್ಯೆಯ ಇನ್ನೊಂದಂಶವನ್ನು ತೆಗೆದುಕೊಳ್ಳಬೇಕು" ಎಂದರು. ಆ ವೃಕ್ಷಗಳಾದರೋ ಅಲ್ಲಿ ಸೇರಿದ್ದ ದೇವತೆಗಳನ್ನು ಕುರಿತು, "ಅಯ್ಯಾ ದೇವತೆಗಳಿರಾ! ನಾವು ತಪಸ್ವಿಗಳಿಗೆ ಫಲಗಳನ್ನು ದೊರಕಿಸುವವರು. ನಾವೇನಾದರೂ ಈ ಹತ್ಯೆಯನ್ನು ತೆಗೆದುಕೊಂಡುದಾದರೆ ಅವರೆಲ್ಲರೂ ಈ ಹತ್ಯೆಯೊಡಗೂಡಿ ಪಾಪಿಗಳಾಗುತ್ತಾರೆಯಲ್ಲವೆ? ಆದುದರಿಂದೆಲೈ ಮಹಾಭಾಗರೇ! ನೀವು ಈ ವಿಷಯವನ್ನು ಚೆನ್ನಾಗಿ ಆಲೋಚಿಸಿರಿ" ಎಂದು ಹೇಳಿದುವು. ಆಗ ಪುರೋಹಿತನಾದ ಬೃಹಸ್ಪತಿಯು ಅವುಗಳನ್ನು ಕುರಿತು, "ಎಲೈ ವೃಕ್ಷಗಳಿರಾ! ಯೋಚಿಸಬೇಡಿರಿ. ದೇವೇಂದ್ರನ ಅನುಗ್ರಹದಿಂದ ನಿಮ್ಮನ್ನು ಕತ್ತರಿಸಿದರೂ ನೀವು ಯಾವಾಗಲೂ ಅನೇಕ ಕೊಂಬೆಗಳಿಂದ ಕೂಡಿದವರಾಗುತ್ತೀರಿ" ಎಂದು ಹೇಳಿದನು. ಈ ರೀತಿ ಹೇಳಿದ ಬಳಿಕ ಅವುಗಳೆಲ್ಲವೂ ಆ ಹತ್ಯೆಯ ಒಂದಂಶವನ್ನು ತೆಗೆದುಕೊಂಡವು.

೩೩. ತರುವಾಯ ನದಿಗಳೆಲ್ಲವನ್ನೂ ಕರೆದು ಆ ದೇವತೆಗಳು, "ಎಲೈ ನದಿಗಳಿರಾ! ದೇವತೆಗಳ ಕಾರ್ಯದ ಸಲುವಾಗಿ ನೀವೂ ಈ ಬ್ರಹ್ಮಹತ್ಯೆಯಲ್ಲಿ ಒಂದು ಭಾಗವನ್ನು ತೆಗೆದುಕೊಳ್ಳಬೇಕು" ಎಂದರು.

**ತದಾಹ್ಯಾಪೋ ಮಿಲಿತ್ವಾಥ ಊಚುಃ ಸರ್ವಾಃ ಪುರೋಧಸಂ ।**
**ಯಾನಿಕಾನಿ ಚ ಪಾಪಾನಿ ತಥಾ ದುಶ್ಚರಿತಾನಿ ಚ ॥ ३४ ॥**
**ಅಸ್ಮತ್ಸಂಪರ್ಕಸಂಬಂಧಾತ್ಸ್ನಾನ್ಯಶೌಚಾಶನಾದಿಭಿಃ ।**
**ಪುನಂತಿ ಪ್ರಾಣಿನಃ ಸರ್ವೇ ಪಾಪೇನ ಪರಿವೇಷ್ಟಿತಾಃ ॥ ३५ ॥**
**ತಾಸಾಂ ವಚನಮಾಕರ್ಣ್ಯ ಬೃಹಸ್ಪತಿರುವಾಚ ಹ ।**
**ಮಾ ಭಯಂ ಕ್ರಿಯತಾಮಾಪ ಏನಸಾ ದುಸ್ತರೇಣ ಹಿ ॥ ३६ ॥**
**ಆಪಃ ಪುನಂತು ಸರ್ವೇಷಾಂ ಚರಾಚರನಿವಾಸಿನಾಂ ।**
**ತದಾ ಸ್ತ್ರಿಯಃ ಸಮಾಹೂಯ ಬೃಹಸ್ಪತಿರುವಾಚ ಹ ॥ ३७ ॥**
**ಅದ್ಯೈವ ಗ್ರಾಹ್ಯೋ ಹತ್ಯಾಂಶಃ ಸರ್ವಕಾರ್ಯಾರ್ಥಸಿದ್ಧಯೇ ।**
**ನಿಶಮ್ಯ ತದ್ಗುರೋರ್ವಾಕ್ಯಮೂಚುಃ ಸರ್ವಾಶ್ಚ ಯೋಷಿತಃ ॥ ३८ ॥**
**ಪಾಪಮಾಚರತೇ ಯೋಷಾ ತೇನ ಪಾಪೇನ ನಾನ್ಯಥಾ ।**
**ಲಿಪ್ಯಂತೇ ಬಹವಃ ಪಕ್ಷಾ ಇತಿ ವೇದಾನುಶಾಸನಂ ॥ ३९ ॥**
**ಶ್ರುತಮಸ್ತಿ ನತೇ ಕಿಂಚಿದ್ಧೇ ಪುರೋಧೋ ವಿಮೃಶ್ಯತಾಂ ।**
**ಯೋಷಿದ್ಭಿಃ ಪ್ರೋಚ್ಯಮಾನೋಽಪಿ ಉವಾಚಾಥ ಬೃಹಸ್ಪತಿಃ ॥ ४० ॥**

---

೩೪–೩೫. ಆಗಲಾ ನದಿಗಳೆಲ್ಲವೂ ಒಟ್ಟಿಗೆ ಸೇರಿ ಪುರೋಹಿತನಾದ ಬೃಹಸ್ಪತಿಯನ್ನು ಕುರಿತು, "ಎಲೈ ಗುರುವೇ! ಯಾವ ಯಾವ ಪಾಪಗಳೂ, ದುಶ್ಚರಿತಗಳೂ ಇರುವುವೋ ಅವೆಲ್ಲವೂ ನಮ್ಮನ್ನು ಸ್ಪರ್ಶಿಸುವುದರಿಂದಲೂ, ನಮ್ಮಲ್ಲಿ ಸ್ನಾನಾಹ್ನೀಕಗಳನ್ನು ಮಾಡುವುದರಿಂದಲೂ ಕಳೆದುಹೋಗಿ ಹಾಗೆ ಮಾಡಿದವರೆಲ್ಲರೂ ಪಾವನರಾಗುತ್ತಾರೆ. ಇಂತಿರುವಲ್ಲಿ ನಾವೇನಾದರೂ ಈ ಹತ್ಯೆಯ ಅಂಶವನ್ನು ತೆಗೆದುಕೊಂಡರೆ ಎಲ್ಲರೂ ಪಾಪಿಗಳೇ ಆಗುವುದಿಲ್ಲವೆ!" ಎಂದವು.

೩೬–೪೧. ಆಗ ಬೃಹಸ್ಪತಿಯು, "ಎಲೈ ನದಿಗಳಿರಾ! ನೀವು ದುಸ್ತರವಾದ ಈ ಹತ್ಯಾಂಶದಿಂದ ಭಯಪಡಬೇಡಿರಿ. ನದಿಗಳು (ಜಲವು) ಯಾವಾಗಲೂ ಚರಾಚರ ಪ್ರಾಣಿಗಳ ಪಾಪಗಳನ್ನು ತೊಳೆಯುವವುಗಳೇ ಆಗಿರಲಿ" ಎಂದನು. ಆ ವರವನ್ನು ಕೈಕೊಂಡು ನದಿಗಳು ಬ್ರಹ್ಮಹತ್ಯೆಯ ಮತ್ತೊಂದಂಶವನ್ನು ತೆಗೆದುಕೊಂಡವು. ಆಮೇಲೆ ಆ ಬೃಹಸ್ಪತಿಯು ಹೆಂಗಸರೆಲ್ಲರನ್ನೂ ಕರೆದು ಅವರನ್ನು ಕುರಿತು, "ಎಲೌ ಹೆಂಗಳಿರಾ! ದೇವತೆಗಳ ಕಾರ್ಯಸಿದ್ಧಿಗಾಗಿ ನೀವೀ ಹತ್ಯೆಯ ಕಡೆಯ ಒಂದಂಶವನ್ನು ತೆಗೆದುಕೊಳ್ಳಿರಿ" ಎಂದನು. ಗುರುವಿನ ಈ ಮಾತನ್ನು ಕೇಳಿ ಹೆಂಗಸರೆಲ್ಲರೂ ಅವನನ್ನು ಕುರಿತು, "ಎಲೈ ಬೃಹಸ್ಪತಿಯೇ! ಹೆಂಗಸರೇನಾದರೂ ಪಾಪ ಮಾಡಿದುದಾದರೆ ಆ ಪಾಪದಿಂದ ಅನೇಕರು ಪಾಪಿಗಳಾಗುವರೆಂದು ವೇದಗಳು ಹೇಳುತ್ತವೆ. ಎಲೈ! ಪುರೋಹಿತನಾದ ನೀನು ಇದೆಲ್ಲವನ್ನೂ ಕೇಳಿಯೇ ಇರುವೆ. ಆದುದರಿಂದ ಚೆನ್ನಾಗಿ

ಮಾ ಭಯಂ ಕ್ರಿಯತಾಂ ಸರ್ವಾಃ ಪಾಪಾದಸ್ಮಾತ್ಸುಲೋಚನಾಃ ।
ಭವಿಷ್ಯಾಣಾಂ ತಥಾನ್ಯೇಷಾಂ ಭವಿಷ್ಯಂತಿ ಫಲಪ್ರದಃ ।
ಹತ್ಯಾಂಶೋ ಯೋ ಹಿ ಸರ್ವಾಸಾಂ ಯಥಾ ಕಾಮಿತ್ವಮೇವಚ ॥೪೧॥
ಏವಮಂಶಾಶ್ಚ ಹತ್ಯಾಯಾಶ್ಚತ್ವಾರಃ ಕಲ್ಪಿತಾ ಸುರೈಃ ।
ನಿವಾಸಮಕರೋತ್ಸದ್ಯಸ್ತೇಷು ತೇಷು ದ್ವಿಜೋತ್ತಮಾಃ ॥ ೪೨ ॥
ನಿಷ್ಪಾಪೋ ಹಿ ತದಾ ಜಾತೋ ಮಹೇಂದ್ರೋ ಹ್ಯಭಿಷೇಚಿತಃ ।
ದೇವಪುರ್ಯಾಂ ಸುರಗಣೈಸ್ತಥೈವ ಋಷಿಭಿಃ ಸಹ ॥ ೪೩ ॥
ಶಚ್ಯಾ ಸಮೇತೋ ಹಿ ತದಾ ಪುರಂದರೋ
ಬಭೂವ ವಿಶ್ವಾಧಿಪತಿರ್ಮಹಾತ್ಮಾ ।
ದೇವೈಃ ಸಮೇತೋ ಹಿ ಮಹಾನುಭಾವೈ
ರ್ಮುನೀಶ್ವರೈಃ ಸಿದ್ಧಗಣೈಸ್ತದಾನೀಂ ॥ ೪೪ ॥
ತದಾಗ್ನಯಃ ಶೋಭನಾ ವಾಯವಶ್ಚ
ಸರ್ವೇ ಗ್ರಹಾಃ ಸುಪ್ರಭಾಃ ಶಾಂತಿಯುಕ್ತಾಃ ।
ಜಾತಾಃ ಸದ್ಯಃ ಪೃಥಿವೀ ಶೋಭಮಾನಾ
ತಥಾದ್ರಯೋ ಮಣಿಪ್ರಭವಾ ಬಭೂವುಃ ॥ ೪೫ ॥

---

ಯೋಚಿಸುವವನಾಗು'' ಎಂದರು. ಆ ಸ್ತ್ರೀಯರು ಈ ರೀತಿ ಹೇಳುತ್ತಿದ್ದರೂ ಬೃಹಸ್ಪತಿಯು ''ಎಲೌ ಸುಂದರಿಯರೇ! ನೀವು ಭಯಪಡಬೇಡಿರಿ. ಮುಂದೆ ಹುಟ್ಟುವವರೆಲ್ಲರಿಗೂ ಇದು ಫಲಪ್ರದವಾಗುತ್ತದೆ. ಹತ್ಯಾಂಶವನ್ನು ತೆಗೆದು ಕೊಂಡಿರುವವರೆಲ್ಲರೂ ತಮ್ಮ ಇಷ್ಟಾರ್ಥಗಳನ್ನು ಪಡೆಯುತ್ತಾರೆ'' ಎಂದನು.

೪೨–೪೪. ಎಲೈ ವಿಪ್ರರೇ! ಈ ರೀತಿ ಆ ದೇವತೆಗಳು ಬ್ರಹ್ಮಹತ್ಯೆಯನ್ನು ವಿಭಾಗಮಾಡಿ ಅದು ನೆಲಸುವುದಕ್ಕೆ ಸ್ಥಳಗಳನ್ನೂ ಕಲ್ಪಿಸಿಕೊಟ್ಟರು. ಆಗ ದೇವೇಂದ್ರನು ಪಾಪರಹಿತನಾದನು. ತರುವಾಯ ಅವನು ದೇವತೆಗಳಿಂದಲೂ, ಋಷಿಗಳಿಂದಲೂ, ಶಚೀದೇವಿಯಿಂದಲೂ ಕೂಡಿದವನಾಗಿ ದೇವಪುರಿಯಾದ ಅಮರಾವತಿಯಲ್ಲಿ ಪಟ್ಟಾಭಿಷಿಕ್ತನಾದನು. ಹೀಗೆ ಮಹಾನುಭಾವರಾದ ದೇವ ಮುನಿಗಳಿಂದಲೂ, ಸಿದ್ಧಸಮೂಹದಿಂದಲೂ ಪಟ್ಟಾಭಿಷಿಕ್ತನಾದ ಆ ಮಹಾತ್ಮನು ಮತ್ತೆ ಲೋಕಕ್ಕೆಲ್ಲ ಸ್ವಾಮಿಯಾದನು.

೪೫. ಆಗ (ಗಾರ್ಹಪತ್ಯ, ಆಹವನೀಯ, ದಾಕ್ಷಿಣಾತ್ಯಗಳೆಂಬ) ಅಗ್ನಿ ತ್ರಯಗಳು ಕಳಕಳಿಸುತ್ತಲೂ, ವಾಯುವು ಸುಪ್ರಸನ್ನನಾಗಿ ಬೀಸುತ್ತಲೂ, ಗ್ರಹಗಳೆಲ್ಲವೂ ಒಳ್ಳೆಯ ಕಾಂತಿಯೊಡಗೂಡಿಯೂ ಕಂಗೊಳಿಸತೊಡಗಿದವು. ಎಲ್ಲೆಲ್ಲೂ ಶಾಂತಿಯು ನೆಲಸಿತು. ಪೃಥಿವಿಯೂ, ಅಂತೆಯೇ ಪರ್ವತಗಳೂ ರತ್ನಗಳನ್ನು ಬೆಳೆಯುವುವಾಗಿ ವಿರಾಜಿಸಿದುವು.

ಪ್ರಸನ್ನಾನಿ ತಥಾ ಹ್ಯಾಸನ್ಮನಾಂಸಿ ಚ ಮನಸ್ವಿನಾಂ ॥ ೪೬ ॥
ನದ್ಯಶ್ಚಾಮೃತವಾಹಿನ್ಯೋ ವೃಕ್ಷಾಹ್ಯಾಸನ್ಸದಾಫಲಾಃ ।
ಅಕೃಷ್ಟಪಚ್ಯೌಷಧಯೋ ಬಭೂವುಶ್ಚಾಮೃತೋಪಮಾಃ ॥ ೪೭ ॥
ಏಕಪದ್ಯೇನ ಸರ್ವೇಷಾಮಿಂದ್ರಲೋಕನಿವಾಸಿನಾಂ ।
ಬಭೂವ ಪರಮೋತ್ಸಾಹೋ ಮಹಾಮೋದಕರಸ್ತಥಾ ॥ ೪೮ ॥

ಲೋಮಶ ಉವಾಚ :—

ಏತಸ್ಮಿನ್ನಂತರೇ ತ್ವಷ್ಟಾ ದೃಷ್ಟ್ವಾ ಚೇಂದ್ರಮಹೋತ್ಸವಂ ।
ಬಭೂವ ರುಷಿತೋಽತೀವ ಪುತ್ರಶೋಕಪ್ರಪೀಡಿತಃ ॥ ೪೯ ॥
ಜಗಾಮ ನಿರ್ವೇದಪರಸ್ತಪಸ್ತಪ್ತುಂ ಸುದಾರುಣಂ ।
ತಪಸಾ ತೇನ ಸಂತುಷ್ಟೋ ಬ್ರಹ್ಮಾ ಲೋಕಪಿತಾಮಹಃ ॥ ೫೦ ॥
ತ್ವಷ್ಟಾರಮಬ್ರವೀತ್ತುಷ್ಟೋ ವರಂ ವರಯ ಸುವ್ರತ ।
ತದಾ ವವ್ರೇ ವರಂ ತ್ವಷ್ಟಾ ಸರ್ವಲೋಕಭಯಾವಹಂ ॥ ೫೧ ॥

---

೪೬–೪೭. ಆ ಸಮಯದಲ್ಲಿಯೇ ಮಹಾಮನಸ್ವಿಗಳಾದ ತಪಸ್ವಿಗಳ ಮನಸ್ಸುಗಳೆಲ್ಲವೂ ಸುಪ್ರಸನ್ನಗಳಾದುವು. ನದಿಗಳೆಲ್ಲವೂ ಅಮೃತಸಮಾನವಾದ ನಿರ್ಮಲೋದಕಗಳನ್ನು ಪ್ರವಹಿಸಿದುವು. ವೃಕ್ಷಗಳು ಎಲ್ಲ ಋತುಗಳಲ್ಲಿಯೂ ಫಲಭರಿತಗಳಾದುವು. ಕೃಷಿ ಮಾಡದೆಯೇ ಕ್ಷೇತ್ರಾದಿಗಳಲ್ಲೆಲ್ಲ ಅಮೃತಕ್ಕೆಣೆಯಾದ ಧಾನ್ಯಾದಿಗಳು ಬೆಳೆಯತೊಡಗಿದುವು.

೪೮. ಇಂದ್ರಲೋಕದಲ್ಲಿ ವಾಸಮಾಡುತ್ತಿದ್ದ ದೇವತೆಗಳಿಗಂತು ಏಕಕಾಲದಲ್ಲಿಯೇ ಅತಿಶಯಾನಂದವೂ ಪರಮೋತ್ಸಾಹವೂ ಉಂಟಾಯಿತು.

೪೯. ಲೋಮಶನು ಹೇಳುತ್ತಾನೆ:—ಎಲೈ ಶೌನಕಾದಿ ಮುನಿಗಳಿರಾ! ಹೀಗೆ ಎತ್ತೆತ್ತಲೂ ಶಾಂತಿಯು ನೆಲಸಿ ಸಂತೋಷವುಂಟಾಗಿರಲು, ಇತ್ತ ವಿಶ್ವರೂಪನ ತಂದೆಯಾದ ವಿಶ್ವಕರ್ಮನು ಮೊದಲೇ ಪುತ್ರಮರಣದಿಂದ ದುಃಖಪೀಡಿತನಾಗಿದ್ದುದರಿಂದ ಈಗ ಮಹೇಂದ್ರನ ಪಟ್ಟಾಭಿಷೇಕವನ್ನೂ ನೋಡಿದ ತರುವಾಯ ಬಹಳವಾಗಿ ರೋಷಗೊಂಡನು.

೫೦–೫೧. ಇಂತು ಕೆರಳಿಹೋದ ಆ ತ್ವಷ್ಟೃವು ಏನುಮಾಡುವುದಕ್ಕೂ ಸಾಗದೆ ವಿರಕ್ತಿಯನ್ನು ಹೊಂದಿ ಭಯಂಕರವಾದ ತಪಸ್ಸನ್ನೆಸಗಲು ಹೊರಟು ಹೋದನು. ಅವನ ತಪಸ್ಸಿನಿಂದ ಲೋಕಪಿತಾಮಹನಾದ ಬ್ರಹ್ಮನು ಸುಪ್ರಸನ್ನನಾಗಿ ಅವನನ್ನು ಕುರಿತು, “ಎಲೈ ವಿಶ್ವಕರ್ಮನೇ! ಸುವ್ರತನಾದ ನೀನು ಪ್ರಕೃತದಲ್ಲಿ ಬೇಕಾದ ವರವನ್ನು ಬೇಡು” ಎಂದನು. ಆಗಲಾ ವಿಶ್ವಕರ್ಮನು ಎಲ್ಲ ಲೋಕಗಳಿಗೂ ಭಯವನ್ನುಂಟುಮಾಡುವ ವರವನ್ನು ಕೇಳಿದನು; “ಎಲೈ ಬ್ರಹ್ಮನೇ! ದೇವತೆಗಳೆಲ್ಲರಿಗೂ ಭಯಂಕರನಾಗುವ ಮಗನನ್ನು ಅನುಗ್ರಹಿಸು.”

ತಥೇತಿ ಚ ವರೋ ದತ್ತೋ ಬ್ರಹ್ಮಣಾ ಪರಮೇಷ್ಠಿನಾ ।
ವರದಾನಾತ್ಸದ್ಯ ಏವ ಬಭೂವ ಪುರುಷಸ್ತದಾ ॥ ೫೨ ॥
ವೃತ್ರ ನಾಮಾಂಕಿತಸ್ತತ್ರ ದೈತ್ಯೋ ಹಿ ಪರಮಾದ್ಭುತಃ ।
ಧನುಷಾಂ ಶತಮಾತ್ರಂ ಹಿ ಪ್ರತ್ಯಹಂ ವವೃಧೇಽಸುರಃ ॥ ೫೩ ॥
ಪಾತಾಲಾನ್ನಿರ್ಗತಾ ದೈತ್ಯಾ ಯೇ ಪುರಾಽಮೃತಮಂಥನೇ ।
ಘಾತಿತಾಃ ಸುರಸಂಘೈಶ್ಚ ಭೃಗುಣಾ ಜೀವಿತಾಸ್ತ್ವರಾತ್ ॥ ೫೪ ॥
ಸರ್ವಂ ಮಹೀತಲಂ ವ್ಯಾಪ್ತಂ ತೇನೈಕೇನ ಮಹಾತ್ಮನಾ ॥ ೫೫ ॥
ತದಾ ಸರ್ವೇಽಪಿ ಋಷಯೋ ವಧ್ಯಮಾನಾಸ್ತಪಸ್ವಿನಃ ।
ಬ್ರಹ್ಮಾಣಂ ತ್ವರಿತಾಃ ಸರ್ವೇ ಊಚುರ್ವ್ಯಸನಮಾಗತಂ ॥ ೫೬ ॥
ತಥಾ ಚೇಂದ್ರಾದಯೋ ದೇವಾ ಗಂಧರ್ವಾ ಸಮರುದ್ಗಣಾಃ ।
ಬ್ರಹ್ಮಣಾ ಕಥಿತಂ ಸರ್ವಂ ತ್ವಷ್ಟುಶ್ಚೈತಚ್ಚಿಕೀರ್ಷಿತಂ ॥ ೫೭ ॥
ಭವದ್ವಧಾರ್ಥಂ ಜನಿತಸ್ತಪಸಾ ಪರಮೇಣ ತು ।
ವೃತ್ರೋ ನಾಮ ಮಹಾತೇಜಾಃ ಸರ್ವದೈತ್ಯಾಧಿಪೋ ಮಹಾನ್ ॥ ೫೮ ॥

---

೫೨. ಬ್ರಹ್ಮನು ಹಾಗೆಯೇ ಆಗಲೆಂದು ಆ ವರವನ್ನನುಗ್ರಹಿಸಿದನು. ಆ ವರದಾನದ ಮಹಿಮೆಯಿಂದ ಕೂಡಲೇ ಅಲ್ಲಿ ಒಬ್ಬ ಪುರುಷನುಂಟಾದನು.

೫೩. ಅವನ ಹೆಸರು ವೃತ್ರನೆಂದು. ಅವನು ಮಹಾ ಭಯಂಕರನಾಗಿದ್ದನು. ಆ ಅಸುರನು ಪ್ರತಿನಿತ್ಯವೂ ನೂರು ಧನುಸ್ಸುಗಳಷ್ಟು ಹೆಚ್ಚು ಹೆಚ್ಚಾಗಿ ಬೆಳೆಯ ತೊಡಗಿದನು.

೫೪. ಅದನ್ನು ತಿಳಿದೊಡನೆಯೇ ಯಾವ ಯಾವ ದೈತ್ಯರು ಅಮೃತಮಥನ ಕಾಲದಲ್ಲಿ ದೇವತೆಗಳ ಹಿಂಸೆಗೊಳಗಾಗಿ ಶುಕ್ರಾಚಾರ್ಯನಿಂದ ಪುನರ್ಜೀವಿತ ರಾಗಿದ್ದರೋ ಅವರೆಲ್ಲರೂ ಪಾತಾಳಲೋಕದಿಂದ ಭೂಲೋಕಕ್ಕೆ ಬಂದರು.

೫೫–೫೬. ಎಲೈ ಮುನಿಗಳಿರಾ! ಭೂಮಿಯೆಲ್ಲವೂ ಆ ವೃತ್ರಾಸುರನೊಬ್ಬ ನಿಂದಲೇ ತುಂಬಿಹೋಯಿತು. ಆಗಲವನು ಮೊದಲು ಮಹರ್ಷಿಗಳೆಲ್ಲರನ್ನೂ ಕೊಲ್ಲತೊಡಗಿದನು. ಅವನ ಹಿಂಸೆಗೊಳಗಾದ ಅವರೆಲ್ಲರೂ ಜಾಗ್ರತೆಯಾಗಿ ಬ್ರಹ್ಮನಲ್ಲಿಗೆ ಬಂದು ತಮಗೊದಗಿರುವ ಕಷ್ಟವನ್ನು ಅರಿಕೆ ಮಾಡಿಕೊಂಡರು.

೫೭–೫೮. ಇವರಂತೆ ಇಂದ್ರನೇ ಮೊದಲಾದ ದೇವತೆಗಳೂ ಸಹ ಗಂಧರ್ವ ರೊಡನೆಯೂ, ಮರುದ್ಗಣಗಳೊಡನೆಯೂ ಅಲ್ಲಿಗೆ ಬಂದು ತಮ್ಮ ತಮ್ಮ ತೊಂದರೆ ಗಳನ್ನು ಹೇಳಿಕೊಂಡರು. ಆಗ ಬ್ರಹ್ಮನು ವಿಶ್ವಕರ್ಮನ ತಪಸ್ಸೇ ಮೊದಲಾದ ಎಲ್ಲ ವೃತ್ತಾಂತವನ್ನೂ ಅವರಿಗೆ ತಿಳಿಸಿ ದೇವೇಂದ್ರನನ್ನು ಕುರಿತು, "ಎಲೈ ಮಹೇಂದ್ರನೇ! ದಾನವಾಧಿಪನಾದ ಆ ವೃತ್ರನು ನಿನ್ನನ್ನು ಕೊಲ್ಲುವುದಕ್ಕಾಗಿಯೇ, ಅವನ ತಂದೆಯೆಸಗಿದ ಮಹತ್ತರವಾದ ತಪಸ್ಸಿನ ಫಲವಾಗಿ ಜನಿಸಿರುವನು.

ತಥಾಪಿ ಯತ್ನಃ ಕ್ರಿಯತಾಂ ಯಥಾ ವಧ್ಯೋ ಭವೇದಸೌ ।
ನಿಶಮ್ಯ ಬ್ರಹ್ಮಣೋ ವಾಕ್ಯಮೂಚುರ್ದೇವಾಃ ಸವಾಸವಾಃ ॥ ೫೯ ॥

ದೇವಾ ಊಚುಃ:—
ಯದಾ ಇಂದ್ರೋ ಹಿ ಹತ್ಯಾಯಾ ವಿಮುಕ್ತಃ ಸ್ಥಾಪಿತೋ ದಿವಿ ।
ತದಾಸ್ಮಾಭಿರಕಾರ್ಯಂ ವೈ ಕೃತಮಸ್ತಿ ದುರಾಸದಂ ॥ ೬೦ ॥
ಶಸ್ತ್ರಾಣ್ಯಸ್ತ್ರಾಣ್ಯನೇಕಾನಿ ಸಂಕ್ಷಿಪ್ತಾನಿ ಹ್ಯಬುದ್ಧಿತಃ ।
ದಧೀಚಸ್ಯಾಶ್ರಮೇ ಬ್ರಹ್ಮನ್ಕಿಂಕಾರ್ಯಂ ಕರವಾಮಹೇ ॥ ೬೧ ॥
ತಚ್ಛೃತ್ವಾ ಪ್ರಹಸನ್ವಾಕ್ಯಂ ದೇವಾನ್ಬ್ರಹ್ಮಾ ತದಾಬ್ರವೀತ್ ।
ಚಿರಂ ಸ್ಥಿತಾನಿ ವಿಜ್ಞಾಯಾಗಚ್ಛಧ್ವಂ ತಾನಿ ವೈ ಸುರಾಃ ॥ ೬೨ ॥
ಗತ್ವಾ ದೇವಾಸ್ತದಾ ಸರ್ವೇ ನಾಪಶ್ಯನ್‌ಸ್ವಂ ಸ್ವಮಾಯುಧಂ ।
ಪಪ್ರಚ್ಛುಶ್ಚ ದಧೀಚಿಂ ತೇ ಸೋವಾದೀನ್ನೈವ ವೇದ್ಮ್ಯಹಂ ॥ ೬೩ ॥
ಪುನರ್ಬ್ರಹ್ಮಾಣಮಾಗತ್ಯ ಊಚುಸ್ಸರ್ವೇ ಮುನೇರ್ವಚಃ ॥ ೬೪ ॥

---

೫೯. ಆದರೂ ನೀವು ಅವನ ವಧೆಗಾಗಿ ಪ್ರಯತ್ನಿಸಿರಿ" ಎಂದು ಹೇಳಿದನು. ಮಹೇಂದ್ರನೇ ಮೊದಲಾದ ದೇವತೆಗಳು ಬ್ರಹ್ಮನ ಈ ಮಾತುಗಳನ್ನು ಕೇಳಿ ಆತನನ್ನು ಕುರಿತು ಹೀಗೆಂದರು.

೬೦. ದೇವತೆಗಳು ಹೇಳುತ್ತಾರೆ:—"ಎಲೈ ಕಮಲಾಸನನೇ! ನಾವು ಈ ಮಹೇಂದ್ರನನ್ನು ಬ್ರಹ್ಮಹತ್ಯೆಯಿಂದ ಬಿಡಿಸಿ ದೇವರಾಜ್ಯದಲ್ಲಿ ಪಟ್ಟಾಭಿಷಿಕ್ತನನ್ನಾಗಿ ಮಾಡಿದಾಗ ಒಂದು ದೊಡ್ಡ ಅಕಾರ್ಯವನ್ನು ಮಾಡಿದೆವು.

೬೧–೬೨. ಆಗ ನಾವು ನಮ್ಮಲ್ಲಿದ್ದ ಅಸ್ತ್ರಶಸ್ತ್ರಗಳೆಲ್ಲವನ್ನೂ ತಿಳಿಗೇಡಿತನದಿಂದ ದಧೀಚಿಮುನಿಯ ಆಶ್ರಮದಲ್ಲಿಯೇ ಎಸೆದುಬಿಟ್ಟೆವು. ಈಗ ನಾವು ನಿಶ್ಶಸ್ತ್ರರಾಗಿರುವೆವು. ಆದುದರಿಂದ ಈಗ ನಾವೇನು ಮಾಡಬೇಕು?" ಈ ಮಾತನ್ನಾಲಿಸಿ ಬ್ರಹ್ಮನು ನಕ್ಕು, "ಎಲೈ! ನೀವು ಈಗಲೇ ಹೋಗಿ ಬಹು ಕಾಲದಿಂದಲೂ ಇರುವ ಆ ಶಸ್ತ್ರಗಳು ಎಲ್ಲೆಲ್ಲಿ ಬಿದ್ದಿರುವವೋ ಆ ಸ್ಥಳಗಳನ್ನು ಚೆನ್ನಾಗಿ ಹುಡುಕಿಕೊಂಡು ಬನ್ನಿರಿ" ಎಂದನು.

೬೩. ಅಂತೆಯೇ ದೇವತೆಗಳೆಲ್ಲರೂ ದಧೀಚಿಮುನಿಯ ಆಶ್ರಮಕ್ಕೆ ಬಂದು ನೋಡಲಾಗಿ ಆ ಅಸ್ತ್ರಶಸ್ತ್ರಗಳಾವುವೂ ಅಲ್ಲಿರಲಿಲ್ಲವು. ಆಗಲವರು ದಧೀಚಿಮುನಿಯನ್ನು ಕೇಳಲು ಅವನು ನಾನು ಕಾಣೆನೆಂದು ಹೇಳಿದನು.

೬೪. ತರುವಾಯ ದೇವತೆಗಳು ಮತ್ತೆ ಬ್ರಹ್ಮನಲ್ಲಿಗೆ ಬಂದು ದಧೀಚಿಮುನಿಯು ಹೇಳಿದುದನ್ನಾತನಿಗೆ ತಿಳಿಸಿದರು.

ಬ್ರಹ್ಮೋವಾಚ ತದಾ ದೇವಾನ್ಸರ್ವೇಷಾಂ ಕಾರ್ಯಸಿದ್ಧಯೇ ।
ತಸ್ಯಾಸ್ಥೀನ್ಯೇವ ಯಾಚಧ್ವಂ ಪ್ರದಾಸ್ಯತಿ ನ ಸಂಶಯಃ ॥ ೬೫ ॥
ತಚ್ಛ್ರುತ್ವಾ ಬ್ರಹ್ಮಣೋ ವಾಕ್ಯಂ ಶಕ್ರೋ ವಚನಮಬ್ರವೀತ್ ॥ ೬೬ ॥
ವಿಶ್ವರೂಪೋ ಹತೋ ದೇವ ದೇವಾನಾಂ ಕಾರ್ಯಸಿದ್ಧಯೇ ।
ಏಕ ಏವ ತದಾ ಬ್ರಹ್ಮನ್ಪಾಪಿಷ್ಠೋಽಹಂ ಕೃತಃ ಸುರೈಃ ॥ ೬೭ ॥
ತಥಾ ಪುರೋಧಸಾ ಚೈವ ನಿಃಶ್ರೀಕಸ್ತತ್ಕ್ಷಣಾತ್ಕೃತಃ ।
ದಿಷ್ಟ್ಯಾ ಪರಮಯಾ ಚಾಹಂ ಪ್ರವಿಷ್ಟೋ ನಿಜಮಂದಿರಂ ॥ ೬೮ ॥
ದಧೀಚಂ ಘಾತಯಿತ್ವಾ ವೈ ತಸ್ಯಾಸ್ಥೀನಿ ಬಹೂನ್ಯಪಿ ।
ಅಸ್ತ್ರಾಣಿ ತಾನಿ ಭಗವನ್ಕೃತಾನಿ ಹ್ಯಶುಭಾನಿ ವೈ ॥ ೬೯ ॥
ತ್ವಷ್ಟ್ರಾ ಹಿ ಜನಿತೋ ಯೋ ವೈ ವೃತ್ರೋ ನಾಮ್ನೈಷ ದೈತ್ಯರಾಟ್ ।
ಕಥಂ ತಂ ಘಾತಯಾಮ್ಯೇವಂ ಸತತಂ ಪಾಪಭೀರುಣಾ ।
ಶಕ್ರೇಣೋಕ್ತಂ ನಿಶಮ್ಯಾಥ ಬ್ರಹ್ಮಾ ವಾಕ್ಯಮುವಾಚಹ ॥ ೭೦ ॥

---

೬೫–೬೬. ಆಗ ಬ್ರಹ್ಮನು ಅವರನ್ನು ಕುರಿತು, "ಅಯ್ಯಾ! ನಿಮ್ಮೆಲ್ಲರ ಕಾರ್ಯಸಿದ್ಧಿಗಾಗಿ ನೀವು ಆ ದಧೀಚಿಮುನಿಯ ಎಲವುಗಳನ್ನೇ ಶಸ್ತ್ರಗಳಾಗಿ ಯಾಚಿಸಿರಿ. ಆತನು ಅವುಗಳನ್ನು ನಿಮಗೆ ಕೊಡುವನು. ಸಂಶಯ ಪಡಬೇಡಿರಿ" ಎಂದನು. ಬ್ರಹ್ಮನಾಡಿದ ಈ ನುಡಿಯನ್ನು ಕೇಳಿ ಮಹೇಂದ್ರನು ಹೇಳಿದನು.

೬೭. "ಓ ಸ್ವಾಮಿಯೇ! ದೇವತೆಗಳ ಕಾರ್ಯಸಿದ್ಧಿಗಾಗಿ ನಾನು ಪೂರ್ವದಲ್ಲಿ ಪುರೋಹಿತನಾದ ವಿಶ್ವರೂಪನನ್ನು ವಧಿಸಿದೆನು. ಆಗ ದೇವತೆಗಳೆಲ್ಲರೂ ಸೇರಿ ನನ್ನೊಬ್ಬನನ್ನೇ ಪಾಪಿಷ್ಠನನ್ನಾಗಿಸಿದರು.

೬೮. ಅಂತೆಯೇ ನಮ್ಮ ಪುರೋಹಿತನಾದ ಬೃಹಸ್ಪತ್ಯಾಚಾರ್ಯನೂ ಸಹ ನನ್ನನ್ನು ಆ ಕ್ಷಣದಲ್ಲಿಯೇ ರಾಜ್ಯಭ್ರಷ್ಟನಾಗೆಂದು ಶಪಿಸಿದನು. ನಾನು ಅದೃಷ್ಟವಿಶೇಷದಿಂದ ಮತ್ತೆ ನನ್ನ ಪಟ್ಟಣವನ್ನು ಸೇರಿದೆನು.

೬೯–೭೦. ಎಲೈ ಪೂಜ್ಯನಾದ ಬ್ರಹ್ಮನೇ! ಈಗ ನಾನು ದಧೀಚಿಯನ್ನು ಕೊಂದು ಅವನ ದೇಹದಲ್ಲಿರುವ ಆ ಎಲವುಗಳನ್ನು ತೆಗೆದು ಅಸ್ತ್ರಗಳನ್ನು ಮಾಡಲೇ? ಯಾವಾಗಲೂ ಪಾಪಕ್ಕೆ ಅಂಜುತ್ತಲೇ ಇರುವ ನಾನು ಅಮಂಗಳ ಕರಗಳಾದ ಅವುಗಳಿಂದ, ತ್ವಷ್ಟೃವಿನಿಂದ ಹುಟ್ಟಿರುವ ವೃತ್ರನೆಂಬ ಆ ದೈತ್ಯ ರಾಜನನ್ನು ಹೇಗೆತಾನೇ ವಧಿಸಲಿ!" ದೇವೇಂದ್ರನಾಡಿದ ಈ ಮಾತನ್ನು ಕೇಳಿ, ಬ್ರಹ್ಮನು ರಾಜನೀತಿಶಾಸ್ತ್ರಾನುಸಾರವಾಗಿಯೇ ಅವನನ್ನು ಎಚ್ಚರಗೊಳಿಸುವವನಾಗಿ, ಅವನನ್ನು ಕುರಿತು ಹೇಳುತ್ತಾನೆ.

**ಅರ್ಥಶಾಸ್ತ್ರಪರೇಣೈವ ವಿಧಿನಾ ತಮಬೋಧಯುತ್ ।**
**ಆತತಾಯಿನಮಾಯಾಂತಂ ಬ್ರಾಹ್ಮಣಂ ಚ ತಪಸ್ವಿನಂ ।**
**ಹಂತುಕಾಮಂ ಜಿಘಾಂಸೀಯಾನ್ನತೇನ ಬ್ರಹ್ಮಹಾ ಭವೇತ್ ॥ ೭೧ ॥**

**ಇಂದ್ರ ಉವಾಚ :—**

**ದಧೀಚಸ್ಯ ವಧಾದ್ಬ್ರಹನ್ನಹಂ ಭೀತೋ ನ ಸಂಶಯಃ ।**
**ತಸ್ಮಾದ್ಬ್ರಹ್ಮವಧಾತ್ಸತ್ಯಂ ಮಹದೇನೋ ಭವಿಷ್ಯತಿ ॥ ೭೨ ॥**
**ಅತೋ ನ ಕಾರ್ಯಮಸ್ಮಾಭಿರ್ಬ್ರಾಹ್ಮಣಾನಾಂ ತು ಹೇಳನಂ ।**
**ಹೇಳನಾದ್ಬಹವೋ ದೋಷಾ ಭವಿಷ್ಯಂತಿ ನ ಚಾನ್ಯಥಾ ॥ ೭೩ ॥**
**ಅದೃಷ್ಟಂ ಪರಮಂ ಧರ್ಮಂ ವಿಧಿನಾ ಪರಮೇಣ ಹಿ ।**
**ಕರ್ತವ್ಯಂ ಮನಸಾ ಚೈವಂ ಪುರುಷೇಣ ವಿಜಾನತಾ ॥ ೭೪ ॥**
**ನಿಃಸ್ಪೃಹಂ ತಸ್ಯ ತದ್ವಾಕ್ಯಂ ಶ್ರುತ್ವಾ ಬ್ರಹ್ಮಾಹ್ಯುವಾಚ ತಂ ।**
**ಶಕ್ರ ಸ್ವಬುದ್ಧ್ಯಾ ವರ್ತಸ್ವ ದಧೀಚಿಂ ಗಚ್ಛ ಸತ್ವರಂ ॥ ೭೫ ॥**
**ಯಾಚಸ್ವ ತಸ್ಯ ಚಾಸ್ಥೀನಿ ದಧೀಚೇಃ ಕಾರ್ಯಗೌರವಾತ್ ।**
**ಗುರುಣಾ ಸಹಿತಃ ಶಕ್ರೋ ದೇವೈಃ ಸಹ ಸಮನ್ವಿತಃ ॥ ೭೬ ॥**

---

೭೧–೭೪. "ಅಯ್ಯಾ ದೇವೇಂದ್ರನೇ ! ತನ್ನನ್ನು ಕೊಲ್ಲಬಂದ ಶತ್ರುವು ಬ್ರಾಹ್ಮಣನಾಗಿರಲಿ, ತಪಸ್ವಿಯಾಗಿರಲಿ ಅವನನ್ನು ಕೊಲ್ಲಬಹುದು. ಅದರಿಂದ ಬ್ರಹ್ಮಹತ್ಯಾದೋಷವು ಬರುವುದಿಲ್ಲ." ಇಂದ್ರನು ಹೇಳುತ್ತಾನೆ:—"ಎಲೈ ಬ್ರಹ್ಮನೇ! ಏನೇ ಆಗಲಿ ಆ ದಧೀಚಿಮುನಿಯನ್ನು ಕೊಲ್ಲಲು ನಾನು ಹೆದರುತ್ತೇನೆ. ಆ ಬ್ರಾಹ್ಮಣನ ವಧೆಯಿಂದ ಮಹತ್ತರವಾದ ಪಾಪವು ಘಟಿಸುತ್ತದೆ. ಆದ್ದರಿಂದ ಬ್ರಾಹ್ಮಣರನ್ನು ಅವಹೇಳನ ಮಾಡಬಾರದು. ಹಾಗೆ ಮಾಡುವುದರಿಂದ ಅನೇಕ ದೋಷಗಳುಂಟಾಗುತ್ತವೆಯೆಂಬುದರಲ್ಲಿ ಸಂಶಯವಿಲ್ಲವು. ಆದುದರಿಂದ ಜ್ಞಾನಿಯಾದ ಮಾನವನು ಅದೃಷ್ಟವೂ, ಶ್ರೇಷ್ಠವೂ, ಧರ್ಮವೂ ಆದುದು ಯಾವುದೋ ಅದನ್ನೇ ಶ್ರೇಷ್ಠವಾದ ಶಾಸ್ತ್ರವಿಧಿಯಿಂದ ಮಾಡತಕ್ಕುದು."

೭೫–೭೬. ಹೀಗೆ ನಿಸ್ಪೃಹತೆಯಿಂದ ನುಡಿದ ಮಹೇಂದ್ರನ ಮಾತುಗಳನ್ನು ಕೇಳಿ ಬ್ರಹ್ಮನು ಸಂತೋಷಗೊಂಡು ಅವನನ್ನು ಕುರಿತು, "ಅಯ್ಯಾ ಇಂದ್ರನೇ! ನಿನ್ನ ಮನಸ್ಸಿನಂತೆ ನೀನು ನಡೆಯುವವನಾಗು. ಈಗ ನೀನು ದಧೀಚಿಯ ಬಳಿಗೆ ಜಾಗ್ರತೆಯಾಗಿ ತೆರಳು. ಹೋಗಿ, ಈಗ ಆಗಬೇಕಾಗಿರುವ ಕಾರ್ಯಗೌರವಕ್ಕಾಗಿ ಆತನ ಅಸ್ಥಿಗಳನ್ನು ಯಾಚಿಸು. ನೀನು ಆತನಲ್ಲಿಗೆ ಹೋಗುವಾಗ ನಿನ್ನ ಗುರುವಾದ ಬೃಹಸ್ಪತಿಯೊಡನೆಯೂ, ಈ ದೇವತೆಗಳೊಡನೆಯೂ ಹೋಗು" ಎಂದನು.

ತಥೇತಿ ಗತ್ವಾ ತೇ ಸರ್ವೇ ದಧೀಚಸ್ಯಾಶ್ರಮಂ ಶುಭಂ ।
ನಾನಾಸತ್ತ್ವಸಮಾಯುಕ್ತಂ ವೈರಭಾವವಿವರ್ಜಿತಂ ॥ ೭೭ ॥
ಮಾರ್ಜಾರ ಮೂಷಕಾಶ್ಚೈವ ಪರಸ್ಪರಮುದಾನ್ವಿತಾಃ ।
ಏಕಪದ್ಯೇನ ಸಿಂಹಾಶ್ಚ ಗಜಿನ್ಯಂ ಕಲಭೈಃ ಸಹ ॥ ೭೮ ॥
ತಥಾ ಜಾತ್ಯಶ್ಚ ವಿವಿಧಾಃ ಕ್ರೀಡಾಯುಕ್ತಾಃ ಪರಸ್ಪರಂ ।
ನಕುಲೈಃ ಸಹ ಸರ್ಪಾಶ್ಚ ಕ್ರೀಡಾಯುಕ್ತಾಃ ಪರಸ್ಪರಂ ॥ ೭೯ ॥
ಏವಂ ವಿಧಾನ್ಯನೇಕಾನಿ ಹ್ಯಾಶ್ಚರ್ಯಾಣಿ ತದಾಶ್ರಮೇ ।
ಪಶ್ಯಂತೋ ವಿಬುಧಾಃ ಸರ್ವೇ ವಿಸ್ಮಯಂ ಪರಮಂ ಯಯುಃ ॥ ೮೦ ॥
ಅಥಾಸನೇ ಮುನಿಶ್ರೇಷ್ಠಂ ದದೃಶುಃ ಪರಮಾಸ್ಥಿತಂ ।
ತೇಜಸಾ ಪರಮೇಣೈವ ಭ್ರಾಜಮಾನಂ ಯಥಾ ರವಿಂ ॥ ೮೧ ॥
ವಿಭಾವಸುಂ ದ್ವಿತೀಯಂ ವಾ ಸುವರ್ಚಾಸಹಿತಂ ತದಾ ।
ಯಥಾ ಬ್ರಹ್ಮಾಹಿ ಸಾವಿತ್ರ್ಯಾ ತಥಾಸೌ ಮುನಿಸತ್ತಮಃ ॥ ೮೨ ॥
ತೇ ಪ್ರಣಮ್ಯ ತತೋ ದೇವಾ ವಚನಂ ಚೇದಮಬ್ರುವನ್ ।
ತ್ವಂ ದಾತಾ ತ್ರಿಷು ಲೋಕೇಷು ತ್ವತ್ಸಕಾಶಮಿಹಾಗತಾಃ ॥ ೮೩ ॥

---

೭೭–೮೦. ಅಯ್ಯಾ ವಿಪ್ರರೇ! ಆ ಬಳಿಕ ಇಂದ್ರಾದಿ ದೇವತೆಗಳೆಲ್ಲರೂ ಪಾವನವಾದ ದಧೀಚಿಯ ಆಶ್ರಮಕ್ಕೆ ಬಂದರು. ಆ ಆಶ್ರಮವಾದರೋ ಹಗೆಯನ್ನೇ ತೊರೆದಿರುವ ಅನೇಕ ಮೃಗಗಳಿಂದ ತುಂಬಿದ್ದಿತು. ಇಲಿಗಳೂ, ಬೆಕ್ಕುಗಳೂ, ಸಿಂಹಗಳೂ, ಸಲಗಗಳೊಡಗೂಡಿದ ಹೆಣ್ಣಾನೆಗಳೂ, ಅಂತೆಯೇ ಇತರ ಜಾತಿಯ ಮೃಗಗಳೂ ಪರಸ್ಪರ ಸಂತೋಷದಿಂದ ಆಟವಾಡುತ್ತಿದ್ದವು. ಹಾವುಗಳೂ ಮುಂಗುಸಿಗಳೊಡನೆ ಅಂತೆಯೇ ಕ್ರೀಡಾಸಕ್ತವಾಗಿದ್ದುವು. ಇಂತಹ ಆಶ್ಚರ್ಯಗಳು ಆ ಆಶ್ರಮದಲ್ಲಿ ಅನೇಕವಾಗಿದ್ದವು. ದೇವತೆಗಳು ಅವುಗಳೆಲ್ಲವನ್ನೂ ಕಂಡು ಆಶ್ಚರ್ಯಭರಿತರಾದರು.

೮೧–೮೨. ಬಳಿಕಲಾ ಮಹೇಂದ್ರಾದಿಗಳು ಪವಿತ್ರವಾದ ಪೀಠದಲ್ಲಿ ಕುಳಿತು ಮಹತ್ತರವಾದ ತನ್ನ ತೇಜಸ್ಸಿನಿಂದಲೇ ಸೂರ್ಯನಂತೆ ಬೆಳಗುತ್ತ, ಸುವರ್ಚೆಯೊಡಗೂಡಿ ಎರಡನೆಯ ಯಜ್ಞೇಶ್ವರನಂತೆಯೂ, ಸಾವಿತ್ರಿಯೊಡಗೂಡಿದ ಬ್ರಹ್ಮನಂತೆಯೂ ವಿರಾಜಿಸುತ್ತಿದ್ದ ಆ ದಧೀಚಿಮುನಿಯನ್ನು ಕಂಡರು.

೮೩. ಆಗಲವರು ಆ ಮುನಿಯನ್ನು ನಮಸ್ಕರಿಸಿ ಆತನನ್ನು ಕುರಿತು, "ಎಲೈ ಮುನಿಯೇ! ಮೂರು ಲೋಕಗಳಲ್ಲಿಯೂ ನೀನೇ ಅನುಪಮನಾದ ದಾತೃವೆಂದು ಕೇಳಿ ತಿಳಿದು ನಾವೆಲ್ಲರೂ ನಿನ್ನ ಬಳಿಗೆ ಯಾಚನೆಗಾಗಿ ಬಂದಿರುವೆವು" ಎಂದು ಹೇಳಿದರು.

**ನಿಶಮ್ಯ ವಚನಂ ತೇಷಾಂ ದೇವಾನಾಂ ಮುನಿರಬ್ರವೀತ್ ।**
**ಕಿಮರ್ಥಮಾಗತಾಃ ಸರ್ವೇ ವದಧ್ವಂ ತತ್ಸುರೋತ್ತಮಾಃ ॥ ೮೪ ॥**
**ಪ್ರಯಚ್ಛಾಮಿ ನ ಸಂದೇಹೋ ನಾನ್ಯಥಾ ಮಮ ಭಾಷಿತಂ ।**
**ತದೋಚುಃ ಸಹಿತಾಃ ಸರ್ವೇ ದಧೀಚಿಂ ಸ್ವಾರ್ಥಕಾಮುಕಾಃ ॥ ೮೫ ॥**
**ಭಯಭೀತಾ ವಯಂ ವಿಪ್ರ ಭವದ್ದರ್ಶನ ಕಾಂಕ್ಷಿಣಃ ।**
**ತ್ರಾತಾರಂ ತ್ವಾಂ ಸಮಾಕರ್ಣ್ಯ ಬ್ರಹ್ಮಣಾ ನೋದಿತಾ ವಯಂ ॥ ೮೬ ॥**
**ಸಂಪ್ರಾಪ್ತಾ ವಿದ್ಧಿ ತತ್ಸರ್ವಂ ದಾತುಮರ್ಹೋಽಥ ಸುವ್ರತ ॥ ೮೭ ॥**
**ನಿಶಮ್ಯ ವಚನಂ ತೇಷಾಂ ಕಿಂ ದಾತವ್ಯಂ ತದುಚ್ಯತಾಂ ॥ ೮೮ ॥**
**ತತೋ ದೇವಾಽಬ್ರುವೀದ್ವಿಪ್ರ ದೈತ್ಯಾನಾಂ ನಿಧನಾಯ ನಃ ।**
**ಶಸ್ತ್ರನಿರ್ಮಾಣಕಾರ್ಯಾರ್ಥಂ ತವಾಸ್ಥೀನಿ ಪ್ರಯಚ್ಛವೈ ॥ ೮೯ ॥**
**ಪ್ರಹಸ್ಯೋವಾಚ ವಿಪ್ರರ್ಷಿಸ್ತಿಷ್ಠಧ್ವಂ ಕ್ಷಣಮೇವ ಹಿ ।**
**ಸ್ವಯಮೇವ ತ್ವಹಂ ದೇವಾಸ್ತ್ಯಕ್ಷ್ಯಾಮ್ಯದ್ಯ ಕಲೇವರಂ ॥ ೯೦ ॥**
**ಇತ್ಯುಕ್ತ್ವಾ ತಾನಥೋ ಪತ್ನೀಂ ಸಮಾಹೂಯ ಸುವರ್ಚಸಂ ।**
**ಪ್ರೋವಾಚ ಸ ಮಹಾತೇಜಾಃ ಶೃಣು ದೇವಿ ಶುಚಸ್ಮಿತೇ ॥ ೯೧ ॥**

---

೮೪–೮೮. ಆ ಮುನಿಯು "ಎಲೈ ದೇವಶ್ರೇಷ್ಠರೇ! ನೀವು ಬಂದಿರುವ ಕಾರ್ಯವೇನೆಂಬುದನ್ನು ಹೇಳಿರಿ. ನೀವು ನನ್ನಲ್ಲಿ ಯಾವುದನ್ನು ಯಾಚಿಸಿದರೂ ನಾನದನ್ನು ಕೊಡುವೆನೆಂಬುದರಲ್ಲಿ ಸಂಶಯವಿಲ್ಲವು. ನನ್ನ ಮಾತು ನಿಷ್ಫಲವಾಗದು" ಎಂದನು. ಆಗ ಕೇವಲ ಸ್ವಾರ್ಥಪರರಾದ ಆ ದೇವತೆಗಳೆಲ್ಲರೂ ಅವನನ್ನು ಕುರಿತು, "ಎಲೈ ವಿಪ್ರನೇ! ಭಯದಿಂದ ತತ್ತಳಿಸಿಹೋಗಿರುವ ನಾವು ನೀನೇ ಅನಾಥರಕ್ಷಕನೆಂಬ ವಾರ್ತೆಯನ್ನು ಕೇಳಿ ಬ್ರಹ್ಮನಿಂದ ಪ್ರೇರಿತರಾಗಿ ನಿನ್ನನ್ನು ನೋಡಲು ಇಲ್ಲಿಗೈತಂದಿರುವೆವು. ಜ್ಞಾನಿಯಾದ ನೀನು ನಮ್ಮ ವಿಷಯವೆಲ್ಲವನ್ನೂ ತಿಳಿದು ನಮಗೆ ಬೇಕಾದುದನ್ನು ದಾನಮಾಡಬೇಕು" ಎಂದರು. ದೇವತೆಗಳಿಂತೆನಲು ಆ ಮುನಿಯು, "ಅಯ್ಯಾ! ನಾನು ನಿಮಗಾವುದನ್ನು ಕೊಡಬೇಕೆಂಬುದನ್ನು ಹೇಳಿರಿ" ಎಂದನು.

೮೯–೯೪. ಆಗ ದೇವತೆಗಳು, "ಎಲೈ ವಿಪ್ರನೇ! ದೈತ್ಯಸಂಹಾರಕ್ಕಾಗಿ ನಾವು ಶಸ್ತ್ರಗಳನ್ನು ಮಾಡಿಕೊಳ್ಳಬೇಕಾಗಿರುವುದು. ಆದುದರಿಂದ ಆ ಕಾರ್ಯಕ್ಕೋಸುಗ ನೀನು ನಿನ್ನ ಅಸ್ಥಿಗಳನ್ನು ಕೊಡಬೇಕು" ಎಂದರು. ಅವರ ಈ ನುಡಿಯನ್ನು ಕೇಳಿ ಆ ಬ್ರಹ್ಮರ್ಷಿಯು ನಕ್ಕು ಅವರನ್ನು ಕುರಿತು, "ಅಯ್ಯಾ! ಒಂದು ಕ್ಷಣಕಾಲ ತಡೆಯಿರಿ. ನಾನು ಈ ದೇಹವನ್ನು ತೊರೆಯುತ್ತೇನೆ" ಎಂದು ಹೇಳಿ, ತನ್ನ ಹೆಂಡತಿಯಾದ ಸುವರ್ಚೆಯನ್ನು ಕರೆದು, "ಎಲೆ ಶುಚಿಸ್ಮಿತೇ, ದೇವಿ! ಕೇಳು. ಈ ದೇವತೆಗಳು ನನ್ನ ಎಲವುಗಳನ್ನು ಯಾಚಿಸಿರುವರು.

ಅಸ್ಥ್ಯರ್ಥಂ ಯಾಚಿತೋ ದೇವೈರ್ತ್ಯಜಾಮ್ಯೇತತ್ಕಲೇವರಂ ।
ಬ್ರಹ್ಮಲೋಕಂ ವ್ರಜಾಮ್ಯದ್ಯ ಪರಮೇಣ ಸಮಾಧಿನಾ ॥ ೯೨ ॥
ಮಯಿ ಯಾತೇ ಬ್ರಹ್ಮಲೋಕಂ ತ್ವಂ ಸ್ವಧರ್ಮೇಣ ತತ್ರಮಾಂ ।
ಪ್ರಾಪ್ಸ್ಯೇವ ನ ಚ ಸಂದೇಹೋ ವೃಥಾ ಚಿಂತಾಂ ಚ ಮಾ ಕೃಥಾಃ ॥೯೩॥
ಇತ್ಯುಕ್ತ್ವಾ ತಾಂ ಸ್ವಪತ್ನೀಂ ಸ ಪ್ರೇರಯಾಮಾಸ ಚಾಶ್ರಮಂ ।
ತತೋ ದೇವಾಗ್ರತೋ ವಿಪ್ರಃ ಸಮಾಧಿಮಗಮತ್ತದಾ ॥ ೯೪ ॥
ಸಮಾಧಿನಾ ಪರೇಣೈವ ವಿಸೃಜ್ಯ ಸ್ವಕಲೇವರಂ ।
ಬ್ರಹ್ಮಲೋಕಂ ಗತಃ ಸದ್ಯಃ ಪುನರ್ನಾವರ್ತತೇ ಯತಃ ॥ ೯೫ ॥
ದಧೀಚಿನಾಮಾ ಮುನಿವೃಂದವರ್ಯಃ
ಶಿವಪ್ರಿಯಃ ಶಿವದೀಕ್ಷಾಭಿಯುಕ್ತಃ ।
ಪರೋಪಕಾರಾರ್ಥಮಿದಂ ಕಲೇವರಂ
ಶೀಘ್ರಂ ಸ ವಿಪ್ರೋತ್ಯಜದಾತ್ಮನಾ ತದಾ ॥ ೯೬ ॥

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ದೇವೈರಸ್ಥಿಕೃತಾಽಭ್ಯರ್ಥಿತಸ್ಯ ದಧೀಚೇರ್ಯೋಗೇನ ಸ್ವದೇಹ ವಿಸರ್ಜನಂ" ನಾಮ ಷೋಡಶೋಽಧ್ಯಾಯಃ**

---

ಆದುದರಿಂದ ಈಗ ನಾನು ಪರಮಸಮಾಧಿನಿಷ್ಠನಾಗಿ ಈ ದೇಹವನ್ನು ತೊರೆದು ಬ್ರಹ್ಮಲೋಕವನ್ನು ಸೇರುವೆನು. ನಾನು ಅಲ್ಲಿಗೆ ಹೋದ ಬಳಿಕ ನೀನೂ ಸಹ ನಿನ್ನ ಧರ್ಮದಲ್ಲಿ ನೀನಿದ್ದುಕೊಂಡು ನನ್ನನ್ನು ಅಲ್ಲಿಯೇ ಹೊಂದುವೆ ಯೆಂಬುದರಲ್ಲಿ ಸಂಶಯವಿಲ್ಲ. ಆದುದರಿಂದ ನಿಷ್ಪ್ರಯೋಜನವಾಗಿ ದುಃಖಿಸ ಬೇಡ" ಎಂದು ಹೇಳಿ ಆಕೆಯನ್ನು ಆಶ್ರಮಕ್ಕೆ ಕಳುಹಿಸಿದ ತರುವಾಯ ಆ ದೇವತೆಗಳೆದುರಿನಲ್ಲಿಯೇ ಉತ್ತಮವಾದ ಸಮಾಧಿಯನ್ನು ಹೊಂದಿದನು.

೯೫–೯೬. ಎಲೈ ವಿಪ್ರರೇ! ಆ ಮುನಿಯು ಶ್ರೇಷ್ಠವಾದ ಆ ಸಮಾಧಿ ಯಿಂದಲೇ ಕಳೇಬರವನ್ನು ತೊರೆದು, ಕೂಡಲೇ ಪುನರ್ಜನ್ಮವೇ ಇಲ್ಲದ ಬ್ರಹ್ಮ ಲೋಕಕ್ಕೆ ಹೊರಟುಹೋದನು. ಈ ರೀತಿ ಶಿವನಿಗೆ ಅತ್ಯಂತ ಪ್ರಿಯನಾಗಿಯೂ, ಮಹಾ ಶಿವಭಕ್ತನಾಗಿಯೂ, ಶಿವದೀಕ್ಷಾಯುತನಾಗಿಯೂ ಇದ್ದ ಆ ದಧೀಚಿ ಮುನಿಯು ಪರೋಪಕಾರಾರ್ಥವಾಗಿ ತಾನಾಗಿಯೇ ತನ್ನ ಆ ದೇಹವನ್ನು ತೊರೆದವನಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ದೇವಕೃತಾಸ್ಥಿಯಾಚನಾ – ದಧೀಚಿಮುನಿಯ ಆತ್ಮತ್ಯಾಗ" ಎಂಬ ಹದಿನಾರನೆಯ ಅಧ್ಯಾಯವು ಮುಗಿದುದು

## ಸಪ್ತದಶೋಽಧ್ಯಾಯಃ

### ಬಲಿದೈತ್ಯಕೃತಸಂಗ್ರಾಮೋದ್ಯೋಗ ವರ್ಣನಂ

ಲೋಮಶ ಉವಾಚ :—

ತತಃ ಸರ್ವೇ ಸುರಗಣಾ ದೃಷ್ಟ್ವಾತಂ ವಿಲಯಂಗತಂ ।
ಚಿಂತಯಂತಃ ಸುರಗಣಾಃ ಕಥಂ ಚ ವಿದಧಾಮಹೇ ॥ ೧ ॥
ಸುರಭಿಂ ಚಾಹ್ವಯಿತ್ವಾಥ ತದೋವಾಚ ಶಚೀಪತಿಃ ।
ಕಲೇವರಂ ದಧೀಚಸ್ಯ ಲಿಹ್ಯಾಸ್ತ್ವಂ ವಚನಾನ್ಮಮ ॥ ೨ ॥
ತಥೇತಿ ಚ ವಚೋ ಮತ್ವಾ ತತ್ಕ್ಷಣಾದೇವ ಲಿಹ್ಯತತ್ ।
ನಿರ್ಮಾಂಸಂ ಚ ಕೃತಂ ಸದ್ಯಸ್ತಯಾ ಧೇನ್ವಾ ಕಲೇವರಂ ॥ ೩ ॥
ಜಗೃಹುಸ್ತಾನಿ ಚಾಸ್ಥೀನಿ ಚಕ್ರುಃ ಶಸ್ತ್ರಾಣಿ ವೈಸುರಾಃ ।
ತಸ್ಯ ವಂಶೋದ್ಭವಂ ವಜ್ರಂ ಶಿರೋ ಬ್ರಹ್ಮಶಿರಸ್ತಥಾ ॥ ೪ ॥
ಅನ್ಯಾನಿ ಚಾಸ್ಥೀನಿ ಬಹೂನಿ ತಸ್ಯ
ಋಷೇಸ್ತದಾನೀಂ ಜಗೃಹುಃ ಸುರಾಶ್ಚ ।
ತಥಾ ಶಿರಾಜಾಲಮಯಾಂಶ್ಚ ಪಾಶಾಂ
ಶ್ಚಕ್ರುಃ ಸುರಾ ವೈರಯುತಾಶ್ಚ ದೈತ್ಯಾನ್ ॥ ೫ ॥

---

### ಕನ್ನಡದ ಅನುವಾದ

#### ನಮುಚಿವಧೆ— ಬಲಿಯು ಯುದ್ಧಸನ್ನದ್ಧನಾದುದು

೧–೨. ಲೋಮಶನು ಹೇಳುತ್ತಾನೆ :—ಅಯ್ಯಾ ಶೌನಕಾದಿ ಮುನಿಗಳಿರಾ ! ಈ ಪ್ರಕಾರ ದಧೀಚಮುನಿಯು ಬ್ರಹ್ಮಲೋಕಕ್ಕೆ ತೆರಳಿದ ತರುವಾಯ ದೇವತೆಗಳೆಲ್ಲರೂ ಏನುಮಾಡಬೇಕೆಂದು ಯೋಚಿಸಿದರು. ಆಗ ಮಹೇಂದ್ರನು ಸುರಭಿಯನ್ನು ಕರೆದು, " ಎಲೌ ಕಾಮಧೇನುವೇ ! ನೀನು ಈ ದಧೀಚನ ಕಳೇಬರವನ್ನು ನೆಕ್ಕಿ ನಿರ್ಮಾಂಸವನ್ನಾಗಿ ಮಾಡು" ಎಂದು ಹೇಳಿದನು.

೩. ಆಗಲಾ ಸುರಭಿಯು ಹಾಗೆಯೇ ಆಗಲೆಂದೊಪ್ಪಿಕೊಂಡು ಕೂಡಲೇ ಆ ಮುನಿಯ ದೇಹವನ್ನು ನೆಕ್ಕಿ ಅದನ್ನು ಮಾಂಸರಹಿತವನ್ನಾಗಿ ಮಾಡಿತು.

೪. ಬಳಿಕ ದೇವತೆಗಳೆಲ್ಲರೂ ಆ ದೇಹದಲ್ಲಿನ ಮೂಳೆಗಳೆಲ್ಲವನ್ನೂ ತೆಗೆದುಕೊಂಡು ಅವುಗಳಿಂದ ಶಸ್ತ್ರಗಳನ್ನು ಮಾಡಿಕೊಂಡರು. ಅಯ್ಯಾ ಮುನಿಗಳಿರಾ ! ಆ ದಧೀಚಮಹರ್ಷಿಯ ಪೃಷ್ಠದ ಮೂಳೆಯಿಂದಾದುದೇ ವಜ್ರಾಯುಧವು. ಬ್ರಹ್ಮಶಿರಾಸ್ತ್ರವೂ ಅಂತೆಯೇ ಆದುದು.

೫. ಈ ಪ್ರಕಾರ ಆ ದೇವತೆಗಳು ದೈತ್ಯರನ್ನು ಯುದ್ಧದಲ್ಲಿ ಸೋಲಿಸುವುದಕ್ಕಾಗಿ ಆ ಮುನಿಯ ಕಳೇಬರದಿಂದ ಅನೇಕ ಎಲವುಗಳನ್ನು ತೆಗೆದುಕೊಂಡು ಶಿರಸ್ಸುಗಳ ಸಮೂಹಗಳುಳ್ಳ ಅನೇಕ ಅಸ್ತ್ರಶಸ್ತ್ರಗಳನ್ನು ಮಾಡಿಕೊಂಡರು.

ಶಸ್ತ್ರಾಣಿ ಕೃತ್ವಾ ತೇ ಸರ್ವೇ ಮಹಾಬಲಪರಾಕ್ರಮಾಃ ।
ಯಯುರ್ದೇವಾಸ್ತ್ವರಾಯುಕ್ತಾ ವೃತ್ರಘಾತನತತ್ಪರಾಃ ॥ ೬ ॥

ತತಸ್ಸುವರ್ಚಾಶ್ಚ ದಧೀಚಿಪತ್ನೀ
ಯಯಾ ಪ್ರೇಷಿತಾ ಸಾ ಸುರಕಾರ್ಯಸಿದ್ಧಯೇ ।
ವ್ಯಾಲೋಕಯತ್ತತ್ರ ಸಮೇತ್ಯ ಸರ್ವಂ
ಮೃತಂ ಪತಿಂ ದೇಹಮಥೋ ದದರ್ಶ ತಂ ॥ ೭ ॥

ಜ್ಞಾತ್ವಾ ಚ ತತ್ಸರ್ವಮಿದಂ ಸುರಾಣಾಂ
ಕೃತ್ಯಂ ತದಾನೀಂ ಚ ಚುಕೋಪ ಸಾಧ್ವೀ ।
ದದೌ ಸತೀ ಶಾಪಮತೀವ ರುಷ್ಟಾ
ತದಾ ಸುವರ್ಚಾ ಋಷಿವರ್ಯಪತ್ನೀ ॥ ೮ ॥

ಅಹೋ ಸುರಾ ದುಷ್ಟತರಾಶ್ಚ ಸರ್ವೇ
ಸರ್ವೇ ಹ್ಯಶಕ್ತಾಶ್ಚ ತಥೈವ ಲುಬ್ಧಾಃ ।
ತಸ್ಮಾಚ್ಚ ಸರ್ವೇಽಪ್ರಜಸೋ ಭವಂತು
ದಿವೌಕಸೋಽದ್ಯಪ್ರಭೃತೀತ್ಯುವಾಚ ಸಾ ॥ ೯ ॥

ಏವಂ ಶಾಪಂ ದದೌ ತೇಷಾಂ ಸುರಾಣಾಂ ಸಾ ತಪಸ್ವಿನೀ ।
ಪ್ರವಿಶ್ಯಾಶ್ವತ್ಥಮೂಲೇ ಸಾ ಸ್ವೋದರಂ ದಾರಯತ್ತದಾ ॥ ೧೦ ॥

---

೬. ಇಂತು ಶಸ್ತ್ರಸನ್ನದ್ಧರಾಗಿ ಮಹಾಬಲಪರಾಕ್ರಮಿಗಳಾದ ಅವರೆಲ್ಲರೂ ಕೂಡಲೇ ವೃತ್ರಾಸುರನ ಸಂಹಾರಕ್ಕಾಗಿ ರಣಪ್ರಯಾಣ ಮಾಡಿದರು.

೭-೮. ಅತ್ತ ದೇವತೆಗಳ ಕಾರ್ಯಸಿದ್ಧಿಗಾಗಿಯೇ ಕಳುಹಲಾಗಿದ್ದ ಆ ದಧೀಚಮುನಿ ಪತ್ನಿಯಾದ ಸುವರ್ಚಾದೇವಿಯು ದೇವತೆಗಳು ಮಾಡಿದ್ದುದೆಲ್ಲವನ್ನೂ ಕೇಳಿ ತಿಳಿದು ಆ ಪ್ರದೇಶಕ್ಕೆ ಬಂದು ತನ್ನ ಪತಿಯ ಆ ಕಳೇಬರದ ಸ್ಥಿತಿಯನ್ನು ನೋಡಿ ಬಹಳವಾಗಿ ಕೋಪಗೊಂಡಳು. ತರುವಾಯ ಆ ಮಹಾಪತಿವ್ರತೆಯು ಬಹಳವಾಗಿ ರೋಷಗೊಂಡು ಅವರೆಲ್ಲರನ್ನೂ ಈ ರೀತಿ ಶಪಿಸಿದಳು.

೯. "ಎಲೈ ದೇವತೆಗಳಿರಾ! ನೀವೆಲ್ಲರೂ ಮಹಾದುರಾತ್ಮರು; ಕೇವಲ ದುರ್ಬಲರು; ದುರಾಶೆಯುಳ್ಳವರು; ನೀವು ಇಂತಹ ಹೀನಕಾರ್ಯವನ್ನು ಮಾಡಿರುವಿರಾಗಿ ಇಂದಿನಿಂದ ಮೊದಲು ನೀವು ಸಂತಾನವಿಲ್ಲದವರಾಗಿ ಹೋಗಿರಿ."

೧೦. ಆ ತಪಸ್ವಿನಿಯು ಈ ರೀತಿ ಅವರೆಲ್ಲರನ್ನೂ ಶಪಿಸಿದ ಬಳಿಕ ಸಮೀಪದಲ್ಲಿಯೇ ಇದ್ದ ಒಂದಾನೊಂದು ಅಶ್ವತ್ಥವೃಕ್ಷದ ಬಳಿಗೈದಿ ಅದರಡಿಯಲ್ಲಿ ನಿಂತು ಹೊಟ್ಟೆಯನ್ನು ಬಗೆದುಕೊಂಡಳು.

ನಿರ್ಗತೋ ಜಠರಾದ್ಗರ್ಭೋ ದಧೀಚಸ್ಯ ಮಹಾತ್ಮನಃ ।
ಸಾಕ್ಷಾದ್ರುದ್ರಾವತಾರೋಽಸೌ ಪಿಪ್ಪಲಾದೋ ಮಹಾಪ್ರಭಾಃ ॥ ೧೧ ॥
ಪ್ರಹಸ್ಯ ಜನನೀ ಗರ್ಭಮುವಾಚ ರುಷಿತೇಕ್ಷಣಾ ।
ಸುವರ್ಚಾ ತಂ ಪಿಪ್ಪಲಾದಂ ಚಿರಂ ತಿಷ್ಠಾಸ್ಯಸನ್ನಿಧೌ ॥ ೧೨ ॥
ಅಶ್ವತ್ಥಸ್ಯ ಮಹಾಭಾಗ ಸರ್ವೇಷಾಂ ಸಫಲೋ ಭವೇಃ ।
ತಥೈವ ಭಾಷಮಾಣಾ ಸಾ ಸುವರ್ಚಾ ತನಯಂ ಪ್ರತಿ ।
ಪತಿಮನ್ವಗಮತ್ಸಾಧ್ವೀ ಪರಮೇಣ ಸಮಾಧಿನಾ ॥ ೧೩ ॥
ಏವಂ ದಧೀಚ ಪತ್ನೀ ಸಾ ಪತಿನಾ ಸ್ವರ್ಗಮಾವ್ರಜತ್ ॥ ೧೪ ॥
ತೇ ದೇವಾಃ ಕೃತ ಶಸ್ತ್ರಾಸ್ತ್ರಾ ದೈತ್ಯಾನ್ಪ್ರತಿ ಸಮುತ್ಸುಕಾಃ ।
ಆಜಗ್ಮುಶ್ಚೇಂದ್ರಮುಖ್ಯಾಸ್ತೇ ಮಹಾಬಲಪರಾಕ್ರಮಾಃ ॥ ೧೫ ॥
ಗುರುಂ ಪುರಸ್ಕೃತ್ಯ ತದಾಜ್ಞಯಾ ತೇ
ಗಣಾಃ ಸುರಾಣಾಂ ಬಹವಸ್ತದಾನೀಂ ।
ಭುವಂ ಸಮಾಗತ್ಯ ಚ ಮಧ್ಯದೇಶ
ಮೂಷುಶ್ಚ ಸರ್ವೇ ಪರಮಾಸ್ತ್ರಯುಕ್ತಾಃ ॥ ೧೬ ॥

---

೧೧. ಕೂಡಲೇ ಆಕೆಯ ಹೊಟ್ಟೆಯಿಂದ ಮಹಾತ್ಮನಾದ ಆ ದಧೀಚ ಮುನಿಯ ಗರ್ಭವು ಹೊರಬಿದ್ದಿತು. ಆತನೇ ಮಹಾಪ್ರಭಾವಶಾಲಿಯೂ, ಸಾಕ್ಷಾತ್ ರುದ್ರನ ಅವತಾರಸ್ವರೂಪನೂ ಆದ ಪಿಪ್ಪಲಾದನು.

೧೨–೧೬. ಸುವರ್ಚೆಯು ಅವನನ್ನು ಕಂಡು ನಕ್ಕು ಆ ಬಳಿಕ ಕೆರಳಿದ ಕಣ್ಣುಗಳಿಂದವನನ್ನು ದುರದುರನೆ ನೋಡುತ್ತ, "ಮಗೂ! ನೀನು ಅಶ್ವತ್ಥ ವೃಕ್ಷದ ಬುಡದಲ್ಲಿಯೇ ಶಾಶ್ವತವಾಗಿ ನೆಲಸಿರುತ್ತ ಇಲ್ಲಿಗೈತಂದು ಸೇವೆ ಸಲ್ಲಿಸುವ ಭಕ್ತರಿಗೆಲ್ಲರಿಗೂ ಫಲಗಳನ್ನು ಅನುಗ್ರಹಿಸುವವನಾಗಿರು" ಎಂದು ಹೇಳಿದಳು. ಮಹಾಪತಿವ್ರತೆಯಾದ ಆ ದೇವಿಯು ಮಗನಾದ ಪಿಪ್ಪಲಾದನಿಗಿಂತು ಬೆಸಸಿ, ಪರಮಸಮಾಧಿಯಿಂದ ದೇಹವನ್ನು ತೊರೆದು ತನ್ನ ಪತಿಯನ್ನು ಹಿಂಬಾಲಿಸಿ ಹೊರಟುಹೋದಳು. ಅಯ್ಯಾ ಶೌನಕಾದಿಗಳಿರಾ! ಈ ರೀತಿ ದಧೀಚ ಪತ್ನಿಯು ನಿಜದೇಹವನ್ನು ತೊರೆದು ಪತಿಯನ್ನು ಸೇರಿದ ಬಳಿಕ ಆತನೊಡನೆಯೇ ಸ್ವರ್ಗವನ್ನು ಹೊಂದಿದಳು. ಇತ್ತ ಮಹಾಬಲಪರಾಕ್ರಮಿಗಳಾದ ಇಂದ್ರಾದಿ ದೇವತೆಗಳಾದರೋ ಅಸ್ತ್ರಶಸ್ತ್ರಗಳೆಲ್ಲವನ್ನೂ ಸಿದ್ಧಪಡಿಸಿಕೊಂಡು ದೈತ್ಯರೊಡನೆ ಕಾಳೆಗ ಮಾಡಲು ಉತ್ಸುಕರಾಗಿ ಹೊರಟುಬಂದರು. ಅವರೆಲ್ಲರೂ ತಮ್ಮ ಗುರುವಾದ ಬೃಹಸ್ಪತ್ಯಾಚಾರ್ಯನನ್ನು ಗೌರವಿಸಿ ಆತನ ಅಪ್ಪಣೆಯನ್ನು ಪಡೆದು ಶ್ರೇಷ್ಠವಾದ ಅಸ್ತ್ರಶಸ್ತ್ರಗಳಿಂದ ಕೂಡಿದವರಾಗಿ ಗುಂಪುಗುಂಪುಗಳಾಗಿ ಭೂಲೋಕಕ್ಕೆ ಬಂದು ಮಧ್ಯಪ್ರಾಂತದಲ್ಲಿ ಕಾಳೆಗಕ್ಕನುವಾಗಿ ನಿಂತರು.

ಸಮಾಗತಾನುಪಸ್ಪೃತ್ಯ ದೇವಾಂಶ್ಚೇಂದ್ರ ಪುರೋಗಮಾನ್ ।
ಯಯೌ ವೃತ್ರೋ ಮಹಾ ದೈತ್ಯೋ ದೈತ್ಯವೃಂದ ಸಮಾವೃತಃ ॥ ೧೭ ॥
ಯಥಾ ಮೇರೋಶ್ಚ ಶಿಖರಂ ಪರಿಪೂರ್ಣಂ ಪ್ರದೃಶ್ಯತೇ ।
ತಥಾಽಸೋಽಪಿ ಮಹಾತೇಜಾ ವಿಶ್ವಕರ್ಮಸುತೋ ಮಹಾನ್ ॥ ೧೮ ॥
ತೇನ ದೃಷ್ಟೋ ಮಹೇಂದ್ರಶ್ಚ ಮಹೇಂದ್ರೇಣ ಮಹಾಸುರಃ ।
ದೇವಾನಾಂ ದಾನವಾನಾಂ ಚ ದರ್ಶನಂ ಚ ಮಹಾದ್ಭುತಂ ॥ ೧೯ ॥
ತದಾ ತೇ ಬದ್ಧವೈರಾಶ್ಚ ದೇವದೈತ್ಯಾಃ ಪರಸ್ಪರಂ ।
ಅನ್ಯೋನ್ಯಮಭಿಸಂರಬ್ಧಾ ಜಗರ್ಜುಃ ಪರಮಾದ್ಭುತಂ ॥ ೨೦ ॥
ವಾದಿತ್ರಾಣಿ ಚ ಭೀಮಾನಿ ವಾದ್ಯಮಾನಾನಿ ಸರ್ವತಃ ।
ಶ್ರೂಯಂತೇಽತ್ರ ಗಭೀರಾಣಿ ಸುರಾಸುರಸಮಾಗಮೇ ॥ ೨೧ ॥
ವಾದ್ಯಮಾನೇಷು ತೂರ್ಯೇಷು ತೇ ಸರ್ವೇ ತ್ವರಯಾನ್ವಿತಾಃ ।
ಅನೇಕೈಶ್ಶಸ್ತ್ರಸಂಘಾತೈರ್ಜಘ್ನುರನ್ಯೋನ್ಯಮೋಜಸಾ ॥ ೨೨ ॥
ತದಾ ದೇವಾಸುರೇ ಯುದ್ಧೇ ತ್ರೈಲೋಕ್ಯಂ ಸಚರಾಚರಂ ।
ಭಯೇನ ಮಹತಾ ಯುಕ್ತಂ ಬಭೂವ ಗತಚೇತನಂ ॥ ೨೩ ॥

---

೧೭–೨೦. ಹೀಗೆ ಯುದ್ಧಕ್ಕಾಗಿ ಬಂದಿರುವ ಆ ಇಂದ್ರಾದಿ ದೇವತೆಗಳೊಡನೆ ಹೋರಲು, ಮಹಾ ದೈತ್ಯನಾದ ವೃತ್ರಾಸುರನೂ ಸಹ ದೈತ್ಯಸೇನೆಯೊಡನೆ ಅಲ್ಲಿಗೆ ಬಂದು ಸೇರಿದನು. ಎಲೈ ವಿಪ್ರರೇ! ಮಹಾ ತೇಜಸ್ವಿಯೂ, ವಿಶ್ವಕರ್ಮನ ಮಗನೂ ಆದ ವೃತ್ರಾಸುರನು ಮಹಾಮೇರುಪರ್ವತದ ತುಂಬು ಶಿಖರದಂತೆ ಒಪ್ಪುತ್ತಿದ್ದನು. ಅವನು ಕಾಳಗಕ್ಕಾಗಿ ಬಂದಿದ್ದ ಆ ದೇವೇಂದ್ರನನ್ನು ಒಮ್ಮೆ ಕಣ್ಣಿಟ್ಟು ನೋಡಿದನು, ದೇವೇಂದ್ರನೂ ಅವನನ್ನು ಅಂತೆಯೇ ನೋಡಿದನು. ಅದೇ ರೀತಿ ಅಲ್ಲಿದ್ದ ದೇವದಾನವರೆಲ್ಲರೂ ಒಬ್ಬರನ್ನೊಬ್ಬರ ದುರದುರನೆ ನೋಡಿದರು. ಆ ದೃಷ್ಟಿಯುದ್ಧವೇ ಮಹಾ ಭಯಂಕರವಾಗಿದ್ದಿತು. ತರುವಾಯ ಉಭಯ ಪಕ್ಷಗಳವರೂ ಒಬ್ಬರೊಡನೊಬ್ಬರು ಪ್ರಬಲವಾದ ವೈರವನ್ನು ಕಟ್ಟಿಕೊಂಡು ಭಯಂಕರ ಸಿಂಹನಾದವನ್ನು ಮಾಡಿದರು.

೨೧–೨೨. ಸುರಾಸುರರ ಆ ಸಮರಾಂಗಣದಲ್ಲಿ ಎತ್ತೆತ್ತಲೂ ಭಯಂಕರವಾದ ರಣಕಹಳೆಗಳ ಮತ್ತು ತುತ್ತೂರಿಗಳ ಧ್ವನಿಯು ಎತ್ತೆತ್ತಲೂ ಕೇಳಿಬಂದಿತು. ಆಗ ದೇವದಾನವರೀರ್ವರೂ ಅನೇಕ ಶಸ್ತ್ರಸಮೂಹಗಳಿಂದ ಒಬ್ಬರನ್ನೊಬ್ಬರು ಬಲವಾಗಿ ಹೊಡೆಯಲು ಮೊದಲುಮಾಡಿದರು.

೨೩. ಅಯ್ಯಾ ಮುನಿಗಳಿರಾ! ಈ ರೀತಿ ಮೊದಲಾದ ಆ ದೇವಾಸುರರ ಕಾಳಗದ ಸಮಯದಲ್ಲಿ ಚರಾಚರ ಪ್ರಾಣಿಗಳೊಡಗೂಡಿದ ಮೂರು ಲೋಕಗಳೂ ನಿಶ್ಚೇಷ್ಟಿತಗಳಾಗಿ ಭಯದಿಂದ ತತ್ತಳಿಸಿಹೋದುವು.

ಭೇದಿತಾಃ ಸ್ಫೋಟಿತಾಶ್ಚೈವ ಕೇಚಿಚ್ಛಸ್ತ್ರೈರ್ದ್ವಿಧಾಕೃತಾಃ ।
ನಾರಾಚೈಶ್ಚ ತಥಾ ಕೇಚಿಚ್ಛಸ್ತ್ರಾಸ್ತ್ರೈಃ ಶಕಲೀಕೃತಾಃ ॥ ೨೪ ॥
ಭಲ್ಲೈಶ್ಚೇರುರ್ಹತಾಃ ಕೇಚಿದ್ವ್ಯಂಗಭೂತಾ ದಿವೌಕಸಃ ।
ರಶ್ಮ್ಯೋ ಮೇಘಸಂಭೂತಾಃ ಪ್ರಕಾಶಂತೇ ನಭಸ್ಸ್ವಿವ ॥ ೨೫ ॥
ಶಿರಾಂಸಿ ಪತಿತಾನ್ಯೇವ ಬಹೂನಿ ಚ ನಭಸ್ತಲಾತ್ ।
ನಕ್ಷತ್ರಾಣೀವ ಚ ಯಥಾ ಮಹಾಪ್ರಲಯಸಂಕುಲಂ ॥ ೨೬ ॥
ಪ್ರವರ್ತಿತಂ ಮಧ್ಯದೇಶೇ ಸರ್ವಭೂತಕ್ಷಯಾವಹಂ ।
ಶಕ್ರೇಣ ಸಹಸಂಗ್ರಾಮಂ ಚಕಾರ ನಮುಚಿಸ್ತದಾ ॥ ೨೭ ॥
ವಜ್ರೇಣ ಜಘ್ನೇ ತರಸಾ ನಮುಚಿಂ ದೇವರಾಟ್ ಸ್ವಯಂ ।
ನ ರೋಮೈಕಂ ಚ ತ್ರುಟಿತಂ ನಮುಚೇರಸುರಸ್ಯ ಚ ॥ ೨೮ ॥
ವಜ್ರೇಣಾಪಿ ತದಾ ಸರ್ವೇ ವಿಸ್ಮಯಂ ಪರಮಂ ಗತಾಃ ।
ಅಸುರಾಶ್ಚ ಸುರಾಶ್ಚೈವ ಮಹೇಂದ್ರೋ ವ್ರೀಡಿತಸ್ತದಾ ॥ ೨೯ ॥

---

೨೪–೨೫. ಇತ್ತ ಕಾಳಗದಲ್ಲಿ ದೇವತೆಗಳಕಡೆ ಕೆಲವರು ಕತ್ತರಿಸಿಯೂ ಕೆಲವರು ಸಿಡಿದೂ, ಕೆಲವರು ಶಸ್ತ್ರಗಳಿಂದ ಇಬ್ಭಾಗವಾಗಿ ಸೀಳಿಯೂ, ಕೆಲವರು ಬಾಣಗಳಿಂದಲೂ, ಇನ್ನೂ ಕೆಲವರು ಶಸ್ತ್ರಾಸ್ತ್ರಘಾತಗಳಿಂದಲೂ ಉರುಳಿ ಹೋದರು. ಕೆಲ ದೇವತೆಗಳಂತು ಆ ದಾನವರ ಭಲ್ಲೆಯಗಳಿಂದ ಇಬ್ಭಾಗವಾಗಿ ಸೀಳಿ ಮಡಿದುರುಳಿದರು. ಅವರು ಹಾಗೆ ಸೀಳಿ ಉರುಳುವಾಗ ಮುಗಿಲು ಗಳಿಂದ ಸಿಡಿಲುಗಳೆಂತೋ ಅಂತು ಬೆಳಗುತ್ತಿದ್ದರು.

೨೬–೨೮. ಆ ಸಮರಾಂಗಣದಲ್ಲಿ ತರಿದುರುಳಿಸಿದ ಆ ದೇವದಾನವರ ಶಿರಸ್ಸುಗಳು ಪ್ರಳಯ ಸಮಯದಲ್ಲಿ ಬಾನಿನಿಂದ ತಾರೆಗಳೆಂತೋ ಅಂತು ಕೆಳಕ್ಕೆ ಉದುರುತ್ತಿದ್ದವು. ಅಯ್ಯಾ ವಿಪ್ರರೇ! ಭೂಮಂಡಲದ ಮಧ್ಯಪ್ರದೇಶದಲ್ಲಿ ಈ ಪ್ರಕಾರ ಆ ದೇವಾಸುರರಿಗೆ ಸಮಸ್ತ ಭೂತಗಳಿಗೂ ಭಯಂಕರವಾದ ಕಾಳಗವು ಪ್ರಾರಂಭವಾಯಿತು. ಆಗ ದೇವೇಂದ್ರನೊಡನೆ ನಮುಚಿಯೆಂಬ ದಾನವನು ಕಾಳಗಮಾಡಿದನು. ಆ ಕಾಳಗದಲ್ಲಿ ದೇವರಾಜನು ತನ್ನ ಬಲವನ್ನೆಲ್ಲ ಬಿಟ್ಟು ಆ ನಮುಚಿಯನ್ನು ವಜ್ರಾಯುಧದಿಂದ ಹೊಡೆದನು. ಆದರೆ ಆ ಹೊಡೆತದಿಂದ ಆ ದಾನವನ ಒಂದು ರೋಮವೂ ಕದಲಲಿಲ್ಲವು.

೨೯–೩೧. ಹೀಗೆ ವಜ್ರಾಯುಧದಿಂದ ಹೊಡೆದರೂ ಆ ದಾನವನು ಮಡಿಯದಿದ್ದುದನ್ನು ಕಂಡು ದೇವಾಸುರರೆಲ್ಲರೂ ಆಶ್ಚರ್ಯಪಟ್ಟರು. ಆಗಲಾ ಮಹೇಂದ್ರನು ನಾಚಿ ಮತ್ತೆ ಕೆರಳಿ ಗದೆಯಿಂದ ಆ ದಾನವನನ್ನು ಸದೆದನು. ಆದರೆ ಆ ಗದೆಯೇ ಪುಡಿಪುಡಿಯಾಯಿತಲ್ಲದೆ ಆ ದಾನವನಿಗೇನೂ ತೊಂದರೆ ಯಾಗಲಿಲ್ಲವು. ಆ ನಮುಚಿದಾನವನೊಮ್ಮೆ ಮೈಯನ್ನೊದರಲು ಅವನ ಮೈಗೆ

ಗದಯಾ ನಮುಚಿಂ ಜಘ್ನೇ ಗದಾ ಸಾಪಿ ವಿಚೂರ್ಣಿತಾ ।
ನಮುಚೇರಂಗಲಗ್ನಾಪಿ ಪಪಾತ ವಸುಧಾತಲೇ ॥ ೩೦ ॥
ತಥಾ ಶೂಲೇನ ಮಹತಾ ತಂ ಜಘಾನ ಪುರಂದರಃ ।
ತಚ್ಛೂಲಂ ಶತಧಾ ಚೂರ್ಣಂ ನಮುಚೇರಂಗಮಾಶ್ರಿತಂ ॥ ೩೧ ॥
ಏವಂ ತಂ ವಿವಧೈಶ್ಶಸ್ತ್ರೈರಾಜಘಾನಾಸುರಾರಿಹಾ ।
ಪ್ರಹಸ್ಯಮಾನೋ ನಮುಚಿರ್ನಜಘಾನ ಪುರಂದರಂ ॥ ೩೨ ॥
ತೂಷ್ಣೀಂಭೂತಸ್ತದಾ ಚೇಂದ್ರಶ್ಚಿಂತಯಾ ಪರಯಾ ಯುತಃ ।
ಕಿಂ ಕಾರ್ಯಂ ಕಿಮಕಾರ್ಯಂ ವಾ ಇತೀಂದ್ರೋ ನಾವಿದತ್ತದಾ ॥ ೩೩ ॥
ಏತಸ್ಮಿನ್ನಂತರೇ ತತ್ರ ಮಹಾಯುದ್ಧೇ ಮಹಾಭಯೇ ।
ಜಾತಾ ನಭೋಗತಾ ವಾಣೀ ಇಂದ್ರಮುದ್ದಿಶ್ಯ ಸತ್ವರಂ ॥ ೩೪ ॥

ಜಹ್ಯೇನಮದ್ಯಾಶು ಮಹೇಂದ್ರ ದೈತ್ಯಂ
ದಿವೌಕಸಾಂ ಘೋರತರಂ ಭಯಾವಹಂ ।
ಫೇನೇನ ಚೈವಾಶು ಮಹಾಸುರೇಂದ್ರ
ಮಪಾಂ ಸಮೀಪೇನ ದುರಾಸದೇನ ॥ ೩೫ ॥
ಅನ್ಯೇನ ಶಸ್ತ್ರೇಣ ಚ ಆಹತೋಽಸೌ
ವಧ್ಯಃ ಕದಾಚಿನ್ನಭವತ್ಯಯಂ ತು ।
ತಸ್ಮಾನ್ನದೇವೇಶ ವಧಾರ್ಥಮಸ್ಯ
ಕುರು ಪ್ರಯತ್ನಂ ನಮುಚೇರ್ದುರಾತ್ಮನಃ ॥ ೩೬ ॥

---

ಅಂಟಿಕೊಂಡಿದ್ದ ಆ ಚೂರುಗಳೆಲ್ಲವೂ ನೆಲಕ್ಕುದುರಿಹೋದುವು. ತರುವಾಯ ಪುರಂದರನು ಶೂಲಾಯುಧದಿಂದ ಅವನನ್ನು ಬಡಿದನು. ಆ ಶೂಲವಾದರೋ ಆ ದಾನವನ ಮೈಯನ್ನು ಸೋಕಿ ನೂರು ಹೋಳುಗಳಾಗಿ ಸಿಡಿದುಹೋಯಿತು.

೩೨–೩೩. ಅಯ್ಯಾ ಮುನಿಗಳಿರಾ! ಈ ರೀತಿಯಾಗಿಯೇ ಆ ಮಹೇಂದ್ರನು ಬಗೆ ಬಗೆಯ ಶಸ್ತ್ರಗಳಿಂದ ಆ ಅಸುರನನ್ನು ಹೊಡೆದರೂ ಏನೂ ಫಲವಾಗಲಿಲ್ಲವು. ಆಗಲಾ ನಮುಚಿಯು ಗಟ್ಟಿಯಾಗಿ ಒಮ್ಮೆ ನಕ್ಕು ಆಮೇಲೆ ಮನಿದು, ಮಹೇಂದ್ರನನ್ನು ಬಲವಾಗಿ ಹೊಡೆದನು. ಅಷ್ಟಕ್ಕೇ ಅವನು ಸುಮ್ಮನಾಗಿಹೋದನು. ಅವನಿಗೆ ಬಹಳ ಯೋಚನೆಗಿಟ್ಟುಕೊಂಡಿತು. ಆ ಸಮಯದಲ್ಲಿ ಮಾಡಬೇಕಾದುದೇನು? ಮಾಡಬಾರದುದೇನು? ಎಂಬುದೇ ಅವನಿಗೆ ಅರಿವಾಗಲಿಲ್ಲವು.

೩೪–೩೬. ಹೀಗೆ ಆ ನಮುಚಿಗೂ, ದೇವೇಂದ್ರನಿಗೂ ಮಹಾ ಭಯಂಕರ ಯುದ್ಧವು ನಡೆಯುತ್ತಿರಲು ಅದೇ ಸಮಯದಲ್ಲಿಯೇ ಇಂದ್ರನಿಗೆ ಮಾತ್ರ ಕೇಳಿಸುವಂತೆ, "ಮಹೇಂದ್ರ! ದೇವತೆಗಳಿಗೆ ಬಹು ಭಯಂಕರನೂ, ಮಹಾ ಘೋರಸ್ವರೂಪಿಯೂ ಆದ ಈ ನಮುಚಿಯನ್ನು ಸಾಗರ ತೀರದ ಬಳಿಗೊಯ್ದು

ನಿಶಮ್ಯವಾಚಂ ಪರಮಾರ್ಥಯುಕ್ತಾಂ
ದೈವೀಂ ಸದಾನಂದಕರೀಂ ಶುಭಾವಹಾಂ ।
ಚಕ್ರೇ ಪರಂ ಯತ್ನವಶಾಂ ವರಿಷ್ಠೋ
ಗತ್ವೋದಧೇಃ ಪಾರಮನಂತವೀರ್ಯಃ ॥ ೩೭ ॥
ತತ್ರಾಗತಂ ಸಮೀಕ್ಷ್ಯಾಥ ನಮುಚಿಃ ಕ್ರೋಧಮೂರ್ಛಿತಃ ।
ಹತ್ವಾ ಶೂಲೇನ ದೇವೇಂದ್ರಂ ಪ್ರಹಸನ್ನಿದಮಬ್ರವೀತ್ ॥ ೩೮ ॥
ಸಮುದ್ರಸ್ಯ ತಲಃ ಕಸ್ಮಾತ್ಸೇವಿತಃ ಸುರಸತ್ತಮ ।
ವಿಹಾಯ ರಣಭೂಮಿಂಚ ತ್ಯಕ್ತಶಸ್ತ್ರೋಽಭವದ್ಭವಾನ್ ॥ ೩೯ ॥
ತ್ವದೀಯೇನೈವ ವಜ್ರೇಣ ಕಿಂ ಕೃತಂ ಮಮ ದುರ್ಮತೇ ॥ ೪೦ ॥
ತಥಾನ್ಯಾನಿಚ ಶಸ್ತ್ರಾಣಿ ಅಸ್ತ್ರಾಣಿ ಸುಬಹೂನಿ ಚ ।
ಗೃಹೀತಾನಿ ಪುರಾ ಮಂದ ಹಂತುಂ ಮಾಮೇವ ಚಾಧುನಾ ॥ ೪೧ ॥
ಕಿಂ ಕರಿಷ್ಯಸಿ ಮಾಂ ಹಂತುಂ ಯುದ್ಧಾಯ ಸಮುಪಸ್ಥಿತಃ ।
ಕೇನ ಶಸ್ತ್ರೇಣ ರೇ ಮಂದ ಯೋದ್ಧುಮಿಚ್ಛಸಿ ಸಂಯುಗೇ ॥ ೪೨ ॥

---

ಅಲ್ಲಿರುವ ದೊಡ್ಡ ನೊರೆ (ಯುಂಡೆ)ಯಿಂದಿವನನ್ನು ಹೊಡೆ. ಅದರಿಂದಿವನು ಸಾಯುತ್ತಾನೆ. ಬೇರಾವ ಶಸ್ತ್ರದಿಂದ ಹೊಡೆದರೂ ಇವನು ಸಾಯುವುದಿಲ್ಲ. ಆದುದರಿಂದ ಈಗ ನಾನು ಹೇಳಿದ ರೀತಿಯಿಂದಲೇ ದುರಾತ್ಮನಾದ ಈ ದಾನವನನ್ನು ವಧಿಸಲು ಪ್ರಯತ್ನಿಸು'' ಎಂದಿತು.

೩೭–೪೦. ಈ ರೀತಿ, ಯಾವಾಗಲೂ ಎಲ್ಲರಿಗೂ ಆನಂದವನ್ನುಂಟು ಮಾಡುವುದೂ, ಮಂಗಳಕರವಾದುದೂ ಆದ ಆಕಾಶವಾಣಿಯ ಹುರುಳುಳ್ಳ ನುಡಿಯಂತೆ ಮಹೇಂದ್ರನು ಆ ನಮುಚಿಯನ್ನು ಸಂಹರಿಸಲು ಪ್ರಯತ್ನಮಾಡಿದನು. ಮಹಾಪರಾಕ್ರಮಿಯೂ ಮಹಾಪ್ರಯತ್ನಶೀಲನೂ ಆದ ಮಹೇಂದ್ರನು ಕೂಡಲೇ ಸಮುದ್ರತೀರಕ್ಕೆ ಹೋದನು. ಇತ್ತ ನಮುಚಿಯಾದರೋ ಅವನು ಅಲ್ಲಿಗೆ ಹೋದುದನ್ನು ಕಂಡು ಕ್ರೋಧದಿಂದ ಕಿಡಿಕಿಡಿಯಾಗಿ ಅವನನ್ನು ಶೂಲದಿಂದ ಹೊಡೆದು ನಗುತ್ತಲೇ ಅವನನ್ನು ಕುರಿತು, ''ಸುರಸತ್ತಮಾ! ಮಹಾವೀರನಾದ ನೀನು ಅಸ್ತ್ರಶಸ್ತ್ರಗಳೆಲ್ಲವನ್ನೂ ತೊರೆದು ರಣರಂಗವನ್ನೂ ಬಿಟ್ಟು ಈ ಕಡಲಿನ ಕರೆಗೇಕೆ ಬಂದೆ? ಎಲವೋ ದುರ್ಮತಿಯೇ! ನಿನ್ನ ಆ ವಜ್ರಾಯುಧವು ನನ್ನನ್ನೇನುಮಾಡಿತು?

೪೧–೪೩. ಅಂತೆಯೇ ಅಸಂಖ್ಯಾಕವಾದ ಇತರ ಶಸ್ತ್ರಗಳನ್ನೂ, ಅಸ್ತ್ರಗಳನ್ನೂ ಹಿಡಿದು ನನ್ನನ್ನು ವಧಿಸಲೆತ್ನಿಸಿದೆಯಲ್ಲವೆ! ಅವೆಲ್ಲವೂ ಏನಾದುವು? ಎಲಾ ತಿಳಿಗೇಡಿ! ಈಗ ಯುದ್ಧಕ್ಕೆ ಸಿದ್ಧನಾಗಿಬಂದಿರುವ ನನ್ನನ್ನು ಹೊಡೆಯಲು ಏನುಮಾಡುವೆ? (ಇನ್ನು ನಿನಗುಳಿದಿರುವ ಶಸ್ತ್ರವಾವುದು?) ಈ ಕಾಳಗದಲ್ಲಿ

ತ್ವಾಂ ಘಾತಯಾಮಿ ಚಾದ್ಯೈವ ಯದಿ ತಿಷ್ಠಸಿ ಸಂಯುಗೇ ।
ನೋಚೇದ್ಗಚ್ಛ ಮಯಾ ಮುಕ್ತಶ್ಚಿರಂ ಜೀವ ಸುಖೀಭವ ॥ ೪೩ ॥
ಏವಂ ಸಗರ್ವಿತಂ ತಸ್ಯ ವಾಕ್ಯಮಾಹವಶೋಭಿನಃ ।
ಶ್ರುತ್ವಾ ಮಹೇಂದ್ರೋಽಪಿ ರುಷಾ ಜಗೃಹೇ ಫೇನಮುದ್ಧೃತಂ ॥ ೪೪ ॥
ಫೇನಂ ಕರಸ್ಥಂ ದೃಷ್ಟ್ವಾ ತು ಅಸುರಾ ಜಹಸುಸ್ತದಾ ॥ ೪೫ ॥
ಕ್ಷಯಂ ಗತಾನಿ ಚಾಸ್ತ್ರಾಣಿ ಫೇನೇನೈವ ಪುರಂದರಃ ।
ಹಂತುಮಿಚ್ಛತಿ ಮಾಮದ್ಯ ಶತಕ್ರತುರುದಾರಧೀಃ ॥ ೪೬ ॥
ಏವಂ ಪ್ರಹಸ್ಯ ನಮುಚಿರವಜ್ಞಾಯ ಪುರಂದರಂ ।
ಸಾವಜ್ಞಂ ಪುರತಸ್ತಸ್ಥೌ ನಮುಚಿರ್ದೈತ್ಯಪುಂಗವಃ ॥ ೪೭ ॥
ತದೈವ ತಂ ಸಫೇನೇನ ಶೀಘ್ರಮಿಂದ್ರೋ ಜಘಾನ ಹ ॥ ೪೮ ॥
ಹತೇ ತು ನಮುಚೌ ದೇವಾಃ ಸರ್ವೇ ಚೈವ ಮುದಾನ್ವಿತಾಃ ।
ಸಾಧು ಸಾಧ್ವಿತಿ ಶಬ್ದೇನ ಋಷಯಶ್ಚಾಭ್ಯಪೂಜಯನ್ ॥ ೪೯ ॥
ತದಾ ಸರ್ವೇ ಜಯಂ ಪ್ರಾಪ್ತಾ ಹತ್ವಾ ನಮುಚಿಮಾಹವೇ ।
ದೈತ್ಯಾಸ್ತೇ ಕೋಪಸಂರಬ್ಧಾ ಯೋದ್ಧುಕಾಮಾ ಮುದಾನ್ವಿತಾಃ ॥ ೫೦ ॥

---

ಅದಾವ ಶಸ್ತ್ರದಿಂದ ನನ್ನನ್ನು ಕೊಲ್ಲಬಯಸುವೆ? ನೆಟ್ಟಗೆ ನಿಲ್ಲು. ಈಗಲೇ ನಿನ್ನನ್ನು ಸಂಹರಿಸುತ್ತೇನೆ. ಹಾಗೆ ಮಡಿಯಲು ನಿನಗಿಷ್ಟವಿಲ್ಲದಿದ್ದರೆ ನನ್ನನ್ನು ಬೇಡಿಕೋ. ಬಿಟ್ಟುಬಿಡುತ್ತೇನೆ. ಹೋಗು; ಬಹಳಕಾಲ ಸುಖವಾಗಿ ಬಾಳಿ ಬದುಕಿಕೊ" ಎಂದು ಹೇಳಿದನು.

೪೪–೪೫. ರಣಭೂಮಿಯನ್ನೇ ಬೆಳಗುತ್ತಿದ್ದ ನಮುಚಿಯಾಡಿದ ಈ ಕೆಚ್ಚಿನ ನುಡಿಗಳನ್ನು ಕೇಳಿ ಮಹೇಂದ್ರನು ಬಹಳವಾಗಿ ರೋಷಗೊಂಡು ಆ ಸಾಗರತೀರ ದಲ್ಲಿದ್ದ ಭಯಂಕರವಾದೊಂದು ನೊರೆಯುಂಡೆಯನ್ನು ಕೈಗೆ ತೆಗೆದುಕೊಂಡನು. ದೇವೇಂದ್ರನ ಕೈಯಲ್ಲಿದ್ದ ಆ ನೊರೆಯನ್ನು ನೋಡಿ ರಣಭೂಮಿಯಲ್ಲಿದ್ದ ಅಸುರರೆಲ್ಲರೂ ಪಕಪಕನೆ ನಕ್ಕರು.

೪೬–೫೦. "ಇನ್ನೇನು! ಅಸ್ತ್ರಗಳೆಲ್ಲವೂ ಅಳಿದುಹೋದವು. ಪಾಪ!! ಶತಕ್ರತುವೂ, ಉದಾರಬುದ್ಧಿಯೂ ಆದ ಈ ಪುರಂದರನು ಈಗಲೀ ನೊರೆ ಯಿಂದಲೇ ನನ್ನನ್ನು ಕೊಲ್ಲಬಯಸುತ್ತಾನೆ!" ಎಂದು ಅಣಕದ ಮಾತುಗಳನ್ನಾಡಿ ನಮುಚಿಯೂ ಸಹ ಗೊಳ್ಳನೆ ನಕ್ಕು ಆ ಪುರಂದರನನ್ನು ಕಡೆಗಂಡು ಅವನ ಮುಂಗಡೆ ನಿಂತನು. ಆಗಲೇ ಆ ದೇವೇಂದ್ರನು ಬಹು ತೀವ್ರವಾಗಿ ಅವನನ್ನಾ ನೊರೆಯಿಂದ ಹೊಡೆದನು. ಕೂಡಲೇ ಆ ದಾನವನು ಮಡಿದುರುಳಿದನು. ಆಗ ದೇವತೆಗಳೆಲ್ಲರೂ ಆ ನಮುಚಿಯು ಮಡಿದುದರಿಂದ ವಿಜಯವನ್ನು ಪಡೆದು ಸಂತೋಷಭರಿತರಾಗಿ, "ಭಲೆ! ಭಲೇ!!" ಎಂದು ಜಯಘೋಷಗಳನ್ನು

ಪುನಃ ಪ್ರವವೃತೇ ಯುದ್ಧಂ ದೇವಾನಾಂ ದಾನವೈಃ ಸಹ ।
ಶಸ್ತ್ರಾಸ್ತ್ರೈರ್ಬಹುಧಾ ಮುಕ್ತೈಃ ಪರಸ್ಪರವಧೈಷಿಭಿಃ ॥ ೫೧ ॥
ಯದಾ ತೇ ಹ್ಯಸುರಾ ದೇವೈಃ ಪಾತಿತಾಶ್ಚ ಪುನಃ ಪುನಃ ।
ತದಾ ವೃತ್ರೋ ಮಹಾತೇಜಾಃ ಶತಕ್ರತುಮುಪಾವ್ರಜತ್ ॥ ೫೨ ॥
ವೃತ್ರಂ ದೃಷ್ಟ್ವಾ ತದಾ ಸರ್ವೇ ಸಸುರಾಸುರ ಮಾನವಾಃ ।
ಭಯೇನ ಮಹತಾವಿಷ್ಟಾಃ ಪತಿತಾ ಭುವಿ ಶೇರತೇ ॥ ೫೩ ॥
ಏವಂ ಭೀತೇಷು ಸರ್ವೇಷು ಸುರಸಿದ್ಧೇಷು ವೈ ತದಾ ।
ಇಂದ್ರಶ್ಚೈರಾವಣಾರೂಢೋ ವಜ್ರಪಾಣಿಃ ಪ್ರತಾಪವಾನ್ ॥ ೫೪ ॥
ಛತ್ರೇಣ ಧ್ರಿಯಮಾಣೇನ ಚಾಮರೇಣ ವಿರಾಜಿತಃ ।
ತದಾ ಸರ್ವೈಃ ಸಮೇತೋ ಹಿ ಲೋಕಪಾಲೈಃ ಪ್ರತಾಪಿತಃ ॥ ೫೫ ॥
ವೃತ್ರಂ ವಿಲೋಕ್ಯತೇ ಸರ್ವೇ ಲೋಕಪಾಲಾ ಮಹೇಶ್ವರಾಃ ।
ಭಯಭೀತಾಶ್ಚ ತೇ ಸರ್ವೇ ಶಿವಂ ಶರಣಮನ್ವಯುಃ ॥ ೫೬ ॥
ಮನಸಾ ಚಿಂತಯತ್ಸರ್ವೇ ಶಂಕರಂ ಲೋಕಶಂಕರಂ ।
ಲಿಂಗಂ ಸಂಪೂಜ್ಯ ವಿಧಿವನ್ಮಹೇಂದ್ರೋ ಜಯ ಕಾಮುಕಃ ॥ ೫೭ ॥

---

ಮಾಡಿದರು. ಮಹರ್ಷಿಗಳೂ ಅಂತೆಯೇ ಆ ದೇವರಾಜನನ್ನು ಗೌರವಿಸಿದರು. ದೈತ್ಯರಾದರೋ ಬಹಳವಾದ ಕೋಪದಿಂದ ಕೆರಳಿ ಉತ್ಸಾಹಪೂರಿತರಾಗಿ ಮತ್ತೆ ದೇವತೆಗಳೊಡನೆ ಹೋರಲು ಬಯಸಿದರು.

೫೧–೫೨. ಆಗ ದೇವದಾನವರಿಗೆ ಪುನಃ ಯುದ್ಧವು ಬೆಳೆಯಿತು. ಆಗ ಅವರು ಅಸ್ತ್ರಶಸ್ತ್ರಗಳಿಂದ ಒಬ್ಬರನ್ನೊಬ್ಬರು ಕೊಲ್ಲಬಯಸಿ ಬಲವಾಗಿ ಹೊಡೆದಾಡಿದರು. ಆ ಯುದ್ಧದಲ್ಲಿ ದಾನವರು ದೇವತೆಗಳಿಂದ ಘಾತಿತರಾಗಿ ಅಡಿಗಡಿಗೂ ನೆಲಕ್ಕುರುಳುತ್ತಿರುವುದನ್ನು ಕಂಡು ಮಹಾ ತೇಜಸ್ವಿಯಾದ ವೃತ್ರಾಸುರನು ಕೆರಳಿ ದೇವೇಂದ್ರನನ್ನಟ್ಟಿಬಂದನು.

೫೩–೫೫. ಆಗಲಾ ವೃತ್ರಾಸುರನನ್ನು ಕಂಡು, ಸುರಾಸುರ ಮಾನವರೆಲ್ಲರೂ ಮಹತ್ತರವಾದ ಭಯದಿಂದ ಮೂರ್ಛಿತರಾಗಿ ನೆಲಕ್ಕೆ ಬಿದ್ದುಹೋದರು. ಹೀಗೆ ಸುರಸಿದ್ಧರಾದಿಯಾಗಿ ಸಮಸ್ತರೂ ತಳಮಳಿಸಿಹೋಗಿರಲು ಪರಾಕ್ರಮಿಯಾದ ಮಹೇಂದ್ರನು ಐರಾವತವನ್ನೇರಿ ಛತ್ರ ಸಮೇತನಾಗಿ ಚಾಮರಗಳಿಂದ ವೀಜಿತನಾಗಿ ಲೋಕಪಾಲಕರೆಲ್ಲರಿಂದಲೂ ಉತ್ತೇಜಿತನಾಗಿ ಮುನ್ನುಗ್ಗಿ ಹೊರಟನು.

೫೬–೫೮. ಆದರೆ ಲೋಕಪಾಲಕರೆಲ್ಲರೂ ವೃತ್ರಾಸುರನನ್ನು ಕಂಡೊಡನೆಯೇ ಭಯಭೀತರಾಗಿ ಒಡನೆಯೇ ಪರಶಿವನನ್ನು ಶರಣು ಹೊಕ್ಕರು. ಅವರೆಲ್ಲರೂ ಭಕ್ತಿಭಾವದಿಂದ ಲೋಕಶಂಕರನಾದ ಶಂಕರನನ್ನು ಮನಸ್ಸಿನಲ್ಲಿಯೇ ಧ್ಯಾನಿಸಿದರು. ಆಗಲವರೆಲ್ಲರೂ ವೃತ್ರಾಸುರನನ್ನು ಜಯಿಸಬಯಸಿ

ಗುರುಣಾ ವಿದಿತಃ ಸದ್ಯೋ ವಿಶ್ವಾಸೇನ ಪರೇಣ ಹಿ ।
ಉವಾಚ ಚ ತದಾ ಶಕ್ರಂ ಬೃಹಸ್ಪತಿರುದಾರಧೀಃ ॥ ೫೮ ॥

ಬೃಹಸ್ಪತಿರುವಾಚ :—

ಕಾರ್ತಿಕೇ ಶುಕ್ಲಪಕ್ಷೇತು ಮಂದವಾರೇ ತ್ರಯೋದಶೀ ।
ಸಮಗ್ರಾ ಯದಿ ಲಭ್ಯೇತ ಸರ್ವಿಪ್ರಾಪ್ತ್ಯೈನ ಸಂಶಯಃ ॥ ೫೯ ॥
ತಸ್ಯಾಂ ಪ್ರದೋಷ ಸಮಯೇ ಲಿಂಗರೂಪೀ ಸದಾಶಿವಃ ।
ಪೂಜನೀಯೋ ಹಿ ದೇವೇಂದ್ರ ಸರ್ವಕಾಮ್ಯಾರ್ಥಸಿದ್ಧಯೇ ॥ ೬೦ ॥
ಸ್ನಾತ್ವಾ ಮಧ್ಯಾಹ್ನಸಮಯೇ ತಿಲಾಮಲಕಸಂಯುತಂ ।
ಶಿವಸ್ಯಚಾರ್ಚನಂ ಕುರ್ಯಾದ್ಗಂಧಪುಷ್ಪಫಲಾದಿಭಿಃ ॥ ೬೧ ॥
ಪಶ್ಚಾತ್ಪ್ರದೋಷವೇಲಾಯಾಂ ಸ್ಥಾವರಂ ಲಿಂಗಮರ್ಚಯೇತ್ ।
ಸ್ವಯಂಭು ಸ್ಥಾಪಿತಂ ಚಾಪಿ ಪೌರುಷೇಯಮಪೌರುಷಂ ॥ ೬೨ ॥
ಜನೇವಾ ವಿಜನೇ ವಾಪಿ ಅರಣ್ಯೇ ವಾ ತಪೋವನೇ ।
ತಲ್ಲಿಂಗಮರ್ಚಯೇದ್ಭಕ್ತ್ಯಾ ಪ್ರದೋಷೇ ತು ವಿಶೇಷತಃ ॥ ೬೩ ॥

---

ಶಾಸ್ತ್ರೋಕ್ತವಾಗಿ ಶಿವಲಿಂಗವನ್ನರ್ಚಿಸಿ ಶಿವನನ್ನು ಶರಣುಹೊಂದಬಯಸಿದರು. ಆಗ ಮಹಾಜ್ಞಾನಿಯೂ ಗುರುವೂ ಆದ ಬೃಹಸ್ಪತಿಯು ಶಿಷ್ಯನಾದ ಮಹೇಂದ್ರನು ಶಿವಲಿಂಗವನ್ನರ್ಚಿಸಬೇಕೆಂದಿರುವುದನ್ನು ತಿಳಿದು ಸಂತೋಷಗೊಂಡು ಅವನಲ್ಲಿನ ವಿಶ್ವಾಸದಿಂದ ಅವನನ್ನು ಕುರಿತು ಹೀಗೆ ಹೇಳಿದನು.

೫೯. ಬೃಹಸ್ಪತಿಯು ಹೇಳುತ್ತಾನೆ:—ಕಾರ್ತೀಕ ಮಾಸದಲ್ಲಿ ಶುಕ್ಲಪಕ್ಷ ತ್ರಯೋದಶೀ ತಿಥಿಯು ಶನಿವಾರ ಸಂಪೂರ್ಣವಾಗಿ ಬಂದುದೇ ಆದರೆ ಅದು ಬಹು ಪ್ರಶಸ್ತವಾದುದು. ಅಂದಿನ ದಿನವು ಸಮಸ್ತ ಇಷ್ಟಾರ್ಥಗಳನ್ನೂ ಕೊಡುವುದಾಗುತ್ತದೆ.

೬೦. ಅಯ್ಯಾ ದೇವೇಂದ್ರನೇ! ಅಂದಿನ ದಿನ ಪ್ರದೋಷ ಸಮಯದಲ್ಲಿ ಲಿಂಗಸ್ವರೂಪಿಯಾದ ಆ ಸದಾಶಿವನನ್ನು ಸರ್ವಾಭೀಷ್ಟಸಿದ್ಧಿಗಾಗಿ ಪೂಜಿಸಬೇಕು.

೬೧–೬೩. ಆ ದಿನ ಮಧ್ಯಾಹ್ನ ಸಮಯದಲ್ಲಿ ಎಳ್ಳು ಮತ್ತು ನೆಲ್ಲಿಯ ಕಾಯಿಗಳಿಂದ ಸ್ನಾನಮಾಡಿ ಗಂಧಪುಷ್ಪಾಕ್ಷತೆಗಳಿಂದ ಶಿವನನ್ನರ್ಚಿಸಬೇಕು. ಆ ಬಳಿಕ ಪ್ರದೋಷ ಸಮಯದಲ್ಲಿ ತಾನಾಗಿಯೇ ಉದ್ಭವವಾಗಿರುವ ಅಥವಾ ಯಾರಾದರೂ ಪ್ರತಿಷ್ಠೆಮಾಡಿರುವ ಶಿವಲಿಂಗವನ್ನು ಅರ್ಚಿಸಬೇಕು. ಹೀಗೆ ಪಟ್ಟಣದಲ್ಲಿಯಾಗಲಿ ಅಥವ ಅರಣ್ಯದಲ್ಲಿಯಾಗಲಿ, ತಪೋವನದಲ್ಲಿಯೇ ಆಗಲಿ ಇರುವ ಸ್ವಯಂಭು ಅಥವಾ ಮಾನವ ಪ್ರತಿಷ್ಠಿತವಾದ ಶಿವಲಿಂಗವನ್ನು ಅಂದಿನ ದಿನ ಪ್ರದೋಷ ಸಮಯದಲ್ಲಿ ಭಕ್ತಿಯಿಂದಾರಾಧಿಸಬೇಕು.

**ಗ್ರಾಮಾದ್ಬಹಿಃ ಸ್ಥಿತಂ ಲಿಂಗಂ ಗ್ರಾಮಾಚ್ಛತಗುಣಂ ಫಲಂ ।**
**ಬಾಹ್ಯಾಚ್ಛತಗುಣಂ ಪುಣ್ಯಮರಣ್ಯೇ ಲಿಂಗಮುದ್ಭುತಂ ॥ ೬೪ ॥**
**ಅರಣ್ಯಾಚ್ಛತಗುಣಂ ಪುಣ್ಯಮರ್ಚಿತಂ ಪಾರ್ವತಂ ಯಥಾ ।**
**ಪಾರ್ವತಾಚ್ಚೈವ ಲಿಂಗಾಚ್ಚ ಫಲಂ ಚಾಯುತಸಂಜ್ಞಿತಂ ।**
**ತಪೋವನಾಶ್ರಿತಂ ಲಿಂಗಂ ಪೂಜಿತಂ ವಾ ಮಹಾಫಲಂ ॥ ೬೫ ॥**
**ತಸ್ಮಾದೇತದ್ವಿಭಾಗೇನ ಶಿವಪೂಜಾರ್ಚನಂ ಬುಧೈಃ ।**
**ಕರ್ತವ್ಯಂ ನಿಪುಣತ್ವೇನ ತೀರ್ಥಸ್ನಾನಾದಿಕಂ ತಥಾ ॥ ೬೬ ॥**
**ಪಂಚಪಿಂಡಾನ್ಸಮುದ್ಧೃತ್ಯ ಸ್ನಾನಮಾತ್ರೇಣ ಶೋಭನಂ ।**
**ಕೂಪೇ ಸ್ನಾನಂ ಪ್ರಕುರ್ವೀತ ಉದ್ಧೃತೇನ ವಿಶೇಷತಃ ॥ ೬೭ ॥**
**ತಡಾಗೇ ದಶಪಿಂಡಾಂಶ್ಚ ಉದ್ಧೃತ್ಯ ಸ್ನಾನಮಾಚರೇತ್ ।**
**ನದೀಸ್ನಾನಂ ವಿಶಿಷ್ಟಂ ಚ ಮಹಾನದ್ಯಾಂ ವಿಶೇಷತಃ ॥ ೬೮ ॥**
**ಸರ್ವೇಷಾಮಪಿ ತೀರ್ಥಾನಾಂ ಗಂಗಾಸ್ನಾನಂ ವಿಶಿಷ್ಯತೇ ।**
**ದೇವಖಾತೇ ಚ ತತ್ತುಲ್ಯಂ ಪ್ರಶಸ್ತಂ ಸ್ನಾನಮಾಚರೇತ್ ॥ ೬೯ ॥**

---

೬೪–೬೫. ಗ್ರಾಮದ ಹೊರಗಿರುವ ಶಿವಲಿಂಗವು ಗ್ರಾಮದಲ್ಲಿರುವುದಕ್ಕಿಂತಲೂ ನೂರುಪಾಲು ಹೆಚ್ಚಿನ ಫಲವನ್ನುಂಟುಮಾಡುತ್ತದೆ. ಊರ ಹೊರಗಿರುವ ಶಿವಲಿಂಗಕ್ಕಿಂತಲೂ, ಉದ್ಭವವಾಗಿರುವ ಶಿವಲಿಂಗವು ನೂರರಷ್ಟು ಹೆಚ್ಚಿನ ಫಲವನ್ನು ಕೊಡುತ್ತದೆ. ಅರಣ್ಯದಲ್ಲಿರುವ ಶಿವಲಿಂಗವನ್ನಾರಾಧಿಸುವುದಕ್ಕಿಂತಲೂ ಪರ್ವತದಲ್ಲಿರುವುದನ್ನರ್ಚಿಸಿದರೆ ಅದಕ್ಕಿಂತಲೂ ನೂರರಷ್ಟು ಹೆಚ್ಚಿನ ಫಲವು ದೊರಕುತ್ತದೆ. ಪರ್ವತದಲ್ಲಿರುವ ಶಿವಲಿಂಗವನ್ನರ್ಚಿಸುವುದಕ್ಕಿಂತಲೂ, ತಪೋವನದಲ್ಲಿರುವುದನ್ನು ಪೂಜಿಸಿದರೆ ಅದಕ್ಕಿಂತಲೂ ಹತ್ತು ಸಾವಿರಪಾಲಿನಷ್ಟು ಮಹಾ ಫಲವು ಲಭಿಸುವುದು.

೬೬–೬೯. ಆದುದರಿಂದ ತಿಳಿದವರು ಶಿವಲಿಂಗಾರ್ಚನೆಯಲ್ಲಿನ ಈ ಭೇದಗಳನ್ನರಿತು ಶಿವನನ್ನರ್ಚಿಸಬೇಕು. ಎಲೈ ದೇವೇಂದ್ರನೇ! ಈ ರೀತಿ ಶಿವಲಿಂಗಾರಾಧನೆಯನ್ನು ಮಾಡುವವರು ಮೊದಲು ಶಾಸ್ತ್ರವಿಧಾನದಿಂದ ತೀರ್ಥ ಸ್ನಾನಾದಿಗಳನ್ನು ಮಾಡಬೇಕು. ಪಂಚಪಿಂಡಗಳನ್ನು ಮಾಡಿಹಾಕಿ ಕೂಪದಲ್ಲಿ ಸ್ನಾನ ಮಾಡಿದರೆ ಮಂಗಳವಾಗುತ್ತದೆ. ಕೆರೆ ಕೊಳ ಮೊದಲಾದವುಗಳಲ್ಲಿ ದಶಪಿಂಡಗಳನ್ನು ಮಾಡಿ ಸ್ನಾನಮಾಡಬೇಕು. ನದೀಸ್ನಾನ ಮತ್ತು ಮಹಾನದೀ ಸ್ನಾನಾದಿಗಳ ವಿಷಯದಲ್ಲಿಯೂ ಹೀಗೆಯೇ ತೀರ್ಥಶ್ರಾದ್ಧಗಳನ್ನು ಮಾಡಬೇಕು. ಸಮಸ್ತ ತೀರ್ಥಸ್ನಾನಗಳಿಗಿಂತಲೂ ಗಂಗಾನದೀ ಸ್ನಾನವು ಶ್ರೇಷ್ಠವಾದುದು. ದೇವನಿರ್ಮಿತವಾದ ವಾಪೀಕೂಪ ತಟಾಕಾದಿಗಳೂ ಗಂಗಾನದಿಗೆ ಸಮಾನವಾದುವೇ. ಅವುಗಳಲ್ಲಿ ಸ್ನಾನಮಾಡುವುದರಿಂದಲೂ ಅದೇ ಫಲವು ದೊರಕುತ್ತದೆ.

ಪ್ರದೀಪಾನಾಂ ಸಹಸ್ರೇಣ ದೀಪನೀಯಃ ಸದಾಶಿವಃ ।
ತದಾ ದೀಪಶತೇನಾಪಿ ದ್ವಾತ್ರಿಂಶದ್ದೀಪಮಾಲಯಾ ॥ ೭೦ ॥
ಘೃತೇನ ದೀಪಯೇದ್ದೀಪಾಂಛಿವಸ್ಯ ಪರಿತುಷ್ಟಯೇ ।
ತಥಾ ಫಲೈಶ್ಚ ದೀಪೈಶ್ಚ ನೈವೇದ್ಯೈರ್ಗಂಧಧೂಪಕೈಃ ॥ ೭೧ ॥
ಉಪಚಾರೈಃ ಷೋಡಶಭಿರ್ಲಿಂಗರೂಪೀ ಸದಾಶಿವಃ ।
ಪೂಜ್ಯಃ ಪ್ರದೋಷವೇಲಾಯಾಂ ನೃಭಿಃ ಸರ್ವಾರ್ಥಸಿದ್ಧಯೇ ॥ ೭೨ ॥
ಪ್ರದಕ್ಷಿಣಂ ಪ್ರಕುರ್ವೀತ ಶತಮಷ್ಟೋತ್ತರಂ ತಥಾ ।
ನಮಸ್ಕಾರಾನ್ಪ್ರಕುರ್ವೀತ ತಾವತ್ಸಂಖ್ಯಾನ್ಪ್ರಯತ್ನತಃ ॥ ೭೩ ॥
ಪ್ರದಕ್ಷಿಣನಮಸ್ಕಾರೈಃ ಪೂಜನೀಯಃ ಸದಾಶಿವಃ
ನಾಮ್ನಾಂ ಶತೇನ ರುದ್ರೋಽಸೌ ಸ್ತವನೀಯೋ ಯಥಾವಿಧಿ ॥ ೭೪ ॥
ನಮೋ ರುದ್ರಾಯ ಭೀಮಾಯ ನೀಲಕಂಠಾಯ ವೇಧಸೇ ।
ಕಪರ್ದಿನೇ ಸುರೇಶಾಯ ವ್ಯೋಮಕೇಶಾಯ ವೈ ನಮಃ ॥ ೭೫ ॥
ವೃಷಧ್ವಜಾಯ ಸೋಮಾಯ ನೀಲಕಂಠಾಯ ವೈ ನಮಃ ।
ದಿಗಂಬರಾಯ ಭರ್ಗಾಯ ಉಮಾಕಾಂತ ಕಪರ್ದಿನೇ ॥ ೭೬ ॥

---

೭೦. ಹೀಗೆ ಸ್ನಾನವನ್ನು ಮಾಡಿದ ತರುವಾಯ ಸದಾಶಿವಮೂರ್ತಿಯನ್ನು ಸಹಸ್ರ ದೀಪಗಳಿಂದ ಪೂಜಿಸಬೇಕು. ಅಥವಾ ನೂರು ದೀಪಗಳಿಂದಲಾಗಲಿ, ಮೂವತ್ತೆರಡು ದೀಪಮಾಲೆಯಿಂದಲಾಗಲಿ ಅರ್ಚಿಸಬಹುದು.

೭೧–೭೪. ಪರಶಿವನ ಸಂತೋಷಾರ್ಥವಾಗಿ ಆ ದೀಪಗಳನ್ನು ತುಪ್ಪದಲ್ಲಿಯೇ ಬೆಳಗಿಸಬೇಕು. ಅಂತೆಯೇ ಫಲಗಳಿಂದಲೂ, ಭಕ್ಷ್ಯಭೋಜ್ಯಲೇಹ್ಯಚೋಷ್ಯಾದಿಗಳ ನೈವೇದ್ಯದಿಂದಲೂ, ಪರಿಮಳ ಧೂಪದಿಂದಲೂ, ಪೂಜಿಸಬೇಕು. ಈ ರೀತಿ ಕಾರ್ತೀಕಮಾಸದ ಶುಕ್ಲಪಕ್ಷ ತ್ರಯೋದಶೀ ಶನಿವಾರದ ದಿನ ಲಿಂಗರೂಪಿಯಾದ ಸದಾಶಿವನನ್ನು ಸರ್ವಾರ್ಥಸಿದ್ಧಿಗಾಗಿ, ಷೋಡಶೋಪಚಾರಗಳಿಂದರ್ಚಿಸಬೇಕು. ಆಮೇಲೆ ನೂರೆಂಟು ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಅಷ್ಟೇ ಸಂಖ್ಯೆಯ ನಮಸ್ಕಾರಗಳಿಂದಲೇ ಪೂಜಿಸತಕ್ಕುದು. ತರುವಾಯ ಅಷ್ಟೋತ್ತರ ಶತನಾಮಗಳಿಂದ ಯಥಾವಿಧಿಯಾಗಿ ಆ ಪರಶಿವನನ್ನು ಸ್ತುತಿಸಬೇಕು.

೭೫–೮೯. ಎಲೈ ಮಹೇಂದ್ರನೇ! ಆ ಶಿವಾಷ್ಟೋತ್ತರ ನಾಮಗಳನ್ನು ಹೇಳುವೆನು; ಕೇಳು:— ಓಂ ರುದ್ರಾಯ ನಮಃ, ಭೀಮಾಯನ ನಮಃ, ವೇಧಸೇ ನಮಃ, ಕಪರ್ದಿನೇ ನಮಃ, ಸುರೇಶಾಯ ನಮಃ, ವ್ಯೋಮಕೇಶಾಯ ನಮಃ, ವೃಷಧ್ವಜಾಯ ನಮಃ, ಸೋಮಾಯ ನಮಃ, ನೀಲಕಂಠಾಯ ನಮಃ, ದಿಗಂಬರಾಯನಮಃ, ಭರ್ಗಾಯ ನಮಃ, ಉಮಾಕಾಂತಾಯ ನಮಃ

ತಪೋಮಯಾಯ ವ್ಯಾಪ್ತಾಯ ಶಿಪಿವಿಷ್ಟಾಯ ವೈ ನಮಃ ।
ವ್ಯಾಲಪ್ರಿಯಾಯ ವ್ಯಾಲಾಯ ವ್ಯಾಲಾನಾಂ ಪತಯೇ ನಮಃ ॥ ೭೭ ॥
ಮಹೀಧರಾಯ ವ್ಯಾಘ್ರಾಯ ಪಶೂನಾಂ ಪತಯೇ ನಮಃ
ತ್ರಿಪುರಾಂತಕಸಿಂಹಾಯ ಶಾರ್ದೂಲೋಗ್ರರವಾಯಚ ॥ ೭೮ ॥
ಮೀನಾಯ ಮೀನನಾಥಾಯ ಸಿದ್ಧಾಯ ಪರಮೇಷ್ಠಿನೇ ।
ಕಾಮಾಂತಕಾಯ ಬುದ್ಧಾಯ ಬುದ್ಧೀನಾಂ ಪತಯೇ ನಮಃ ॥ ೭೯ ॥
ಕಪೋತಾಯ ವಿಶಿಷ್ಟಾಯ ಶಿಷ್ಟಾಯ ಪರಮಾತ್ಮನೇ ।
ವೇದಾಯ ವೇದಬೀಜಾಯ ದೇವಗುಹ್ಯಾಯ ವೈ ನಮಃ ॥ ೮೦ ॥
ದೀರ್ಘಾಯ ದೀರ್ಘದೀರ್ಘಾಯ ದೀರ್ಘಾರ್ಘಾಯ ಮಹಾಯ ಚ ।
ನಮೋ ಜಗತ್ಪ್ರತಿಷ್ಠಾಯ ವ್ಯೋಮರೂಪಾಯ ವೈನಮಃ ॥ ೮೧ ॥
ಗಜಾಸುರವಿನಾಶಾಯ ಹ್ಯಂಧಕಾಸುರ ಭೇದಿನೇ ।
ನೀಲಲೋಹಿತ ಶುಕ್ಲಾಯ ಚಂಡಮುಂಡ ಪ್ರಿಯಾಯ ಚ ॥ ೮೨ ॥
ಭಕ್ತಿ ಪ್ರಿಯಾಯ ದೇವಾಯ ಜ್ಞಾನಜ್ಞಾನಾವ್ಯಯಾಯ ಚ ।
ಮಹೇಶಾಯ ನಮಸ್ತುಭ್ಯಂ ಮಹಾದೇವ ಹರಾಯ ಚ ॥ ೮೩ ॥
ತ್ರಿನೇತ್ರಾಯ ತ್ರಿವೇದಾಯ ವೇದಾಂಗಾಯ ನಮೋನಮಃ ।
ಅರ್ಥಾಯ ಅರ್ಥರೂಪಾಯ ಪರಮಾರ್ಥಾಯ ವೈ ನಮಃ ॥ ೮೪ ॥

---

ಕಪರ್ದಿನೇ ನಮಃ, ತಪೋಮಯಾಯ ನಮಃ, ವ್ಯಾಪ್ತಾಯ ನಮಃ, ಶಿಪಿವಿಷ್ಟಾಯ ನಮಃ, ವ್ಯಾಲಪ್ರಿಯಾಯ ನಮಃ, ವ್ಯಾಲಾಯ ನಮಃ, ವ್ಯಾಲಪತಯೇ ನಮಃ, ಮಹೀಧರಾಯ ನಮಃ, ವ್ಯಾಘ್ರಾಯ ನಮಃ, ಪಶೂನಾಂಪತಯೇ ನಮಃ, ತ್ರಿಪುರಾಂತಕ ಸಿಂಹಾಯ ನಮಃ, ಶಾರ್ದೂಲೋಗ್ರರವಾಯ ನಮಃ, ಮೀನಾಯ ನಮಃ, ಮೀನನಾಥಾಯ ನಮಃ, ಸಿದ್ಧಾಯ ನಮಃ, ಪರಮೇಷ್ಠಿನೇ ನಮಃ, ಕಾಮಾಂತಕಾಯ ನಮಃ, ಬುದ್ಧೀನಾಂಪತಯೇ ನಮಃ, ಕಪೋತಾಯ ನಮಃ, ವಿಶಿಷ್ಟಾಯ ನಮಃ, ಶಿಷ್ಟಾಯ ನಮಃ, ಪರಮಾತ್ಮನೇ ನಮಃ, ವೇದಾಯ ನಮಃ, ವೇದಬೀಜಾಯ ನಮಃ, ವೇದಗುಹ್ಯಾಯ ನಮಃ, ದೀರ್ಘಾಯ ನಮಃ, ದೀರ್ಘ ದೀರ್ಘಾಯ ನಮಃ, ದೀರ್ಘಾರ್ಘಾಯ ನಮಃ, ಮಹಾಯ ನಮಃ, ಜಗತ್ಪ್ರತಿಷ್ಠಾಯ ನಮಃ, ವ್ಯೋಮರೂಪಾಯ ನಮಃ, ಗಜಾಸುರವಿನಾಶಾಯ ನಮಃ, ಅಂಧಕಾಸುರಭೇದಿನೇ ನಮಃ, ನೀಲಲೋಹಿತ ಶುಕ್ಲಾಯ ನಮಃ, ಚಂಡಮುಂಡಪ್ರಿಯಾಯ ನಮಃ, ಭಕ್ತಿಪ್ರಿಯಾಯ ನಮಃ, ದೇವಾಯ ನಮಃ, ಜ್ಞಾನಜ್ಞಾನಾಯ ನಮಃ, ಅವ್ಯಯಾಯ ನಮಃ, ಮಹೇಶಾಯ ನಮಃ, ಮಹಾದೇವಾಯ ನಮಃ, ತ್ರಿಣೇತ್ರಾಯ ನಮಃ, ತ್ರಿವೇದಾಯ ನಮಃ, ವೇದಾಂಗಾಯ ನಮಃ, ಅರ್ಥಾಯ ನಮಃ, ಅರ್ಥ

ವಿಶ್ವರೂಪಾಯ ವಿಶ್ವಾಯ ವಿಶ್ವನಾಥಾಯ ವೈ ನಮಃ ।
ಶಂಕರಾಯ ಚ ಕಾಲಾಯ ಕಾಲಾವಯವರೂಪಿಣೇ ॥ ೮೫ ॥
ಅರೂಪಾಯ ಚ ಸೂಕ್ಷ್ಮಾಯ ಸೂಕ್ಷ್ಮಸೂಕ್ಷ್ಮಾಯ ವೈ ನಮಃ ।
ಶ್ಮಶಾನವಾಸಿನೇ ತುಭ್ಯಂ ನಮಸ್ತೇ ಕೃತ್ತಿವಾಸಸೇ ॥ ೮೬ ॥
ಶಶಾಂಕ ಶೇಖರಾಯೈವ ರುದ್ರವಿಶ್ವಾಶ್ರಯಾಯ ಚ ।
ದುರ್ಗಾಯ ದುರ್ಗಸಾರಾಯ ದುರ್ಗಾವಯವಸಾಕ್ಷಿಣೇ ॥ ೮೭ ॥
ಲಿಂಗರೂಪಾಯ ಲಿಂಗಾಯ ಲಿಂಗಾನಾಂ ಪತಯೇ ನಮಃ ।
ನಮಃ ಪ್ರಣವರೂಪಾಯ ಪ್ರಣವಾರ್ಥಾಯ ವೈ ನಮಃ ॥ ೮೮ ॥

ನಮೋನಮಃ ಕಾರಣಕಾರಣಾಯ ತೇ
ಮೃತ್ಯುಂಜಯಾಯಾತ್ಮಭವಸ್ವರೂಪಿಣೇ ।
ತ್ರಿಯಂಬಕಾಯಾಸಿತಕಂಠ ಭರ್ಗ
ಗೌರೀಪತೇ ಸಕಲ ಮಂಗಲ ಹೇತವೇ ನಮಃ ॥ ೮೯ ॥

ಬೃಹಸ್ಪತಿರುವಾಚ :–

ನಾಮ್ನಾಂ ಶತಂ ಮಹೇಶಸ್ಯ ಉಚ್ಚಾರ್ಯಂ ವ್ರತಿನಾ ತದಾ ।
ಪ್ರದಕ್ಷಿಣ ನಮಸ್ಕಾರೈರೇತತ್ಸಂಖ್ಯೈಃ ಪ್ರಯತ್ನತಃ ।
ಕಾರ್ಯಂ ಪ್ರದೋಷಸಮಯೇ ತುಷ್ಟ್ಯರ್ಥಂ ಶಂಕರಸ್ಯ ಚ ॥ ೯೦ ॥

---

ರೂಪಾಯ ನಮಃ, ಪರಮಾರ್ಥಾಯ ನಮಃ, ವಿಶ್ವರೂಪಾಯ ನಮಃ, ವಿಶ್ವಾಯ ನಮಃ, ವಿಶ್ವನಾಥಾಯ ನಮಃ, ಶಂಕರಾಯ ನಮಃ, ಕಾಲಾಯ ನಮಃ, ಕಲಾವಯವರೂಪಿಣೇ ನಮಃ, ಅರೂಪಾಯ ನಮಃ, ಸೂಕ್ಷ್ಮಾಯ ನಮಃ, ಸೂಕ್ಷ್ಮಸೂಕ್ಷ್ಮಾಯ ನಮಃ, ಶ್ಮಶಾನವಾಸಿನೇ ನಮಃ, ಕೃತ್ತಿವಾಸಸೇ ನಮಃ, ಶಶಾಂಕಶೇಖರಾಯ ನಮಃ, ರುದ್ರವಿಶ್ವಾಶ್ರಯಾಯ ನಮಃ, ದುರ್ಗಾಯ ನಮಃ, ದುರ್ಗಸಾರಾಯನ ನಮಃ, ದುರ್ಗಾವಯವಸಾಕ್ಷಿಣೇ ನಮಃ, ಲಿಂಗರೂಪಾಯ ನಮಃ, ಲಿಂಗಾಯ ನಮಃ, ಲಿಂಗಾನಾಂಪತಯೇ ನಮಃ, ಪ್ರಣವರೂಪಾಯ ನಮಃ, ಪ್ರಣವಾರ್ಥಾಯ ನಮಃ, ಕಾರಣಕಾರಣಾಯ ನಮಃ, ಮೃತ್ಯುಂಜಯಾಯ ನಮಃ, ಆತ್ಮಪ್ರಭವಸ್ವರೂಪಿಣೇ ನಮಃ, ತ್ರ್ಯಂಬಕಾಯ ನಮಃ, ಅಸಿತಕಂಠಾಯ ನಮಃ, ಭರ್ಗಾಯನಮಃ, ಗೌರೀ ಪತಯೇ ನಮಃ, ಸಕಲ ಮಂಗಲಹೇತವೇ ನಮಃ,

೯೦. ಬೃಹಸ್ಪತಿಯು ಹೇಳುತ್ತಾನೆ:— ಈ ಪ್ರಕಾರವಾಗಿ, ವ್ರತವನ್ನು ಮಾಡುವವನು ಆ ಪ್ರದೋಷ ಸಮಯದಲ್ಲಿ ಶ್ರೀಮತ್ಪರಶಿವನ ನೂರೆಂಟು ದಿವ್ಯ ನಾಮಗಳನ್ನು ಹೇಳಿಕೊಂಡು ಅಷ್ಟೇ ಸಂಖ್ಯೆಯ ಪ್ರದಕ್ಷಿಣ ನಮಸ್ಕಾರಗಳನ್ನು ಪ್ರಯತ್ನಪೂರ್ವಕ ಮಾಡಬೇಕು. ಇದರಿಂದ ಶಂಕರನಿಗೆ ಸಂತೋಷವಾಗುವುದು.

ಏವಂ ವ್ರತಂ ಸಮುದ್ದಿಷ್ಟಂ ತವ ಶಕ್ರ ಮಹಾಮತೇ ।
ಶೀಘ್ರಂ ಕುರು ಮಹಾಭಾಗ ಪಶ್ಚಾದ್ಯುದ್ಧಂ ಕುರು ಪ್ರಭೋ ॥ ೯೧ ॥
ಶಂಭೋಃ ಪ್ರಸಾದಾತ್ಸರ್ವಂ ತೇ ಭವಿಷ್ಯತಿ ಜಯಾದಿಕಂ ॥ ೯೨ ॥
ವೃತ್ರೋ ಹ್ಯಯಂ ಮಹಾತೇಜಾ ದೈತೇಯ ಸ್ತಪಸಾ ಪುರಾ ।
ಶಿವಂ ಪ್ರಸಾದಯಾಮಾಸ ಪರ್ವತೇ ಗಂಧಮಾದನೇ ॥ ೯೩ ॥
ನಾಮ್ನಾ ಚಿತ್ರರಥೋ ರಾಜಾ ವನಂ ಚಿತ್ರರಥಸ್ಯ ತತ್ ।
ಏತಜ್ಜಾನೀಹಿ ಭೋ ಇಂದ್ರ ಶಿವಪುರ್ಯಾಃ ಸಮೀಪತಃ ॥ ೯೪ ॥
ಯಸ್ಮಿನ್ವನೇ ಮಹಾಭಾಗ ನ ಸಂತಿ ಚ ಷಡೂರ್ಮಯಃ ।
ತಸ್ಮಾಚ್ಚೈತ್ರರಥಂ ನಾಮ ವನಂ ಪರಮಮಂಗಲಂ ।
ತಸ್ಯರಾಜ್ಞಃ ಶಿವೇನೈವ ದತ್ತಂ ಯಾನಂ ಮಹಾದ್ಭುತಂ ॥ ೯೫ ॥
ಕಾಮಗಂ ಕಿಂಕಣೀಯುಕ್ತಂ ಸಿದ್ಧಚಾರಣಸೇವಿತಂ ।
ಗಂಧರ್ವೈರಪ್ಸರೋಯಕ್ಷೈಃ ಕಿನ್ನರೈರುಪಶೋಭಿತಂ ॥ ೯೬ ॥

---

೯೧-೯೨. ಎಲೈ ಮಹಾಮತಿಯೇ! ಈ ವ್ರತವು (ಪ್ರದೋಷವ್ರತವು) ನಿನಗಾಗಿಯೇ ಉದ್ದೇಶಿಸಲ್ಪಟ್ಟಿರುವುದು. ಇದನ್ನು ಜಾಗ್ರತೆಯಾಗಿ ಆಚರಿಸಿ ಆ ಬಳಿಕ ಈ ವೃತ್ರನೊಡನೆ ಯುದ್ಧವನ್ನು ಮಾಡು. ಎಲೈ ಪ್ರಭುವೇ! ಪರಮೇಶ್ವರನ ಪ್ರಸಾದದಿಂದ ನಿನಗೆ ವಿಜಯವೂ ಕೀರ್ತಿಯೂ ಲಭಿಸುತ್ತದೆ.

೯೩. ಅಯ್ಯಾ! ಈ ವೃತ್ರಾಸುರನು ಪೂರ್ವದಲ್ಲಿ ಗಂಧಮಾದನ ಪರ್ವತದಲ್ಲಿ ಪರಶಿವನನ್ನು ಕುರಿತು ತಪಸ್ಸುಮಾಡಿ ಆತನನ್ನು ಪ್ರಸನ್ನಗೊಳಿಸಿರುತ್ತಾನೆ.

೯೪-೯೬. ಮಹೇಂದ್ರಾ! ಈ ಅಸುರನ ಪೂರ್ವಜನ್ಮ ವೃತ್ತಾಂತವನ್ನು ಹೇಳುವೆನು ಕೇಳು. ಪೂರ್ವದಲ್ಲಿ ಚಿತ್ರರಥನೆಂಬ ರಾಜನೊಬ್ಬನಿದ್ದನು. ಇವನ ಉದ್ಯಾನವೇ ಚೈತ್ರರಥವೆಂದು ಪ್ರಸಿದ್ಧವಾಗಿರುವುದು. ಈ ಚೈತ್ರರಥವನವು ಕೈಲಾಸಕ್ಕೆ ಬಹಳ ಸಮೀಪದಲ್ಲಿರುವುದು. ಈ ವನದಲ್ಲಿ ಶೋಕ, ಮೋಹ, ಮುಪ್ಪು, ಸಾವು, ಹಸಿವು, ಬಾಯಾರಿಕೆ ಎಂಬ ಈ ಆರು ಬಗೆಯ ಪೀಡೆಗಳಾವುವೂ ಇರುವುದಿಲ್ಲ. ಇದರಿಂದ ಈ ಚೈತ್ರರಥ ವನವು ಪರಮಮಂಗಳಕರವಾಗಿರುವುದು. ಈ ಚಿತ್ರರಥ ರಾಜನಿಗೆ ಪರಶಿವನೇ ಸಾಕ್ಷಾತ್ತಾಗಿ ಪರಮಾಶ್ಚರ್ಯಕರವಾದ ವಿಮಾನವನ್ನು ದಯಪಾಲಿಸಿದ್ದನು. ಆ ವಿಮಾನವು ಕಿರುಗೆಜ್ಜೆಗಳಿಂದಲಂಕೃತವಾದುದಾಗಿ ಸಿದ್ಧಚಾರಣರಿಂದ ಸೇವಿತವಾಗಿ, ಗಂಧರ್ವರಿಂದಲೂ, ಅಪ್ಸರ ಯಕ್ಷ ಕಿನ್ನರರಿಂದಲೂ ಕೂಡಿ ಶೋಭಿಸುತ್ತ ಬೇಕಾದೆಡೆಗೆ ಹೋಗುವ ಶಕ್ತಿಯನ್ನೊಳಗೊಂಡಿದ್ದಿತು.

ತತಸ್ತೇನೈವ ಯಾನೇನ ಪೃಥಿವೀಂ ಪರ್ಯಟನ್ಪುರಾ ।
ತಥಾ ಗಿರೀಶ ಮುಖ್ಯಾಂಶ್ಚ ದ್ವೀಪಾಂಶ್ಚ ವಿವಿಧಾಸ್ತಥಾ ॥ ೯೭ ॥
ಏಕದಾ ಪರ್ಯಟನ್ರಾಜಾ ನಾಮ್ನಾ ಚಿತ್ರರಥೋ ಮಹಾನ್ ।
ಕೈಲಾಸಮಾಗತಸ್ತತ್ರ ಸದದರ್ಶ ಪರಾದ್ಭುತಂ ॥ ೯೮ ॥
ಸಭಾತಲಂ ಮಹೇಶಸ್ಯ ಗಣೈಶ್ಚೈವ ವಿರಾಜಿತಂ ।
ಅರ್ಧಾಂಗಲಗ್ನಯಾ ದೇವ್ಯಾ ಶೋಭಿತಂ ಚ ಮಹೇಶ್ವರಂ ॥ ೯೯ ॥
ನಿರೀಕ್ಷ್ಯ ದೇವ್ಯಾಸಹಿತಂ ಸದಾಶಿವಂ
ದೇವ್ಯನ್ವಿತಂ ವಾಕ್ಯಮಿದಂ ಬಭಾಷೇ ॥ ೧೦೦ ॥
ವಯಂ ಚ ಶಂಭೋ ವಿಷಯಾನ್ವಿತಾಶ್ಚ
ಮಂತ್ರ್ಯಾದಯಃ ಸ್ತ್ರೀಜಿತಾಶ್ಚಾಪಿ ಚಾನ್ಯೇ ।
ನ ಲೋಕಮಧ್ಯೇ ವಯಮೇವ ಚಾಜ್ಞಾಃ
ಸ್ತ್ರೀಸೇವನಂ ಲಜ್ಜಯಾ ನೈವ ಕುರ್ಯುಃ ॥ ೧೦೧ ॥
ಏತದ್ವಾಕ್ಯಂ ನಿಶಮ್ಯಾಥ ಮಹೇಶಃ ಪ್ರಹಸನ್ನಿವ ।
ಉವಾಚ ನ್ಯಾಯಸಂಯುಕ್ತಂ ಸರ್ವೇಷಾಮಪಿ ಶೃಣ್ವತಾಂ ॥ ೧೦೨ ॥
ಭಯಂ ಲೋಕಾಪವಾದಾಚ್ಚ ಸರ್ವೇಷಾಮಪಿ ನಾನ್ಯಥಾ ।
ಗ್ರಾಸಿತಂ ಕಾಲಕೂಟಂ ಚ ಸರ್ವೇಷಾಮಪಿ ದುರ್ಜರಂ ॥ ೧೦೩ ॥

---

೯೭–೧೦೦. ಚಿತ್ರರಥನು ಈ ದಿವ್ಯ ವಿಮಾನವನ್ನೇರಿ ಪೂರ್ವದಲ್ಲಿ ಭೂಮಂಡಲವನ್ನೆಲ್ಲ ಸಂಚರಿಸಿದನು. ಅಲ್ಲಲ್ಲಿನ ಪರ್ವತಗಳನ್ನೂ ಅನೇಕ ದ್ವೀಪಗಳನ್ನೂ ಸುತ್ತಿ ಬಂದನು. ಎಲೈ ದೇವೇಂದ್ರನೇ! ಒಂದಾನೊಂದು ದಿನ ಈ ರಾಜನು ಅದೇ ವಿಮಾನದಲ್ಲಿಯೇ ಕೈಲಾಸಗಿರಿಗೂ ಬಂದು ಅಲ್ಲಿ ಶಿವಗಣಗಳಿಂದ ವಿರಾಜಿಸುತ್ತಿದ್ದ ಪರಶಿವನ ಸಭಾ ಭವನವನ್ನು ಕಂಡನು. ಆಗಲವನು, ಪರಶಿವನು ಅರ್ಧಾಂಗಲಗ್ನೆಯಾದ ಉಮಾದೇವಿಯೊಡನೆ ಆ ಸಭಾ ಮಂಡಪವನ್ನಲಂಕರಿಸಿದ್ದುದನ್ನೂ ಕಂಡನು. ಇಂತು ಆ ದೇವಿಯೊಡನಿದ್ದ ಸದಾಶಿವನನ್ನು ಕಂಡು ಚಿತ್ರರಥನು ಹೀಗೆಂದನು.

೧೦೧–೧೦೫. "ಎಲೈ ಶಂಭುವೇ! ನಿನ್ನ ಮಂತ್ರಿಗಳೇ ಮೊದಲಾದ ನಾವುಗಳೆಲ್ಲರೂ ಕಾಮಾದಿ ವಿಷಯಗಳಿಂದ ಕೂಡಿದವರು. ಇಂತಿರುವ ನಾವೆಲ್ಲರೂ ಹೆಂಗಸರಿಗೆ ವಶರಾಗಿಹೋಗಿರುತ್ತೇವೆ. ಆದರೂ ಈ ಲೋಕದಲ್ಲಿ ನಾವೇನೋ ಅಷ್ಟು ಅಜ್ಞಾನಿಗಳಲ್ಲ. ಏಕೆಂದರೆ ನಾವು ಸ್ತ್ರೀಯರನ್ನು ನಾಚಿ ಸೇವಿಸುವುದೇ ಇಲ್ಲ." ಇಂತು ನುಡಿದ ಆ ಚಿತ್ರರಥನ ನುಡಿಯನ್ನಾಲಿಸಿ ಮಹೇಶ್ವರನು ನಸುನಗುತ್ತ ಎಲ್ಲರೂ ಕೇಳುವಂತೆ, ನ್ಯಾಯಸಮ್ಮತವಾಗಿ, "ಲೋಕಾಪವಾದ ಭಯವು ಯಾರಿಗೂ ತಪ್ಪಿದುದಲ್ಲ. ನಾನು ಇದಕ್ಕಾಗಿಯೇ ಯಾರಿಂದಲೂ

ತಥಾಪಿ ಉಪಹಾಸೋ ಮೇ ಕೃತೋ ರಾಜಾಹಿ ದುರ್ಜರಃ ।
ತಂ ಚಿತ್ರರಥಮಾಹೂಯ ಗಿರಿಜಾ ವಾಕ್ಯಮಬ್ರವೀತ್ ॥ ೧೦೪ ॥

ಗಿರಿಜೋವಾಚ :—

ರೇ ದುರಾತ್ಮನ್ಕಥಂ ತ್ವಜ್ಞ ಶಂಕರಶ್ಚೋಪಹಾಸಿತಃ ।
ಮಯಾ ಸಹೈವ ಮಂದಾತ್ಮನ್ದ್ರಕ್ಷ್ಯಸೇ ಕರ್ಮಣಃ ಫಲಂ ॥ ೧೦೫ ॥
ಸಾಧೂನಾಂ ಸಮಚಿತ್ತಾನಾಮುಪಹಾಸಂ ಕರೋತಿ ಯಃ ।
ದೇವೋವಾಪ್ಯಥವಾ ಮರ್ತ್ಯಃ ಸ ವಿಜ್ಞೇಯೋಽಧಮಾಧಮಃ ॥ ೧೦೬ ॥

ಏತೇ ಮುನೀಂದ್ರಾಶ್ಚ ಮಹಾನುಭಾವಾ
ಸ್ತಥಾಹ್ಯಮೀ ಋಷಯೋ ವೇದಗರ್ಭಾಃ ।
ತಥೈವ ಸರ್ವೇ ಸನಕಾದಯೋ ಹ್ಯಮೀ
ಅಜ್ಞಾಶ್ಚ ಸರ್ವೇ ಶಿವಮರ್ಚಯಂತೇ ॥ ೧೦೭ ॥
ರೇ ಮೂಢ ಸರ್ವೇಷು ಜನೇಷ್ವಭಿಜ್ಞ
ಸ್ತ್ವಮೇಕ ಏವಾದ್ಯ ನ ಚಾಪರೇ ಜನಾಃ ।
ತಸ್ಮಾದಭಿಜ್ಞಂ ಹಿ ಕರೋಮಿ ದೈತ್ಯಂ
ದೇವೈರ್ದ್ವಿಜೈಶ್ಚಾಪಿ ಬಹಿಷ್ಕೃತಂ ತ್ವಾಂ ॥ ೧೦೮ ॥

---

ಜಯಿಸಲಸಾಧ್ಯವಾದ ಕಾಲಕೂಟ ಮಹಾವಿಷವನ್ನೂ ಪಾನಮಾಡಿದೆನು. ಆದರೂ ಕಠಿನಾತ್ಮನಾದ ಈ ಚಿತ್ರರಥನು ನನ್ನನ್ನು ಈ ರೀತಿ ಹಾಸ್ಯಮಾಡಿದನು'' ಎಂದು ಹೇಳಿದನು. ಆಗ ಗಿರಿಜೆಯು ಆ ಚಿತ್ರರಥನನ್ನು ಕರೆದು ಅವನನ್ನು ಕುರಿತು, ''ಎಲಾ ದುರಾತ್ಮನೇ! ನೀನು ಜ್ಞಾನವಿಲ್ಲದೆ ನನ್ನೊಡನಿರುವ ಪರಶಿವನನ್ನು ಹಾಸ್ಯಮಾಡಿದುದೆಂತು? ಇದಕ್ಕೆ ಫಲವನ್ನೀಗಲೇ ಅನುಭವಿಸುವೆ.

೧೦೬–೧೦೮. ಸುಖದುಃಖಗಳೆರಡರಲ್ಲಿಯೂ ಸಮಚಿತ್ತರಾಗಿರುವ ಸಾಧುಗಳನ್ನು ಯಾವನು ಪರಿಹಾಸ್ಯಮಾಡುವನೋ, ಅವನು ದೇವತೆಯಾಗಿರಲಿ, ಮಾನವನಾಗಿರಲಿ ಅವನನ್ನು ಅಧಮರಲ್ಲಿಯೂ ಅಧಮನೆಂದು ತಿಳಿಯಬೇಕು. ಎಲೆವೋ ತಿಳಿಗೇಡಿಯೇ! ಮಹಾನುಭಾವರಾದ ಮುನೀಂದ್ರರೂ, ವೇದವಿತ್ತುಗಳಾದ ಈ ಮಹರ್ಷಿಗಳೂ, ಅಂತೆಯೇ ಸನಕಸನಂದನರೇ ಮೊದಲಾದವರೂ ಮೂಢರು. ತಿಳಿವಿಲ್ಲದೆ ಶಿವನನ್ನು ಪೂಜಿಸುವವರಲ್ಲವೆ? ಎಲಾ ಮೂಢನೇ! ಎಲ್ಲರಿಗಿಂತಲೂ ನಾನೇ ಜ್ಞಾನಿ; ಇನ್ನುಳಿದ ಎಲ್ಲರೂ ಅಜ್ಞಾನಿಗಳು ಎಂದು ತಿಳಿದಿರುವೆಯಲ್ಲವೆ! ಇಂತಹ ನಿನಗೆ ಬುದ್ಧಿಕಲಿಸುತ್ತೇನೆ. ಹೀಗೆ ತಿಳಿದು ದುರಹಂಕಾರಿಯಾದ ನಿನ್ನನ್ನು ದೇವಬ್ರಾಹ್ಮಣರು ದೂರಮಾಡುವ ದೈತ್ಯನನ್ನಾಗಿಸುವೆನು. ಈಗಲೇ ನೀನು ಮಹಾದೈತ್ಯನಾಗಿ ಹೋಗು'' ಎಂದು ಹೇಳಿ ಶಪಿಸಿದಳು.

ಏವಂ ಶಪ್ತಸ್ತ್ವಯಾ ದೇವ್ಯಾ ಭವಾನ್ಯಾ ರಾಜಸತ್ತಮಃ ।
ರಾಜಾ ಚಿತ್ರರಥಃ ಸದ್ಯಃ ಪಪಾತ ಸಹಸಾ ದಿವಃ ॥ ೧೦೯ ॥
ಆಸುರೀಂ ಯೋನಿಮಾಸಾದ್ಯ ವೃತ್ರೋ ನಾಮ್ನಾಽಭವತ್ತದಾ ।
ತಪಸಾ ಪರಮೇಣೈವ ತ್ವಷ್ಟ್ರಾ ಸಂಯೋಜಿತಃ ಕ್ರಮಾತ್ ॥ ೧೧೦ ॥
ತಪಸಾ ತೇನ ಮಹತಾ ಅಜೇಯೋ ವೃತ್ರ ಉಚ್ಯತೇ ।
ತಸ್ಮಾಚ್ಛಂಭುಂ ಸಮಭ್ಯರ್ಚ್ಯ ಪ್ರದೋಷವಿಧಿನಾಧುನಾ ॥ ೧೧೧ ॥
ಜಹಿ ವೃತ್ರಂ ಮಹಾದೈತ್ಯಂ ದೇವಾನಾಂ ಕರ್ಮಸಿದ್ಧಯೇ ।
ಗುರೋಸ್ತದ್ವಚನಂ ಶ್ರುತ್ವಾ ಉವಾಚಾಥ ಶತಕ್ರತುಃ ।
ಸೋದ್ಯಾಪನವಿಧಿಂ ಬ್ರೂಹಿ ಪ್ರದೋಷಸ್ಯ ಚ ಮೇಽಧುನಾ ॥ ೧೧೨ ॥

ಬೃಹಸ್ಪತಿರುವಾಚ :—

ಕಾರ್ತಿಕೇ ಮಾಸಿ ಸಂಪ್ರಾಪ್ತೇ ಮಂದವಾರೇ ತ್ರಯೋದಶೀ ।
ಸಂಪೂರ್ತಿಸ್ತುಭವೇತ್ತತ್ರ ಸಂಪೂರ್ಣವ್ರತಸಿದ್ಧಯೇ ॥ ೧೧೩ ॥
ವೃಷಭೋ ರಾಜತಃ ಕಾರ್ಯಃ ಪೃಷ್ಠೇ ತಸ್ಯ ಸುಪೀಠಕಂ ।
ತಸ್ಯೋಪರಿ ನ್ಯಸೇದ್ದೇವಮುಮಾಕಾಂತಂ ತ್ರಿಲೋಚನಂ ॥ ೧೧೪ ॥

---

೧೦೯–೧೨. ಈ ಪ್ರಕಾರ ಆ ಭವಾನೀದೇವಿಯು ಶಪಿಸಲು, ಚಿತ್ರರಥನು ಕೂಡಲೇ ಸ್ವರ್ಗಲೋಕದಿಂದ ಭೂಮಿಗೆ ಬಿದ್ದನು. ಬಳಿಕ ಅವನು ವಿಶ್ವಕರ್ಮ ನೆಸಗಿದ ಶ್ರೇಷ್ಠವಾದ ತಪಸ್ಸಿನಿಂದ ಅಸುರಯೋನಿಯಲ್ಲಿ ಬಿದ್ದು ವೃತ್ರನೆಂಬ ಮಹಾ ಶೂರನಾದನು. ವಿಶ್ವಕರ್ಮನ ಮಹತ್ತರವಾದ ತಪಸ್ಸಿನಿಂದ ಜನಿಸಿದವ ನಾದುದರಿಂದ ಆ ಅಸುರನು ಹೀಗೆ ಅಜೇಯನೆನಿಸಿರುವನು. ಆದುದರಿಂದೆಲೈ ಶಕ್ರನೇ! ಪ್ರದೋಷ ಸಮಯದಲ್ಲಿ ನಾನು ಹೇಳಿದ ಈ ವಿಧಾನದಿಂದ ಪರಮೇಶ್ವರ ನನ್ನು ಪೂಜಿಸಿ ಆ ತರುವಾಯ ದೇವತೆಗಳ ಕಾರ್ಯಸಿದ್ಧಿಗಾಗಿ ಮಹಾ ದೈತ್ಯ ನಾದ ಈ ವೃತ್ರನನ್ನು ಸಂಹರಿಸು." ಹೀಗೆ ಅಪ್ಪಣೆಕೊಡಿಸಿದ ಗುರುವಾದ ಬೃಹಸ್ಪತ್ಯಾಚಾರ್ಯನನ್ನು ಕುರಿತು ದೇವೇಂದ್ರನು, "ಗುರುವೇ! ಉದ್ಯಾಪನ ವಿಧಾನಪೂರ್ವಕವಾಗಿ ಈ ವ್ರತವನ್ನು ಮಾಡುವುದೆಂತೆಂಬುದನ್ನು ತಿಳಿಸುವವ ನಾಗು" ಎಂದನು.

೧೧೩–೧೭. ಬೃಹಸ್ಪತಿಯು ಹೇಳುತ್ತಾನೆ:—ಕಾರ್ತೀಕ ಮಾಸದ ಶುಕ್ಲ ಪಕ್ಷದಲ್ಲಿ ಶನಿವಾರದ ದಿನ ತ್ರಯೋದಶೀ ತಿಥಿಯು ಸಂಪೂರ್ಣವಾಗಿ ಬರಬೇಕು. ಅಂದಿನ ದಿನ ಉದ್ಯಾಪನೆಯನ್ನು ಮಾಡಿದರೆ ವ್ರತವು ಸಂಪೂರ್ಣವಾಗಿ ಸಿದ್ಧಿಸು ತ್ತದೆ. ಅಂದಿನ ದಿನ ವ್ರತವನ್ನು ಆಚರಿಸುವವನು ಬೆಳ್ಳಿಯಲ್ಲಿ ವೃಷಭವನ್ನು ಮಾಡಿಸಿ ಅದರ (ಬೆನ್ನಿನ) ಮೇಲೆ ಚಿನ್ನದಲ್ಲಿ ಮಾಡಿದ, ಪಂಚಮುಖಗಳೂ, ದಶಭುಜಗಳೂ ಉಳ್ಳವನಾಗಿ, ಅರ್ಧಾಂಗದಲ್ಲಿ ಗಿರಿಜೆಯೊಡಗೂಡಿ ತ್ರಿಲೋಚನ

ಪಂಚವಕ್ತ್ರಂ ದಶಭುಜಮರ್ಧಾಂಗೇ ಗಿರಿಜಾಂ ಸತೀಂ ।
ಏವಂ ಚೋಮಾಮಹೇಶಂ ಚ ಸೌವರ್ಣಂ ಕಾರಯೇದ್ಬುಧಃ ॥ ೧೧೫ ॥
ಸ ವೃಷಂ ತಾಮ್ರಪಾತ್ರೇ ಚ ವಸ್ತ್ರೇಣ ಪರಿಗುಂಠಿತೇ ।
ಸ್ಥಾಪಯಿತ್ವೋಮಯಾಸಾರ್ಧಂ ನಾನಾಭೋಗಸಮನ್ವಿತಂ ॥೧೧೬॥
ವಿಧಿನಾ ಜಾಗರಂ ಕುರ್ಯಾದ್ರಾತ್ರೌ ಶ್ರದ್ಧಾಸಮನ್ವಿತಃ ।
ಪಂಚಾಮೃತೇನ ಸ್ನಪನಂ ಕಾರ್ಯಮಾದೌ ಪ್ರಯತ್ನತಃ ॥ ೧೧೭ ॥
ಗೋಕ್ಷೀರಸ್ನಾನಂ ದೇವೇಶ ಗೋಕ್ಷೀರೇಣ ಮಯಾ ಕೃತಂ ।
ಸ್ನಪನಂ ದೇವದೇವೇಶ ಗೃಹಾಣ ಪರಮೇಶ್ವರ ॥ ೧೧೮ ॥
ದಧ್ನಾ ಚೈವ ಮಯಾ ದೇವ ಸ್ನಪನಂ ಕ್ರಿಯತೇಽಧುನಾ ।
ಗೃಹಾಣ ಚ ಮಯಾ ದತ್ತಂ ಸುಪ್ರಸನ್ನೋ ಭವಾದ್ಯವೈ ॥ ೧೧೯ ॥
ಸರ್ಪಿಷಾ ಚ ಮಯಾದೇವ ಸ್ನಪನಂ ಕ್ರಿಯತೇಽಧುನಾ ।
ಗೃಹಾಣ ಶ್ರದ್ಧಯಾ ದತ್ತಂ ತವ ಪ್ರೀತ್ಯರ್ಥಮೇವಚ ॥ ೧೨೦ ॥
ಇದಂ ಮಧು ಮಯಾ ದತ್ತಂ ತವ ಪ್ರೀತ್ಯರ್ಥಮೇವಚ ।
ಗೃಹಾಣತ್ವಂ ಹಿ ದೇವೇಶ ಮಮ ಶಾಂತಿಪ್ರದೋಭವ ॥ ೧೨೧ ॥
ಸಿತಯಾ ದೇವದೇವೇಶ ಸ್ನಪನಂ ಕ್ರಿಯತೇಽಧುನಾ ।
ಗೃಹಾಣ ಶ್ರದ್ಧಯಾ ದತ್ತಂ ಸುಪ್ರಸನ್ನೋ ಭವ ಪ್ರಭೋ ॥ ೧೨೨ ॥

---

ನಾಗಿರುವ ಪರಮೇಶ್ವರನನ್ನು ರಜತ ಪೀಠದಮೇಲೆ ಕುಳ್ಳಿರಿಸಬೇಕು. ಈ ರೀತಿ ಸ್ಥಾಪಿಸುವ ವೃಷಭಾರೂಢನಾದ ಉಮಾಮಹೇಶ್ವರನನ್ನು ವಸ್ತ್ರಗಳಿಂದ ಹೊದಿಸಿ ತಾಮ್ರಪಾತ್ರೆಯಲ್ಲಿ ಸ್ಥಾಪಿಸಿದ ತರುವಾಯ ಅಂದಿನ ರಾತ್ರಿ ಶ್ರದ್ಧಾಭಕ್ತಿಗಳಿಂದ ಶಾಸ್ತ್ರೋಕ್ತವಾಗಿ ಜಾಗರಣೆಯನ್ನು ಮಾಡಬೇಕು. ತರುವಾಯ ಮೊದಲು ಪ್ರಯತ್ನಪೂರ್ವಕವಾಗಿ ಪಂಚಾಮೃತಾಭಿಷೇಕವನ್ನು ಮಾಡಬೇಕು.

೧೧೮–೨೨. "ದೇವೇಶ! ದೇವದೇವೇಶ್ವರ! ಪರಮೇಶ್ವರ! ನಾನೆಸಗಿದ ಈ ಗೋಕ್ಷೀರಸ್ನಾನವನ್ನು ಸ್ವೀಕರಿಸು. ದೇವ! ಈಗ ದಧಿಸ್ನಾನವನ್ನು ಮಾಡಿಸುವೆನು. ನಿನ್ನ ಪ್ರೀತ್ಯರ್ಥವಾಗಿ ಶ್ರದ್ಧೆಯಿಂದೆಸಗಿದ ಈ ಸ್ನಾನವನ್ನು ನೀನು ಸ್ವೀಕರಿಸಬೇಕು. ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗು. ಈಗ ಆಜ್ಯದಿಂದ ನಿನಗೆ ಸ್ನಾನಮಾಡಿಸುವೆನು. ಎಲೈ ಪರಮೇಶ್ವರನೇ! ನಿನ್ನ ತೃಪ್ತ್ಯರ್ಥವಾಗಿ ಭಕ್ತನಾದ ನಾನಿತ್ತ ಈ ಆಜ್ಯಸ್ನಾನವನ್ನು ಸ್ವೀಕರಿಸು. ಎಲೈ ಸದಾಶಿವನೇ! ಇದೋ ಇದು ಮಧುವು. ಇದನ್ನು ನಿನ್ನ ಪ್ರೀತ್ಯರ್ಥವಾಗಿ ಕೊಡುವೆನು. ಇದನ್ನು ಸ್ವೀಕರಿಸಿ ನನಗೆ ಶಾಂತಿಯನ್ನನುಗ್ರಹಿಸು. ಓ ದೇವದೇವೇಶ್ವರ! ಈಗ ನಾನು ಸಕ್ಕರೆಯಿಂದ ನಿನಗೆ ಸ್ನಾನವನ್ನು ಸಮರ್ಪಿಸುವೆನು. ಪ್ರಭುವೇ! ಭಕ್ತಿಯಿಂದ ಸಮರ್ಪಿಸಿದ ಈ ಶರ್ಕರಾಸ್ನಾನವನ್ನೂ ಸ್ವೀಕರಿಸಿ ಪ್ರಸನ್ನನಾಗು.

ಏವಂ ಪಂಚಾಮೃತೇನೈವ ಸ್ನಪನೀಯೋ ವೃಷಧ್ವಜಃ ।
ಪಶ್ಚಾದರ್ಘ್ಯಂ ಪ್ರದಾತವ್ಯಂ ತಾಮ್ರಪಾತ್ರೇಣ ಧೀಮತಾ ।
ಅನೇನೈವ ಚ ಮಂತ್ರೇಣ ಉಮಾಕಾಂತಸ್ಯ ತುಷ್ಟಯೇ ॥ ೧೨೩ ॥
ಅರ್ಘ್ಯೋಽಸಿ ತ್ವಮುಮಾಕಾಂತ ಅರ್ಘೇಣಾನೇನ ವೈ ಪ್ರಭೋ ।
ಗೃಹಾಣ ತ್ವಂ ಮಯಾ ದತ್ತಂ ಪ್ರಸನ್ನೋಭವ ಶಂಕರ ॥ ೧೨೪ ॥
ಮಯಾ ದತ್ತಂ ಚ ತೇ ಪಾದ್ಯಂ ಪುಷ್ಪಗಂಧಸಮನ್ವಿತಂ ।
ಗೃಹಾಣ ದೇವದೇವೇಶ ಪ್ರಸನ್ನೋ ವರದೋ ಭವ ॥ ೧೨೫ ॥
ವಿಷ್ಟರಂ ವಿಷ್ಟರೇಣೈವ ಮಯಾ ದತ್ತಂ ಚ ವೈ ಪ್ರಭೋ ।
ಶಾಂತ್ಯರ್ಥಂ ತವ ದೇವೇಶ ವರದೋ ಭವ ಮೇ ಸದಾ ॥ ೧೨೬ ॥
ಆಚಮನೀಯಂ ಚ ಮಯಾ ದತ್ತಂ ತವ ವಿಶ್ವೇಶ್ವರ ಪ್ರಭೋ ।
ಗೃಹಾಣ ಪರಮೇಶಾನ ತುಷ್ಟೋ ಭವ ಮಮಾದ್ಯವೈ ॥ ೧೨೭ ॥
ಬ್ರಹ್ಮಗ್ರಂಥಿಸಮಾಯುಕ್ತಂ ಬ್ರಹ್ಮಕರ್ಮಪ್ರವರ್ತಕಂ ।
ಯಜ್ಞೋಪವೀತಂ ಸೌವರ್ಣಂ ಮಯಾ ದತ್ತಂ ತವ ಪ್ರಭೋ ॥೧೨೮॥
ಸುಗಂಧಂ ಚಂದನಂ ದೇವ ಮಯಾ ದತ್ತಂ ಚ ವೈ ಪ್ರಭೋ ।
ಭಕ್ತ್ಯಾ ಪರಮಯಾ ಶಂಭೋ ಸುಗಂಧಂ ಕುರು ಮಾಂ ಭವ ॥ ೧೨೯ ॥

---

೧೨೩–೨೬. ಎಲೈ ಮಹೇಂದ್ರನೇ! ಹೀಗೆ ಆ ವೃಷಭಧ್ವಜನಾದ ಉಮಾ ಮಹೇಶ್ವರನನ್ನು ಪಂಚಾಮೃತಗಳಿಂದ ಸ್ನಾನಮಾಡಿಸಬೇಕು. ತರುವಾಯ ಬುದ್ಧಿವಂತನಾದ ವ್ರತಿಯು ತಾಮ್ರಪಾತ್ರೆಯಲ್ಲಿರುವ ಶುಭ್ರಜಲದಿಂದ ಆ ಉಮಾಕಾಂತನ ಸಂತುಷ್ಟಿಗಾಗಿ ಈ ಮುಂದೆ ಹೇಳುವ ಮಂತ್ರದಿಂದಲೇ ಅರ್ಘ್ಯವನ್ನು ಕೊಡಬೇಕು; "ಎಲೈ ಪ್ರಭುವೇ! ಉಮಾಕಾಂತನೇ! ನೀನು ಈ ಅರ್ಘ್ಯದಿಂದ ಪೂಜಿತನಾಗಿರುವೆ. ಎಲೈ ಶಂಕರನೇ! ನಾನಿತ್ತ ಈ ಅರ್ಘ್ಯವನ್ನು ಸ್ವೀಕರಿಸಿ ಪ್ರಸನ್ನನಾಗು." ಎಲೈ ದೇವದೇವೇಶ್ವರನೇ! ಇದೋ ಗಂಧ ಪುಷ್ಪ ಅಕ್ಷತೆಗಳು ಬೆರೆತ ಪಾದೋದಕವನ್ನೀಯುವೆನು. ಇದನ್ನು ತೆಗೆದುಕೊಂಡು ನನಗೆ ಪ್ರಸನ್ನನೂ, ವರದನೂ ಆಗು ಪ್ರಭುವೇ! ಇದೋ ನಿನ್ನ ಶಾಂತ್ಯರ್ಥವಾಗಿ ಆಸನವನ್ನೊಪ್ಪಿಸುವೆನು. ನೀನೆನಗೆ ಎಲ್ಲ ಕಾಲಗಳಲ್ಲಿಯೂ ವರದನಾಗು.

೧೨೭–೩೦. ಎಲೈ ವಿಶ್ವೇಶ್ವರನೇ! ಸ್ವಾಮಿಾ!! ಈಗ ನಾನು ಕೊಡುವ ಆಚಮನೀಯಕವನ್ನು ತೆಗೆದುಕೊಂಡು ನನ್ನ ವಿಷಯದಲ್ಲಿ ಪ್ರಸನ್ನನಾಗು. ಬ್ರಹ್ಮಗ್ರಂಥಿಯಿಂದ ಕೂಡಿ, ಎಲ್ಲಾ ಬ್ರಹ್ಮಕರ್ಮಗಳನ್ನೂ ಆಗಗೊಳಿಸುವಂಥ ಸುವರ್ಣಮಯ ಯಜ್ಞೋಪವೀತವನ್ನೊಪ್ಪಿಸುವೆನು ಸ್ವೀಕರಿಸು. ಪ್ರಭುವೇ! ದೇವೇಶ್ವರ!! ಸುಗಂಧಭರಿತವಾದ ಚಂದನವನ್ನು ಪರಮ ಭಕ್ತಿಯಿಂದ

ದೀಪಂ ಹಿ ಪರಮಂ ಶಂಭೋ ಘೃತಪ್ರಜ್ವಲಿತಂ ಮಯಾ ।
ದತ್ತಂ ಗೃಹಾಣ ದೇವೇಶ ಮಮ ಜ್ಞಾನಪ್ರದೋ ಭವ ॥ ೧೩೦ ॥
ದೀಪಂ ವಿಶಿಷ್ಟಂ ಪರಮಂ ಸರ್ವೌಷಧಿವಿಜೃಂಭಿತಂ ।
ಗೃಹಾಣ ಪರಮೇಶಾನ ಮಮ ಶಾಂತ್ಯರ್ಥಮೇವಚ ॥ ೧೩೧ ॥
ದೀಪಾವಲಿಂ ಮಯಾ ದತ್ತಾಂ ಗೃಹಾಣ ಪರಮೇಶ್ವರ ।
ಆರಾರ್ತಿಕಪ್ರದಾನೇನ ಮಮ ತೇಜಃಪ್ರದೋ ಭವ ॥ ೧೩೨ ॥
ಫಲದೀಪಾದಿ ನೈವೇದ್ಯತಾಂಬೂಲಾದಿಕ್ರಮೇಣ ಚ ।
ಪೂಜನೀಯೋ ವಿಧಾನಜ್ಞೈಸ್ತಸ್ಯಾಂ ರಾತ್ರೌ ಪ್ರಯತ್ನತಃ ॥ ೧೩೩ ॥
ಪಶ್ಚಾಜ್ಜಾಗರಣಂ ಕಾರ್ಯಂ ಗೃಹೇ ವಾ ದೇವತಾಲಯೇ ।
ವಿಕಾಸಮಂಡಪಂ ಕೃತ್ವಾ ನಾನಾಶ್ಚರ್ಯಸಮನ್ವಿತಂ ।
ಗೀತವಾದಿತ್ರನೃತ್ಯೇನ ಅರ್ಚನೀಯಃ ಸದಾಶಿವಃ ॥ ೧೩೪ ॥
ಅನೇನೈವ ವಿಧಾನೇನ ಪ್ರದೋಷೋದ್ಯಾಪನೇ ವಿಧಿಃ ।
ಕಾರ್ಯಾ ವಿಧಿಮತೋ ಶಕ್ರ ಸರ್ವಕಾರ್ಯಾರ್ಥಸಿದ್ಧಯೇ ॥ ೧೩೫ ॥

---

ಸಮರ್ಪಿಸುತ್ತಿರುವೆನು. ಇದನ್ನೊಪ್ಪಿಸಿಕೊಂಡು ನನ್ನನ್ನು ಸುವಾಸನಾ ಯುಕ್ತನನ್ನಾಗಿ ಮಾಡು. ಎಲೈ ಶಂಭುವೇ! ಈಗ ನಾನು ಕೊಡುತ್ತಿರುವ ಶ್ರೇಷ್ಠವಾದ ತುಪ್ಪದ ದೀಪವನ್ನು ತೆಗೆದುಕೊಂಡು ನನಗೆ ಜ್ಞಾನವನ್ನು ದಯಪಾಲಿಸು.

೧೩೧. ಎಲೈ ಪರಮೇಶ್ವರನೇ! ಸಮಸ್ತ ಓಷಧಿ ವಿಶೇಷಗಳಿಂದ ಕೂಡಿದ ಶ್ರೇಷ್ಠವಾದ ಈ ದೀಪವನ್ನು ಸ್ವೀಕರಿಸಿ ನನಗೆ ಶಾಂತಿಯನ್ನು ಕೊಡು.

೧೩೨. ಪರಮೇಶ್ವರ! ನಾನೀ ದೀಪಮಾಲೆಯಿಂದ ನಿನಗೆ ಮಂಗಳಾ ರತಿಯನ್ನೊಪ್ಪಿಸುತ್ತಿರುವೆನು. ಸ್ವೀಕರಿಸಿ ನನಗೆ ತೇಜಸ್ಸನ್ನು ಕೊಡುವವನಾಗು.

೧೩೩. ಅಯ್ಯಾ ಮಹೇಂದ್ರನೇ! ಹೀಗೆ ಫಲದೀಪಾದಿಗಳಿಂದಲೂ, ನೈವೇದ್ಯತಾಂಬೂಲಾದಿಗಳಿಂದಲೂ ಕ್ರಮವರಿತು ಅಂದಿನ ರಾತ್ರಿ ಸ್ಥಿರಚಿತ್ತನಾಗಿ ಭಕ್ತಿಯಿಂದ ಪರಶಿವನನ್ನು ಪೂಜಿಸಬೇಕು.

೧೩೪. ತರುವಾಯ ಮನೆಯಲ್ಲಿಯಾಗಲಿ, ದೇವಾಲಯಗಳಲ್ಲಿಯಾಗಲಿ ಸರ್ವಾಲಂಕೃತವಾದ ಮಂಡಪವನ್ನು ರಚಿಸಿ, ಗೀತವಾದಿತ್ರ ಘೋಷಗಳಿಂದಲೂ, ನೃತ್ಯಗಳಿಂದಲೂ ಜಾಗರಣೆ ಮಾಡಿ ಶಿವನನ್ನು ಪೂಜಿಸಬೇಕು.

೧೩೫. ಎಲೈ ಮಹೇಂದ್ರನೇ! ಪ್ರದೋಷ ವ್ರತದ ಉದ್ಯಾಪನೆಯ ವಿಧಿಯು ಇದೇ. ವ್ರತಿಯಾದವನು ಸಮಸ್ತ ಕಾರ್ಯಗಳ ಸಿದ್ಧಿಗಾಗಿ ಈ ವ್ರತ ವನ್ನು ಈ ವಿಧಾನದಿಂದಲೇ ಆಚರಿಸತಕ್ಕುದು.

ಗುರುಣಾ ಕಥಿತಂ ಸರ್ವಂ ತಚ್ಚಕಾರ ಶತಕ್ರತುಃ ।
ತೈನ್ಯೈವ ಚ ಸಹಾಯೇನ ಇಂದ್ರೋ ಯುದ್ಧಪರಾಯಣಃ ॥ ೧೩೬ ॥
ವೃತ್ರಂ ಪ್ರತಿ ಸುರೈಸ್ಸಾರ್ಧಂ ಯುಯುಧೇ ಚ ಶತಕ್ರತುಃ ।
ತುಮುಲಂ ಯುದ್ಧಮಭವದ್ದೇವಾನಾಂ ದಾನವೈಃ ಸಹ ॥ ೧೩೭ ॥
ತಸ್ಮಿಂಸ್ತು ತುಮುಲೇ ಗಾಢೇ ದೇವದೈತ್ಯಕ್ಷಯಾವಹೇ ।
ದ್ವಂದ್ವಯುದ್ಧಂ ಸುತುಮುಲಮತಿವೇಲಂ ಭಯಾವಹಂ ॥ ೧೩೮ ॥
ವ್ಯೋಮೋ ಯಮೇನ ಯುಯುಧೇ ಹ್ಯಗ್ನಿನಾ ತೀಕ್ಷ್ಣಕೋಪನಃ ।
ವರುಣೇನ ಮಹಾದಂಷ್ಟ್ರೋ ವಾಯುನಾ ಚ ಮಹಾಬಲಃ ॥ ೧೩೯ ॥
ದ್ವಂದ್ವಯುದ್ಧರತಾಃ ಸರ್ವೇ ಅನ್ಯೋನ್ಯಬಲಕಾಂಕ್ಷಿಣಃ ॥ ೧೪೦ ॥

ತಥೈವ ತೇ ದೇವವರಾ ಮಹಾಭುಜಾಃ
ಸಂಗ್ರಾಮಶೂರಾ ಜಯಿನಸ್ತದಾಭವನ್ ।
ಪರಾಜಯಂ ದೈತ್ಯವರಾಶ್ಚ ಸರ್ವೇ
ಪ್ರಾಪ್ತಾಸ್ತದಾನೀಂ ಪರಮಂ ಸಮಂತಾತ್ ॥ ೧೪೧ ॥
ದೃಷ್ಟ್ವಾ ಸುರೈರ್ದೈತ್ಯವರಾನ್ಪರಾಜಿತಾ
ನ್ಪಲಾಯಮಾನಾನಥ ಕಾಂದಿಶೀಕಾನ್ ।
ತದೈವ ವೃತ್ರಃ ಪರಮೇಣ ಮನ್ಯುನಾ
ಮಹಾಬಲೋ ವಾಕ್ಯಮಿದಂ ಬಭಾಷೇ ॥ ೧೪೨ ॥

---

೧೩೬–೪೦. ಎಲೈ ಶೌನಕಾದಿ ಮುನಿಗಳಿರಾ! ದೇವೇಂದ್ರನು, ಗುರುವಾದ ಬೃಹಸ್ಪತ್ಯಾಚಾರ್ಯನು ಹೇಳಿದಂತೆಯೇ ಎಲ್ಲವನ್ನೂ ಮಾಡಿದನು. ಈ ರೀತಿ ಅವನೆಸಗಿದ ವ್ರತದ ಬಲದಿಂದಲೇ ಅವನು ಬಲಶಾಲಿಯಾಗಿ ಯುದ್ಧಸನ್ನದ್ಧನಾದನು. ತರುವಾಯ ಆ ಶತಕ್ರತುವು ದೇವತೆಗಳೊಡಗೂಡಿ ಆ ವೃತ್ರನೊಡನೆ ಹೋರಿದನು. ಆಗ ದೇವತೆಗಳಿಗೂ ದಾನವರಿಗೂ ಭಯಂಕರ ಯುದ್ಧವು ಮೊದಲಾಯಿತು. ದೇವತೆಗಳಿಗೂ, ದಾನವರಿಗೂ, ವಿನಾಶಕರವಾದ ಆ ಸಂಕುಲ ಯುದ್ಧದಲ್ಲಿ ಬಹಳ ಕಾಲ ಇತ್ತಂಡಗಳವರಿಗೂ ಪರಸ್ಪರವಾಗಿ ಭಯಂಕರವಾದ ದ್ವಂದ್ವಯುದ್ಧವು ನಡೆಯಿತು. ಆ ಸಮಯದಲ್ಲಿ ವ್ಯೋಮದಾನವನು ಯಮನೊಡನೆಯೂ, ತೀಕ್ಷ್ಣಕೋಪನು ಅಗ್ನಿಯೊಡನೆಯೂ, ವರುಣನೊಡನೆ ಮಹಾದಂಷ್ಟ್ರನೂ, ಮಹಾಬಲನು ವಾಯುವಿನೊಡನೆಯೂ ಯುದ್ಧಮಾಡಿದರು. ಈರೀತಿ ಅವರೆಲ್ಲರೂ ಒಬ್ಬರನ್ನೊಬ್ಬರು ಕೊಲ್ಲಬಯಸಿ ದ್ವಂದ್ವಯುದ್ಧದಲ್ಲಿ ತೊಡಗಿದರು.

೧೪೧–೪೪. ಅಂತೆಯೇ ಮಹಾಭುಜರೂ, ರಣರಂಗದಲ್ಲಿ ಶೂರರೂ ಆದ ದೇವತೆಗಳು ಯುದ್ಧಮಾಡಿ ವಿಜಯಿಗಳಾದರು. ಎತ್ತೆತ್ತಲೂ ದೈತ್ಯಶ್ರೇಷ್ಠರೆಲ್ಲರೂ ಪರಾಜಯವನ್ನು ಹೊಂದಿದರು. ಹೀಗೆ ದೇವತೆಗಳಿಗೆ ಸೋತು ದಿಕ್ಕೆಟ್ಟು

ವೃತ್ರ ಉವಾಚ :—

ಹೇ ದೈತ್ಯಾಃ ಪರಮಾರ್ತಾಶ್ಚ ಕಸ್ಮಾದ್ಯೂಯಂ ಭಯಾತುರಾಃ ।
ಪಲಾಯನಪರಾಃ ಸರ್ವೇ ವಿಸೃಜ್ಯ ರಣಮುದ್ಭುತಂ ॥ ೧೪೩ ॥
ಸ್ವಂ ಸ್ವಂ ಪರಾಕ್ರಮಂ ವೀರಾ ಯುದ್ಧಾಯ ಕೃತ ನಿಶ್ಚಯಾಃ ।
ದರ್ಶಯಧ್ವಂ ಸುರಗಣಾನ್ಸೂದಯಧ್ವಂ ಮಹಾಬಲಾಃ ॥ ೧೪೪ ॥
ಗದಾಭಿಃ ಪಟ್ಟಿಶೈಃ ಖಡ್ಗೈಃ ಶಕ್ತಿತೋಮರಮುದ್ಗರೈಃ ।
ಅಶನಿಭಿರ್ಭಿಂದಿಪಾಲೈಶ್ಚ ಪಾಶತೋಮರಮುಷ್ಟಿಭಿಃ ॥ ೧೪೫ ॥
ತದಾ ದೇವಾಶ್ಚ ಯುಯುಧುರ್ದಧೀಚಾಸ್ಥಿ ಸಮುದ್ಭವೈಃ ।
ಶಸ್ತ್ರೈರಸ್ತ್ರೈಶ್ಚ ಪರಮೈರಸುರಾನ್ಸಮಧಾರಯನ್ ॥ ೧೪೬ ॥
ಪುನರ್ದೈತ್ಯಾ ಹತಾ ದೇವೈಃ ಪ್ರಾಪ್ತಾಸ್ತೇಽಪಿ ಪರಾಜಯಂ ।
ಪುನಶ್ಚ ತೇನ ವೃತ್ರೇಣ ನೋದ್ಯಮಾನಾಃ ಸುರಾನ್ಪ್ರತಿ ॥ ೧೪೭ ॥
ಯದಾ ಹಿ ತೇ ದೈತ್ಯವರಾಃ ಸುರೇಶೈ
ರ್ನಿಹನ್ಯಮಾನಾಶ್ಚ ವಿದುದ್ರುವುರ್ದಿಶಃ ।
ಕೇಚಿದ್ದ್ರೃಷ್ಟ್ವಾ ದಾನವಾಸ್ತೇ ತದಾನೀಂ
ಭೀತಿತ್ರಸ್ತಾಃ ಕ್ಲೀಬರೂಪಾಃ ಕ್ರಮೇಣ ॥ ೧೪೮ ॥

---

ಓಡಿಹೋಗುತ್ತಿರುವ ಆ ದಾನವರನ್ನು ಕಂಡು ಮಹಾಪರಾಕ್ರಮಿಯಾದ ವೃತ್ರಾಸುರನು ಬಹಳವಾಗಿ ಕೋಪಗೊಂಡು ಹೀಗೆ ಹೇಳಿದನು. ವೃತ್ರನು ಹೇಳುತ್ತಾನೆ:—"ಎಲೈ ದೈತ್ಯರಿರಾ! ನೀವೆಲ್ಲರೂ ಭಯಪಟ್ಟು ದುಃಖಿತರಾಗಿ ಅದ್ಭುತವಾದೀ ರಣರಂಗವನ್ನು ತೊರೆದು ಹೀಗೇಕೆ ಓಡಿಹೋಗುತ್ತಿರುವಿರಿ? ಯುದ್ಧಮಾಡಲು ಮನಸ್ಸುಮಾಡಿರಿ. ನಿಮ್ಮ ನಿಮ್ಮ ಪರಾಕ್ರಮಗಳನ್ನು ಪ್ರದರ್ಶಿಸಿರಿ. ಈ ದೇವತೆಗಳ ಸಮೂಹವನ್ನು ಸದೆಯಿರಿ. ನೀವೇನು ಸಾಮಾನ್ಯರೇ! ಮಹಾ ಪರಾಕ್ರಮಶಾಲಿಗಳಾದವರು.

೧೪೫. ಎಲೈ ದೈತ್ಯವೀರರೇ! ಗದೆ, ಪಟ್ಟಿಶ, ಖಡ್ಗ, ಶಕ್ತಿ, ತೋಮರ, ಮುದ್ಗರ, ಕಿರುಗತ್ತಿ, ಭಿಂದಿವಾಲ, ಪಾಶ, ತೋಮರ, ಮುಷ್ಟಿ ಮೊದಲಾದ ಆಯುಧಗಳಲ್ಲಿ ನಿಮಗಿರುವ ಶಕ್ತಿ ಸಾಮರ್ಥ್ಯಗಳನ್ನು ಪ್ರದರ್ಶಿಸಿ ಕಾಳಗ ಮಾಡಿರಿ."

೧೪೬–೪೮. ಆಗ ಮತ್ತೆ ದೈತ್ಯದಾನವರಿಗೆ ಬಲವಾದ ಯುದ್ಧವು ಮೊದಲಾಯಿತು. ದೇವತೆಗಳು ದಧೀಚಿಯ ಅಸ್ಥಿಗಳಿಂದಾದ ಅಸ್ತ್ರಶಸ್ತ್ರಗಳಿಂದ ದೈತ್ಯರನ್ನು ಸಿಗಿದುಹಾಕಿದರು. ಈ ರೀತಿ ಆ ದೈತ್ಯರು ಮತ್ತೆ ಕಾಳಗಮಾಡಿ ದೇವತೆಗಳಿಂದ ಮಡಿದು ಪರಾಜಯ ಹೊಂದಿದರು. ಆದರೆ ವೃತ್ರಾಸುರನು ಅವರನ್ನು ಮತ್ತೆ ಪ್ರೋತ್ಸಾಹಗೊಳಿಸಿ ಯುದ್ಧಕ್ಕಟ್ಟಿದನು. ಆಗಲಾ ದೈತ್ಯಶ್ರೇಷ್ಠ

ವೃತ್ರೇಣ ಕೋಪಿನಾ ಚೈವಂ ಧಿಕ್ಕೃತಾ ದೈತ್ಯಪುಂಗವಾಃ ।
ಹೇ ಪುಲೋಮನ್ಮಹಾಭಾಗ ವೃಷಪರ್ವನ್ನಮೋಸ್ತುತೇ ॥ ೧೪೯ ॥
ಹೇ ಧೂಮ್ರಾಕ್ಷ ಮಹಾಕಾಲ ಮಹಾದೈತ್ಯ ವೃಕಾಸುರ ।
ಸ್ಥೂಲಾಕ್ಷ ಹೇ ಮಹಾದೈತ್ಯ ಸ್ಥೂಲದಂಷ್ಟ್ರ ನಮೋಸ್ತುತೇ ॥ ೧೫೦ ॥
ಸ್ವರ್ಗದ್ವಾರಂ ವಿಹಾಯೈವ ಕ್ಷತ್ರಿಯಾಣಾಂ ಮನಸ್ವಿನಾಂ ।
ಪಲಾಯಧ್ವೇ ಕಿಮರ್ಥಂ ವಾ ಸಂಗ್ರಾಮಾಂಗಣಮುತ್ತಮಂ ॥ ೧೫೧ ॥
ಸಂಗರೇ ಮರಣಂ ಯೇಷಾಂ ತೇ ಯಾಂತಿ ಪರಮಂ ಪದಂ ।
ಯತ್ರ ತತ್ರ ಚ ಲಿಪ್ಸೇತ ಸಂಗ್ರಾಮೇ ಮರಣಂ ಬುಧಃ ॥ ೧೫೨ ॥
ತ್ಯಜಂತಿ ಸಂಗರಂ ಯೇ ವೈ ತೇ ಯಾಂತಿ ನಿರಯಂ ಧ್ರುವಂ ॥ ೧೫೩ ॥
ಯೇ ಬ್ರಾಹ್ಮಣಾರ್ಥೇ ಭೃತ್ಯಾರ್ಥೇ ಸ್ವಾರ್ಥೇ ವೈ ಶಸ್ತ್ರಪಾಣಯಃ ।
ಸಂಗ್ರಾಮಂ ಯೇ ಪ್ರಕುರ್ವಂತಿ ಮಹಾಪಾತಕಿನೋ ನರಾಃ ॥ ೧೫೪ ॥
ಶಸ್ತ್ರಘಾತ ಹತಾ ಯೇ ವೈ ಮೃತಾವಾ ಸಂಗರೇ ತಥಾ ।
ತೇ ಯಾಂತಿ ಪರಮಂ ಸ್ಥಾನಂ ನಾತ್ರಕಾರ್ಯಾ ವಿಚಾರಣಾ ॥ ೧೫೫ ॥

---

ರೆಲ್ಲರೂ ದೇವಶ್ರೇಷ್ಠರ ಹೊಡೆತಗಳನ್ನು ತಾಳಲಾರದೆ ದಿಕ್ಕುದಿಕ್ಕುಗಳಿಗೂ ಓಡಿಹೋದರು. ಕೆಲದೈತ್ಯರು ಆ ದೇವತೆಗಳಿಗೆ ಹೆದರಿ ತತ್ತಳಿಸಿ ದೈನ್ಯವನ್ನು ಹೊಂದಿದರು.

೧೪೯–೫೦. ಆಗಲಾ ವೃತ್ರಾಸುರನು ಬಹಳವಾಗಿ ಕೋಪಗೊಂಡು ಅವರೆಲ್ಲರನ್ನೂ ಧಿಕ್ಕರಿಸಿ ದಾನವೋತ್ತಮರೆಲ್ಲರನ್ನೂ ಕುರಿತು, "ಎಲೈ ಪುಲೋಮನೇ! ಮಹಾಭಾಗನಾದ ವೃಷಪರ್ವನೇ! ನಿನಗೆ ನಮಸ್ಕಾರವು. ಎಲೈ ಧೂಮ್ರಾಕ್ಷ! ಮಹಾಕಾಲ, ಮಹಾದೈತ್ಯನಾದ ವೃಕಾಸುರನೇ! ಸ್ಥೂಲಾಕ್ಷ! ಸ್ಥೂಲದಂಷ್ಟ್ರ! ನಿಮ್ಮೆಲ್ಲರಿಗೂ ನಮಸ್ಕಾರವು.

೧೫೧–೫೫. ಅಯ್ಯಾ! ಮಹಾಧೈರ್ಯಶಾಲಿಗಳಾದ ಕ್ಷತ್ರಿಯರಿಗೆ ಸ್ವರ್ಗದ ಬಾಗಿಲೆನಿಸಿರುವ ಉತ್ತಮೋತ್ತಮವಾದ ಈ ರಣಾಂಗಣವನ್ನು ತೊರೆದು ನೀವೆಲ್ಲರೂ ಹೀಗೇಕೆ ಓಡಿಹೋಗುತ್ತಿರುವಿರಿ? ಯಾರಿಗೆ ರಣಭೂಮಿಯಲ್ಲಿ ಮರಣವಾಗುವುದೋ ಅವರು ಉತ್ತಮಪದವಿಯನ್ನು ಪಡೆಯುತ್ತಾರೆ. ಆದುದರಿಂದಲೇ ಜ್ಞಾನಿಗಳಾದವರು ಯಾವುದಾದರೊಂದು ರಣರಂಗದಲ್ಲಿ ಮರಣವನ್ನು ಬಯಸುತ್ತಾರೆ. ಯಾರಾದರೆ ರಣಭೂಮಿಯನ್ನು ತೊರೆದು ಓಡಿಹೋಗುವರೋ ಅವರು ನರಕಕ್ಕೆ ಹೋಗುವರೆಂಬುದರಲ್ಲಿ ಸಂಶಯವಿಲ್ಲವು. ಇದು ತಪ್ಪುವುದೂ ಇಲ್ಲ. ಯಾರು ಬ್ರಾಹ್ಮಣರಿಗಾಗಿಯೂ, ತಮ್ಮ ಆಳುಗಳಿಗಾಗಿಯೂ ತಮಗಾಗಿಯೂ ಶಸ್ತ್ರಗಳನ್ನು ಹಿಡಿದು ಕಾಳಗಮಾಡುವರೋ ಅವರು ಮಹಾಪಾತಕಿಗಳು. ಯಾರಾದರೇ ತಮ್ಮ ಒಡೆಯನಿಗಾಗಿ ರಣರಂಗಕ್ಕೆ

ಶಸ್ತ್ರೈರ್ವಿಚ್ಛಿನ್ನದೇಹಾ ಯೇ ಗವಾರ್ಥೇ ಸ್ವಾಮಿಕಾರಣಾತ್ ।
ರಣೇ ಮೃತಾಃ ಕ್ಷತಾಃ ಯೇ ವೈ ತೇ ಯಾಂತಿ ಪರಮಾಂ ಗತಿಂ ॥೧೫೬॥
ತಸ್ಮಾದ್ರಣೇಽಪಿ ಯೇ ಶೂರಾಃ ಪಾಪಿನೋ ನಿಹತಾಃ ಪುರಾ ।
ಪ್ರಾಪ್ನುವಂತಿ ಪರಸ್ಥಾನಂ ದುರ್ಲಭಂ ಜ್ಞಾನಿನಾಮಪಿ ॥ ೧೫೭ ॥
ಅಥವಾ ತೀರ್ಥಗಮನಂ ವೇದಾಧ್ಯಯನಮೇವಚ ।
ದೇವತಾರ್ಚನಯಜ್ಞಾದಿಶ್ರೇಯಾಂಸಿ ವಿವಿಧಾನಿಚ ॥ ೧೫೮ ॥
ಏಕಪದ್ಯೇನ ತಾನ್ಯೇವ ಕಲಾಂ ನಾರ್ಹತಿ ಷೋಡಶೀಂ ।
ಸಂಗ್ರಾಮೇ ಪತಿತಾನಾಂ ಚ ಸರ್ವಶಾಸ್ತ್ರೇಷ್ವಯಂ ವಿಧಿಃ ॥ ೧೫೯ ॥
ತಸ್ಮಾದ್ಯುದ್ಧಾವದಾನಂ ಚ ಕರ್ತವ್ಯಮವಶಂಕಿತೈಃ ।
ಭವದ್ಭಿರ್ನಾನ್ಯಥಾ ಕಾರ್ಯಂ ದೇವವಾಕ್ಯ ಪ್ರಮಾಣತಃ ॥ ೧೬೦ ॥

ಯೂಯಂ ಸರ್ವೇ ಶೌರವೃತ್ತ್ಯಾ ಸಮೇತಾಃ
ಕುಲೇನ ಶೀಲೇನ ಮಹಾನುಭಾವಾಃ ।
ಪದಾನಿ ತಾನ್ಯೇವ ಪಲಾಯಮಾನಾ
ಗಚ್ಛಂತ್ಯಶೂರಾ ರಣಮಂಡಲಾಚ್ಚ ॥ ೧೬೧ ॥

---

ನುಗ್ಗಿ ಅಲ್ಲಿ ಶಸ್ತ್ರಗಳಿಂದ ಪೆಟ್ಟುತಿನ್ನುವರೋ, ಯಾರಾದರೆ ಅದರಿಂದಲೇ ಮೃತರಾಗುವರೋ ಅವರೆಲ್ಲರೂ ಪರಮಪದವಿಗೆ ಹೋಗುವರೆಂಬುದರಲ್ಲಿ ಸಂಶಯವಿಲ್ಲವು.

೧೫೬-೬೬. ಗೋವುಗಳಿಗಾಗಿಯೂ, ಒಡೆಯನಿಗೋಸುಗವೂ ಯುದ್ಧ ರಂಗದಲ್ಲಿ ಶಸ್ತ್ರಗಳಿಂದ ಕತ್ತರಿಸಿದ ದೇಹಗಳುಳ್ಳವರಾಗಿ ಯಾರು ಮಡಿಯುತ್ತಾರೆಯೋ ಅವರು ಉತ್ತಮಗತಿಯನ್ನು ಹೊಂದುತ್ತಾರೆಯಲ್ಲವೆ. ಸಮರದಲ್ಲಿ ಸರಿಯಾಗಿ ನಿಂತು ಯುದ್ಧಮಾಡಿ ಮಡಿಯುವವರು ಶೂರರಾಗಿರಲಿ, ದುರ್ಬಲರಾಗಿರಲಿ, ಪಾಪಿಗಳೇ ಆಗಿರಲಿ ಅವರೆಲ್ಲರೂ ಜ್ಞಾನಿಗಳಿಗೂ ಅಲಭ್ಯವಾದ ಉತ್ತಮ ಲೋಕಗಳನ್ನು ಪಡೆಯುತ್ತಾರೆ. ತೀರ್ಥಕ್ಷೇತ್ರಗಳಿಗೆ ಯಾತ್ರೆ ಹೋಗುವುದು, ವೇದಾಧ್ಯಯನಮಾಡುವುದು, ದೇವತಾರ್ಚನೆಯನ್ನೆಸಗುವುದು, ಬಗೆಬಗೆಯ ಅನೇಕ ಶ್ರೇಯಸ್ಸಾಧನೆಯ ಕಾರ್ಯಗಳನ್ನು ಮಾಡುವುದು ಇವೆಲ್ಲವನ್ನೂ ಒಟ್ಟುಗೂಡಿಸಿ ಬರುವ ಫಲವು, ರಣರಂಗದಲ್ಲಿ ಮಡಿದ ಮಾನವನಿಗೆ ದೊರಕುವ ಫಲದಲ್ಲಿ ಹದಿನಾರನೆಯ ಒಂದು ಕಳೆಯನ್ನೂ ಹೋಲಲಾರದು. ಇದು ಶಾಸ್ತ್ರಗಳಲ್ಲಿ ಹೇಳಿರುವ ವಿಧಿಯು. ವೇದವಾಕ್ಯವಿಂತಿರುವುದರಿಂದ ನೀವೆಲ್ಲರೂ ಯುದ್ಧವನ್ನು ಮಾಡಲೇಬೇಕು. ಓಡಿಹೋಗಬಾರದು. ಅಯ್ಯಾ ದಾನವರಿರಾ! ನೀವೆಲ್ಲರೂ ಶೂರವೃತ್ತಿಯುಳ್ಳವರು; ಒಳ್ಳೆಯ ಕುಲದಲ್ಲಿ ಹುಟ್ಟಿದವರು; ಶೀಲಸಂಪನ್ನರಾದ ಮಹಾನುಭಾವರು. ರಣರಂಗದಿಂದ

ತಯೇವ ಸರ್ವೇ ಖಲು ಪಾಪಲೋಕಾ
ನ್ಗಚ್ಛಂತಿ ನೂನಂ ವಚನಾತ್ಸ್ಮೃತೇಶ್ಚ ॥ ೧೬೨ ॥
ಯೇ ಪಾಪಿಷ್ಠಾಸ್ತ್ವಧರ್ಮಿಷ್ಠಾ ಬ್ರಹ್ಮಘ್ನಾ ಗುರುತಲ್ಪಗಾಃ ।
ನರಕಂ ಯಾಂತಿ ತೇ ಪಾಪಂ ತಥೈವ ರಣವಿಚ್ಯುತಾಃ ॥ ೧೬೩ ॥
ತಸ್ಮಾದ್ಭವದ್ಭಿರ್ಯೋದ್ಧವ್ಯಂ ಸ್ವಾಮಿಕಾರ್ಯಭರಕ್ಷಮೈಃ ।
ಏವಮುಕ್ತಸ್ತದಾ ತೇನ ವೃತ್ರೇಣಾಪಿ ಮಹಾತ್ಮನಾ ॥ ೧೬೪ ॥
ಚಕ್ರುಸ್ತೇ ವಚನಂ ತಸ್ಯ ಅಸುರಾಶ್ಚ ಸುರಾನ್ಪ್ರತಿ ।
ಚಕ್ರುಃ ಸುತುಮುಲಂ ಯುದ್ಧಂ ಸರ್ವಲೋಕಭಯಂಕರಂ ॥ ೧೬೫ ॥
ತಸ್ಮಿನ್ಪ್ರವೃತ್ತೇ ತುಮುಲೇ ವಿಗಾಢೇ
ವೃತ್ರೋ ಮಹಾದೈತ್ಯಪತಿಃ ಸ ಏಕಃ ।
ಉವಾಚ ರೋಷೇಣ ಮಹಾದ್ಭುತೇನ
ಶತಕ್ರತುಂ ದೇವವರೈಃ ಸಮೇತಂ ॥ ೧೬೬ ॥

ವೃತ್ರ ಉವಾಚ :—

ಶೃಣು ವಾಕ್ಯಂ ಮಯಾ ಚೋಕ್ತಂ ಧರ್ಮಾರ್ಥಸಹಿತಂ ಹಿತಂ ॥೧೬೭॥
ಕಿಂಬಲಾರ್ಥಪರೋ ಭೂತ್ವಾ ವಿಶ್ವರೂಪೋ ಹತಸ್ತ್ವಯಾ ।
ಪ್ರಾಪ್ತಮದ್ಯೈವ ಭೋ ಇಂದ್ರ ತಸ್ಯೇದಂ ಕರ್ಮಣಃ ಫಲಂ ॥ ೧೬೮ ॥

---

ಹಿಂದಡಿಯಿಟ್ಟು ಓಡಿಹೋಗುವವರು ಶೂರರಲ್ಲ. ಸ್ಮೃತಿವಾಕ್ಯದಂತೆ ಅಂತಹ ರೆಲ್ಲರೂ ಪಾಪಿಷ್ಠವಾದ ಲೋಕಗಳನ್ನು ಸೇರುವರೆಂಬುದು ಖಂಡಿತವು. ಯುದ್ಧ ಭೂಮಿಯನ್ನು ತೊರೆದು ಹೋಗುವವರು, ಪಾಪಿಷ್ಠರೂ, ಅಧರ್ಮಿಷ್ಠರೂ, ಬ್ರಹ್ಮಘಾತಕರೂ, ಗುರುಪತ್ನೀ ಗಮನಮಾಡಿದವರೂ ಹೋಗುವ ಭಯಂಕರ ವಾದ ನರಕಗಳಿಗೆ ಹೋಗುತ್ತಾರೆ. ಆದುದರಿಂದೆಲೈ ದೈತ್ಯರೇ! ಸ್ವಾಮಿಕಾರ್ಯ ಧುರಂಧರರಾದ ನೀವೆಲ್ಲರೂ ಈಗಲೇ ದೇವತೆಗಳೊಡನೆ ಸೆಣಸಿ ನಿಂತು ಯುದ್ಧ ಮಾಡತಕ್ಕದು" ಎಂದು ಹೇಳಿದನು. ಮಹಾತ್ಮನಾದ ವೃತ್ರಾಸುರನು ಈ ರೀತಿ ಹೇಳಲು ದಾನವರೆಲ್ಲರೂ ಅವನ ಮಾತಿನಂತೆ ದೇವತೆಗಳೊಡನೆ, ಎಲ್ಲ ಲೋಕ ಗಳಿಗೂ ಭಯಂಕರವಾದ ಸಂಕುಲಯುದ್ಧವನ್ನು ಮಾಡಿದರು. ಹೀಗೆ ದೇವ ದಾನವರಿಗೆ ಸಂಕುಲ ಯುದ್ಧವು ಬಹು ಬಿರುಸಾಗಿ ನಡೆಯುತ್ತಿರಲು, ದೈತ್ಯಪತಿ ಯಾದ ಆ ವೃತ್ರಾಸುರನೊರ್ವನೇ ಮುಂದೆ ನುಗ್ಗಿ ಭಯಂಕರ ರೋಷದಿಂದ ದೇವಗಳೊಡಗೂಡಿದ ಮಹೇಂದ್ರನ ಬಳಿಸಾರಿ ಅವನನ್ನು ಕುರಿತು ಹೀಗೆಂದನು.

೧೬೭–೭೦. ವೃತ್ರನು ಹೇಳುತ್ತಾನೆ:—"ಎಲೈ ಮಹೇಂದ್ರನೇ! ಈಗ ನಾನು ಹೇಳುವ ಧರ್ಮಾರ್ಥಯುಕ್ತವಾದ ಮಾತುಗಳನ್ನು ಕೇಳು. ನೀನು ದೇವತೆಗಳಿಗೆ ಒಡೆಯನಾದರೂ ಯಾವುದು ಹಿತವಾದುದು, ಯಾವುದು ಅಹಿತ

**ಯೇ ದೀರ್ಘದರ್ಶಿನೋ ಮಂದಾ ಮೂಢಾ ಧರ್ಮಬಹಿಷ್ಕೃತಾಃ ।**
**ಅಕಲ್ಪಾಃ ಕಾರ್ಯಸಿದ್ಧ್ಯರ್ಥಂ ಯತ್ಕುರ್ವಂತಿ ಚ ನಿಷ್ಫಲಂ ।**
**ತತ್ಸರ್ವಂ ವಿದ್ಧಿ ದೇವೇಂದ್ರ ಮನಸಾ ಸಂಪ್ರಧಾರ್ಯ ತಾಂ ॥ ೧೭೯ ॥**
**ತಸ್ಮಾದ್ಧರ್ಮಪರೋ ಭೂತ್ವಾ ಯುಧ್ಯಸ್ವ ಗತಕಲ್ಮಷಃ ।**
**ಭ್ರಾತೃಹಾ ತ್ವಂ ಮಮೈವೇಂದ್ರ ತಸ್ಮಾತ್ತ್ವಾಂ ಘಾತಯಾಮ್ಯಹಂ ॥೧೮೦॥**
**ಮಾ ಪ್ರಯಾಹಿ ಸ್ಥಿತೋ ಭೂತ್ವಾ ದೇವೈಶ್ಚ ಪರಿವಾರಿತಃ ।**
**ಏವಮುಕ್ತಸ್ತು ವೃತ್ರೇಣ ಶಕ್ರೋಽತೀವ ರುಷಾನ್ವಿತಃ ।**
**ಐರಾವತಂ ಸಮಾರುಹ್ಯ ಯಯೌ ವೃತ್ರಜಿಘಾಂಸಯಾ ॥ ೧೮೧ ॥**
**ಇಂದ್ರಮಾಯಾಂತಮಾಲೋಕ್ಯ ವೃತ್ರೋ ಬಲವತಾಂ ವರಃ ।**
**ಉವಾಚ ಪ್ರಹಸನ್ವಾಕ್ಯಂ ಸರ್ವೇಷಾಂ ಶೃಣ್ವತಾಮಪಿ ॥ ೧೮೨ ॥**
**ಆದೌ ಮಾಂ ಪ್ರಹರಸ್ವೇತಿ ತತಸ್ತ್ವಾಂ ಘಾತಯಾಮ್ಯಹಂ ॥ ೧೮೩ ॥**
**ಇತ್ಯೇವಮುಕ್ತೋ ದೇವೇಂದ್ರೋ ಜಘಾನ ಗದಯಾ ಭೃಶಂ ।**
**ವೃತ್ರಂ ಬಲವತಾಂ ಶ್ರೇಷ್ಠ ಜಾನುದೇಶೇ ಮಹಾಬಲಂ ॥ ೧೮೪ ॥**
**ತಾಮಾಪತತೀಂ ಜಗ್ರಾಹ ಕರೇಣೈಕೇನ ಲೀಲಯಾ ।**
**ತಯೈವೈನಂ ಜಘಾನಾಶು ಗದಯಾ ತ್ರಿದಿವೇಶ್ವರಂ ॥ ೧೮೫ ॥**

---

ವಾದುದು ಎಂಬುದನ್ನರಿಯೆ! ಎಲೆವೋ ಹೇಡಿಯೇ! ನೀನು ಪೂರ್ವದಲ್ಲಿ ಕೇವಲ ರಾಜನೀತಿಶಾಸ್ತ್ರಪರನಾಗಿ ನಿನಗೆ ಪುರೋಹಿತನಾಗಿದ್ದ ವಿಶ್ವರೂಪನನ್ನು ವಧಿಸಿದೆ. ಆ ಪಾಪಕರ್ಮಕ್ಕೆ ಇದೀಗ ಫಲವನ್ನು ಪಡೆದೆ. ದೀರ್ಘದರ್ಶಿಗಳೂ, ಅಲ್ಪಬುದ್ಧಿಗಳೂ, ತಿಳಿಗೇಡಿಗಳೂ, ಧರ್ಮಬಹಿಷ್ಕೃತರೂ, ಶಾಸ್ತ್ರವಿಧಿಯನ್ನು ಮೀರುವವರೂ ತಮ್ಮ ಕಾರ್ಯಸಿದ್ಧಿಗಾಗಿ ಏನುಮಾಡಿದರೂ ಅದು ನಿಷ್ಫಲ ವಾಗಿ ಹೋಗುತ್ತದೆ. ಎಲೆವೋ ಮಹೇಂದ್ರನೇ! ನೀನು ಈ ವಿಷಯಗಳೆಲ್ಲ ವನ್ನೂ ನಿನ್ನ ಮನಸ್ಸಿನಲ್ಲಿಯೇ ಆಲೋಚಿಸು. ಆದುದರಿಂದ ಈಗ ನೀನು ಧರ್ಮವನ್ನನುಸರಿಸಿ, ದೋಷದೂರನಾಗಿ ನನ್ನೊಡನೆ ಯುದ್ಧಮಾಡು. ನೀನು ನನ್ನ ಅಣ್ಣನನ್ನು ಕೊಂದಿರುವೆ. ಆದುದರಿಂದ ಈಗ ನಾನು ನಿನ್ನನ್ನು ಕೊಲ್ಲುವೆನು.

೧೮೧-೮೫. ಈ ದೇವತೆಗಳೆಲ್ಲರೊಡನೆಯೂ ಪಲಾಯನವಾಗಿಹೋಗಬೇಡ; ಸ್ಥಿರವಾಗಿ ನಿಲ್ಲು.'' ಎಲೈ ಮುನಿಗಳಿರಾ! ವೃತ್ರಾಸುರನೀರೀತಿ ಹೇಳಲು ದೇವೇಂದ್ರನು ಬಹಳವಾಗಿ ರೋಷಗೊಂಡು ಒಡನೆಯೇ ಐರಾವತವನ್ನೇರಿ ಅವನನ್ನು ಕೊಲ್ಲಬಯಸಿ ಅವನ ಬಳಿಗೆ ಹೊರಟನು. ಈ ರೀತಿ ಬರುತ್ತಿರುವ ಅವನನ್ನು ನೋಡಿ ಮಹಾಪರಾಕ್ರಮಿಯಾದ ವೃತ್ರಾಸುರನು ನಕ್ಕು ಎಲ್ಲರಿಗೂ ಕೇಳಿಸುವಂತೆ, ''ಎಲೈ! ನೀನು ಮೊದಲು ನನ್ನನ್ನು ಹೊಡೆ. ಆಮೇಲೆ ನಿನ್ನನ್ನು ಸಂಹರಿಸುತ್ತೇನೆ'' ಎಂದು ಕೂಗಿ ಹೇಳಿದನು. ಆ ದಾನವನಿಂತು

**ಸಾ ಗದಾ ಪಾತಯಾಮಾಸ ಸ ವಜ್ರಂ ಚ ಪುರಂದರಂ ।**
**ಪತಿತಂ ಶಕ್ರಮಾಲೋಕ್ಯ ವೃತ್ರ ಊಚೇ ಸುರಾನ್ಪ್ರತಿ ॥ ೧೭೬ ॥**
**ನಯಧ್ವಂ ಸ್ವಾಮಿನಂ ದೇವಾಃ ಸ್ವಪುರೀಮಮರಾವತೀಂ ॥ ೧೭೭ ॥**
**ಏತಚ್ಛ್ರುತ್ವಾ ವಚಃ ಸತ್ಯಂ ವೃತ್ರಸ್ಯ ಚ ಮಹಾತ್ಮನಃ ।**
**ತಥಾ ಚಕ್ರುಃ ಸುರಾಃ ಸರ್ವೇ ರಣಾಚ್ಚೇಂದ್ರಂ ಸಮುತ್ಸುಕಾಃ ॥ ೧೭೮ ॥**
**ಅಪವಾಹ್ಯ ಗಜಸ್ಥಂ ಹಿ ಪರಿವಾರ್ಯ ಭಯಾತುರಾಃ ।**
**ಸುರಾಃ ಸರ್ವೇ ರಣಂ ಹಿತ್ವಾ ಜಗ್ಮುಸ್ತೇ ತ್ರಿದಿವಂ ಪ್ರತಿ ॥ ೧೭೯ ॥**
**ತತೋ ಗತೇಷು ದೇವೇಷು ನನರ್ತ ಚ ಮಹಾ ಸುರಾಃ ।**
**ವೃತ್ರೋ ಜಹಾಸ ಚ ಪರಂ ತೇನಾಪೂರ್ಯತ ದಿಕ್ತಟಂ ॥ ೧೮೦ ॥**
**ಚಚಾಲ ಚ ಮಹೀ ಸರ್ವಾ ಸಶೈಲವನಕಾನನಾ ।**
**ಚುಕ್ಷುಭೇ ಚ ತದಾ ಸರ್ವಂ ಜಂಗಮಂ ಸ್ಥಾವರಂ ತಥಾ ॥ ೧೮೧ ॥**

---

ನುಡಿಯುತ್ತಲೇ ದೇವೇಂದ್ರನು ಗದೆಯಿಂದ ಮಹಾ ಶೂರನಾದ ಆ ವೃತ್ರನ ಮೊಣಕಾಲಿಗೆ ಬಲವಾಗಿ ಹೊಡೆದನು. ಹೀಗೆ ಬೀಳುತ್ತಿರುವ ಆ ಗದೆಯನ್ನು ಒಂದು ಕೈಯಿಂದಲೇ ಬಹು ಲೀಲಾಜಾಲವಾಗಿ ಹಿಡಿದುಕೊಂಡು ಅದರಿಂದಲೇ ಆ ದೇವರಾಜನನ್ನು ಬಹುಬೇಗನೆ ಹೊಡೆದನು.

೧೭೬–೮೦. ಆ ಗದಾಘಾತದಿಂದ ಮಹೇಂದ್ರನು ಐರಾವತದೊಡಗೂಡಿ ನೆಲಕ್ಕೆ ಬಿದ್ದನು. ಈ ರೀತಿ ನೆಲಕ್ಕುರುಳಿದ ಆ ದೇವೇಂದ್ರನನ್ನು ಕಂಡ ವೃತ್ರಾಸುರನು ದೇವತೆಗಳೆಲ್ಲರನ್ನೂ ಕುರಿತು, "ಅಯ್ಯಾ ದೇವತೆಗಳಿರಾ! ನಿಮ್ಮ ಒಡೆಯನನ್ನು ನಿಮ್ಮ ಅಮರಾವತಿಗೆ ಸಾಗಿಸಿಕೊಂಡುಹೋಗಿರಿ" ಎಂದು ಹೇಳಿದನು. ದೇವತೆಗಳಾದರೋ ಮಹಾತ್ಮನಾದ ಆ ವೃತ್ರನ ಸತ್ಯವಾದ ನುಡಿಯನ್ನು ಕೇಳಿ ಅಂತೆಯೇ ಮಾಡಿದರು. ಅವರೆಲ್ಲರೂ ಐರಾವತದ ಮೇಲೆ ಮೂರ್ಛಿತನಾಗಿ ಬಿದ್ದಿದ್ದ ದೇವೇಂದ್ರನನ್ನು ಹೊತ್ತು ಭಯದಿಂದ ನಡುಗುತ್ತ ರಣಭೂಮಿಯನ್ನು ತೊರೆದು ತಮ್ಮ ಲೋಕಕ್ಕೆ ತೆರಳಿದರು. ಹೀಗೆ ದೇವತೆಗಳೆಲ್ಲರೂ ಹೊರಟುಹೋದ ತರುವಾಯ ಮಹಾ ದೈತ್ಯನಾದ ಆ ವೃತ್ರನು ಗಟ್ಟಿಯಾಗಿ ನಕ್ಕು ನರ್ತಿಸಿದನು. ಅವನ ಅಟ್ಟಹಾಸಧ್ವನಿಯಿಂದ ದಿಗಂತಗಳೆಲ್ಲವೂ ತುಂಬಿಹೋದುವು.

೧೮೧–೧೮೫. ಅದರಿಂದ ಪರ್ವತಗಳಿಂದಲೂ, ವನಗಳಿಂದಲೂ ಕೂಡಿದ ಭೂಮಂಡಲವೇ ಗಡಗಡನೆ ನಡುಗಿಹೋಯಿತು; ಜಂಗಮಸ್ಥಾವರ ಪ್ರಪಂಚವೇ ಕ್ಷೋಭೆಗೊಂಡಿತು. ಆ ಸಮಯದಲ್ಲಿ ದೇವೇಂದ್ರನು ತೆರುಳುತ್ತಿರುವುದನ್ನು ಕೇಳಿ ಲೋಕಪಿತಾಮಹನಾದ ಬ್ರಹ್ಮನು ಅಲ್ಲಿಗೆ ಬಂದು ತನ್ನ ಕಮಂಡಲುವಿನ ನೀರಿನಿಂದ ಅವನನ್ನು ಪ್ರೋಕ್ಷಿಸಿದನು. ಒಡನೆಯೇ ಆ ಪುರಂದರನು ಪ್ರಜ್ಞೆ

ಶ್ರುತ್ವಾ ಪ್ರಯಾತಂ ದೇವೇಂದ್ರಂ ಬ್ರಹ್ಮಾ ಲೋಕಪಿತಾಮಹಃ ।
ಉಪಯಾತೋಽಥ ದೇವೇಂದ್ರಂ ಸ್ವಕಮಂಡಲುವಾರಿಣಾ ।
ಅಸ್ಪೃಶಲ್ಲಬ್ಧಸಂಜ್ಞೋಽಭೂತ್ತತ್ಕ್ಷಣಾಚ್ಚ ಪುರಂದರಃ ॥ ೧೮೨ ॥
ದೃಷ್ಟ್ವಾ ಪಿತಾಮಹಂ ಚಾಗ್ರೇ ವ್ರೀಡಾಯುಕ್ತೋಽಭವತ್ತದಾ ।
ಮಹೇಂದ್ರಂ ತ್ರಪಯಾಯುಕ್ತಂ ಬ್ರಹ್ಮೋವಾಚ ಪಿತಾಮಹಃ ॥ ೧೮೩ ॥

ಬ್ರಹ್ಮೋವಾಚ :—

ವೃತ್ರೋ ಹಿ ತಪಸಾ ಯುಕ್ತೋ ಬ್ರಹ್ಮಚರ್ಯವ್ರತೇಸ್ಥಿತಃ ।
ತ್ವಷ್ಟುಶ್ಚ ತಪಸಾ ಯುಕ್ತೋ ವೃತ್ರಶ್ಚಾಯಂ ಮಹಾಯಶಾಃ ।
ಅಜೇಯಸ್ತಪಸೋಗ್ರೇಣ ತಸ್ಮಾತ್ತ್ವಂ ತಪಸಾ ಜಯ ॥ ೧೮೪ ॥

ವೃತ್ರಾಸುರೋ ದೈತ್ಯಪತಿಶ್ಚ ಶಕ್ರ ತೇ
ಸಮಾಧಿನಾ ಪರಮೇಣೈವ ಜಯ್ಯಃ ।
ನಿಶಮ್ಯ ವಾಕ್ಯಂ ಪರಮೇಷ್ಠಿನೋ ಹರಿಃ
ಸಸ್ಮಾರ ದೇವಂ ವೃಷಭಧ್ವಜಂ ತದಾ ॥ ೧೮೫ ॥
ಸ್ತುತ್ವಾ ತದಾ ತಂ ಸ್ತವಮಾನೋ ಮಹಾತ್ಮಾ
ಪುರಂದರೋ ಗುರುಣಾ ನೋದಿತೋ ಹಿ ॥ ೧೮೬ ॥

ಇಂದ್ರ ಉವಾಚ :—

ನಮೋ ಭರ್ಗಾಯ ದೇವಾಯ ದೇವಾನಾಮತಿದುರ್ಗಮ ।
ವರದೋ ಭವ ದೇವೇಶ ದೇವಾನಾಂ ಕಾರ್ಯಸಿದ್ಧಯೇ ॥ ೧೮೭ ॥

---

ತಿಳಿದೆದ್ದು ತನ್ನ ಮುಂಗಡೆ ನಿಂತಿರುವ ಪಿತಾಮಹನನ್ನು ಕಂಡು ನಾಚಿ ತಲೆ ತಗ್ಗಿಸಿ ನಿಂತನು. ಹೀಗೆ ನಾಚಿ ನಿಂತಿರುವ ಅವನನ್ನು ಕುರಿತು ಬ್ರಹ್ಮನು ಹೇಳಿದನು. "ಅಯ್ಯಾ ಮಹೇಂದ್ರನೇ! ಈ ವೃತ್ರಾಸುರನು ತಾನೆಸಗಿದ ತಪಸ್ಸಿನಿಂದ ಕೂಡಿ ಬ್ರಹ್ಮಚರ್ಯ ವ್ರತದಲ್ಲಿರುವವನು. ಮಹಾ ಕೀರ್ತಿ ಶಾಲಿಯಾದ ಇವನಿಗೆ ಇವನ ತಂದೆಯಾದ ವಿಶ್ವಕರ್ಮನ ತಪಸ್ಸೂ ಸೇರಿದೆ. ಆ ಭಯಂಕರ ತಪಸ್ಸಿನಿಂದ ಕೂಡಿರುವುದರಿಂದಲೇ ಈತನು ಅಜೇಯನಾಗಿರುವದು. ಆದುದರಿಂದ ನೀನೂ ಸಹ ತಪಸ್ಸಿನಿಂದಲೇ ಇವನನ್ನು ಜಯಿಸಬೇಕು. ಎಲೈ ಶಕ್ರನೇ! ದೈತ್ಯಪತಿಯಾದ ಈ ವೃತ್ರಾಸುರನು ಶ್ರೇಷ್ಠವಾದ ತಪಸ್ಸಿನಿಂದಲೇ ಗೆಲ್ಲಲು ಸಾಧ್ಯನಲ್ಲದೆ, ಬೇರಾವ ಬಗೆಯಿಂದಲೂ ಸಾಧ್ಯನಾಗುವುದಿಲ್ಲವು." ಈ ರೀತಿ ನುಡಿದ ಪರಮೇಷ್ಠಿಯ ಮಾತನ್ನು ಕೇಳಿ ದೇವೇಂದ್ರನು ಸ್ವಾಮಿಯಾದ ವೃಷಭಧ್ವಜನನ್ನು ಸ್ಮರಿಸಿದನು.

೧೮೬–೯೧. ಅವನು ಗುರುವಾದ ಬೃಹಸ್ಪತ್ಯಾಚಾರ್ಯನಿಂದ ಪ್ರೇರಿತನಾಗಿ ಶ್ರೀ ಶಂಕರನನ್ನಿಂತು ಸ್ತೋತ್ರಮಾಡಿದನು. ಇಂದ್ರನು ಹೇಳುತ್ತಾನೆ:—

ಏವಂ ಸ್ತುತಿ ಪರೋ ಭೂತ್ವಾ ಶಚೀಪತಿರುದಾರಧೀಃ ।
ಸ್ವಕಾರ್ಯದಕ್ಷೋ ಮಂದಾತ್ಮಾ ಪ್ರಪಂಚಾಭಿರತಃ ಖಲು ॥ ೧೮೮ ॥
ಪ್ರಪಂಚಾಭಿರತಾ ಮೂಢಾಃ ಶಿವಭಕ್ತಿಪರಾಹ್ಯಪಿ ।
ನ ಪ್ರಾಪ್ನುವಂತಿ ತೇ ಸ್ಥಾನಂ ಪರಮೇಶಸ್ಯ ರಾಗಿಣಃ ॥ ೧೮೯ ॥
ನಿರ್ಮಲಾ ನಿರಹಂಕಾರಾ ಯೇ ಜನಾಃ ಪರ್ಯುಪಾಸತೇ ।
ಮೃಡಂ ಜ್ಞಾನಪ್ರದಂ ಚೇಶಂ ಪರೇಶಂ ಶಂಭುಮೇವಚ ॥ ೧೯೦ ॥
ತೇಷಾಂ ಪರೇಷಾಂ ವರದ ಇಹಾಮುತ್ರ ಚ ಶಂಕರಃ ।
ಮಹೇಂದ್ರೇಣ ಸ್ತುತಃ ಶರ್ವೋ ರಾಗಿಣಾ ಪರಮೇಣಹಿ ॥ ೧೯೧ ॥
ರಾಗಿಣಾಂ ಹಿ ಸದಾ ಶಂಭುರ್ದುರ್ಲಭೋ ನಾತ್ರ ಸಂಶಯಃ ।
ತಸ್ಮಾದ್ವಿರಾಗಿಣಾಂ ನಿತ್ಯಂ ಸನ್ಮುಖೋ ಹಿ ಸದಾಶಿವಃ ॥ ೧೯೨ ॥

ರಾಜಾ ಸುರಾಣಾಂ ಹಿ ಮಹಾನುರಾಗೀ
ಸ್ವಕರ್ಮಸಂಸಿದ್ಧಿಮಹಾಪ್ರವೀಣಃ ।
ತಸ್ಮಾತ್ಸದಾ ಕ್ಲೇಶಪರಃ ಶಚೀಪತಿಃ
ಸ್ವಕಾನುಭಾವಾತ್ಮಪರೋ ಹಿ ನಿತ್ಯಂ ॥ ೧೯೩ ॥

---

"ಎಲೈ ಪರಮೇಶ್ವರನೇ! ಭರ್ಗನೂ, ದೇವತೆಗಳಿಗೂ ದೊರೆಯುಲಸದಳನೂ, ದೇವೇಶ್ವರನೂ ಆದ ಓ ಸ್ವಾಮಿಯೇ!! ನಿನಗೆ ನಮಸ್ಕಾರವು. ನನಗೆ ವರಪ್ರದಾಯಕನಾಗು. ನನ್ನ ಕಾರ್ಯವನ್ನು ಆಗಮಾಡಿಕೊಡು." ಮಹಾ ಬುದ್ಧಿಶಾಲಿಯಾದರೂ, ಸ್ವಾರ್ಥಪರನಾದುದರಿಂದ ತಿಳಿಗೇಡಿಯೂ ವಿಷಯ ಲಂಪಟನೂ ಆದ ಆ ಶಚೀಪತಿಯು ಈ ಪ್ರಕಾರ ಪರಮೇಶ್ವರನನ್ನು ಸ್ತುತಿಸಿದನು. ವಿಷಯಗಳಲ್ಲಿ ಆಸಕ್ತರಾದ ಮೂಢರು ಶಿವಭಕ್ತಿಯನ್ನು ಮಾಡಿದರೂ ಪರಶಿವಮೂರ್ತಿಯ ಸಂದರ್ಶನವನ್ನು ಹೊಂದುವುದಿಲ್ಲವು. ಯಾರು ದೋಷ ರಹಿತರಾಗಿ, ನಿರ್ಮಲವಾದ ಚಿತ್ತವುಳ್ಳವರಾಗಿ, ಏನೊಂದು ಅಹಂಕಾರವೂ ಇಲ್ಲದೆ ಶಂಕರನನ್ನು ಉಪಾಸನೆ ಮಾಡುವರೋ ಅವರು ಜ್ಞಾನಪ್ರದಾಯಕನೂ, ಈಶ್ವರನೂ, ಪರಮೇಶ್ವರನೂ, ಶಂಭುವೂ, ಮೃಡನೂ ಆದ ಆ ಸ್ವಾಮಿಯನ್ನು ಹೊಂದುತ್ತಾರೆ. ಆ ಸ್ವಾಮಿಯು ಅಂತಹರಿಗೆ ಇಹಪರಗಳೆರಡರಲ್ಲಿಯೂ ವರದಾಯಕನಾಗುವನು. ಅಯ್ಯಾ ಮುನಿಗಳಿರಾ! ಈ ಮಹೇಂದ್ರನಾದರೋ ಕೇವಲ ಕಾಮಾದಿ ವಿಷಯಗಳಲ್ಲಿ ಆಸಕ್ತನಾದವನು. ಇಂತಹನು ಶ್ರೀ ಶರ್ವನನ್ನು ಸ್ತುತಿಸಿದನಲ್ಲವೆ! ಅದರಿಂದ ಅವನಿಗೆ ಯಾವ ಫಲವೂ ಲಭಿಸಲಿಲ್ಲವು.

೧೯೨-೯೩. ಅಯ್ಯಾ! ವಿಷಯಾಸಕ್ತರಾದವರಿಗೆ ಶಂಭುವು ಯಾವಾಗಲೂ ದುರ್ಲಭನೆಂಬುದರಲ್ಲಿ ಸಂಶಯವಿಲ್ಲವು. ಆದುದರಿಂದ ವಿರಕ್ತರಾಗಿ ವಿಷಯಾದಿಗಳಿಂದ ದೂರರಾಗಿರುವವರಿಗೆ ಮಾತ್ರ ಆ ಸದಾಶಿವನು ಸುಮುಖನಾಗಿರುತ್ತಾನೆ.

**ಸ್ತೂಯಮಾನಂ ತದಾ ಚೇಂದ್ರಮಬ್ರವೀತ್ಕಾರ್ಯಗೌರವಾತ್ ।**
**ವಿಜ್ಞಾಯಾಖಿಲದೃಗ್ದ್ರಷ್ಟಾ ಮಹೇಶೋ ಲಿಂಗರೂಪವಾನ್ ॥ ೧೯೪ ॥**
**ಇಂದ್ರ ಗಚ್ಛ ಸುರೈಃ ಸಾರ್ಧಂ ವೃತ್ರಂ ವೈ ದಾನವಂ ಪ್ರತಿ ।**
**ತಪಸ್ಯೈವ ಚ ಸಾಧ್ಯೋಽಯಂ ರಣೇ ಜೇತುಂ ಶತಕ್ರತೋ ॥ ೧೯೫ ॥**

**ಇಂದ್ರ ಉವಾಚ :—**

**ಕೇನೋಪಾಯೇನ ಸಾಧ್ಯೋಽಯಂ ವೃತ್ರೋ ದೈತ್ಯವರೋ ಮಹಾನ್ ।**
**ತಚ್ಛೀಘ್ರಂ ಕಥ್ಯತಾಂ ಶಂಭೋ ಯೇನ ಮೇ ವಿಜಯೋ ಭವೇತ್ ॥೧೯೬॥**

**ರುದ್ರ ಉವಾಚ :—**

**ರಣೇ ನ ಶಕ್ಯತೇ ಹಂತುಮಪಿ ದೇವವರೈರಪಿ ।**
**ತಸ್ಮಾತ್ತ್ವಯಾ ಹಿ ಕರ್ತವ್ಯಂ ಕುತ್ಸಿತಂ ಕರ್ಮ ಚಾದ್ಯವೈ ॥ ೧೯೭ ॥**
**ಅಸ್ಯ ಶಾಪಃ ಪುರಾ ದತ್ತಃ ಪಾರ್ವತ್ಯಾ ಮಮ ಸನ್ನಿಧೌ ।**
**ಅಸೌ ಚಿತ್ರರಥೋ ನಾಮ್ನಾ ವಿಖ್ಯಾತೋ ಭುವನತ್ರಯೇ ॥ ೧೯೮ ॥**

---

ದೇವತೆಗಳಿಗೆಲ್ಲ ದೊರೆಯಾದ ಈ ಮಹೇಂದ್ರನಾದರೋ ಮಹಾ ವಿಷಯಾಸಕ್ತನು; ತನ್ನ ಕಾರ್ಯವನ್ನು ಸಾಧಿಸುವುದರಲ್ಲಿ ಮಹಾ ಪಂಡಿತನು. ಆದುದರಿಂದಲೇ ಇವನು ತನ್ನಲ್ಲಿರುವ ಆ ಕಾಮಾದಿ ದೋಷಗಳಿಂದ ಸ್ವಾರ್ಥಪರನಾಗಿ ಯಾವಾಗಲೂ ಕಷ್ಟಗಳನ್ನನುಭವಿಸುತ್ತಿರುತ್ತಾನೆ.

೧೯೪–೯೫. ತರುವಾಯ, ಈ ಪ್ರಕಾರ ತನ್ನನ್ನು ಸ್ತುತಿಸುತ್ತಿರುವ ಆ ದೇವೇಂದ್ರನನ್ನು ನೋಡಿ, ಸಾಕ್ಷಾತ್ ವಿಶ್ವಸಾಕ್ಷಿಯೂ ಲಿಂಗರೂಪಿಯೂ ಆದ ಪರಶಿವನು ಎಲ್ಲ ವಿಚಾರಗಳನ್ನೂ ದಿವ್ಯದೃಷ್ಟಿಯಿಂದಲೇ ತಿಳಿದುಕೊಂಡು ಆಗಿನ ಕಾರ್ಯಗೌರವದ ದೆಸೆಯಿಂದ ಅವನನ್ನು ಕುರಿತು, "ಎಲೈ ಮಹೇಂದ್ರನೇ! ನೀನು ತಪಸ್ಸನ್ನು ಮಾಡಿಯೇ ಈ ದೇವತೆಗಳೊಡಗೂಡಿ ವೃತ್ರಾಸುರನೊಡನೆ ಯುದ್ಧಕ್ಕೆ ಹೋಗು. ಎಲೈ ಶತಕ್ರತುವೇ! ಆ ದಾನವನು ತಪಸ್ಸಿನಿಂದ ಮಾತ್ರ ಜಯಿಸಲು ಸಾಧ್ಯನಾಗುವನಾಗಲಿ ಮತ್ತಾವುದರಿಂದಲೂ ಅಲ್ಲವು" ಎಂದು ಹೇಳಿದನು.

೧೯೬–೨೦೧. ಇಂದ್ರನು ಹೇಳುತ್ತಾನೆ:—"ಎಲೈ ಶಂಭುವೇ! ತಪಸ್ಸನ್ನುಳಿದು ಮತ್ತಾವ ಉಪಾಯದಿಂದ ದೈತ್ಯಶ್ರೇಷ್ಠನೂ, ಮಹಾಶೂರನೂ ಆದ ಈ ವೃತ್ರಾಸುರನನ್ನು ಜಯಿಸಲು ಸಾಧ್ಯವಾದೀತು? ಯಾವ ಉಪಾಯವನ್ನು ಹೂಡಿದರೆ ನನಗೆ ವಿಜಯವು ಲಭಿಸುತ್ತದೆ. ಅದನ್ನು ಜಾಗ್ರತೆಯಾಗಿ ಅಪ್ಪಣೆ ಕೊಡಿಸಬೇಕು." ರುದ್ರನು ಹೇಳುತ್ತಾನೆ:—"ಮಹೇಂದ್ರಾ! ಈ ದಾನವನನ್ನು ಯುದ್ಧಮಾಡಿ ಗೆಲ್ಲಲು ದೇವಶ್ರೇಷ್ಠರಾರಿಗೂ ಸಾಧ್ಯವಾಗುವುದಿಲ್ಲ. ಆದುದರಿಂದ ನೀನು ಯಾವುದಾದರೂ ದುರ್ವ್ಯಾಪಾರ (ಮಾರಣ ಮೊದಲಾದು) ವನ್ನು ಮಾಡ

ಪರ್ಯಟನ್ನ್ವಿಮಾನೇನ ಮಯಾದತ್ತೇನ ಭಾಸ್ವತಾ ।
ಉಪಹಾಸಾದಿಮಾಂ ಯೋನಿಂ ಸಂಪ್ರಾಪ್ತೋ ದೈತ್ಯಪುಂಗವಃ ॥ ೧೯೯ ॥
ತಸ್ಮಾದಜೇಯಂ ಜಾನೀಹಿ ರಣೇ ರಣವಿದಾಂವರ ।
ಏವಮುಕ್ತೋ ಮಹೇಂದ್ರೋಽಯಂ ಶಂಭುನಾ ಯೋಗಿನಾ ಭೃಶಂ ॥
ತಥೇತಿ ಮತ್ವಾ ಶಕ್ರೋಽಸೌ ನಿಯಮಂ ತಮುಪಾದದೇ ॥ ೨೦೦ ॥
ರಂಧ್ರಂ ಪ್ರತೀಕ್ಷ್ಯ ವೃತ್ರಸ್ಯ ತತ್ಸಮೀಪೇ ಸಹಸ್ರಕಂ ।
ವತ್ಸರಾಣಾಂ ಮಹಾಭಾಗಾ ವಸನ್ ಹಂತುಂ ಮನೋ ದಧೇ ॥ ೨೦೨ ॥
ಅಂತರ್ವೇದ್ಯಾಂ ಬಹಿಃ ಸ್ಥಿತ್ವಾ ವಜ್ರಪಾಣೇರನುಜ್ಞಯಾ ।
ಗುರೋಃ ಪುರೋಧಸಶ್ಚೈವ ಸ್ವಕಾರ್ಯಮಕರೋದ್ಭೃಶಂ ॥ ೨೦೩ ॥
ಏಕದಾ ನರ್ಮದಾಯಾಂ ವೈ ವೃತ್ರೋ ದಾನವಪುಂಗವಃ ।
ದೈತ್ಯೈಃ ಪರಿವೃತಃ ಸರ್ವೈಃ ಸಮಾಯಾತೋ ಯದೃಚ್ಛಯಾ ॥ ೨೦೪ ॥
ಇಂದ್ರಃ ಪರಾಭವಂ ಪ್ರಾಪ್ತೋ ನೀತೋ ದೇವೈರ್ದಿವಂ ಪ್ರತಿ ।
ಅಹಮೇವ ಹತಾರಿಶ್ಚ ನಾನ್ಯೋಽಸ್ತಿ ಸದೃಶೋ ಮಮ ॥ ೨೦೫ ॥
ಮನ್ಯಮಾನಃ ಸದಾವೃತ್ರಃ ಪೌರುಷೇಣ ಸಮನ್ವಿತಃ ।
ಪ್ರದೋಷಸಮಯೇ ವಿಪ್ರಾ ನರ್ಮದಾಯಾಮುಪಸ್ಥಿತಃ ॥ ೨೦೬ ॥

---

ಬೇಕು; ಅಷ್ಟೆ. ಪೂರ್ವದಲ್ಲಿ ಪಾರ್ವತಿಯು ನನ್ನೆದುರಿನಲ್ಲಿಯೇ ಈ ದಾನವನನ್ನು ಶಪಿಸಿದಳು. ಪೂರ್ವದಲ್ಲಿ ಈತನು ಚಿತ್ರರಥನೆಂಬುದಾಗಿ ಮೂರು ಲೋಕಗಳಲ್ಲಿಯೂ ಹೆಸರಾಗಿದ್ದನು. ಇವನು ನಾನೇ ಅನುಗ್ರಹಿಸಿ ಕೊಟ್ಟ ದಿವ್ಯ ವಿಮಾನದಲ್ಲಿ ಕುಳಿತು ಸುತ್ತುತ್ತಿದ್ದು, ದುರಹಂಕಾರದಿಂದ ಮದಿಸಿ ನನ್ನನ್ನು ಅಪಹಾಸ್ಯ ಮಾಡಿದುದರಿಂದ ಈ ದಾನವ ಜನ್ಮದಲ್ಲಿ ಜನಿಸಿರುವನು. ಆದುದರಿಂದ ಕಾಳೆಗದ ರೀತಿಯನ್ನು ಬಲ್ಲವರಲ್ಲಿ ಶ್ರೇಷ್ಠನಾದ ನೀನು ಇವನು ಕಾಳೆಗದಲ್ಲಿ ಅಜೇಯನೆಂಬ ಸಂಗತಿಯನ್ನು ತಿಳಿ.'' ಅಯ್ಯಾ ವಿಪ್ರರೇ! ಮಹಾ ಯೋಗೀಶ್ವರನಾದ ಶಂಭುವೀರೀತಿ ನುಡಿಯಲು, ಮಹೇಂದ್ರನು ಅಂತೆಯೇ ಆಗಲೆಂದೊಪ್ಪಿ ಅದರಂತೆ ವ್ರತವನ್ನು ತೊಟ್ಟನು.

೨೦೨–೬. ಆ ದೇವರಾಜನು ತನ್ನ ಗುರುವಾದ ಬೃಹಸ್ಪತಿಯೊಡನೆಯೇ, ಆ ವೃತ್ರಾಸುರನು ಒಳಗಿದ್ದರೂ, ಹೊರಗಿದ್ದರೂ ಅವನಿಗೆ ತಿಳಿಯದಂತೆ ಅವನ ಸಮೀಪದಲ್ಲಿಯೇ ಒಂದು ಸಾವಿರ ವರ್ಷಗಳ ಕಾಲ ವಾಸಮಾಡಿಕೊಂಡಿದ್ದು ರಂಧ್ರ (ಸಮಯ)ವನ್ನು ನೋಡಿ ಅವನನ್ನು ಕೊಲ್ಲಲು ಮನಸ್ಸುಮಾಡಿ ಸ್ವಕಾರ್ಯವನ್ನು ಬಹಳಮಟ್ಟಿಗೆ ಬಹು ಎಚ್ಚರಿಕೆಯಿಂದ ಸಾಧಿಸುತ್ತಿದ್ದನು. ಹೀಗಿರಲು ಒಂದಾನೊಂದು ದಿನ ಆ ದಾನವೋತ್ತಮನು ದೈತ್ಯರೆಲ್ಲರೊಡಗೂಡಿ ಅಕಸ್ಮಾತ್ತಾಗಿ ನರ್ಮದಾ ನದಿಯ ತೀರಕ್ಕೈತಂದನು. ಆ ಮಹಾ ದಾನವನು

ದೃಷ್ಟಶ್ಚೇಂದ್ರೇಣ ಸುಮಹಾನಸುರೈಃ ಪರಿವಾರಿತಃ ।
ವೃತ್ರೋ ಬಲವತಾಂ ಶ್ರೇಷ್ಠಃ ಪ್ರದೋಷಸಮಯೇ ತದಾ ॥ ೨೦೭ ॥
ತಸ್ಮಿನ್ಪ್ರದೋಷೇ ಸಂಯುಕ್ತಾ ಮಂದವಾರೇ ತ್ರಯೋದಶೀ ।
ನೋದಿತೋ ಗುರುಣಾ ಚೇಂದ್ರಃ ಕರೇ ಗೃಹ್ಯ ಬೃಹಸ್ಪತಿಃ ॥ ೨೦೮ ॥
ಪ್ರದಕ್ಷಿಣ ನಮಸ್ಕಾರೈರ್ಯಥೋಕ್ತ ವಿಧಿನಾ ತದಾ ।
ಪೂಜಿತೋ ಲಿಂಗರೂಪೀ ಚ ಓಂಕಾರೋ ನರ್ಮದಾ ತಟೇ ॥ ೨೦೯ ॥
ಪ್ರದೋಷವ್ರತಮಾಹಾತ್ಮ್ಯಾತ್ಸದ್ವಜ್ರಪಾಣಿಃ ಪ್ರತಾಪವಾನ್ ।
ಸಂಜಾತಸ್ತತ್ಕ್ಷಣಾದೇವ ಪ್ರಸಾದಾಚ್ಛಂಕರಸ್ಯ ಚ ॥ ೨೧೦ ॥
ವೃತ್ರೋಪಿ ತಪಸಾಯುಕ್ತಃ ಪ್ರದೋಷಸಮಯೇ ಮಹಾನ್ ।
ನಿದ್ರಾಸಕ್ತೋಽಭವತ್ತತ್ರ ಶುಂಡೇನ ಪ್ರತಿಬೋಧಿತಃ ॥ ೨೧೧ ॥
ಸ್ವಾಪಾತ್ಪ್ರದೋಷವೇಲಾಯಾಂ ತಪಸಾ ಚಾರ್ಜಿತಂ ಫಲಂ ।
ಪ್ರನಷ್ಟಂ ತತ್ಕ್ಷಣಾದೇವ ನಿಃಶ್ರೀಕತ್ವಮುಪಾಗತಃ ॥ ೨೧೨ ॥
ದೇವ್ಯಾಃ ಶಾಪಾಚ್ಚ ಸಂಜಾತೋ ವೃತ್ರೋ ಭಗ್ನಮನೋರಥಃ ॥ ೨೧೩ ॥

---

"ನನ್ನಿಂದ ಪರಾಜಯವನ್ನು ಹೊಂದಿ ನೆಲಕ್ಕೆ ಬಿದ್ದ ಆ ಮಹೇಂದ್ರನನ್ನು ದೇವತೆಗಳೆಲ್ಲರೂ ದೇವಲೋಕಕ್ಕೊಯ್ದರು! ಈ ಲೋಕದಲ್ಲಿ ನಾನೊಬ್ಬನೇ ಶತ್ರುಗಳಿಲ್ಲದವನು! ನನ್ನ ಸಮಾನರಾರೂ ಇರುವುದಿಲ್ಲವು!!" ಎಂದು ಬಗೆದು ಪರಾಕ್ರಮದಿಂದ ಕೂಡಿದವನಾಗಿ, ಪ್ರದೋಷ ಸಮಯದಲ್ಲಿ ಆ ನರ್ಮದಾ ನದಿಯ ತೀರಕ್ಕೆ ಬಂದನು.

೨೦೭–೧೦. ಈ ರೀತಿ ಪ್ರದೋಷ ಸಮಯದಲ್ಲಿ ದಾನವರೆಲ್ಲರೊಡನಲ್ಲಿಗೈತಂದ ಮಹಾ ಬಲಿಷ್ಠನಾದ ಆ ವೃತ್ರಾಸುರನನ್ನು ದೇವೇಂದ್ರನು ನೋಡಿದನು. ಅಂದಿನ ಪ್ರದೋಷ ಸಮಯವಾದರೋ ತ್ರಯೋದಶೀ ಶನಿವಾರವಾಗಿದ್ದಿತು. ಆಗ ಬೃಹಸ್ಪತಿಯು ಇಂದ್ರನ ಕೈಹಿಡಿದು, "ಮಹೇಂದ್ರ! ಇಂದು ನೀನು ಪ್ರದೋಷ ವ್ರತವನ್ನಾಚರಿಸು" ಎಂದು ಪ್ರೇರಿಸಿದನು. ಅಂತೆಯೇ ಅವನು ಪೂರ್ವದಲ್ಲಿ ಹೇಳಿರುವಂತೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ನರ್ಮದಾ ನದಿಯ ತೀರದಲ್ಲಿದ್ದ ಓಂಕಾರೇಶ್ವರ ಲಿಂಗವನ್ನು ಪೂಜಿಸಿದನು. ಎಲೈ ಬ್ರಾಹ್ಮಣರಿರಾ! ಈ ರೀತಿ ಆಚರಿಸಿದ ಪ್ರದೋಷ ವ್ರತದ ಮಹಿಮೆಯಿಂದಲೂ, ಶಂಕರನ ಅನುಗ್ರಹದಿಂದಲೂ, ವಜ್ರಪಾಣಿಯಾದ ಆ ಮಹೇಂದ್ರನು ತತ್‌ಕ್ಷಣವೇ ಮಹಾ ಪರಾಕ್ರಮಶಾಲಿಯಾದನು.

೨೧೧–೧೩. ವೃತ್ರನಾದರೋ ತಪಸ್ವಿಯಾದ ಮಹಾತ್ಮನಾದರೂ ಆ ಸಮಯದಲ್ಲಿ ಮಾತ್ರ ನಿದ್ರಾಸಕ್ತನಾದನು; ಶುಂಡನೆಂಬ ದಾನವನು ಅವನನ್ನೆಚ್ಚರಗೊಳಿಸಿದನು. ಪ್ರದೋಷ ಸಮಯದಲ್ಲಿ ನಿದ್ದೆಮಾಡಿದುದರಿಂದ

**ಸಂಧ್ಯಾಪಾದೇ ಗತೇ ಯಾವದ್ವೃತ್ರಸ್ತೀರ್ಥಮುಪಾವಿಶತ್ ।**
**ಪರೀತೋ ವಿವಿಧೈರ್ದೈತ್ಯೈರ್ನಾನಾಯುಧ ಸಮನ್ವಿತೈಃ ॥ ೨೧೪ ॥**
**ತಸ್ಯ ತತ್ಕರ್ಮಣಶ್ಛಿದ್ರಂ ಛಿದ್ರಾನ್ವೇಷೀ ಶಚೀಪತಿಃ ।**
**ಜ್ಞಾತ್ವಾ ಗತಃ ಶನೈರ್ಹಂತುಮಾತ್ಮಶತ್ರುಂ ಶತಕ್ರತುಃ ॥ ೨೧೫ ॥**
**ತಾವದ್ದೈತ್ಯಾ ಸುಸಂರಬ್ಧಾ ಭೀಮಾ ಭೀಮಪರಾಕ್ರಮಾಃ ।**
**ಉತ್ತಸ್ಥುರ್ಯುಗಪತ್ಸರ್ವೇ ದುಃಸಹಾಶ್ಚ ಶತಕ್ರತುಂ ॥ ೨೧೬ ॥**
**ತತಸ್ತೈರಭವದ್ಯುದ್ಧಮತಿಪ್ರಬಲದಂಡಿಭಿಃ ।**
**ಸರ್ವೇ ದೇವಾಃ ಸಹಾಯಾರ್ಥಂ ತದಾಜಗ್ಮುಃ ಶತಕ್ರತೋಃ ॥ ೨೧೭ ॥**
**ತತೋ ದೈತ್ಯಾಶ್ಚ ದೇವಾಶ್ಚ ಯುಯುಧುಸ್ತೇ ತರಸ್ವಿನಃ ।**
**ರಾತ್ರೌ ಯುದ್ಧಂ ಸಮಭವತ್ಸುರಾಸುರವಿಮರ್ದನಂ ॥ ೨೧೮ ॥**
**ಅನೇಕಶಸ್ತ್ರಸಂವೀತಂ ಮಹಾರೌದ್ರಮವರ್ತತ ।**
**ಏವಂ ಪ್ರವರ್ತಮಾನೇತು ಸಂಗ್ರಾಮೇ ರೌದ್ರದಾರುಣೇ ।**
**ತದಾ ವೃತ್ರೋಽಥ ಸನ್ನದ್ಧೋ ಗೃಹೀತ್ವಾ ಶೂಲಮುಲ್ಬಣಂ ॥ ೨೧೯ ॥**
**ಇಂದ್ರಂ ಪ್ರಮುಖತೋ ಭೂತ್ವಾ ಜಗರ್ಜಾತಿವಿಭೀಷಣಂ ।**
**ತಸ್ಯ ನಾದಪ್ರಣಾದೇನ ತ್ರಾಸಿತಂ ಭುವನತ್ರಯಂ ॥ ೨೨೦ ॥**

---

ಅವನು ಸಂಪಾದಿಸಿದ್ದ ತಪಃಫಲವೆಲ್ಲವೂ ಒಂದು ಕ್ಷಣಮಾತ್ರದಲ್ಲಿಯೇ ನಾಶವಾಗಿ ಅವನು ಕೇವಲ ನಿಸ್ತೇಜಸ್ಕನಾಗಿಹೋದನು. ಇದೂ ಅಲ್ಲದೆ ಉಮಾದೇವಿಯ ಶಾಪದ ದೆಸೆಯಿಂದಲೂ ಆ ದಾನವನು ಭಗ್ನಮನೋರಥ ನಾದನು. ಪ್ರದೋಷಸಮಯದಲ್ಲಿ ಕಾಲುಭಾಗವು ಕಳೆದುಹೋದ ತರುವಾಯ ಆ ವೃತ್ರನು ಆಯುಧಪಾಣಿಗಳಾದ ಅನೇಕ ದೈತ್ಯರೊಡಗೂಡಿ ನರ್ಮದಾ ನದಿಗೆ ಸ್ನಾನಕ್ಕಾಗಿ ಬಂದನು. ರಂಧ್ರವನ್ನೇ ಹುಡುಕುತ್ತಿದ್ದ ಆ ಶಚೀಪತಿಯು ವೃತ್ರನ ಈ ಕಾರ್ಯಲೋಪವನ್ನು ತಿಳಿದುಕೊಂಡು ತನ್ನ ಶತ್ರುವಾದ ಅವನನ್ನು ಮೆಲ್ಲ ಮೆಲ್ಲಗೆ ಹೊಡೆಯಲುಪಕ್ರಮಿಸಿದನು.

೨೧೬–೨೦. ಅಷ್ಟರಲ್ಲಿಯೇ ಮಹಾ ಭಯಂಕರರೂ, ಭಯಂಕರ ಪರಾಕ್ರಮ ಶಾಲಿಗಳೂ ಆದ ದೈತ್ಯಶ್ರೇಷ್ಠರೆಲ್ಲರೂ ಏಕಕಾಲದಲ್ಲಿಯೇ ಆ ದೇವೇಂದ್ರನನ್ನಟ್ಟಿ ಬಂದರು. ಆಗ ದೇವೇಂದ್ರನಿಗೂ, ಮಹಾಬಲಿಷ್ಠರಾದ ಆ ದೈತ್ಯರಿಗೂ ಪ್ರಬಲವಾದ ಯುದ್ಧವು ಮೊದಲಾಯಿತು. ಆಗ ದೇವತೆಗಳೆಲ್ಲರೂ ಆ ಶತಕ್ರತು ವಿನ ಸಹಾಯಕ್ಕಾಗಿ ಬಂದರು. ಆ ಸಮಯದಲ್ಲಿ ಪರಾಕ್ರಮಿಗಳಾದ ಆ ದೇವ ದಾನವರು ಭಯಂಕರವಾಗಿ ಕಾದಿದರು. ದೇವದಾನವರಿಗೆ ಪ್ರಳಯದಂತಿದ್ದ ಆ ಯುದ್ಧವು ಅನೇಕ ಶಸ್ತ್ರಗಳ ಹೊಡೆತಗಳಿಂದ ಕೂಡಿ ಆ ರಾತ್ರಿಯಲ್ಲಿಯೇ ಆರಂಭವಾಯಿತು. ಈ ರೀತಿ ಬಹು ಭಯಂಕರವಾದ ಯುದ್ಧವು ನಡೆಯುತ್ತಿರಲು,

ಐರಾವತಂ ಸಮಾರುಹ್ಯ ಮಹೇಂದ್ರಃ ಶುಶುಭೇ ತದಾ ।
ಧ್ರಿಯಮಾಣೇನ ಛತ್ರೇಣ ಚಂದ್ರಮಂಡಲ ಶೋಭಿನಾ ॥ ೨೨೧ ॥
ಚಾಮರೈರ್ವೀಜ್ಯಮಾನೋಽಥ ಬಭಾಷೇ ದೈತ್ಯಪುಂಗವಂ । ॥ ೨೨೨ ॥

ಇಂದ್ರ ಉವಾಚ :—

ಸಂಗ್ರಾಮಂ ಕುರು ಮೇ ವೃತ್ರ ಬಲೇನ ಮಹತಾ ವೃತಃ ।
ಶೂರಸ್ತ್ವಮಸಿ ಶೂರಾಣಾಂ ತಪಸಾ ಪರಮೇಣ ಹಿ ॥ ೨೨೩ ॥
ಏವಮುಕ್ತಸ್ತದಾ ತೇನ ವೃತ್ರೋ ವಾಕ್ಯಮುವಾಚ ಹ ।
ಆದೌ ಪ್ರಹರ ಮಾಮಿಂದ್ರ ಪಶ್ಚಾತ್ತ್ವಾಂ ಘಾತಯಾಮ್ಯಹಂ ॥ ೨೨೪ ॥

ತಥೇತಿ ಮತ್ವಾ ತದತೀವ ದುಃಸಹಂ
ವಜ್ರಂ ತದಾನೀಂ ಶತಧಾರಮೇವ ।
ವಿಮೋಕ್ತುಕಾಮೋ ಹಿ ತದಾ ಪುರಂದರೋ
ನಿವಾರಿತಸ್ತೇನ ಮಹಾಪ್ರಭೇಣ ।
ಪುರೋಧಸಾ ಬುದ್ಧಿಮತಾಂ ವರೇಣ
ತಥೇತಿ ಮತ್ವಾ ಸ ಚಕಾರ ಚೇಂದ್ರಃ ॥ ೨೨೫ ॥

---

ವೃತ್ರಾಸುರನು ಯುದ್ಧಸನ್ನದ್ಧನಾಗಿ ಬಹು ತೀಕ್ಷ್ಣವಾದ ಶೂಲವನ್ನು ಕೈಗೆ ತೆಗೆದುಕೊಂಡು ಇಂದ್ರನೆದುರಿಗೆ ನಿಂತು ಬಹು ಭಯಂಕರವಾಗಿ ಸಿಂಹಗರ್ಜನೆಯನ್ನು ಮಾಡಿದನು. ಆ ಗರ್ಜನೆಯಿಂದ ಮೂರು ಲೋಕಗಳೂ ಭಯದಿಂದ ತತ್ತಳಿಸಿಹೋದುವು.

೨೨೧–೨೪. ಆ ಸಮಯದಲ್ಲಿ ಮಹೇಂದ್ರನು ಐರಾವತವನ್ನೇರಿ ಚಂದ್ರಮಂಡಲದಂತೆ ಶೋಭಿಸುತ್ತಿದ್ದ ಶ್ವೇತಚ್ಛತ್ರದಿಂದ ವಿರಾಜಿಸುತ್ತ ಚಾಮರಗಳಿಂದಭಿವೀಜಿತನಾಗಿ ಮುಂದೆ ಬಂದು ಆ ದೈತ್ಯಪುಂಗವನನ್ನು ಕುರಿತು ಹೀಗೆ ಹೇಳಿದನು: ಇಂದ್ರನು ಹೇಳುತ್ತಾನೆ:—“ಎಲೈ ವೃತ್ರಾಸುರನೇ! ಈಗ ನೀನು ಮಹತ್ತರವಾದ ಈ ನಿನ್ನ ಸೇನೆಯೊಡಗೂಡಿ ನನ್ನೊಡನೆ ಯುದ್ಧಮಾಡು. ನೀನು ಶ್ರೇಷ್ಠವಾದ ತಪಸ್ಸನ್ನು ಮಾಡಿ ಶೂರರಿಗೆಲ್ಲ ಶೂರನಾಗಿರುವೆಯಲ್ಲವೆ!” ಎಂಬೀ ಪ್ರಕಾರವಾಗಿ ನುಡಿದ ದೇವೇಂದ್ರನ ಮಾತನ್ನು ಕೇಳಿ ವೃತ್ರಾಸುರನು ಅವನನ್ನು ಕುರಿತು, “ಎಲೈ ಇಂದ್ರನೇ! ನೀನು ಮೊದಲು ನನ್ನನ್ನು ಹೊಡೆ. ಆಮೇಲೆ ನಾನು ನಿನ್ನನ್ನು ಹೊಡೆಯುತ್ತೇನೆ” ಎಂದು ಹೇಳಿದನು.

೧೨೫–೩೦. ಇಂದ್ರನು ಅಂತೆಯೇ ಆಗಬಹುದೆಂದು ಸಮ್ಮತಿಸಿ ತಡೆಯಲ ಸದಳವಾದ ವಜ್ರವೆಂಬ ಖಡ್ಗವನ್ನೇ ಅವನ ಮೇಲೆ ಪ್ರಯೋಗಿಸಬಯಸಿದನು. ಆಗ ಮಹಾತೇಜಸ್ವಿಯೂ ಬುದ್ಧಿಶಾಲಿಯೂ ಆದ ಬೃಹಸ್ಪತ್ಯಾಚಾರ್ಯನು ಮೊದಲಿನಲ್ಲಿಯೇ ವಜ್ರಾಯುಧವನ್ನು ಪ್ರಯೋಗಿಸಬೇಡವೆಂದು ಅವನನ್ನು

ಗದಾಂ ಪ್ರಗೃಹ್ಯ ದೇವೇಂದ್ರೋ ವೃತ್ರಂ ವಿವ್ಯಾಧ ತಾಂ ಗದಾಂ ।
ವಾರಯಾಮಾಸ ವೃತ್ರೋಽಸಾವತಿಥಿಂ ಕೃಪಣೋ ಯಥಾ ॥ ೨೨೬ ॥
ವ್ಯರ್ಥಾಂ ಚ ಸ್ವಗದಾಂ ದೃಷ್ಟ್ವಾ ಇಂದ್ರಶ್ಚಿಂತಾಮವಾಪ ಹ ॥ ೨೨೭ ॥
ತಂ ಚಿಂತ್ಯಮಾನಂ ಸ ತದಾ ಪುರಂದರಂ
ವೃತ್ರೋ ಬಭಾಷೇ ಪರಿಭರ್ತ್ಸ್ಯಮಾನಃ ।
ಪುರಾಕೃತಂ ಶಕ್ರ ಮಹಾದ್ಭುತಂ ತ್ವಯಾ
ಜುಗುಪ್ಸಿತಂ ಕರ್ಮ ಚ ವಿಸ್ಮೃತಂ ಕಿಂ ।
ಯೇನೈವ ಜಾತೋಽಸಿ ಸಹಸ್ರನೇತ್ರಃ
ಶಾಪಾನ್ಮಹರ್ಷೇರಥ ಗೌತಮಸ್ಯ ॥ ೨೨೮ ॥
ಯೇ ಶೂರಾಶ್ಚೇಂದ್ರಿಯಗ್ರಾಮಂ ವರ್ತಂತೇ ಹಿ ನಿಯಮ್ಯತು ।
ತೇ ಜಯಂ ಪ್ರಾಪ್ನುವಂತೀಹ ನೇತರೇ ಚ ಭವಾದೃಶಾಃ ॥ ೨೨೯ ॥
ರಣಾಜಿರಂ ಮಹಾಘೋರಂ ಪಾಪಿನಾಂ ನಾತ್ರ ಸಂಶಯಃ ॥ ೨೩೦ ॥
ಏವಂ ನಿರ್ಭರ್ತ್ಸಯಾಮಾಸ ದೇವೇಂದ್ರಂ ದೈತ್ಯಪುಂಗವಃ ।
ತ್ರಿಶೂಲಂ ಘೂನಯಾಮಾಸ ದೇವೇಂದ್ರೋ ಹಿ ತಟಿತ್ಸಮಂ ॥ ೨೩೧ ॥

---

ತಡೆದನು. ಅಂತೆಯೇ ಮಹೇಂದ್ರನು ಗದೆಯನ್ನು ತೆಗೆದುಕೊಂಡು ಆ ವೃತ್ರನನ್ನು ಹೊಡೆದನು. ವೃತ್ರಾಸುರನಾದರೋ ಆ ಗದೆಯನ್ನು ಜಿಪುಣನಾದವನು ಮನೆಗೆ ಬಂದ ಅತಿಥಿಯನ್ನೆಂತೋ ಅಂತು ನಿವಾರಿಸಿದನು (ತಡೆದನು). ಗದೆಯು ವ್ಯರ್ಥವಾದುದನ್ನು ಕಂಡು ಮಹೇಂದ್ರನು ಬಹಳವಾದ ಚಿಂತೆಗೀಡಾದನು. ಈ ರೀತಿ ವ್ಯಸನಪಡುತ್ತಿರುವ ಆ ದೇವೇಂದ್ರನನ್ನು ಕಂಡು ವೃತ್ರಾಸುರನು ಅವನನ್ನು ಗದರಿಸುತ್ತ, "ಎಲಾ ಶಕ್ರನೇ! ನೀನು ಪೂರ್ವದಲ್ಲಿ ಅತ್ಯಂತ ಅಸಹ್ಯವಾದ ಪಾಪಕಾರ್ಯವನ್ನು ಮಾಡಿ ಅದನ್ನೀಗ ಮರೆತೆಯೇನು ? ಆ ಪಾಪದ ದೆಸೆಯಿಂದಲೇ ನಿನ್ನನ್ನು ಗೌತಮ ಮಹರ್ಷಿಯು ಶಪಿಸಲು ನೀನು ಸಹಸ್ರನೇತ್ರನಾದೆಯಲ್ಲವೆ? ಎಲೆವೋ! ಕೇಳು; ಯಾರಾದರೆ ಇಂದ್ರಿಯಗ್ರಾಮವನ್ನು ಸ್ವಾಧೀನದಲ್ಲಿರಿಸಿಕೊಂಡಿರುತ್ತಾರೆಯೋ ಅವರು ಜಯವನ್ನು ಪಡೆಯುತ್ತಾರೆ. ನಿನ್ನಂತಹರೆಂದಿಗೂ ಜಯವನ್ನು ಪಡೆಯರು. ಪಾಪಿಗಳಾದವರಿಗೆ ರಣರಂಗವೆಂಬುದು ಮಹಾ ಭಯಂಕರವಾದುದು. ಇದರಲ್ಲಿ ಸಂಶಯವಿಲ್ಲ."

೨೩೧–೩೬. ದೈತ್ಯಪುಂಗವನಾದ ಆ ವೃತ್ರನು ದೇವೇಂದ್ರನನ್ನೀರೀತಿ ಗದರಿಸಿ ಹೆದರಿಸಿ ಮಿಂಚಿನ ಬಳ್ಳಿಗೆಣೆಯಾದ ತ್ರಿಶೂಲವನ್ನು ಅವನ ಕಡೆಗೆ ಗಿರಗಿರನೆ ತಿರುಗಿಸಿದನು. ಅದ್ಭುತ ಪರಾಕ್ರಮಿಯಾದ ಆ ದಾನವನು ಆ ಶೂಲದಿಂದ, ತೀವ್ರವಾದ ತಪಸ್ಸಿನಿಂದ ಪ್ರಳಯಕರ್ತನಾದ ರುದ್ರನೆಂತೋ ಅಂತು ಪ್ರಕಾಶಿಸಿದನು. ಇಂತು ಬೆಳಗುತ್ತಿದ್ದ ಆ ದಾನವ ಶ್ರೇಷ್ಠನನ್ನು ನೋಡಿ

**ತೇನ ಶೂಲೇನ ಮಹತಾ ವೃತ್ರೋಽದ್ಭುತಪರಾಕ್ರಮಃ ।**
**ಬಭೌ ತೀವ್ರೇಣ ತಪಸಾ ಯಥಾ ರುದ್ರೋ ಯುಗಾಂತಕೃತ್ ॥ ೨೩೨ ॥**
**ತಥಾಭೂತಂ ಸಮಾಲಕ್ಷ್ಯ ದೇವರಾಜಃ ಶತಕ್ರತುಃ ।**
**ಅಭ್ಯುದ್ಯಯೌ ಹಂತುಕಾಮೋ ವೃತ್ರಂ ದಾನವಪುಂಗವಂ ॥ ೨೩೩ ॥**
**ತಮಾಯಾಂತಮಭಿಪ್ರೇಕ್ಷ್ಯ ಹಂತುಕಾಮಂ ಪುರಂದರಂ ।**
**ಜಹಾಸ ಪರಮಂ ತತ್ರ ಶಕ್ರಸ್ಯಭಿ ಭಯಾವಹಂ ।**
**ಮುಖಂ ಪ್ರಸಾರ್ಯ ಸುಮಹದಾಗತೋ ಹಿ ಪುರಂದರಂ ॥ ೨೩೪ ॥**
**ಗ್ರಸ್ತುಕಾಮೋ ಮಹಾತೇಜಾ ದೈತ್ಯಾನಾಮಧಿಪಸ್ತದಾ ।**
**ಆಗತ್ಯ ಸಹಸಾ ಶಕ್ರಂ ಗ್ರಾಸಯಿತ್ವಾ ಸ ಕುಂಜರಂ ॥ ೨೩೫ ॥**
**ಸ ವಜ್ರಂ ಸ ಕಿರೀಟಂ ಚ ನನರ್ತ ಚ ಜಗರ್ಜ ಚ ।**
**ನಿಮಿಷಾಂತರಮಾತ್ರೇಣ ಗ್ರಸಿತೋಽಸೌ ಪುರಂದರಃ ॥ ೨೩೬ ॥**
**ಹಾಹಾಕಾರೋ ಮಹಾನಾಸೀದ್ದೇವಾನಾಂ ತತ್ರ ಪಶ್ಯತಾಂ ।**
**ಭೂಕಂಪೋ ಹಿ ತದಾ ಹ್ಯಾಸೀದುಲ್ಕಾಪಾತಃ ಸಹಸ್ರಶಃ ॥ ೨೩೭ ॥**
**ತಿಮಿರೇಣಾವೃತಂ ಸರ್ವಂ ಜಗತ್ ಸ್ಥಾವರ ಜಂಗಮಂ ।**
**ವರ್ತಮಾನಸ್ತದಾ ವೃತ್ರೋ ಬಭೂವ ಪರಮದ್ಯುತಿಃ ॥ ೨೩೮ ॥**
**ವಿಧ್ಯಮಾನಾಸ್ತದಾ ಸರ್ವೇ ದೇವಾ ಬ್ರಹ್ಮಾಣಮಾಗತಾಃ ।**
**ಶಶಂಸುಃ ಸರ್ವಮೇವೈತದ್ವೃತ್ರಾಸುರವಿಚೇಷ್ಟಿತಂ ॥ ೨೩೯ ॥**

---

ದೇವರಾಜನಾದ ಶತಕ್ರತುವು ಅವನನ್ನು ಕೊಲ್ಲಲು ಮುನ್ನುಗ್ಗಿ ಹೊರಟನು. ಈ ರೀತಿ ತನ್ನನ್ನು ಕೊಲ್ಲಲು ಬರುತ್ತಿರುವ ಆ ಪುರಂದರನನ್ನು ಕಂಡು ಮಹಾ ತೇಜನಾದ ವೃತ್ರನು ಭಯಂಕರವಾಗಿ ನಕ್ಕು, ಬಹಳ ದೊಡ್ಡದಾದ ತನ್ನ ಬಾಯನ್ನು ಅಗಲವಾಗಿ ತೆರೆದು ಅವನ ಬಳಿ ಸಾರಿ ಐರಾವತದಿಂದಲೂ, ವಜ್ರ ಕಿರೀಟಾದಿಗಳಿಂದಲೂ ಸಮೇತನಾದ ಅವನನ್ನು ನುಂಗಿ ನರ್ತಿಸುತ್ತ ಸಿಂಹನಾದ ಮಾಡಿದನು. ಅಯ್ಯಾ ಮುನಿಗಳಿರಾ! ಈ ರೀತಿ ಆ ದಾನವನು ಮಹೇಂದ್ರ ನನ್ನು ಒಂದು ನಿಮಿಷದಲ್ಲಿಯೇ ನುಂಗಿಬಿಟ್ಟನು.

೨೩೭–೪೧. ಆಗ ಅಲ್ಲಿ ನಿಂತು ನೋಡುತ್ತಿದ್ದ ದೇವತೆಗಳೆಲ್ಲರೂ ಹಾಹಾ ಕಾರ ಮಾಡಿದರು. ಭೂಮಿಯು ಕಂಪಿಸಿತು. ಆಕಾಶದಿಂದ ಸಾವಿರಾರು ಕೊಳ್ಳಿಗಳು ಬಿದ್ದುವು. ಸ್ಥಾವರಜಂಗಮಾತ್ಮಕವಾದ ಜಗತ್ತೆಲ್ಲವೂ ಕತ್ತಲೆಯಿಂದ ತುಂಬಿಹೋಯಿತು. ಆ ಸಮಯದಲ್ಲಿ ವೃತ್ರಾಸುರನಾದರೋ ಕುಣಿದಾಡುತ್ತ ಬಹುವಾಗಿ ಪ್ರಕಾಶಿಸಿದನು. ಆಗ ದೇವತೆಗಳೆಲ್ಲರೂ ಬ್ರಹ್ಮನಲ್ಲಿಗೈತಂದು ವೃತ್ರಾಸುರನೆಸಗಿದ ಕಾರ್ಯವೆಲ್ಲವನ್ನೂ ಅವನಿಗೆ ಅರಿಕೆಮಾಡಿದರು. ಸರ್ವ ಲೋಕಪಿತಾಮಹನಾದ ಬ್ರಹ್ಮನು ಅದೆಲ್ಲವನ್ನೂ ಕೇಳಿ ಬಹಳವಾಗಿ

ತಚ್ಛ್ರುತ್ವಾ ಭಗವಾನ್ಬ್ರಹ್ಮಾ ವ್ಯಥಿತೋಽತೀವವಿಸ್ಮಿತಃ ।
ಕಥಂ ಜಾತಂ ಮಹೇಂದ್ರಸ್ಯ ವ್ಯಸನಂ ಪರಮಾದ್ಭುತಂ ॥ ೨೪೦ ॥
ದೇವೈಃ ಸಹ ತದಾ ಬ್ರಹ್ಮಾ ಸರ್ವಲೋಕಪಿತಾಮಹಃ ।
ತುಷ್ಟಾವ ಗಿರಿಶಂ ದೇವಂ ಪರಮೇಣ ಸಮಾಧಿನಾ ॥ ೨೪೧ ॥

ಬ್ರಹ್ಮೋವಾಚ :—

ಓಂ ನಮೋ ಲಿಂಗರೂಪಾಯ ಮಹಾದೇವಾಯ ವೈ ನಮಃ
ವಿಶ್ವರೂಪಾಯ ದೇವಾಯ ವಿರೂಪಾಕ್ಷಾಯ ವೈ ನಮಃ ॥ ೨೪೨ ॥
ತ್ರಾಹಿ ತ್ರಾಹಿ ತ್ರಿಲೋಕೇಶ ವೃತ್ರಗ್ರಸ್ತಂ ಪುರಂದರಂ ।
ತದಾ ನಭೋ ಗತಾ ವಾಣೀ ಸರ್ವೇಷಾಮೇವ ಶೃಣ್ವತಾಂ ॥ ೨೪೩ ॥
ಉವಾಚ ಹಿತಕಾಮಾಯ ವಿಧಿಂ ಲಿಂಗಾರ್ಚನೇ ಸತೀ ।
ಪ್ರದೋಷ ವ್ರತಯುಕ್ತೇನ ಇಂದ್ರೇಣ ವಿಕೃತಂ ಕೃತಂ ॥ ೨೪೪ ॥
ನಿರ್ಮಾಲ್ಯಂ ಪೀಠಿಕಾಂ ಚೈವ ಛಾಯಾ ಪ್ರಾಸಾದಮೇವಚ ।
ಪ್ರದಕ್ಷಿಣಾಂ ಕೃತವತಾ ಪೀಠಿಕಾಲಂಘನಂ ಕೃತಂ ॥ ೨೪೫ ॥
ಲಂಘಯಂತಿ ಚ ಯೇ ಮೂಢಾಸ್ತೇ ವೈ ದಂಡ್ಯಾ ನ ಸಂಶಯಃ ।
ಚಂಡಸ್ಯ ಗಣಮುಖ್ಯಸ್ಯ ತಸ್ಮಾತ್ಕುರ್ಯಾತ್ಪ್ರಯತ್ನತಃ ।
ಪ್ರದಕ್ಷಿಣಾ ನಮಸ್ಕಾರಾ ಲಿಂಗಾರ್ಚನ ಸಮನ್ವಿತಃ ॥ ೨೪೬ ॥

---

ವ್ಯಸನಗೊಂಡನಲ್ಲದೆ, ಆಶ್ಚರ್ಯವೂ ಆಯಿತು. ಆಗಲಾತನು ದೇವತೆಗಳೊಡನೆ, "ದೇವೇಂದ್ರನಿಗಿಂತಹ ಕಷ್ಟವು ಬಂದುದು ಹೇಗೆ" ಎಂದು ಆಲೋಚಿಸಿ ತರುವಾಯ ಪರಮಸಮಾಧಿಮಗ್ನನಾಗಿ ಪರಮೇಶ್ವರನನ್ನು ಈರೀತಿ ಸ್ತುತಿಸಿದನು.

೨೪೨–೪೫. ಬ್ರಹ್ಮನು ಹೇಳುತ್ತಾನೆ:— ಎಲೈ ಪ್ರಣವಸ್ವರೂಪನಾದ ಪಾರ್ವತೀರಮಣನೇ! ಲಿಂಗರೂಪಿಯೂ, ಮಹಾದೇವನೂ ಆದ ನಿನಗೆ ನಮಸ್ಕಾರವು. ಓ ದೇವದೇವ! ವಿಶ್ವಸ್ವರೂಪನೂ, ವಿರೂಪಾಕ್ಷನೂ ಆದ ನಿನಗೆ ನಮೋನಮಃ. ಎಲೈ ತ್ರಿಲೋಕೇಶನೇ! ವೃತ್ರಾಸುರನು ನುಂಗಿರುವ ಈ ಪುರಂದರನನ್ನು ಸಂರಕ್ಷಿಸು." ಎಲೈ ವಿಪ್ರರೇ! ಆಗ ಎಲ್ಲರಿಗೂ ಕೇಳಿಸುವಂತೆ ಆಕಾಶವಾಣಿಯು ನುಡಿಯಿತು; ಆ ವಾಣಿಯು ಸಮಸ್ತರ ಹಿತವನ್ನೂ ಬಯಸಿ ಆ ಸಮಯದಲ್ಲಿಯೇ ಶಿವಲಿಂಗಪೂಜೆಯ ವಿಧಾನವನ್ನು ಅಪ್ಪಣೆ ಕೊಡಿಸಿತು. "ಪ್ರದೋಷ ವ್ರತವನ್ನು ಮಾಡುವಾಗ ಈ ಮಹೇಂದ್ರನು ವ್ಯತ್ಯಾಸ ಮಾಡಿದನು. ಇವನು ನಿರ್ಮಾಲ್ಯವನ್ನೂ, ಶಿವಲಿಂಗಪೀಠವನ್ನೂ, ಛಾಯಾ ಪ್ರಾಸಾದವನ್ನೂ ಪ್ರದಕ್ಷಿಣ ಮಾಡುವಾಗ ದಾಟಿದನು.

೨೪೬–೫೦. ಯಾವ ತಿಳಿಗೇಡಿಗಳು ಇವುಗಳನ್ನು ದಾಟುವರೋ ಅವರು ದಂಡಿಸಲ್ಪಡತಕ್ಕವರು. ಇದರಲ್ಲಿ ಸಂದೇಹವಿಲ್ಲ. ಆದುದರಿಂದ ಲಿಂಗಾರ್ಚನೆ

ಶ್ರೇಯಃ ಪ್ರಾಪ್ತ್ಯೇಕಬುದ್ಧ್ಯಾ ವೈ ಪ್ರಯತ್ನಾಲ್ಲಿಂಗಪೂಜನಂ ।
ಕಾರ್ಯಂ ದೀಕ್ಷಾ ಪರೈರ್ನಿತ್ಯಂ ಸರ್ವಪಾಪಪ್ರಶಾಂತಯೇ ॥ ೨೪೭ ॥
ಅಶರೀರಂ ಚ ತದ್ವಾಕ್ಯಂ ಶೃತ್ವಾ ಬ್ರಹ್ಮಾದಯಃ ಸುರಾಃ ।
ಪಪ್ರಚ್ಛುಸ್ತೇ ಪ್ರಾಂಜಲಯೋ ನಭೋ ವಾಣೀಂ ಶುಭಾವಹಾಂ ॥ ೨೪೮ ॥
ಕಥಮರ್ಚಾಮಹೇ ಲಿಂಗಂ ಕೇನೈವ ವಿಧಿನಾ ತತಃ ।
ಪ್ರಾತರ್ಮಧ್ಯಾಹ್ನಸಮಯೇ ಸಾಯಂಕಾಲೇ ತಥೈವಚ ॥ ೨೪೯ ॥
ಕಾನಿ ಪುಷ್ಪಾಣಿ ಸಾಯಾಹ್ನೇ ಮಧ್ಯಾಹ್ನೇ ಚ ತಥೈವ ಹಿ ।
ಪ್ರಾತಃಕಾಲೇತು ತಾನ್ಯೇವ ಕಥಯಸ್ವ ಯಥಾ ತಥಂ ॥ ೨೫೦ ॥
ತದಾ ನಭೋಗತಾ ವಾಣೀ ಕಥಯಾಮಾಸ ವಿಸ್ತರಂ ॥ ೨೫೧ ॥
ಕರವೀರಂ ಚಾರ್ಕಪುಷ್ಪಂ ಬೃಹತೀಪುಷ್ಪಮೇವಚ ।
ಧತ್ತೂರಕುಸುಮಂಚೈವ ಶತಪತ್ರಂ ತಥೈವಚ ॥ ೨೫೨ ॥
ಆರಗ್ವಧಂ ಚ ಪುನ್ನಾಗಂ ಬಕುಲಂ ನಾಗಕೇಶರಂ ।
ಬ್ರಹ್ಮೋತ್ಪಲಂ ಕದಂಬಂ ಚ ಮಂದಾರಕುಸುಮಂ ತಥಾ ॥ ೨೫೩ ॥
ಬಹೂನಿ ವರಪುಷ್ಪಾಣಿ ಬಹೂನಿ ಕಮಲಾನ್ಯಪಿ ।
ತ್ರಿಕಾಲೇ ಚ ಪವಿತ್ರಾಣಿ ಜ್ಞೇಯಾನಿ ಸತತಂ ಬುಧೈಃ ॥ ೨೫೪ ॥

---

ಮಾಡುವಾತನು ಗಣಮುಖ್ಯನಾದ ಚಂಡನಿಗೆ ಪ್ರಯತ್ನಪೂರ್ವಕವಾಗಿ ಪ್ರದಕ್ಷಿಣ ನಮಸ್ಕಾರವನ್ನು ಮಾಡಬೇಕು. ಶ್ರೇಯಸ್ಸನ್ನು ಹೊಂದಬಯಸುವವರು ದೀಕ್ಷಾಪರರಾಗಿ ಸಮಸ್ತ ಪಾಪಕ್ಷಯಾರ್ಥವಾಗಿ ಪ್ರಯತ್ನಪುರಸ್ಸರವಾಗಿ ಶಿವಲಿಂಗಾರ್ಚನೆಯನ್ನು ಮಾಡಬೇಕು.'' ಅಶರೀರವಾಣಿಯ ಈ ವಾಕ್ಯವನ್ನು ಕೇಳಿ ಬ್ರಹ್ಮಾದಿ ದೇವತೆಗಳು ಕೈಗಳನ್ನು ಮುಗಿದುಕೊಂಡು ಮಂಗಳಕರವಾದ ಆ ವಾಣಿಯನ್ನು ಕುರಿತು, ''ಎಲೌ ದೇವವಾಣಿಯೇ! ನಾವು ಯಾವ ವಿಧಿಯನ್ನನುಸರಿಸಿ ಪ್ರಾತಃಕಾಲ, ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿ ಶಿವಲಿಂಗವನ್ನು ಹೇಗೆ ಪೂಜಿಸಬೇಕು? ಶಿವಾರ್ಚನೆಗೆ ಪ್ರಾತಃಕಾಲದಲ್ಲಿ ಯಾವ ಹೂವುಗಳು ಶ್ರೇಷ್ಠ? ಮಧ್ಯಾಹ್ನದಲ್ಲಿಯೂ, ಸಾಯಂಕಾಲದಲ್ಲಿಯೂ ಯಾವ ಹೂವುಗಳಿಂದ ಅರ್ಚನೆ ಮಾಡಬೇಕು? ಈ ವಿಚಾರಗಳೆಲ್ಲವನ್ನೂ ನಮಗೆ ಯಥಾರ್ಥವಾಗಿ ತಿಳಿಸಬೇಕು'' ಎಂದು ಕೇಳಿಕೊಂಡರು.

೨೫೧–೬೦. ಎಲೈ ಮುನಿಗಳಿರಾ! ಆಗ ಆಕಾಶವಾಣಿಯು ವಿಸ್ತಾರವಾಗಿ ಹೀಗೆ ನುಡಿಯಿತು. ''ಕರವೀರ, ಅರ್ಕಪುಷ್ಪ (ಎಕ್ಕದ ಹೂ), ಬೃಹತೀ, ಧತ್ತೂರ, ಶತಪತ್ರ (ಕಮಲ), ಆರಗ್ವಧ, ಪುನ್ನಾಗ, ಬಕುಲ, ನಾಗಕೇಶರ, ಬ್ರಹ್ಮೋತ್ಪಲ, ಕದಂಬ, ಮಂದಾರ ಇವೇ ಮೊದಲಾದ ಅನೇಕ ಹೂವುಗಳೂ, ಅನೇಕ ಬಗೆಯ ಕಮಲಗಳೂ ತ್ರಿಕಾಲಗಳಲ್ಲಿಯೂ ಶಿವಪೂಜೆಗೆ ಪವಿತ್ರವಾದು

ಜಾತೀಪುಷ್ಪಂ ಮಲ್ಲಿಕಾಯಾಶ್ಚ ಪುಷ್ಪಂ
ಪುಷ್ಪಂ ಮೋಗರಕಂ ನೀಲಪುಷ್ಪಂ ತಥೈವ ।
ತಥಾಪುಷ್ಪಂ ಕುಟಜಂ ಕರ್ಣಿಕಾರಂ
ಕೌಸುಂಭಾಖ್ಯಂ ವಾರಿಜಂ ರಕ್ತವರ್ಣಂ ॥ ೨೫೫ ॥
ಏತಾನ್ಯೇವ ಚ ಪುಷ್ಪಾಣಿ ಮಧ್ಯಾಹ್ನೇ ಲಿಂಗಪೂಜನೇ ।
ವಿಶಿಷ್ಟಾನಿ ಮಯೋಕ್ತಾನಿ ಸಾಯಾಹ್ನೇ ಕಥಯಾಮ್ಯಹಂ ॥ ೨೫೬ ॥
ಚಂಪಕಾನಿ ತ್ರಿಕಾಲೇ ಚ ಪವಿತ್ರಾಣಿ ನ ಸಂಶಯಃ ।
ರಾತ್ರೌ ಮೋಗರಕಾಣ್ಯೇವ ಪವಿತ್ರಾಣಿ ನ ಸಂಶಯಃ ॥ ೨೫೭ ॥
ಏವಮರ್ಚನಭೇದಾಂಶ್ಚ ಜ್ಞಾತ್ವಾ ತಲ್ಲಿಂಗಪೂಜನೇ ।
ಕಾರ್ಯೋ ವಿಧಿರ್ವಿಧಿಜ್ಞೈಶ್ಚ ಸತತಂ ಚ ಶಿವಾಲಯೇ ॥ ೨೫೮ ॥
ವೃಷಭಾಂತರಿತೋ ಭೂತ್ವಾ ಪೀಠಿಕಾಂತರಮೇವ ಚ ।
ಪ್ರದಕ್ಷಿಣಾಂ ನ ಕುರ್ವೀತ ಕುರ್ವನ್ಕಿಲ್ಬಿಷಮಶ್ನುತೇ ॥ ೨೫೯ ॥
ತಥಾಹ್ಯನೇನ ಶಕ್ರೇಣ ಕೃತಂ ಚೈವ ಪ್ರದಕ್ಷಿಣಂ ।
ರಾಜಸಂ ಭಾವಮಾಶ್ರಿತ್ಯ ತಸ್ಮಾಜ್ಜಾತಂ ಚ ನಿಷ್ಫಲಂ ॥ ೨೬೦ ॥
ಗ್ರಸಿತೋಽದ್ಯೈವ ವೃತ್ರೇಣ ಸ ಗಜೋಹಿ ಪುರಂದರಃ ।
ಭವದ್ಭಿರೇವ ತತ್ಕಾರ್ಯಂ ಯೇನ ಇಂದ್ರಃ ಪ್ರಮುಚ್ಯತೇ ॥ ೨೬೧ ॥

---

ವೆಂದು ಜ್ಞಾನಿಗಳಾದವರು ತಿಳಿಯಬೇಕು. ಜಾಜಿ, ಮಲ್ಲಿಗೆ, ಮೋಗರಕ, ನೀಲ, ಕುಟಜ, ಕರ್ಣಿಕಾರ, ಕೌಸುಂಭ, ರಕ್ತಕಮಲ ಈ ಹೂವುಗಳು ಮಧ್ಯಾಹ್ನ ಸಮಯದಲ್ಲಿ ಲಿಂಗಾರ್ಚನೆಗೆ ಶ್ರೇಷ್ಠವಾದವುಗಳು. ಇನ್ನು ಸಾಯಂಕಾಲದಲ್ಲಿ ಶಿವಪೂಜೆಗೆ ಉಪಯೋಗಿಸುವ ಹೂವುಗಳನ್ನು ಹೇಳುವೆನು; ಕೇಳಿರಿ. ಸಂಪಗೆಯು ತ್ರಿಕಾಲಗಳಲ್ಲಿಯೂ ಪೂಜೆಮಾಡಲು ಪವಿತ್ರವಾದುದೆಂಬುದರಲ್ಲಿ ಸಂಶಯ ವಿಲ್ಲವು. ರಾತ್ರಿಯಲ್ಲಿ ಮೋಗರಕ ಪುಷ್ಪಗಳೇ ಪೂಜೆಗೆ ಶ್ರೇಷ್ಠವಾದುವು. ಲಿಂಗಾರ್ಚನ ವಿಧಾನವನ್ನು ಬಲ್ಲವರು ಶಿವಾಲಯಗಳಲ್ಲಿ ಶಿವಲಿಂಗವನ್ನು ಪೂಜಿಸು ವುದರಲ್ಲಿನ ಭೇದಗಳೆಲ್ಲವನ್ನೂ ಚೆನ್ನಾಗಿ ತಿಳಿದುಕೊಂಡಿರಬೇಕು. ಯಾವಾಗಲೇ ಆಗಲಿ ವೃಷಭವನ್ನೂ, ಪೀಠಿಕೆಯನ್ನೂ ಬಿಟ್ಟು ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಬಾರದು. ಹಾಗೆ ಮಾಡಿದವನು ಪಾಪಭಾಜನನಾಗುತ್ತಾನೆ. ಈ ಮಹೇಂ ದ್ರನು ಕೇವಲ ರಜೋಗುಣದಿಂದ ಕೂಡಿ (ಅಹಂಕಾರಪೂರಿತನಾಗಿ), ಆ ರೀತಿ ವೃಷಭವನ್ನೂ, ಪೀಠಿಕೆಯನ್ನೂ ಬಿಟ್ಟು ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ದುದರಿಂದ ಇವನು ಮಾಡಿದ ಶಿವಲಿಂಗಾರ್ಚನೆಯೆಲ್ಲವೂ ನಿಷ್ಫಲವಾಯಿತು.

೨೬೧–೬೫. ಎಲೈ ದೇವತೆಗಳಿರಾ! ಈಗಲೀ ಮಹೇಂದ್ರನನ್ನು, ವೃತ್ರಾ ಸುರನು ಐರಾವತದೊಡನೆಯೇ ನುಂಗಿರುವನು. ಆದುದರಿಂದ ನೀವೆಲ್ಲರೂ

ಮಹಾರುದ್ರ ವಿಧಾನೇನ ಮುಕ್ತೋ ಭವತಿ ತಕ್ಷಣಾತ್ ।
ಪುರಂದರೋ ಹ್ಯಯಂ ದೇವಾ ನಾತ್ರ ಕಾರ್ಯಾ ವಿಚಾರಣಾ ॥ ೨೬೨ ॥
ತೇನೈವ ವಚಸಾ ದೇವಾ ರುದ್ರಮಭ್ಯರ್ಚ್ಯ ಯತ್ನತಃ ।
ಯಥೋಕ್ತೇನ ವಿಧಾನೇನ ರುದ್ರಸೂಕ್ತೇನ ಯತ್ನತಃ ॥ ೨೬೩ ॥
ತಥಾಚೈಕಾದಶೀ ರುದ್ರಾ್ಯ ರುದ್ರಮಭ್ಯರ್ಚ್ಯ ವೈ ಸುರಾಃ ।
ಹವನಂ ಪ್ರತ್ಯಹಂ ಚಕ್ರುರ್ದಶಾಂಶೇನ ದ್ವಿಜೋತ್ತಮಾಃ ॥ ೨೬೪ ॥

ಜಪಂ ಚ ಪೂಜಾಂ ಹವನಂ ಚ ಚಕ್ರು
ರ್ವಿನೋಕ್ತುಕಾಮಾಃ ಸಹಸಾ ಪುರಂದರಂ ।
ಶಂಭೋಃ ಪ್ರಸಾದಾತ್ಸಹಸಾ ವಿನಿರ್ಗತಃ
ಕುಕ್ಷಿಂ ಭಿತ್ವಾ ದೇವರಾಜಸ್ತದಾನೀಂ ॥ ೨೬೫ ॥

ತಂ ನಿರ್ಗತಂ ಸಮೀಕ್ಷ್ಯಾಥ ದೇವಾ ದೇವೇಂದ್ರಮೋಜಸಾ ।
ಸ ಗಜಂ ಚ ಸ ವಜ್ರಂ ಚ ಸ ಕಿರೀಟಂ ಸ ಕುಂಡಲಂ
ಶ್ರಿಯಾ ಪರಮಯಾ ಯುಕ್ತಂ ಪುರಂದರ ಮಹೌಜಸಂ ॥ ೨೬೬ ॥
ದೇವದುಂದಭಯೋ ನೇದುಸ್ತಥಾ ಶಂಖಾ ಹ್ಯನೇಕಶಃ ।
ಗಂಧರ್ವಾಪ್ಸರಸೋ ಯಕ್ಷಾ ಋಷಯಶ್ಚ ಮುದಾನ್ವಿತಾಃ ॥ ೨೬೭ ॥

---

ಇವನನ್ನು ಬಿಡಿಸುವ ಕಾರ್ಯವನ್ನು ಮಾಡಿರಿ. ಮಹಾ ರುದ್ರವಿಧಾನದಿಂದ ಶಿವಲಿಂಗವನ್ನರ್ಚಿಸಿದರೆ ಇವನು ತತ್‌ಕ್ಷಣದಲ್ಲಿಯೇ ಮುಕ್ತನಾಗುತ್ತಾನೆ ಯೆಂಬುದರಲ್ಲಿ ಸಂಶಯವಿಲ್ಲವು.'' ಎಲೈ ಶೌನಕಾದಿಗಳಿರಾ! ಈ ರೀತಿ ನುಡಿದ ಆಕಾಶವಾಣಿಯ ನುಡಿಯನ್ನು ಕೇಳಿ ದೇವತೆಗಳೆಲ್ಲರೂ ಶಾಸ್ತ್ರೋಕ್ತವಿಧಿಯಿಂದ ಪ್ರಯತ್ನಪೂರ್ವಕವಾಗಿ ರುದ್ರಸೂಕ್ತಗಳನ್ನು ಪಠಿಸಿ, ಏಕಾದಶವಾರ ರುದ್ರಾಭಿ ಷೇಕದಿಂದ ಶ್ರೀ ರುದ್ರನನ್ನು ಪೂಜಿಸಿ ಪ್ರತಿನಿತ್ಯವೂ ಅದರಲ್ಲಿ ಹತ್ತನೆಯ ಭಾಗ ಹೋಮವನ್ನೂ ಮಾಡಿದರು. ಈ ರೀತಿ ಅವರೆಲ್ಲರೂ ತಮ್ಮೊಡೆಯನಾದ ಆ ಮಹೇಂದ್ರನನ್ನು ಬಿಡಿಸಬಯಸಿ, ಜಪ, ಪೂಜೆ, ಹೋಮಗಳನ್ನು ಮಾಡಿ ದರು. ಆಗ ದೇವರಾಜನಾದ ಪುರಂದರನು ಆ ವೃತ್ರಾಸುರನ ಹೊಟ್ಟೆಯನ್ನು ಸೀಳಿಕೊಂಡು ಹೊರಗೆ ಬಂದನು.

೨೬೬-೭೦. ಈ ಪ್ರಕಾರ ಇಂದ್ರನು ಐರಾವತದೊಡನೆಯೂ, ವಜ್ರಾಯುಧ ಕಿರೀಟಕುಂಡಲಗಳಿಂದಲೂ ಕೂಡಿ ಹೊರಗೆ ಬಂದು ಅತಿಶಯವಾದ ಕಾಂತಿಯಿಂದ ಬೆಳಗಿದನು. ಮಹಾ ಪರಾಕ್ರಮಿಯಾದ ಆ ಪುರಂದರನು ವೃತ್ರಾಸುರನ ಉದರ ದಿಂದ ಹೊರಗೆ ಬಂದುದನ್ನು ಕಂಡು, ಒಡನೆಯೇ ದೇವತೆಗಳೆಲ್ಲರೂ ಆನಂದಭರಿತ ರಾಗಿ ದೇವದುಂದುಭಿಗಳನ್ನೂ, ಶಂಖಗಳನ್ನೂ ಬಾರಿ ಬಾರಿಗೂ ಮೊಳಗಿಸಿದರು. ಗಂಧರ್ವರೂ, ಅಪ್ಸರರೂ, ಯಕ್ಷರೂ, ಋಷಿಗಳೂ ನಲಿದರು. ಇಂತು

ಏಕಪದ್ಯೇನ ಸರ್ವೇಷಾಂ ಮಹಾಹರ್ಷೋ ದಿವೌಕಸಾಂ ।
ಸಂಜಾತಸ್ತತ್ಕ್ಷಣಾದೇವ ಯದಾ ಮುಕ್ತಃ ಪುರಂದರಃ ।
ತದಾ ಶಚೀ ಸಮಾಯಾತಾ ಯತ್ರ ಮುಕ್ತಃ ಪುರಂದರಃ ॥ ೨೬೮ ॥
ತತ್ರ ಶಚ್ಯಾ ಸಮೇತೋಽಸಾವಭಿಷಿಕ್ತೋ ಮಹರ್ಷಿಭಿಃ ।
ಪುಣ್ಯಾಹವಾಚನಂ ತಸ್ಯ ಕೃತಂ ಸರ್ವೈಃ ಪ್ರಯತ್ನತಃ ॥ ೨೬೯ ॥
ಏವಂ ತದಭಿಷಿಕ್ತೋಽಸೌ ಮಹೇಂದ್ರ ಋಷಿಭಿಃ ಪುನಃ ।
ಮಹೀಮಂಗಲಭೂಯಿಷ್ಠಾ ತದಾ ಜಾತಾ ದ್ವಿಜೋತ್ತಮಾಃ ॥ ೨೭೦ ॥
ದಿಶಃ ಪ್ರಸನ್ನತಾಂ ಯಾತಾಃ ನಿರ್ಮಲಂ ಚಾಭವನ್ನಭಃ ।
ಶಾಂತಾಸ್ತದಾಗ್ನಯೋ ಹ್ಯಾಸನ್ಮನಾಂಸಿ ಚ ಮಹಾತ್ಮನಾಂ ॥ ೨೭೧ ॥
ಏವಮಾದೀನ್ಯನೇಕಾನಿ ಮಂಗಲಾನಿ ತಥಾಽಭವನ್ ।
ಮುಕ್ತೇ ಶತಕ್ರತೌ ತಸ್ಮಿನ್ ಬಭೂವ ಪರಮಾದ್ಭುತಂ ॥ ೨೭೨ ॥
ಏವಂ ಪ್ರವರ್ತಮಾನೇತು ಮಹತಾಂಚ ಮಹೋತ್ಸವೇ ।
ತಾಪಾದ್ವೃತ್ರಸ್ಯ ಪತಿತಂ ಶರೀರಂಚ ಭಯಾನಕಂ ॥ ೨೭೩ ॥
ತತ್ರೈವ ಬ್ರಹ್ಮಹತ್ಯಾ ಚ ಪಾಪಿಷ್ಠಾ ಪತಿತಾ ಭುವಿ ।
ಗಂಗಾಯಮುನಯೋರ್ಮಧ್ಯೇ ಅಂತರ್ವೇದೀತಿ ಕಥ್ಯತೇ ॥ ೨೭೪ ॥

---

ಆ ದೇವೇಂದ್ರನು ಮುಕ್ತನಾದ ಕ್ಷಣದಲ್ಲಿಯೇ ಎಲ್ಲ ದೇವತೆಗಳಿಗೂ ಏಕಕಾಲ ದಲ್ಲಿಯೇ ಸಂತೋಷವು ಸಮನಿಸಿತು. ಆ ಸಮಯದಲ್ಲಿ ಇಂದ್ರಪತ್ನಿಯಾದ ಶಚೀದೇವಿಯೂ ಅಲ್ಲಿಗೆ ಬಂದಳು. ಆಗ ಮಹರ್ಷಿಗಳೆಲ್ಲರೂ ಸೇರಿ ಪುಣ್ಯಾಹ ವಾಚನವನ್ನು ಮಾಡಿದ ಬಳಿಕ ಶಚೀಸಮೇತನಾದ ಪುರಂದರನನ್ನು ದೇವರಾಜ್ಯ ದಲ್ಲಿ ಪಟ್ಟಾಭಿಷಿಕ್ತನನ್ನಾಗಿಸಿದರು. ಎಲೈ ದ್ವಿಜಶ್ರೇಷ್ಠರೇ! ಈ ಪ್ರಕಾರ ಮಹರ್ಷಿಗಳೆಲ್ಲರೂ ಸೇರಿ ಆ ಮಹೇಂದ್ರನನ್ನು ಪಟ್ಟಾಭಿಷಿಕ್ತನನ್ನಾಗಿ ಮಾಡಿ ದೊಡನೆಯೇ ಭೂಮಂಡಲವೆಲ್ಲವೂ ಪರಮಮಂಗಳಮಯವಾಯಿತು.

೨೭೧–೭೪. ದಿಕ್ಕುಗಳೆಲ್ಲವೂ ಬೆಳಗಿದುವು. ಆಕಾಶವೆಲ್ಲವೂ ನಿರ್ಮಲ ವಾಯಿತು. ಅಗ್ನಿಗಳೆಲ್ಲವೂ ಸುಪ್ರಸನ್ನಗಳಾದುವಲ್ಲದೆ ಮಹಾತ್ಮರಾದ ಮಹರ್ಷಿ ಗಳ ಮನಸ್ಸುಗಳೆಲ್ಲವೂ ಶಾಂತಿಗೊಂಡುವು. ಅಯ್ಯಾ ವಿಪ್ರರೇ! ಈ ಪ್ರಕಾರ ಇಂದ್ರನು ಮುಕ್ತನಾದ ಸಮಯದಲ್ಲಿ ಆಶ್ಚರ್ಯಕರಗಳಾದ ಅನೇಕ ಮಂಗಳ ಶಕುನಗಳುಂಟಾದುವು. ಈ ರೀತಿ ಎತ್ತೆತ್ತಲೂ ಮಹಾ ಮಹೋತ್ಸವವು ನಡೆಯುತ್ತಿರಲು, ಅತ್ತ ವೃತ್ರಾಸುರನ ಭಯಂಕರವಾದ ದೇಹವು ನೆಲಕ್ಕು ರುಳಿತು. ಅಲ್ಲಿಯೇ ಪಾಪಿಷ್ಠವಾದ ಆ ಬ್ರಹ್ಮಹತ್ಯೆಯೂ ಬಿದ್ದುಹೋಯಿತು. ಹೀಗೆ ವೃತ್ರಾಸುರನ ದೇಹವೂ, ಆ ಬ್ರಹ್ಮಹತ್ಯೆಯೂ ಬಿದ್ದ ಪ್ರದೇಶವು ಗಂಗಾ ಯಮುನಾ ನದಿಗಳ ಸಂಗಮದಲ್ಲಿ ಅಂತರ್ವೇದಿ ಎಂದು ಹೇಳಲಾಗಿದೆ. ಯಾವ

ಪುಣ್ಯಭೂಮಿರಿತಿ ಖ್ಯಾತಾ ಪ್ರಸಿದ್ಧಾ ಲೋಕಪಾವನೀ ।
ವೃತ್ರಹತ್ಯಾ ಪ್ರತಿಷ್ಠಾ ಸಾ ಯಸ್ಮಿನ್ದೇಶೇ ಸ ಪಾಪವಾನ್ ॥ ೨೭೫ ॥
ಮಲಸ್ಯ ಬಹುಸಂಭೂತ್ಯಾ ಮಾಲವೇತಿ ಪ್ರಕೀರ್ತಿತಾ ।
ತಸ್ಯಾಂ ತು ಮಲಭೂಮ್ಯಾಂ ವೈ ವೃತ್ರಸ್ಯ ಚ ಮಹಚ್ಛಿರಃ ॥ ೨೭೬ ॥
ಷಣ್ಮಾಸೇಷ್ವಪತತ್ಸರ್ವೈಃ ಕೃತ್ತಂ ದೇವೈಃ ಸವಾಸವೈಃ ।
ಏವಂ ವೃತ್ರವಧಂ ಕೃತ್ವಾ ಶಕ್ರೋ ಜಯಮವಾಪ ಹ ॥ ೨೭೭ ॥
ಇಂದ್ರಾಸನೇ ಚೋಪವಿಷ್ಟೋ ನಿರಾತಂಕಃ ಶಚೀಪತಿಃ ।
ಏತಸ್ಮಿನ್ನಂತರೇ ದೈತ್ಯಾಃ ಪಾತಾಲವಾಸಿನಂ ಬಲಿಂ ।
ಶಶಂಸುಃ ಸರ್ವಮಾಗತ್ಯ ಶಕ್ರಸ್ಯ ಚ ವಿಚೇಷ್ಟಿತಂ ॥ ೨೭೮ ॥
ತೇಷಾಂ ತದ್ವಚನಂ ಶೃತ್ವಾ ವೈರೋಚನೀ ರುಷಾನ್ವಿತಃ ।
ಶುಕ್ರಂ ಪ್ರಪಚ್ಛ ಸ ತದಾ ಕಥಮಿಂದ್ರೋ ವಶೀ ಭವೇತ್ ॥ ೨೭೯ ॥
ತೇನೋಕ್ತಂ ಬಲಯೇ ರಾಜನ್ ಜಯಸ್ಯಂದನಲಬ್ಧಯೇ ।
ಮಹಾಯಜ್ಞಂ ಕುರುಷ್ವಾದ್ಯ ತೇನ ತೇ ವಿಜಯೋ ಭವೇತ್ ॥ ೨೮೦ ॥

---

ಈ ಪ್ರದೇಶದಲ್ಲಿ ವೃತ್ರಹತ್ಯೆಯು ನಡೆಯಿತೋ ಆ ಪ್ರದೇಶವು ಲೋಕವನ್ನೇ ಪಾವನಗೊಳಿಸುವುದಾಗಿ ಪುಣ್ಯಭೂಮಿಯೆಂದು ಖ್ಯಾತಿಪಡೆಯಿತು.

೨೭೬–೮೦. ಆಗಲಾ ಪ್ರದೇಶದಲ್ಲಿ ಬಹಳ ಮಲವುಂಟಾಯಿತಾದುದರಿಂದ ಅದು ಮಾಲವವೆಂದೂ ಹೆಸರಾಯಿತು. ಆ ಮಾಲವ ಭೂಮಿಯಲ್ಲಿ ಇಂದ್ರಾದಿ ದೇವತೆಗಳೆಲ್ಲರೂ ಸೇರಿ ಆರು ತಿಂಗಳುಗಳ ಕಾಲ ಒಂದೇ ಸಮವಾಗಿ ಕತ್ತರಿಸಿದ ಬಳಿಕ ಆ ವೃತ್ರನ ಮಹಾ ಶಿರಸ್ಸು ನೆಲಕ್ಕೆ ಬಿದ್ದಿತು. ಎಲೈ ಮುನಿಗಳಿರಾ! ದೇವೇಂದ್ರನೀಪ್ರಕಾರ ಆ ವೃತ್ರಾಸುರನನ್ನು ವಧಿಸಿ ಜಯವನ್ನು ಪಡೆದನು. ತರುವಾಯ ಆ ಶಚೀಪತಿಯು ಇಂದ್ರಾಸನದಲ್ಲಿ ಸುಪ್ರತಿಷ್ಠಿತನಾದನು. ಈ ಮಧ್ಯದಲ್ಲಿಯೇ ದೈತ್ಯರೆಲ್ಲರೂ ಪಾತಾಳಲೋಕಕ್ಕೆ ಹೋಗಿ ಬಲಿಯನ್ನು ಸಂದರ್ಶಿಸಿ, ದೇವೇಂದ್ರನೆಸಗಿದ ವೃತ್ರಾಸುರ ವಧೆಯೇ ಮೊದಲಾದ ಎಲ್ಲ ವೃತ್ತಾಂತವನ್ನೂ ಅವನಿಗೆ ತಿಳಿಸಿದರು. ಅದನ್ನು ಕೇಳುತ್ತಲೇ ವಿರೋಚನನ ಮಗನಾದ ಆ ಬಲಿದಾನವನು ಬಹಳವಾಗಿ ರೋಷಗೊಂಡು, ತನ್ನ ಗುರುವಾದ ಶುಕ್ರಾಚಾರ್ಯನನ್ನು ಕುರಿತು, "ಗುರುವೇ! ಈ ದೇವೇಂದ್ರನು ವಶನಾಗುವ ಬಗೆ ಹೇಗೆ?" ಎಂದು ಕೇಳಿದನು. ಆಗ ಶುಕ್ರಾಚಾರ್ಯನು, "ಎಲೈ ದೊರೆಯೇ! ವಿಜಯರಥವನ್ನು ಸಂಪಾದಿಸಲು ನೀನು ಮಹಾ ಯಾಗವನ್ನು ಮಾಡು. ಆ ವಿಜಯರಥದಿಂದ ಇಂದ್ರನು ಜಯಿಸಲು ಸಾಧ್ಯನಾಗುತ್ತಾನೆ" ಎಂದನು.

ತೇನೋಕ್ತೋ ಭೃಗುಣಾಚೈವಂ ಬಲಿರ್ಯಜ್ಞಾರ್ಥಮುದ್ಯತಃ ।
ದಧೌ ಯಾನೀಹ ದ್ರವ್ಯಾಣಿ ಯಜ್ಞಯೋಗ್ಯಾನಿ ತಾನಿವೈ ।
ಮೇಲಯಿತ್ವಾ ತ್ವರೇಣೈವ ವೈರೋಚನಿರುದಾರಧೀಃ ॥ ೨೮೧ ॥
ಪ್ರವರ್ತಿತೋ ಮಹಾಯಜ್ಞೋ ಭಾರ್ಗವೇಣ ಮಹಾತ್ಮನಾ ।
ದೀಕ್ಷಾಯುಕ್ತೋ ಬಲಿರಭೂಜ್ಜುಹುವೇ ಹವ್ಯವಾಹನಂ ॥ ೨೮೨ ॥
ಹೂಯಮಾನೇ ತದಾಗ್ನೌ ತು ಕರ್ಮಣಾ ವಿಧಿಹೇತುನಾ ।
ತಸ್ಮಾದ್ಬಲೇಃ ಸಮುತ್ಪನ್ನಃ ಸ್ಯಂದನಃ ಪರಮಾದ್ಭುತಃ ॥ ೨೮೩ ॥
ಹಯೈಶ್ಚತುರ್ಭಿಸ್ಸಂಯುಕ್ತೋ ಧ್ವಜೇ ಸಿಂಹೋ ಮಹಾಪ್ರಭಃ ।
ಶಸ್ತ್ರಾಸ್ತ್ರೈಃ ಸಂಯುತಃ ಶ್ರೀಮಾನ್ ಹಯೈಃ ಶ್ವೇತೈರಲಂಕೃತಃ ॥ ೨೮೪ ॥
ತತಶ್ಚಾವಭೃತಸ್ನಾನಂ ಚಕ್ರೇ ಶುಕ್ರಪ್ರಣೋದಿತಃ ।
ಸ್ಯಂದನಂ ಪೂಜಯಿತ್ವಾ ಆರುರೋಹ ಬಲಿಸ್ತದಾ ॥ ೨೮೫ ॥
ದೈತ್ಯೈಃ ಪರಿವೃತಃ ಸದ್ಯೋ ಯೋದ್ಧುಕಾಮಃ ಪುರಂದರಂ ।
ಸದ್ಯ ಏವ ದಿವಂ ಪ್ರಾಪ್ತೋ ಬಲಿರ್ವೈರೋಚನೋ ಮಹಾನ್ ॥ ೨೮೬ ॥
ಆಗತ್ಯ ಸೇನಯಾ ಸಾರ್ಧಮಾರುರೋಹಾಮರಾವತೀಂ ।
ಸಂರುದ್ಧಾಂ ತಾಂ ಪುರೀಂ ದೃಷ್ಟ್ವಾ ತದಾ ತೇ ಸುರಸತ್ತಮಾಃ ।
ವಿಮರ್ಶಯಿತ್ವಾ ಸುಚಿರಮೂಚುಃ ಸರ್ವೇ ಬೃಹಸ್ಪತಿಂ ॥ ೨೮೭ ॥

---

೨೮೧–೮೫. ಭೃಗುನಂದನನಾದ ಶುಕ್ರಾಚಾರ್ಯನಿಂತು ನುಡಿಯಲು ಆ ಬಲಿದಾನವನು ಆ ಮಹಾಯಾಗವನ್ನು ಮಾಡಲುಜ್ಜುಗಿಸಿ, ಆ ಯಾಗಕ್ಕೆ ಯಾವ ಯಾವ ದ್ರವ್ಯಗಳು ಬೇಕೋ ಅವುಗಳೆಲ್ಲವನ್ನೂ ಜಾಗ್ರತೆಯಾಗಿಯೇ ಕೂಡಿಸಿಕೊಂಡನು. ತರುವಾಯ ಅವನಿಗೆ ಮಹಾತ್ಮನಾದ ಆ ಶುಕ್ರನೇ ಯಾಗವನ್ನು ಮಾಡಿಸಿದನು. ದೀಕ್ಷಾಯುಕ್ತನಾದ ಬಲಿಯು ಹೋಮ ದ್ರವ್ಯಗಳಿಂದ ಹವ್ಯವಾಹನನಲ್ಲಿ ವಿಧಿಪೂರ್ವಕವಾಗಿ ಹೋಮ ಮಾಡಿದನು. ಈ ರೀತಿ ವಿಧಿವತ್ತಾಗಿ ಅಗ್ನಿಯಲ್ಲಿ ಹೋಮಮಾಡುತ್ತಿರಲು ಆ ಅಗ್ನಿಕುಂಡದಿಂದ ಪರಮಾದ್ಭುತವಾದ ರಥವು ಹುಟ್ಟಿತು. ಪ್ರಕಾಶಮಾನವಾದ ನಾಲ್ಕು ಬಿಳಿಯ ಕುದುರೆಗಳೊಡಗೂಡಿ ಸಿಂಹಧ್ವಜವುಳ್ಳುದಾಗಿ, ಶಸ್ತ್ರಾಸ್ತ್ರಗಳಿಂದ ಕೂಡಿದ ಆ ರಥವು ಬಹಳವಾಗಿ ಕಂಗೊಳಿಸುತ್ತಲಿದ್ದಿತು. ಹೀಗೆ ವಿಜಯರಥವು ದೊರೆತ ಬಳಿಕ, ಆ ಬಲಿದಾನವನು ಶುಕ್ರಾಚಾರ್ಯನು ಹೇಳಿದಂತೆ ಅವಭೃತಸ್ನಾನವನ್ನು ಮಾಡಿ ಆ ರಥವನ್ನು ಪೂಜಿಸಿ ಅದನ್ನೇರಿದನು.

೨೮೬–೯೧. ತರುವಾಯ ಮಹಾತ್ಮನೂ, ವಿರೋಚನನ ಮಗನೂ ಆದ ಆ ಬಲಿಯು ದೈತ್ಯರೆಲ್ಲರೊಡಗೂಡಿ ದೇವೇಂದ್ರನೊಡನೆ ಕೂಡಲೇ ಯುದ್ಧಮಾಡ ಬಯಸಿ ದೈತ್ಯಸೇನೆಯೊಡನೆಯೇ ಅಮರಾವತಿಗೇರಿ ಬಂದನು. ಸೇನೆಯು

ಕಿಂಕುರ್ಮೋಽದ್ಯ ಮಹಾಭಾಗ ಆಗತಾ ದೈತ್ಯಪುಂಗವಾಃ ।
ಯೋದ್ಧುಕಾಮಾ ಮಹಾಘೋರಾಃ ಸರ್ವೇ ಯುದ್ಧವಿಶಾರದಾಃ ॥೨೮೮॥
ತೇಷಾಂ ತದ್ವಚನಂ ಶ್ರುತ್ವಾ ಬೃಹಸ್ಪತಿರಭಾಷತ ॥ ೨೮೯ ॥
ಏತೇ ಬಲಿಮುಖಾ ಘೋರಾ ಭೃಗುಣಾ ನೋದಿತಾಃ ಸುರಾಃ ।
ಅಜೇಯಾಶ್ಚೈವ ತೇ ಸರ್ವೇ ತಪಸಾ ವಿಕ್ರಮೇಣ ಚ ॥ ೨೯೦ ॥
ಏತನ್ನಿಶಮ್ಯ ವಚನಂ ಚ ಗುಣಾಭಿಯುಕ್ತಂ
ಸರ್ವೇಽಸುರಾಃ ಸಮಭವಂಸ್ತ್ರಪಯಾಭಿಯುಕ್ತಾಃ ।
ಇಂದ್ರೋಽಪಿ ಬುದ್ಧಿವಿಕಲಃ ಪರಿಚಿಂತಯಾ ಚ
ವ್ರೀಡಾಯುತಃ ಸ ವಿಭವನ್ಪರಿಭರ್ತ್ಸ್ಯಮಾನಃ ॥ ೨೯೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ
"ಬಲಿದೈತ್ಯಸ್ಯ ಸಂಗ್ರಾಮೋದ್ಯೋಗ ವರ್ಣನಂ" ನಾಮ
ಸಪ್ತದಶೋಽಧ್ಯಾಯಃ

---

ತಮ್ಮ ಪಟ್ಟಣಕ್ಕೆ ಮುತ್ತಿಗೆ ಹಾಕಿದುದನ್ನು ಕಂಡು ದೇವತೆಗಳೆಲ್ಲರೂ ಬಹಳ ಹೊತ್ತು ಆಲೋಚಿಸಿ, ತರುವಾಯ ಗುರುವಾದ ಬೃಹಸ್ಪತಿಯನ್ನು ಕುರಿತು, "ಎಲೈ ಗುರುವೇ! ಯುದ್ಧವಿಶಾರದರೂ, ಮಹಾ ಭಯಂಕರರೂ ಆದ ದೈತ್ಯ ಪುಂಗವರೆಲ್ಲರೂ ನಮ್ಮೊಡನೆ ಯುದ್ಧಮಾಡಲು ಇಲ್ಲಿಗೈತಂದಿರುವರು. ಈಗ ನಾವು ಮಾಡಬೇಕಾದುದೇನು?" ಎಂದು ಕೇಳಿದರು. ಅವರ ಈ ಮಾತನ್ನು ಕೇಳಿ ಬೃಹಸ್ಪತಿಯು, "ಅಯ್ಯಾ ದೇವತೆಗಳಿರಾ! ಈಗಲೀ ದಾನವರೆಲ್ಲರನ್ನೂ ಶುಕ್ರಾಚಾರ್ಯನೇ ಪ್ರೇರಿಸಿ ಕಳುಹಿಸಿರುವನು. ಆದುದರಿಂದ ಈ ಸಮಯದಲ್ಲಿ ಇವರನ್ನು ತಪಸ್ಸಿನಿಂದಾಗಲಿ, ಪರಾಕ್ರಮದಿಂದಾಗಲಿ ಗೆಲ್ಲುವುದು ಅಸಾಧ್ಯವು" ಎಂದು ಹೇಳಿದನು. ಗುಣಯುಕ್ತವಾದ ಈ ಮಾತನ್ನು ಕೇಳಿ ದೇವತೆಗಳೆಲ್ಲರೂ ನಾಚಿ ತಲೆತಗ್ಗಿಸಿದರು. ದೇವರಾಜನಾದ ಇಂದ್ರನೂ ಸಹ ಬುದ್ಧಿಶೂನ್ಯನಾಗಿ ಯೋಚನೆಗೀಡಾಗಿ ನಾಚಿದುದೂ ಅಲ್ಲದೆ ಎಲ್ಲರ ಅವಹೇಳನಕ್ಕೂ ಗುರಿಯಾದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ
"ನಮುಚಿ ವಧೆ – ಬಲಿಯು ಯುದ್ಧಸನ್ನದ್ಧನಾದುದು" ಎಂಬ
ಹದಿನೇಳನೆಯ ಅಧ್ಯಾಯವು ಮುಗಿದುದು

|| ೨೯೪ ||

## ಅಷ್ಟಾದಶೋಽಧ್ಯಾಯಃ

### ಬಲಿಯಜ್ಞಂ ಪ್ರತಿ ವಾಮನಾಗಮನವರ್ಣನಂ

ಲೋಮಶ ಉವಾಚ :—

ಕರ್ಮಣಾ ಪರಿಭೂತೋ ಹಿ ಮಹೇಂದ್ರೋ ಗುರುಮಬ್ರವೀತ್ ।
ವಿನಾ ಯತ್ನೇನ ಸಂಕ್ಲೇಶಾತ್ತತ್ಕರ್ಮ ಕಿಮುಚ್ಯತಾಂ || ೧ ||
ಬೃಹಸ್ಪತಿರುವಾಚೇದಂ ತ್ಯಕ್ತ್ವಾ ಚೈವಾಮರಾವತೀಂ ।
ಯಾಸ್ಯಾಮೋಽನ್ಯತ್ರ ಸರ್ವೇಽಪ್ಯೇ ಸಕುಟುಂಬಾ ಜಿಗೀಷವಃ || ೨ ||
ತಥಾ ಚಕ್ರುಃ ಸುರಾಃ ಸರ್ವೇ ಹಿತ್ವಾ ಚೈವಾಮರಾವತೀಂ ।
ಬರ್ಹಿಣೋ ರೂಪಮಾಸ್ಥಾಯ ಗತಃ ಸದ್ಯಃ ಪುರಂದರಃ || ೩ ||
ಕಾಕೋ ಭೂತ್ವಾ ಯಮಃ ಸಾಕ್ಷಾತ್ಕೃಕಲಾಸೋ ಧನಾಧಿಪಃ ।
ಅಗ್ನಿಃ ಕಪೋತಕೋ ಭೂತ್ವಾ ಭೇಕೋ ಭೂತ್ವಾ ಮಹೇಶ್ವರಃ || ೪ ||
ನೈರ್ಋತಸ್ತತ್ಕ್ಷಣಾದೇವ ಕಪೋತೋಽಭೂತ್ತತೋ ಗತಃ ।
ಪಾಶೀ ಕಪಿಂಜಲೋ ಭೂತ್ವಾ ವಾಯುಃ ಪಾರಾವತೋಽಭವತ್ || ೫ ||

---

### ಕನ್ನಡದ ಅನುವಾದ

#### ಬಲಿಯ ಯಜ್ಞವಾಟಿಕೆಗೆ ವಾಮನಮೂರ್ತಿಯ ಆಗಮನ

೧. ಲೋಮಶನು ಹೇಳುತ್ತಾನೆ:—ಅಯ್ಯಾ ಶೌನಕಾದಿ ಮುನಿಗಳಿರಾ! ಇಂತು ಕರ್ಮವಿಪಾಕದಿಂದ ತಿರಸ್ಕೃತನಾದ ಮಹೇಂದ್ರನು ಬೃಹಸ್ಪತ್ಯಾಚಾರ್ಯನನ್ನು ಕುರಿತು, "ಗುರುವೇ! ಯಾವ ಪ್ರಯತ್ನವನ್ನೂ ಮಾಡದೆ ಸುಲಭವಾಗಿ ಕರ್ಮವನ್ನು ಕಳೆದುಕೊಳ್ಳುವುದು ಹೇಗೆಂಬುದನ್ನು ಹೇಳುವವನಾಗು" ಎಂದು ಕೇಳಿದನು.

೨. ಆಗ ಬೃಹಸ್ಪತಿಯು "ಮಹೇಂದ್ರಾ! ನಾವೆಲ್ಲರೂ ಪರಿವಾರದೊಡಗೂಡಿ ಮುಂದೆ ಈ ದಾನವರನ್ನು ಗೆಲ್ಲುವ ಉದ್ದೇಶದಿಂದ ಅಮರಾವತಿಯನ್ನು ತೊರೆದು ಮತ್ತೆಲ್ಲಿಗಾದರೂ ಹೊರಟುಹೋಗೋಣ" ಎಂದು ಹೇಳಿದನು.

೩–೫. ಅಂತೆಯೇ ಆ ದೇವತೆಗಳೆಲ್ಲರೂ ಅಮರಾವತಿಯನ್ನು ಬಿಟ್ಟು ಹೊರಟುಹೋದರು. ಪುರಂದರನು ನವಿಲಿನ ರೂಪವನ್ನು ತಾಳಿ ಹೊರಟನು. ಸಾಕ್ಷಾತ್ ಯಮನು ಕಾಗೆಯ ರೂಪವನ್ನೂ, ಕುಬೇರನು ಹಲ್ಲಿಯ ರೂಪವನ್ನೂ, ಅಗ್ನಿಯು ಪಾರಿವಾಳವಾಗಿಯೂ, ಮಹೇಶ್ವರನು ಕಪ್ಪೆಯಾಗಿಯೂ, ನಿರ್ಋತಿಯು ಪಾರಿವಾಳವಾಗಿಯೂ, ವರುಣನು ಕಪಿಂಜಲವಾಗಿಯೂ, ವಾಯುವು ಕೋತಿಯಾಗಿಯೂ ಹೊರಟರು.

**ಏವಂ ನಾನಾತನುಭೃತೋ ಹಿತ್ವಾ ತೇ ತ್ರಿದಿವಾಗತಾಃ ।**
**ಕಶ್ಯಪಸ್ಯಾಶ್ರಮಂ ಪುಣ್ಯಂ ಸಂಪ್ರಾಪ್ತಾಸ್ತೇ ಭಯಾತುರಾಃ ॥ ೬ ॥**
**ಅದಿತಿಂ ಮಾತರಂ ಸರ್ವೇ ಶಶಂಸುರ್ದೈತ್ಯಚೇಷ್ಟಿತಂ ॥ ೭ ॥**
**ಅಪ್ರಿಯಂ ತದುಪಾಕರ್ಣ್ಯ ಹ್ಯದಿತಿಃ ಪುತ್ರಲಾಲಸಾ ।**
**ಉವಾಚ ಕಶ್ಯಪಂ ಸಾತು ಸುರಾಣಾಂ ವ್ಯಸನಂ ಮಹತ್ ।**
**ಮಹರ್ಷೇ ಶ್ರೂಯತಾಂ ವಾಕ್ಯಂ ಶ್ರುತ್ವಾ ತತ್ಕರ್ತುಮರ್ಹಸಿ ॥ ೮ ॥**
**ದೈತ್ಯೈಃ ಪರಾಜಿತಾ ದೇವಾ ಹಿತ್ವಾ ಚೈವಾಮರಾವತೀಂ ।**
**ತ್ವದೀಯಮಾಶ್ರಮಂ ಪ್ರಾಪ್ತಾಸ್ತಾನ್ರಕ್ಷಸ್ವ ಪ್ರಜಾಪತೇ ॥ ೯ ॥**
**ತಸ್ಯಾಸ್ತದ್ವಚನಂ ಶ್ರುತ್ವಾ ಕಶ್ಯಪೋ ವಾಕ್ಯಮಬ್ರವೀತ್ ।**
**ತಪಸಾ ಮಹತಾ ತನ್ವಿ ಜಾನೀಹಿ ತ್ವಂ ಚ ಭಾಮಿನಿ ।**
**ಅಜೇಯೋ ಹ್ಯಸುರಾಃ ಸಾಧ್ವಿ ಭೃಗುಣಾ ಹ್ಯನುಮೋದಿತಾಃ ॥ ೧೦ ॥**
**ತೇಷಾಂ ಜಯೋ ಹಿ ತಪಸಾ ಉಗ್ರೇಣಾದ್ಯೇನ ಭಾಮಿನಿ ।**
**ಕುರು ಶೀಘ್ರತರೇಣೈವ ಸುರಾಣಾಂ ಕಾರ್ಯಸಿದ್ಧಯೇ ॥ ೧೧ ॥**

---

೬–೮. ಹೀಗೆ ಬಗೆಬಗೆಯ ರೂಪಗಳನ್ನು ತಾಳಿ ಆ ದೇವತೆಗಳೆಲ್ಲರೂ ಅಮರಾವತಿಯನ್ನು ತೊರೆದು ಕಶ್ಯಪನ ಪುಣ್ಯಾಶ್ರಮಕ್ಕೆ ಬಂದರು. ಅವರೆಲ್ಲರೂ ತಮ್ಮ ತಾಯಿಯಾದ ಅದಿತಿದೇವಿಗೆ ದೈತ್ಯರು ಮಾಡಿದ ಕಾರ್ಯವೆಲ್ಲವನ್ನೂ ಅರಿಕೆಮಾಡಿದರು. ಪುತ್ರವಾತ್ಸಲ್ಯವುಳ್ಳ ಆ ದೇವಿಯು ಅಪ್ರಿಯವಾದ ಆ ವೃತ್ತಾಂತವೆಲ್ಲವನ್ನೂ ಕೇಳಿ ದುಃಖಿತೆಯಾಗಿ, ದೇವತೆಗಳಿಗೆ ಬಂದಿರುವ ಆ ಮಹಾಕಷ್ಟವೆಲ್ಲವನ್ನೂ ತನ್ನ ಪತಿಯಾದ ಕಶ್ಯಪನಿಗೆ ತಿಳಿಸಿ "ಓ ಮಹರ್ಷಿ! ಈ ವೃತ್ತಾಂತವನ್ನು ಕೇಳಿದೆಯಲ್ಲವೆ! ಇದಕ್ಕಾವ ಪ್ರತೀಕಾರವನ್ನು ಮಾಡಬೇಕೋ ಅದನ್ನು ಮಾಡುವವನಾಗು.

೯–೧೦. ಈಗ ದೇವತೆಗಳೆಲ್ಲರೂ ದೈತ್ಯರಿಂದ ಪರಾಜಿತರಾಗಿ ಅಮರಾವತಿಯನ್ನು ತೊರೆದು ನಿನ್ನ ಆಶ್ರಮಕ್ಕೆ ಬಂದಿರುವರು. ಅವರನ್ನು ಕಾಪಾಡು" ಎಂದು ತಿಳಿಸಿದಳು. ಆಕೆಯ ಈ ಮಾತನ್ನು ಕೇಳಿ ಆತನು ಅವಳನ್ನು ಕುರಿತು, "ಎಲೆ ಭಾಮಿನಿ! ಭೃಗುಪುತ್ರನಾದ ಶುಕ್ರಾಚಾರ್ಯನಿಂದ ಪ್ರೇರಿತರಾದ ಈ ದೈತ್ಯರನ್ನು ಮಹತ್ತರವಾದ ತಪಸ್ಸಿನಿಂದಲೂ ಗೆಲ್ಲಲು ಅಸಾಧ್ಯವೆಂಬ ವಿಷಯವನ್ನು ತಿಳಿದುಕೊಳ್ಳುವವಳಾಗು.

೧೧–೧೫. ಎಲೌ ಸಾಧ್ವಿಯೇ! ಆ ಅಸುರರು ಮೊದಲು ತಾವೆಸಗಿದ ಭಯಂಕರ ತಪಸ್ಸಿನಿಂದಲೇ ವಿಜಯವನ್ನು ಪಡೆದಿರುವರಷ್ಟೆ! ಆದುದರಿಂದ ಈಗ ನೀನು ಈ ದೇವತೆಗಳ ಕಾರ್ಯಸಿದ್ಧಿಗಾಗಿ ನಾನು ಹೇಳುವ ವ್ರತವನ್ನು ಜಾಗ್ರತೆಯಾಗಿ ಮಾಡುವವಳಾಗು. ಎಲೌ ಮಂಗಳಕರಳೇ! ನೀನು

ವ್ರತಮೇತನ್ಮಹಾಭಾಗೇ ಕಥಯಾಮ್ಯರ್ಥಸಿದ್ಧಯೇ ।
ತತ್ಕುರುಷ್ವ ಪ್ರಯತ್ನೇನ ಯಥೋಕ್ತವಿಧಿನಾ ಶುಭೇ ॥ ೧೨ ॥
ಮಾಸಿ ಭಾದ್ರಪದೇ ದೇವಿ ದಶಮ್ಯಾಂ ನಿಯತಾ ಶುಚಿಃ ।
ಏಕಭುಕ್ತಂ ಪ್ರಕುರ್ವೀತ ವಿಷ್ಣೋಃ ಪ್ರೀತ್ಯರ್ಥಮೇವಚ ॥ ೧೩ ॥
ಪ್ರಾರ್ಥನೀಯೋ ಹರಿಃ ಸಾಕ್ಷಾತ್ಸರ್ವಕಾಮವರೇಶ್ವರಃ ।
ಮಂತ್ರೇಣಾನೇನ ಸುಭಗೇ ತದ್ಭಕ್ತೈರ್ವರವರ್ಣಿನಿ ॥ ೧೪ ॥
ತವಭಕ್ತೋಽಸ್ಮ್ಯಹಂ ನಾಥ ದಶಮ್ಯಾದಿ ದಿನತ್ರಯಂ ।
ವ್ರತಂ ಚರಾಮ್ಯಹಂ ವಿಷ್ಣೋ ಅನುಜ್ಞಾಂ ದಾತುಮರ್ಹಸಿ ॥ ೧೫ ॥
ಅನೇನೈವ ಚ ಮಂತ್ರೇಣ ಪ್ರಾರ್ಥನೀಯೋ ಜಗತ್ಪತಿಃ ।
ಏಕಭುಕ್ತಂ ಪ್ರಕುರ್ವೀತ ತಚ್ಚ ಭಕ್ತಂ ಚ ಕೇವಲಂ ॥ ೧೬ ॥
ರಂಭಾಪತ್ರೇ ಚ ಭೋಕ್ತವ್ಯಂ ವರ್ಜಿತಂ ಲವಣೇನ ಹಿ ।
ಏಕಾದಶ್ಯಾಂ ಚೋಪವಾಸಂ ಪ್ರಕುರ್ವೀತ ಪ್ರಯತ್ನತಃ ॥ ೧೭ ॥
ರಾತ್ರೌ ಜಾಗರಣಂ ಕುರ್ಯಾತ್ ಪ್ರಯತ್ನೈಃ ಸುಮಧ್ಯಮೇ ।
ದ್ವಾದಶ್ಯಾಂ ನಿಪುಣತ್ವೇನ ಪಾರಣಾ ತು ವಿಧಾನತಃ ।
ಕರ್ತವ್ಯಾ ಜ್ಞಾನಿಭಿಃ ಸಾರ್ಧಂ ಭೋಜಯಿತ್ವಾ ದ್ವಿಜೋತ್ತಮಾನ್ ॥೧೮॥

---

ಈ ವ್ರತವನ್ನು ಈಗ ನಾನು ಹೇಳುವಂತೆ ವಿಧಿವತ್ತಾಗಿ ಮಾಡಬೇಕು. ಭಾದ್ರಪದ ಮಾಸದ ಶುಕ್ಲ ದಶಮಿಯಲ್ಲಿ ನಿಯಮವನ್ನು ತಾಳಿ ಶುಚಿಯಾಗಿ ವಿಷ್ಣುವಿನ ಪ್ರೀತ್ಯರ್ಥವಾಗಿ ಒಪ್ಪತ್ತು ಊಟವನ್ನು ಮಾಡಿಕೊಂಡು ಸರ್ವಾಭೀಷ್ಟ ವರಪ್ರದನಾದ ಆ ಹರಿಯನ್ನು ಪ್ರಾರ್ಥಿಸಬೇಕು. ಎಲೈ ಪುಣ್ಯವತಿಯೇ! ವಿಷ್ಣುಭಕ್ತರೆಲ್ಲರೂ ಈ ಮಂತ್ರದಿಂದಾತನನ್ನು ಸ್ತುತಿಸಬೇಕು: 'ಓ ಸ್ವಾಮಿ! ನಾನು ನಿನ್ನ ಭಕ್ತನಾಗಿರುವೆನು. ದಶಮಿಯಿಂದ ಮೊದಲುಗೊಂಡು ಮೂರು ದಿನಗಳು ವ್ರತವನ್ನಾಚರಿಸುವೆನು. ನನಗೆ ಅಪ್ಪಣೆಯನ್ನು ದಯಪಾಲಿಸು.'

೧೬–೨೦. ಆ ಜಗತ್ಪತಿಯನ್ನು ಈ ಮಂತ್ರದಿಂದ ಪ್ರಾರ್ಥಿಸಿಕೊಂಡ ಬಳಿಕ ಏಕಭುಕ್ತವನ್ನು ಮಾಡಬೇಕು. ಲವಣವರ್ಜಿತವಾದ ಆ ಭೋಜನವನ್ನು ಬಾಳೆಯ ಎಲೆಯಲ್ಲಿಯೇ ಮಾಡತಕ್ಕದು. ಪ್ರತಿಯಾದವನು ಮಾರನೆಯ ಏಕಾದಶಿಯ ದಿನದಲ್ಲಿ ಪ್ರಯತ್ನಪೂರ್ವಕವಾಗಿ ಉಪವಾಸವನ್ನು ಮಾಡಬೇಕು. ಎಲೈ ಸುಮಧ್ಯಮೇ! ಅಂದಿನ ರಾತ್ರಿ ನಿಯಮದಿಂದ ಜಾಗರಣೆಯನ್ನೂ ಮಾಡಿ ಆ ಮಾರನೆಯ ದ್ವಾದಶಿಯ ದಿನ ಶಾಸ್ತ್ರೋಕ್ತವಾಗಿ ಬ್ರಾಹ್ಮಣ ಭೋಜನವನ್ನು ಮಾಡಿಸಿ ನೆಂಟರೊಡಗೂಡಿ ಪಾರಣೆಯನ್ನು ಮಾಡತಕ್ಕದು. ಈ ವ್ರತವನ್ನು ಈ ರೀತಿ ಹನ್ನೆರಡು ತಿಂಗಳುಗಳೂ (ಒಂದು ವರುಷ ಕಾಲ) ನಿಷ್ಠೆಯಿಂದ ಮಾಡಬೇಕು. ಭಾದ್ರಪದಮಾಸದ ಶುಕ್ಲಪಕ್ಷದ ಏಕಾದಶಿಯ ದಿನ ಕಲಶವನ್ನು

ಏವಂ ದ್ವಾದಶಮಾಸಾಂಸ್ತು ಕುರ್ಯಾದ್ವ್ರತಮತಂದ್ರಿತಃ ।
ಮಾಸಿ ಭಾದ್ರಪದೇ ಪ್ರಾಪ್ತೇ ಏಕಾದಶ್ಯಾಂ ಪ್ರಯತ್ನತಃ ।
ವಿಷ್ಣುಮಭ್ಯರ್ಚ್ಯ ಯತ್ನೇನ ಕಲಶೋಪರಿ ಸಂಸ್ಥಿತಂ ॥ ೧೯ ॥
ಸೌವರ್ಣಂ ರಾಜತಂ ವಾಪಿ ಯಥಾ ಶಕ್ತ್ಯಾ ಪ್ರಕಲ್ಪಯೇತ್ ।
ಶ್ರವಣೇನತು ಸಂಯುಕ್ತಾಂ ದ್ವಾದಶೀಂ ಪಾಪನಾಶಿನೀಂ ।
ವ್ರತೀ ಉಪವಸೇದ್ಯತ್ನಾತ್ಸರ್ವದೋಷಪ್ರಶಾಂತಯೇ ॥ ೨೦ ॥
ಏವಂ ಹಿ ಕಶ್ಯಪೇನೋಕ್ತಂ ಶ್ರುತ್ವಾಽದಿತಿರಥಾಚರತ್ ।
ವ್ರತಂ ಸಾಂವತ್ಸರಂ ಯಾವನ್ನಿಯಮೇನ ಸಮನ್ವಿತಾ ॥ ೨೧ ॥
ವರ್ಷಾಂತೇನ ವ್ರತೇನೈವ ಪರಿತುಷ್ಟೋ ಜನಾರ್ದನಃ ।
ಪ್ರಾದುರ್ಬಭೂವ ದ್ವಾದಶ್ಯಾಂ ಶ್ರವಣೇನ ತದಾ ದ್ವಿಜಾಃ ॥ ೨೨ ॥
ವಟುರೂಪಧರಃ ಶ್ರೀಶೋ ದ್ವಿಭುಜಃ ಕಮಲೇಕ್ಷಣಃ ।
ಅತಸೀಪುಷ್ಪಸಂಕಾಶೋ ವನಮಾಲಾವಿಭೂಷಿತಃ ॥ ೨೩ ॥
ತಂ ದೃಷ್ಟ್ವಾ ವಿಸ್ಮಯಾವಿಷ್ಟಾ ಪೂಜಾಮಧ್ಯೇಽದಿತಿಸ್ತದಾ ।
ಕಶ್ಯಪೇನ ಸಮಾಯುಕ್ತಾ ಸಾಽಸ್ತೌಷೀತ್ಕಮಲೇಕ್ಷಣಾ ॥ ೨೪ ॥

ಅದಿತಿರುವಾಚ :—

ನಮೋನಮಃ ಕಾರಣಕಾರಣಾಯ
ವಿಶ್ವಾತ್ಮನೇ ವಿಶ್ವಸೃಜೇ ಚಿದಾತ್ಮನೇ ।
ವರೇಣ್ಯ ರೂಪಾಯ ಪರಾಪರಾತ್ಮನೇ
ಹ್ಯಂಕುಂಠಬೋಧಾಯ ನಮೋ ನಮಸ್ತೇ ॥ ೨೫ ॥

---

ಸ್ಥಾಪನೆಮಾಡಿ, ಚಿನ್ನ ಅಥವಾ ಬೆಳ್ಳಿಯಲ್ಲಿ ವಿಷ್ಣುವಿನ ಪ್ರತಿಮೆಯನ್ನು ಯಥಾ ಶಕ್ತಿಯಿಂದ ಮಾಡಿಸಿ ಅದರ ಮೇಲಿಟ್ಟು ಭಕ್ತಿಪೂರ್ವಕವಾಗಿ ಪೂಜೆಮಾಡಿ ಮಾರನೆಯ ದಿನ ಶ್ರವಣನಕ್ಷತ್ರಯುಕ್ತವೂ, ಪಾಪನಾಶಕವೂ ಆದ ದ್ವಾದಶಿಯ ದಿನ ಸರ್ವದೋಷಗಳ ಶಾಂತ್ಯರ್ಥವಾಗಿ ಉಪವಾಸವನ್ನು ಮಾಡಬೇಕು.''

೨೧–೨೫. ಎಲೈ ಮುನಿಗಳಿರಾ! ಆ ಕಶ್ಯಪಬ್ರಹ್ಮನೀರೀತಿ ಹೇಳಲು, ಆತನ ಪತ್ನಿಯಾದ ಅದಿತಿಯು ಒಂದು ವರ್ಷಕಾಲ ಆ ಶ್ರವಣದ್ವಾದಶೀ ವ್ರತವನ್ನು ಬಹಳ ನಿಯಮನಿಷ್ಠೆಯಿಂದ ಆಚರಿಸಿದಳು. ವರ್ಷವು ಮುಗಿದ ಬಳಿಕ ಭಾದ್ರಪದ ಶುಕ್ಲ ಶ್ರವಣದ್ವಾದಶಿಯು ಬರಲಾಗಿ, ಅಂದು ಶ್ರೀಮನ್ಮಹಾವಿಷ್ಣುವು ಆಕೆಯ ವ್ರತದಿಂದ ಸುಪ್ರೀತನಾಗಿ ಆಕೆಗೆ ಪ್ರತ್ಯಕ್ಷನಾದನು. ಆಗಲಾತನು ದ್ವಿಭುಜನೂ, ಕಮಲೇಕ್ಷಣನೂ, ಅತಸೀ ಪುಷ್ಪಸಮಾನವಾದ ನೀಲಕಾಂತಿಯುಳ್ಳವನೂ, ವನಮಾಲಾಲಂಕೃತನೂ, ವಟುರೂಪಧರನೂ ಆಗಿ ವಿರಾಜಿಸುತ್ತಿದ್ದನು. ಇಂತಹ ಆ ಸ್ವಾಮಿಯನ್ನು ಪೂಜೆ ಮಾಡುತ್ತಿರುವಾಗಲೇ ಕಂಡು, ಆ ಅದಿತೀದೇವಿಯು

ಇತಿ ಸ್ತುತಸ್ತದಾಽದಿತ್ಯಾ ದೇವಾನಾಂ ಪತಿರಚ್ಯುತಃ ।
ಪ್ರಹಸ್ಯ ಭಗವಾನಾಹ ಅದಿತಿಂ ದೇವಮಾತರಂ ॥ ೨೬ ॥

ಶ್ರೀ ಭಗವಾನುವಾಚ:—

ತಪಸಾ ಪರಮೇಣೈವ ಪ್ರಸನ್ನೋಽಹಂ ತವಾನಘೇ ।
ಅಮುನಾ ವಪುಷಾ ಚೈವ ದೇವಾನಾಂ ಕಾರ್ಯಸಿದ್ಧಯೇ ॥ ೨೭ ॥
ಶ್ರುತ್ವಾ ಭಗವತೋ ವಾಕ್ಯಮದಿತಿಸ್ತಮುವಾಚ ಹ ।
ಭಗವನ್ಪರಾಜಿತಾ ದೇವಾ ಅಸುರೈರ್ಬಲವತ್ತರೈಃ ।
ತಾನ್ರಕ್ಷ ಶರಣಾಪನ್ನಾನ್ಸುರಾನ್ಸರ್ವಾನ್ ಜನಾರ್ದನ ॥ ೨೮ ॥

ನಿಶಮ್ಯ ವಾಕ್ಯಂ ಕಿಲ ತಚ್ಚ ತಸ್ಯಾ
ವಿಷ್ಣುರ್ವಿಕುಂಠಾಧಿಪತಿಃ ಸ ಏಕಃ ।
ಜ್ಞಾತ್ವಾ ಚ ಸರ್ವಂ ಸುರಚೇಷ್ಟಿತಂ ತದಾ
ಬಲೇಶ್ಚ ಸರ್ವಂ ಚ ಚಿಕೀರ್ಷಿತಂ ಚ ॥ ೨೯ ॥

---

ಪರಮಾಶ್ಚರ್ಯಭರಿತಳಾಗಿ ತನ್ನ ಪತಿದೇವನಾದ ಕಶ್ಯಪಬ್ರಹ್ಮನೊಡಗೂಡಿ ಆತನನ್ನು ಈ ಪ್ರಕಾರ ಸ್ತುತಿಸಿದಳು. ಅದಿತಿಯು ಹೇಳುತ್ತಾಳೆ.—"ಓ ದೇವದೇವ! ಕಾರಣಗಳೆಲ್ಲಕ್ಕೂ ಕಾರಣನಾಗಿ, ವಿಶ್ವರೂಪನಾಗಿ, ವಿಶ್ವವೆಲ್ಲವನ್ನೂ ಸೃಜಿಸುವವನಾಗಿ, ಜ್ಞಾನಸ್ವರೂಪನಾಗಿ, ವರೇಣ್ಯರೂಪನೂ, ಪರಮಾತ್ಮನೂ, ಅಮಿತಬೋಧಸ್ವರೂಪನೂ ಆಗಿರುವ ನಿನಗೆ ನಮೋ ನಮಃ."

೨೬–೩೧. ಇಂತು ಸ್ತುತಿಸಿದ ಬಳಿಕ ದೇವತೆಗಳಿಗೆಲ್ಲ ಒಡೆಯನಾದ ಆ ಮಹಾವಿಷ್ಣುವು ನಸುನಗೆಯೊಡಗೂಡಿ ದೇವಮಾತೆಯಾದ ಆಕೆಯನ್ನು ಕುರಿತು ಹೀಗೆಂದನು. ಶ್ರೀಮನ್ಮಹಾವಿಷ್ಣುವು ಹೇಳುತ್ತಾನೆ:— "ಎಲೌ ನಿಷ್ಪಾಪಳೇ! ನೀನೆಸಗಿದ ಉತ್ತಮೋತ್ತಮವಾದ ತಪಸ್ಸಿನಿಂದ ಪ್ರಸನ್ನನಾಗಿ ನಾನಿಂತು ಈ ವಟುರೂಪವನ್ನು ಧರಿಸಿ ನಿನ್ನ ಕೋರಿಕೆಯಂತೆ ದೇವತೆಗಳ ಕಾರ್ಯಸಿದ್ಧಿಗಾಗಿ ಇಲ್ಲಿಗೈತಂದಿರುವೆನು." ಇಂತು ಬೆಸಸಿದ ಆ ಸ್ವಾಮಿಯನ್ನು ಕುರಿತು ಅದಿತಿಯು, "ದೇವ! ಮಹಾಬಲಿಷ್ಠರಾದ ದೈತ್ಯರಿಂದ ದೇವತೆಗಳೆಲ್ಲರೂ ಪರಾಜಿತರಾಗಿರುವರು. ಓ ಜನಾರ್ದನ! ಹೀಗೆ ಪರಾಜಿತರಾಗಿ ನಿನ್ನನ್ನೇ ಶರಣುಹೊಕ್ಕಿರುವ ಇವರೆಲ್ಲರನ್ನೂ ಸಂರಕ್ಷಿಸು" ಎಂದು ಪ್ರಾರ್ಥಿಸಿದಳು. ಅದಿತಿಯ ಪ್ರಾರ್ಥನೆಯನ್ನು ಲಾಲಿಸಿ ಕೇಳಿದ ತರುವಾಯ ಆ ವೈಕುಂಠಪತಿಯು ದೇವತೆಗಳು ಮಾಡಿದ ಕಾರ್ಯವನ್ನೂ, ಅದಕ್ಕೆ ಪ್ರತಿಯಾಗಿ ಬಲಿದಾನವನೆಸಗಿದುದನ್ನೂ ತನ್ನಲ್ಲಿಯೇ ತಿಳಿದುಕೊಂಡು ಆಲೋಚಿಸಿ, "ಈಗ ನಾನು ಏನುಮಾಡಬೇಕು? ಯಾವ ಕಾರ್ಯವನ್ನೆಸಗಿದರೆ ದೇವತೆಗಳು ವಿಜಯವನ್ನು ಪಡೆದಾರು? ದೈತ್ಯಶ್ರೇಷ್ಠರೆಲ್ಲರೂ ಪರಾಜಯ ಹೊಂದುವ ಬಗೆಯೆಂತು?"

ಕಿಂ ಕಾರ್ಯಮುದ್ದಿಶ್ಯೈವ ಮಯಾ ಹಿ ಕಾರ್ಯಂ
ಯೇನೈವ ದೇವಾ ಜಯಮಾಪ್ನುವಂತಿ ।
ಪರಾಜಯಂ ದೈತ್ಯವರಾಶ್ಚ ಸರ್ವೇ ವಿಷ್ಣುಃ
ಪರಾತ್ಮೈವ ವಿಚಿಂತ್ಯ ಸರ್ವಂ ॥ ೩೦ ॥
ಗದಾಮುವಾಚ ಭಗವಾನ್ಗಚ್ಛಸ್ವಾದ್ಯ ವಧಂ ಪ್ರತಿ ।
ವೈರೋಚನಂ ಮಹಾಭಾಗೇ ಘಾತಯಸ್ವ ತ್ವರಾನ್ವಿತಾ ॥ ೩೧ ॥
ಗದೋವಾಚ ಹೃಷೀಕೇಶಂ ಪ್ರಹಸನ್ನಿವ ಭಾಮಿನೀ ।
ಮಯಾಪ್ಯಶಕ್ಯೋ ವಧಿತುಂ ಬ್ರಹ್ಮಣ್ಯೋ ಹಿ ಬಲಿರ್ಮಹಾನ್ ॥ ೩೨ ॥
ಚಕ್ರಂ ಪ್ರತಿ ತದಾ ವಿಷ್ಣುರುವಾಚ ಪರಿಸಾಂತ್ವಯನ್ ।
ತ್ವಂ ಗಚ್ಛ ಬಲಿನಂ ಹಂತುಂ ಶೀಘ್ರಮೇವ ಸುದರ್ಶನ ॥ ೩೩ ॥
ತದೋವಾಚ ತ್ವರೇಣೈವ ಚಕ್ರಪಾಣಿಂ ಸುದರ್ಶನಂ ।
ನ ಶಕ್ಯತೇ ಮಯಾ ಹಂತುಂ ಬಲಿನಂ ತಂ ಮಹಾಪ್ರಭೋ ॥ ೩೪ ॥
ಬ್ರಹ್ಮಣ್ಯೋಽಸಿ ಯಥಾ ವಿಷ್ಣೋ ತಥಾಽಸೌ ದೈತ್ಯಪುಂಗವಃ ।
ಧನುಷಾ ಚ ತಥೈವೋಕ್ತಃ ಶಾರ್ಙ್ಗಪಾಣಿಶ್ಚ ವಿಸ್ಮಿತಃ ।
ಚಿಂತಯಾಮಾಸ ಬಹುಧಾ ವಿಮೃಶ್ಯ ಸುಚಿರಂ ಬಹು ॥ ೩೫ ॥

---

ಎಂದು ಮೊದಲಾಗಿ ಎಲ್ಲವನ್ನೂ ನಿಶ್ಚಯಿಸಿಕೊಂಡನು. ತರುವಾಯ ಪರಮಾತ್ಮನಾದ ಆ ವಿಷ್ಣುವು ತನ್ನ ಗದೆಯನ್ನು ಕುರಿತು, "ಎಲೈ ಮಹಾಭಾಗೆಯಾದ ಗದೆಯೇ! ನೀನೀಗಲೇ ಬಲಿಯ ಬಳಿಗೆ ಹೋಗಿ ಅವನನ್ನು ಬೇಗನೆ ಸಂಹರಿಸಿ ಬರುವವಳಾಗು" ಎಂದನು.

೩೨–೩೫. ಆಗಲಾ ಗದೆಯು ನಗುತ್ತ, "ಎ ಹೃಷೀಕೇಶ! ಮಹಾತ್ಮನಾದ ಆ ಬಲಿಯು ಬ್ರಾಹ್ಮಕರ್ಮದಲ್ಲಿ ತೊಡಗಿರುವನಾದುದರಿಂದ ಅವನನ್ನು ಸಂಹರಿಸುವ ಈ ಕಾರ್ಯವು ನನ್ನಿಂದ ಸಾಧ್ಯವಾಗುವುದಿಲ್ಲ" ಎಂದು ಹೇಳಿದಳು. ಆಗ ಮಹಾವಿಷ್ಣುವು ಚಕ್ರಾಯುಧವನ್ನು ಸಮಾಧಾನಗೊಳಿಸಿ ಅದನ್ನು ಕುರಿತು, "ಎಲೈ ಸುದರ್ಶನವೇ! ಬಲಿದಾನವನನ್ನು ಸಂಹರಿಸಲು ನೀನೀಗಲೇ ಜಾಗ್ರತೆಯಾಗಿ ತೆರಳು" ಎಂದನು. ಸುದರ್ಶನವು ಆ ಚಕ್ರಪಾಣಿಯನ್ನು ಕುರಿತು, "ಎಲೈ ಮಹಾಪ್ರಭುವೇ! ಈ ಬಲಿಯನ್ನು ಕೊಲ್ಲಲು ನನ್ನಿಂದ ಸಾಧ್ಯವಾಗುವುದಿಲ್ಲ. ಎಲೈ ಸ್ವಾಮಿಯೇ! ನೀನೆಂತು ಬ್ರಹ್ಮಣ್ಯನಾಗಿರುವೆಯೋ ಅಂತೆಯೇ ಈ ದೈತ್ಯಪುಂಗವನೂ ಬ್ರಹ್ಮಣ್ಯನಾಗಿರುವನು" ಎಂದು ಹೇಳಿತು. ಶಾರ್ಙ್ಗಚಾಪವೂ ಹೀಗೆಯೇ ಹೇಳಿದ ಬಳಿಕ ಆ ಶಾರ್ಙ್ಗಪಾಣಿಯು ಆಶ್ಚರ್ಯಪಟ್ಟು, ಬಹಳ ಹೊತ್ತು ಹಲವು ರೀತಿ ಆಲೋಚಿಸತೊಡಗಿದನು.

ಅತ್ರಿರುವಾಚಃ :—

ತದಾ ತೇ ಹ್ಯಸುರಾಃ ಸರ್ವೇ ಕಿಮಕುರ್ವನ್ಸ್ತದುಚ್ಯತಾಂ ॥ ೩೬ ॥

ಲೋಮಶ ಉವಾಚ :—

ತದಾ ತೇ ಹ್ಯಸುರಾಃ ಸರ್ವೇ ಬಲಿಪ್ರಭೃತಯೋ ದಿವಿ ।
ರುರುಧುರ್ನಗರೀಂ ರಮ್ಯಾಂ ಯೋದ್ಧುಕಾಮಾಃ ಪುರಂದರಂ ॥ ೩೭ ॥
ನ ವಿದುರ್ಹ್ಯಸುರಾಃ ಸರ್ವೇ ಗತಾನ್ದೇವಾಂಸ್ತ್ರಿವಿಷ್ಟಪಾತ್ ।
ನಾನಾರೂಪಧರಾಂಸ್ತಸ್ಮಾತ್ಕಶ್ಯಪಸ್ಯಾಶ್ರಮಂ ಪ್ರತಿ ॥ ೩೮ ॥
ಪ್ರಾಕಾರಮಾರುಹ್ಯ ತದಾ ಹಿ ಸಂಭ್ರಮಾ
ದ್ದೈತ್ಯಾಃ ಸುರೇಶಂ ಪ್ರತಿಹಂತುಕಾಮಾಃ ।
ಯಾವತ್ಪ್ರವಿಷ್ಟಾಹ್ಯಮರಾವತೀಂ ತಾಂ
ಶೂನ್ಯಾಮಪಶ್ಯನ್ಪರಿತುಷ್ಟಮಾನಸಾಃ ॥ ೩೯ ॥
ಇಂದ್ರಾಸನೇ ಚ ಶುಕ್ರೇಣ ಹ್ಯಭಿಷಿಕ್ತೋ ಬಲಿಸ್ತದಾ ।
ಮಹಾಭಿಷೇಕವಿಧಿನಾ ಹ್ಯಸುರೈಃ ಪರಿವಾರಿತಃ ॥ ೪೦ ॥

---

೩೬–೪೦. ಲೋಮಶಮಹರ್ಷಿಯು ಈ ಪ್ರಕಾರ ನುಡಿಯಲು, ಪುರಾಣ ಶ್ರವಣವನ್ನು ಮಾಡುತ್ತಿದ್ದವರಲ್ಲಿ ಒಬ್ಬನಾದ ಅತ್ರಿಮಹಾಮುನಿಯು ಆತನನ್ನು ಕುರಿತು ಹೀಗೆಂದನು. "ಅಯ್ಯಾ ಸೂತಪುರಾಣಿಕನೇ! ಇತ್ತಲೀ ವೃತ್ತಾಂತ ವಿಂತಿರಲಾಗಿ ಅತ್ತಲಾ ದಾನವರೆಲ್ಲರೂ ಏನುಮಾಡುತ್ತಿದ್ದರೆಂಬ ಸಂಗತಿಯನ್ನು ತಿಳಿಸುವವನಾಗು." ಲೋಮಶನು ಹೇಳುತ್ತಾನೆ:—ಕೇಳಿರೈ ಋಷಿಗಳಿರಾ! ಆಗ ಬಲಿಯೇ ಮೊದಲಾದ ಅಸುರರೆಲ್ಲರೂ ದೇವೇಂದ್ರನೊಡನೆ ಯುದ್ಧಮಾಡ ಬಯಸಿ ಬಹು ಮನೋಹರವಾದ ಅಮರಾವತಿಯನ್ನು ಮುತ್ತಿದರು. ಅವರು ಇಂದ್ರನಾದಿಯಾದ ದೇವತೆಗಳು ಅನೇಕ ರೂಪಗಳನ್ನು ಧರಿಸಿ ಅಮರಾವತಿ ಯನ್ನು ತೊರೆದು ಕಶ್ಯಪನ ಆಶ್ರಮಕ್ಕೆ ಹೊರಟುಬಂದ ಸಂಗತಿಯನ್ನು ತಿಳಿಯಲಿಲ್ಲವು. ಆದುದರಿಂದ ಅವರು ಮಹೋತ್ಸಾಹಪೂರಿತರಾಗಿ, ಇಂದ್ರನನ್ನು ಸಂಹರಿಸಲು ಅಮರಾವತಿಯ ಪ್ರಾಕಾರವನ್ನೇರಿ ಪಟ್ಟಣವನ್ನು ಪ್ರವೇಶಿಸಿ ನೋಡಲಾಗಿ ಅದೆಲ್ಲವೂ ಶೂನ್ಯವಾಗಿದ್ದಿತು. ದೇವತೆಗಳಾರೂ ಅಲ್ಲಿಲ್ಲದಿರುವುದನ್ನು ಕಂಡು ಅವರಿಗೆ ಬಹಳ ಸಂತೋಷವಾಯಿತು. ಬಳಿಕ ದೈತ್ಯಗುರುವಾದ ಶುಕ್ರಾಚಾರ್ಯನು ದೈತ್ಯರೊಡಗೂಡಿದ ಬಲಿಯನ್ನು ವಿಧಿವತ್ತಾಗಿ ಇಂದ್ರನ ಸಿಂಹಾಸನದಲ್ಲಿ ಕುಳ್ಳಿರಿಸಿ ಪಟ್ಟಾಭಿಷಿಕ್ತನನ್ನಾಗಿ ಮಾಡಿದನು.

ತಥೈವಾಧಿಷ್ಠಿತೋ ರಾಜ್ಯೇ ಬಲಿರ್ವೈರೋಚನೋ ಮಹಾನ್ ।
ಶುಶುಭೇ ಪರಯಾ ಭೂತ್ಯಾ ಮಹೇಂದ್ರಾಧಿಕೃತಸ್ತದಾ ॥ ೪೧ ॥
ನಾಗೈಶ್ಚಾಸುರಸಂಘೈಶ್ಚ ಸೇವ್ಯಮಾನೋ ಮಹೇಂದ್ರವತ್ ।
ಸುರದ್ರುಮೋ ಜಿತಸ್ತೇನ ಕಾಮಧೇನುರ್ಮಣಿಸ್ತಥಾ ॥ ೪೨ ॥
ದಾನೈರ್ದಾತಾ ಚ ಸರ್ವೇಷಾಂ ಯೋಽನ್ಯೇ ದಾಸಿತ್ವಮಾಗತಾಃ ।
ಸರ್ವೇಷಾಮೇವ ಭೂತಾನಾಂ ದಾನೈರ್ದಾತಾ ಬಲಿರ್ಮಹಾನ್ ॥ ೪೩ ॥
ಯಾನ್ಯಾನ್ಕಾಮಯತೇ ಕಾಮಾಂಸ್ತಾನ್ಸರ್ವಾನ್ವಿತರತ್ಯಸೌ ।
ಸರ್ವೇಭ್ಯೋಽಪಿ ಸ ಚಾರ್ಥಿಭ್ಯೋ ದಾನವಾನಾಮಧೀಶ್ವರಃ ॥ ೪೪ ॥

ಶೌನಕ ಉವಾಚ :—

ದೇವೇಂದ್ರೋಽಪಿ ಮಹಾಭಾಗ ನದದಾತಿ ಕದಾಚ ನ ।
ಕಥಂ ಬಲಿರಸೌ ದಾತಾ ಕಥ್ಯತಾಂ ಯಥಾ ತಥಂ ॥ ೪೫ ॥
ಯತ್ನತೋ ಯೇನ ಯತ್ಕಿಂಚಿತ್ಕ್ರಿಯತೇ ಸುಕೃತಂ ನರೈಃ ।
ಶುಭಂ ವಾಪ್ಯಶುಭಂ ವಾಪಿ ಜ್ಞಾತವ್ಯಂ ಹಿ ವಿಪಶ್ಚಿತಾ ॥ ೪೬ ॥
ಶಕ್ರೋಽಪಿ ಯಾಜ್ಞಿಕೋ ವಿಪ್ರಾ ಅಶ್ವಮೇಧಶತೇನ ವೈ ।
ಪ್ರಾಪ್ತರಾಜ್ಯೋಽಮರಾವತ್ಯಾಂ ಕೇವಲಂ ಭೋಗಲೋಲುಪಃ ॥ ೪೭ ॥

---

೪೧–೪೪. ಈ ರೀತಿ ದೇವರಾಜ್ಯದಲ್ಲಿ ಮಹೇಂದ್ರನ ಪದವಿಯನ್ನೇರಿ ಪಟ್ಟಾಭಿಷಿಕ್ತನಾದ ಆ ಬಲಿದಾನವೇಂದ್ರನು ಪಾತಾಳವಾಸಿಗಳಾದ ನಾಗರಿಂದಲೂ, ದೈತ್ಯರಿಂದಲೂ ಓಲೈಸಿಕೊಳ್ಳುತ್ತ ಮಹೇಂದ್ರನಂತೆಯೇ ಬಹಳವಾಗಿ ಶೋಭಿಸಿದನು. ಆ ಮಹಾದಾನವನು ಕಾಳಗವಿಲ್ಲದೆಯೇ ದೇವದ್ರುಮವಾದ ಕಲ್ಪವೃಕ್ಷವನ್ನೂ, ಕಾಮಧೇನುವನ್ನೂ, ಚಿಂತಾಮಣಿ ಮೊದಲಾದ ರತ್ನಗಳನ್ನೂ ಪಡೆದು ವಿಜಯಿಯಾದನು. ದಾನವಾಧೀಶ್ವರನಾದ ಬಲಿಯು ದಾನಿಗಳಿಗೆಲ್ಲ ದಾಸಿಯೆನಿಸಿದನು. ಆ ಮಹಾತ್ಮನು ಅರ್ಥಿಗಳಾದವರು ಏನನ್ನು ಕೇಳಿದರೂ, ಅದನ್ನೆಲ್ಲ ಅವರಿಗೆ ದಾನಮಾಡಿದನು.

೪೫–೫೦. ಲೋಮಶಮಹರ್ಷಿಯಿಂತೆನಲು, ಶೌನಕನು ಅವನನ್ನು ಕುರಿತು, "ಎಲೈ ಮುನಿಯೇ! ದೇವೇಂದ್ರನು ಯಾವಾಗಲೂ ದಾನಮಾಡಿದುದಿಲ್ಲ. ಹೀಗಿರಲು ಈ ಬಲಿಯು ದಾಸಿಯಾದುದೆಂತು? ಈ ವಿಷಯವನ್ನು ತಿಳಿಸುವವನಾಗು" ಎಂದು ಹೇಳಿದನು. ಆಗ ಲೋಮಶನು ಹೇಳುತ್ತಾನೆ:—ಅಯ್ಯಾ ಮುನಿಗಳಿರಾ! ಬುದ್ಧಿಶಾಲಿಗಳಾದವರು, ಲೋಕದಲ್ಲಿ ಮಾನವರು ಪುಣ್ಯವನ್ನೇ ಆಗಲಿ, ಪಾಪವನ್ನೇ ಆಗಲಿ ಪ್ರಯತ್ನಪೂರ್ವಕವಾಗಿ ಮಾಡುತ್ತಾರೆಯೇ ಇಲ್ಲವೆ ಎಂಬ ವಿಷಯವನ್ನು ಅರಿತುಕೊಳ್ಳಬೇಕು. ಕೇಳಿರಿ! ದೇವೇಂದ್ರನು ಸೋಮಯಾಜಿ. ನೂರು ಅಶ್ವಮೇಧಯಾಗಗಳನ್ನು ಮಾಡಿ ಇಂದ್ರಪಟ್ಟಕ್ಕೆ ಬಂದು

ಆರ್ಥಿಕಂ ತತ್ಫಲಂ ವಿದ್ಧಿ ಪುನಃ ಕಾರ್ಪಣ್ಯಮಾವಿಶತ್ ।
ಪುನರ್ಮರಣಮಾವಿಶ್ಯ ಕ್ಷೀಣಪುಣ್ಯೋ ಭವಿಷ್ಯತಿ ॥ ೪೮ ॥
ಯ ಇಂದ್ರಃ ಕೃಮಿರೇವ ಸ್ಯಾತ್ಕೃಮಿರಿಂದ್ರೋ ಹಿ ಜಾಯತೇ ।
ತಸ್ಮಾದ್ದಾನಾತ್ಪರತರಂ ನಾನ್ಯದಸ್ತೀಹ ಮೋಚನಂ ॥ ೪೯ ॥
ದಾನಾದ್ವಿ ಪ್ರಾಪ್ಯತೇ ಜ್ಞಾನಂ ಜ್ಞಾನಾನ್ಮೋಕ್ಷೋ ನ ಸಂಶಯಃ ।
ಮೋಕ್ಷಾತ್ಪರತರಾ ಭಕ್ತಿಃ ಶೂಲಪಾಣೌ ಹಿ ವೈ ದ್ವಿಜಾಃ ॥ ೫೦ ॥
ದದಾತಿ ಸರ್ವಂ ಸರ್ವೇಶಃ ಪ್ರಪನ್ನಾತ್ಮಾ ಸದಾಶಿವಃ ।
ಕಿಂಚಿದಲ್ಪೇನ ತೋಯೇನ ಪರಿತುಷ್ಯತಿ ಶಂಕರಃ ॥ ೫೧ ॥
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ವಿರೋಚನಸುತೇನೇದಂ ಕೃತಮಸ್ತಿ ನ ಸಂಶಯಃ ॥ ೫೨ ॥
ಕಿತವೋ ಹಿ ಮಹಾಪಾಪೋ ದೇವಬ್ರಾಹ್ಮಣ ನಿಂದಕಃ ।
ನಿಕೃತ್ಯಾ ಪರಯೋಪೇತಃ ಪರದಾರರತೋ ಮಹಾನ್ ॥ ೫೩ ॥

---

ಅಮರಾವತಿಯ ರಾಜ್ಯವನ್ನು ಪಡೆದವನು. ಅವನು ಕೇವಲ ಭೋಗಗಳಲ್ಲಿ ಲೋಲುಪನಾಗಿ ಆ ಪದವಿಯನ್ನಾಶಿಸಿದನು. ಅದಕ್ಕೆ ಫಲವಾಗಿ ಅವನಿಗೆ ಇಂದ್ರಪದವಿಯು ಲಭಿಸಿತು. ಅವನು ಇಂದ್ರಪದವಿಗೆ ಬಂದಮೇಲೆ ಔದಾರ್ಯವನ್ನು ದೂರಮಾಡಿ ಕೇವಲ ಜಿಪುಣನಾದನು. ಏನನ್ನೂ ದಾನಮಾಡಲಿಲ್ಲ. ಅವನು ಮಾಡಿರುವ ಪುಣ್ಯವೆಲ್ಲವೂ ಮುಗಿದುಹೋದಬಳಿಕ ಮತ್ತೆ ಮರ್ತ್ಯಲೋಕಕ್ಕಿಳಿಯುವನು. ಅಯ್ಯಾ ಮುನಿಗಳಿರಾ! ಯಾವನು ಇಂದ್ರನಾಗಿರುತ್ತಾನೆಯೋ ಅವನೇ ಕೃಮಿಯಾಗಿಯೂ ಹುಟ್ಟಬಹುದು. ಕೃಮಿಯು ಪುಣ್ಯಕರ್ಮದಿಂದ ಇಂದ್ರನಾಗಲೂಬಹುದು. ಆದುದರಿಂದ ಈ ಲೋಕದಲ್ಲಿ ದಾನಕ್ಕಿಂತಲೂ ಮುಕ್ತಿಪ್ರದವಾದುದೂ, ಶ್ರೇಷ್ಠವಾದುದೂ ಬೇರಾವುದೂ ಇರುವುದಿಲ್ಲವು. ದಾನದಿಂದಲೇ ಜ್ಞಾನವು ದೊರಕುತ್ತದೆ; ಜ್ಞಾನದಿಂದ ಮೋಕ್ಷವು ಲಭಿಸುವುದು. ಇದರಲ್ಲಿ ಸಂದೇಹವಿಲ್ಲ. ಎಲೈ ಬ್ರಾಹ್ಮಣರಿರಾ! ಈ ಮೋಕ್ಷಕ್ಕಿಂತಲೂ ಶ್ರೇಷ್ಠವಾದುದು ಶೂಲಪಾಣಿಯಾದ ಪರಶಿವನಲ್ಲಿನ ಭಕ್ತಿಯು.

೫೧-೫೨. ಸರ್ವೇಶ್ವರನಾದ ಆ ಸದಾಶಿವನು ಸಂತುಷ್ಟನಾದರೆ ಸಮಸ್ತವನ್ನೂ ಅನುಗ್ರಹಿಸುತ್ತಾನೆ. ಶಂಕರನು ಭಕ್ತಿಯಿಂದಿತ್ತ ಸ್ವಲ್ಪವಾದ ನೀರಿನಿಂದಲೇ ತೃಪ್ತಿಗೊಳ್ಳುವನು. ಈ ವಿಷಯದಲ್ಲಿಯೇ ಪುರಾತನವಾದ ಒಂದು ಇತಿಹಾಸವನ್ನು ಹೇಳುತ್ತಾರೆ. ಆ ಬಲಿಯಾದರೋ ಹೀಗೆ ಶಿವಭಕ್ತಿಸಂಪನ್ನನಾಗಿ ಅನೇಕ ದಾನಗಳನ್ನು ಮಾಡಿರುವನೆಂಬುದರಲ್ಲಿ ಸಂಶಯವಿಲ್ಲ.

೫೩-೫೮. ಪೂರ್ವದಲ್ಲಿ ಕಳ್ಳನೊಬ್ಬನಿದ್ದನು. ಇವನು ಮಹಾಪಾಪಿಷ್ಠನು. ಯಾವಾಗಲೂ ದೇವಬ್ರಾಹ್ಮಣರನ್ನು ದೂಷಣೆ ಮಾಡುತ್ತಿದ್ದನು. ಮಹಾ

ಏಕದಾತು ಮಹಾಪಾಪಾತ್ಕೈತವಾಚ್ಚ ಜಿತಂ ಧನಂ ।
ಗಣಿಕಾರ್ಥೇ ಚ ಪುಷ್ಪಾಣಿ ತಾಂಬೂಲಂ ಚಂದನಂ ತಥಾ ॥ ೫೪ ॥
ಕೌಪೀನಮಾತ್ರಂ ತಸ್ಯೈವ ಕಿತವಸ್ಯ ಪ್ರದೃಶ್ಯತೇ ।
ಕರಾಭ್ಯಾಂ ಸ್ವಸ್ತಿಕಂ ಕೃತ್ವಾ ಗಂಧಮಾಲ್ಯಾದಿಕಂ ಚ ಯತ್ ॥ ೫೫ ॥
ಗಣಿಕಾರ್ಥಮುಪಾದಾಯ ಧಾವಮಾನೋ ಗೃಹಂ ಪ್ರತಿ ।
ತದಾ ಪ್ರಸ್ಖಲಿತೋ ಭೂಮೌ ನಿಪಪಾತ ಚ ತತ್ಕ್ಷಣಾತ್ ॥ ೫೬ ॥
ಪತನಾನ್ಮೂರ್ಛಯಾ ಯುಕ್ತಃ ಕ್ಷಣಮಾತ್ರಂ ತದಾಭವತ್ ।
ತತೋ ಮೂರ್ಛಾಗತಸ್ಯಾಸ್ಯ ಪಾಪಿನೋಽನಿಷ್ಟಕಾರಿಣಃ ॥ ೫೭ ॥
ಬುದ್ಧಿಃ ಸದ್ಯಃ ಸಮುತ್ಪನ್ನಾ ಕರ್ಮಣಾ ಪ್ರಾಕ್ತನೇನಹಿ ।
ನಿರ್ವೇದಂ ಪರಮಾಪನ್ನಃ ಕಿತವೋ ದುಃಖಸಂಯುತಃ ॥ ೫೮ ॥
ಭೂಮ್ಯಾಂ ನಿಪತಿತಂ ಯಚ್ಚ ಗಂಧಪುಷ್ಪಾದಿಕಂ ಮಹತ್ ।
ಸಮರ್ಪಿತಂ ಶಿವಾಯೇತಿ ಕಿತವೇನಾಪ್ಯಬುದ್ಧಿನಾ ॥ ೫೯ ॥
ತೇನೈವ ಸುಕೃತೇನೈವ ಯಾಮ್ಯೈರ್ನೀತೋ ಯಮಾಲಯಂ ।
ತಂ ಪಾಪೀತಿ ಯಮೋಽವೋಚತ್ಸರ್ವಲೋಕಭಯಾವಹಃ ॥ ೬೦ ॥

---

ಪಾಪಿಷ್ಠನಾದ ಇವನು ಯಾವಾಗಲೂ ಪರಸ್ತ್ರೀಯರಲ್ಲಿಯೇ ಆಸಕ್ತನಾಗಿದ್ದನು. ಒಂದಾನೊಂದು ದಿನ ಇವನು ಮಹಾ ಪಾಪಿಷ್ಠವಾದ ಚೌರ್ಯದಿಂದ ಹಣವನ್ನು ಸಂಪಾದಿಸಿದನು. ತರುವಾಯ ಆ ಕಳ್ಳನು ಹೀಗೆ ತಾನು ಸಂಪಾದಿಸಿದ ಹಣ ದಿಂದ ಸೂಳೆಗೋಸ್ಕರವಾಗಿ ಹೂ ಗಂಧ ತಾಂಬೂಲಗಳನ್ನು ಕೊಂಡುಕೊಂಡನು. ಅವನಲ್ಲಿ ಕೇವಲ ಕೌಪೀನಮಾತ್ರವಿದ್ದುದರಿಂದ ಅವುಗಳನ್ನು ಕಟ್ಟಲು ಕೌಪೀನ ದಿಂದಲೇ ಒಂದು ಚೀಲವನ್ನು ಸ್ವಸ್ತಿಕಾಕಾರವಾಗಿ ಮಾಡಿ ಅವುಗಳೆಲ್ಲವನ್ನೂ ಅದರಲ್ಲಿಯೇ ಕಟ್ಟಿ ತಾನು ಹೋಗಬೇಕಾಗಿದ್ದ ಸೂಳೆಯ ಮನೆಗೆ ಓಡತೊಡಗಿ ದನು. ದೈವವಶದಿಂದವನು ದಾರಿಯಲ್ಲಿಯೇ ಎಡವಿ ಕೂಡಲೇ ನೆಲಕ್ಕೆ ಬಿದ್ದನು. ಬಿದ್ದೊಡನೆಯೇ ಮೂರ್ಛೆಯೊಂದಿ ಒಂದು ಕ್ಷಣಕಾಲವಿದ್ದನು. ತರುವಾಯ ಮಹಾ ಪಾಪಿಷ್ಠನಾದ ಅವನಿಗೆ ತಿಳಿವು ಬಂದಿತು. ಪ್ರಾಕ್ತನ ಪುಣ್ಯವಿಶೇಷದಿಂದ ಕೂಡಲೇ ಅವನಿಗೆ ಒಳ್ಳೆಯ ಬುದ್ಧಿಯೂ ಉಂಟಾಗಿ ಬಹಳವಾದ ವಿರಕ್ತಿಯನ್ನು ಪಡೆದು ಅವನು ತಾನು ಮಾಡಿದ ಪಾಪಕೃತ್ಯಗಳಿಗಾಗಿ ಬಹಳ ಸಂಕಟಪಟ್ಟನು.

೫೯–೬೪. ಅಯ್ಯಾ ವಿಪ್ರರೇ! ಆಗಲಾ ತಿಳಿಗೇಡಿಯಾದ ಕಳ್ಳನು ತಾನು ತಂದಿದ್ದ ಆ ಗಂಧ ಪುಷ್ಪ ತಾಂಬೂಲಗಳೆಲ್ಲ ಶಿವನಿಗೆ ಸಮರ್ಪಣೆಯಾಗ ಲೆಂದು ಹೇಳಿದನು. ಈ ಪುಣ್ಯವೊಂದರಿಂದಲೇ ಅವನು ಮೃತಿಪಟ್ಟಬಳಿಕ ಯಮಭಟರಿಂದ ಯಮಲೋಕಕ್ಕೊಯ್ಯಲ್ಪಟ್ಟನು. ಅಲ್ಲಿಯಾದರೋ ಎಲ್ಲ ಲೋಕಗಳಿಗೂ ಭಯಂಕರನಾದ ಯಮಧರ್ಮನು ಇವನನ್ನು ಕಂಡು ಇವನು

ಪಚನೀಯೋಽಸಿ ಮೇ ಮಂದ ನರಕೇಷು ಮಹತ್ಸು ಚ ।
ಇತ್ಯುಕ್ತೋ ಧರ್ಮರಾಜೇನ ಕಿತವೋ ವಾಕ್ಯಮಬ್ರವೀತ್ ॥ ೬೧ ॥
ಪಾಪಾಚಾರೋಽಹಿ ಭಗವನ್ನಕ್ಷಿಚಿನ್ನೈವ ಮಯಾ ಕೃತಃ ।
ವಿಮೃಶ್ಯತಾಂ ಮೇ ಸುಕೃತಂ ಯಾಥಾತಥ್ಯೇನ ಭೋ ಯಮ ॥ ೬೨ ॥
ಚಿತ್ರಗುಪ್ತೇನ ಚಾಖ್ಯಾತಂ ದತ್ತಮಸ್ತಿ ತ್ವಯಾ ಪುನಃ ।
ಪತಿತಂ ಚೈವ ದೇಹಾಂತೇ ಶಿವಾಯ ಪರಮಾತ್ಮನೇ ॥ ೬೩ ॥
ತೇನ ಕರ್ಮವಿಪಾಕೇನ ಘಟಿಕಾತ್ರಯಮೇವ ಚ ।
ಶಚೀಪತೇಃ ಪದಂ ವಿದ್ಧಿ ಪ್ರಾಪ್ಯಸಿ ತ್ವಂ ನ ಸಂಶಯಃ ॥ ೬೪ ॥
ಆಗತಸ್ತತ್ಕ್ಷಣಾದೇವ ಸುರೈಃ ಸರ್ವೈಃ ಸಮನ್ವಿತಃ ।
ಐರಾವತಂ ಸಮಾರೂಢೋ ನೀತೋಽಸೌ ಶಕ್ರಮಂದಿರಂ ।
ಶಕ್ರಃ ಪ್ರಬೋಧಿತಸ್ತೇನ ಗುರುಣಾ ಭಾವಿತಾತ್ಮನಾ ॥ ೬೫ ॥
ಘಟಿಕಾತ್ರಿತಯಂ ಯಾವತ್ತಾವತ್ಕಾಲಂ ಪುರಂದರ ।
ನಿಜಾಸನೇಽಪಿ ಸಂಸ್ಥಾಪ್ಯಃ ಕಿತವೋಽಪಿ ಮಮಾಜ್ಞಯಾ ॥ ೬೬ ॥

---

ಪಾಪಿಷ್ಠನೆಂದೇ ಬಗೆದು ಅವನನ್ನು ಕುರಿತು, "ಎಲೆವೋ! ಈಗ ನಿನ್ನನ್ನು ಮಹತ್ತರವಾದ ನರಕಗಳಲ್ಲಿ ಬೇಯಿಸಬೇಕು" ಎಂದನು. ಅದನ್ನು ಕೇಳಿ ಆ ಕಳ್ಳನು ಧರ್ಮರಾಜನನ್ನು ಕುರಿತು, "ಎಲೈ ಸ್ವಾಮಿಯೇ! ನಾನು ಪಾಪಿಷ್ಠನೇನೋ ಹೌದು. ನಾನು ಯಾವ ಪುಣ್ಯಕೆಲಸವನ್ನೂ ಮಾಡಿಲ್ಲ. ಆದರೂ ನಾನೇನಾದರೂ ಪುಣ್ಯಮಾಡಿದ್ದರೆ ಅದನ್ನು ಸ್ವಲ್ಪ ಯಥಾರ್ಥವಾಗಿ ಪರಿಶೀಲಿಸಬೇಕು" ಎಂದು ಹೇಳಿದನು. ಆಗ ಚಿತ್ರಗುಪ್ತನು ಅವನನ್ನು ಕುರಿತು, "ಅಯ್ಯಾ ಚೋರನೇ! ನೀನು ದೇಹಾವಸಾನಸಮಯದಲ್ಲಿ ಕೆಳಗೆ ಬಿದ್ದ ಹೂ ಗಂಧ ತಾಂಬೂಲಗಳನ್ನು ಶಿವನಿಗೆ ಅರ್ಪಣೆ ಮಾಡಿರುವೆ. ಆ ಪುಣ್ಯ ಕರ್ಮದ ಫಲವಾಗಿ ನೀನು ಮೂರು ಘಳಿಗೆಗಳ ಕಾಲ ಇಂದ್ರಪದವಿಯನ್ನು ಹೊಂದುವೆಯೆಂಬುದರಲ್ಲಿ ಸಂಶಯವಿಲ್ಲ" ಎಂದು ಹೇಳಿದನು.

೬೫–೬೮. ಎಲೈ ಶೌನಕಾದಿಗಳಿರಾ! ಯಮಕಿಂಕರನಾದ ಚಿತ್ರಗುಪ್ತನೀ ರೀತಿ ನುಡಿದ ಕ್ಷಣದಲ್ಲಿಯೇ ದೇವದೂತನೊಬ್ಬನು ಸಮಸ್ತ ದೇವತೆಗಳೊಡ ಗೂಡಿ ಅಲ್ಲಿಗೆ ಬಂದನು. ತರುವಾಯ ಆತನು ಈ ಕಳ್ಳನನ್ನು ಐರಾವತದ ಮೇಲೆ ಕುಳ್ಳಿರಿಸಿಕೊಂಡು ಅಮರಾವತಿಯಲ್ಲಿ ದೇವೇಂದ್ರನ ಅರಮನೆಗೆ ಕರೆ ತಂದನು. ಆಗ ಮಹಾಜ್ಞಾನಿಯಾದ ಬೃಹಸ್ಪತ್ಯಾಚಾರ್ಯನು ಮಹೇಂದ್ರ ನನ್ನು ಕುರಿತು, "ಪುರಂದರಾ! ಇವನು ಕಳ್ಳನಾದರೂ ಇವನನ್ನು ಮೂರು ಘಳಿಗೆಗಳ ಕಾಲ ನಿನ್ನ ಸಿಂಹಾಸನದಲ್ಲಿ ಕುಳ್ಳಿರಿಸಬೇಕು. ಇದು ನನ್ನ ಆಜ್ಞೆ"

ಗುರೋರ್ವಚನಮಾಕರ್ಣ್ಯ ಕೃತ್ವಾ ಶಿರಸಿ ತತ್ಕ್ಷಣಾತ್ ।
ಗತೋऽನ್ಯತ್ರೈವ ಶಕ್ರೋऽಸೌ ಕಿತವೋ ಹಿ ಪ್ರವೇಶಿತಃ ।
ಭವನಂ ದೇವರಾಜಸ್ಯ ನಾನಾಶ್ಚರ್ಯಸಮನ್ವಿತಂ ॥ ೬೭ ॥
ಶಕ್ರಾಸನೇऽಭಿಷಕ್ತೋऽಸೌ ರಾಜ್ಯಂ ಪ್ರಾಪ್ತಃ ಶತಕ್ರತೋಃ ।
ಶಂಭೋರ್ಗಂಧಪ್ರದಾನಾಚ್ಚ ಪುಷ್ಪತಾಂಬೂಲಸಂಯುತಂ ॥ ೬೮ ॥
ಕಿಂ ಪುನಃ ಶ್ರದ್ಧಯಾ ಯುಕ್ತಾಃ ಶಿವಾಯ ಪರಮಾತ್ಮನೇ ।
ಅರ್ಪಯಂತಿ ಸದಾ ಭಕ್ತ್ಯಾ ಗಂಧಪುಷ್ಪಾದಿಕಂ ಮಹತ್ ॥ ೬೯ ॥
ಶಿವಸಾಯುಜ್ಯಮಾಯಾತಾಃ ಶಿವಸೇವಾಸಮನ್ವಿತಾಃ ।
ಪ್ರಾಪ್ನುವಂತಿ ಮಹಾಮೋದಂ ಶಕ್ರೋ ಹ್ಯೇಷಾಂ ಚ ಕಿಂಕರಃ ॥ ೭೦ ॥
ಶಿವಪೂಜಾ ರತಾನಾಂ ಚ ಯತ್ಸುಖಂ ಶಾಂತಚೇತಸಾಂ ।
ಬ್ರಹ್ಮಶಕ್ರಾದಿಕಾನಾಂ ಚ ತತ್ಸುಖಂ ದುರ್ಲಭಂ ಮಹತ್ ॥ ೭೧ ॥
ವರಾಕಾಸ್ತೇ ನ ಜಾನಂತಿ ಮೂಢಾ ವಿಷಯಲೋಲುಪಾಃ ।
ವಂದನೀಯೋ ಮಹಾದೇವೋ ಹ್ಯರ್ಚನೀಯಃ ಸದಾಶಿವಃ ॥ ೭೨ ॥
ಪೂಜನೀಯೋ ಮಹಾದೇವಃ ಪಾಣಿಭಿಸ್ತತ್ತ್ವವೇದಿಭಿಃ ।
ತಸ್ಮಾದಿಂದ್ರತ್ವಮಗಮತ್ಕಿತವೋ ಘಟಿಕಾತ್ರಯಂ ॥ ೭೩ ॥

---

ಎಂದು ಎಚ್ಚರಿಸಿದನು ಆಗಲಾ ಮಹೇಂದ್ರನು ಗುರುವಾಕ್ಯವನ್ನು ಶಿರಸಾವಹಿಸಿ ಆ ಕೂಡಲೇ ಬೇರೊಂದೆಡೆಗೆ ಹೊರಟುಹೋದನು. ತರುವಾಯ ಕಳ್ಳನು ಬಗೆಬಗೆಯ ಆಶ್ಚರ್ಯಗಳಿಂದ ಕೂಡಿದ ಆ ಮಹೇಂದ್ರನ ಅರಮನೆಯನ್ನು ಪ್ರವೇಶಿಸಿದನು. ಅಯ್ಯಾ ವಿಪ್ರರೇ! ಸಾಕ್ಷಾತ್ ಪರಶಿವನಿಗೆ ಗಂಧಮಾಲ್ಯ ತಾಂಬೂಲಗಳನ್ನು ಸಮರ್ಪಿಸಿದ ಪುಣ್ಯದಿಂದ ಈ ಕಳ್ಳನು ದೇವೇಂದ್ರನ ಸಿಂಹಾಸನದಲ್ಲಿ ಕುಳ್ಳಿರಿಸಲ್ಪಟ್ಟು ಪಟ್ಟಾಭಿಷಿಕ್ತನಾದನು.

೬೯–೭೦. ಎಂದಬಳಿಕ ಭಕ್ತಿಶ್ರದ್ಧೆಯೊಡಗೂಡಿ ಪರಮಾತ್ಮನಾದ ಆ ಪರಶಿವನಿಗೆ ಗಂಧಪುಷ್ಪಾದಿಗಳನ್ನು ಸಮರ್ಪಣೆಮಾಡುವವರಿಗೆ ಎಂತಹ ಮಹತ್ಫಲವು ಲಭಿಸುತ್ತದೆಯೆಂಬುದನ್ನು ಯೋಚಿಸಿರಿ. ಅಂತಹರು ಶಿವಸಾಯುಜ್ಯವನ್ನೇ ಪಡೆದು ಶಿವಸೇವಾಸಮನ್ವಿತರಾಗಿ ಅತಿಶಯವಾದ ಆನಂದವನ್ನು ಪಡೆಯುತ್ತಾರೆ. ಆಗ ಅವರಿಗೆ ಈ ದೇವೇಂದ್ರನು ಕಿಂಕರನಾಗುವನಲ್ಲವೆ!

೭೧–೭೫. ಶಾಂತಚಿತ್ತರಾಗಿ ಶ್ರೀಮತ್ಪರಶಿವ ಪೂಜೆಯಲ್ಲಿ ತೊಡಗಿದ ಭಕ್ತಜನರಿಗೆ ದೊರಕುವ ಸುಖವು ಬ್ರಹ್ಮೇಂದ್ರಾದಿ ದೇವತೆಗಳಿಗೂ ದೊರಕುವುದಿಲ್ಲ. ಕೇವಲ ನೀಚರೂ, ತಿಳಿಗೇಡಿಗಳೂ ಆದ ಅವರೆಲ್ಲರೂ ವಿಷಯಾದಿಗಳಲ್ಲಿ ಲೋಲುಪರಾಗಿ ಈ ವಿಷಯವನ್ನು ತಿಳಿದುಕೊಳ್ಳುವುದಿಲ್ಲ. ಆ ಮಹಾದೇವನೇ ಲೋಕದಲ್ಲಿ ವಂದನೀಯನು; ಆ ಸದಾಶಿವನೇ ಪೂಜನೀಯನು. ತತ್ತ್ವವನ್ನರಿತ

**ಪುರೋಧಸಾಭಿಷಿಕ್ತೋಽಸೌ ಪುರಂದರಪದೇಸ್ಥಿತಃ ।**
**ತದಾನೀಂ ನಾರದೇನೋಕ್ತಃ ಕಿತವೋಽಸೌ ಮಹಾಯಶಾಃ ॥ ೭೪ ॥**
**ಇಂದ್ರಾಣೀಮಾನಯಸ್ವೇತಿ ಯಥಾ ರಾಜ್ಯಂ ಸುಶೋಭಿತಂ ।**
**ತತಃ ಪ್ರಹಸ್ಯ ಚೋವಾಚ ಕಿತವಃ ಶಿವವಲ್ಲಭಃ ॥ ೭೫ ॥**
**ಇಂದ್ರಾಣ್ಯಾ ನಾಸ್ತಿ ಮೇ ಕಾರ್ಯಂ ನ ವಾಚ್ಯಂ ತೇ ಮಹಾಮತೇ ।**
**ಏವಮುಕ್ತ್ವಾಥ ಕಿತವಃ ಪ್ರದಾತುಮುಪಚಕ್ರಮೇ ॥ ೭೬ ॥**
**ಐರಾವತಮಗಸ್ತ್ಯಾಯ ಪ್ರದದೌ ಶಿವವಲ್ಲಭಃ ।**
**ವಿಶ್ವಾಮಿತ್ರಾಯ ಕಿತವೋ ದದೌ ಹಯಮುದಾರಧೀಃ ॥ ೭೭ ॥**
**ಉಚ್ಚೈಃಶ್ರವಸಸಜ್ಞಂ ಚ ಕಾಮಧೇನುಂ ಮಹಾಯಶಾಃ ।**
**ದದೌ ವಸಿಷ್ಠಾಯ ತದಾ ಚಿಂತಾಮಣಿಂ ಮಹಾಪ್ರಭಂ ॥ ೭೮ ॥**
**ಗಾಲವಾಯ ಮಹಾತೇಜಾಸ್ತದಾ ಕಲ್ಪತರುಂ ಚ ಸಃ ।**
**ಕೌಂಡಿನ್ಯಾಯ ಮಹಾಭಾಗಃ ಕಿತವೋಽಥ ಗೃಹಂ ತದಾ ॥ ೭೯ ॥**

---

ಎಲ್ಲರೂ ಆ ಮಹಾದೇವನನ್ನೇ ಪೂಜಿಸಬೇಕು. ಶಿವಪೂಜಾಫಲದ ಪ್ರಭಾವದಿಂದಲೇ ಆ ಕಳ್ಳನು ಮೂರು ಘಳಿಗೆಗಳ ಕಾಲ ಮಹೇಂದ್ರನ ಪದವಿಯನ್ನು ಪಡೆದನು. ಈ ರೀತಿ ಪುರೋಹಿತನಾದ ಬೃಹಸ್ಪತಿಯಿಂದ ಪಟ್ಟಾಭಿಷಿಕ್ತನಾದ ಆ ಕಳ್ಳನು ಮಹೇಂದ್ರನ ಸಿಂಹಾಸನದಲ್ಲಿ ಕುಳಿತನು. ಆಗ ನಾರದಮಹರ್ಷಿಯು ಮಹಾ ಕೀರ್ತಿಶಾಲಿಯಾದ ಅವನನ್ನು ಕುರಿತು, "ಅಯ್ಯಾ! ಈಗ ನೀನು ಶಚೀದೇವಿಯನ್ನಿಲ್ಲಿಗೆ ಕರೆಯಿಸಿದರೆ ನಿನ್ನ ಈ ರಾಜ್ಯತ್ವವು ಸುಶೋಭಿತವಾಗುವುದು" ಎಂದು ಹೇಳಿದನು. ಆಗ ಮಹಾ ಶಿವಭಕ್ತನಾದ ಆ ಕಳ್ಳನು ಘಟ್ಟಿಯಾಗಿ ನಕ್ಕು ಈ ರೀತಿ ಹೇಳಿದನು.

೭೬–೮೧. "ಎಲೈ ಮಹಾಮತಿಯೇ! ಈಗ ಇಂದ್ರಾಣಿಯಿಂದ ನನಗೆ ಆಗಬೇಕಾದ ಕಾರ್ಯವಾವುದೂ ಇರುವುದಿಲ್ಲ. ಮಹಾ ಜ್ಞಾನಿಯಾದ ನೀನೀರೀತಿ ನನಗೆ ಹೇಳಲೂಬಾರದು." ಎಲೈ ಮುನಿಗಳಿರಾ! ಶಿವವಲ್ಲಭನಾದ ಆ ಕಿತವನೀರೀತಿ ನಾರದಮುನಿಗೆ ಹೇಳಿ, ಆಮೇಲೆ ಅಲ್ಲಿದ್ದುದನ್ನೆಲ್ಲ ದಾನಮಾಡಲುಪಕ್ರಮಿಸಿದನು. ಅವನು ಶಿವಪ್ರೀತ್ಯರ್ಥವಾಗಿಯೇ ಮಹೇಂದ್ರನ ಪಟ್ಟದಾನೆಯಾದ ಐರಾವತವನ್ನು ಅಗಸ್ತ್ಯಮುನಿಗೂ, ಪಟ್ಟದ ಕುದುರೆಯಾದ ಉಚ್ಚೈಃಶ್ರವಸ್ಸನ್ನು ವಿಶ್ವಾಮಿತ್ರನಿಗೂ, ಕಾಮಧೇನುವನ್ನು ವಸಿಷ್ಠನಿಗೂ, ಮಹಾಕಾಂತಿಯುಕ್ತವಾದ ಚಿಂತಾಮಣಿಯನ್ನು ಗಾಲವಮುನಿಗೂ, ಕಲ್ಪವೃಕ್ಷವನ್ನೂ ಆ ಮಹೇಂದ್ರನ ಭವನವನ್ನೂ ಕೌಂಡಿನ್ಯಮಹರ್ಷಿಗೂ ಉದಾರಬುದ್ಧಿಯಿಂದ ದಾನಮಾಡಿ ಮಹಾ ಕೀರ್ತಿಶಾಲಿಯೂ, ಮಹಾ ಪುಣ್ಯಶಾಲಿಯೂ ಆದನು. ಇಷ್ಟೆಯಲ್ಲದೆ ಇಂತಹ ಅನೇಕ ರತ್ನಗಳನ್ನಿವನು ಶಿವಪ್ರೀತ್ಯರ್ಥವಾಗಿ ಅಲ್ಲಿದ್ದ

ಏವಮಾದೀನ್ಯನೇಕಾನಿ ರತ್ನಾನಿ ವಿವಿಧಾನಿ ಚ ।
ದದಾವೃಷಿಭ್ಯೋ ಮುದಿತಃ ಶಿವಪ್ರೀತ್ಯರ್ಥಮೇವಚ ॥ ೮೦ ॥
ಘಟಿಕಾತ್ರಿತಯಂ ಯಾವತ್ತಾವತ್ಕಾಲಂ ದದೌ ಪ್ರಭುಃ ।
ಘಟಿಕಾತ್ರಿತಯಾದೂರ್ಧ್ವಂ ಪೂರ್ವಸ್ವಾಮೀ ಸಮಾಗತಃ ॥ ೮೧ ॥
ಪುರಂದರೋಽಮರಾವತ್ಯಾಮುಪವಿಶ್ಯ ನಿಜಾಸನೇ ।
ಋಷಿಭಿಃ ಸಂಸ್ತುತಶ್ಚೈವ ಶಚ್ಯಾಸಹ ತದಾಭವತ್ ॥ ೮೨ ॥
ಶಚೀಮುವಾಚ ದುರ್ಮೇಧಾಃ ಕಿತವೇನಾಸಿ ಭಾಮಿನಿ ।
ಭುಕ್ತಾ ಹ್ಯಸ್ಯೈವ ಕಥಯ ಯಾಥಾತಥ್ಯೇನ ಶೋಭನೇ ॥ ೮೩ ॥
ತದಾ ಪ್ರಹಸ್ಯ ಚೋವಾಚ ಪುರಂದರಮಕಲ್ಮಷಾ ।
ಆತ್ಮೌಪಮ್ಯೇನ ಸರ್ವತ್ರ ಪಶ್ಯಸಿ ತ್ವಂ ಪುರಂದರ ॥ ೮೪ ॥

ಅಸೌ ಮಹಾತ್ಮಾ ಕಿತವಸ್ವರೂಪೀ
ಶಿವಪ್ರಸಾದಾತ್ಪರಮಾರ್ಥ ವಿಜ್ಞಃ ।
ವೈರಾಗ್ಯಯುಕ್ತೋ ಹಿ ಮಹಾನುಭಾವೋ
ಯೇನಾಪಿ ಸರ್ವಂ ಪರಮಂ ಪ್ರಪನ್ನಂ ॥ ೮೫ ॥
ರಾಜ್ಯಾದಿಕಂ ಮೋಹಮಯಂ ಚ ಪಾಶಂ
ತ್ಯಕ್ತ್ವಾ ಪರೇಭ್ಯೋ ವಿಜಯೀ ಸ ಜಾತಃ ॥ ೮೬ ॥

---

ಮಹರ್ಷಿಗಳೆಲ್ಲರಿಗೂ ದಾನಮಾಡಿದನು. ಹೀಗೆ ಆ ಪ್ರಭುವು ಮೂರು ಘಳಿಗೆಗಳ ಕಾಲವೂ ಇದೇ ರೀತಿಯಾಗಿಯೇ ದಾನಮಾಡುತ್ತಿದ್ದನು. ಆ ಮೂರು ಘಳಿಗೆಗಳು ಕಳೆಯುತ್ತಲೇ ಪೂರ್ವದ ದೊರೆಯಾದ ಮಹೇಂದ್ರನೇ ಅಲ್ಲಿಗೆ ಬಂದನು.

೮೨–೮೬. ಆ ಪುರಂದರನು ತನ್ನ ಸಿಂಹಾಸನದಲ್ಲಿ ಕುಳಿತು ಋಷಿಗಳೆಲ್ಲರೂ ತನ್ನನ್ನು ಸ್ತುತಿಸಿದ ಬಳಿಕ ಶಚಿಯು ಬಳಿಗೈದಿದನು. ಆಗಲಾ ದುರ್ಬುದ್ಧಿಯು ಆ ದೇವಿಯನ್ನು ಕುರಿತು, "ಎಲೆ ಭಾಮಿನಿ! ನೀನು ಈ ಕಳ್ಳನಿಂದ ಭುಕ್ತೆಯಾದೆಯೊ, ಇಲ್ಲವೊ ಎಂಬ ಸಂಗತಿಯನ್ನು ನಿಜವಾಗಿ ಹೇಳು" ಎಂದು ಕೇಳಿದನು. ಆ ಮಾತನ್ನು ಕೇಳಿ ದೋಷರಹಿತೆಯಾದ ಆಕೆಯು ಘಟ್ಟಿಯಾಗಿ ನಕ್ಕು ಅವನನ್ನು ಕುರಿತು, "ಪುರಂದರಾ! ನೀನು ಎಲ್ಲರನ್ನೂ ನಿನ್ನ ಸಾಮ್ಯದಿಂದಲೇ ನೋಡುತ್ತಿರುವೆ! ಇಲ್ಲಿ ನಿನ್ನ ಪದವಿಗೆ ಬಂದಿದ್ದವನು ಮಹಾತ್ಮನು: ಕಿತವಸ್ವರೂಪಿಯಾದ ಈತನು ಆ ಪರಶಿವನ ಅನುಗ್ರಹದಿಂದ ಪರಮಾರ್ಥವನ್ನರಿತ ಮಹಾಜ್ಞಾನಿಯು. ಮಹಾನುಭಾವನಾದ ಈತನು ವಿರಕ್ತಿಯನ್ನು ಹೊಂದಿ ಕೇವಲ ತುಚ್ಛವಾದುದೂ, ಅಜ್ಞಾನಭ್ರಾಂತಿಮಯವಾದುದೂ ಆದ ಈ ರಾಜ್ಯವೇ ಮೊದಲಾದವುಗಳನ್ನು ಇತರರಿಗೆ ಬಿಟ್ಟುಕೊಟ್ಟು ವಿಜಯಿಯಾದನು" ಎಂದು ಹೇಳಿದಳು.

ವಚೋ ನಿಶಮ್ಯ ದೇವೇಶ ಇಂದ್ರಾಣ್ಯಾಃ ಸ ಪುರಂದರಃ ।
ಐರಾವತೋ ನ ದೃಶ್ಯೇತ ತಥೈವೋಚ್ಚೈಃಶ್ರವಾ ಹಯಃ ॥ ೮೭-೮೮ ॥
ಪಾರಿಜಾತಾದಯಃ ಸರ್ವೇ ಪದಾರ್ಥಾಃ ಕೇನ ವಾ ಹೃತಾಃ ।
ತತೋ ಗುರುರುವಾಚೇದಂ ಕಿತವೇನ ಕೃತಂ ಮಹತ್ ॥ ೮೯ ॥
ಋಷಿಭ್ಯೋ ದತ್ತಮದ್ಯೈವ ಯಾವತ್ಸತ್ತಾಹಿ ತಸ್ಯ ವೈ ।
ಸ್ವಸತ್ತಾಯಾಂ ಮಹತ್ಯಾಂ ಚ ಸ್ವಸತ್ತಾ ಯೇ ಭವಂತಿ ಚ ॥ ೯೦ ॥
ಅಪ್ರಮತ್ತಾಶ್ಚ ಯೇ ನಿತ್ಯಂ ಶಿವಧ್ಯಾನಪರಾಯಣಾಃ ।
ತೇ ಪ್ರಿಯಾಃ ಶಂಕರಸ್ಯೈವ ಹಿತ್ವಾ ಕರ್ಮಫಲಾನಿ ವೈ ।
ಕೇವಲಂ ಜ್ಞಾನಮಾಶ್ರಿತ್ಯ ತೇ ಯಾಂತಿ ಪರಮಂ ಪದಂ ॥ ೯೧ ॥
ಏತಚ್ಛ್ರುತ್ವಾ ವಚನಂ ತಸ್ಯ ಚೇಂದ್ರೋ
ಬೃಹಸ್ಪತೇರ್ವಾಕ್ಯಮಿದಂ ಬಭಾಷೇ ।
ಪ್ರಾಯೋ ಯಮೋ ವಕ್ಷ್ಯತಿ ಸರ್ವಮೇತ
ತ್ಸಮೃದ್ಧಯೇ ಹ್ಯಾತ್ಮನಶ್ಚೈವ ಶಕ್ರಃ ॥ ೯೨ ॥

---

೮೭-೮೯. ದೇವೇಶ್ವರನಾದ ಆ ಪುರಂದರನು ಶಚೀದೇವಿಯ ಈ ಮಾತುಗಳನ್ನು ಕೇಳಿ ನಾಚಿ ತನ್ನ ಸಿಂಹಾಸನದಲ್ಲಿ ಸುಮ್ಮನೆ ಕುಳಿತನು. ತರುವಾಯ ಮಾತನಾಡುವುದರಲ್ಲಿ ಬಹಳ ಜಾಣನಾದ ಅವನು ತನ್ನ ಗುರುವಾದ ಬೃಹಸ್ಪತಿಯನ್ನು ಕುರಿತು, "ಗುರುವೇ! ಐರಾವತ, ಉಚ್ಚೈಃಶ್ರವಸ್ಸು, ಪಾರಿಜಾತ ಮೊದಲಾದ ಮಹಾರತ್ನಗಳೇ ಕಾಣುವುದಿಲ್ಲವಲ್ಲ! ಅವುಗಳನ್ನು ಅವಹರಿಸಿಕೊಂಡು ಹೋದವರಾರು?" ಎಂದು ಕೇಳಿದನು. ಆಗ ಬೃಹಸ್ಪತಿಯು ಕಳ್ಳನು ಮಾಡಿದ ಪುಣ್ಯಕಾರ್ಯವೆಲ್ಲವನ್ನೂ ಅವನಿಗೆ ತಿಳಿಸಿದನು.

೯೦-೯೧. "ಅಯ್ಯಾ ಮಹೇಂದ್ರನೇ! ಈಗತಾನೇ ಆ ಕಳ್ಳನು ತನ್ನ ಪದವಿಯಿದ್ದಷ್ಟುಕಾಲವೂ ಆ ರತ್ನಗಳೆಲ್ಲವನ್ನೂ ಮಹರ್ಷಿಗಳಿಗೆ ದಾನಮಾಡಿದನು. ಕೇಳು; ಲೋಕದಲ್ಲಿ ಯಾರಾದರೆ, ದೊಡ್ಡ ಪದವಿಗೆ ಬಂದು ತಮ್ಮ ಬುದ್ಧಿಯನ್ನು ತಮ್ಮ ವಶದಲ್ಲಿಟ್ಟುಕೊಂಡು ಎಚ್ಚರತಪ್ಪದೆ ಶಿವಧ್ಯಾನಪರಾಯಣರಾಗುತ್ತಾರೆಯೋ ಅವರೇ ಶಿವಪ್ರಿಯರು. ಅವರು ಕರ್ಮಫಲಗಳೆಲ್ಲವನ್ನೂ ತೊರೆದು ಕೇವಲವಾಗಿ ಜ್ಞಾನವೊಂದನ್ನೇ ನೆಮ್ಮಿ ಪರಮಪದವಿಯನ್ನು ಪಡೆಯುತ್ತಾರೆ."

೯೨-೯೭. ಬೃಹಸ್ಪತಿಯ ಈ ಮಾತನ್ನು ಕೇಳಿ ಮಹೇಂದ್ರನು, "ಬಹುಶಃ ಯಮನು ಈ ಸಂಗತಿಯೆಲ್ಲವನ್ನೂ ತಿಳಿಸುತ್ತಾನೆ" ಎಂದು ಹೇಳಿ, ಕಳೆದು ಹೋಗಿದ್ದ ತನ್ನ ಸಂಪತ್ತನ್ನು ಮತ್ತೆ ಪಡೆಯಲು ಗುರುವಿನ ಸಮ್ಮತಿಯನ್ನು ಪಡೆದು, ಅವನೊಡನೆಯೇ ಸಂಯಮಿನೀ ಪಟ್ಟಣಕ್ಕೆ ಬಂದನು. ಹೀಗೆ

ತಥೇತಿ ಮತ್ವಾ ಗುರುಣಾ ಸಹೈವ
ರಾಜಾ ಸುರಾಣಾಂ ಸಹಸಾ ಜಗಾಮ ।
ಸ್ವಕಾರ್ಯಕಾಮೋ ಹಿ ತಥಾ ಪುರಂದರೋ
ಯಯೌ ಪುರೀಂ ಸಂಯಮನೀಂ ತದಾನೀಂ ॥ ೯೩ ॥

ಯಮೇನ ಪೂಜ್ಯಮಾನೋಹಿ ಶಕ್ರೋ ವಾಕ್ಯಮುವಾಚ ಹ ।
ತ್ವಯಾ ದತ್ತಂ ಮಮ ಪದಂ ಕಿತವಾಯ ದುರಾತ್ಮನೇ ॥ ೯೪ ॥
ಅನೇನೈತತ್ಕೃತಂ ಕರ್ಮ ಜುಗುಪ್ಸಿತಮಹತ್ತರಂ ।
ಮದೀಯಾನಿ ಚ ರತ್ನಾನಿ ಯಾನಿ ಸರ್ವಾಣ್ಯನೇನ ವೈ ।
ಏಭ್ಯಸ್ತೇಭ್ಯಃ ಪ್ರದತ್ತಾನಿ ಧರ್ಮ ಜಾನೀಹಿ ತತ್ತ್ವತಃ ॥ ೯೫ ॥
ತ್ವಂ ಧರ್ಮನಾಮಾಸಿ ಕಥಂ ಕಿತವಾಯ ಪ್ರದತ್ತವಾನ್ ।
ಮಮ ರಾಜ್ಯವಿನಾಶಾಯ ಕೃತಮಸ್ತಿ ತ್ವಯಾಽಧುನಾ ॥ ೯೬ ॥
ಆನಯಸ್ವ ಮಹಾಭಾಗ ಗಜಾದೀನಿ ಚ ಸತ್ವರಂ ।
ಅನ್ಯಾನಿ ಚೈವ ರತ್ನಾನಿ ದತ್ತಾನಿ ಚ ಯತಸ್ತತಃ ॥ ೯೭ ॥
ನಿಶಮ್ಯ ವಾಕ್ಯಂ ಶಕ್ರಸ್ಯ ಯಮೋ ವಚನ ಮಬ್ರವೀತ್ ।
ಕಿತವಂ ಚ ರುಷಾವಿಷ್ಟಃ ಕಿಂ ತ್ವಯಾ ಪಾಪಿನಾ ಕೃತಂ ॥ ೯೮ ॥
ಭೋಗಾರ್ಥಂ ಚೈವ ಯದ್ದತ್ತಂ ಶಕ್ರರಾಜ್ಯಂ ತ್ವಯಾಧುನಾ ।
ಪ್ರದತ್ತಂ ಚ ದ್ವಿಜಾತಿಭ್ಯೋ ಹ್ಯನ್ಯಥಾ ವೈ ಕೃತಂ ಮಹತ್ ॥ ೯೯ ॥

---

ಸ್ವಕಾರ್ಯಸಿದ್ಧಿಯನ್ನು ಪಡೆಯಬಯಸಿ ಬಂದಿರುವ ಆ ದೇವರಾಜನನ್ನು ಕಂಡು ಯಮಧರ್ಮರಾಜನು ಗೌರವಿಸಿದನು. ಆಗಲಾ ಮಹೇಂದ್ರನು ಅವನನ್ನು ಕುರಿತು, "ಎಲೈ ಯಮನೇ! ನೀನು ಆ ಕಳ್ಳನಿಗೆ ನನ್ನ ಪದವಿಯನ್ನಿತ್ತೆ. ಅವನಾದರೋ ನನ್ನ ಪದವಿಯನ್ನೇರಿ ಸಹಿಸಲಸದಳವಾದ ಕೆಲಸವನ್ನು ಮಾಡಿರುವನು. ನನ್ನ ರತ್ನಗಳೆಲ್ಲವನ್ನೂ ಗೊತ್ತುಗುರಿಯಿಲ್ಲದೆ ಯಾರಾರಿಗೋ ದಾನ ಮಾಡಿರುವನೆಂಬುದನ್ನು ಚೆನ್ನಾಗಿ ತಿಳಿ. ನೀನು ಧರ್ಮರಾಜನೆನಿಸಿಯೂ ಈ ಕಳ್ಳನಿಗೆ ನನ್ನ ಪದವಿಯನ್ನು ಕೊಟ್ಟುದೆಂತು? ನೀನು ನನ್ನ ರಾಜ್ಯವನ್ನು ಹಾಳುಮಾಡಲೋಸುಗವೇ ಈ ರೀತಿ ಮಾಡಿದೆ. ಅಯ್ಯಾ ಪುಣ್ಯಾತ್ಮನೇ! ಈಗ ಇವನು ದಾನಮಾಡಿರುವ ಐರಾವತವೇ ಮೊದಲಾದುವುಗಳನ್ನೂ, ಇತರ ರತ್ನಗಳನ್ನೂ ಅವುಗಳೆಲ್ಲೆಲ್ಲಿರುವುವೋ ಅಲ್ಲಿಂದ ನೀನೇ ತಂದುಕೊಡಬೇಕು" ಎಂದು ಕೇಳಿದನು.

೯೮–೧೦೦. ದೇವೇಂದ್ರನ ಈ ನುಡಿಯನ್ನಾಲಿಸಿ ಯಮನು ಬಹಳವಾಗಿ ಕೋಪಗೊಂಡು ಅಲ್ಲಿಯೇ ಇದ್ದ ಆ ಕಳ್ಳನನ್ನು ಕುರಿತು, "ಎಲೆವೋ! ಏನು ಮಾಡಿದೆ! ನಿನಗೆ ಕೇವಲ ಭೋಗಾರ್ಥವಾಗಿ ಇಂದ್ರಪದವಿಯನ್ನಿತ್ತರೆ, ನೀನು

ಅಕಾರ್ಯಂ ವೈ ತ್ವಯಾ ಮೂಢ ಪರದ್ರವ್ಯಾಪಹಾರಿಣಂ ।
ತೇನ ಪಾಪೇನ ಮಹತಾ ನಿರಯಂ ಪ್ರತಿಗಚ್ಛಸಿ ॥ ೧೦೦ ॥
ಯಮಸ್ಯ ವಚನಂ ಶ್ರುತ್ವಾ ಕಿತವೋ ವಾಕ್ಯಮಬ್ರವೀತ್ ।
ಅಹಂ ನಿರಯಗಾಮೀ ಚ ನಾತ್ರಕಾರ್ಯಾ ವಿಚಾರಣಾ ॥ ೧೦೧ ॥
ಯಾವತ್ಸ್ವತಾ ಮಮ ವಿಭೋ ಜಾತಾ ಶಕ್ರಾಸನೇ ತಥಾ ।
ತಾವದ್ದತ್ತಂ ಹಿ ಯತ್ಕಿಂಚಿದ್ದ್ವಿಜೇಭ್ಯೋ ಹಿ ಯಥಾತಥಂ ॥ ೧೦೨ ॥

ಯಮ ಉವಾಚ :—

ದಾನಂ ಪ್ರಶಸ್ತಂ ಭೂಮ್ಯಾಂ ಚ ದೃಶ್ಯತೇ ಕರ್ಮಣಃ ಫಲಂ ।
ಸ್ವರ್ಗೇ ದಾನಂ ನ ದಾತವ್ಯಂ ಕೇನಚಿತ್ಕಸ್ಯಚಿತ್ಕ್ವಚಿತ್ ।
ತಸ್ಮಾದ್ದಂಡ್ಯೋಽಸಿ ರೇ ಮೂಢ ಅಶಾಸ್ತ್ರೀಯಂ ಕೃತಂ ತ್ವಯಾ ॥೧೦೩॥
ಗುರುರಾತ್ಮವತಾಂ ಶಾಸ್ತಾ ರಾಜಾ ಶಾಸ್ತಾ ದುರಾತ್ಮನಾಂ ।
ಸರ್ವೇಷಾಂ ಪಾಪಶೀಲಾನಾಂ ಶಾಸ್ತಾಽಹಂ ನಾತ್ರಸಂಶಯಃ ॥ ೧೦೪ ॥
ಏವಂ ನಿರ್ಭರ್ತ್ಸಯಿತ್ವಾ ತಂ ಕಿತವಂ ಧರ್ಮರಾಟ್ಸ್ವಯಂ ।
ಉವಾಚ ಚಿತ್ರಗುಪ್ತಂ ಚ ನರಕೇ ಪಚ್ಯತಾಮಯಂ ।
ತದಾ ಪ್ರಹಸ್ಯ ಚೋವಾಚ ಚಿತ್ರಗುಪ್ತೋ ಯಮಂ ಪ್ರತಿ ॥ ೧೦೫ ॥

---

ಅಲ್ಲಿದ್ದ ರತ್ನಾದಿಗಳನ್ನು ಬ್ರಾಹ್ಮಣರಿಗೆ ದಾನಮಾಡಿದೆ. ಇದು ಮಹಾ ಪಾಪ ಕಾರ್ಯವು. ಎಲಾ ತಿಳಿಗೇಡಿ! ನೀನು ಇತರರ ಸ್ವತ್ತನ್ನು ಅಪಹರಿಸುವಿಕೆ ಯೆಂಬ ಪಾಪವನ್ನು ಮಾಡಿರುವೆಯಾಗಿ ಈಗ ನೀನು ನರಕಕ್ಕೆ ಹೋಗುವೆ'' ಎಂದು ಹೇಳಿದನು.

೧೦೧–೨. ಇಂತು ನುಡಿದ ಯಮನ ಮಾತುಗಳನ್ನು ಕೇಳಿ ಆ ಕಳ್ಳನು, ''ನಾನು ನರಕಕ್ಕೆ ಹೋಗುವವನೇ ಸರಿ. ಅದರಲ್ಲಿ ಸಂಶಯವಿಲ್ಲ. ಎಲೈ ಪ್ರಭುವೇ! ನನಗೆ ಇಂದ್ರ ಪದವಿಯಲ್ಲಿ ಎಷ್ಟರವರೆಗೆ ಅಧಿಕಾರವಿದ್ದಿತೋ ಅಷ್ಟರ ವರೆಗೆ ಮಾತ್ರ ನಾನು ಅಲ್ಲಿದ್ದುದನ್ನು ಬ್ರಾಹ್ಮಣರಿಗೇನೋ ಸ್ವಲ್ಪ ದಾನಮಾಡಿ ದೆನು'' ಎಂದನು.

೧೦೩–೫. ಯಮನು ಹೇಳುತ್ತಾನೆ :—''ಎಲೆವೋ ತಿಳಿಗೇಡಿ! ಭೂಲೋಕ ದಲ್ಲಿ ದಾನಮಾಡುವುದು ಶ್ರೇಷ್ಠವಾದುದು. ಆ ಪುಣ್ಯಕ್ಕೆ ಇಲ್ಲಿ ಫಲವುಂಟು. ಆದರೆ ಸ್ವರ್ಗಲೋಕದಲ್ಲಿ ಯಾರೂ ಏನನ್ನೂ ದಾನಮಾಡಕೂಡದು. ಈಗ ನೀನು ಮಾಡಿರುವುದು ಶಾಸ್ತ್ರಕ್ಕೆ ವಿರುದ್ಧವಾಗಿದೆ. ಆದುದರಿಂದ ನೀನು ದಂಡಕ್ಕೆ ಅರ್ಹನಾಗಿರುವೆ. ಆತ್ಮಜ್ಞಾನಿಗಳಿಗೆಲ್ಲ ನಿಯಾಮಕನು ಗುರುವು. ದುಷ್ಟರನ್ನೆಲ್ಲ ಶಿಕ್ಷಿಸುವವನು ದೊರೆ. ನಾನಾದರೋ ಪಾಪಿಷ್ಠರಾದವರೆಲ್ಲರನ್ನೂ ಶಿಕ್ಷಿಸು ವವನು. ಇದರಲ್ಲಿ ಸಂಶಯವಿರುವುದಿಲ್ಲವು.'' ಯಮಧರ್ಮನು ಕಳ್ಳನಿಗೀರೀತಿ

ಕಥಂ ನಿರಯಗಾಮಿತ್ವಂ ಕಿತವಸ್ಯ ಭವಿಷ್ಯತಿ ।
ಯೇನ ದತ್ತೋ ಹ್ಯಗಸ್ತ್ಯಸ್ಯ ಗಜ ಐರಾವತೋ ಮಹಾನ್ ॥ ೧೦೬ ॥
ತಥಾಽಶ್ವೋ ಹ್ಯಬ್ಧಿಸಂಭೂತೋ ಗಾಲವಾಯ ಮಹಾತ್ಮನೇ ।
ವಿಶ್ವಾಮಿತ್ರಾಯ ಭದ್ರಂ ತೇ ಚಿಂತಾಮಣಿರ್ಮಹಾಪ್ರಭಃ ॥ ೧೦೭ ॥
ಏವಮಾದೀನಿ ರತ್ನಾನಿ ದತ್ತಾನಿ ಕಿತವೇನ ಹಿ ।
ತೇನ ಕರ್ಮವಿಪಾಕೇನ ಪೂಜನೀಯೋ ಜಗತ್ರಯೇ ॥ ೧೦೮ ॥
ಶಿವಮುದ್ದಿಶ್ಯ ಯದ್ದತ್ತಂ ಸ್ವರ್ಗೇ ಮರ್ತ್ಯೇ ಚ ಯೈರ್ನರೈಃ ।
ತತ್ಸರ್ವಂ ತ್ವಕ್ಷಯಂ ವಿದ್ಯಾನ್ನಚ್ಛಿದ್ರಂ ಕರ್ಮಚೋಚ್ಯತೇ ।
ತಸ್ಮಾನ್ನರಕಗಾಮಿತ್ವಂ ಕಿತವಸ್ಯ ನ ವಿದ್ಯತೇ ॥ ೧೦೯ ॥
ಯಾನಿ ಯಾನಿ ಚ ಪಾಪಾನಿ ಕಿತವಸ್ಯ ಮಹಾತ್ಮನಃ ।
ಭಸ್ಮೀಭೂತಾನಿ ಸರ್ವಾಣಿ ಜಾತಾನಿ ಸ್ಮರಣಾಚ್ಛ ವೈ ॥ ೧೧೦ ॥
ಶಂಭೋಃ ಪ್ರಸಾದಾತ್ಸರ್ವಾಣಿ ಸುಕೃತಾನಿ ಚ ತಕ್ಷಣಾತ್ ।
ತದ್ವಚಶ್ಚಿತ್ರಗುಪ್ತಸ್ಯ ನಿಶಮ್ಯ ಪ್ರೇತರಾಟ್ಸ್ವಯಂ ॥ ೧೧೧ ॥

---

ಹೇಳಿ ತನ್ನ ಕಿಂಕರನಾದ ಚಿತ್ರಗುಪ್ತನನ್ನು ಕುರಿತು, "ಇವನನ್ನು ನರಕದಲ್ಲಿ ಹಾಕಿ ಬೇಯಿಸು" ಎಂದು ಹೇಳಿದನು. ಆಗ ಚಿತ್ರಗುಪ್ತನು ನಗುತ್ತ, ಆ ಯಮನನ್ನು ಕುರಿತು ಹೀಗೆಂದನು.

೧೦೬–೧೦. "ಎಲೈ ಪ್ರಭುವೇ! ಈ ಕಳ್ಳನು ನರಕಭಾಜನನಾಗುವುದೆಂತು? ಇವನು ಅಗಸ್ತ್ಯನಿಗೆ ಐರಾವತವನ್ನೂ, ಉಚ್ಚೈಃಶ್ರವಸ್ಸನ್ನು ಮಹಾತ್ಮನಾದ ವಿಶ್ವಾಮಿತ್ರನಿಗೂ, ಹೀಗೆಯೇ ಇನ್ನೂ ಇತರ ರತ್ನಗಳನ್ನು ಇತರ ಮಹರ್ಷಿಗಳಿಗೂ ಶಿವಾರ್ಪಣಬುದ್ಧಿಯಿಂದ ದಾನಮಾಡಿರುವನು. ಆ ಪುಣ್ಯಕರ್ಮದಿಂದ ಇವನು ಮೂರು ಲೋಕಗಳಲ್ಲಿಯೂ ಪೂಜನೀಯನಾಗಿರುವನು. ಎಲೈ ಪ್ರಭುವೇ! ಭೂಲೋಕದಲ್ಲಿಯಾಗಲಿ, ಸ್ವರ್ಗಲೋಕದಲ್ಲಿಯಾಗಲಿ ಶಿವಾರ್ಪಣಬುದ್ಧಿಯಿಂದ ದಾನಮಾಡಿದುದೆಲ್ಲವೂ ಅಕ್ಷಯವಾಗುತ್ತದೆ. ಕರ್ಮವೆಂಬುದು ಛಿದ್ರವಿಲ್ಲದುದಷ್ಟೆ! ಆದುದರಿಂದ ಈ ಕಳ್ಳನಿಗೆ ನರಕವಾಸವು ಬರುವುದಿಲ್ಲ. ಇವನು ಯಾವ ಯಾವ ಪಾಪಗಳನ್ನು ಮಾಡಿದ್ದನೋ ಅವುಗಳೆಲ್ಲವೂ ಶಿವಸ್ಮರಣಮಾತ್ರದಿಂದಲೇ ಸುಟ್ಟು ಬೂದಿಯಾಗಿಹೋದುವು. ಈಶ್ವರನ ಅನುಗ್ರಹದಿಂದ ಅವೇ ಒಂದು ಕ್ಷಣಕಾಲದಲ್ಲಿ ಪುಣ್ಯಕರ್ಮಗಳಾಗಿ ಪರಿಣಮಿಸಿದುವು."

೧೧೧–೧೬. ಈ ಪ್ರಕಾರ ನುಡಿದ ಆ ಚಿತ್ರಗುಪ್ತನ ಮಾತುಗಳನ್ನು ಕೇಳಿ ಯಮನು ನಸುನಕ್ಕು ತರುವಾಯ ತಲೆತಗ್ಗಿಸಿ ಅಲ್ಲಿದ್ದ ದೇವೇಂದ್ರನನ್ನು ಕುರಿತು ಹೀಗೆಂದನು. "ಅಯ್ಯಾ! ನೋಡಿದೆಯಾ; ದೇವತೆಗಳಿಗೆಲ್ಲ ದೊರೆ

ಪ್ರಹಸ್ಯಾನಾಋ್ಮಖೋ ಭೂತ್ವಾ ಇದಮಾಹ ಶತಕ್ರತುಂ ।
ತ್ವಂ ಹಿ ರಾಜಾ ಸುರೇಂದ್ರಾಣಾಂ ಸ್ಥವಿರೋ ರಾಜ್ಯಲಂಪಟಃ ॥ ೧೧೭ ॥
ಅಶ್ವಮೇಧಶತೇನೈವ ಏಕಂ ಜನ್ಮಾರ್ಜಿತಂ ಕೃತಂ ।
ತ್ವಯಾ ನಾಸ್ತ್ಯತ್ರ ಸಂದೇಹೋ ಹ್ಯಾರ್ಜಿತಂ ತೇನ ವೈ ಮಹತ್ ॥ ೧೧೩ ॥
ಪ್ರಾರ್ಥಯಿತ್ವಾ ಹ್ಯಗಸ್ತ್ಯಾದೀನ್‌ಸರ್ವಾನ್ವಿಶೇಷತಃ ।
ಅರ್ಥೇನ ಪ್ರಣಿಪಾತೇನ ತ್ವಯಾ ಲಭ್ಯಾನಿ ತಾನಿ ಚ ।
ಗಜಾದಿಕಾನಿ ರತ್ನಾನಿ ಯೇನ ತ್ವಂ ಚ ಸುಖೀ ತ್ವರನ್ ॥ ೧೧೪ ॥
ತಥೇತಿ ಮತ್ವಾ ವಚನಂ ಪುರಂದರೋ
ಗತಃ ಪುರೀಂ ಸ್ವಾಮವಿವೇಕದೃಷ್ಟಿಃ ।
ಅಭ್ಯರ್ಥಯಾಮಾಸ ವಿನಮ್ರಕಂಧರ
ಶ್ಚರ್ಷೀಂಸ್ತತೋ ಲಬ್ಧವಾನ್ಪಾರಿಜಾತಂ ॥ ೧೧೫ ॥
ಅನೇನೈವ ಪ್ರಕಾರೇಣ ಲಬ್ಧರಾಜ್ಯಃ ಪುರಂದರಃ ।
ಜಾತಸ್ತದಾಮರಾವತ್ಯಾಂ ರಾಜಾ ಸಹಮಹಾತ್ಮಭಿಃ ॥ ೧೧೬ ॥
ಕಿತವಸ್ಯ ಪುನರ್ಜನ್ಮ ದತ್ತಂ ವೈವಸ್ವತೇನ ಹಿ ।
ಕಿಂಚಿತ್ಕರ್ಮವಿಪಾಕೇನ ವಿರೋಚನಸುತೋಽಭವತ್ ॥ ೧೧೭ ॥

---

ಯಾಗಿದ್ದರೂ ನೀನು ಬುದ್ಧಿಶೂನ್ಯನೇ ಆಗಿರುವೆ! ನೀನು ಕೇವಲ ರಾಜ್ಯ ಲಂಪಟನೂ ಆಗಿರುವೆ. ನೀನು ನಿನ್ನ ಹಿಂದಣ ಜನ್ಮದಲ್ಲಿ ನೂರು ಅಶ್ವಮೇಧ ಯಾಗಗಳನ್ನುಮಾಡಿ ಆ ಒಂದು ಪುಣ್ಯದಿಂದಲೇ ಇಂದ್ರಪದವಿಯನ್ನುಪಡೆದಿರುವೆ ಯೆಂಬುದರಲ್ಲಿ ಸಂಶಯವಿಲ್ಲವು. ಆದರೆ ಈ ಕಳ್ಳನು ನಿನಗಿಂತಲೂ ಮಹತ್ತರ ವಾದ ಪುಣ್ಯವನ್ನೇ ಸಂಪಾದಿಸಿರುವನು. ಅದಂತಿರಲಿ. ಈಗ ನೀನು ಆ ಅಗಸ್ತ್ಯಾದಿ ಮಹರ್ಷಿಗಳಿಗೆ ವಿಶೇಷವಾದ ದ್ರವ್ಯವನ್ನಿತ್ತೋ ಅಥವಾ ಅವರನ್ನು ಬೇಡಿಯೋ ಐರಾವತವೇ ಮೊದಲಾದ ಆ ರತ್ನಗಳನ್ನು ಪಡೆದುಕೊಂಡು ಸುಖಿಯಾಗು.'' ಎಲೈ ಶೌನಕಾದಿಗಳಿರಾ! ಈ ರೀತಿ ನುಡಿದ ಯಮನ ಮಾತುಗಳನ್ನು ಕೇಳಿ ಆ ಪುರಂದರನು ಹಾಗೆಯೇ ಆಗಲೆಂದು ಸಮ್ಮತಿಸಿ ತನ್ನ ಪಟ್ಟಣಕ್ಕೆ ಹಿಂತಿರುಗಿ ತನ್ನ ಅವಿವೇಕವನ್ನು ತಾನೇ ಕಂಡುಕೊಂಡು ಆ ಮಹರ್ಷಿಗಳೆಲ್ಲರನ್ನೂ ಕರೆಯಿಸಿ ಅವರಿಗೆ ದೈನ್ಯದಿಂದ ತಲೆವಾಗಿ ಪ್ರಾರ್ಥಿಸಿ ಆ ರತ್ನಗಳೆಲ್ಲವನ್ನೂ ಮತ್ತೆ ಪಡೆದನು. ಹೀಗೆಯೇ ಅವನು ರಾಜ್ಯವನ್ನೂ ಪಡೆದನು. ತರುವಾಯ ಮಹಾತ್ಮರಾದ ಆ ಮಹರ್ಷಿಗಳೆಲ್ಲರೊಡಗೂಡಿ ಅವನು ಮತ್ತೆ ಅಮರಾವತಿಯಲ್ಲಿ ರಾಜನಾಗಿ ಆಳತೊಡಗಿದನು.

೧೧೭–೨೦. ಇತ್ತ ವೈವಸ್ವತನು ಆ ಕಳ್ಳನಿಗೆ ಇನ್ನೂ ಸ್ವಲ್ಪ ಕರ್ಮವಾಸನೆ ಯಿದ್ದುದರಿಂದ ಮತ್ತೊಂದು ಜನ್ಮವನ್ನಿತ್ತನು. ಅದರಿಂದ ಅವನು ವಿರೋಚನನ

**ಸುರುಚಿರ್ಜನನೀ ತಸ್ಯ ಕಿತವಸ್ಯಾಭವತ್ತದಾ ।**
**ವಿರೋಚನಸ್ಯ ಮಹಿಷೀ ದುಹಿತಾ ವೃಷಪರ್ವಣಃ ।**
**ತಸ್ಯಾ ಜಠರಮಾಸ್ಥಾಯ ತಸ್ಯಾಃ ಸೋಽಪಿ ಮಹಾತ್ಮನಃ ॥ ೧೧೮ ॥**
**ತದಾ ಪ್ರಭೃತಿ ತಸ್ಯೈವ ಪ್ರಹ್ಲಾದಸ್ಯಾತ್ಮಜಾತ್ಮನೈ ।**
**ಸುರುಚೇಶ್ಚ ತಥಾಪ್ಯಾಸೀದ್ಧರ್ಮೇ ದಾನೇ ಮಹಾಮತಿಃ ॥ ೧೧೯ ॥**
**ತೇನೈವ ಜಠರಸ್ಥೇನ ಕೃತಾ ಮತಿರನುತ್ತಮಾ ।**
**ಕಿತವೇನ ಕೃತಾ ವಿಪ್ರಾ ದುರ್ಲಭಾ ಯಾ ಮನೀಷಿಣಾಂ ॥ ೧೨೦ ॥**
**ಏಕದಾ ವೈ ತದಾ ಶಕ್ರೋ ಯಯೌ ವೈರೋಚನಂ ಪ್ರತಿ ।**
**ಹಂತುಕಾಮೋ ಹಿ ದೈತ್ಯೇಂದ್ರಂ ವಿಪ್ರೋ ಭೂತ್ವಾಽಥ ಯಾಚಕಃ ॥೧೨೧॥**
**ವಿರೋಚನಗೃಹಂ ಪ್ರಾಪ್ತ ಇಂದ್ರೋ ವಾಕ್ಯಮುವಾಚ ಹ ।**
**ಸ್ಥವಿರೋ ಬ್ರಾಹ್ಮಣೋ ಭೂತ್ವಾ ದೇಹೀತಿ ಮಮ ಸುವ್ರತ ।**
**ಮನಸ್ವೀ ತ್ವಂಚ ದೈತ್ಯೇಂದ್ರ ದಾತಾ ಚ ಭುವನತ್ರಯೇ ॥ ೧೨೨ ॥**
**ತವ ವಿಪ್ರಾ ಮಹಾಭಾಗ ಚರಿತಂ ಮಹದದ್ಭುತಂ ।**
**ವರ್ಣಯಂತಿ ಸಮಾಜೇಷು ಸ್ಥಿತ್ವಾ ಕೀರ್ತಿಂ ಚ ನಿರ್ಮಲಾಂ ।**
**ಯಾಚಕೋಽಹಂ ಚ ದೈತ್ಯೇಂದ್ರ ದಾತುಮರ್ಹಸಿ ಸುವ್ರತ ॥ ೧೨೩ ॥**

---

ಮಗನಾದ ಬಲಿದಾನವನಾಗಿ ಈ ಲೋಕದಲ್ಲಿ ಜನಿಸಿದನು. ಇವನ ತಾಯಿಯೂ ವಿರೋಚನನ ಹೆಂಡತಿಯೂ ಆದ ಸುರುಚಿಯು ವೃಷಪರ್ವನ ಮಗಳು. ಈ ಕಳ್ಳನು ಮಹಾವಿಷ್ಣುಭಕ್ತನಾದ ಪ್ರಹ್ಲಾದನ ಮಗನಾದ ವೃಷಪರ್ವನಿಗೆ ಅವನ ಹೆಂಡತಿಯಾದ ಸುರುಚಿಯಲ್ಲಿ ಜನಿಸಿ ಮಗನಾದುದರಿಂದ ಆಕೆಯ ಗರ್ಭದಲ್ಲಿರುವಾಗಲೇ ಇವನಿಗೆ ಧರ್ಮದಲ್ಲಿಯೂ, ದಾನದಲ್ಲಿಯೂ ಬುದ್ಧಿಯುಂಟಾಯಿತು. ಆದುದರಿಂದಲೇ ಇವನು ಜ್ಞಾನಿಗಳಿಗೂ ಅಸಾಧ್ಯವಾದ ದಾನ ಧರ್ಮಗಳನ್ನು ಮಾಡಿದನು.

೧೨೧–೨೫. ಇವನ ತಂದೆಯಾದ ವಿರೋಚನನಾದರೋ ಮಹಾಧರ್ಮಿಷ್ಠನೂ ದಾನಶೀಲನೂ ಆಗಿದ್ದನು. ಎಲೈ ಮುನಿಗಳಿರಾ! ಒಂದು ದಿನ ಮಹೇಂದ್ರನು ಈ ವಿರೋಚನನ್ನು ಕೊಲ್ಲುವ ಉದ್ದೇಶದಿಂದ ಬ್ರಾಹ್ಮಣನ ವೇಷವನ್ನು ತಾಳಿ ಯಾಚಕನಾಗಿ ಆ ದೈತ್ಯೇಂದ್ರನ ಬಳಿಗೆ ಬಂದನು. ಈ ರೀತಿ ಆ ವಿರೋಚನನ ಮನೆಗೆ ಬಂದ ಆ ದೇವೇಂದ್ರನು ಅವನನ್ನು ನೋಡಿ, “ಎಲೈ ಸುವ್ರತನೇ! ನಾನು ಹೆಳವ; ಬ್ರಾಹ್ಮಣ; ದೇಹಿ ಎಂದು ಬೇಡುತ್ತಿದ್ದೇನೆ. ದೈತ್ಯೇಂದ್ರ! ನೀನೇನು ಸಾಮಾನ್ಯನಲ್ಲ. ಮೂರು ಲೋಕಗಳಲ್ಲಿಯೂ ನೀನೇ ಉದಾರಿಯೆಂದು ಹೆಸರಾಗಿರುವೆ. ಎಲೈ ಪುಣ್ಯಶಾಲಿಯೇ! ಬ್ರಾಹ್ಮಣರೆಲ್ಲರೂ ಸಭೆಗಳಲ್ಲಿ ನಿಂತು ಪರಮಾದ್ಭುತವೂ, ನಿರ್ಮಲವೂ ಆದ ನಿನ್ನ ಚರಿತ್ರೆಯನ್ನೂ,

**ತಸ್ಯ ತದ್ವಚನಂ ಶ್ರುತ್ವಾ ದೈತ್ಯೇಂದ್ರೋ ವಾಕ್ಯಮಬ್ರವೀತ್ ।**
**ಕಿಂ ದಾತವ್ಯಂ ತವ ವಿಭೋ ವದ ಶೀಘ್ರಂ ಮಮಾಧುನಾ ॥ ೧೨೪ ॥**
**ಇಂದ್ರೋ ಹಿ ವಿಪ್ರರೂಪೇಣ ವಿರೋಚನಮುವಾಚ ಹ ।**
**ಯಾಚಯಾಮಿ ಚ ದೈತ್ಯೇಂದ್ರ ಯದಹಂ ಪರಿಭಾವಿತಃ ॥ ೧೨೫ ॥**
**ಆತ್ಮಪ್ರೀತ್ಯಾ ಚ ದಾತವ್ಯಂ ಮಮ ನಾಸ್ತ್ಯತ್ರ ಸಂಶಯಃ ।**
**ಉವಾಚ ಪ್ರಹಸನ್ವಾಕ್ಯಂ ಪ್ರಹ್ಲಾದಸ್ಯಾತ್ಮಜೋಽಸುರಃ ॥ ೧೨೬ ॥**
**ದದಾಮ್ಯಾತ್ಮಶಿರೋ ವಿಪ್ರ ಯದಿ ಕಾಮಯಸೇಽಧುನಾ ।**
**ಇದಂ ರಾಜ್ಯಮನಾಯಾಸಮಿಯಂ ಶ್ರೀರ್ನಾನ್ಯಗಾಮಿನೀ ।**
**ಅಹಂ ಸಮರ್ಪಯಿಷ್ಯಾಮಿ ತವ ನಾಸ್ತ್ಯತ್ರ ಸಂಶಯಃ ॥ ೧೨೭ ॥**
**ಇತ್ಯುಕ್ತಸ್ತೇನ ದೈತ್ಯೇನ ವಿಮೃಶ್ಯ ಚ ತದಾ ಹರಿಃ ।**
**ಉವಾಚ ದೇಹಿ ಮೇ ಸ್ವೀಯಂ ಶಿರೋ ಮುಕುಟಸೇವಿತಂ ॥ ೧೨೮ ॥**
**ಏವಮುಕ್ತೇತು ವಚನೇ ಶಕ್ರೇಣ ದ್ವಿಜರೂಪಿಣಾ ।**
**ತ್ವರನ್ಮಹೇಂದ್ರಾಯ ತದಾ ಶಿರ ಉತ್ಕೃತ್ಯ ವೈ ಮುದಾ ।**
**ಸ್ವಕರೇಣ ದದೌ ತಸ್ಮೈ ಪ್ರಹ್ಲಾದಸ್ಯಾತ್ಮಜೋಽಸುರಃ ॥ ೧೨೯ ॥**

---

ಕೀರ್ತಿಯನ್ನು ಬಾಯಾರ ಕೊಂಡಾಡುತ್ತಾರೆ ಇಂತಹ ದಾನಶೀಲನಾದ ನಿನ್ನಲ್ಲಿಗೆ ನಾನು ಯಾಚಕನಾಗಿ ಬಂದಿರುವೆನು ನನಗೆ ದಾನಮಾಡು" ಎಂದು ಪ್ರಾರ್ಥಿಸಿದನು.

೧೨೬–೩೦. ಅವನ ಈ ಮಾತುಗಳನ್ನು ಕೇಳಿ ದೈತ್ಯೇಂದ್ರನಾದ ವಿರೋಚನನು "ಪ್ರಭುವೇ! ನಿನಗೇನುಬೇಕು, ಜಾಗ್ರತೆಯಾಗಿ ಹೇಳು" ಎಂದನು. ಆಗಲಾ ಬ್ರಾಹ್ಮಣವೇಷಧಾರಿಯಾದ ದೇವೇಂದ್ರನು ಆತನನ್ನು ಕುರಿತು, "ಎಲೈ ದೈತ್ಯೇಂದ್ರನೇ! ನಿನ್ನ ಮನಸ್ಸಿನಲ್ಲಿ ಯಾವುದು ನಿನಗೆ ಅತ್ಯಂತ ಪ್ರಿಯಕರವಾದುದೆಂದು ಭಾವಿಸಿರುವೆಯೋ ಅದನ್ನು ನಾನು ಬೇಡುತ್ತೇನೆ. ಅದನ್ನೇ ನೀನು ನನಗೆ ದಾನಮಾಡಬೇಕೆಂಬುದರಲ್ಲಿ ಸಂಶಯವಿಲ್ಲವು" ಎಂದನು. ಇದನ್ನು ಕೇಳಿ ಪ್ರಹ್ಲಾದನ ಮಗನಾದ ಆ ವಿರೋಚನನು ನಗುತ್ತ, "ಅಯ್ಯಾ ವಿಪ್ರನೇ! ನೀನು ನನ್ನ ಶಿರಸ್ಸನ್ನು ಬಯಸುವೆಯಾದರೆ ಅದನ್ನೇ ನಿನಗೆ ದಾನಮಾಡುತ್ತೇನೆ. ನಿರಾತಂಕವಾದ ಈ ನನ್ನ ರಾಜ್ಯವಿರುವುದು ಮತ್ತಾರಿಗೂ ಸೇರದ ಈ ಸಂಪತ್ತಿರುವುದು. ಇವುಗಳನ್ನು ಬೇಡು. ನಿಸ್ಸಂಶಯವಾಗಿಯೂ ಇವುಗಳನ್ನು ನಿನಗೆ ಕೊಡುತ್ತೇನೆ" ಎಂದನು. ಆ ದೈತ್ಯಶ್ರೇಷ್ಠನಿಂತು ನುಡಿದುದನ್ನು ಕೇಳಿ ಆ ದೇವೇಂದ್ರನು ಯೋಚಿಸಿ ಆ ತರುವಾಯ "ಅಯ್ಯಾ ದಾನವೇಂದ್ರನೇ! ಕಿರೀಟದಿಂದ ಸೇವಿತವಾದ ನಿನ್ನ ಶಿರಸ್ಸನ್ನೇ ನನಗೆ ದಾನಮಾಡು" ಎಂದನು. ಬ್ರಾಹ್ಮಣರೂಪಿಯಾದ ಆ ದೇವೇಂದ್ರನೀರೀತಿ ನುಡಿದೊಡನೆಯೇ ಪ್ರಹ್ಲಾದನ

ಪ್ರಹ್ಲಾದೇನ ಪುರಾ ಯಸ್ತು ಕೃತೋ ಧರ್ಮಸ್ಸುದುಷ್ಕರಃ ।
ಕೇವಲಾಂ ಭಕ್ತಿಮಾಶ್ರಿತ್ಯ ವಿಷ್ಣೋಸ್ತತ್ಪರಚೇತಸಾ ॥ ೧೩೦ ॥
ದಾನಾತ್ಪರತರಂ ಚಾನ್ಯತ್ಕ್ವಚಿದ್ವಸ್ತು ನ ವಿದ್ಯತೇ ।
ತದ್ದಾನಂ ಚ ಮಹಾಪುಣ್ಯಮಾರ್ತೇಭ್ಯೋ ಯತ್ಪ್ರದೀಯತೇ ॥ ೧೩೧ ॥
ಸ್ವಶಕ್ತ್ಯಾ ಯಚ್ಚ ಕಿಂಚಿಚ್ಚ ತದಾನಂತ್ಯಾಯ ಕಲ್ಪತೇ
ದಾನಾತ್ಪರತರಂ ನಾನ್ಯತ್ತ್ರಿಷು ಲೋಕೇಷು ವಿದ್ಯತೇ ॥ ೧೩೨ ॥
ಸಾತ್ವಿಕಂ ರಾಜಸಂ ಚೈವ ತಾಮಸಂ ಚ ಪ್ರಕೀರ್ತಿತಂ ।
ತಥಾ ಕೃತಮನೇನೈವ ದಾನಂ ಸಾತ್ವಿಕ ಲಕ್ಷಣಂ ॥ ೧೩೩ ॥
ಶಿರ ಉತ್ಕೃತ್ಯ ಚೇಂದ್ರಾಯ ಪ್ರದತ್ತಂ ವಿಪ್ರರೂಪಿಣೇ ।
ಕಿರೀಟಃ ಪತಿತಸ್ತತ್ರ ಮಣಯೋ ಹಿ ಮಹಾಪ್ರಭಾಃ ॥ ೧೩೪ ॥
ಏಕಪದ್ಯೇನ ಪತಿತಾಸ್ತೇ ಜಾತಾ ಮಂಡಲಾಯಮ್ನೈ ।
ದೈತ್ಯಾನಾಂ ಚ ನರೇಂದ್ರಾಣಾಂ ಪನ್ನಗಾನಾಂ ತಥೈವ ಚ ॥ ೧೩೫ ॥
ವಿರೋಚನಸ್ಯ ತದ್ದಾನಂ ತ್ರಿಷು ಲೋಕೇಷು ವಿಶ್ರುತಂ ।
ಗಾಯಂತ್ಯದ್ಯಾಪಿ ಕವಯೋ ದೈತ್ಯೇಂದ್ರಸ್ಯ ಮಹಾತ್ಮನಃ ॥ ೧೩೬ ॥

---

ಮಗನಾದ ಆ ವಿರೋಚನನು ಸಂತೋಷದಿಂದ ಬಹು ಜಾಗ್ರತೆಯಾಗಿ ತನ್ನ ಕೈಯಾರ ತನ್ನ ತಲೆಯನ್ನೇ ಕತ್ತರಿಸಿ ಅವನಿಗೆ ದಾನಮಾಡಿದನು. ಪೂರ್ವದಲ್ಲಿ ಇವನ ತಂದೆಯಾದ ಆ ಪ್ರಹ್ಲಾದನಾದರೋ ಕೇವಲ ವಿಷ್ಣುಭಕ್ತಿಸಂಪನ್ನನಾಗಿ ಸ್ಥಿರಮತಿಯಿಂದ ಯಾರಿಂದಲೂ ಮಾಡಲಸದಳವಾದ ಧರ್ಮಕಾರ್ಯಗಳನ್ನು ಮಾಡಿರುವನು.

೧೩೧–೩೬. ಆದುದರಿಂದಲೈ ಶೌನಕಾದಿ ಮುನಿಗಳಿರಾ! ಲೋಕದಲ್ಲಿ ದಾನಕ್ಕಿಂತಲೂ ಶ್ರೇಷ್ಠವಾದುದು ಏನೂ ಇರುವುದಿಲ್ಲವು. ದೀನರಾದವರಿಗೆ ಕೊಟ್ಟ ದಾನವೇ ದಾನವು. ಅದು ಮಹಾಪುಣ್ಯಕರವಾದುದು. ಮಾನವನು ತನ್ನ ಶಕ್ತ್ಯನುಸಾರ ಯಾವುದನ್ನು ದಾನಮಾಡಿದರೂ ಅದು ಅನಂತವಾಗುತ್ತದೆ. ದಾನಕ್ಕಿಂತಲೂ ಶ್ರೇಷ್ಠವಾದುದು ಮೂರು ಲೋಕಗಳಲ್ಲಿ ಯಾವುದೂ ಇರುವುದಿಲ್ಲ. ಈ ದಾನವು ಸಾತ್ವಿಕ ರಾಜಸ ತಾಮಸ ಎಂದು ಮೂರು ಬಗೆ. ವಿರೋಚನನಾದರೋ ಸಾತ್ವಿಕ ಲಕ್ಷಣವನ್ನೊಳಗೊಂಡ ದಾನವನ್ನೇ ಮಾಡಿದನು. ತನ್ನ ತಲೆಯನ್ನೇ ಕತ್ತರಿಸಿ ಇಂದ್ರನಿಗೆ ದಾನಮಾಡಿದನಷ್ಟೆ! ಆಗ ಅದರ ಮೇಲಿದ್ದ ಕಿರೀಟವು ಕೆಳಕ್ಕೆ ಬಿದ್ದಿತು. ಅಂತೆಯೇ ಅದರಲ್ಲಿದ್ದ ರತ್ನಗಳೂ ಒಂದೇ ತಡವೆಯೇ ನೆಲಕ್ಕೆ ಬಿದ್ದುವು. ಅವುಗಳನ್ನು ದೈತ್ಯರೂ, ಮಾನವೇಂದ್ರರೂ, ಪನ್ನಗರೂ ಉಪಯೋಗಿಸಿಕೊಂಡರು. ದೈತ್ಯೇಂದ್ರನೂ, ಮಹಾತ್ಮನೂ ಆದ ಆ ವಿರೋಚನನು ಮಾಡಿದ ಈ ದಾನವು ಮೂರು ಲೋಕ

**ವಿರೋಚನಸ್ಯ ಪುತ್ರೋಽಭೂತ್ಕಿತವೋಽಸೌ ಮಹಾಪ್ರಭಃ ।**
**ಮೃತೇ ಪಿತರಿ ಜಾತೋಽಸೌ ಮಾತಾ ತಸ್ಯ ಪತಿವ್ರತಾ ॥ ೧೩೭ ॥**
**ಕಲೇವರಂ ಚ ತತ್ಯಾಜ ಪತಿಲೋಕಂ ಗತಾ ತತಃ ।**
**ಭಾರ್ಗವೇಣಾಭಿಷಿಕ್ತೋಽಸೌ ಜನಕಸ್ಯ ನಿಜಾಸನೇ ॥ ೧೩೮ ॥**
**ನಾಮ್ನಾ ಬಲಿರಿತಿ ಖ್ಯಾತೋ ಬಭೂವ ಚ ಮಹಾಯಶಾಃ ।**
**ತೇನ ಸರ್ವೇ ಸುರಗಣಾಸ್ತ್ರಾಸಿತಾಃ ಸುಮಹಾಬಲಾಃ ॥ ೧೩೯ ॥**
**ಗತಾಸ್ತೇ ಕಥಿತಾಃ ಪೂರ್ವಂ ಕಶ್ಯಪಸ್ಯಾಶ್ರಮಂ ಶುಭಂ ।**
**ತದಾಬಲಿರಭೂದಿಂದ್ರೋ ದೇವಪುರ್ಯಾಂ ಮಹಾಯಶಾಃ ॥ ೧೪೦ ॥**
**ಸ್ವಯಂ ತತಾಪ ತಪಸಾ ಸೂರ್ಯೋ ಭೂತ್ವಾ ತದಾಽಸುರಃ ।**
**ಈಶೋ ಭೂತ್ವಾ ಸ್ವಯಂಚಾಸ್ತೇ ಐಶಾನ್ಯಾಂ ದಿಶಿ ಪಾಲಯನ್ ॥೧೪೧॥**
**ತಥಾ ಚ ನೈಋರ್ತೋ ಭೂತ್ವಾ ತಥಾ ತ್ವಂಬುಪತಿಃ ಸ್ವಯಂ ।**
**ಧನಾಧ್ಯಕ್ಷ ಉದೀಚ್ಯಾಂ ವೈ ಸ್ವಯಮಾಸ್ತೇ ಬಲಿಸ್ತದಾ ।**
**ಏವಮಾಸ್ತೇ ಬಲಿಃ ಸಾಕ್ಷಾತ್ಸ್ವಯಮೇವ ತ್ರಿಲೋಕಭುಕ್ ॥ ೧೪೨ ॥**

---

ಗಳಲ್ಲಿಯೂ ಪ್ರಸಿದ್ಧವಾಗಿದೆ. ಈಗಲೂ ಕವಿಗಳು ಅವನ ಆ ದಾನವನ್ನು ಕೊಂಡಾಡುತ್ತಿರುವರು.

೧೩೭–೪೦. ಇಂತಹ ಮಹಾ ದಾನಿಯಾದ ಆ ವಿರೋಚನನಿಗೆ ಈ ಕಳ್ಳನು ಮಹಾ ಪ್ರಭಾವಶಾಲಿಯಾದ ಮಗನಾಗಿ ಜನಿಸಿದನು. ಅಯ್ಯಾ ವಿಪ್ರರೇ! ಇವನು ತಂದೆಯಾದ ಆ ವಿರೋಚನನು ಮಡಿದ ಬಳಿಕ ಆತನ ಪತ್ನಿಯಾದ ಸುರುಚಿಯ ಗರ್ಭದಿಂದ ಜನಿಸಿದನು. ತರುವಾಯ ಮಹಾ ಪತಿವ್ರತೆಯಾದ ಆ ಸುರುಚಿಯು ದೇಹವನ್ನು ತೊರೆದು ಪತಿಲೋಕವನ್ನು ಸೇರಿದಳು. ಆಮೇಲೆ ದೈತ್ಯಗುರುವಾದ ಶುಕ್ರಾಚಾರ್ಯನು ಇವನನ್ನು ಇವನ ತಂದೆಯ ಸಿಂಹಾಸನ ದಲ್ಲಿ ಕುಳ್ಳಿರಿಸಿ ರಾಜ್ಯಾಭಿಷಿಕ್ತನನ್ನಾಗಿಸಿದನು. ತರುವಾಯ ಮಹಾ ಯಶಸ್ವಿ ಯಾದ ಇವನು ಬಲಿಯೆಂದು ಪ್ರಸಿದ್ಧನಾದನು. ಈ ಬಲಿಯೇ ಮಹಾ ಬಲಾಢ್ಯ ರಾದ ದೇವತೆಗಳೆಲ್ಲರನ್ನೂ ಆ ರೀತಿ ಭಯಗೊಳಿಸಿದುದು. ಅಯ್ಯಾ ಮುನಿಗಳಿರಾ! ಬಲಿ ದೈತ್ಯೇಂದ್ರನಿಗೆ ಹೆದರಿದ ಆ ದೇವತೆಗಳೆಲ್ಲರೂ ಕಶ್ಯಪನ ಆಶ್ರಮಕ್ಕೆ ಹೋದ ರೆಂಬ ವಿಷಯವನ್ನು ಹಿಂದೆಯೇ ಹೇಳಿದೆನಷ್ಟೆ. ಆ ತರುವಾಯ ಮಹಾ ಯಶಸ್ವಿಯಾದ ಬಲಿಯು ಅಮರಾವತಿಯಲ್ಲಿ ಇಂದ್ರನಾದನು.

೧೪೧–೪೫. ಆಗಲೀತನು ತಾನೇ ಸೂರ್ಯನಾಗಿ ಲೋಕವನ್ನು ಬೆಳಗಿ ದನು. ಈಶ್ವರನಾಗಿ ಈಶಾನ್ಯದಿಶೆಯನ್ನೂ, ನಿಋರ್ತಿಯಾಗಿ ನೈಋರ್ತ್ಯದಿಶೆ ಯನ್ನೂ, ವರುಣನಾಗಿ ವರುಣದಿಶೆಯನ್ನೂ, ಧನಾಧ್ಯಕ್ಷನಾಗಿ ಕುಬೇರದಿಶೆ ಯನ್ನೂ ಪಾಲಿಸುತ್ತಿದ್ದನಲ್ಲದೆ ತಾನೇ ಮೂರುಲೋಕಗಳ ರಾಜ್ಯೈಶ್ವರ್ಯವನ್ನೂ

**ಶಿವಾರ್ಚನರತೇನೈವ ಕಿತವೇನ ಬಲಿರ್ದ್ವಿಜಾಃ ।**
**ಪೂರ್ವಾಭ್ಯಾಸೇನ ತೇನೈವ ಮಹಾದಾನರತೋಽಭವತ್ ॥ ೧೪೩ ॥**
**ಏಕದಾತು ಸಭಾಮಧ್ಯೇ ಆಸ್ಥಿತೋ ಭೃಗುಣಾ ಸಹ ।**
**ದೈತ್ಯೇಂದ್ರೈಃ ಸಂವೃತಃ ಶ್ರೀಮಾನ್ ಚಂಡಾಮರ್ಕೌ ವಚೋ ಬ್ರವೀತ್ ॥**
**ಆವಾಸಃ ಕ್ರಿಯತಾಮತ್ರ ಅಸುರೈರ್ಮಮ ಸನ್ನಿಧೌ ।**
**ಹಿತ್ವಾ ಪಾತಾಲಮದ್ಯೈವ ಮಾ ವಿಲಂಬಿತುಮರ್ಹಥ ॥ ೧೪೫ ॥**
**ಭಾರ್ಗವಸ್ತದುಪಶ್ರುತ್ಯ ಪ್ರಹಸ್ಯೇದಮುವಾಚ ಹ ।**
**ಯಜ್ಞೈಶ್ಚ ವಿವಿಧೈಶ್ಚೈವ ಸ್ವರ್ಗಲೋಕೇ ಮಹೀಯತೇ ॥ ೧೪೬ ॥**
**ಯಾಜ್ಞಿಕೈಶ್ಚ ಮಹಾರಾಜ ನಾನ್ಯಥಾ ಸ್ವರ್ಗಮೇವಹಿ ।**
**ಭೋಕ್ತುಂ ಹಿ ಪಾರ್ಯತೇ ರಾಜನ್ನಾನ್ಯಥಾ ಮಮ ಭಾಷಿತಂ ॥ ೧೪೭ ॥**
**ಗುರೋರ್ವಚನಮಾಜ್ಞಾಯ ದೈತ್ಯೇಂದ್ರೋ ವಾಕ್ಯಮಬ್ರವೀತ್ ।**
**ಸ್ವರ್ಗೇ ವಸಂತು ಸುಚಿರಂ ನಾತ್ರಕಾರ್ಯಾ ವಿಚಾರಣಾ ॥ ೧೪೮ ॥**

---

ಅನುಭವಿಸತೊಡಗಿದನು. ಎಲೈ ವಿಪ್ರರೇ! ಈ ರೀತಿ ಆ ಕಳ್ಳನು ತಾನು ಮಾಡಿದ ಶಿವಾರ್ಚನೆಯ ಫಲವಾಗಿ ಬಲೀಂದ್ರನಾಗಿ ತ್ರಿಲೋಕಾಧಿಪತಿಯಾದನು. ಇವನು ಪೂರ್ವಜನ್ಮದಲ್ಲಿ ತಾನು ಮಾಡಿದ ದಾನಾಭ್ಯಾಸ ಬಲದಿಂದಲೇ ಈ ಜನ್ಮದಲ್ಲಿಯೂ ದಾನಮಾಡುವುದರಲ್ಲಿ ಬಹಳ ಆಸಕ್ತಿಯುಳ್ಳವನಾದನು. ಒಂದಾನೊಂದು ದಿನ ಬಲಿಯು ತನ್ನ ಗುರುವಾದ ಶುಕ್ರಾಚಾರ್ಯನೊಡನೆಯೂ, ಇತರ ದೈತ್ಯಶ್ರೇಷ್ಠರೊಡನೆಯೂ ಸಭಾಮಧ್ಯವನ್ನಲಂಕರಿಸಿದ್ದನು. ಆಗ ಮಹಾತೇಜಸ್ವಿಯಾದ ಬಲಿದಾನವನು ಚಂಡ ಅಮರ್ಕರೆಂಬ ದಾನವರನ್ನು ಕುರಿತು, "ಎಲೈ! ಇನ್ನುಮೇಲೆ ದಾನವರೆಲ್ಲರೂ ಇಲ್ಲಿಯೇ ನೆಲೆಗಳನ್ನು ಮಾಡಿಕೊಳ್ಳಲಿ. ಅವರೆಲ್ಲರೂ ಪಾತಾಳಲೋಕವನ್ನು ಬಿಟ್ಟು ಸ್ವರ್ಗವನ್ನು ಸೇರಿ ನನ್ನ ಸನ್ನಿಧಿಯಲ್ಲಿಯೇ ಇರಲಿ. ತಡಮಾಡಬೇಡಿರಿ" ಎಂದು ಹೇಳಿದನು.

೧೪೬–೫೧. ಈ ಮಾತನ್ನು ಕೇಳಿ ದೈತ್ಯಗುರುವಾದ ಶುಕ್ರಾಚಾರ್ಯನು ನಸುನಕ್ಕು ಅವನನ್ನು ಕುರಿತು, "ಎಲೈ ದೊರೆಯೇ! ಅನೇಕ ಯಜ್ಞಗಳನ್ನು ಮಾಡಿರುವ ಯಾಜ್ಞಿಕರು ಮಾತ್ರವೇ ಸ್ವರ್ಗಲೋಕವನ್ನು ಅನುಭವಿಸಲು ಅರ್ಹರಾಗುತ್ತಾರೆ. ಹಾಗೆ ಯಜ್ಞಾದಿಗಳನ್ನು ಮಾಡದ ಇತರರು ಇದನ್ನು ಅನುಭವಿಸುವುದು ಸಾಧ್ಯವಾಗುವುದಿಲ್ಲ. ನಾನಾಡಿದ ಮಾತು ಸತ್ಯವಾದುದು" ಎಂದನು. ಗುರುವಚನವನ್ನು ಕೇಳಿದ ಬಳಿಕ ಆ ಬಲಿಯು "ಗುರುವೇ! ನಾನು ಮಾಡಿದ ಪುಣ್ಯವಿಶೇಷದ ಪ್ರಭಾವದಿಂದಲೇ ನಮ್ಮ ದೈತ್ಯರೆಲ್ಲರೂ ಸ್ವರ್ಗದಲ್ಲಿ ವಾಸಮಾಡಲಿ; ಈ ವಿಷಯದಲ್ಲಿ ವಿಚಾರವೇ ಬೇಡ" ಎಂದನು. ಆಗ ಮಹಾತಪಸ್ವಿಯೂ ಮಹಾಬುದ್ಧಿಶಾಲಿಯೂ ಆದ ಶುಕ್ರಾಚಾರ್ಯನು ಗಟ್ಟಿಯಾಗಿ

ಪ್ರಹಸ್ಯೋವಾಚ ಭಗವಾನ್ಭಾರ್ಗವಾಣಾಂ ಮಹಾತಪಾಃ ।
ಬಲಿನಂ ಬಾಲಿಶಂ ಮತ್ವಾ ಶುಕ್ರೋ ಬುದ್ಧಿಮತಾಂ ವರಃ ॥ ೧೪೯ ॥
ಯತ್ತ್ವಯೋಕ್ತಂ ಚ ವಚನಂ ಬಲೇ ಮಮ ನ ರೋಚತೇ ।
ಇಹೈವ ತ್ವಂ ಸಮಾಗತ್ಯ ವಸ್ತುಂ ಚೇಚ್ಛಸಿ ಸುವ್ರತ ॥ ೧೫೦ ॥
ಅಶ್ವಮೇಧಶತೇನೈವ ಯಜಸ್ವ ಜಾತವೇದಸಂ ।
ಕರ್ಮಭೂಮಿಂ ಗತೋ ಭೂತ್ವಾ ಮಾ ವಿಲಂಬಿತುಮರ್ಹಸಿ ॥ ೧೫೧ ॥

ತಥೇತಿ ಮತ್ವಾ ಸ ಬಲಿರ್ಮಹಾತ್ಮಾ
ಹಿತ್ವಾ ತದಾನೀಂ ತ್ರಿದಿವಂ ಮನಸ್ವೀ ।
ದೈತ್ಯೈಃ ಸಮೇತೋ ಗುರುಣಾ ಚ ಸಂಗತೋ
ಯಯೌ ಭುವಂ ಸೋಽನುಚರೈಃ ಸಮೇತಃ ॥ ೧೫೨ ॥
ತನ್ನರ್ಮದಾಯಾ ಗುರುಕುಲ್ಯಸಂಜ್ಞಕೇ
ತೀರೇ ಮಹಾತೀರ್ಥಮುದಾರಶೋಭಂ ।
ಗತ್ವಾ ತದಾ ದೈತ್ಯಪತಿರ್ಮಹಾತ್ಮಾ
ಜಿತ್ವಾ ಸಮುಗ್ರಂ ವಸುಧಾತಲಂ ಚ ॥ ೧೫೩ ॥
ತತೋಽಶ್ವಮೇಧೈರ್ಬಹುಭಿರ್ವಿಚಕ್ಷಣೋ
ಗುರುಪ್ರಯುಕ್ತಃ ಸ ಮಹಾಯಶೋ ಬಲಿಃ ।
ಈಜೇ ಚ ದೀಕ್ಷಾಂ ಪರಮಾಮುಪೇತೋ
ವೈರೋಚನಿಂ ಸತ್ಯವತಾಂ ವರಿಷ್ಠಃ ॥ ೧೫೪ ॥

---

ನಕ್ಕು, ಬಲಿಯು ತಿಳಿಗೇಡಿಯಾಗಿರುವನೆಂಬುದನ್ನರಿತು ಅವನನ್ನು ಕುರಿತು, "ಅಯ್ಯಾ ಬಲಿಯೇ! ನೀನಾಡಿದ ಈ ಮಾತು ನನಗೆ ರುಚಿಸಲಿಲ್ಲವು. ನೀನು ಈ ಅಮರಾವತಿಗೆ ಬಂದು ಇಲ್ಲಿಯೇ ವಾಸಮಾಡಬಯಸುವುದಾದರೆ ಕರ್ಮಭೂಮಿಯಾದ ಭೂಲೋಕಕ್ಕೆ ಹೋಗಿ ನೂರು ಅಶ್ವಮೇಧಯಾಗಗಳಿಂದ ಯಜ್ಞೇಶ್ವರನನ್ನು ಪೂಜಿಸು. ವಿಳಂಬಮಾಡಬೇಡ" ಎಂದನು.

೧೫೨-೧೫೬. ಈ ಮಾತನ್ನು ಕೇಳಿ ಮಹಾತ್ಮನಾದ ಆ ಬಲಿದಾನವನು ಹಾಗೆಯೇ ಆಗಲೆಂದೊಪ್ಪಿ ಆ ತನ್ನ ಗುರುವಿನೊಡನೆಯೂ, ದೈತ್ಯರೊಡನೆಯೂ, ಇತರ ಪರಿವಾರದವರೊಡನೆಯೂ ಒಡನೆಯೇ ಭೂಲೋಕಕ್ಕೆ ಬಂದನು. ಆ ದೈತ್ಯಪತಿಯು ಭೂಲೋಕದಲ್ಲಿ ನರ್ಮದಾ ನದಿಯ ತೀರದಲ್ಲಿ ಗುರುಕುಲ್ಯವೆಂಬ ಮಹಾ ಕಾಂತಿಯುಕ್ತವಾದ ತೀರ್ಥಕ್ಷೇತ್ರಕ್ಕೆ ಬಂದು ನಿಂತು ಅಲ್ಲಿಂದ ಜೈತ್ರಯಾತ್ರೆ ಹೊರಟು ಭೂಮಂಡಲವೆಲ್ಲವನ್ನೂ ಗೆದ್ದನು. ತರುವಾಯ ಮಹಾ ಯಶಸ್ವಿಯೂ, ಸತ್ಯವಂತರಲ್ಲಿ ಅತ್ಯಂತ ಶ್ರೇಷ್ಠನೂ, ಧರ್ಮಾತ್ಮನಾದ ವಿರೋಚನನ ಮಗನೂ ಆದ ಆ ದಾನವನು ಗುರುವಾದ ಶುಕ್ರಾಚಾರ್ಯನ

**ಕೃತ್ವಾ ಬ್ರಾಹ್ಮಣಮಾಚಾರ್ಯಮೃತ್ವಿಜಃ ಷೋಡಶಾಽಭವನ್ ।**
**ಸುಪರೀಕ್ಷಿತೇನ ತೇನೈವ ಭಾರ್ಗವೇಣ ಮಹಾತ್ಮನಾ ॥ ೧೫೫ ॥**
**ಯಜ್ಞಾನಾಮೂನಮೇಕೇನ ಶತಂ ದೀಕ್ಷಾಪರೇಣ ಹಿ ।**
**ಬಲಿನಾ ಚಾಶ್ವಮೇಧಾನಾಂ ಪೂರ್ಣಂ ಕರ್ತುಂ ಸಮಾದಧೇ ॥ ೧೫೬ ॥**
**ಯಾವದ್ಯಜ್ಞಶತಂ ಪೂರ್ಣಂ ತಸ್ಯ ರಾಜ್ಞೋ ಭವಿಷ್ಯತಿ ।**
**ಪುರಾ ಪ್ರೋಕ್ತಂ ಮಯಾ ಚಾತ್ರ ಹ್ಯದಿತ್ಯಾ ವ್ರತಮುತ್ತಮಂ ॥ ೧೫೭ ॥**
**ವ್ರತೇನ ತೇನ ಸಂತುಷ್ಟೋ ಭಗವಾನ್ ಹರಿರೀಶ್ವರಃ ।**
**ವಟುರೂಪೇಣ ಮಹತಾ ಪುತ್ರಭೂತೋ ಬಭೂವ ಹ ॥ ೧೫೮ ॥**
**ಅದಿತ್ಯಾಃ ಕಶ್ಯಪೇನೈವ ಉಪನೀತಸ್ತದಾ ಪ್ರಭುಃ ।**
**ಉಪನೀತೇಽಥ ಸಂಪ್ರಾಪ್ತೋ ಬ್ರಹ್ಮಾ ಲೋಕಪಿತಾಮಹಃ ॥ ೧೫೯ ॥**
**ದತ್ತಂ ಯಜ್ಞೋಪವೀತಂ ಚ ಬ್ರಹ್ಮಣಾ ಪರಮೇಷ್ಠಿನಾ ।**
**ದಂಡಕಾಷ್ಟಂ ಪ್ರದತ್ತಂ ಹಿ ಸೋಮೇನ ಚ ಮಹಾತ್ಮನಾ ॥ ೧೬೦ ॥**
**ಮೇಖಲಾ ಚ ಸಮಾನೀತಾ ಅಜಿನಂ ಚ ಮಹಾದ್ಭುತಂ ।**
**ತಥಾ ಚ ಪಾದುಕೇ ಚೈವ ಮಹ್ಯಾ ದತ್ತೇ ಮಹಾತ್ಮನಃ ॥ ೧೬೧ ॥**

---

ಪೌರೋಹಿತ್ಯದಲ್ಲಿ ದೀಕ್ಷಿತನಾಗಿ ಗುರುಕುಲ್ಯವೆಂಬ ಆ ಪುಣ್ಯಕ್ಷೇತ್ರದಲ್ಲಿಯೇ ಅನೇಕ ಅಶ್ವಮೇಧಯಾಗಗಳನ್ನು ಮಾಡಿದನು. ಆಗ ಅವನು ಮಹಾತ್ಮನಾದ ಶುಕ್ರಾಚಾರ್ಯನೇ ಚೆನ್ನಾಗಿ ಪರೀಕ್ಷಿಸಿ ಗೊತ್ತುಮಾಡಿದ ಬ್ರಾಹ್ಮಣನನ್ನು ಆಚಾರ್ಯನನ್ನಾಗಿ ವರಣಮಾಡಿದನು. ಆ ಯಜ್ಞದಲ್ಲಿ ಹದಿನಾರುಮಂದಿ ಬ್ರಾಹ್ಮಣರು ಋತ್ವಿಜರಾಗಿದ್ದರು. ಅವರೆಲ್ಲರೂ ಶುಕ್ರಾಚಾರ್ಯನಿಂದ ಸುಪರೀಕ್ಷಿತರಾದವರು. ಹೀಗೆ ಒಂದು ಕಡಮೆಯಾಗಿ ನೂರು ಅಶ್ವಮೇಧಯಾಗಗಳು ನಡೆದವು. ತರುವಾಯ ಆ ಭಾರ್ಗವನು ಉಳಿದಿರುವ ಆ ಒಂದು ಯಾಗವನ್ನೂ ತನ್ನ ಶಿಷ್ಯನಿಂದ ಮಾಡಿಸಬೇಕೆಂದು ನಿಶ್ಚಯಿಸಿದನು. ಹೀಗೆ ದೊರೆಯಾದ ಆ ಬಲಿಯ ನೂರು ಅಶ್ವಮೇಧಯಾಗಗಳು ಮುಗಿಯುವಷ್ಟರೊಳಗಾಗಿಯೇ ಇತ್ತ ಆಶ್ಚರ್ಯವೊಂದು ನಡೆಯಿತು.

೧೫೭–೬೨. ಎಲೈ ಮುನಿಗಳಿರಾ! ನಾನು ಹಿಂದೆಯೇ, ಅದಿತಿದೇವಿಯು ಮಾಡಿದ ಶ್ರವಣದ್ವಾದಶೀವ್ರತದ ವಿಷಯವನ್ನು ತಿಳಿಸಿದ್ದೆನಷ್ಟೆ. ಆ ವ್ರತ ಮಾಹಾತ್ಮ್ಯದಿಂದ ಭಗವಾನ್ ಹರಿಯು ಸಂತುಷ್ಟನಾಗಿ ವಟುರೂಪದಿಂದ ಆಕೆಗೆ ಪುತ್ರನಾಗಿ ಅವತರಿಸಿದನಲ್ಲವೆ. ಅದಿತಿಯ ಮಗನಾದ ಆ ವಟುವಿಗೆ ಕಶ್ಯಪ ಮಹರ್ಷಿಯು ಉಪನಯನವನ್ನು ಮಾಡಿದನು. ಆಗ ಬ್ರಹ್ಮನೇ ಅಲ್ಲಿಗೈತಂದು ಆತನಿಗೆ ಯಜ್ಞೋಪವೀತವನ್ನು ಕೊಟ್ಟನು. ಚಂದ್ರನು ದಂಡಕಾಷ್ಟ (ದಂಡಕೋಲು)ವನ್ನೂ, ಉಡೆನೂಲನ್ನೂ, ಅದ್ಭುತವಾದ ಕೃಷ್ಣಾಜಿನವನ್ನೂ

ತತ್ರಭಿಕ್ಷಾ ಸಮಾನೀತಾ ಭವಾನ್ಯಾ ಚಾರ್ಥಸಿದ್ಧಯೇ ।
ಏವಂ ಭಗವತೇ ದತ್ತಂ ವಿಷ್ಣವೇ ವಟುರೂಪಿಣೇ ॥ ೧೬೨ ॥
ಅಭಿವಂದ್ಯ ತಥಾಶ್ರೀಶೋ ವಾಮನೋ ಹ್ಯದಿತಿಂ ತಥಾ ।
ಕಶ್ಯಪಂ ಚ ಮಹಾತೇಜಾ ಯಜ್ಞವಾಟಂ ಜಗಾಮ ಚ ।
ಯಾಜ್ಞಿಕಸ್ಯ ಬಲೇರಾಹ ಪಾಲನಾರ್ಥಂ ಸ್ವಯಂ ಪ್ರಭುಃ ॥ ೧೬೩ ॥

ತದಾ ಮಹೇಶಃ ಸ ಜಗಾಮ ಸ್ವರ್ಗಂ
ಪ್ರಕಂಪಯನ್ಗಾಂ ಪ್ರಪದಾ ಭರೇಣ ।
ಸ ವಾಮನೋ ವಟುರೂಪೀ ಚ ಸಾಕ್ಷಾ
ದ್ವಿಷ್ಣುಃ ಪರಾತ್ಮಾ ಸುರಕಾರ್ಯಹೇತೋಃ ॥ ೧೬೪ ॥
ಗೀರ್ಭಿರ್ಯಥಾರ್ಥಾಭಿರಭಿಷ್ಟುತೋ ಜನೈ
ರ್ಮುನೀಶ್ವರೈರ್ದೇವಗಣೈರ್ಮಹಾತ್ಮಾ ।
ತ್ವರೇಣ ಗಚ್ಛನ್ ಸ ಚ ಯಜ್ಞವಾಟಂ
ಪ್ರಾಪ್ತಸ್ತದಾನೀಂ ಜಗದೇಕಬಂಧುಃ ॥ ೧೬೫ ॥
ಉದ್ಗಾಪಯನ್ಸಾಮಮುಖೋ ಹಿ ಸಾಕ್ಷಾ
ಚ್ಚಕಾರ ದೇವೋ ವಟುರೂಪವೇಷಃ ।
ಉದ್ಗೀಯಮಾನೋ ಭಗವಾನ್ಸ ಈಶ್ವರೋ
ವೇದಾಂತ ವೇದ್ಯೋ ಹರಿರೀಶ್ವರಃ ಪ್ರಭುಃ ॥ ೧೬೬ ॥

---

ಕೊಟ್ಟನು. ಭೂದೇವಿಯು ಆ ಮಹಾತ್ಮನಿಗೆ ಪಾದುಕೆಗಳನ್ನು ಕೊಟ್ಟಳು. ಸಾಕ್ಷಾತ್ ಭವಾನಿಯೇ ಆತನ ಅಭೀಷ್ಟಸಿದ್ಧಿಗಾಗಿ ಭಿಕ್ಷೆಯನ್ನು ತೆಗೆದುಕೊಂಡು ಬಂದು ವಟುರೂಪಧರನಾದ ಆ ಮಹಾವಿಷ್ಣುವಿಗೆ ಸಮರ್ಪಿಸಿದಳು.

೧೬೩–೭೧. ಶ್ರೀಶನಾದ ಆ ವಾಮನ ಮೂರ್ತಿಯು ಅವುಗಳೆಲ್ಲವನ್ನೂ ಸ್ವೀಕರಿಸಿ ಅದಿತಿ ಕಶ್ಯಪರನ್ನು ಸಂತೋಷಗೊಳಿಸಿ ಮಹಾತೇಜಸ್ವಿಯಾಗಿ ಬೆಳಗುತ್ತ ಬಲಿಯನ್ನು ಪೋಷಗೊಳಿಸಲು ತಾನಾಗಿಯೇ ಯಾಜ್ಞಿಕನಾದ ಆತನ ಯಜ್ಞವಾಟಕೆಗೆ ಹೊರಟನು. ಆಗಲಾ ಮಹೇಶನೂ, ಪರಮಾತ್ಮನೂ, ವಟುರೂಪಧರನೂ ಆದ ಆ ಮಹಾವಿಷ್ಣುವು ದೇವತೆಗಳ ಕಾರ್ಯಸಿದ್ಧಿಗಾಗಿ ತನ್ನ ನಡಿಗೆಯ ವೇಗದಿಂದ ಭೂಮಿಯನ್ನೇ ನಡುಗಿಸುತ್ತ ಹೊರಟನು. ಆಗ ಜನಗಳೂ, ಮಹಾಮುನಿಗಳೂ, ದೇವತಾ ಸಮೂಹಗಳೂ ಆ ಸ್ವಾಮಿಯನ್ನು ವೇದವಾಕ್ಯಗಳಿಂದ ಸ್ತುತಿಸುತ್ತಿರಲು, ಆ ಜಗದೇಕಬಂಧುವು ಬಹು ಜಾಗ್ರತೆಯಾಗಿ ಬಲೀಂದ್ರನ ಯಜ್ಞಪಾಟಿಕೆಗೆ ಬರುತ್ತಿದ್ದನು. ವಟುರೂಪಧರನಾದ ಆ ಸ್ವಾಮಿಯು ಹೀಗೆ ಬರುತ್ತಿರುವಾಗ ತಾನೇ ಸಾಕ್ಷಾತ್ತಾಗಿ ಸಾಮವೇದವನ್ನು ಗಟ್ಟಿಯಾಗಿ ಉಚ್ಚರಿಸುತ್ತಿದ್ದನು. ಈ ಪ್ರಕಾರ ಷಡ್ಗುಣೈಶ್ವರ್ಯ

**ದದರ್ಶ ತಂ ಮಹಾಯಜ್ಞಮಶ್ವಮೇಧಂ ಬಲೇಸ್ತದಾ ।**
**ದ್ವಾರಿಸ್ಥಿತೋ ಮಹಾತೇಜಾ ವಾಮನೋ ವಟುರೂಪಧೃಕ್ ॥ ೧೬೭ ॥**
**ಬ್ರಹ್ಮರೂಪೇಣ ಮಹತಾ ವ್ಯಾಪ್ತಮಾಸೀದ್ದಿಗಂತರಂ ।**
**ಪಠಮಾನಸ್ಯ ಚ ಬಟೋರ್ವಾಮನಸ್ಯ ಮಹಾತ್ಮನಃ ॥ ೧೬೮ ॥**
**ತಚ್ಛ್ರುತ್ವಾ ಚ ಬಲಿಃ ಪ್ರಾಹ ಚಂಡಾಮರ್ಕೌ ಚ ಬುದ್ಧಿಮಾನ್ ।**
**ಬ್ರಾಹ್ಮಣಾಃ ಕತಿ ಸಂಖ್ಯಾಶ್ಚ ಆಗತಾಃ ಸಂತಿ ಈಕ್ಷ್ಯತಾಂ ॥ ೧೬೯ ॥**
**ತಥೇತಿ ಮತ್ವಾ ತ್ವರಿತಾವುತ್ಥಿತೌ ತೌ ತದಾ ದ್ವಿಜಾಃ ।**
**ಶಂಡಾಮರ್ಕೌ ಸಮಾಗಮ್ಯ ಮಂಡಪದ್ವಾರಿ ಸಂಸ್ಥಿತೌ ॥ ೧೭೦ ॥**
**ದದೃಶಾತೇ ಮಹಾತ್ಮಾನಂ ಶ್ರೀಹರಿಂ ವಟುರೂಪಿಣಂ ।**
**ತ್ವರಿತೌ ಪುನರಾಯಾತೌ ಬಲೇಃ ಶಂಸಯಿತುಂ ತದಾ ॥ ೧೭೧ ॥**
**ಬ್ರಹ್ಮಚಾರೀ ಸಮಾಯಾತ ಏಕಏವ ನ ಚಾಪರಃ ।**
**ಪಠಮಾನೋ ಮಹಾರಾಜ ಚಾಗತಸ್ತವ ಸನ್ನಿಧೌ ।**
**ಕಿಮರ್ಥಂ ತನ್ನಜಾನೀಮೋ ಜಾನೀಹಿ ತ್ವಂ ಮಹಾಮತೇ ॥ ೧೭೨ ॥**

---

ಸಂಪನ್ನನೂ, ಈಶ್ವರನೂ, ಉಪನಿಷತ್ತುಗಳಿಂದ ತಿಳಿಯಲಾಗುವವನೂ, ಲೋಕೇಶ್ವರನೂ, ಸರ್ವಸ್ವಾ[illegible]ನೂ ಆದ ಆ ಮಹಾವಿಷ್ಣುವು ನಡೆದುಬಂದು ಬಲಿಯ ಅಶ್ವಮೇಧ ಮಹಾಯಜ್ಞವಾಟಿಕೆಯನ್ನು ಕಂಡನು. ಆಗಲಾ ಮಹಾತೇಜಸ್ವಿಯೂ, ವಟುರೂಪಧಾರಿಯೂ ಆದ ವಾಮನಮೂರ್ತಿಯು ಆ ಯಜ್ಞವಾಟಿಕೆಯ ಬಾಗಿಲಿನಲ್ಲಿ ನಿಂತನು. ಆ ಸಮಯದಲ್ಲಿ ಆ ವಾಮನನು ಮಾಡಿದ ಮಹತ್ತರವಾದ ವೇದಘೋಷದಿಂದ ದಶದಿಶೆಗಳೂ ತುಂಬಿಹೋದವು. ಅದನ್ನು ಕೇಳಿ ಒಳಗೆ ದೀಕ್ಷಿತನಾಗಿ ಕುಳಿತಿದ್ದ ಮಹಾಬುದ್ಧಿಶಾಲಿಯಾದ ಬಲಿದಾನವನು ಬಳಿಯಲ್ಲಿದ್ದ ಚಂಡಾಮರ್ಕರನ್ನು ಕುರಿತು, "ಎಲೈ! ಹೊರಗೆ ಹೋಗಿ ಎಷ್ಟುಮಂದಿ ಬ್ರಾಹ್ಮಣರು ದಯಮಾಡಿಸಿರುವರೆಂಬುದನ್ನು ನೋಡಿ ಬನ್ನಿರಿ" ಎಂದು ಅಪ್ಪಣೆ ಮಾಡಿದನು. ಅವರೀರ್ವರೂ ಅಂತೆಯೇ ಆಗಲೆಂದು ಹೇಳಿ ಜಾಗ್ರತೆಯಾಗಿ ಆ ಯಜ್ಞಮಂಟಪದ ಬಾಗಿಲಿಗೆ ಬಂದು ನಿಂತು ಮಹಾತ್ಮನೂ, ವಟುರೂಪಧರನೂ ಆದ ಆ ಮಹಾವಿಷ್ಣುವನ್ನು ಕಂಡು ಒಡನೆಯೇ ಆ ಸುದ್ದಿಯನ್ನು ಬಲಿಗೆ ಅರಿಕೆಮಾಡಲು ತ್ವರೆಯಿಂದ ಆತನ ಬಳಿಗೈದಿದರು.

೧೭೨–೭೫. ಅವರೀರ್ವರೂ ತಮ್ಮ ಒಡೆಯನನ್ನು ಕುರಿತು, "ಮಹಾರಾಜ! ಒಬ್ಬನೇ ಒಬ್ಬ ಬ್ರಹ್ಮಚಾರಿಯು ವೇದಾಧ್ಯಯನಮಾಡುತ್ತ ನಿನ್ನ ಸನ್ನಿಧಿಗೈತಂದಿರುವನು. ಅವನು ಏತಕ್ಕೆ ಬಂದಿರುವನೊ ತಿಳಿಯಲಿಲ್ಲ. ಅವನಲ್ಲದೆ ಹೊರಗೆ ಮತ್ತಾವ ಬ್ರಾಹ್ಮಣರೂ ಇರುವುದಿಲ್ಲ. ಎಲೈ ಮಹಾಮತಿಯೇ! ಆ ಬ್ರಹ್ಮಚಾರಿಯು ಏತಕ್ಕೆ ಬಂದಿರುವನೆಂಬುದನ್ನು ತಿಳಿಯಬೇಕು" ಎಂದರು.

ಏವಮುಕ್ತ್ವೇತು ವಚನೇ ತಾಭ್ಯಾಂ ಸ ಚ ಮಹಾತ್ಮನಃ ।
ಉತ್ಥಿತಸ್ತತ್ಕ್ಷಣಾದೇವ ದರ್ಶನಾರ್ಥೇ ವಟುಂ ಪ್ರತಿ ॥ ೧೭೩ ॥
ಸದದರ್ಶ ಮಹಾತೇಜಾ ವಿರೋಚನಸುತೋ ಮಹಾನ್ ।
ದಂಡವತ್ಪ್ರತಿತೋ ಭೂಮೌ ನನಾಮ ಶಿರಸಾ ಬಟುಂ ॥ ೧೭೪ ॥
ಆನಯಿತ್ವಾ ಬಟುಂ ಸದ್ಯಃ ಸಂನಿವೇಶ್ಯ ನಿಜಾಸನೇ ।
ಅರ್ಘ್ಯಪಾದ್ಯೇನ ಮಹತಾಭ್ಯರ್ಚಯಾಮಾಸ ತಂ ಬಟುಂ ॥ ೧೭೫ ॥
ವಿನಮ್ರಕಂಧರೋ ಭೂತ್ವಾ ಉವಾಚ ಶ್ಲಕ್ಷ್ಣಯಾ ಗಿರಾ ।
ಕೃತಃ ಕಸ್ಮಾಚ್ಚ ಕಸ್ಯಾಸಿ ತಚ್ಛೀಘ್ರಂ ಕಥ್ಯತಾಂ ಪ್ರಭೋ ॥ ೧೭೬ ॥
ತಚ್ಛ್ರುತ್ವಾ ವಚನಂ ತಸ್ಯ ವಿರೋಚನ ಸುತಸ್ಯ ವೈ ।
ಮನಸಾ ದೃಷ್ಟಿತಶ್ಚಾಸೌ ವಾಮನೋ ವಕ್ತುಮಾರಭತ್ ॥ ೧೭೭ ॥

ಶ್ರೀ ಭಗವಾನುವಾಚ :—

ತ್ವಂ ಹಿ ರಾಜಾ ತ್ರಿಲೋಕೇಶೋ ನಾನ್ಯೋ ಭವಿತುಮರ್ಹಸಿ ।
ಸ್ವಕುಲಂ ನ್ಯೂನತಾಂ ಗಚ್ಛೇದ್ಯೋ ವೈ ಕಾಪುರುಷಸ್ಮೃತಃ ॥ ೧೭೮ ॥
ಸಮಂ ವಾ ಚಾಧಿಕೋ ವಾಪಿ ಯೋಗಚ್ಛೇತ್ಪುರುಷಃ ಸ್ಮೃತಃ ।
ತ್ವಯಾ ಕೃತಂಚ ಯತ್ಕರ್ಮ ನಕೃತಂ ಪೂರ್ವಜೈಸ್ತವ ॥ ೧೭೯ ॥

---

ಚಂಡಾಮರ್ಕರೀರ್ವರೂ ಈ ರೀತಿ ಹೇಳಿದುದನ್ನು ಕೇಳಿ ಮಹಾಮನಸ್ವಿಯಾದ ಆ ಬಲಿಯು ತತ್‌ಕ್ಷಣವೇ ಆಸನದಿಂದೆದ್ದು ಆ ವಟುವಿನ ಸಂದರ್ಶನಾರ್ಥವಾಗಿ ಹೊರಗೆ ಬಂದು ಅವನನ್ನು ನೋಡಿದನು. ಒಡನೆಯೇ ಮಹಾತೇಜಸ್ವಿಯಾದ ಆ ವಿರೋಚನಸುತನು ದಂಡದಂತೆ ನೆಲದಲ್ಲಿ ಬಿದ್ದು ಶಿರಸಾ ನಮಸ್ಕರಿಸಿ ಆ ವಟುವನ್ನು ಕರೆತಂದು ತನ್ನ ಪೀಠದಲ್ಲಿಯೇ ಕುಳ್ಳಿರಿಸಿ ಅರ್ಘ್ಯಪಾದ್ಯಗಳಿಂದ ಪೂಜಿಸಿದನು.

೧೭೬–೮೧. ತರುವಾಯ ಆ ದಾನವನು ತಲೆವಾಗಿ ನಮ್ರತೆಯನ್ನು ತೋರಿ ಮೃದುವಾದ ನುಡಿಗಳಿಂದ ಆ ವಟುವನ್ನು ಕುರಿತು, "ಪ್ರಭುವೇ! ಎಲ್ಲಿಂದ ಏತಕ್ಕಾಗಿ ಇಲ್ಲಿಗೆ ಚಿತ್ತೈಸಿದೆ? ನೀನು ಯಾರ ಮಗನು. ಜಾಗ್ರತೆಯಾಗಿ ಹೇಳು" ಎಂದು ಕೇಳಿದನು. ಈ ರೀತಿ ನುಡಿದ ಆ ದಾನವನ ಮಾತನ್ನು ಕೇಳಿ ವಾಮನನು ಮನಸ್ಸಿನಲ್ಲಿಯೇ ಸಂತೋಷಪಡುತ್ತ ಅವನನ್ನು ಕುರಿತು ಹೇಳ ತೊಡಗಿದನು. ವಾಮನನು ಹೇಳುತ್ತಾನೆ:—"ಎಲೈ ದೊರೆಯೇ! ಮೂರು ಲೋಕಗಳಿಗೂ ಒಡೆಯನಾಗಲು ನೀನೇ ಯೋಗ್ಯನು. ಮತ್ತಾವನೂ ಅಲ್ಲವು. ದುಷ್ಟನಾದವನೊಬ್ಬನಿಂದ ಕುಲವೇ ಕುಗ್ಗಿಹೋಗುತ್ತದೆಯೆಂದು ಹೇಳಿದೆ. ಪೂರ್ವದ ಹಿರಿಯರಿಗೆ ಸಮಾನವಾಗಿ ಅಥವಾ ಅವರಿಗಿಂತಲೂ ಹೆಚ್ಚಾಗಿ ಧರ್ಮ ವನ್ನಾಚರಿಸಿದವನೇ ಪುರುಷನೆನಿಸುತ್ತಾನೆ. ಅಯ್ಯಾ ಬಲಿಯೇ! ನೀನಾದರೋ

ದೈತ್ಯಾನಾಂ ಚ ವರಿಷ್ಠಾ ಯೇ ಹಿರಣ್ಯಕಶಿಪಾದಯಃ ।
ಕೃತಂ ಮಹತ್ತಪೋ ಯೇನ ದಿವ್ಯಂ ವರ್ಷಸಹಸ್ರಕಂ ॥ ೧೮೦ ॥
ಶಾರೀರಂ ಭಕ್ಷಿತಂ ಯಸ್ಯ ಜುಷಾಣಸ್ಯ ತಪೋ ಮಹತ್ ।
ಪಿಪೀಲಿಕಾಭಿರ್ಬಹುಭಿರ್ದಂಶೈಶ್ಚೈವ ಸಮಾವೃತಂ ॥ ೧೮೧ ॥
ಅಭವತ್ತಸ್ಯ ತಜ್ಞಾತ್ವಾ ಸುರೇಂದ್ರೋ ಹ್ಯಗಮತ್ಪುರಾ ।
ನಗರಂ ತಸ್ಯ ಚ ತದಾ ಸೈನ್ಯೇನ ಮಹತಾ ವೃತಃ ॥ ೧೮೨ ॥
ತತ್ಸನ್ನಿಧೌ ಹತಾಃ ಸರ್ವೇ ಅಸುರಾಃ ದೈತ್ಯಶತ್ರುಣಾ ।
ವಿಂಧ್ಯಾತು ಮಹಿಷೀ ತಸ್ಯ ನೀಯಮಾನಾ ನಿವಾರಿತಾ ॥ ೧೮೩ ॥
ನಾರದೇನ ಪುರಾ ರಾಜನ್ ಕಿಂಚಿತ್ಕಾರ್ಯಂ ಚಿಕೀರ್ಷುಣಾ ।
ಶಂಭೋಃ ಪ್ರಸಾದದಖಿಲಂ ಮನಸಾ ಯತ್ಸಮೀಕ್ಷಿತಂ ।
ದೈತ್ಯೇಂದ್ರೇಣ ಚ ತತ್ಸರ್ವಂ ತಪಸೈವ ವಶೀಕೃತಂ ॥ ೧೮೪ ॥
ತಸ್ಯಾಃ ಪುತ್ರೋ ಮಹಾತೇಜಾ ಯೇನ ನೀತೋಽಭವತ್ಸಭಾಂ ।
ತಸ್ಯಪುತ್ರೋ ಮಹಾಭಾಗ ಪಿತಾ ತೇ ಪಿತೃವತ್ಸಲಃ ।
ನಾಮ್ನಾ ವಿರೋಚನೋ ವಿದ್ವಾನಿಂದ್ರೋ ಯೇನ ಮಹಾತ್ಮನಾ ॥೧೮೫॥

---

ನಿನ್ನ ಹಿಂದಿನವರಾರೂ ಮಾಡದ ಧರ್ಮಕಾರ್ಯವನ್ನು ಮಾಡಿರುವೆ. ದಾನವರಲ್ಲಿ ಉತ್ತಮರಾದ ಹಿರಣ್ಯಕಶಿಪುವೇ ಮೊದಲಾದವರು ಒಂದು ದಿವ್ಯ ಸಹಸ್ರ ವರ್ಷಗಳ ಕಾಲ ಮಹತ್ತರವಾದ ತಪಸ್ಸನ್ನು ಮಾಡಿದರು. ಆ ಹಿರಣ್ಯಕಶಿಪುವು ತಪಸ್ಸು ಮಾಡುತ್ತಿದ್ದಾಗ್ಗೆ ಅವನ ಮೈಯನ್ನೆಲ್ಲ ಅನೇಕ ಗೆದ್ದಲುಹುಳುಗಳೂ, ಇತರ ಕೀಟಗಳೂ ಮುತ್ತಿ ಭಕ್ಷಿಸಿದುವು.

೧೮೨-೮೯. ಇಂತಿರುವಲ್ಲಿ ಈ ವಿಚಾರವನ್ನು ತಿಳಿದುಕೊಂಡು ದೇವೇಂದ್ರನು ಮಹತ್ತರವಾದ ತನ್ನ ಸೈನ್ಯಸಮೇತನಾಗಿ ಬಂದು ಆ ಮಹಾದಾನವನ ಪಟ್ಟಣವನ್ನು ಮುತ್ತಿದನು. ಅಯ್ಯೋ! ಆಗಲಾ ದಾನವನ ಸನ್ನಿಧಿಯಲ್ಲಿಯೇ ದೈತ್ಯಶತ್ರುವಾದ ಇಂದ್ರನು ಅನೇಕ ದೈತ್ಯರನ್ನು ವಧಿಸಿದನು. ಆ ಮಹೇಂದ್ರನು ಆ ದಾನವನ ಮಡದಿಯಾದ ವಿಂಧ್ಯಾದೇವಿಯನ್ನೂ ಸೆಳೆಯಲೆತ್ನಿಸಿದನು. ಆದರೆ ನಾರದಮಹರ್ಷಿಯು ದೇವೇಂದ್ರನಿಗೆ ಸ್ವಲ್ಪ ಉಪಕಾರಮಾಡುವವನಾಗಿ ಹಾಗೆ ಮಾಡಕೂಡದೆಂದು ಹೇಳಿ ಅವನನ್ನು ತಡೆದನು. ತರುವಾಯ ಹಿರಣ್ಯಕಶಿಪುವು ಪರಮೇಶ್ವರನ ಅನುಗ್ರಹದಿಂದ ತನ್ನ ಮನಸ್ಸಿನಲ್ಲಿದ್ದ ಅಭೀಷ್ಟಗಳೆಲ್ಲವನ್ನೂ ಪಡೆದುದಲ್ಲದೆ ತನ್ನ ತಪಃಪ್ರಭಾವದಿಂದಲೇ ಎಲ್ಲವನ್ನೂ ವಶಪಡಿಸಿಕೊಂಡನು. ತರುವಾಯ ಆತನು ಪುತ್ರವತಿಯಾದ ತನ್ನ ಮಡದಿ ವಿಂಧ್ಯಾದೇವಿಯನ್ನು ಸಭೆಗೆ ಕರೆಯಿಸಿಕೊಂಡನು. ಆತನ ಮಗನು ಪ್ರಹ್ಲಾದನು. ಎಲೈ ಮಹಾಭಾಗನೇ! ಆ ಪ್ರಹ್ಲಾದನ ಮಗನೇ ನಿನ್ನ ಜನಕನಾದ ವಿರೋಚನನು. ಎಲೈ ಪಂಡಿತನೇ!

**ದಾನೇನ ತೋಷಿತೋ ರಾಜನ್ನ್ವೇನೈವ ಶಿರಸಾ ತದಾ ।**
**ತಸ್ಯಾತ್ಮಜೋಽಸಿ ಭೋ ರಾಜನ್ಖ್ಯಾತಂ ತೇ ಪರಮಂ ಯಶಃ ॥ ೧೮೬ ॥**
**ಯಶೋದೀಪೇನ ಮಹತಾ ದಗ್ಧಾಃ ಶಲಭವತ್ಸುರಾಃ ।**
**ಇಂದ್ರೋಽಪಿ ನಿರ್ಜಿತೋ ಯೇನ ತ್ವಯಾ ನಾಸ್ತ್ಯತ್ರ ಸಂಶಯಃ ॥ ೧೮೭ ॥**
**ಶ್ರುತಮಸ್ತಿ ಮಯಾ ಸರ್ವಂ ಚರಿತಂ ತವ ಸುವ್ರತ ।**
**ಅಲ್ಪಕೋಽಹಮಿಹಾಯಾತೋ ಬ್ರಹ್ಮಚರ್ಯವ್ರತೇ ಸ್ಥಿತಃ ॥ ೧೮೮ ॥**
**ಉಟಜಾರ್ಥೇ ಚ ಮೇ ದೇಹಿ ಭೂಮಿಂ ಭೂಮಿಭೃತಾಂ ವರ ।**
**ವಟೋಸ್ತಸ್ಯೈವ ತದ್ವಾಕ್ಯಂ ಶ್ರುತ್ವಾ ಬಲಿರಭಾಷತ ॥ ೧೮೯ ॥**
**ಹೇ ಬಟೋ ಪಂಡಿತೋ ಭೂತ್ವಾ ಯದುಕ್ತಂ ವಚನಂ ಪುರಾ ।**
**ಶಿಶುತ್ವಾತ್ತ್ವಂ ನಜಾನಾಸಿ ಶ್ರುತ್ವಾ ಮನ್ಯೇ ಯಾಥಾರ್ಥತಃ ॥ ೧೯೦ ॥**
**ವದ ಶೀಘ್ರಂ ಮಹಾಭಾಗ ಕಿಯನ್ಮಾತ್ರಂ ಮಹೀಂ ತವ ।**
**ದಾಸ್ಯಾಮಿ ತ್ವರಿತೇನೈವ ಮನಸಾ ತದ್ವಿಮೃಶ್ಯತಾಂ ॥ ೧೯೧ ॥**
**ತದಾಹ ವಾಮನೋ ವಾಕ್ಯಂ ಸ್ಮಯನ್ಮಧುರಯಾ ಗಿರಾ ।**
**ಅಸಂತೋಷಪರಾ ಯೇ ಚ ವಿಪ್ರಾ ನಷ್ಟಾ ನ ಸಂಶಯಃ ॥ ೧೯೨ ॥**

---

ಆ ವಿರೋಚನನೇನು ಸಾಮಾನ್ಯನೇ? ಆತನಿಗೆ ತಂದೆಯಲ್ಲಿ ಬಹಳ ವಾತ್ಸಲ್ಯ ವಿದ್ದಿತು. ಪಿತೃಭಕ್ತನೆಂದರೆ ಅವನೇ! ಎಲೈ ದೊರೆಯೇ! ಆ ವಿರೋಚನ ದಾನವೇಂದ್ರನು ತನ್ನ ಶಿರಸ್ಸನ್ನೇ ದೇವೇಂದ್ರನಿಗೆ ದಾನಮಾಡಿ ಆತನನ್ನು ಸಂತೋಷಪಡಿಸಿದನು. ನೀನು ಆ ವಿರೋಚನನ ಮಗನು. ಮಹಾ ಕೀರ್ತಿ ಶಾಲಿಯು. ಮಹತ್ತರವಾದ ನಿನ್ನ ಯಶಸ್ಸೆಂಬ ದೀಪದಿಂದ ದೇವತೆಗಳೆಲ್ಲರೂ ಪತಂಗದ ಹುಳುಗಳಂತೆ ದಗ್ಧರಾಗಿಹೋದರು. ನಿನ್ನ ಕೀರ್ತಿಯಿಂದಲೇ ನೀನು ದೇವೇಂದ್ರನನ್ನೂ ಜಯಿಸಿದೆಯೆಂಬುದರಲ್ಲಿ ಸಂಶಯವಿಲ್ಲವು. ಅಯ್ಯಾ ಸುವ್ರತನೇ! ನಾನು ನಿನ್ನ ಚರಿತ್ರೆಯೆಲ್ಲವನ್ನೂ ಕೇಳಿ ತಿಳಿದಿರುವೆನು. ನಾನು ಕೇವಲ ಅಲ್ಪಕನು; ಬ್ರಹ್ಮಚರ್ಯವ್ರತದಲ್ಲಿರುವವನು. ಇಂತಹ ನಾನು ನಿನ್ನಲ್ಲಿಗೆ ಯಾಚಕನಾಗಿ ಬಂದಿರುವೆನು. ರಾಜಶ್ರೇಷ್ಠಾ! ಇಂತಿರುವ ನನಗೆ ಪರ್ಣಶಾಲೆಗಾಗಿ ಭೂಮಿಯನ್ನು ದಾನಮಾಡು" ಇಂತು ನುಡಿದ ಆ ವಟುವಿನ ಮಾತನ್ನು ಕೇಳಿ ಬಲಿಯು ಅವನನ್ನು ಕುರಿತು ಹೇಳಿದನು.

೧೯೦–೯೪. "ಎಲೈ ವಟುವೇ! ಪಂಡಿತನಾಗಿ ನೀನು ಮೊದಲು ಏನು ಹೇಳಿದೆಯೋ ಅದನ್ನು ಈಗ ನೀನು ನಿನ್ನ ಹುಡುಗುತನದಿಂದ ತಿಳಿಯದಿರುವೆ. ನಿನ್ನ ಮಾತನ್ನು ಕೇಳಿದ ಬಳಿಕ ಇದು ನಿಜವೆಂದು ತಿಳಿದೆನು. ಅಯ್ಯಾ ಮಹಾ ಭಾಗನೇ! ನಿನಗೆ ಎಷ್ಟು ಭೂಮಿಯು ಬೇಕು. ಜಾಗ್ರತೆಯಾಗಿ ಹೇಳು. ನಾನು ನಿನಗೆ ಎಷ್ಟು ಭೂಮಿಯನ್ನು ದಾನಮಾಡಬೇಕೆಂಬುದನ್ನು ಜಾಗ್ರತೆಯಾಗಿಯೇ

ಸಂತುಷ್ಟಾ ಯೇ ಹಿ ವಿಪ್ರಾಸ್ತೇ ನಾನ್ಯೇ ವೇಷಧರಾಹ್ಯಮೀ ।
ಸ್ವಧರ್ಮನಿರತಾ ರಾಜನ್ನಿರ್ದಂಭಾ ನಿರವಗ್ರಹಾಃ ॥ ೧೯೩ ॥
ನಿರ್ಮತ್ಸರಾ ಜಿತಕ್ರೋಧಾಃ ವದಾನ್ಯಾಹಿ ಮಹಾಮತೇ ।
ವಿಪ್ರಾಸ್ತೇಹಿ ಮಹಾಭಾಗ ತೈರಿಯಂ ಧಾರ್ಯತೇ ಮಹೀ ॥ ೧೯೪ ॥
ಮನಸ್ವೀ ತ್ವಂ ಬಹುತ್ವಾಚ್ಚ ಧಾತಾಸಿ ಭುವನತ್ರಯೇ ।
ತಥಾಪಿ ಮೇ ಪ್ರದಾತವ್ಯಾ ಮಹೀ ತ್ರಿಪದಸಂಮಿತಾ ॥ ೧೯೫ ॥
ಬಹುತ್ವೇನಾಸ್ತಿ ಮೇ ಕಾರ್ಯಂ ಮಹ್ಯಾ ನೈ ಸುರಸೂದನ ।
ಪ್ರವೇಶಮಾತ್ರಮುಟಜಂ ತಥಾ ಮಮ ಭವಿಷ್ಯತಿ ॥ ೧೯೬ ॥
ತ್ರಿಪದಂ ಪೂರ್ಯತೇಽಸ್ಮಾಕಂ ವಸ್ತು ನಾಸ್ತ್ಯತ್ರ ಸಂಶಯಃ ।
ದೇಹಿ ಮೇ ಕ್ರಮಶೋ ರಾಜನ್ಯಾವತ್ ಭೂಮಿರ್ಭವಿಷ್ಯತಿ ।
ತಾವತ್ಸಂಖ್ಯಾ ಪ್ರದಾತವ್ಯಾ ಯದಿ ದಾನಾನಿ ಭೋ ಬಲೇ ॥ ೧೯೭ ॥
ಪ್ರಹಸ್ಯ ತಮುವಾಚೇದಂ ಬಲಿರ್ವೈರೋಚನಾತ್ಮಜಃ ।
ದಾಸ್ಯಾಮಿ ತೇ ಮಹೀಂ ಕೃತ್ಸ್ನಾಂ ಸಶೈಲವನಕಾನನಾಂ ॥ ೧೯೮ ॥

---

ಆಲೋಚಿಸಿಕೊಳ್ಳುವವನಾಗು.'' ಆಗ ವಾಮನನು ನಸುನಗುತ್ತ ಆ ಬಲಿಯನ್ನು ಕುರಿತು ಮಧುರವಾದ ಮಾತುಗಳಿಂದ ಹೀಗೆಂದನು. ''ಎಲೈ ಮಹಾರಾಜನೇ! ಬ್ರಾಹ್ಮಣರಾದವರು ಅಸಂತುಷ್ಟರಾದರೆ ನಾಶವಾಗುತ್ತಾರೆಯೆಂಬುದರಲ್ಲಿ ಸಂಶಯವಿಲ್ಲವು. ಯಾರು ಸಂತುಷ್ಟರಾಗಿರುತ್ತಾರೆಯೋ ಅವರೇ ಬ್ರಾಹ್ಮಣರು ಹಾಗಲ್ಲದವರು ಕೇವಲ ಬ್ರಾಹ್ಮಣವೇಷಧಾರರೇ ಸರಿ. ದೊರೆಯೇ! ಸ್ವಧರ್ಮ ನಿರತರಾಗಿ, ಅಹಂಕಾರವಿಲ್ಲದೆ, ವಿಷಯದೂರರಾಗಿ, ಮಾತ್ಸರ್ಯವಿಲ್ಲದವರೂ, ಕೋಪವನ್ನು ಗೆದ್ದವರೂ, ಉದಾರಿಗಳೂ ಆದ ಬ್ರಾಹ್ಮಣರಾರೋ ಅವರಿಂದ ಈ ಭೂಮಿಯು ನಿಂತಿದೆ.

೧೯೫-೯೭. ಎಲೈ ಪುಣ್ಯಶಾಲಿಯೇ! ಮಹಾ ಉದಾರಿಯಾದ ನೀನು ಮೂರು ಲೋಕಗಳಲ್ಲಿಯೂ ಮಹಾ ದಾನಶೀಲನಾಗಿ ಬೇಕಾದುದನ್ನು ಕೊಡುವವನೇ ಸರಿ. ಆದರೂ ನನಗೆ ಬೇಕಾಗಿರುವುದು ಮೂರೇ ಅಡಿಗಳಷ್ಟು ಭೂಮಿ. ಅಷ್ಟನ್ನು ಮಾತ್ರ ನನಗೆ ಕೊಡು. ಎಲೈ ಸುರಸೂದನನೇ! ನಾನು ನೇರಿಕೊಳ್ಳಲಾಗುವಷ್ಟು ಗುಡಿಸಲನ್ನು ಕಟ್ಟಿಕೊಳ್ಳಲು ನನ್ನ ಹೆಜ್ಜೆಗಳಲ್ಲಿ ಮೂರು ಹೆಜ್ಜೆಗಳಷ್ಟು ಭೂಮಿಯು ಸಾಕಾಗುವುದೆಂಬುದರಲ್ಲಿ ಸಂಶಯವಿಲ್ಲವು. ಎಲೈ ಬಲಿರಾಜನೇ! ನೀನು ನನಗೆ ದಾನಮಾಡುವುದಾದರೆ ನಾನು ಆಕ್ರಮಿಸಿಕೊಳ್ಳುವಷ್ಟು ಭೂಮಿಯನ್ನು ಮಾತ್ರ ನನಗೆ ದಾನಮಾಡು.''

೧೯೮-೨೦೦. ಆ ಮಾತನ್ನು ಕೇಳಿ ವಿರೋಚನನ ಮಗನಾದ ಆ ಬಲಿಯು ನಗುತ್ತ, ''ಅಯ್ಯಾ ಮಹಾಭಾಗನೇ! ಶೈಲಾರಣ್ಯಗಳಿಂದ ಕೂಡಿದ ಈ ಭೂಮಿ

ಮದೀಯಾಂ ವೈ ಮಹಾಭಾಗ ಮಯಾ ದತ್ತಾಂ ಗೃಹಾಣ ವೈ ।
ಯಾಚಕೋಽಸಿ ಬಟೋ ಪಶ್ಯ ದಾನಂ ದೈತ್ಯಾತ್ತ್ವಯಾಚಸೇ ॥ ೧೯೯ ॥
ಯಾಚಕೋ ಹ್ಯಲ್ಪಕೋ ವಾಸ್ತು ದಾತಾ ಸರ್ವಂ ವಿಮೃಶ್ಯ ವೈ ।
ತಥಾ ವಿಲೋಕ್ಯ ಚಾತ್ಮಾನಂ ಹ್ಯರ್ಥಿಭ್ಯಶ್ಚ ದದಾತಿ ವೈ ॥ ೨೦೦ ॥
ಆತ್ಮೌಪಮ್ಯೇನ ಸರ್ವತ್ರ ಯೋ ದದಾತಿ ಹ್ಯುದಾರಧೀಃ ।
ತಸ್ಮಾನ್ನ ಯಾಚಿತವ್ಯಂ ಹಿ ಅರ್ಥಿನಾ ಮಂದಭಾಗಿನಾ ॥ ೨೦೧ ॥
ಬಟೋ ದದಾಮ್ಯಹಂ ತೇಽದ್ಯ ಸಶೈಲವನಕಾನನಾಂ ।
ಪೃಥ್ವೀಂ ಸಪರ್ವತಾಂ ಸಾಬ್ಧಿಂ ನಾನ್ಯಥಾ ಮಮ ಭಾಷಿತಂ ॥ ೨೦೨ ॥
ಪುನಃ ಪ್ರೋವಾಚ ಸ ಬಟುರ್ವಿರೋಚನಸುತಂ ಪ್ರತಿ ।
ಪೂರ್ಯತೇ ಮಮ ದೈತ್ಯೇಂದ್ರ ಕ್ರಮಶೋಹಿ ಪದೈಸ್ತ್ರಿಭಿಃ ॥ ೨೦೩ ॥
ಬಟೋಸ್ತದ್ವಚನಂ ಶ್ರುತ್ವಾ ಅಸುರೇಂದ್ರೋ ಬಲಿಸ್ತದಾ ।
ಉವಾಚ ಪ್ರಹಸನ್ವಾಕ್ಯಂ ಮನ್ಯಮಾನೋ ಬಲಿರ್ಭೃಶಂ ।
ಗೃಹ್ಯತಾಂ ಚ ಮಯಾ ದತ್ತಾಂ ಪದೈಸ್ತ್ರಿಭಿರಲಂಕೃತಾಂ ॥ ೨೦೪ ॥
ಇತ್ಯುಕ್ತೋ ವಾಮನಃ ಪ್ರಾಹ ಅಸುರಂ ಪ್ರತಿ ವೈ ತದಾ ।
ಸಂಕಲ್ಪ್ಯ ಸಕಲಾಂ ಪೃಥ್ವೀಂ ದಾತುಮರ್ಹಸಿ ಸುವ್ರತ ॥ ೨೦೫ ॥

---

ಯೆಲ್ಲವೂ ನನ್ನದೇ ಆಗಿರುವುದು. ಇದೆಲ್ಲವನ್ನೂ ನಿನಗೆ ದಾನಮಾಡುವೆನು. ತೆಗೆದುಕೊ. ಅಯ್ಯಾ! ನೀನು ಯಾಚಕನಾಗಿ ಬಂದು, ದೈತ್ಯನಾದ ನನ್ನನ್ನು ಬೇಡುತ್ತಿರುವೆ. ಯಾಚಕನು ಸಣ್ಣವನೇ ಆಗಲಿ, ದೊಡ್ಡವನೇ ಆಗಲಿ, ಹೇಗೇ ಇರಲಿ ದಾತೃವಾದವನು ಎಲ್ಲವನ್ನೂ ವಿಮರ್ಶೆಮಾಡಿ ಅಂತೆಯೇ ತನ್ನ ಯೋಗ್ಯತೆಯನ್ನೂ ನೋಡಿಕೊಂಡು ದಾನಮಾಡುವನಷ್ಟೆ.

೨೦೧–೨. ಉದಾರಬುದ್ಧಿಯೇ ಆಗಿರಲಿ; ಅವನು ಯಾಚಕನನ್ನು ತನ್ನಂತೆಯೇ ಕಂಡು ಅವನಿಗೆ ದಾನಮಾಡುತ್ತಾನೆ. ಆದುದರಿಂದ ಮಂದಭಾಗ್ಯನಾದ ಅರ್ಥಿಯು ಅಂತಹನನ್ನು ಯಾಚಿಸಲೇಬಾರದು. ಆದುದರಿಂದೆಲೈ ವಟುವೇ! ಈಗ ನಾನು ಶೈಲಾರಣ್ಯದಿಂದಲೂ, ಸಾಗರಗಳಿಂದಲೂ ಕೂಡಿದ ಅಖಂಡ ಭೂಮಂಡಲವನ್ನೇ ನಿನಗೆ ದಾನಮಾಡುವೆನು. ಈ ನನ್ನ ಮಾತು ಬದಲಾಗುವುದಿಲ್ಲವು" ಎಂದು ಹೇಳಿದನು.

೨೦೩–೮. ಆಗಲಾ ವಾಮನನು ಮತ್ತೆ ಆ ವಿರೋಚನನ ಮಗನನ್ನು ಕುರಿತು, "ಅಯ್ಯಾ ದೈತ್ಯೇಂದ್ರನೇ! ಈ ನನ್ನ ದೇಹವು ಮೂರಡಿ ಭೂಮಿಯಲ್ಲಿ ಅಡಗುತ್ತವೆ" ಎಂದು ಹೇಳಿದನು ಅಸುರೇಂದ್ರನಾದ ಬಲಿಯು ವಾಮನನ ಈ ಮಾತನ್ನು ಕೇಳಿ ಬಹಳವಾಗಿ ಆಲೋಚಿಸಿ ಅವನನ್ನು ಕುರಿತು ನಸುನಗುತ್ತ, "ಎಲೈ ವಟುವೇ! ನಾನು ಕೊಡುತ್ತಿರುವ ಮೂರಡಿಗಳಿಂದ

ತಥೇತಿ ಮುಕ್ತ್ವಾ ಬಲಿನಾ ಸು ಪೂಜಿತಃ
ಸ ವಾಮನಃ ಕಶ್ಯಪನಂದನೋ ಮಹಾನ್ ।
ಬಲಿಸ್ತ್ವದಾನೀಂ ಸಹಸಾ ನಿತಾಂತಂ
ಸಂಸ್ತೂಯಮಾನಸ್ತ್ವೃಷಿಭಿರ್ಮುನೀಂದ್ರೈಃ ॥ ೨೦೬ ॥
ತಂ ಪೂಜಯಿತ್ವಾ ಸ ಬಲಿರ್ಯಾವದ್ದಾತುಂ ಸಮುದ್ಯತಃ ।
ಗುರುಣಾ ವಾರಿತಸ್ತಾವದ್ವಿರೋಚನಸುತೋ ಮಹಾನ್ ॥ ೨೦೭ ॥
ನ ದಾತವ್ಯಂ ತ್ವಯಾ ದಾನಂ ವಿಷ್ಣವೇ ವಟುರೂಪಿಣೇ ।
ಇಂದ್ರಾರ್ಥಮಾಗತಃ ಸದ್ಯೋ ಯಜ್ಞವಿಘ್ನಂ ಕರೋತಿ ತೇ ।
ತಸ್ಮಾತ್ತ್ವಯಾ ನ ಪೂಜ್ಯೋಹಿ ವಿಷ್ಣುರಧ್ಯಾತ್ಮದೀಪಕಃ ॥ ೨೦೮ ॥
ಪುರಾಕೃತಮನೇನೈವ ಮೋಹಿನೀರೂಪಧಾರಿಣಾ ।
ದೇವೇಭ್ಯಶ್ಚಾಮೃತಂ ದತ್ತಂ ರಾಹುರ್ಯೇನ ಹತೋ ಮಹಾನ್ ॥೨೦೯॥
ಯೇನ ವಿದ್ರಾವಿತಾ ದೈತ್ಯಾಃ ಕಾಲನೇಮಿರ್ಹತೋ ಬಲೀ ॥ ೨೧೦ ॥

---

ಲಂಕೃತವಾದ ಭೂಮಿಯನ್ನು ಸ್ವೀಕರಿಸು" ಎಂದನು. ಆಗಲಾ ವಾಮನ ಮೂರ್ತಿಯು ನಗುತ್ತಲೇ ಆ ದಾನವನನ್ನು ಕುರಿತು, "ಅಯ್ಯಾ ಸುವ್ರತನೇ! ನೀನು ಸಂಕಲ್ಪಪೂರ್ವಕವಾಗಿ ಆ ಭೂಮಿಯನ್ನು ದಾನಮಾಡು" ಎಂದು ಹೇಳಿದನು. ಬಲಿಯು ಹಾಗೆಯೇ ಆಗಲೆಂದು ಕಶ್ಯಪನಂದನನಾದ ಆ ವಾಮನನನ್ನು ಪೂಜಿಸಿ, ಋಷಿಗಳೂ, ಮುನೀಂದ್ರರೂ ತನ್ನನ್ನು ಬಹಳವಾಗಿ ಹೊಗಳುತ್ತಿರಲು ಜಾಗ್ರತೆಯಾಗಿ ಅವನಿಗೆ ಭೂಮಿಯನ್ನು ದಾನಮಾಡಲು ದ್ಯುಕ್ತನಾಗಿರಲು ದೈತ್ಯಗುರುವಾದ ಶುಕ್ರಾಚಾರ್ಯನು ಅಡ್ಡಬಂದು ಅವನನ್ನು ತಡೆದು ಹೀಗೆ ಹೇಳಿದನು.

೨೦೮–೧೧. "ಎಲೈ ಬಲಿಯೇ! ಇವನು ವಟುರೂಪದಿಂದ ಬಂದಿರುವ ಮಹಾವಿಷ್ಣುವು. ಇವನಿಗೆ ಭೂಮಿಯನ್ನು ದಾನಮಾಡಬೇಡ. ಇವನು ಇಂದ್ರನ ಕಾರ್ಯಸಿದ್ಧಿಗಾಗಿ ಇಲ್ಲಿಗೈತಂದು ನಿನ್ನ ಯಜ್ಞಕ್ಕೆ ವಿಘ್ನವನ್ನು ಮಾಡುವನು. ಆದುದರಿಂದ ಅಧ್ಯಾತ್ಮದೀಪಕನಾದ ಈ ಮಹಾವಿಷ್ಣುವನ್ನು ನೀನು ಪೂಜಿಸ ಕೂಡದು. ಪೂರ್ವದಲ್ಲಿ ಇವನು ಮೋಹಿನಿಯ ವೇಷವನ್ನು ಧರಿಸಿ ದೇವತೆಗಳಿಗೆ ಮಾತ್ರವೇ ಅಮೃತವನ್ನು ಹಂಚಿ ದೈತ್ಯರನ್ನು ಮೋಸಗೊಳಿಸಿರುವನಲ್ಲದೆ ಮಹಾತ್ಮನಾದ ರಾಹುವನ್ನು ಸಂಹರಿಸಿರುವನು. ಯಾವನು ದೈತ್ಯರೆಲ್ಲರನ್ನೂ ಓಡಿಸಿದನೋ, ಯಾವನು ಮಹಾ ಬಲಾಢ್ಯನಾದ ಕಾಲನೇಮಿಯನ್ನುಕೊಂದನೋ ಆ ಇವನೇ ಮಹಾವಿಷ್ಣುವು. ಇವನೇನು ಸಾಮಾನ್ಯನೆಂದು ತಿಳಿಯಬೇಡ. ಇವನು ಪರಮಪುರುಷನು; ಮಹಾತ್ಮನು; ಈಶ್ವರನು; ವಿಶ್ವಕ್ಕೆಲ್ಲ ಒಡೆಯನೂ ಇವನೇ! ಆದುದರಿಂದೆಲೈ ಮಹಾ ಬುದ್ಧಿಶಾಲಿಯಾದ ಬಲಿಯೇ! ನೀನಿದೆಲ್ಲ

ಏವಂ ವಿಧೋಽಯಂ ಪುರುಷೋ ಮಹಾತ್ಮಾ
ಸ ಈಶ್ವರೋ ವಿಶ್ವಪತಿಃ ಸ ಏವ ಚ ।
ವಿಮೃಶ್ಯ ಸರ್ವಂ ಮನಸಾ ಮಹಾಮತೇ
ಹಿತಾಹಿತಂ ಕರ್ತುಮಿಹಾರ್ಹಸಿ ತ್ವಂ ॥ ೨೧೧ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಬಲಿಯಜ್ಞೇ ವಾಮನಾಗಮನ ವರ್ಣನಂ" ನಾಮಾಷ್ಟಾದಶೋಽಧ್ಯಾಯಃ

---

ವನ್ನೂ ನಿನ್ನ ಮನಸ್ಸಿನಲ್ಲಿಯೇ ಚೆನ್ನಾಗಿ ಆಲೋಚಿಸಿ ಆಮೇಲೆ ಯುಕ್ತಾಯುಕ್ತ ಗಳನ್ನರಿತು ದಾನಮಾಡುವವನಾಗು

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಬಲಿಯ ಯಜ್ಞವಾಟಿಕೆಗೆ ವಾಮನಮೂರ್ತಿಯ ಆಗಮನ"ವೆಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಏಕೋನವಿಂಶೋಽಧ್ಯಾಯಃ

## ಬಲಯೇ ವರಪ್ರದಾನವರ್ಣನಂ

ಲೋಮಶ ಉವಾಚ :—

**ಏವಂ ಸಂಬೋಧಿತೋ ದೈತ್ಯೋ ಗುರುಣಾ ಭಾರ್ಗವೇಣ ಹಿ**
**ಉವಾಚ ಪ್ರಹಸನ್ವಾಕ್ಯಂ ಮೇಘಗಂಭೀರಯಾ ಗಿರಾ ॥ ೧ ॥**
**ತ್ವಯೋಕ್ತೋಽಹಂ ಹಿತಾರ್ಥಾಯ ಯೈರ್ವಾಕ್ಯೈಶ್ಚಾಲಿತೋಽಸ್ಮ್ಯಹಂ ।**
**ತವ ವಾಕ್ಯಂ ಮಮ ಪ್ರೀತ್ಯೈ ಹಿತಮಪ್ಯಹಿತಂ ಭವೇತ್ ॥ ೨ ॥**
**ದಾಸ್ಯಾಮಿ ಭಿಕ್ಷಿತಂ ಚಾಸ್ಮೈ ವಿಷ್ಣವೇ ಬಟುರೂಪಿಣೇ ।**
**ಪಾತ್ರೀಭೂತೋಹ್ಯಯಂ ವಿಷ್ಣುಃ ಸರ್ವಕರ್ಮಫಲೇಶ್ವರಃ ॥ ೩ ॥**
**ಯೇಷಾಂ ಹೃದಿ ಸ್ಥಿತೋ ವಿಷ್ಣುಸ್ತೇ ವೈ ಪಾತ್ರತಮಾ ಧ್ರುವಂ ।**
**ಯಸ್ಯ ನಾಮ್ನಾ ಸರ್ವಮಿದಂ ಪವಿತ್ರಮಿಹಚೋಚ್ಯತೇ ॥ ೪ ॥**
**ಯೇನ ವೇದಾಶ್ಚ ಯಜ್ಞಾಶ್ಚ ಮಂತ್ರತಂತ್ರಾದಯೋ ಹ್ಯಮೀ ।**
**ಸರ್ವಂ ಸಂಪೂರ್ಣತಾಂ ಯಾಂತಿ ಸೋಽಯಂ ವಿಶ್ವೇಶ್ವರೋ ಹರಿಃ ॥೫॥**

---

## ಕನ್ನಡದ ಅನುವಾದ

### ಶ್ರೀ ಮಹಾವಿಷ್ಣುವು ಬಲಿದಾನವನಿಗೆ ವರಪ್ರದಾನ ಮಾಡಿದುದು

೧. ಲೋಮಶನು ಹೇಳುತ್ತಾನೆ:—ಅಯ್ಯಾ ಶೌನಕಾದಿ ಮುನಿಗಳಿರಾ! ಆಮೇಲಣ ಚರಿತ್ರೆಯನ್ನು ಕೇಳಿರಿ. ಈ ಪ್ರಕಾರ ಭೃಗುನಂದನನಾದ ಶುಕ್ರಾಚಾರ್ಯನು ಬೋಧಿಸಲು, ಬಲಿದೈತ್ಯೇಂದ್ರನು ಆತನನ್ನು ಕುರಿತು ಮುಗಿಲ ನಾದದಂತೆ ಗಂಭೀರವಾದ ಧ್ವನಿಯಿಂದ ನಗುತ್ತಲೇ ಈ ರೀತಿ ಹೇಳಿದನು.

೨–೫. ಗುರುವೇ! ನನಗೆ ಒಳ್ಳೆಯದಾಗಲೆಂದು ಬಗೆದು ಈ ಮಾತುಗಳನ್ನಾಡಿದೆ. ಆದರೆ ಇದರಿಂದ ನನಗೆ ಮೋಸವೇ ಆಯಿತು. ನನ್ನ ಪ್ರೀತಿಗಾಗಿ ನೀನು ಹಿತವಾದ ಮಾತುಗಳನ್ನೇ ಹೇಳಿದರೂ ಅವು ನನಗೆ ಅಹಿತವೇ ಆದುವು. ಆದುದರಿಂದ ನಾನು ನಿನ್ನ ಮಾತುಗಳಂತೆ ನಡೆಯಲಾರೆನು. ನಾನು ವಟುರೂಪದಿಂದ ಬಂದಿರುವ ವಿಷ್ಣುವಾದ ಈತನಿಗೆ ಯಾಚಿಸಿದುದನ್ನು ಕೊಡುತ್ತೇನೆ. ಎಲ್ಲ ಕರ್ಮಗಳಿಗೂ ಫಲವನ್ನು ದಯಪಾಲಿಸುವ ಪ್ರಭುವಾದ ಈ ಮಹಾವಿಷ್ಣುವು ದಾನಕ್ಕೆ ತಕ್ಕ ಪಾತ್ರನೇ ಆಗಿರುವನಲ್ಲವೆ! ಯಾರ ಹೃದಯಗಳಲ್ಲಿ ವಿಷ್ಣುವು ನೆಲಸಿರುತ್ತಾನೆಯೋ ಆ ಪುಣ್ಯಾತ್ಮರೇ ಪಾತ್ರತಮರು. ಯಾರ ಹೆಸರಿನಿಂದಲೇ ಯಾಗಾದಿಗಳೂ, ಪ್ರಪಂಚವೂ ಮತ್ತು ಸಕಲವೂ ಪವಿತ್ರ

ಆಗತಃ ಕೃಪಯಾ ಹ್ಯದ್ಯ ಸರ್ವಾತ್ಮಾ ಹರಿರೀಶ್ವರಃ ।
ಉದ್ಧರ್ತುಂ ಮಾಮಸಂದೇಹ ಏತಜ್ಜಾನೀಹಿ ತತ್ತ್ವತಃ ॥ ೬ ॥
ತಸ್ಯ ತದ್ವಚನಂ ಶ್ರುತ್ವಾ ಚುಕೋಪ ಚ ರುಷಾನ್ವಿತಃ ।
ಭಾರ್ಗವಃ ಶಪ್ತುಮಾರೇಭೇ ದೈತ್ಯೇಂದ್ರಂ ಧರ್ಮವತ್ಸಲಂ ॥ ೭ ॥
ಮಮ ವಾಕ್ಯಮತಿಕ್ರಮ್ಯ ದಾತುಮಿಚ್ಛಸ್ಯರಿಂದಮ ।
ನಿರ್ಗುಣೋ ಭವ ರೇ ಮಂದ ತಸ್ಮಾತ್ತ್ವಂ ನಿಃಶ್ರೀಕೋ ಭವ ॥ ೮ ॥
ಏವಂ ಶಶಾಪ ಚ ತದಾ ಪರಮಾರ್ಥವಿಜ್ಞಂ
ಶಿಷ್ಯಂ ಮಹಾತ್ಮಾನಮಗಾಧಬೋಧಂ ।
ಸರ್ವೈರ್ಜಗಾಮಾಥ ಮಹಾಕವಿಸ್ತ್ವರಾ
ತ್ಸ್ವಮಾಶ್ರಮಂ ಧರ್ಮವಿದಾಂ ವರಿಷ್ಠಃ ॥ ೯ ॥
ಗತೇ ತು ಭಾರ್ಗವೇ ತಸ್ಮಿನ್ಬಲಿರ್ವಿರೋಚನಾತ್ಮಜಃ ।
ವಾಮನಂ ಚಾರ್ಚಯಿತ್ವಾ ಸ ಮಹೀಂ ದಾತುಂ ಪ್ರಚಕ್ರಮೇ ॥ ೧೦ ॥

---

ವಾಗುತ್ತದೆಯೋ, ವೇದಗಳೂ, ಯಜ್ಞಗಳೂ, ಮಂತ್ರತಂತ್ರಗಳೂ ಎಲ್ಲವೂ ಯಾರಿಂದ ಸಂಪೂರ್ಣತೆಯನ್ನು ಪಡೆಯುತ್ತದೆಯೋ ಅಂತಹ ಈ ಹರಿಯು ವಿಶ್ವಕ್ಕೆಲ್ಲ ಒಡೆಯನು.

೬. ಸರ್ವಾತ್ಮಕನೂ, ಪ್ರಭುವೂ ಆದ ಈತನು ಇದೀಗ ನನ್ನಮೇಲಣ ಕೃಪೆಯಿಂದಿಲ್ಲಿಗೆ ಚಿತ್ತೈಸಿರುವನು. ಗುರುವೇ! ಈತನು ನನ್ನನ್ನು ಉದ್ಧಾರ ಮಾಡುವುದಕ್ಕಾಗಿಯೇ ಬಂದಿರುವನೆಂದು ಯಥಾರ್ಥವಾಗಿ ತಿಳಿ. ಇದರಲ್ಲಿ ಸಂಶಯವಿಲ್ಲವು.

೭–೧೦. ಅಯ್ಯಾ ಮುನಿಗಳಿರಾ! ಈ ರೀತಿ ನುಡಿದ ಆ ಬಲಿಯ ಮಾತುಗಳನ್ನು ಕೇಳಿ ಶುಕ್ರಾಚಾರ್ಯನು ಬಹಳವಾಗಿ ಕೋಪಗೊಂಡು, ಧರ್ಮವತ್ಸಲನಾದ ಆ ದೈತ್ಯೇಂದ್ರನನ್ನು ಶಪಿಸಲು ಮೊದಲುಮಾಡಿದನು. "ಎಲಾ ತಿಳಿಗೇಡಿ! ನೀನು ಶತ್ರುಮರ್ದನನಾದರೂ ನನ್ನ ಮಾತನ್ನು ಮೀರಿ ಶತ್ರುವಾದ ಈ ವಿಷ್ಣುವಿಗೆ ದಾನಮಾಡಲೆಳಸಿರುವೆಯಾದುದರಿಂದ ನೀನೀಗಲೇ ದರಿದ್ರನಾಗಿ ಹೋಗು." ಧರ್ಮವನ್ನರಿತವರಲ್ಲಿ ಶ್ರೇಷ್ಠನಾದ ಶುಕ್ರಾಚಾರ್ಯನು ಮಹಾತ್ಮನೂ, ಅಪಾರವಾದ ಜ್ಞಾನವುಳ್ಳವನೂ, ಪರತತ್ವವೇನೆಂಬುದನ್ನು ಬಲ್ಲವನೂ ಶಿಷ್ಯನೂ ಆದ ಆ ಬಲಿದಾನವೇಂದ್ರನನ್ನು ಈ ರೀತಿ ಶಪಿಸಿ ಜಾಗ್ರತೆಯಾಗಿಯೇ ತನ್ನ ಆಶ್ರಮಕ್ಕೆ ತೆರಳಿದನು. ಆತನು ಹೊರಟುಹೋದ ಬಳಿಕ ವಿರೋಚನನ ಮಗನಾದ ಆ ಬಲಿಯು ವಾಮನಮೂರ್ತಿಯನ್ನು ಪೂಜಿಸಿ ತರುವಾಯ ಆತನಿಗೆ ಭೂಮಿಯನ್ನು ದಾನಮಾಡಲುಪಕ್ರಮಿಸಿದನು.

ವಿಂಧ್ಯಾವಲಿಃ ಸಮಾಗತ್ಯ ಬಲೇರರ್ಧಾಂಗಶೋಭಿತಾ ।
ಅವನಿಜ್ಯಃ ಬಟೋಃ ಪಾದೌ ಪ್ರದದೌ ವಿಷ್ಣವೇ ಮಹೀಂ ॥ ೧೧ ॥
ಸಂಕಲ್ಪಪೂರ್ವೇಣ ತದಾ ವಿಧಿನಾ ವಿಧಿಕೋವಿದಃ ।
ಸಂಕಲ್ಪೇನೈವ ಮಹತಾ ವವೃಧೇ ಭಗವಾನಜಃ ॥ ೧೨ ॥
ಯದ್ವೈಕೇನ ಮಹೀ ವ್ಯಾಪ್ತಾ ವಿಷ್ಣುನಾ ಪ್ರಭವಿಷ್ಣುನಾ ।
ಸರ್ವೇ ಸ್ವರ್ಗಾ ದ್ವಿತೀಯೇನ ವ್ಯಾಪ್ತಾಸ್ತೇನ ಮಹಾತ್ಮನಾ ॥ ೧೩ ॥
ಸತ್ಯಲೋಕಗತೋ ವಿಷ್ಣೋಶ್ಚರಣಃ ಪರಮೇಷ್ಠಿನಾ ।
ಕಮಂಡಲುಗತೇನೈವ ಅಂಭಸಾ ಚಾವನೇ ನಿಜೇ ॥ ೧೪ ॥

ತತ್ಪಾದಸಂಪರ್ಕಜಲಾಚ್ಚ ಜಾತಾ
ಭಾಗೀರಥೀ ಸರ್ವಸುಮಂಗಲಾ ಚ ।
ಯಯಾ ತ್ರಿಲೋಕೀ ಚ ಕೃತಾ ಪವಿತ್ರಾ
ಯಯಾ ಚ ಸರ್ವೇ ಸಗರಾಃ ಸಮುದ್ಧೃತಾಃ ॥ ೧೫ ॥

---

೧೧–೧೨. ಆ ಸಮಯದಲ್ಲಿ ಆತನ ಅರ್ಧಾಂಗಿಯಾದ ವಿಂಧ್ಯಾವಲೀ ದೇವಿಯು ಅಲ್ಲಿಗೈತಂದಳು. ಆಕೆಯೊಡಗೂಡಿ ಆ ಬಲಿಯು—ದಾನವಿಧಿಯನ್ನರಿತವನಾದುದರಿಂದ—ವಾಮನರೂಪಿಯಾದ ಆ ಮಹಾವಿಷ್ಣುವಿಗೆ ಸಂಕಲ್ಪಪೂರ್ವಕವಾಗಿಯೇ ಭೂಮಿಯನ್ನು ದಾನಮಾಡಿದನು.

೧೩–೧೪. ತರುವಾಯ ಷಡ್ಗುಣೈಶ್ವರ್ಯಸಂಪನ್ನನೂ, ಅಜನೂ, ವಟುರೂಪಿಯೂ ಆದ ಆ ವಿಷ್ಣುವಾದರೋ ತನ್ನ ಸಂಕಲ್ಪಮಾತ್ರದಿಂದಲೇ ಬೆಳೆಯತೊಡಗಿದನು. ತರುವಾಯ ಮಹಾಪ್ರಭಾವಶಾಲಿಯಾದ ಆತನು ತನ್ನೊಂದಡಿಯಿಂದ ಭೂಮಂಡಲವೆಲ್ಲವನ್ನೂ ವ್ಯಾಪಿಸಿಕೊಂಡು, ಎರಡನೆಯಡಿಯಿಂದ ಸಮಸ್ತ ಸ್ವರ್ಗಲೋಕಗಳನ್ನೂ ಆಕ್ರಮಿಸಿದನು. ಆತನ ಪಾದವು ಸತ್ಯಲೋಕವನ್ನು ವ್ಯಾಪಿಸಲು ಅದು ಅಲ್ಲಿಗೆ ಹೋದ ಸಮಯದಲ್ಲಿ ಸೃಷ್ಟಿಕರ್ತನಾದ ಪರಮೇಷ್ಠಿಯು ತನ್ನ ಕಮಂಡಲುವಿನಲ್ಲಿದ್ದ ಉದಕದಿಂದಲೇ ಆ ಪಾದವನ್ನು ತೊಳೆದನು.

೧೫. ಆಗಲಾತನ ಪಾದಸಂಪರ್ಕವನ್ನು ಪಡೆದ ಜಲದಿಂದಲೇ ಸರ್ವಸುಮಂಗಲೆಯಾದ ಭಾಗೀರಥೀ (ಗಂಗಾ) ನದಿಯು ಉದ್ಭವಿಸಿತು. ಈ ಗಂಗಾನದಿಯೇ ಭಗೀರಥನ ತಪಃಫಲದಿಂದ ತ್ರಿಪಥಗಾಮಿನಿಯಾಗಿ ಸ್ವರ್ಗ ಮರ್ತ್ಯ ಪಾತಾಳಲೋಕಗಳನ್ನು ಪಾವನಗೊಳಿಸಿದುದಲ್ಲದೆ, ಸಗರನ ಅರುವತ್ತುಸಾವಿರ ಮಂದಿ ಮಕ್ಕಳನ್ನೂ ಉದ್ಧಾರಮಾಡಿತು. (ಇದೇ ಗಂಗಾನದೀ ಪ್ರವಾಹವನ್ನೇ, ಭಗೀರಥನ ತಪಸ್ಸಿಗೆ ಮೆಚ್ಚಿ ಶಂಭುವು ಜಡೆಗಳಲ್ಲಿ ಧರಿಸಿದುದು )

**ತೀರ್ಥಾನಾಂ ತೀರ್ಥಮಾದ್ಯಂ ಚ ಗಂಗಾಖ್ಯಾಮವತಾರಿತಂ ।**
**ತದ್ವಿಷ್ಣೋಶ್ಚರಣೇನೈವ ಸಮೇತಂ ಬ್ರಹ್ಮಣಾ ಕೃತಂ ॥ ೧೬ ॥**
**ತ್ರಿವಿಕ್ರಮಾತ್ಪರೋ ಹ್ಯಾತ್ಮಾ ನಾಮ್ನಾ ತ್ರಿವಿಕ್ರಮೋಽಭವತ್ ।**
**ತ್ರಿವಿಕ್ರಮಸಮಾಕ್ರಾಂತಂ ತ್ರೈಲೋಕ್ಯಂ ಚ ತದಾಽಭವತ್ ॥ ೧೭ ॥**
**ಪದದ್ವಯೇನ ವಾ ಪೂರ್ಣಂ ಜಗದೇತಚ್ಚರಾಚರಂ ।**
**ವಿಹಾಯ ತತ್ಸ್ವರೂಪಂ ಚ ದೇವದೇವೋ ಜನಾರ್ದನಃ ।**
**ಪುನಶ್ಚ ಬಟರೂಪೋಽಸಾವುಪವಿಶ್ಯ ನಿಜಾಸನೇ ॥ ೧೮ ॥**
**ತದಾ ದೇವಾಃ ಸ ಗಂಧರ್ವಾ ಮುನಯಃ ಸಿದ್ಧಚಾರಣಾಃ ।**
**ಆಗತಾಶ್ಚ ಬಲೇರ್ಯಜ್ಞಂ ದ್ರಷ್ಟುಂ ಯಜ್ಞಪತಿಂ ಪ್ರಭುಂ ॥ ೧೯ ॥**
**ತತ್ರ ಬ್ರಹ್ಮಾ ಸಮಾಗತ್ಯ ಸ್ತುತಿಂ ಚಕ್ರೇ ಪರಾತ್ಮನಃ ।**
**ಬಲೇಸ್ತತ್ರೈವ ಚಾನ್ಯೇ ಚ ದೈತ್ಯೇಂದ್ರಾಶ್ಚಾಗತಾಸ್ತ್ವರಂ ॥ ೨೦ ॥**
**ಏಭಿಃ ಸರ್ವೈಃ ಪರಿವೃತೋ ವಾಮನೋ ಬಲಿಸದ್ಮನಿ ।**
**ಉಪವಿಶ್ಯಾಸನೇ ಸೋಽಥ ಉವಾಚ ಗರುಡಂ ಪ್ರತಿ ॥ ೨೧ ॥**

---

೧೬–೨೦. ಎಲೈ ವಿಪ್ರರೇ! ಈ ಪ್ರಕಾರವಾಗಿ ಸಮಸ್ತ ತೀರ್ಥಗಳಿಗೂ ಮೊದಲನೆಯ ತೀರ್ಥವಾದ ಆ ಗಂಗಾನದಿಯು ಆ ವಿಷ್ಣುಪಾದದಿಂದಲೆ ಬ್ರಹ್ಮನು ಉದ್ಭವಿಸುವಂತೆಸಗಿದನು. ಆ ಪರಮಾತ್ಮನಾದರೋ ಮೂರಡಿಗಳ ನೆಲವನ್ನು ಬೇಡಿದುದರಿಂದ ತ್ರಿವಿಕ್ರಮನಾದನು. ಆ ತ್ರಿವಿಕ್ರಮನ ಎರಡೇ ಅಡಿಗಳಿಂದಲೇ ಮೂರು ಲೋಕಗಳೂ ಆಕ್ರಮಿಸಲ್ಪಟ್ಟು ಚರಾಚರಾತ್ಮಕವಾದ ಈ ಜಗತ್ತೇ ಅವುಗಳಿಂದ ತುಂಬಿಹೋಯಿತು. ತರುವಾಯ ದೇವದೇವನಾದ ಆ ಜನಾರ್ದನನು ತನ್ನ ತ್ರಿವಿಕ್ರಮ ರೂಪವನ್ನು ಉಪಸಂಹರಿಸಿ ಪುನಃ ವಾಮನ ವಟುರೂಪಧರನಾಗಿ ತನ್ನ ಪೀಠದಲ್ಲಿ ಕುಳಿತುಕೊಂಡನು. ಆಗ ಗಂಧರ್ವ ರೊಡಗೂಡಿದ ಸಮಸ್ತ ದೇವತೆಗಳೂ, ಮುನಿಗಳೂ, ಸಿದ್ಧಚಾರಣರೂ ಬಲಿ ದೈತ್ಯೇಂದ್ರನ ಯಜ್ಞವನ್ನೂ, ಯಜ್ಞಪತಿಯಾದ ಮಹಾವಿಷ್ಣುವನ್ನೂ ಸಂದರ್ಶಿ ಸಲು ಅಲ್ಲಿಗೈತಂದರು. ಆ ಸಮಯದಲ್ಲಿಯೇ ಲೋಕಪಿತಾಮಹನಾದ ಬ್ರಹ್ಮನೂ ಆ ಯಜ್ಞವಾಟಿಕೆಗೆ ಬಂದು ಪೀಠದಲ್ಲಿ ಸುಖಾಸೀನನಾಗಿದ್ದ ಆ ಪರಮಾತ್ಮನನ್ನು ಸ್ತುತಿಸಿದನು. ಅಂತೆಯೇ ಇತರ ದೈತ್ಯೇಂದ್ರರೂ ಸಹ ಆ ಬಲಿಯ ಯಜ್ಞವನ್ನು ನೋಡಲೋಸುಗ ತ್ವರೆಯಿಂದಲ್ಲಿಗೆ ಬಂದರು.

೨೧–೨೫. ಇವರೆಲ್ಲರಿಂದಲೂ ಸುತ್ತುವರೆಯಲ್ಪಟ್ಟ ಆ ವಾಮನ ಮೂರ್ತಿಯು ಬಲಿಯ ಸಭಾಂಗಣದಲ್ಲಿ ಪೀಠದಮೇಲೆ ಕುಳಿತು ತನ್ನ ವಾಹನ ವಾದ ಗರುಡನನ್ನು ಕುರಿತು, “ಎಲೈ ಗರುಡನೇ! ಈ ಬಲಿಯು ತಿಳಿವಿಲ್ಲದೆ ನನಗೆ ಮೂರಡಿ ಭೂಮಿಯನ್ನು ದಾನಮಾಡಿದನು. ನಾನು ಆ ಮೂರು ಅಡಿಗಳಲ್ಲಿ

ದೈತ್ಯೋಽಸೌ ಬಾಲಿಶೋ ಭೂತ್ವಾ ದತ್ತ್ವಾನೇನ ಮಹೀ ಮಮ ।
ತ್ರಿಪದಕ್ರಮಣೇನೈವ ಗೃಹೀತಂ ಚ ಪದದ್ವಯಂ ॥ ೨೨ ॥
ಪದಮೇಕಂ ಪ್ರತಿಶ್ರುತ್ಯ ನ ದದಾತಿ ಹಿ ದುರ್ಮತಿಃ ।
ತಸ್ಮಾತ್ತ್ವಯಾ ಗೃಹೀತವ್ಯಂ ತೃತೀಯಂ ಪದಮೇವಚ ॥ ೨೩ ॥
ಇತ್ಯುಕ್ತೋ ಗರುಡಸ್ತೇನ ವಾಮನೇನ ಮಹಾತ್ಮನಾ ।
ವೈರೋಚನಿಂ ವಿನಿರ್ಭರ್ತ್ಸ್ಯ ವಾಕ್ಯಂ ಚೇದಮುವಾಚಹ ॥ ೨೪ ॥
ರೇ ಬಲೇ ಕಿಂ ತ್ವಯಾ ಮೂಢ ಕೃತಮಸ್ತಿ ಜುಗುಪ್ಸಿತಂ ।
ನ ವಿದ್ಯಮಾನೇ ಹ್ಯರ್ಥೇ ಹಿ ಕಿಂ ದದಾಸಿ ಪರಾತ್ಮನೇ ।
ಔದಾರ್ಯೇಣ ಹಿ ಕಿಂ ಕಾರ್ಯಮಲ್ಪಕೇನ ತ್ವಯಾಽಧುನಾ ॥ ೨೫ ॥
ಇತ್ಯುಕ್ತೋ ಬಲಿರಾವಿಷ್ಟಃ ಸ್ಮಯಮಾನಃ ಖಗೇಶ್ವರಂ ।
ವಕ್ಷ್ಯಮಾಣಮಿದಂ ವಾಕ್ಯಂ ಗರುತ್ಮಂತಂ ತದಾಽಬ್ರವೀತ್ ॥ ೨೬ ॥
ಸಮರ್ಥೋಽಸ್ಮಿ ಮಹಾಪಕ್ಷೇ ಕೃಪಣೋ ನ ಭವಾಮ್ಯಹಂ ।
ಯೇನೇದಂ ಕಾರಿತಂ ಸರ್ವಂ ತಸ್ಮೈ ಕಿಂ ಪ್ರದದಾಮ್ಯಹಂ ॥ ೨೭ ॥
ಅಸಮರ್ಥೋ ಹ್ಯಹಂ ತಾತ ಕೃತೋಽನೇನ ಮಹಾತ್ಮನಾ ।
ತದೋವಾಚ ಬಲಿಂ ಸೋಽಪಿ ತಾರ್ಕ್ಷ್ಯಪುತ್ರೋ ಮಹಾಮನಾಃ ॥೨೮॥

---

ಎರಡೇ ಅಡಿಗಳನ್ನು ಮಾತ್ರ ಪಡೆದಿರುತ್ತೇನೆ. ಈ ದುರ್ಬುದ್ಧಿಯು ಮತ್ತೊಂದಡಿಯನ್ನು ಕೊಡುತ್ತೇನೆಂದು ಮಾತುಕೊಟ್ಟು ಈಗ ಕೊಡದಿರುವನು. ಆದುದರಿಂದ ನೀನು ಆ ಮೂರನೆಯಡಿಯನ್ನಿವನಿಂದ ತೆಗೆದುಕೊಳ್ಳುವವನಾಗು" ಎಂದು ಹೇಳಿದನು. ಮಹಾತ್ಮನಾದ ವಾಮನನು ಈರೀತಿ ನುಡಿದುದನ್ನು ಕೇಳಿ ಗರುಡನು ವಿರೋಚನಪುತ್ರನಾದ ಆ ಬಲಿಯನ್ನು ಗದರಿ ಹೆದರಿಸಿ ಅವನನ್ನು ಕುರಿತು, "ಎಲಾ ಬಲಿಯೇ! ನೀನು ತಿಳುವಳಿಕೆಯಿಲ್ಲದೆ ಇಂತಹ ಅಸಹ್ಯಕರವಾದ ಕಾರ್ಯವನ್ನೇಕೆಮಾಡಿದೆ? ಕೊಡಬೇಕಾದ ಪದಾರ್ಥವೇ ಇಲ್ಲದಿರುವಾಗ ಈ ಪರಮಾತ್ಮನಿಗೆ ಏನನ್ನು ಕೊಡುವೆ? ಈಗ ಕೇವಲ ಅಲ್ಪನಾಗಿರುವ ನಿನ್ನ ಔದಾರ್ಯದಿಂದೇನುಪ್ರಯೋಜನ?" ಎಂದು ಹೇಳಿದನು.

೨೬–೩೦. ಈ ಮಾತನ್ನು ಕೇಳಿ ಬಲಿಯು ನಗುತ್ತಲೇ ಖಗೇಶ್ವರನಾದ ಆ ಗರುಡನನ್ನು ಕುರಿತು, "ಅಯ್ಯಾ ಮಹಾಪಕ್ಷಿಯೇ! ನನ್ನನ್ನು ಅಲ್ಪನೆಂದು ಹೇಳುವೆಯೇಕೆ? ನಾನು ಸಮರ್ಥನಾಗಿಯೇ ಇರುವೆನು. ನಾನು ದರಿದ್ರನೆಂದಿಗೂ ಆಗುವುದಿಲ್ಲ. ಆದರೆ ಈ ಜಗತ್ತೆಲ್ಲವನ್ನೂ ನಿರ್ಮಾಣಮಾಡಿದ ಈ ಪ್ರಭುವಿಗೆ ನಾನೇನನ್ನುತಾನೆ ಕೊಡಲಿ! ಅಪ್ಪ! ಈ ಮಹಾತ್ಮನು ನನ್ನನ್ನು ಸಾಮರ್ಥ್ಯಹೀನನನ್ನಾಗಿಸಿರುವನು" ಎಂದು ಹೇಳಿದನು. ಆಗ ಮಹಾಮನಸ್ವಿಯಾದ ಗರುಡನು, "ದೈತ್ಯೇಂದ್ರ! ನೀನು ಎಲ್ಲವನ್ನೂ ತಿಳಿದಿದ್ದರೂ, ನಿನ್ನ

ಜಾನನ್ನಪಿ ಚ ದೈತ್ಯೇಂದ್ರ ಗುರುಣಾಪಿ ನಿವಾರಿತಃ ।
ವಿಷ್ಣವೇಽಪಿ ಮಹೀಂ ಪ್ರಾದಾಸ್ತ್ವಯಾ ಕಿಂ ವಿಸ್ಮೃತಂ ಮಹತ್ ॥ ೨೯ ॥
ದಾತವ್ಯಂ ತತ್ಪದಂ ವಿಷ್ಣೋಸ್ತೃತೀಯಂ ಯತ್ಪ್ರತಿಶ್ರುತಂ ।
ನ ದದಾಸಿ ಕಥಂ ವೀರ ನಿರಯೇ ಚ ಪತಿಷ್ಯಸಿ ॥ ೩೦ ॥
ನ ದದಾಸಿ ತೃತೀಯಂ ಚ ಪದಂ ಮೇ ಸ್ವಾಮಿನಃ ಕಥಂ ।
ಬಲಾದ್ಗೃಹ್ಣಾಮಿ ರೇ ಮೂಢ ಇತ್ಯುಕ್ತ್ವಾ ತಂ ಮಹಾಸುರಂ ।
ಬಬಂಧ ವಾರುಣೈಃ ಪಾಶೈರ್ವೈರೋಚನಸುತಂ ತದಾ ॥ ೩೧ ॥
ನಿತರಾಂ ನಿಷ್ಠುರೋ ಭೂತ್ವಾ ಗರುಡೋ ಜಯತಾಂ ವರಃ ।
ಬದ್ಧಂ ಸ್ವಪತಿಮಾಲೋಕ್ಯ ವಿಂಧ್ಯಾವಳಿಃ ಸಮಾಯಯೌ ॥ ೩೨ ॥
ಬಾಣಮೇಕಂ ಸಮಾರೋಪ್ಯ ವಾಮನಸ್ಯಾಗ್ರತಃ ಸ್ಥಿತಾ ।
ವಾಮನೇನ ತದಾ ಪೃಷ್ಟಾ ಕೇಯಂ ಚಾತ್ರಾಗತಃ ಸ್ಥಿತಾ ॥ ೩೩ ॥
ತದೋವಾಚ ಮಹಾತೇಜಾಃ ಪ್ರಹ್ಲಾದೋ ಹ್ಯಸುರಾಧಿಪಃ ।
ಬಲೇಃ ಪತ್ನೀತಿ ತ್ವಾಂ ಪ್ರಾಪ್ತಾ ಇಯಂ ವಿಂಧ್ಯಾವಲಿಃ ಸತೀ ॥ ೩೪ ॥
ಪ್ರಹ್ಲಾದಸ್ಯ ವಚಃ ಶ್ರುತ್ವಾ ವಾಮನೋ ವಾಕ್ಯಮಬ್ರವೀತ್ ।
ಬ್ರೂಹಿ ವಿಂಧ್ಯಾವಲೇ ವಾಕ್ಯಂ ಕಿಂ ಕಾರ್ಯಂ ತೇ ಕರೋಮ್ಯಹಂ ।
ಏವಮುಕ್ತಾ ಭಗವತಾ ವಿಂಧ್ಯಾವಲಿರಭಾಷತ ॥ ೩೫ ॥

---

ಗುರುವಾದ ಶುಕ್ರಾಚಾರ್ಯನು ನಿನಗೆ ತಿಳಿಯಹೇಳಿ ತಡೆದರೂ ಕೇಳದೆ ಈ ಮಹಾವಿಷ್ಣುವಿಗೆ ಭೂಮಿಯನ್ನು ದಾನಮಾಡಿದೆಯೆಂಬುದನ್ನು ಮರೆತೆಯೇನು? ನೀನು ಕೊಡುತ್ತೇನೆಂದು ವಾಗ್ದಾನಮಾಡಿದ ಆ ಮೂರನೆಯ ಅಡಿಯನ್ನು ಈಗ ಕೊಡಲೇಬೇಕು. ಎಲೈ ವೀರನೇ! ನೀನೇನಾದರೂ ಆ ಮೂರನೆಯ ಅಡಿಯನ್ನು ಕೊಡದೆಹೋದರೆ ನರಕದಲ್ಲಿ ಬೀಳುತ್ತೀಯೆ.

೩೧–೩೫. ಎಲೆವೋ! ನನ್ನ ಸ್ವಾಮಿಗೆ ನೀನು ಕೊಡಬೇಕಾದ ಆ ಮೂರನೆಯಡಿಯನ್ನೇಕೆ ಕೊಡುವುದಿಲ್ಲವೋ ನೋಡುತ್ತೇನೆ. ಎಲಾ ತಿಳಿಗೇಡಿ! ನಾನದನ್ನು ಬಲಾತ್ಕಾರದಿಂದ ತೆಗೆದುಕೊಳ್ಳುತ್ತೇನೆ" ಎಂದು ಹೇಳಿ ಮಹಾಪರಾಕ್ರಮಿಯಾದ ಆ ಗರುಡನು ಮಹಾನಿಷ್ಠುರನಾಗಿ ಆ ಮಹಾಸುರನನ್ನು ವರುಣಪಾಶಗಳಿಂದ ಬಿಗಿಸಿದನು. ಈ ರೀತಿ ತನ್ನ ಗಂಡನನ್ನು ಆ ಪಾಶಗಳಿಂದ ಬಿಗಿಸಿದುದನ್ನು ಕಂಡು ಆತನ ಪತ್ನಿಯಾದ ವಿಂಧ್ಯಾವಳಿಯು ಬಿಲ್ಲಿನಲ್ಲಿ ಬಾಣವನ್ನು ಹೂಡಿ ಮಹಾರೋಷಾವಿಷ್ಟೆಯಾಗಿ ಆ ವಾಮನನೆದುರಿಗೆ ಬಂದು ನಿಂತಳು. ಆಗಲಾ ವಾಮನನು "ಇಲ್ಲಿಗೈತಂದಿರುವ ಈಕೆ ಯಾರು" ಎಂದು ಕೇಳಿದನು. ಆಗ ಮಹಾತೇಜಸ್ವಿಯೂ, ಅಸುರಾಧಿಪನೂ ಆದ ಪ್ರಹ್ಲಾದನು, "ಪ್ರಭುವೇ! ಈಕೆಯು ಬಲಿಯ ಹೆಂಡತಿ. ಮಹಾಪತಿವ್ರತೆಯಾದ ಈಕೆಯು

ವಿಂಧ್ಯಾವಲಿರುವಾಚ :—

**ಕಸ್ಮಾದ್ಬದ್ಧೋ ಮಮ ಪತಿರ್ಗರುಡೇನ ಮಹಾತ್ಮನಾ ।**
**ತತ್ಕಥ್ಯತಾಂ ಮಹಾಭಾಗ ತ್ವರನ್ನೇವ ಜನಾರ್ದನ ।**
**ತದೋವಾಚ ಮಹಾತೇಜಾ ಬಟುವೇಷಧರೋ ಹರಿಃ ॥ ೩೬ ॥**

ಶ್ರೀ ಭಗವಾನುವಾಚ :—

**ಅನೇನೈವ ಪ್ರದತ್ತಾ ಮೇ ಮಹೀ ತ್ರಿಪದಲಕ್ಷಣಾ ।**
**ಪದದ್ವಯೇನ ಚ ಮಯಾಕ್ರಾಂತಂ ತ್ರೈಲೋಕ್ಯಮದ್ಯವೈ ॥ ೩೭ ॥**
**ಅನೇನ ಮಮ ದಾತವ್ಯಂ ತೃತೀಯಂ ಪದಮೇವ ಚ ।**
**ತಸ್ಮಾದ್ಬದ್ಧೋ ಮಯಾ ಸಾಧ್ವಿ ಗರುಡೇನೈವ ತೇ ಪತಿಃ ॥ ೩೮ ॥**
**ಶ್ರುತ್ವಾ ಭಗವತೋ ವಾಕ್ಯಮುವಾಚ ಪರಮಂ ವಚಃ ।**
**ಪ್ರತಿಶ್ರುತಮನೇನೈವ ನ ದತ್ತಂ ಹಿ ತವ ಪ್ರಭೋ ॥ ೩೯ ॥**
**ಕ್ರಾಂತಂ ತ್ರಿಭುವನಂ ಚಾದ್ಯ ತ್ವಯಾ ವಿಕ್ರಮರೂಪಿಣಾ ।**
**ತದಸ್ಮಾಕಂ ವಿಜಘ್ನೀಯಾಃ ಸ್ವರ್ಗೇ ವಾಪ್ಯಥವಾ ಭುವಿ ।**
**ಕಿಂ ಚಿನ್ನದತ್ತಾ ಹಿ ವಿಭೋ ದೇವದೇವ ಜಗತ್ಪತೇ । ॥ ೪೦ ॥**

---

ಹೆಸರು ವಿಂಧ್ಯಾವಳಿ" ಎಂದು ಹೇಳಿದನು. ಶ್ರೀಮನ್ಮಹಾವಿಷ್ಣುವು ಪ್ರಹ್ಲಾದನ ಮಾತನ್ನು ಕೇಳಿ "ಎಲೌ ವಿಂಧ್ಯಾವಳಿ! ನಿನಗೇನಾಗಬೇಕು. ನಾನು ನಿನ್ನ ಕಾರ್ಯವನ್ನು ಮಾಡಿಕೊಡುವೆನು ಹೇಳು" ಎಂದನು. ಆಗ ವಿಂಧ್ಯಾವಳಿಯು ಆ ಭಗವಂತನನ್ನು ಕುರಿತು ಹೇಳಿದಳು.

೩೬–೩೮. ವಿಂಧ್ಯಾವಳಿಯು ಹೇಳುತ್ತಾಳೆ:—"ಎಲೈ ಮಹಾಭಾಗ, ಜನಾರ್ದನಾ!! ಮಹಾತ್ಮನಾದ ಈ ಗರುಡನು ನನ್ನ ಪತಿದೇವನನ್ನು ಪಾಶಗಳಿಂದ ಬಂಧಿಸಿರುವುದೇಕೆ?" ಇಂತು ನುಡಿದ ಆಕೆಯನ್ನು ಕುರಿತು ವಟುರೂಪಿಯಾದ ಆ ಹರಿಯು ಹೀಗೆಂದನು. "ಶ್ರೀಹರಿಯು ಹೇಳುತ್ತಾನೆ:—"ಅಮ್ಮಾ! ನಿನ್ನ ಪತಿಯಾದ ಈ ಬಲಿಯು ನನಗೆ ಮೂರಡಿ ಭೂಮಿಯನ್ನು ದಾನಮಾಡಿದನು. ಅದರಲ್ಲಿ ನಾನು ಎರಡು ಅಡಿಗಳಿಂದಲೇ ಮೂರು ಲೋಕಗಳನ್ನೂ ಆಕ್ರಮಿಸಿ ಕೊಂಡೆನು. ಇನ್ನೂ ಈತನು ನನಗೆ ಒಂದಡಿಯನ್ನು ಕೊಡಬೇಕಾಗಿರುವುದು. ಆದುದರಿಂದಲೇ ನನ್ನ ಅಪ್ಪಣೆಯಂತೆ ಈ ಗರುಡನು ನಿನ್ನ ಪತಿಯನ್ನು ಬಂಧಿಸಿ ರುವನು."

೩೯–೪೦. ಭಗವಂತನ ನುಡಿಯನ್ನು ಕೇಳಿ ವಿಂಧ್ಯಾವಳಿಯು ಆತನನ್ನು ಕುರಿತು ಶ್ರೇಷ್ಠವಾದ ಈ ಮಾತನ್ನಾಡಿದಳು. "ಓ ಸ್ವಾಮಿಯೇ! ನನ್ನ ಪತಿ ದೇವನಾದ ಈ ಬಲಿಯು ತನ್ನ ಮಾತಿನಂತೆ ದಾನಮಾಡಲಿಲ್ಲವೆ! ಪರಾಕ್ರಮವೇ

ಪ್ರಹಸ್ಯ ಭಗವಾನಾಹ ತದಾ ವಿಂಧ್ಯಾವಲಿಂ ಪ್ರಭುಃ
ಪದಾನಿ ತ್ರೀಣಿ ಮೇ ಚಾದ್ಯ ದಾತವ್ಯಾನಿ ಕುತೋಽಧುನಾ ।
ಶೀಘ್ರಂ ವದ ವಿಶಾಲಾಕ್ಷಿ ಯತ್ತೇ ಮನಸಿ ವರ್ತತೇ । ॥ ೪೧ ॥
ತದೋವಾಚ ಚ ಸಾ ಸಾಧ್ವೀ ಹ್ಯುರುಕ್ರಮಮುಪಸ್ಥಿತಾ ॥ ೪೨ ॥
ತ್ವಯಾ ಕೃತೋ ವೇಯಮುರುಕ್ರಮೇಣ
ಕ್ರಾಂತಂ ತ್ರಿಲೋಕೀ ಭುವನೈಕನಾಥ ।
ತಥೈವ ಸರ್ವಂ ಜಗದೇಕಬಂಧೋ
ದೇಯಂ ಕಿಮಸ್ಮಾಭಿರತುಲ್ಯರೂಪಿಣೇ ॥ ೪೩ ॥
ತಸ್ಮಾದ್ವಿಹಾಯ ತದ್ವಿಷ್ಣೋ ತ್ವಮೇವಂ ಕುರು ಸಂಪ್ರತಿ ।
ಪ್ರತಿಶ್ರುತಾನಿ ಮೇ ಭರ್ತ್ರಾ ಪದಾನಿ ತ್ರೀಣಿ ಚಾಧುನಾ ।
ದದಾತಿ ಮೇ ಪತಿಸ್ತೇಽದ್ಯ ನಾತ್ರ ಕಾರ್ಯಾ ವಿಚಾರಣಾ ॥ ೪೪ ॥
ನಿಧೇಹಿ ಮೇ ಪದಂ ತ್ವಂ ಹಿ ಶೀರ್ಷ್ಣಿ ದೇವವರ ಪ್ರಭೋ ।
ದ್ವಿತೀಯಂ ಮೇ ಶಿಶೋಸ್ತ್ವಂ ಹಿ ಕುರು ಮೂರ್ಧ್ನಿ ಜಗತ್ಪತೇ ॥ ೪೫ ॥
ತೃತೀಯಂ ತ ಜಗನ್ನಾಥ ಕುರುಂ ಶೀರ್ಷ್ಣಿ ಪತಿರ್ಮಮ ।
ಏವಂ ತ್ರೀಣಿ ಪದಾನೀಶ ತವ ದಾಸ್ಯಾಮಿ ಕೇಶವ ॥ ೪೬ ॥

---

ರೂಪವಾಗುಳ್ಳ ನೀನಾದರೋ ನಿನ್ನ ಪ್ರಭಾವದಿಂದ ಈಗ ಮೂರು ಲೋಕಗಳನ್ನೂ ಆಕ್ರಮಿಸಿರುವೆ! ಎಲೈ ವಿಭುವೆ, ಜಗತ್ಪತೀ!! ಈತನು ಸ್ವರ್ಗದಲ್ಲಿಯಾಗಲಿ, ಭೂಮಿಯಲ್ಲಿಯಾಗಲಿ ನಿನಗೇನೂ ಕೊಡಲಿಲ್ಲವೆ? ಸ್ವಲ್ಪ ಯೋಚಿಸು."

೪೧–೪೨. ಪ್ರಭುವಾದ ವಾಮನನು ಆ ಮಾತನ್ನು ಕೇಳಿ ನಗುತ್ತ ಆ ವಿಂಧ್ಯಾವಳಿಯನ್ನುಕುರಿತು "ಎಲೆ ವಿಶಾಲಾಕ್ಷಿ! ಈತನು ನನಗೆ ಮೂರಡಿಗಳನ್ನು ಕೊಡಬೇಕು. ಈಗ ಅದೆಲ್ಲಿ? ನಿನ್ನ ಮನಸ್ಸಿನಲ್ಲಿರುವುದನ್ನು ಜಾಗ್ರತೆಯಾಗಿ ಹೇಳು" ಎಂದನು. ಆಗಲಾ ಪತಿವ್ರತೆಯು ಆ ಉರುಕ್ರಮನನ್ನು ಕುರಿತು ಹೇಳಿದಳು.

೪೩–೪೪. "ಓ ಜಗನ್ನಾಥಾ! ನೀನು ಆ ನಿನ್ನ ಮಹಾಪಾದಗಳಿಂದ ಲೋಕತ್ರಯವನ್ನೂ ಆಕ್ರಮಿಸಿದೆ. ದೇವದೇವ! ಹೀಗೆ ಸಮಾನವೇ ಇಲ್ಲದ ರೂಪವನ್ನೊಳಗೊಂಡು ವಿಶ್ವರೂಪಿಯಾಗಿರುವ ನಿನಗೆ ನಾವೇನನ್ನು ಕೊಡಬೇಕು? ಆದುದರಿಂದೆಲೈ ವಿಷ್ಣುವೇ! ನೀನು ಆ ಮಾತನ್ನು ಬಿಟ್ಟು ಈಗ ನಾನು ಹೇಳುವಂತೆ ಮಾಡು. ನನ್ನ ಪತಿಯು ನಿನಗೆ ಮಾತು ಕೊಟ್ಟಿರುವ ಆ ಮೂರಡಿಗಳನ್ನು ನಿನಗೆ ಕೊಟ್ಟೇ ಕೊಡುತ್ತಾನೆ. ನೀನು ಈ ವಿಷಯದಲ್ಲಿ ಸಂದೇಹಪಡಬೇಡ.

೪೫–೪೬. ಪ್ರಭುವೇ! ನೀನು ನಿನ್ನೊಂದಡಿಯನ್ನು ನನ್ನ ತಲೆಯಮೇಲಿಡು.

**ತಸ್ಯಾಸ್ತದ್ವಚನಂ ಶ್ರುತ್ವಾ ಪರಿತುಷ್ಟೋ ಜನಾರ್ದನಃ ।**
**ಉವಾಚ ಶ್ಲಕ್ಷ್ಣಯಾ ವಾಚಾ ವಿರೋಚನಸುತಂ ಪ್ರತಿ ॥ ೪೭ ॥**
**ಸುತಲಂ ಗಚ್ಛ ದೈತ್ಯೇಂದ್ರ ಮಾವಿಲಂಬಿತುಮರ್ಹಸಿ ।**
**ಸರ್ವೈಶ್ಚಾಸುರಸಂಘೈಶ್ಚ ಚಿರಂಜೀವ ಸುಖೀಭವ ॥ ೪೮ ॥**
**ಪರಿತುಷ್ಟೋಽಸ್ಮ್ಯಹಂ ತಾತ ಕಿಂ ಕಾರ್ಯಂ ಕರವಾಣಿ ತೇ ।**
**ಸರ್ವೇಷಾಮಪಿ ದಾತೄಣಾಂ ವರಿಷ್ಠೋಽಸಿ ಮಹಾಮತೇ ॥ ೪೯ ॥**
**ವರಂ ವರಯ ಭದ್ರಂ ತೇ ಸರ್ವಾನ್ಕಾಮಾನ್ ದದಾಮಿ ತೇ ।**
**ತ್ರಿವಿಕ್ರಮೇಣೈವಮುಕ್ತೋಽಸೌ ವಿರೋಚನಸುತಸ್ತದಾ ॥ ೫೦ ॥**
**ನಿಯುಕ್ತೋ ಹಿ ಪರಿಷ್ವಕ್ತೋ ದೇವದೇವೇನ ಚಕ್ರಿಣಾ ।**
**ತದಾ ಬಲಿರುವಾಚೇದಂ ವಾಕ್ಯಂ ವಾಕ್ಯವಿಶಾರದಃ ॥ ೫೧ ॥**

---

ಜಗತ್ಪತಿಯೇ! ನಿನ್ನ ಎರಡನೆಯ ಪಾದವನ್ನು ಈ ನನ್ನ ಕಂದನ ತಲೆಯ ಮೇಲಿಡು. ಉಳಿದಿರುವ ಆ ಮೂರನೆಯ ಅಡಿಯನ್ನು ನನ್ನ ಪತಿಯ ತಲೆಯ ಮೇಲಿರಿಸು" ಎಂದಳು.

೪೭–೫೦. ಎಲೈ ಮುನಿಗಳಿರಾ! ಈ ರೀತಿ ನುಡಿದ ಆ ವಿಂಧ್ಯಾವಳಿಯ ಮಾತುಗಳನ್ನು ಕೇಳಿ ಆ ಜನಾರ್ದನನು ಸಂತುಷ್ಟನಾಗಿ ವಿರೋಚನನ ಮಗನಾದ ಆ ಬಲಿದಾನವನನ್ನು ಬಂಧವಿಮುಕ್ತನನ್ನಾಗಿ ಮಾಡಿ ಅವನನ್ನು ಆಲಿಂಗಿಸಿ ಮೃದುವಚನಗಳಿಂದ ಅವನನ್ನು ಕುರಿತು, "ಎಲೈ ದೈತ್ಯೇಂದ್ರನೇ! ನೀನೀಗಲೇ ಸುತಲಲೋಕಕ್ಕೆ ತೆರಳು, ತಡಮಾಡಬೇಡ. ನೀನು ಆ ಲೋಕವನ್ನು ಸೇರಿ ದೈತ್ಯರೆಲ್ಲರೊಡಗೂಡಿ ಬಹಳಕಾಲ ಸುಖವಾಗಿ ಬಾಳು. ಅಯ್ಯಾ! ನಿನ್ನ ಭಕ್ತಿಗೂ, ನೀನು ಮಾಡಿದ ದಾನಕ್ಕೂ ನಾನು ಮೆಚ್ಚಿ ಸಂತೋಷಗೊಂಡಿರುವೆನು. ನಿನಗಾಗಿ ನಾನು ಯಾವ ಕಾರ್ಯವನ್ನು ಮಾಡಲಿ? ಎಲೈ ಮಹಾಮತಿಯೇ ನೀನು ಪಾತ್ರಗಳಿಗೆಲ್ಲ ಶ್ರೇಷ್ಠನಾದ ದಾತೃವೆನಿಸಿದೆ. ವರವನ್ನು ಬೇಡು; ನಿನಗೆ ಮಂಗಳವಾಗಲಿ. ನಿನ್ನ ಬಯಕೆಗಳೆಲ್ಲವನ್ನೂ ಈಡೇರಿಸಿಕೊಡುವೆನು ಕೇಳು" ಎಂದು ಹೇಳಿದನು. ಆಗ ಮಾತನಾಡುವುದರಲ್ಲಿ ಮಹಾ ಚತುರನಾದ ಆ ಬಲಿದಾನವೇಂದ್ರನು ಆ ಸ್ವಾಮಿಯನ್ನು ಕುರಿತು ಹೇಳಿದನು.

೫೧. "ಎಲೈ ಪ್ರಭುವೇ! ಚರಾಚರಾತ್ಮಕವಾದ ಈ ಜಗತ್ತೆಲ್ಲವನ್ನೂ ನೀನೇ ಸೃಷ್ಟಿಮಾಡಿರುವೆ. ಆದುದರಿಂದ ನಿನ್ನ ಅಡಿದಾವರೆಯೊಂದನ್ನುಳಿದು ನಾನು ಮತ್ತೇನನ್ನೂ ಬಯಸುವುದಿಲ್ಲ. ಓ ದೇವದೇವ, ಜನಾರ್ದನಾ! ಅಡಿಗಡಿಗೂ ನಿನ್ನ ಅಡಿದಾವರೆಗಳಲ್ಲಿಯೇ ನನಗೆ ನಿರಂತರವಾದ ಭಕ್ತಿಯಿರಲಿ" ಎಂದು ಪ್ರಾರ್ಥಿಸಿದನು.

ತ್ವಯಾಕೃತಮಿದಂ ಸರ್ವಂ ಜಗದೇತಚ್ಚರಾಚರಂ ।
ತಸ್ಮಾನ್ನಕಾಮಯೇ ಕಿಂಚಿತ್ತ್ವತ್ಪದಾಬ್ಜಂ ವಿನಾ ಪ್ರಭೋ ॥ ೫೨ ॥
ಭಕ್ತಿರಸ್ತು ಪದಾಂಭೋಜೇ ತವ ದೇವ ಜನಾರ್ದನ !
ಭೂಯೋ ಭೂಯಶ್ಚ ದೇವೇಶ ಭಕ್ತಿರ್ಭವತು ಶಾಶ್ವತೀ ॥ ೫೩ ॥
ಏವಮಭ್ಯರ್ಥಿತಸ್ತೇನ ಭಗವಾನ್ಭೂತಭಾವನಃ ।
ಉವಾಚ ಪರಮಪ್ರೀತೋ ವಿರೋಚನಸುತಂ ತದಾ ॥ ೫೪ ॥
ಬಲೇ ತ್ವಂ ಸುತಲಂ ಯಾಹಿ ಜ್ಞಾತಿಸಂಬಂಧಿಭಿರ್ವೃತಃ ।
ಏವಮುಕ್ತಸ್ತದಾ ತೇನ ಅಸುರೋ ವಾಕ್ಯಮಬ್ರವೀತ್ ॥ ೫೫ ॥
ಸುತಲೇ ಕಿಂನು ಮೇ ಕಾರ್ಯಂ ದೇವದೇವ ವದಸ್ವ ಮೇ ।
ತಿಷ್ಠಾಮಿ ತವ ಸಾನ್ನಿಧ್ಯೇ ನಾನ್ಯಥಾ ವಕ್ತುಮರ್ಹಸಿ ॥ ೫೬ ॥
ತದೋವಾಚ ಹೃಷೀಕೇಶೋ ಬಲಿಂ ತಂ ಕೃಪಯಾನ್ವಿತಃ ।
ಅಹಂ ತವ ಸಮೀಪಸ್ಥೋ ಭವಾಮಿ ಸತತಂ ನೃಪ ॥ ೫೭ ॥

ದ್ವಾರಿ ಸ್ಥಿತಸ್ತವ ವಿಭೋ ನಿವಸಾಮಿ ನಿತ್ಯಂ
ಮಾಖಿದ್ಯತಾಮಸುರವರ್ಯ ಬಲೇ ಶೃಣುಷ್ವ ।
ವಾಕ್ಯಂ ತು ಮೇ ಪರಮಹೋ ವರಸ್ತ್ವಾದ್ಯ
ವೈಕುಂಠವಾಸಿಭಿರಲಂ ಚ ಭಜಾಮಿ ಗೇಹಂ ॥ ೫೮ ॥

---

೫೨–೫೩. ಸರ್ವಭೂತಾಂತರ್ಯಾಮಿಯಾದ ಮಹಾವಿಷ್ಣುವು ಈ ರೀತಿ ಪ್ರಾರ್ಥಿಸಿದ ಆ ಬಲಿಯ ವಿಷಯದಲ್ಲಿ ಪರಮಪ್ರೀತನಾಗಿ ಅವನನ್ನು ಕುರಿತು ಹೇಳಿದನು. ಭಗವಂತನು ಹೇಳುತ್ತಾನೆ:—

೫೪–೫೬. "ಅಯ್ಯಾ ಬಲಿಯೇ! ನೀನು ನೆಂಟರಿಷ್ಟರೊಡಗೂಡಿ ಸುತಲ ಲೋಕಕ್ಕೆ ಹೋಗು." ಬಲಿಯು ಹೇಳಿದನು:—ದೇವದೇವ! ಸುತಲಲೋಕದಲ್ಲಿ ನನಗಾವ ಕಾರ್ಯವಿರುವುದು? ನಾನು ನಿನ್ನ ಸನ್ನಿಧಿಯಲ್ಲಿಯೇ ಇರುತ್ತೇನೆ. ಬೇಡವೆನ್ನಬೇಡ.

೫೭–೫೮. ಆಗಲಾ ಹೃಷಿಕೇಶನು ಕೇವಲ ಕೃಪೆಯಿಂದ ಕೂಡಿದವನಾಗಿ ಅವನನ್ನು ಕುರಿತು, "ಅಯ್ಯಾ ದೊರೆಯೇ! ನಾನಾವಾಗಲೂ ನಿನ್ನ ಬಳಿ ಯಲ್ಲಿಯೇ ಇರುತ್ತೇನೆ. ಕೇಳು! ನಾನಾವಾಗಲೂ ನಿನ್ನ ಭವನದ ಬಾಗಿಲಿನಲ್ಲಿಯೇ ವಾಸಮಾಡುತ್ತಿರುತ್ತೇನೆ. ನೀನು ಚಿಂತಿಸಬೇಡ. ಈ ನನ್ನ ಮಾತೇ ನಿನಗೆ ವರವು. ಈಗ ನಾನು ನಿನಗೆ ವರದನಾಗಿರುವೆನು. ವೈಕುಂಠ ವಾಸಿಗಳೆಲ್ಲರೂ ಅಂತಿರಲಿ. ನಾನು ನಿನ್ನ ಮನೆಯಲ್ಲಿಯೇ ಇರುತ್ತೇನೆ" ಎಂದನು.

ತಚ್ಛ್ರುತ್ವಾ ವಚನಂ ತಸ್ಯ ವಿಷ್ಣೋರತುಲ ತೇಜಸಃ ।
ಜಗಾಮ ಸುತಲಂ ದೈತ್ಯೋ ಹ್ಯಸುರೈಃ ಪರಿವಾರಿತಃ ॥ ೫೯ ॥
ತದಾ ಪುತ್ರಶತೇನೈವ ಬಾಣಮುಖ್ಯೇನ ಸತ್ವರಂ ।
ವಸಮಾನೋ ಮಹಾಬಾಹುರ್ದಾತೄಣಾಂ ಚ ಪರಾಗತಿಃ ॥ ೬೦ ॥
ತ್ರೈಲೋಕ್ಯೇ ಯಾಚಕಾ ಯೇ ಚ ಸರ್ವೇ ಯಾಂತಿ ಬಲಿಂ ಪ್ರತಿ ।
ದ್ವಾರಿಸ್ಥಿತಸ್ತಸ್ಯವಿಷ್ಣುಃ ಪ್ರಯಚ್ಛತಿ ಯಥೇಪ್ಸಿತಂ ॥ ೬೧ ॥
ಭುಕ್ತಿಕಾಮಾಶ್ಚಯೇ ಕೇಚಿನ್ಮುಕ್ತಿಕಾಮಾಸ್ತಥಾಪರೇ ।
ಯೇಷಾಂ ಯಜ್ಞೇ ಚ ತೇ ವಿಪ್ರಾಸ್ತೇಭ್ಯಃ ಸಂಪ್ರಯಚ್ಛತಿ ॥ ೬೨ ॥
ಏವಂ ವಿಧೋ ಬಲಿರ್ಜಾತಃ ಪ್ರಸಾದಾಚ್ಛಂಕರಸ್ಯ ಚ ।
ಪುರಾಹಿ ಕಿತವತ್ವೇನ ಯದ್ದತ್ತಂ ಪರಮಾತ್ಮನೇ ॥ ೬೩ ॥
ಅಶುಚಿಂ ಭೂಮಿಮಾಸಾದ್ಯ ಗಂಧಪುಷ್ಪಾದಿಕಂ ಮಹತ್ ।
ಪತಿತಂ ಚಾರ್ಪಿತಂ ತೇನ ಶಿವಾಯ ಪರಮಾತ್ಮನೇ ॥ ೬೪ ॥

---

೫೯–೬೧. ಅಪಾರತೇಜಸ್ವಿಯಾದ ಆ ಮಹಾವಿಷ್ಣುವಿನ ಈ ಮಾತನ್ನು ಕೇಳಿ ಆ ಬಲಿಯು ಅಸುರರೆಲ್ಲರೊಡನೆ ಸುತಲಲೋಕಕ್ಕೆ ಹೊರಟುಹೋದನು. ಮಹಾಬಾಹುವೂ ದಾತೃಗಳೆಲ್ಲರಿಗೂ ಪರಮ ಗತಿಯೂ ಆದ ಆ ದೈತ್ಯೇಂದ್ರನು, ಬಾಣನೇ ಮೊದಲಾದ ನೂರುಮಂದಿ ಮಕ್ಕಳೊಡಗೂಡಿ ಒಡನೆಯೇ ಸುತಲ ಲೋಕಕ್ಕೆ ಬಂದು ವಾಸಮಾಡತೊಡಗಿದನು. ಎಲೈ ಶೌನಕಾದಿಗಳಿರಾ! ತರುವಾಯ ಮೂರು ಲೋಕಗಳಲ್ಲಿಯೂ ಯಾಚಕರಾದವರಾರಿರುವರೋ ಅವರೆಲ್ಲರೂ ಯಾಚನೆಗಾಗಿ ಬಲಿಯು ನೆಲಸಿದ್ದ ಆ ಸುತಲಲೋಕಕ್ಕೆ ಹೋಗು ವರು. ಅಲ್ಲಿ ಆ ದಾನವನ ಭವನದ್ವಾರದಲ್ಲಿರುವ ಮಹಾವಿಷ್ಣುವು ಅವರೆಲ್ಲರಿಗೂ ಬೇಕುಬೇಕಾದುದೆಲ್ಲವನ್ನೂ ಕೊಡುವನು.

೬೨–೬೪. ಹೀಗೆ ಯಾಚಕರಾಗಿ ಬರುವವರಲ್ಲಿ ಕೆಲವರು ಭಕ್ತಿಯನ್ನು ಬಯಸುವವರು: ಕೆಲವರು ಮುಕ್ತಿಯನ್ನು ಬಯಸುವವರು; ಯಜ್ಞಫಲಗಳು ಬೇಕೆನ್ನುವ ವಿಪ್ರರು ಕೆಲವರು. ಇವರೆಲ್ಲರಿಗೂ ಆ ಮಹಾವಿಷ್ಣುವು ಅವರವರಿಗೆ ಬೇಕಾದುದೆಲ್ಲವನ್ನೂ ಕೊಡುತ್ತಿರುವನು. ಎಲೈ ವಿಪ್ರರೇ! ಶಂಕರನ ಅನುಗ್ರಹದಿಂದ ಬಲಿಯು ಇಂತಹ ಮಹಾತ್ಮನಾದನು. ಪೂರ್ವ ಜನ್ಮದಲ್ಲಿ ಕಳ್ಳನಾಗಿದ್ದಾಗ ಅವನು ಪರಮಾತ್ಮನಾದ ಪರಶಿವನಿಗೆ ಅಶುಚಿ ಯಾದ ಭೂಮಿಯಲ್ಲಿ ಬಿದ್ದ ಗಂಧಮಾಲ್ಯತಾಂಬೂಲಗಳನ್ನು ಸಮರ್ಪಣೆ ಮಾಡಿದುದರ ಫಲವಾಗಿ ಇಂತಹ ಮಹಾದಾತೃವಾದ ಬಲಿದಾನವೇಂದ್ರ ನಾದನು.

ಕಿಂ ಪುನಃ ಪರಯಾ ಭಕ್ತ್ಯಾ ಚಾರ್ಚಯಂತಿ ಮಹೇಶ್ವರಂ ।
ಗಂಧಪುಷ್ಪಂ ಫಲಂ ತೋಯಂ ತೇ ಯಾಂತಿ ಶಿವಸನ್ನಿಧಿಂ ॥ ೬೫ ॥
ಶಿವಾತ್ಪರತರೋ ನಾಸ್ತಿ ಪೂಜನೀಯೋ ಹಿ ಭೋ ದ್ವಿಜಾಃ ।
ಯೇಹಿ ಮೂಕಾಸ್ತಥಾಂಧಾಶ್ಚ ಪಂಗವೋ ಯೇ ಜಡಾಸ್ತಥಾ ॥ ೬೬ ॥
ಜಾತಿಹೀನಾಶ್ಚ ಚಂಡಾಲಾಃ ಶ್ವಪಚಾ ಹ್ಯಂತ್ಯಜಾ ಹ್ಯಮೀ ।
ಶಿವಭಕ್ತಿಪರಾ ನಿತ್ಯಂ ತೇ ಯಾಂತಿ ಪರಮಾಂ ಗತಿಂ ॥ ೬೭ ॥
ತಸ್ಮಾತ್ಸದಾಶಿವಃ ಪೂಜ್ಯಃ ಸರ್ವೈರೇವ ಮನೀಷಿಭಿಃ ।
ಪೂಜನೀಯೋ ಹಿ ಸಂಪೂಜ್ಯೋ ಹ್ಯರ್ಚನೀಯಃ ಸದಾಶಿವಃ ॥ ೬೮ ॥
ಮಹೇಶಂ ಪರಮಾರ್ಥಜ್ಞಾಶ್ಚಿಂತಯಂತಿ ಹೃದಿಸ್ಥಿತಂ ।
ಯತ್ರ ಜೀವೋ ಭವತ್ಯೇವ ಶಿವಸ್ತತ್ರೈವ ತಿಷ್ಠತಿ ॥ ೬೯ ॥
ವಿನಾ ಶಿವೇನ ಯತ್ಕಿಂಚಿದಶಿವಂ ಭವತಿ ಕ್ಷಣಾತ್ ।
ಬ್ರಹ್ಮಾವಿಷ್ಣುಶ್ಚ ರುದ್ರಶ್ಚ ಸಗುಣಾಃ ಕೀರ್ತಿತಾಸ್ತ್ವಯಾ ॥ ೭೦ ॥
ರಜೋಗುಣಾನ್ವಿತೋ ಬ್ರಹ್ಮಾ ವಿಷ್ಣುಸ್ಸತ್ತ್ವಗುಣಾನ್ವಿತಃ ।
ತಮೋಗುಣಾಶ್ರಿತೋ ರುದ್ರೋ ಗುಣಾತೀತೋ ಮಹೇಶ್ವರಃ ॥ ೭೧ ॥

---

೬೫–೬೮. ಎಂದಬಳಿಕ, ಭಕ್ತಿಯಿಂದ ಆ ಪರಶಿವನನ್ನು ಪೂಜಿಸಿ ಗಂಧ ಮಾಲ್ಯ ತಾಂಬೂಲಾದಿಗಳನ್ನಾತನಿಗೆ ಸಮರ್ಪಣೆ ಮಾಡಿದವರು ಪರಮ ಪದವಿಯನ್ನು ಪಡೆಯುವರೆಂದು ಮತ್ತೆ ಹೇಳಬೇಕಾದುದೇನಿರುವುದು! ಎಲೈ ಬ್ರಾಹ್ಮಣರೇ! ಶಿವನಿಗಿಂತಲೂ ಪೂಜನೀಯವಾದ ವಸ್ತುವು ಮತ್ತಾವುದೂ ಇರುವುದಿಲ್ಲವು. ಶಿವಭಕ್ತಿಸಂಪನ್ನರಾದವರು ಮೂಕರೇ ಆಗಿರಲಿ, ಕುರುಡರೂ ಕುಂಟರೇ ಆಗಿರಲಿ, ಜಡರಾಗಿರಲಿ, ಜಾತಿಹೀನರೂ, ಚಂಡಾಲರೂ, ಶ್ವಪಚರೂ, ಅಂತ್ಯಜರೂ ಆಗಿರಲಿ ಎಲ್ಲರೂ ಪರಮಪದವಿಯನ್ನು ಹೊಂದುತ್ತಾರೆ. ಆದುದರಿಂದ ಜ್ಞಾನಿಗಳಾದವರೆಲ್ಲರೂ ಆ ಪರಶಿವನನ್ನು ಪೂಜಿಸಬೇಕು. ಸದಾಶಿವನು ಪೂಜನೀಯನು; ಸಂಪೂಜ್ಯನು; ಅರ್ಚನೀಯನೂ ಆತನೇ!

೬೯–೭೧. ಎಲೈ ವಿಪ್ರರೇ! ಪರಮಾರ್ಥವನ್ನರಿತವರು ತಮ್ಮ ಹೃದಯಗಳಲ್ಲಿ ಯಾವಾಗಲೂ ಆ ಮಹೇಶ್ವರನನ್ನೇ ಧ್ಯಾನಿಸುವರು. ಜೀವವಿರುವೆಡೆಗಳಲ್ಲೆಲ್ಲ ಸದಾಶಿವನು ನೆಲಸಿಯೇ ಇರುತ್ತಾನೆ. ಆತನಿಲ್ಲದಿರುವ ಪ್ರದೇಶವೇ ಇರುವುದಿಲ್ಲ. ಶಿವನನ್ನುಳಿದು ಯಾವ ವಸ್ತುವಾದರೂ ಅಮಂಗಳವೇ ಆಗುವುದು. ಬ್ರಹ್ಮ, ವಿಷ್ಣು, ರುದ್ರ ಎಂಬವರು ಸತ್ವ, ರಜಸ್ಸು, ತಮಸ್ಸು ಎಂಬ ಗುಣಗಳ ಕಾರ್ಯವನ್ನು ಮಾಡುವವರು. ರಜೋಗುಣದಿಂದ ಕೂಡಿದವನು ಬ್ರಹ್ಮನು. ವಿಷ್ಣುವು ಸತ್ವಗುಣದಿಂದ ಕೂಡಿದವನು. ರುದ್ರನು ತಮೋಗುಣದವನು.

**ಲಿಂಗರೂಪೋ ಮಹಾದೇವೋ ಹ್ಯರ್ಚನೀಯೋ ಮುಮುಕ್ಷುಭಿಃ ।**
**ಶಿವಾತ್ಪರತರೋ ನಾಸ್ತಿ ಭುಕ್ತಿಮುಕ್ತಿಪ್ರದಾಯಕಃ ॥ ೭೨ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಬಲಯೇ ವರಪ್ರದಾನ ವರ್ಣನಂ" ನಾಮ ಏಕೋನವಿಂಶೋಽಧ್ಯಾಯಃ**

---

ಮಹೇಶ್ವರನಾದರೋ ತ್ರಿಗುಣಾತೀತನು. ಅಯ್ಯಾ! ಲೋಕದಲ್ಲಿ ಮೋಕ್ಷವನ್ನು ಬಯಸುವ ಎಲ್ಲರೂ ಲಿಂಗರೂಪಿಯಾದ ಆ ಪರಶಿವನನ್ನರ್ಚಿಸಬೇಕು. ಶಿವನಿಗಿಂತಲೂ ಭುಕ್ತಿಮುಕ್ತಿಗಳನ್ನು ಕೊಡುವವರು ಈ ಲೋಕದಲ್ಲಿ ಯಾರೂ ಇರುವುದಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಶ್ರೀ ಮಹಾವಿಷ್ಣುವು ಬಲಿದಾನವನಿಗೆ ವರಪ್ರದಾನ ಮಾಡಿದುದು" ಎಂಬ ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ವಿಂಶೋಽಧ್ಯಾಯಃ

### ಶ್ರೀಭವಾನ್ಯುತ್ಪತ್ತಿವರ್ಣನಂ

**ಋಷಯ ಊಚುಃ:—**

**ಬ್ರಹ್ಮಾವಿಷ್ಣುಶ್ಚ ರುದ್ರಶ್ಚ ಸಗುಣಾಃ ಕೀರ್ತಿತಾಸ್ತ್ವಯಾ ।**
**ಲಿಂಗರೂಪೀ ತಥೈವೇಶೋ ನಿರ್ಗುಣೋಽಸೌ ಕಥಂ ವದ ॥ ೧ ॥**

**ತ್ರಿಭಿರ್ಗುಣೈರ್ವ್ಯಾಪ್ತಮಿದಂ ಚರಾಚರಂ**
**ಜಗನ್ಮಹದ್ವ್ಯಾಪ್ಯಥವಾಲ್ಪಕಂ ವಾ ।**
**ಮಾಯಾಮಯಂ ಸರ್ವಮಿದಂ ವಿಭಾತಿ**
**ಲಿಂಗಂ ವಿನಾ ಕೇನ ಕುತೋ ವಿಭಾತಿ ॥ ೨ ॥**

**ಯದ್ದೃಶ್ಯಮಾನಂ ಮಹದಲ್ಪಕಂ ಚ**
**ತನ್ನಶ್ವರಂ ಕೃತಕತ್ವಾಚ್ಚ ಸೂತ ॥ ೩ ॥**

**ತಸ್ಮಾದ್ವಿಮೃಶ್ಯ ಭೋಃ ಸೂತ ಸಂಶಯಂ ಛೇತ್ತುಮರ್ಹಸಿ ।**
**ವ್ಯಾಸಪ್ರಸಾದಾತ್ಸಕಲಂ ಜಾನಾಸಿ ತ್ವಂ ನ ಚಾಪರಃ ॥ ೪ ॥**

---

### ಕನ್ನಡದ ಅನುವಾದ

#### ಶ್ರೀ ಭವಾನೀದೇವಿಯ ಉತ್ಪತ್ತಿ

೧–೪. ಋಷಿಗಳು ಹೇಳುತ್ತಾರೆ:—ಅಯ್ಯಾ ಸೂತಪುರಾಣಿಕನೇ! ನೀನು, ಬ್ರಹ್ಮ ವಿಷ್ಣು ರುದ್ರರು ಸತ್ವರಜಸ್ತಮೋಗುಣಭರಿತರೆಂದು ಹೇಳಿದೆ. ಆದರೆ ಲಿಂಗರೂಪಿಯಾದ ಮಹಾದೇವನು ಮಾತ್ರ ಗುಣಾತೀತನೆಂಬುದು ಹೇಗೆ? ಈ ವಿಷಯವನ್ನು ತಿಳಿಸುವವನಾಗು. ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ಆ ಮೂರು ಗುಣಗಳಿಂದಲೇ ವ್ಯಾಪ್ತವಾಗಿರುವುದು. ಇದರಲ್ಲಿ ದೊಡ್ಡದಾಗಲಿ, ಚಿಕ್ಕದಾಗಲಿ ಎಲ್ಲವೂ ಆ ಮೂರು ಗುಣಗಳಿಂದಲೇ ಕೂಡಿದೆ. ಇದೆಲ್ಲವೂ ಮಾಯಾಮಯವಾಗಿ ತೋರುತ್ತದೆ. ಲಿಂಗವನ್ನುಳಿದು ಈ ಜಗತ್ತಿನಲ್ಲಿ ಯಾವುದು ತಾನೇ, ಯಾವ ಕಾರಣದಿಂದ, ಏತರಿಂದ ಈ ರೀತಿ ತೋರುತ್ತಿದೆ? ಕಣ್ಣಿಗೆ ಕಾಣುತ್ತಿರುವುದು ದೊಡ್ಡದಾಗಲಿ ಚಿಕ್ಕದಾಗಲಿ ಅದು ಕೃತಕವಾದುದರಿಂದ ನಶ್ವರವಾದುದೇ ಅಲ್ಲವೆ? ಆದುದರಿಂದ ಈ ವಿಷಯವನ್ನು ವಿಮರ್ಶೆಮಾಡಿ ನಮಗೆ ತಿಳಿಸಿ ನಮ್ಮ ಈ ಸಂಶಯವನ್ನು ಕಳೆಯಬೇಕು. ಎಲೈ ಸೂತನೇ! ನೀನು ವೇದವ್ಯಾಸ ಮಹರ್ಷಿಗಳ ಅನುಗ್ರಹದಿಂದ ಈ ಎಲ್ಲ ವಿಷಯಗಳನ್ನೂ ಚೆನ್ನಾಗಿ ತಿಳಿದುಕೊಂಡಿರುವೆ. ಆ ರೀತಿ ತತ್ವವನ್ನು ಯಥಾರ್ಥವಾಗಿ ತಿಳಿದಿರುವವರು ನಿನ್ನನ್ನು ಬಿಟ್ಟರೆ ಮತ್ತಾರೂ ಇರುವುದಿಲ್ಲವು.

ಸೂತ ಉವಾಚ :—

ವ್ಯಾಸೇನ ಕಥಿತಂ ಸರ್ವಮಸ್ಮಿನ್ನರ್ಥೇ ಶುಕಂ ಪ್ರತಿ ।

ಶುಕ ಉವಾಚ :—

ಲಿಂಗರೂಪೀ ಕಥಂ ಶಂಭುರ್ನಿರ್ಗುಣಃ ಕಥ್ಯತೇ ತ್ವಯಾ ।
ಏತನ್ಮೇ ಸಂಶಯಂ ತಾತ ಛೇತ್ತುಮರ್ಹಸ್ಯಶೇಷತಃ ॥ ೫ ॥

ವ್ಯಾಸ ಉವಾಚ :—

ಶೃಣು ವತ್ಸ ಬ್ರವೀಮ್ಯೇತತ್ಪುರಾ ಪ್ರೋಕ್ತಂ ಚ ನಂದಿನಾ ।
ಅಗಸ್ತ್ಯಂ ಪೃಚ್ಛಮಾನಂ ಚ ಯೇನ ಸರ್ವಂ ಶ್ರುತಂ ಶುಕ ॥ ೬ ॥
ನಿರ್ಗುಣಂ ಪರಮಾತ್ಮಾನಂ ವಿದ್ಧಿ ಲಿಂಗಸ್ವರೂಪಿಣಂ ।
ಪರಾಶಕ್ತಿ ಸ್ತಥಾ ಜ್ಞೇಯಾ ನಿರ್ಗುಣಾ ಶಾಶ್ವತೀ ಸತೀ ॥ ೭ ॥
ಮಾಯಾಕೃತಮಿದಂ ಸರ್ವಂ ಗುಣತ್ರಯ ವಿಭಾವಿತಂ ।
ಏತಚ್ಚರಾಚರಂ ವಿಶ್ವಂ ನಶ್ವರಂ ಪರಮಾರ್ಥತಃ ॥ ೮ ॥
ಏಕಏವ ಪರೋ ಹ್ಯಾತ್ಮಾ ಲಿಂಗರೂಪೀ ನಿರಂಜನಃ ।
ಪ್ರಕೃತ್ಯಾಸಹ ತೇ ಸರ್ವೇ ತ್ರಿಗುಣಾ ವಿಲಯಂ ಗತಾಃ ॥ ೯ ॥

---

೫. ಸೂತನು ಹೇಳುತ್ತಾನೆ :—ಅಯ್ಯಾ ಮುನಿಗಳಿರಾ! ಪೂಜ್ಯರಾದ ವೇದವ್ಯಾಸ ಮಹರ್ಷಿಗಳು ಈ ವಿಷಯವನ್ನೇ ಶುಕರಿಗೆ ಸಮಗ್ರವಾಗಿ ತಿಳಿಸಿರುತ್ತಾರೆ. ಶುಕನು ಹೇಳಿದನು :—"ಅಪ್ಪ! ನೀನು ಲಿಂಗರೂಪಿಯಾದ ಶಂಭುವು ಗುಣಾತೀತನೆಂದು ಹೇಳುತ್ತೀಯೆ? ಅದು ಹೇಗೆ? ಈ ವಿಷಯದಲ್ಲಿ ನನಗೆ ಸಂಶಯವುಂಟಾಗಿರುವುದು. ಈ ನನ್ನ ಸಂಶಯವನ್ನು ಸಂಪೂರ್ಣವಾಗಿ ಬಗೆಹರಿಸಬೇಕು."

೬–೧೧. ವ್ಯಾಸನು ಹೇಳುತ್ತಾನೆ :—"ವತ್ಸ! ಕೇಳು. ಪೂರ್ವದಲ್ಲಿ ಅಗಸ್ತ್ಯಮಹರ್ಷಿಯು ಇದೇ ವಿಷಯವನ್ನೇ ಕೇಳಿದಾಗ ನಂದಿಯು ಆತನಿಗೆ ಇದೆಲ್ಲವನ್ನೂ ತಿಳಿಯಹೇಳಿರುವನು. ಆಗ ನಾನು ಅದನ್ನು ಕೇಳಿ ತಿಳಿದುಕೊಂಡಿರುವೆನು. ಅಯ್ಯಾ ಶುಕನೇ! ಲಿಂಗಸ್ವರೂಪಿಯೂ, ಪರಮಾತ್ಮನೂ ಆದ ಪರಮೇಶ್ವರನು ನಿರ್ಗುಣನೆಂದು ತಿಳಿ. ಅಂತೆಯೇ ಎಂದಿಗೂ ಇದ್ದು ಶಾಶ್ವತೆಯೆನಿಸಿದ ಪರಾಶಕ್ತಿಯೂ ನಿರ್ಗುಣಳೇ! ಆ ಪರಾಶಕ್ತಿಯೇ ಸತ್ವರಜಸ್ತಮೋಗುಣಗಳಿಂದ ಪರಿಭಾವಿತವಾದ ಈ ಚರಾಚರ ಪ್ರಪಂಚವನ್ನು ಸೃಜಿಸಿದಳು. ಇದು ಪರಮಾರ್ಥವಾಗಿಯೇ ನಶ್ವರವು. ಎಂದರೆ ಇದು ಕೃತಕವಾಯಿತಷ್ಟೆ. ನಿರಂಜನ (ಗುಣಲೇಪವಿಲ್ಲದವ)ನೂ, ಲಿಂಗರೂಪಿಯೂ ಆದ ಆ ಸದಾಶಿವನೊಬ್ಬನೇ ಪರಮಾತ್ಮನು. ಈ ಗುಣಗಳೆಲ್ಲವೂ ಪ್ರಕೃತಿಯೊಡನೆ ಆ ಲಿಂಗದಲ್ಲಿಯೇ ಅಡಗಿಹೋದುವು. ಈ ಕಾರಣದಿಂದಲೇ ಯಾವುದರಲ್ಲಿ

ಯಸ್ಮಿನ್ನೇವ ತತೋ ಲಿಂಗಂ ಲಯನಾತ್ಕಥಿತಂ ಪುರಾ ।
ತಸ್ಮಾಲ್ಲಿಂಗೇ ಲಯಂ ಪ್ರಾಪ್ತಾ ಪರಾಶಕ್ತಿಃ ಕುತೋಽಪರೇ ॥ ೧೦ ॥
ಲೀನಾ ಗುಣಾಶ್ಚ ರುದ್ರೋಕ್ತ್ಯಾ ಯೈರಿದಂ ಬದ್ಧಮೇವಚ ।
ಚರಾಚರಂ ಮಹಾಭಾಗ ತಸ್ಮಾಲ್ಲಿಂಗಂ ಪ್ರಪೂಜಯೇತ್ ॥ ೧೧ ॥
ಲಿಂಗಂ ಚ ನಿರ್ಗುಣಂ ಸಾಕ್ಷಾಜ್ಜಾನೀಧ್ವಂ ಭೋ ದ್ವಿಜೋತ್ತಮಾಃ ।
ಲಯಾಲ್ಲಿಂಗಸ್ಯ ಮಹಾತ್ಮ್ಯಂ ಗುಣಾನಾಂ ಪರಿಕೀರ್ತ್ಯತೇ ॥ ೧೨ ॥
ಶಂಕರಸ್ಸುಖದಾತಾ ಹಿ ಉಚ್ಯಮಾನೋ ಮುನೀಷಿಭಿಃ ।
ಸರ್ವೋಽಪಿ ಕಥ್ಯತೇ ವಿಪ್ರಾಃ ಸರ್ವೇಷಾಮಾಶ್ರಯೋ ಹಿ ಸಃ ॥ ೧೩ ॥
ಶಂಭುರ್ಹಿ ಕಥ್ಯತೇ ವಿಪ್ರಾ ಯಸ್ಮಾಚ್ಚ ಶುಭಸಂಭವಃ ॥ ೧೪ ॥
ಏವಂ ಸರ್ವಾಣಿ ನಾಮಾನಿ ಸಾರ್ಥಕಾನಿ ಮಹಾತ್ಮನಃ ।
ತೇನಾವೃತಂ ಜಗತ್ಸರ್ವಂ ಶಂಭುನಾ ಪರಮೇಷ್ಠಿನಾ ॥ ೧೫ ॥

ಋಷಯ ಊಚುಃ:—

ಯದಾ ದಾಕ್ಷಾಯಣೀ ಚಾಗ್ನೌ ಪತಿತಾ ಯಜ್ಞಕರ್ಮಣಿ ।
ದಕ್ಷಸ್ಯ ಚ ಮಹಾಭಾಗಾ ತಿರೋಧಾನಗತಾ ಸತೀ ॥ ೧೬ ॥

---

ಎಲ್ಲವೂ ಅಡಗುವುದೋ (ಲಯಿಸುವುದೋ) ಅದು ಲಿಂಗವೆಂದು ಹೇಳಲಾಗಿದೆ. ಅಯ್ಯಾ ಶುಕನೇ! ಗುಣರಹಿತೆಯಾದ ಪರಾಶಕ್ತಿಯೂ ಸಹ ಲಿಂಗದಲ್ಲಿಯೇ ಅಡಗಿಹೋದಳು. ಎಂದಬಳಿಕ ಇತರರ (ಬ್ರಹ್ಮವಿಷ್ಣು ರುದ್ರರ) ವಿಷಯವೇನು? ರುದ್ರೋಕ್ತಿಯಿಂದ (ರುದ್ರಾಧ್ಯಾಯದಲ್ಲಿ ಹೇಳಿರುವಂತೆ) ಈ ಮೂರು ಗುಣಗಳು ಆ ಲಿಂಗದಲ್ಲಿಯೇ ಅಡಗುವುವು. ಎಲೈ ಮಹಾಭಾಗನೇ! ಈ ಗುಣಗಳಿಂದಲೇ ಚರಾಚರ ಜಗತ್ತೆಲ್ಲವೂ ಬದ್ಧವಾಗಿರುವುದು. ಆದುದರಿಂದ ಶಿವಲಿಂಗವನ್ನು ಎಲ್ಲರೂ ಪೂಜಿಸಬೇಕು.''

೧೨-೨೨. ಎಲೈ ದ್ವಿಜೋತ್ತಮರಿರಾ! ಸಾಕ್ಷಾತ್ ಶಿವಲಿಂಗವು ನಿರ್ಗುಣವೆಂದು ತಿಳಿಯಿರಿ. ಸಮಸ್ತವೂ (ಗುಣಗಳೂ) ಅದರಲ್ಲಿ ಅಡಗಿಹೋಗುವುದರಿಂದಲೇ ಆ ಲಿಂಗದ ಮಾಹಾತ್ಮ್ಯವನ್ನು ಜ್ಞಾನಿಗಳಾದವರೆಲ್ಲರೂ ವರ್ಣಿಸಿ ಹೇಳುತ್ತಾರೆ. ಜ್ಞಾನಿಗಳಾದವರು ಶಂಕರನೇ ಎಲ್ಲರಿಗೂ ಸುಖವನ್ನು ಕೊಡುವವನೆಂದು ಹೇಳುವರು. ಆ ಶರ್ವನೇ ಸರ್ವರಿಗೂ ಆಶ್ರಯನೆಂದೂ ಹೇಳುತ್ತಾರೆ. ಅಯ್ಯಾ ವಿಪ್ರರೇ! ಶಂಕರನು ಶುಭ (ಎಲ್ಲ ಮಂಗಲಗಳಿಗೂ) ಸಂಭವ (ಉತ್ಪತ್ತಿಸ್ಥಾನ)ನಾದುದರಿಂದ ಅವನನ್ನು ಶಂಭುವೆನ್ನುವರು. ಅಯ್ಯಾ ಮಹರ್ಷಿಗಳಿರಾ! ಆ ಸದಾಶಿವಮೂರ್ತಿಗಿರುವ ಪ್ರತಿಯೊಂದು ಹೆಸರೂ ಈ ಪ್ರಕಾರವಾಗಿಯೇ ಸಾರ್ಥಕವಾದುದು. ಪರಮೇಷ್ಠಿಯೂ ಶಂಭುವೂ ಆದ ಆತನೇ ಈ ಜಗತ್ತೆಲ್ಲವನ್ನೂ ಆವರಿಸಿರುವನು. ಋಷಿಗಳು ಕೇಳುತ್ತಾರೆ:—ಎಲೈ ಸೂತಪುರಾಣಿಕನೇ!

ಪ್ರಾದುರ್ಭೂತಾ ಕದಾ ಸೂತ ಕಥ್ಯತಾಂ ತತ್ತ್ವಯಾಽಧುನಾ ।
ಪರಾಶಕ್ತಿರ್ಮಹೇಶಸ್ಯ ಮಿಲಿತಾ ಚ ಕಥಂ ಪುನಃ ॥ ೧೭ ॥
ಏತತ್ಸರ್ವಂ ಮಹಾಭಾಗ ಪೂರ್ವವೃತ್ತಂ ಚ ತತ್ತ್ವತಃ ।
ಕಥನೀಯಂ ಚ ಅಸ್ಮಾಕಂ ನಾನ್ಯೋ ವಕ್ತಾಸ್ತಿ ಕಶ್ಚನ ॥ ೧೮ ॥

ಸೂತ ಉವಾಚ:—

ಜಜ್ಞೇ ದಾಕ್ಷಾಯಣೀ ಬ್ರಹ್ಮನ್ಸ್ವಿದಗ್ಧಾವಯವಾ ಯದಾ ।
ವಿನಾ ಶಕ್ತ್ಯಾ ಮಹೇಶೋಽಪಿ ತತಾಪ ಪರಮಂ ತಪಃ ॥ ೧೯ ॥
ಲೀಲಾಗೃಹೀತವಪುಷಾ ಪರ್ವತೇ ಹಿಮವದ್ಗಿರೌ ।
ಭೃಂಗಿಣಾ ಸಹ ವಿಶ್ವೇನ ನಂದಿನಾ ಚ ತಥೈವ ಚ ॥ ೨೦ ॥
ತಥಾ ಚಂಡೇನಮುಂಡೇನ ತಥಾನ್ಯೈರ್ಬಹುಭಿರ್ವೃತಃ ।
ದಶಭಿಃ ಕೋಟಿಗಣಿತೈರ್ಗಣೈಶ್ಚ ಪರಿವಾರಿತಃ ॥ ೨೧ ॥
ಗಣಾನಾಂ ಚೈವ ಕೋಟ್ಯಾ ಚ ತಥಾ ಷಷ್ಟಿಸಹಸ್ರಕೈಃ ।
ಏವಂ ತತ್ರ ಗಣೈರ್ದೇವ ಆವೃತೋ ವೃಷಭಧ್ವಜಃ ॥ ೨೨ ॥

ತಪೋಜುಷಾಣಃ ಸಹಸಾ ಮಹಾತ್ಮಾ
ಹಿಮಾಲಯಸ್ಯಾಗ್ರಗತಸ್ತಥೈವ ।
ಗಣೈರ್ವೃತೋ ವೀರಭದ್ರಪ್ರಧಾನೈಃ
ಸ ಕೇವಲೋಮೂಲವಿದ್ಯಾವಿಹೀನಃ ॥ ೨೩ ॥

---

ಪೂರ್ವದಲ್ಲಿ ದಕ್ಷಬ್ರಹ್ಮನ ಮಗಳಾದ ಸತೀದೇವಿಯು ದಕ್ಷನ ಯಾಗಕುಂಡದಲ್ಲಿ ಬಿದ್ದು ಅಂತರ್ಧಾನವಾದಳಷ್ಟೆ? ಪುನಃ ಆಕೆಯು ಅವತರಿಸಿದುದು ಯಾವಾಗ? ಈ ಪರಾಶಕ್ತಿಯು ಮತ್ತೆ ಪರಮೇಶ್ವರನನ್ನು ಸೇರಿದುದೆಂತು; ಯಾವಾಗ? ಈ ವಿಷಯವನ್ನು ನಮಗೆ ತಿಳಿಸಬೇಕು. ಎಲೈ ಸೂತನೇ! ನೀನು ದಯವಿಟ್ಟು ಈ ಪೂರ್ವವೃತ್ತಾಂತವೆಲ್ಲವನ್ನೂ ಯಥಾವತ್ತಾಗಿ ನಮಗೆ ತಿಳಿಸಬೇಕು. ನಿನ್ನಂತೆ ಇವುಗಳೆಲ್ಲವನ್ನೂ ನಮಗೆ ತಿಳಿಯಹೇಳುವವರು ಮತ್ತಾರೂ ಇರುವುದಿಲ್ಲವು. ಸೂತನು ಹೇಳುತ್ತಾನೆ:—ಅಯ್ಯಾ ಮುನಿಗಳಿರಾ! ದಕ್ಷಬ್ರಹ್ಮನ ಪುತ್ರಿಯಾದ ಸತೀದೇವಿಯು ಅಗ್ನಿಪ್ರವೇಶಮಾಡಿ ದೇಹತ್ಯಾಗಮಾಡಿದ ತರುವಾಯ ವೃಷಭವಾಹನನಾದ ಮಹೇಶ್ವರನಾದರೋ ಲೀಲೆಗೋಸ್ಕರ ಶರೀರ ತಾಳಿ ಹಿಮವತ್ಪರ್ವತದಲ್ಲಿ ನಂದಿ ಭೃಂಗಿಗಳೊಡನೆಯೂ, ಚಂಡಮುಂಡರೊಡನೆಯೂ ಇನ್ನೂ ಇತರ ನೂರುಕೋಟಿ ಗಣಗಳೊಡನೆಯೂ ಪರಿವಾರಿತನಾಗಿ ಮಹತ್ತರವಾದ ತಪಸ್ಸನ್ನಾಚರಿಸಿದನು.

೨೩. ಹೀಗೆ ಮೂಲಾವಿದ್ಯಾ (ಸತೀ) ವಿರಹಿತನಾದ ಆ ಮಹಾತ್ಮನು ವೀರಭದ್ರನೇ ಮೊದಲಾದ ಕೇವಲ ಮುಖ್ಯರಾದ ಗಣಪತಿಗಳೊಡಗೂಡಿ

**ಏತಸ್ಮಿನ್ನಂತರೇ ದೈತ್ಯಾಃ ಪ್ರಾದುರ್ಭೂತಾ ಹ್ಯವಿದ್ಯಯಾ ।**
**ವಿಷ್ಣುನಾ ಹಿ ಬಲಿರ್ಬದ್ಧಸ್ತಥಾ ತೇ ವೈ ಮಹಾಬಲಾಃ ॥ ೨೪ ॥**
**ಜಾತಾ ದೈತ್ಯಾಸ್ತತೋ ವಿಪ್ರಾ ಇಂದ್ರೋಪದ್ರವಕಾರಕಾಃ ।**
**ಕಾಲಖಂಜಾ ಮಹಾರೌದ್ರಾಃ ಕಾಲಕಾಯಾಸ್ತಥಾಪರೇ ॥ ೨೫ ॥**
**ನಿವಾತಕವಚಾಃ ಸರ್ವೇ ರವರಾವಕ ಸಂಜ್ಞಕಾಃ ।**
**ಅನ್ಯೇಚ ಬಹವೋ ದೈತ್ಯಾಃ ಪ್ರಜಾಸಂಹಾರಕಾರಕಾಃ ॥ ೨೬ ॥**
**ತಾರಕೋ ನಮುಚೇಃ ಪುತ್ರಸ್ತಪಸಾ ಪರಮೇಣಹಿ ।**
**ಬ್ರಹ್ಮಾಣಂ ತೋಷಯಾಮಾಸ ಬ್ರಹ್ಮಾ ತಸ್ಯ ತುತೋಷ ವೈ ॥ ೨೭ ॥**
**ವರಾನ್ ದದೌ ಯಥೇಷ್ಟಾಂಶ್ಚ ತಾರಕಾಯ ದುರಾತ್ಮನೇ ।**
**ವರಂ ವೃಣೀಷ್ವ ಭದ್ರಂತೇ ಸರ್ವಾನ್ಕಾಮಾನ್ ದದಾಮಿತೇ ॥ ೨೮ ॥**
**ತಚ್ಛ್ರುತ್ವಾ ವಚನಂ ತಸ್ಯ ಬ್ರಹ್ಮಣಃ ಪರಮೇಷ್ಠಿನಃ ।**
**ವರಯಾಮಾಸ ಚ ತದಾ ವರಂ ಲೋಕಭಯಾವಹಂ ॥ ೨೯ ॥**
**ಯದಿಮೇ ತ್ವಂ ಪ್ರಸನ್ನೋಽಸಿ ಅಜರಾಮರತಾಂ ಪ್ರಭೋ ।**
**ದೇಹಿ ಮೇ ಯದ್ವಿಜಾನಾಸಿ ಅಜೇಯತ್ವಂ ತಥೈವಚ ॥ ೩೦ ॥**

---

ಆ ಹಿಮತ್ಪರ್ವತದ ಶಿಖರವನ್ನು ಸೇರಿ ಅಲ್ಲಿ ತಪಸ್ಸನ್ನು ಸೇವಿಸ (ಮಾಡ) ತೊಡಗಿದನು.

೨೪–೨೬. ಈ ಮಧ್ಯದಲ್ಲಿಯಾದರೋ ಪ್ರಪಂಚದಲ್ಲೆಲ್ಲಿಯೂ ಅವಿದ್ಯೆಯೇ ಆವರಿಸಿ ಆ ಮೂಲಕವಾಗಿಯೇ ಅನೇಕ ದೈತ್ಯರು ಹುಟ್ಟಿದರು. ಹಿಂದೆ ವಿಷ್ಣುವು ಬಲಿಯನ್ನು ಬಂಧಿಸಿದ್ದನಲ್ಲವೆ! ಈಗ ಅವರೆಲ್ಲರೂ ಮಹಾ ಬಲಾಢ್ಯರಾಗಿ ಇಂದ್ರನಿಗೆ ಹಿಂಸೆಯನ್ನು ಕೊಡುವವರಾದರು. ಮಹಾ ಭಯಂಕರರಾದ ಕಾಲ ಖಂಜರು, ಕಾಲಕಾಯರು, ನಿವಾತಕವಚರು, ರವರಾವಕರು ಎಂಬಿವರೇ ಮೊದ ಲಾದ ಬಹುಮಂದಿ ದೈತ್ಯರು ಜನಿಸಿ ಪ್ರಜೆಗಳೆಲ್ಲರನ್ನೂ ಸಂಹರಿಸತೊಡಗಿದರು.

೨೭–೩೦. ಇದೇ ಸಮಯದಲ್ಲಿಯೇ ನಮುಚಿಯೆಂಬ ದಾನವನ ಮಗನಾದ ತಾರಕಾಸುರನು ಮಹತ್ತರವಾದ ತಪಸ್ಸನ್ನು ಮಾಡಿ ಬ್ರಹ್ಮನನ್ನು ಸಂತೋಷ ಗೊಳಿಸಿ ಆತನನ್ನು ಒಲಿಸಿಕೊಂಡನು. ಆಗ ಬ್ರಹ್ಮನಾದರೋ ದುರಾತ್ಮನಾದ ಆ ತಾರಕಾಸುರನಿಗೆ ವರವನ್ನು ಅನುಗ್ರಹಿಸುವವನಾಗಿ ಅವನನ್ನು ಕುರಿತು, “ಎಲೈ ತಾರಕಾಸುರನೇ! ಇದೋ ನಿನ್ನ ತಪಸ್ಸಿಗೆ ಮೆಚ್ಚಿರುವೆನು. ವರವನ್ನು ಕೇಳು. ನೀನು ಬಯಸಿದುದೆಲ್ಲವನ್ನೂ ಕೊಡುತ್ತೇನೆ” ಎಂದನು. ಆ ಮಾತನ್ನು ಕೇಳಿ ತಾರಕಾಸುರನು ಲೋಕಕ್ಕೆ ಭಯವನ್ನುಂಟುಮಾಡುವ ವರವನ್ನೇ ಬೇಡಿ ದನು. “ಎಲೈ ಪ್ರಭುವೇ! ನೀನು ನನ್ನ ವಿಷಯದಲ್ಲಿ ಪ್ರಸನ್ನನಾಗಿರುವುದೇ ಆದರೆ ಅಜರಾಮರತ್ವವೆಂದರೇನೆಂದು ತಿಳಿದಿರುವೆಯೋ ಅದನ್ನೂ, ಅಜೇಯತ್ವ ವನ್ನೂ ನನಗೆ ಅನುಗ್ರಹಿಸು” ಎಂದು ಕೇಳಿದನು.

ಏವಮುಕ್ತಸ್ತದಾತೇನ ತಾರಕೇನ ದುರಾತ್ಮನಾ ।
ಉವಾಚ ಪ್ರಹಸನ್ವಾಕ್ಯಮಮರತ್ವಂ ಕುತಸ್ತವ ॥ ೩೧ ॥
ಜಾತಸ್ಯ ಹಿ ಧ್ರುವೋ ಮೃತ್ಯುರೇತಜ್ಜಾನೀಹಿ ತತ್ತ್ವತಃ ।
ಪ್ರಹಸ್ಯ ತಾರಕಃ ಪ್ರಾಹ ಅಜೇಯತ್ವಂ ಚ ದೇಹಿ ಮೇ ॥ ೩೨ ॥
ಬ್ರಹ್ಮೋವಾಚ ತದಾ ದೈತ್ಯಮಜೇಯತ್ವಂ ತವಾನಘ ।
ವಿನಾಽರ್ಭಕೇಣ ದತ್ತಂ ವೈ ಹ್ಯರ್ಭಕಸ್ತ್ವಾಂ ವಿಜೇಷ್ಯತೇ ॥ ೩೩ ॥
ತದಾ ಸ ತಾರಕಃ ಪ್ರಾಹ ಬ್ರಹ್ಮಾಣಂ ಪ್ರಣತಃ ಪ್ರಭೋ ।
ಕೃತಾರ್ಥೋಽಹಂ ಹಿ ದೇವೇಶ ಪ್ರಸಾದಾತ್ತವ ಸಂಪ್ರತಿ ॥ ೩೪ ॥
ಏವಂ ಲಬ್ಧವರೋ ಭೂತ್ವಾ ತಾರಕೋ ಹಿ ಮಹಾಬಲಃ ।
ದೇವಾನ್ಯುದ್ಧಾರ್ಥಮಾಹೂಯ ಯುಯುಧೇ ತೈಃ ಸಹಾಸುರಃ ॥ ೩೫ ॥
ಮುಚುಕುಂದಂ ಸಮಾಶ್ರಿತ್ಯ ದೇವಾಸ್ತೇ ಜಯಿನೋಽಭವನ್ ।
ಪುನಃ ಪುನರ್ವಿಕುರ್ವಾಣಾ ದೇವಾಸ್ತೇ ತಾರಕೇಣ ಹಿ ॥ ೩೬ ॥
ಮುಚುಕುಂದ ಬಲೇನೈವ ಜಯಮಾಪುಃ ಸುರಾಸ್ತದಾ ।
ಕಿಂ ಕರ್ತವ್ಯಂ ಹಿ ಚಾಸ್ಮಾಕಂ ಯುಧ್ಯಮಾನೈರ್ನಿರಂತರಂ ॥ ೩೭ ॥

---

೩೧–೩೫. ಎಲೈ ಮುನಿಗಳಿರಾ! ತಾರಕದೈತ್ಯನಿಂತು ನುಡಿಯಲು, ಲೋಕಪಿತಾಮಹನು ಅವನನ್ನು ಕುರಿತು ನಸುನಗುತ್ತ, "ಅಯ್ಯಾ ದಾನವನೇ! ಲೋಕದಲ್ಲಿ ಹುಟ್ಟಿದವನಿಗೆ ಸಾವು ತಪ್ಪಿದುದಲ್ಲ. ಇದನ್ನು ಯಥಾರ್ಥವೆಂದು ಅರಿತುಕೋ" ಎಂದನು. ಆಗ ತಾರಕನು, "ಹಾಗಾದರೆ ಅಜೇಯತ್ವವನ್ನಾದರೂ ಕೊಡು" ಎಂದು ಕೇಳಿದನು. ಆಗ ಬ್ರಹ್ಮದೇವನು ಆ ತಾರಕನನ್ನು ಕುರಿತು, "ಅಯ್ಯಾ ಅನಘನೇ! ಅರ್ಭಕ (ಮಗುವಾದವ)ನೊಬ್ಬನನ್ನು ಬಿಟ್ಟು ಇತರರೆಲ್ಲರಿಂದಲೂ ನಿನಗೆ ಅಜೇಯತ್ವವನ್ನು ಕೊಟ್ಟಿರುವೆನು. ನಿನ್ನನ್ನು ಕೇವಲ ಶಿಶುವೇ ಗೆಲ್ಲುವುದು" ಎಂದು ಹೇಳಿ ವರವನ್ನಿತ್ತನು. ತಾರಕನು ಆತನನ್ನು ನಮಸ್ಕರಿಸಿ, "ಪ್ರಭುವೇ! ನಿನ್ನ ಈ ಅನುಗ್ರಹದಿಂದ ಈಗ ನಾನು ಕೃತಾರ್ಥನಾದೆನು" ಎಂದು ಹೇಳಿದನು. ಎಲೈ ವಿಪ್ರರೇ! ಮಹಾಬಲಾಢ್ಯನಾದ ಆ ತಾರಕಾಸುರನು ಹೀಗೆ ಬ್ರಹ್ಮನಿಂದ ಅಜೇಯತ್ವವರವನ್ನು ಪಡೆದು ದೇವತೆಗಳೆಲ್ಲರನ್ನೂ ಯುದ್ಧಕ್ಕೆ ಕರೆದು ಅಸುರರೊಡಗೂಡಿ ಅವರೊಡನೆ ಯುದ್ಧ ಮಾಡಿದನು.

೩೬–೪೩. ಆ ದೇವತೆಗಳಾದರೋ ಮುಚುಕುಂದನನ್ನಾಶ್ರಯಿಸಿಕೊಂಡು ಆ ದಾನವನೊಡನೆ ಹೋರಾಡಿ ಜಯವನ್ನು ಪಡೆದರು. ಆದರೆ ತಾರಕನು ಮತ್ತೆ ಮತ್ತೆ ಅವರೊಡನೆ ಕಾಳಗಕ್ಕೆ ಬರುತ್ತಲೇ ಇದ್ದನು. ದೇವತೆಗಳೂ ಸಹ ಆ ಸಮಯಗಳಲ್ಲೆಲ್ಲ ಮುಚುಕುಂದನ ಬಲದಿಂದಲೇ ಜಯವನ್ನು ಪಡೆದರು.

ಭವಿತವ್ಯಮಿತಿ ಸ್ಮೃತ್ವಾ ಗತಾಸ್ತೇ ಬ್ರಹ್ಮಣಃ ಪದಂ ।
ಬ್ರಹ್ಮಣಶ್ಚಾಗ್ರತೋ ಭೂತ್ವಾ ಹ್ಯಬ್ರುವಂ ಸ್ತೇ ಸವಾಸವಾಃ ॥ ೩೮ ॥
ದೇವಾ ಊಚುಃ:—
ಬಲಿನಾಸಹ ಪಾತಾಲಮಾಸ್ತೇಽಸೌ ಮಧುಸೂದನಃ ।
ವಿಷ್ಣುಂ ವಿನಾ ಹಿ ತೇ ಸರ್ವೇ ವೃಷಾದ್ಯಾಃ ಪತಿತಾಃ ಪರೈಃ ॥ ೩೯ ॥
ದೈತ್ಯೇಂದ್ರೈಶ್ಚ ಮಹಾಭಾಗ ತ್ರಾತು ಮರ್ಹಸಿ ನಃ ಪ್ರಭೋ ।
ತದಾ ನಭೋಗತಾ ವಾಣೀ ಹ್ಯುವಾಚ ಪರಿಸಾಂತ್ವ್ಯ ವೈ ॥ ೪೦ ॥
ಹೇ ದೇವಾಃ ಕ್ರಿಯತಾಮಾಶು ಮಮ ವಾಕ್ಯಂ ಹಿ ತತ್ತ್ವತಃ ।
ಶಿವಾತ್ಮಜೋ ಯದಾ ದೇವಾ ಭವಿಷ್ಯತಿ ಮಹಾಬಲಃ ॥ ೪೧ ॥
ಯುದ್ಧೇ ಪುನಸ್ತಾರಕಂ ಚ ವಧಿಷ್ಯತಿ ನ ಸಂಶಯಃ ।
ಯೇನೋಪಾಯೇನ ಭಗವಾಂಛಂಭುಃ ಸರ್ವಗುಹಾಶಯಃ ॥ ೪೨ ॥
ದಾರಾಪರಿಗ್ರಹೀ ದೇವಾಸ್ತಥಾ ನೀತಿರ್ವಿಧೀಯತಾಂ ।
ಕ್ರಿಯತಾಂ ಚ ಪರೋಯತ್ನೋ ಭವದ್ಭಿರ್ನಾನ್ಯಥಾವಚಃ ॥ ೪೩ ॥

---

ಆದರೆ ದೇವತೆಗಳಿಗೂ, ಆ ದಾನವನಿಗೂ ಯುದ್ಧವು ನಿಲ್ಲಲೇ ಇಲ್ಲವು. ಆಗಲವರು, "ನಾವು ಯಾವಾಗಲೂ ಯುದ್ಧಮಾಡುತ್ತಲೇ ಇದ್ದರೆ ಏನುಮಾಡಿದಂತಾಯಿತು. ಸುಖವೆತ್ತಣದು? ಹೀಗೆ ಸತತವೂ ಯುದ್ಧವು ನಡೆಯುತ್ತಲೇ ಇರುವುದು ಭವಿತವ್ಯತೆಯ ಪ್ರಭಾವವೇ!" ಎಂದುಕೊಂಡು, ಬ್ರಹ್ಮಲೋಕಕ್ಕೆ ಬಂದು ಬ್ರಹ್ಮನ ಮುಂದೆ ನಿಂತು ಹೀಗೆಂದರು. ದೇವತೆಗಳು ಹೇಳುತ್ತಾರೆ:— "ಎಲೈ ಬ್ರಹ್ಮದೇವನೇ! ಮಧುಸೂದನನಾದ ಶ್ರೀ ಮಹಾವಿಷ್ಣುವು ಬಲಿಯೊಡನೆ ಪಾತಾಲಲೋಕದಲ್ಲಿ ವಾಸವಾಗಿರುವನು. ಆ ವಿಷ್ಣುವಿಲ್ಲದಿರುವುದರಿಂದ ಇಂದ್ರನೇ ಮೊದಲಾದ ನಾವೆಲ್ಲರೂ ಶತ್ರುಗಳಾದ ದೈತ್ಯರಿಂದ ಪತಿತರಾಗಿಹೋಗಿರುವೆವು. ಓ ಮಹಾಭಾಗ! ಪ್ರಭೂ! ಈಗ ನೀನೇ ನಮ್ಮನ್ನು ಕಾಪಾಡಬೇಕು" ಎಂದು ಪ್ರಾರ್ಥಿಸಿದರು. ಆಗ ಆಕಾಶವಾಣಿಯು ಅವರೆಲ್ಲರನ್ನೂ ಸಮಾಧಾನಗೊಳಿಸುತ್ತ "ಎಲೈ ದೇವತೆಗಳಿರಾ! ಈಗ ನಾನು ಹೇಳುವಂತೆ ಮಾಡಿರಿ. ಶಿವನಿಗೆ ಮಗನು ಜನಿಸಿದಂದು ಮಹಾಬಲನಾದ ಆ ಶಿವಕುಮಾರನು ಈ ತಾರಕನನ್ನು ವಧಿಸುತ್ತಾನೆಂಬುದರಲ್ಲಿ ಸಂಶಯವಿಲ್ಲವು. ಸರ್ವಭೂತಾಂತರ್ಯಾಮಿಯಾದ ಆ ಶಂಭುವು ಯಾವ ಉಪಾಯವನ್ನು ಮಾಡಿದರೆ ಪತ್ನಿಯನ್ನು ಪರಿಗ್ರಹಿಸುವನೋ ಆ ಉಪಾಯವನ್ನು ಮಾಡಿರಿ. ನೀವು ಶ್ರೇಷ್ಠವಾದ ಈ ಪ್ರಯತ್ನವನ್ನು ಮಾಡಿರಿ. ಇದರಿಂದ ನಿಮಗೆ ಮಂಗಳವಾಗುವುದು. ಶಿವಸುತನು ಆ ತಾರಕಾಸುರನನ್ನು ವಧಿಸುತ್ತಾನೆ. ಈ ಮಾತು ಸತ್ಯವಾದುದೆಂದು ತಿಳಿಯಿರಿ" ಎಂದು ನುಡಿಯಿತು.

ಯಥೋಯಂ ದೇವಾಃ ವಿಜಾನೀಧ್ವಮಿತ್ಯುವಾಚಾಶರೀರವಾಕ್ ।
ಪರಂ ವಿಸ್ಮಯಮಾಪನ್ನಾ ಊಚುರ್ದೇವಾಃ ಪರಸ್ಪರಂ ॥ ೪೪ ॥
ಶ್ರುತ್ವಾ ನಭೋಗತಾಂ ವಾಣೀಮಾಜಗ್ಮುಸ್ತೇ ಹಿಮಾಲಯಂ ।
ಬೃಹಸ್ಪತಿಂ ಪುರಸ್ಕೃತ್ಯ ಸರ್ವೇ ದೇವಾ ವಚೋಽಬ್ರುವನ್ ॥ ೪೫ ॥
ಹಿಮಾಲಯಂ ಮಹಾಭಾಗಾಃ ಸರ್ವೇ ಕಾರ್ಯಾರ್ಥ ಗೌರವಾತ್ ।
ಹಿಮಾಲಯ ಮಹಾಭಾಗ ಶ್ರೂಯತಾಂ ನೋಽಧುನಾ ವಚಃ ॥ ೪೬ ॥
ತಾರಕಸ್ತ್ರಾಸಯತ್ಯಸ್ಮಾನ್ಸಾಹಾಯ್ಯಂ ತದ್ವಧೇ ಕುರು ।
ತ್ವಂ ಶರಣ್ಯೋ ಭವಾಸ್ಮಾಕಂ ಸರ್ವೇಷಾಂ ಚ ತಪಸ್ವಿನಾಂ ।
ತಸ್ಮಾತ್ಸರ್ವೇ ವಯಂ ಯಾತಾಃ ಮಹೇಂದ್ರಸಹಿತಾ ವಿಭೋ ॥ ೪೭ ॥

ಲೋಮಶ ಉವಾಚ :—

ಏವಮಭ್ಯರ್ಥಿತೋ ದೈವೈರ್ಹಿಮವಾನ್ಗಿರಿಸತ್ತಮಃ ।
ಉವಾಚ ದೇವಾನ್ಪ್ರಹಸನ್ವಾಕ್ಯಂ ವಾಕ್ಯವಿದಾಂ ವರಃ ॥ ೪೮ ॥
ಮಹೇಂದ್ರಮುದ್ದಿಶ್ಯ ತಥಾಹ್ಯುಪಹಾಸ ಸಮನ್ವಿತಃ ।
ಅಕ್ಷಮಾಶ್ಚ ವಯಂ ಸರ್ವೇ ಮಹೇಂದ್ರೇಣ ಕೃತಾಃ ಸುರಾಃ ॥ ೪೯ ॥

---

೪೪–೪೭. ಇಂತು ನುಡಿದ ಆಕಾಶವಾಣಿಯ ನುಡಿಯನ್ನು ಕೇಳಿ ದೇವತೆಗಳೆಲ್ಲರೂ ಆಶ್ಚರ್ಯಪಟ್ಟುಕೊಂಡು ತಂತಮ್ಮಲ್ಲಿಯೇ ಅದರ ವಿಷಯವಾಗಿ ಮಾತನಾಡಿಕೊಳ್ಳುತ್ತ ಹಿಮತ್ಪರ್ವತಕ್ಕೆ ಬಂದು, ತಮ್ಮ ಗುರುವಾದ ಬೃಹಸ್ಪತಿಯನ್ನು ಪುರಸ್ಕರಿಸಿಕೊಂಡು ತಮ್ಮ ಕಾರ್ಯಗೌರವದಿಂದ ಆ ಹಿಮವಂತನನ್ನು ಕುರಿತು ಹೀಗೆಂದರು. "ಎಲೈ ಮಹಾಭಾಗ್ಯಶಾಲಿಯಾದ ಹಿಮವಂತನೇ! ದಯವಿಟ್ಟು ಈಗ ನಾವು ಬಿನ್ನವಿಸುವ ಮಾತನ್ನು ನೀನು ಲಾಲಿಸಬೇಕು. ಈಗಲೀ ತಾರಕಾಸುರನು ನಮ್ಮನ್ನು ಬಹಳವಾಗಿ ಪೀಡಿಸುತ್ತಿರುವನು. ಆ ದಾನವನನ್ನು ಸಂಹರಿಸಲು ನೀನು ನಮಗೆ ಸಹಾಯಮಾಡಬೇಕು. ಈಗ ನೀನು ದೇವತೆಗಳಾದ ನಮಗೂ, ಈ ತಪಸ್ವಿಗಳಿಗೂ ಎಲ್ಲರಿಗೂ ರಕ್ಷಕನಾಗಬೇಕು. ಎಲೈ ಪ್ರಭುವೇ! ಆದುದರಿಂದಲೇ ನಾವೆಲ್ಲರೂ ದೇವೇಂದ್ರನೊಡಗೂಡಿ ನಿನ್ನಲ್ಲಿಗೆ ಬಂದಿರುವೆವು."

೪೮–೫೨. ಲೋಮಶನು ಹೇಳುತ್ತಾನೆ:—ದೇವತೆಗಳು ಈ ಪ್ರಕಾರವಾಗಿ ಪ್ರಾರ್ಥಿಸಲು ಮಾತನಾಡಬಲ್ಲವರಲ್ಲಿ ಉತ್ತಮನೂ ಗಿರಿಸತ್ತಮನೂ ಆದ ಆ ಹಿಮವಂತನು ನಸುನಗುತ್ತ ದೇವೇಂದ್ರನನ್ನುದ್ದೇಶಿಸಿ ಹಾಸ್ಯಮಾಡುತ್ತ ಆ ದೇವತೆಗಳನ್ನು ಕುರಿತು, "ಎಲೈ ದೇವತೆಗಳಿರಾ! ಪೂರ್ವದಲ್ಲಿಯೇ

ಕಿಂ ಕುರ್ಮಃ ಸುರಕಾರ್ಯಂ ಚ ತಾರಕಸ್ಯ ವಧಂ ಪ್ರತಿ ।
ಪಕ್ಷಯುಕ್ತಾ ವಯಂ ಸರ್ವೇ ಯದಿ ಸ್ಯಾಮ ಸುರೋತ್ತಮಾಃ ॥ ೫೦ ॥
ತದಾ ವಯಂ ಘಾತಯಾಮಸ್ತಾರಕಂ ಸಹ ಬಾಂಧವೈಃ ।
ಅಚಲೋಽಹಂ ವಿಪಕ್ಷಶ್ಚ ಕಿಂ ಕಾರ್ಯಂ ಕರವಾಣಿ ವಃ ॥ ೫೧ ॥
ತಸ್ಯ ತದ್ವಚನಂ ಶ್ರುತ್ವಾ ಸರ್ವೇ ದೇವಾಸ್ತಮಬ್ರುವನ್ ।
ಸರ್ವೇ ಯೂಯಂ ವಯಂ ಚೈವ ಅಸಮರ್ಥಾ ವಧಂ ಪ್ರತಿ ।
ತಾರಕಸ್ಯ ಮಹಾಭಾಗ ಏತತ್ಕಾರ್ಯಂ ವಿಚಿಂತ್ಯತಾಂ ॥ ೫೨ ॥
ಯೇನ ಸಾಧ್ಯೋ ಭವೇಚ್ಛತ್ರುಸ್ತಾರಕೋ ಹಿ ಮಹಾಬಲಃ ।
ತದೋವಾಚ ಮಹಾತೇಜಾ ಹಿಮವಾನಸುರಾನ್ಪ್ರತಿ ॥ ೫೩ ॥
ಕೇನೋಪಾಯೇನ ಭೋ ದೇವಾಸ್ತಾರಕಂ ಹಂತುಮಿಚ್ಛಥ ।
ಕಥಯಂತು ತ್ವರೇಣೈವ ಕಾರ್ಯಂ ವೇತ್ತುಂ ಮಮೈವ ಹಿ ॥ ೫೪ ॥
ತದಾ ಸುರೈಃ ಕಥಿತಂ ಸರ್ವಮೇತ
ದ್ವಾಣ್ಯಾ ಚೋಕ್ತಂ ಯತ್ಪುರಾ ಕಾರ್ಯಹೇತೋಃ ।
ಶ್ರುತಂ ತದಾ ಗಿರಿಣಾ ವಾಕ್ಯಮೇತ
ತ್ಪ್ರೋವಾಚೇದಂ ಹಿಮವಾನ್ಪರ್ವತೋ ಹಿ ॥ ೫೫ ॥

---

ಈ ದೇವೇಂದ್ರನು ನಮ್ಮೆಲ್ಲರನ್ನು ದುರ್ಬಲರನ್ನಾಗಿ ಮಾಡಿರುವನು. ಇಂತಹ ನಾವು ಈಗ ತಾರಕನ ಸಂಹಾರಕ್ಕೋಸುಗ ಏನು ತಾನೆ ಮಾಡಿಯೇವು? ನಾವೇನಾದರೂ ರೆಕ್ಕೆಗಳೊಡಗೂಡಿದ್ದಿದ್ದರೆ ಬಂಧುಗಳೊಡಗೂಡಿದ ಆ ತಾರಕಾಸುರನನ್ನು ಸಂಹರಿಸುತ್ತಲೇ ಇದ್ದೆವು. ಆ ಮಾತಂತಿರಲಿ; ನಾನಾದರೋ ಅಚಲನು, ರೆಕ್ಕೆಗಳಿಲ್ಲದವನು. ಈಗ ನಾನು ಯಾವ ಕಾರ್ಯವನ್ನು ತಾನೇ ಮಾಡಲಿ!" ಎಂದನು.

೫೨–೫೫. ಅವನ ಈ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ, "ಅಯ್ಯಾ ಪುಣ್ಯಾತ್ಮನೇ! ಈ ತಾರಕನನ್ನು ಸಂಹರಿಸಲು ನಾವೂ ಸಮರ್ಥರಲ್ಲ. ನೀನೂ ಸಮರ್ಥರಲ್ಲ. ಆದುದರಿಂದ ಪ್ರಕೃತದಲ್ಲಿ ಆಗಬೇಕಾದ ಕಾರ್ಯವನ್ನಾಲೋಚಿಸು. ಯಾವ ಕಾರ್ಯವನ್ನು ಮಾಡಿದರೆ ಮಹಾಬಲನೂ, ಶತ್ರುವೂ ಆದ ಈ ದಾನವನು ವಧ್ಯನಾಗುವನೋ ಆ ಕಾರ್ಯವನ್ನು ಈಗ ಯೋಚಿಸಬೇಕಾಗಿರುವುದು" ಎಂದು ಹೇಳಿದರು. ಆಗ ಮಹಾತೇಜಸ್ವಿಯಾದ ಹಿಮವಂತನು ಆ ದೇವತೆಗಳನ್ನು ಕುರಿತು, "ಅಯ್ಯಾ ನೀವು ಯಾವ ಉಪಾಯದಿಂದ ಆ ದಾನವನನ್ನು ವಧಿಸಬೇಕೆಂದಿರುವಿರಿ? ಅದರಲ್ಲಿ ನಾನು ಮಾಡಬೇಕಾದ ಕಾರ್ಯವೇನು? ಅದನ್ನೀಗ ಜಾಗ್ರತೆಯಾಗಿ ತಿಳಿಸಿರಿ" ಎಂದನು.

ಶಿವಸ್ಯ ಪುತ್ರೇಣ ಚ ಧೀಮತಾ ಯದಾ
ವಧ್ಯೋ ದೈತ್ಯಸ್ತಾರಕೋ ವೈ ಮಹಾತ್ಮಾ ।
ತದಾ ಸರ್ವಂ ಸುರಕಾರ್ಯಂ ಶುಭಂ ಸ್ಯಾ
ದ್ವಾಣ್ಯಾಚೋಕ್ತಂ ಸತ್ಯಮೇತದ್ಭವೇಚ್ಚ ॥ ೫೬ ॥
ತಸ್ಮಾತ್ತದೇತತ್ಕ್ರಿಯತಾಂ ಭವದ್ಭಿ
ರ್ಯಥಾ ಮಹೇಶಃ ಕುರುತೇ ಪರಿಗ್ರಹಂ ।
ಕನ್ಯಾ ಯಥಾ ತಸ್ಯ ಶಿವಸ್ಯ ಯೋಗ್ಯಾ
ನಿರೀಕ್ಷ್ಯತಾಮಾಶು ಸುರೈರಿದಾನೀಂ ॥ ೫೭ ॥
ತಸ್ಯ ತದ್ವಚನಂ ಶ್ರುತ್ವಾ ಪ್ರಹಸ್ಯೋಚುಃ ಸುರಾಸ್ತದಾ ।
ಜನಿತವ್ಯಾ ತ್ವಯಾ ಕನ್ಯಾ ಶಿವಾರ್ಥಂ ಕಾರ್ಯಸಿದ್ಧಯೇ ॥ ೫೮ ॥
ಸುರಾಣಾಂ ಚ ಗಿರೇ ವಾಕ್ಯಂ ಕುರು ಶೀಘ್ರಂ ಮಹಾಮತೇ ।
ಆಧಾರಸ್ತ್ವಂತು ದೇವಾನಾಂ ಭವಿಷ್ಯಸಿ ನ ಸಂಶಯಃ ॥ ೫೯ ॥
ಇತ್ಯುಕ್ತೋ ಗಿರಿರಾಜೋಽಥ ದೇವೈಃ ಸ್ವಗೃಹಮಾವಿಶತ್ ।
ಪತ್ನೀಂ ಮೇನಾಂ ಚ ಪಪ್ರಚ್ಛ ಸುರಕಾರ್ಯಂ ಸಮಾಗತಂ ॥ ೬೦ ॥

---

೫೬–೬೦. ಆಗ ದೇವತೆಗಳು ಕಾರ್ಯಸಿದ್ಧಿಯಾಗಲೋಸುಗ ಆಕಾಶ ವಾಣಿಯು ನುಡಿದುದೆಲ್ಲವನ್ನೂ ಆತನಿಗೆ ತಿಳಿಸಿದರು. ಎಲ್ಲವನ್ನೂ ಕೇಳಿದ ಬಳಿಕ ಹಿಮವಂತನು, "ಎಲೈ! ಮಹಾತ್ಮನಾದ ಆ ತಾರಕನು ಮಹಾ ಬುದ್ಧಿ ಶಾಲಿಯಾದ ಶಿವಪುತ್ರನಿಂದಲೇ ವಧ್ಯನಾಗುವನೆಂದೂ, ಅದರಿಂದ ದೇವತೆಗಳಾದ ನಿಮ್ಮ ಕಾರ್ಯವು ಸಫಲವಾಗುವುದೆಂದೂ ನುಡಿದ ಆಕಾಶವಾಣಿಯ ಮಾತು ನಿಜವಿರಬಹುದು. ಆದುದರಿಂದ ಈಗ ನೀವು ಆ ಮಹೇಶ್ವರನು ಪತ್ನಿಯನ್ನು ಪರಿಗ್ರಹಿಸುವಂತೆ ಯಾವ ಕಾರ್ಯವನ್ನು ಮಾಡಬೇಕೋ ಅದನ್ನು ಮಾಡಿರಿ. ಆತನಿಗೆ ಯೋಗ್ಯಳಾದ ಕನ್ಯೆಯೊಬ್ಬಳನ್ನು ಹುಡುಕಿರಿ" ಎಂದು ಹೇಳಿದನು. ಆ ಮಾತನ್ನು ಕೇಳಿ ದೇವತೆಗಳೆಲ್ಲರೂ ಅವನನ್ನು ಕುರಿತು, "ಅಯ್ಯಾ ಹಿಮವಂತನೇ! ಈಗ ದೇವತೆಗಳೆಲ್ಲರ ಕಾರ್ಯಸಿದ್ಧಿಯಾಗಬೇಕಾಗಿರುವುದು ನಿನ್ನಿಂದಲೇ! ಅದಕ್ಕೆ ನಿನ್ನ ಸಹಾಯವೇ ಬೇಕಾಗಿರುವುದು. ಈಗ ನೀನು ಆ ಪರಶಿವನಿಗೆ ಯೋಗ್ಯಳಾದ ಕನ್ಯೆಯೊಬ್ಬಳನ್ನು ಪಡೆಯಬೇಕು. ಎಲೈ ಮಹಾಮತಿಯೇ! ನಮ್ಮ ಈ ಮಾತನ್ನು ನಡೆಸಿಕೊಡು. ನೀನು ಈ ರೀತಿ ಮಾಡಿದುದಾದರೆ ದೇವತೆಗಳೆಲ್ಲರಿಗೂ ನೀನೇ ಆಧಾರವಾಗುವೆಯೆಂಬುದರಲ್ಲಿ ಸಂಶಯವಿಲ್ಲವು." ದೇವತೆಗಳೆಲ್ಲರೂ ಈ ರೀತಿ ಹೇಳಿದಮೇಲೆ ಆ ಗಿರಿರಾಜನು ಅವರೆಲ್ಲರೊಡನೆಯೂ ತನ್ನ ಮನೆಗೆ ಬಂದು ತನ್ನ ಹೆಂಡತಿಯಾದ ಮೇನಾದೇವಿ

**ಜನಿತವ್ಯಾ ಸುಕನ್ಯೈಕಾ ಸುರಕಾರ್ಯಾರ್ಥಸಿದ್ಧಯೇ ।**
**ದೇವಾನಾಂ ಚ ಋಷೀಣಾಂ ಚ ತಥೈವ ಚ ತಪಸ್ವಿನಾಂ ॥ ೬೧ ॥**
**ಪ್ರಿಯಂ ನ ಭವತಿ ಸ್ತ್ರೀಣಾಂ ಕನ್ಯಾಜನನಮೇವಚ ।**
**ತಥಾಪಿ ಜನಿತವ್ಯಾ ಚ ಕನ್ಯೈಕಾ ಚ ವರಾನನೇ ॥ ೬೨ ॥**
**ಪ್ರಹಸ್ಯ ಮೇನಾಪ್ಯೋವಾಚ ಸ್ವಪತಿಂ ಚ ಹಿಮಾಲಯಂ ।**
**ಯದುಕ್ತಂ ಭವತಾ ವಾಕ್ಯಂ ಶ್ರೂಯತಾಂ ಮೇ ತ್ವಯಾಽಧುನಾ ॥ ೬೩ ॥**
**ಕನ್ಯಾ ಸದಾ ದುಃಖಕರಿ ನೃಣಾಂಪತೇ**
**ಸ್ತ್ರೀಣಾಂ ತಥಾಶೋಕಕರೀ ಮಹಾಮತೇ ।**
**ತಸ್ಮಾದ್ವಿಮೃಶ್ಯ ಸುಚಿರಂ ಸ್ವಯಮೇವ ಬುದ್ಧ್ಯಾ**
**ಯಥಾಹಿತಂ ಶೈಲಪತೇ ತದುಚ್ಯತಾಂ ॥ ೬೪ ॥**
**ಹಿಮವಾಂಸ್ತದುಪಶ್ರುತ್ಯ ಪ್ರಿಯಾಯಾ ವಚನಂ ತದಾ ।**
**ಉವಾಚ ವಾಕ್ಯಂ ಮೇಧಾವೀ ಪರೋಪಕರಣಾನ್ವಿತಂ ॥ ೬೫ ॥**
**ಯೇನ ಯೇನ ಪ್ರಕಾರೇಣ ಪರೇಷಾಮುಪಜೀವನಂ ।**
**ಭವಿಷ್ಯತಿ ಚ ತತ್ಕಾರ್ಯಂ ಧೀಮತಾ ಪುರುಷೇಣ ಹಿ ॥ ೬೬ ॥**
**ಸ್ತ್ರಿಯಾಪಿ ಚೈವ ತತ್ಕಾರ್ಯಂ ಪರೋಪಕರಣಾನ್ವಿತಂ ।**
**ಏವಂ ಪ್ರವರ್ತಿತಾ ತೇನ ಗಿರಿಣಾ ಮಹಿಷೀ ತಥಾ ।**
**ದಧಾರ ಜಠರೇ ಕನ್ಯಾಂ ಮೇನಾ ಭಾಗ್ಯವತೀ ತದಾ ॥ ೬೭ ॥**

---

ಯನ್ನು ಕರೆದು, "ಓ ದೇವೀ! ಈಗ ದೇವತೆಗಳ ಕಾರ್ಯವು ಒದಗಿದೆ. ಇವರ, ಋಷಿಗಳ ಮತ್ತು ತಪಸ್ವಿಗಳ ಕಾರ್ಯಸಿದ್ಧಿಗಾಗಿ ಒಬ್ಬ ಕನ್ಯೆಯನ್ನು ಪಡೆಯ ಬೇಕಾಗಿದೆ. ಹೆಣ್ಣು ಮಗುವಾಗುವುದೆಂದರೆ ಹೆಂಗಸರಿಗೇ ಪ್ರಿಯವಾಗುವುದಿಲ್ಲ. ಎಲೌ ವರಾನನೇ! ಆದರೂ ಈಗ ನೀನು ಒಬ್ಬ ಕನ್ಯೆಯನ್ನು ಪಡೆಯಬೇಕು" ಎಂದು ಕೇಳಿದನು.

೬೩–೬೭. ಈ ಮಾತನ್ನು ಕೇಳಿ ಮೇನಾದೇವಿಯು ನಕ್ಕು ತನ್ನ ಪತಿಯನ್ನು ಕುರಿತು, "ನೀನಾಡಿದ ಮಾತಂತಿರಲಿ, ಈಗ ನಾನು ಹೇಳುವುದನ್ನು ಕೇಳು; ನಾಥ! ಹೆಣ್ಣು ಗಂಡಸರಿಗೂ ಹೆಂಗಸರಿಗೂ ಇಬ್ಬರಿಗೂ ದುಃಖವನ್ನುಂಟು ಮಾಡುವವಳೇ! ಆದುದರಿಂದ ನಿನ್ನ ಮನಸ್ಸಿನಲ್ಲಿ ನೀನೇ ಚೆನ್ನಾಗಿ ಯೋಚಿಸಿ ಕೊಂಡು ಯಾವುದು ಹಿತವೋ ಅದನ್ನು ನಿರ್ಧರಿಸಿ ಹೇಳು" ಎಂದಳು. ಮಹಾ ಮೇಧಾವಿಯಾದ ಹಿಮವಂತನು ತನ್ನ ಪ್ರಿಯೆಯ ಈ ಮಾತನ್ನು ಕೇಳಿ ಪರೋಪ ಕಾರಕವಾದ ಮಾತುಗಳನ್ನಾಡುವವನಾಗಿ, "ಎಲೌ ಪ್ರಿಯಳೇ! ಬುದ್ಧಿಶಾಲಿ ಯಾದವನು ಯಾವ ರೀತಿಯಿಂದಲೇ ಆಗಲಿ ಇತರರಿಗೆ ಉಪಕಾರವಾಗುವು

ಮಹಾವಿದ್ಯಾ ಮಹಾಮಾಯಾ ಮಹಾಮೇಧಾಸ್ವರೂಪಿಣೀ ।
ರುದ್ರಕಾಲೀ ಚ ಅಂಬಾ ಚ ಸತೀ ದಾಕ್ಷಾಯಣೀ ಪರಾ ॥ ೬೮ ॥
ತಾಂ ವಿಭೂತಿಂ ವಿಶಾಲಾಕ್ಷೀ ಜಠರೇ ಪರಮಾಂ ಸತೀ ।
ಬಭಾರ ಸಾ ಮಹಾಭಾಗಾ ಮೇನಾ ಚಾರುವಿಲೋಚನಾ ॥ ೬೯ ॥
ಸ್ತುತಿಂ ಚಕ್ರುಸ್ತದಾ ದೇವಾ ಋಷಯೋ ಯಕ್ಷ ಕಿನ್ನರಾಃ ।
ಮೇನಾಯಾ ಭೂರಿ ಭಾಗ್ಯಯಾಸ್ತಥಾ ಹಿಮವತೋ ಗಿರೇಃ ॥ ೭೦ ॥
ಏತಸ್ಮಿನ್ನಂತರೇ ಜಾತಾ ಗಿರಿಜಾನಾಮ ನಾಮತಃ ।
ಪ್ರಾದುರ್ಭೂತಾ ಯದಾದೇವೀ ಸರ್ವೇಷಾಂ ಚ ಸುಖಪ್ರದಾ ॥ ೭೧ ॥
ದೇವದುಂದುಭಯೋ ನೇದುರ್ನನೃತುಶ್ಚಾಪ್ಸರೋಗಣಾಃ ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋ ಗಣಾಃ ॥ ೭೨ ॥
ಪುಷ್ಪವರ್ಷೇಣ ಮಹತಾ ವವೃಷುರ್ವಿಬುಧಾಸ್ತಥಾ ।
ತದಾಪ್ರಸನ್ನಮಭವತ್ಸರ್ವಂ ತ್ರೈಲೋಕ್ಯಮೇವಚ ॥ ೭೩ ॥

---

ದಾದರೆ ಆ ಕಾರ್ಯವು ತನಗೆ ಅಹಿತವಾಗಿದ್ದರೂ ಅದನ್ನು ಮಾಡಲೇಬೇಕು. ಅಂತಹ ಪರೋಪಕಾರ ಕಾರ್ಯವನ್ನು ಸ್ತ್ರೀಯೂ ಮಾಡತಕ್ಕದ್ದೇ !!" ಎಂದನು. ಹಿಮವಂತನಿಂತು ಬೋಧಿಸಿದ ತರುವಾಯ ಆತನ ಮಡದಿಯೂ ಮಹಾ ಭಾಗ್ಯವತಿಯೂ ಆದ ಆ ಮೇನಾದೇವಿಯು ಕನ್ಯೆಯನ್ನು ತನ್ನ ಜಠರದಲ್ಲಿ ಧರಿಸಿದಳು.

೬೮–೭೦. ಎಲೈ ಶೌನಕಾದಿ ಮುನಿಗಳಿರಾ! ತರುವಾಯ, ಯಾವಾಕೆ ಯನ್ನು ಮಹಾವಿದ್ಯಾ ಎಂತಲೂ, ಮಹಾಮಾಯಾ, ಮಹಾಮೇಧಾಸ್ವರೂ ಪಿಣಿಯೆಂತಲೂ, ರುದ್ರಕಾಳಿ, ಅಂಬಾ, ಸತೀ, ದಾಕ್ಷಾಯಣಿ, ಪರಾ ಎಂತಲೂ ಮಹಾಮುನಿಗಳು ಹೇಳುತ್ತಾರೆಯೋ ಆ ಮಹಾವಿಭೂತಿಯನ್ನು ಮಹಾ ಭಾಗ್ಯವತಿಯೂ, ಮಹಾ ಸುಂದರಾಂಗಿಯೂ ಆದ ಆ ಮೇನಾದೇವಿಯು ಗರ್ಭದಲ್ಲಿ ಧರಿಸಿದಳು. ಆಗ ದೇವರ್ಷಿಗಳೂ, ಯಕ್ಷಕಿನ್ನರರೂ ಮಹಾಪುಣ್ಯ ಶಾಲಿಗಳಾದ ಆ ಮೇನಾ ಹಿಮವಂತರನ್ನು ಕೊಂಡಾಡಿದರು.

೭೧–೭೩. ಇದೇ ಸಮಯದಲ್ಲಿಯೇ ದೇವಿಯಾದ ಗಿರಿಜೆಯು ಎಲ್ಲರಿಗೂ ಸುಖವನ್ನುಂಟುಮಾಡುವವಳಾಗಿ ಆ ಮೇನಾದೇವಿಯ ಗರ್ಭದಿಂದ ಜನಿಸಿದಳು. ಆಗ ದೇವದುಂದುಭಿಗಳು ಮೊಳಗಿದುವು. ಅಪ್ಸರ ಸಮೂಹಗಳು ನರ್ತಿಸಿದುವು. ಗಂಧರ್ವರು ಗಾನಮಾಡಿದರು. ದೇವತೆಗಳೆಲ್ಲರೂ ಹೂಮಳೆಗರೆದರು. ಮೂರು ಲೋಕಗಳೂ ಪ್ರಸನ್ನವಾದುವು. ಅಯ್ಯಾ ವಿಪ್ರರೇ! ಹೀಗೆ ಯಾವಾಗ ಮಹಾ ಸತಿಯು ಗಿರಿಜೆಯಾಗಿ ಜನಿಸಿದಳೋ ಆಗಲೇ ದೈತ್ಯರಿಗೆಲ್ಲ ಭಯವಡಿಸಿತು.

ಯದಾವತೀರ್ಣಾ ಗಿರಿಜಾ ಮಹಾಸತೀ
ತದೈವ ದೈತ್ಯಾಭಯಮಾದಿಶಂಸ್ತೇ ।
ಪ್ರಾಪ್ತಾಮುದಂ ದೇವಗಣಾ ಮಹರ್ಷಯಃ
ಸ ಚಾರಣಾಃ ಸಿದ್ಧಗಣಾಸ್ತಥೈವ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಶ್ರೀಭವಾನ್ಯುತ್ಪತ್ತಿ"
ನಾಮ ವಿಂಶೋಽಧ್ಯಾಯಃ

---

ದೇವತೆಗಳೂ, ಮಹರ್ಷಿಗಳೂ, ಚಾರಣರೊಡನೆಯೂ, ಸಿದ್ಧರೊಡನೆಯೂ ಅತ್ಯಾನಂದವನ್ನು ಹೊಂದಿದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ
"ಶ್ರೀ ಭವಾನೀದೇವಿಯ ಉತ್ಪತ್ತಿ" ಎಂಬ
ಇಪ್ಪತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಏಕವಿಂಶೋಽಧ್ಯಾಯಃ

### ಪಾರ್ವತೀ ತಪಶ್ಚರ್ಯಾವರ್ಣನಂ

ಲೋಮಶ ಉವಾಚ :—

ವರ್ಧಮಾನಾ ತದಾ ಸಾಧ್ವೀ ರರಾಜ ಪ್ರತಿವಾಸರಂ ।
ಅಷ್ಟವರ್ಷಾ ಯದಾ ಜಾತಾ ಹಿಮಾಲಯಗೃಹೇ ಸತೀ ॥ ೧ ॥
ಮಹೇಶೋ ಹಿಮವದ್ದ್ರೋಣ್ಯಾಂ ತತಾಪ ಪರಮಂ ತಪಃ ।
ಸರ್ವೈರ್ಗಣೈಃ ಪರಿವೃತೋ ವೀರಭದ್ರಾದಿಭಿಸ್ತದಾ ॥ ೨ ॥
ಏತತ್ತಪೋಜುಷಾಣಂ ತಂ ಮಹೇಶಂ ಹಿಮವಾನ್ಯಯೌ ।
ತತ್ಪಾದ ಪಲ್ಲವಂ ದ್ರಷ್ಟುಂ ಪಾರ್ವತ್ಯಾಸಹ ಬುದ್ಧಿಮಾನ್ ॥ ೩ ॥
ಯಾವತ್ಸಮಾಗತೋ ದ್ರಷ್ಟುಂ ನಂದಿನಾಽಸೌ ನಿವಾರಿತಃ ।
ದ್ವಾರಿಸ್ಥಿತೇನ ಚ ತದಾ ಕ್ಷಣಮೇಕಂ ಸ್ಥಿರೋಭವತ್ ॥ ೪ ॥
ಪುನರ್ವಿಜ್ಞಾಪಯಾಮಾಸ ನಂದಿನಾ ಹಿಮವಾನ್ಗಿರಿಃ ।
ವಿಜ್ಞಪ್ತೋ ನಂದಿನಾ ಶಂಭುರಚಲೋ ದ್ರಷ್ಟುಮಾಗತಃ ॥ ೫ ॥
ತದಾಕರ್ಣ್ಯ ವಚಸ್ತಸ್ಯ ನಂದಿನಃ ಪರಮೇಶ್ವರಃ ।
ಆನಯಸ್ವ ಗಿರಿಂ ಚಾತ್ರ ನಂದಿನಂ ವಾಕ್ಯಮಬ್ರವೀತ್ ॥ ೬ ॥

---

### ಕನ್ನಡದ ಅನುವಾದ

#### ಪಾರ್ವತಿಯ ತಪಶ್ಚರ್ಯೆ

೧–೬. ಲೋಮಶನು ಹೇಳುತ್ತಾನೆ:—ಎಲೈ ಮುನಿಗಳಿರಾ! ಈ ರೀತಿ ಮೇನಾಗರ್ಭದಿಂದ ಜನಿಸಿದ ಆ ಗಿರಿಜೆಯು ಹಿಮವಂತನ ಮನೆಯಲ್ಲಿ ದಿನ ದಿನಕ್ಕೂ ಬೆಳೆದು ಬೆಳಗುತ್ತ, ಎಂಟು ವರ್ಷದ ಬಾಲೆಯಾದಳು. ಇದೇ ಸಮಯದಲ್ಲಿಯೇ ಇತ್ತ ಮಹೇಶ್ವರನೂ ಸಹ ವೀರಭದ್ರನೇ ಮೊದಲಾದ ತನ್ನ ಕಿಂಕರ ಗಣಗಳಿಂದ ಸೇವೆ ಸಲ್ಲಿಸಿಕೊಳ್ಳುತ್ತ ಅಲ್ಲಿಯ ಹಿಮವದ್ದ್ರೋಣಿಯೆಂಬ ಪ್ರದೇಶದಲ್ಲಿ ಉತ್ತಮವಾದ ತಪಸ್ಸನ್ನೆಸಗುತ್ತಿದ್ದನು. ಆಗ ಮಹಾ ಬುದ್ಧಿಶಾಲಿಯಾದ ಹಿಮವಂತನಾದರೋ ತನ್ನ ಮಗಳಾದ ಆ ಪಾರ್ವತಿಯೊಡನೆ ಈ ರೀತಿ ತಪಸ್ಸನ್ನಾಚರಿಸುತ್ತಿದ್ದ ಆ ಮಹೇಶ್ವರನ ಪಾದಪಲ್ಲವವನ್ನು ಸಂದರ್ಶಿಸಲೋಸುಗ ಅಲ್ಲಿಗೈತಂದನು. ಹೀಗೆ ಬಂದೊಡನೆಯೇ ಆ ತಪೋಗುಹೆಯ ಬಾಗಿಲಿನಲ್ಲಿ ನಿಂತಿದ್ದ ನಂದಿಯು ಆತನನ್ನು ತಡೆದು ನಿಲ್ಲಿಸಿ, ಒಂದು ಕ್ಷಣಕಾಲ ಸುಮ್ಮನಿದ್ದು ಆ ಬಳಿಕ "ಪ್ರಭು! ಹಿಮವಂತನು ದರ್ಶನಾರ್ಥಿಯಾಗಿ ಬಂದಿರುವನು" ಎಂದು ತನ್ನ ಪ್ರಭುವಾದ ಪರಶಿವನಿಗೆ ಅರಿಕೆಮಾಡಿದನು. ಪರಶಿವನು

ತಥೇತಿ ಮತ್ವಾ ನಂದೀ ತಂ ಪರ್ವತಂ ಚ ಹಿಮಾಲಯಂ ।
ಆನಯಾಮಾಸ ಸ ತಥಾ ಶಂಕರಂ ಲೋಕಶಂಕರಂ ॥ ೭ ॥
ದೃಷ್ಟ್ವಾ ತದಾನೀಂ ಸಕಲೇಶ್ವರಂ ಪ್ರಭುಂ
ತಪೋ ಜುಷಾಣಂ ವಿನಿಮೀಲಿತೇಕ್ಷಣಂ ॥ ೮ ॥
ಕಪರ್ದಿನಂ ಚಂದ್ರಕಲಾವಿಭೂಷಣಂ
ವೇದಾಂತವೇದ್ಯಂ ಪರಮಾತ್ಮನಿಷ್ಠಿತಂ ।
ವವಂದ ಶೀರ್ಷ್ಣಾ ಚ ತದಾ ಹಿಮಾಚಲಃ
ಪರಾಂ ಮುದಂ ಪ್ರಾಪದಹೀನ ಸತ್ತ್ವಃ ॥ ೯ ॥
ಉವಾಚ ವಾಕ್ಯಂ ಜಗದೇಕಮಂಗಲಂ
ಹಿಮಾಲಯೋ ವಾಕ್ಯವಿದಾಂ ವರಿಷ್ಠಃ ॥ ೧೦ ॥
ಸ ಭಾಗ್ಯೋಽಹಂ ಮಹಾದೇವ ಪ್ರಸಾದಾತ್ತವ ಶಂಕರ ।
ಪ್ರತ್ಯಹಂ ಚಾಗಮಿಷ್ಯಾಮಿ ದರ್ಶನಾರ್ಥಂ ತವ ಪ್ರಭೋ ॥ ೧೧ ॥
ಅನಯಾ ಸಹ ದೇವೇಶ ಅನುಜ್ಞಾಂ ದಾತುಮರ್ಹಸಿ ।
ಶ್ರುತ್ವಾತು ವಚನಂ ತಸ್ಯ ದೇವದೇವೋ ಮಹೇಶ್ವರಃ ॥ ೧೨ ॥
ಆಗಂತವ್ಯಂ ತ್ವಯಾ ನಿತ್ಯಂ ದರ್ಶನಾರ್ಥಂ ಮಮಾಚಲ ।
ಕುಮಾರೀಂ ಚ ಗೃಹೇ ಸ್ಥಾಪ್ಯ ನಾನ್ಯಥಾ ಮಮ ದರ್ಶನಂ ॥ ೧೩ ॥

---

ಆ ಮಾತನ್ನು ಕೇಳಿ, "ಎಲೈ ನಂದಿಯೇ! ಆ ಹಿಮವಂತನನ್ನು ಒಳಕ್ಕೆ ಕರೆದು ಕೊಂಡು ಬಾ" ಎಂದು ಅಪ್ಪಣೆ ಮಾಡಿದನು.

೭–೧೦. ನಂದಿಯು ಅಂತೆಯೇ ಆಗಲೆಂದು ಹೇಳಿ, ಆತನನ್ನು ಲೋಕ ಶಂಕರನಾದ ಶಂಕರನ ಬಳಿಗೆ ಕರೆತಂದನು. ಆಗ ಹಿಮವಂತನು ಕಣ್ಣುಗಳನ್ನು ಮುಚ್ಚಿ ತಪಸ್ಸನ್ನೆಸಗುತ್ತಿದ್ದ ಸಕಲೇಶ್ವರನೂ, ಪ್ರಭುವೂ, ಕಪರ್ದಿಯೂ, ಚಂದ್ರಕಲಾವಿಭೂಷಣನೂ, ವೇದಾಂತವೇದ್ಯನೂ, ತನ್ನಲ್ಲಿತಾನೇ ನೆಲಸಿರುವ ವನೂ ಆದ ಆ ಸದಾಶಿವಮೂರ್ತಿಯನ್ನು ಸಂದರ್ಶಿಸಿ ದೀರ್ಘದಂಡಪ್ರಣಾಮ ವನ್ನು ಮಾಡಿ ಅಪಾರವಾದ ಸಂತೋಷವನ್ನು ಹೊಂದಿದನು. ಆ ಸಮಯದಲ್ಲಿ ಮಾತುಬಲ್ಲವರಲ್ಲಿ ಅಗ್ಗಳಿಯನಾದ ಆ ಹಿಮವಂತನು ಜಗದೇಕಮಂಗಲನಾದ ಆ ಪರಮಾತ್ಮನನ್ನು ಕುರಿತು ಹೀಗೆ ಹೇಳಿದನು.

೧೧–೧೬. "ಶಂಕರಾ! ನಿನ್ನ ಅನುಗ್ರಹದಿಂದ ನಾನು ಬಹು ಭಾಗ್ಯಶಾಲಿ ಯಾದೆ. ಪ್ರಭುವೇ! ನಾನು ಪ್ರತಿನಿತ್ಯವೂ ನಿನ್ನ ದರ್ಶನಕ್ಕಾಗಿ ನನ್ನ ಮಗಳಾದ ಈ ಗಿರಿಜೆಯೊಡನೆ ಇಲ್ಲಿಗೆ ಬರಬೇಕೆಂದಿರುತ್ತೇನೆ. ಸ್ವಾಮಿ! ನೀನು ನನಗೆ ಅನುಜ್ಞೆಯನ್ನು ದಯಪಾಲಿಸಬೇಕು" ಎಂದು ಹೇಳಿದನು. ದೇವದೇವನಾದ ಮಹೇಶ್ವರನು ಆತನ ಮಾತನ್ನು ಕೇಳಿ, "ಹಿಮವಂತ! ನೀನು ಈ ನಿನ್ನ

ಅಚಲಃ ಪ್ರತ್ಯುವಾಚೇದಂ ಗಿರಿಶಂ ನತಕಂಧರಃ ।
ಕಸ್ಮಾನ್ಮಯಾಽನಯಾ ಸಾರ್ಧ್ಧಂ ನಾಗಂತವ್ಯಂ ತದುಚ್ಯತಾಂ ।
ಅಚಲಂಚ ಪ್ರತೀ ಶಂಭುಃ ಪ್ರಹಸನ್ವಾಕ್ಯಮಬ್ರವೀತ್ ॥ ೧೪ ॥
ಇಯಂ ಕುಮಾರೀ ಸುಶ್ರೋಣೀ ತನ್ವೀ ಚಾರು ಪ್ರಭಾಷಿಣೀ ।
ನಾನೀತವ್ಯಾ ಮತ್ಸಮೀಪೇ ವಾರಯಾಮಿ ಪುನಃ ಪುನಃ ॥ ೧೫ ॥
ಏತಚ್ಛ್ರುತ್ವಾ ವಚನಂ ತಸ್ಯ ಶಂಭೋಃ
ನಿರಾಮಯಂ ನಿಃಸ್ಪೃಹ ನಿಷ್ಠುರಂ ವಾ ।
ತಪಸ್ವಿನೋಕ್ತಂ ವಚನಂ ನಿಶಮ್ಯ
ಉವಾಚ ಗೌರೀ ಚ ವಿಹಸ್ಯ ಶಂಭುಂ ॥ ೧೬ ॥

ಗೌರ್ಯುವಾಚ :—

ತಪಶ್ಶಕ್ತ್ಯಾನ್ವಿತಃ ಶಂಭೋ ಕರೋಷಿ ವಿಪುಲಂ ತಪಃ ।
ತವಬುದ್ಧಿರಿಯಂ ಜಾತಾ ತಪಸ್ತಪ್ತುಂ ಮಹಾತ್ಮನಃ ॥ ೧೭ ॥
ಕಸ್ತ್ವಂ ಕಾ ಪ್ರಕೃತಿಃ ಸೂಕ್ಷ್ಮಾ ಭಗವಂಸ್ತದ್ವಿಮೃಶ್ಯತಾಂ ।
ಪಾರ್ವತ್ಯಾಸ್ತದ್ವಚಃ ಶ್ರುತ್ವಾ ಮಹೇಶೋ ವಾಕ್ಯಮಬ್ರವೀತ್ । ॥ ೧೮ ॥
ತಪಸಾ ಪರಮೇಣೈವ ಪ್ರಕೃತಿಂ ನಾಶಯಾಮ್ಯಹಂ ।
ಪ್ರಕೃತ್ಯಾ ರಹಿತಃ ಸುಭ್ರು ಅಹಂ ತಿಷ್ಠಾಮಿ ತತ್ತ್ವತಃ ।
ತಸ್ಮಾಚ್ಚ ಪ್ರಕೃತೇಃ ಸಿದ್ಧೈರ್ನಕಾರ್ಯಃ ಸಂಗ್ರಹಃ ಕ್ವಚಿತ್ ॥ ೧೯ ॥

---

ಮಗಳನ್ನು ಮನೆಯಲ್ಲಿಯೇ ಬಿಟ್ಟು ಪ್ರತಿದಿನವೂ ದರ್ಶನಾರ್ಥಿಯಾಗಿ ಬರಬಹುದು, ಇಲ್ಲದಿದ್ದರೆ ನಿನಗೆ ನನ್ನ ದರ್ಶನವು ದೊರಕದು" ಎಂದನು. ಹಿಮವಂತನು ನಮ್ರತೆಯಿಂದ ತಲೆಯನ್ನು ತಗ್ಗಿಸಿಕೊಂಡು, "ಪ್ರಭುವೇ! ನಾನು ಈಕೆಯೊಡನೆ ಇಲ್ಲಿಗೇಕೆ ಬರಕೂಡದೆಂಬುದನ್ನು ಅಪ್ಪಣೆಕೊಡಿಸಬೇಕು" ಎಂದು ಕೇಳಲು, ಮಹಾ ತಪಸ್ವಿಯಾದ ಶಂಭುವು ನಸುನಗುತ್ತ, "ಅಯ್ಯಾ! ಈಕೆಯು ಕನ್ಯೆ; ಸುಂದರಿ; ಮುದ್ದಾಗಿ ಮಾತನಾಡುವವಳು. ಆದುದರಿಂದಿವಳನ್ನು ನನ್ನ ಬಳಿಗೆ ಕರೆತರಬಾರದೆಂದು ಬಾರಿಬಾರಿಗೂ ನಿನ್ನನ್ನು ಎಚ್ಚರಿಸುತ್ತಿರುವೆನು" ಎಂದನು. ನಿಷ್ಕಳಂಕವೂ, ನಿಸ್ಪೃಹವಾದುದರಿಂದ ಬಹು ನಿಷ್ಠುರವೂ ಆಗಿ, ಆ ತಪಸ್ವಿ ಶಂಕರ ನಾಡಿದ ಈ ನುಡಿಗಳನ್ನುಕೇಳಿ ಗೌರೀದೇವಿಯು ಅವನನ್ನು ಕುರಿತು ಹೇಳುವಳು.

೧೭–೨೦. ಗೌರಿಯು ಹೇಳುತ್ತಾಳೆ:—"ಎಲೈ ಶಂಭುವೇ! ನಿನ್ನಲ್ಲಿ ತಪಶ್ಶಕ್ತಿಯಿರುವುದು. ಮಹತ್ತರವಾದ ತಪಸ್ಸನ್ನೂ ಮಾಡುತ್ತಿರುವೆ. ಮಹಾತ್ಮ ನಾದ ನಿನಗೆ ಈ ರೀತಿ ತಪಸ್ಸು ಮಾಡಬೇಕೆಂಬ ಬುದ್ಧಿಯುಂಟಾದುದೆಂತು? ನೀನಾರು? ಸೂಕ್ಷ್ಮಳಾದ ಪ್ರಕೃತಿ ಯಾರು? ಇದನ್ನು ಸ್ವಲ್ಪ ವಿಮರ್ಶೆಮಾಡು." ಪಾರ್ವತಿಯ ಈ ಮಾತನ್ನು ಕೇಳಿ ಮಹೇಶ್ವರನು ಆಕೆಯನ್ನು ಕುರಿತು, "ಎಲೌ!

ಪಾರ್ವತ್ಯುವಾಚ :—

**ಯದುಕ್ತಂ ಪರಯಾ ವಾಚಾ ವಚನಂ ಶಂಕರ ತ್ವಯಾ ।**
**ಸಾ ಕಿಂ ಪ್ರಕೃತಿರ್ನೈವ ಸ್ಯಾದತೀತಸ್ತ್ವಂ ಭವಾನ್ಕಥಂ ॥ ೨೦ ॥**
**ಯಚ್ಛೃಣೋಷಿ ಯದಶ್ನಾಸಿ ಯಚ್ಚ ಪಶ್ಯಸಿ ಶಂಕರ ।**
**ವಾಗ್ವಾದೇನಚ ಕಿಂ ಕಾರ್ಯಮಸ್ಮಾಕಂ ಚಾಧುನಾ ಪ್ರಭೋ ॥ ೨೧ ॥**
**ತತ್ಸರ್ವಂ ಪ್ರಕೃತೇಃ ಕಾರ್ಯಂ ಮಿಥ್ಯಾವಾದೋ ನಿರರ್ಥಕಃ ।**
**ಪ್ರಕೃತೇಃ ಪರತೋ ಭೂತ್ವಾ ಕಿಮರ್ಥಂ ತಪ್ಯತೇ ತಪಃ ॥ ೨೨ ॥**
**ತ್ವಯಾ ಶಂಭೋಽಧುನಾ ಹ್ಯಸ್ಮಿನ್ಗಿರೌ ಹಿಮವತಿ ಪ್ರಭೋ ।**
**ಪ್ರಕೃತ್ಯಾ ಮಿಳಿತೋಽಸಿ ತ್ವಂ ನ ಜಾನಾಸಿ ಹಿ ಶಂಕರ ॥ ೨೩ ॥**
**ವಾಗ್ವಾದೇನ ಚ ಕಿಂ ಕಾರ್ಯಮಸ್ಮಾಕಂ ಚಾಧುನಾ ಪ್ರಭೋ ।**
**ಪ್ರಕೃತೇಃ ಪರತಸ್ತ್ವಂ ಚ ಯದಿ ಸತ್ಯಂ ವಚಸ್ತವ ।**
**ತರ್ಹಿ ತ್ವಯಾ ನ ಭೇತವ್ಯಂ ಮಮ ಶಂಕರ ಸಂಪ್ರತಿ ॥ ೨೪ ॥**
**ಪ್ರಹಸ್ಯ ಭಗವಾನ್ದೇವೋ ಗಿರಿಜಾಂ ಪ್ರತ್ಯುವಾಚ ಹ ॥ ೨೫ ॥**

---

ನಾನು ಶ್ರೇಷ್ಠವಾದ ತಪಸ್ಸಿನಿಂದಲೇ ಆ ಪ್ರಕೃತಿಯನ್ನು ನಾಶಗೊಳಿಸುವೆನು. ಎಲೆ ಸುಭ್ರು! ಆ ಪ್ರಕೃತಿಯ ಸಂಪರ್ಕವಿಲ್ಲದೆಯೇ ನಾನು ಇರಬಲ್ಲೆನು. ಆದುದರಿಂದ ಸಿದ್ಧಪುರುಷರು ಯಾವಾಗಲೂ ಈ ಪ್ರಕೃತಿಯನ್ನು ಸಂಗ್ರಹಿಸಬಾರದು (ಕಟ್ಟಿಕೊಳ್ಳಬಾರದು)'' ಎಂದನು. ಪಾರ್ವತಿಯು ಹೇಳುತ್ತಾಳೆ:—'' ಶಂಕರ! ಈಗ ಶ್ರೇಷ್ಠವಾದ ನಿನ್ನ ಮಾತಿನಿಂದ ನಿರೂಪಿಸಿದ ಆ ಪ್ರಕೃತಿಯು ಇಲ್ಲದೆಯೇ ಹೋಗಿರುವಳೇ! ಒಂದುವೇಳೆ ಆ ಪ್ರಕೃತಿಯು ಇರುವುದೇ ನಿಜವಾದರೆ ನೀನು ಆಕೆಯಿಂದ ಬೇರೆಯಾಗಿರುವೆಯೆಂತು?

೨೧–೨೫. ನಿನ್ನೊಡನೆ ಸುಮ್ಮನೆ ವಾಗ್ವಾದ ಮಾಡಿ ಪ್ರಯೋಜನವೇನು? ನೀನು ಕೇಳುವುದು, ನೀನು ಅನುಭವಿಸುವುದು, ನೀನು ನೋಡುವುದು ಎಲ್ಲವೂ ಪ್ರಕೃತಿಯ ಕಾರ್ಯವೇ ಆಗಿರುವುದಲ್ಲವೆ? ಈ ಮಿಥ್ಯಾವಾದವು (ಇಲ್ಲ ಎಂಬುದು) ನಿಷ್ಪ್ರಯೋಜನವು. ಹಾಗೂ ಆಗಲಿ. ಪ್ರಭು! ನೀನು ಪ್ರಕೃತಿಯಿಂದ ಬೇರೆಯೇ ಆಗಿದ್ದರೆ ಹೀಗೆ ಈ ಹಿಮವತ್ಪರ್ವತದಲ್ಲಿ ತಪಸ್ಸನ್ನೇಕೆ ಮಾಡುತ್ತಿರುವೆ? ಶಂಕರ! ನೀನು ಪ್ರಕೃತಿಯೊಡನೆ ಕೂಡಿಯೇ ಇರುವೆ. ಆದರೆ ಅದನ್ನು ಮಾತ್ರ ನೀನು ತಿಳಿದಿಲ್ಲ. ಪ್ರಭುವೇ! ಸುಮ್ಮನೆ ನಿನ್ನೊಡನೆ ವಾಗ್ವಾದಮಾಡುವುದರಿಂದೇನು ಫಲ! 'ನಾನು ಪ್ರಕೃತಿಯಿಂದ ಬೇರೆಯಾಗಿರುವೆನು' ಎಂಬ ನಿನ್ನ ಮಾತು ನಿಜವಾದುದೇ ಆದರೆ ನೀನು ನನಗಾಗಿ ಹೆದರಬೇಕಾದುದೇನೂ ಇರುವುದಿಲ್ಲ'' ಎಂದು ಹೇಳಿದಳು. ಈ ಮಾತನ್ನು ಕೇಳಿ ಷಡ್ಗುಣೈಶ್ವರ್ಯ ಸಂಪನ್ನನಾದ ಆ ಮಹಾದೇವನು ಆ ಗಿರಿಜೆಯನ್ನು ಕುರಿತು ನಸುನಗುತ್ತ ಹೀಗೆ ಹೇಳಿದನು.

ಮಹಾದೇವ ಉವಾಚ :—

ಪ್ರತ್ಯಹಂ ಕುರು ಮೇ ಸೇವಾಂ ಗಿರಿಜೇ ಸಾಧುಭಾಷಿಣಿ ॥ ೨೬ ॥

ಇತ್ಯೇವಮುಕ್ತ್ವಾ ಗಿರಿಜಾಂ ಮಹೇಶೋ
ಹಿಮಾಲಯಂ ವಾಕ್ಯಮಥೋ ಬಭಾಷೇ ।
ಅತ್ರೈವಸೋಽಹಂ ತಪಸಾ ಪರೇಣ
ಚರಾಮಿ ಭೂಮ್ಯಾಂ ಪರಮಾರ್ಥಭಾವಃ ॥ ೨೭ ॥

ತಪಸ್ತಪ್ತುಮನುಜ್ಞಾ ಮೇ ದಾತವ್ಯಾ ಪರ್ವತಾಧಿಪ ।
ಅನುಜ್ಞಯಾ ವಿನಾ ಕಿಂಚಿತ್ತಪಃ ಕರ್ತುಂ ನ ಪಾರ್ಯತೇ ॥ ೨೮ ॥
ಏತಚ್ಛ್ರುತ್ವಾ ವಚಸ್ತಸ್ಯ ದೇವದೇವಸ್ಯ ಶೂಲಿನಃ ।
ಪ್ರಹಸ್ಯ ಹಿಮವಾಂಛಂಭುಮಿದಂ ವಚನಮಬ್ರವೀತ್ ॥ ೨೯ ॥
ತ್ವದೀಯಂ ಹಿ ಜಗತ್ಸರ್ವಂ ಸ ದೇವಾಸುರಮಾನುಷಂ ।
ಕಿಮಹಂ ತು ಮಹಾದೇವ ತುಚ್ಛೋ ಭೂತ್ವಾ ದದಾಮಿ ತೇ ॥ ೩೦ ॥
ಏವಮುಕ್ತೋ ಹಿಮವತಾ ಶಂಕರೋ ಲೋಕಶಂಕರಃ ।
ಪ್ರಹಸ್ಯ ಗಿರಿರಾಜಂ ತಂ ಯಾಹೀತಿ ಪ್ರಾಹ ಸಾದರಂ ॥ ೩೧ ॥
ಶಂಕರೇಣಾಭ್ಯನುಜ್ಞಾತಃ ಸ್ವಗೃಹಂ ಹಿಮವಾನ್ಯಯೌ ।
ಸಾರ್ಧಂ ಗಿರಿಜಯಾ ಸೋಽಪಿ ಪ್ರತ್ಯಹಂ ದರ್ಶನೇಸ್ಥಿತಃ ॥ ೩೨ ॥

---

೨೬–೩೦. ಮಹಾದೇವನು ಹೇಳುವನು :— "ಎಲೆ ಮಧುರಭಾಷಿಣಿ! ನೀನು ಬಹು ಚೆನ್ನಾಗಿ ಮಾತನಾಡುವೆ. ನೀನು ಪ್ರತಿದಿನವೂ ಇಲ್ಲಿಗೆ ಬಂದು ನನ್ನ ಸೇವೆಯನ್ನು ಮಾಡು." ಆ ಮಹೇಶ್ವರನು ಪಾರ್ವತಿಗೆ ಹೀಗೆ ಹೇಳಿದ ತರುವಾಯ ಹಿಮವಂತನನ್ನು ಕುರಿತು, "ಎಲೈ ಹಿಮವಂತನೇ! ಕೇವಲ ಪಾರಮಾರ್ಥಿಕವಾದ ಮನಸ್ಸುಳ್ಳ ನಾನು ಈ ಪ್ರದೇಶದಲ್ಲಿಯೇ ಶ್ರೇಷ್ಠವಾದ ತಪಸ್ಸನ್ನಾಚರಿಸಬೇಕೆಂದಿರುವೆನು. ಪರ್ವತರಾಜ! ನೀನು ನನಗೆ ಅನುಜ್ಞೆ ಯನ್ನು ಕೊಡಬೇಕು. ನಿನ್ನ ಅನುಜ್ಞೆಯಿಲ್ಲದಿದ್ದರೆ ನಾನು ತಪಸ್ಸನ್ನುಮಾಡಲು ಸ್ವಲ್ಪವೂ ಸಾಧ್ಯವಾಗುವುದಿಲ್ಲವು" ಎಂದು ಕೇಳಿದನು. ದೇವದೇವನಾದ ಆ ಶೂಲಿಯ ಮಾತನ್ನಾಲಿಸಿ ಹಿಮವಂತನು ನಸುನಕ್ಕು, "ಮಹಾದೇವ! ದೇವಾ ಸುರ ಮಾನುಷರಿಂದ ತುಂಬಿದ ಈ ಅಖಂಡಬ್ರಹ್ಮಾಂಡವೇ ನಿನ್ನದಾಗಿರುವುದು. ಹೀಗಿರುವಲ್ಲಿ ಮಹಾ ಪ್ರಭಾವಶಾಲಿಯೂ, ಪ್ರಭುವೂ ಆದ ನಿನಗೆ ಅಲ್ಪನಾದ ನಾನು ಅಪ್ಪಣೆ ಕೊಡುವುದೇನು?" ಎಂದು ಬಹು ಶುಭಕರವಾಗಿ ನುಡಿದನು.

೩೧–೩೫. ಹಿಮವಂತನು ಆ ರೀತಿ ಹೇಳಲು, ಲೋಕಶಂಕರನಾದ ಶಂಕರನು ನಸುನಕ್ಕು, ವಿಶ್ವಾಸದಿಂದ ಹೋಗಿಬಾರೆಂದು ಆತನಿಗೆ ಹೇಳಿದನು. ಹೀಗೆ ಬೀಳ್ಕೊಡಲು ಆ ಹಿಮವಂತನು ಮಗಳಾದ ಗಿರಿಜೆಯೊಡನೆ ತನ್ನ ಮನೆಗೈ

ಏವಂ ಕತಿಪಯಃ ಕಾಲೋ ಗತಶ್ಶೋಪಾಸನಾತ್ತಯೋಃ ॥ ೩೩ ॥
ಸುತಾ ಪಿತ್ರೋಶ್ಚ ತತ್ರೈವ ಶಂಕರೋ ದುರತಿಕ್ರಮಃ ।
ಪಾರ್ವತೀಂ ಪ್ರತಿ ತತ್ರೈವ ಚಿಂತಾಮಾಪೇದಿರೇ ಸುರಾಃ ॥ ೩೪ ॥
ತೇ ಚಿಂತ್ಯಮಾನಾಶ್ಚ ಸುರಾಸ್ತದಾನೀಂ
ಕಥಂ ಮಹೇಶೋ ಗಿರಿಜಾಂ ಸಮೇಷ್ಯತಿ ।
ಕಿಂ ಕಾರ್ಯಮದ್ಯೈವ ವಯಂ ಚ ಕುರ್ಮೋ
ಬೃಹಸ್ಪತೇ ತತ್ಕಥಯಸ್ವ ಮಾಚಿರಂ ॥ ೩೫ ॥
ಬೃಹಸ್ಪತಿರುವಾಚೇದಂ ಮಹೇಂದ್ರಂ ಪ್ರತಿ ಸದ್ವಚಃ ।
ಏವಮೇ ತತ್ತ್ವಯಾ ಕಾರ್ಯಂ ಮಹೇಂದ್ರ ಶ್ರೂಯತಾಂ ತದಾ ॥೩೬॥
ಏತತ್ಕಾರ್ಯಂ ಮದನೇನೈವ ರಾಜ
ನ್ನಾನ್ಯಃ ಸಮರ್ಥೋ ಭವಿತಾ ತ್ರಿಲೋಕೇ ।
ವಿಪ್ಲಾವಿತಂ ತಾಪಸಾನಾಂ ತಪೋ ಹಿ
ತಸ್ಮಾತ್ತ್ವರಾತ್ಪ್ರಾರ್ಥನೀಯೋ ಹಿ ಮಾರಃ ॥ ೩೭ ॥
ಗುರೋರ್ವಚನಮಾಕರ್ಣ್ಯ ಆಹ್ವಯನ್ಮದನಂ ಹರಿಃ ।
ಆಹ್ವಾನಾದಾಜಗಾಮಾಥ ಮದನಃ ಕಾರ್ಯಸಾಧಕಃ ॥ ೩೮ ॥

---

ತಂದನು. ಅಯ್ಯಾ ಮುನಿಗಳಿರಾ! ಈ ಪ್ರಕಾರ ಆ ಹಿಮವಂತನು ಆತನ ಮಗಳಾದ ಪಾರ್ವತಿಯೂ ಶಂಕರನ ಸೇವೆಯನ್ನೆಸಗುತ್ತಿರುವಂತೆಯೇ ಕೆಲ ಕಾಲ ಕಳೆಯಿತು. ಆದರೂ ಅತಿಕ್ರಮಿಸಲಸದಳನಾದ ಪರಮೇಶ್ವರನು ಪಾರ್ವತಿಯ ವಿಷಯದಲ್ಲಿ ವಿಮುಖನಾಗಿಯೇ ಇರುವುದನ್ನು ಕಂಡು ದೇವತೆಗಳೆಲ್ಲರೂ ಬಹಳ ಯೋಚನೆಗೊಳಗಾಗಿ ತಮ್ಮ ಗುರುವಾದ ಬೃಹಸ್ಪತಿಯನ್ನು ಕುರಿತು, "ಈಶ್ವರನು ಪಾರ್ವತಿಯನ್ನು ಕೂಡುವುದೆಂತು? ಇದಕ್ಕೆ ನಾವೀಗ ಮಾಡಬೇಕಾದ ಕಾರ್ಯವೇನು? ಇದನ್ನು ಜಾಗ್ರತೆಯಾಗಿ ಹೇಳು. ತಡಮಾಡಬೇಡ" ಎಂದು ಕೇಳಿದರು.

೩೬–೪೦. ಆಗ ಬೃಹಸ್ಪತಿಯು ದೇವೇಂದ್ರನನ್ನು ಕುರಿತು, "ಮಹೇಂದ್ರ! ಈಗ ನೀನು ಮಾಡಬೇಕಾಗಿರುವ ಕಾರ್ಯವನ್ನು ಹೇಳುವೆನು; ಕೇಳು. ದೊರೆಯೇ! ಈ ಕಾರ್ಯವನ್ನು ಮಾಡಲು ಸಮರ್ಥನಾದವನು ಮನ್ಮಥನೇ! ಅವನನ್ನು ಬಿಟ್ಟರೆ ಮೂರು ಲೋಕಗಳಲ್ಲಿ ಈ ಕಾರ್ಯವನ್ನು ಮಾಡುವವರು ಮತ್ತಾರೂ ಇರುವುದಿಲ್ಲ. ಆ ಮಾರನೇನು ಸಾಮಾನ್ಯನೇ! ಅವನು ತಪಸ್ವಿಗಳ ತಪಸ್ಸೆಲ್ಲವನ್ನೂ ಕದಡುವಂತಹನು. ಆದುದರಿಂದ ಈಗ ನಾವೆಲ್ಲರೂ ಅವನನ್ನೇ ಪ್ರಾರ್ಥಿಸಬೇಕು" ಎಂದನು. ಗುರುವಿನ ಮಾತನ್ನು ಕೇಳಿ ಆ ಮಹೇಂದ್ರನು ಕೂಡಲೇ ಮನ್ಮಥನನ್ನಲ್ಲಿಗೆ ಕರೆಯಿಸಿದನು. ಹೀಗೆ ಕರೆಯಿಸಿದೊಡನೆಯೇ

ರತ್ಯಾ ಸಮೇತಃ ಸಹಮಾಧವೇನ
ಸ ಪುಷ್ಪಧನ್ವಾ ಪುರತಃ ಸಭಾಯಾಂ ।
ಮಹೇಂದ್ರಮಾಗತ್ಯ ಉವಾಚವಾಕ್ಯಂ
ಸ ಗರ್ವಿತಂ ಲೋಕಮನೋಹರಂಚ ॥ ೩೯ ॥
ಅಹಮಾಕಾರಿತಃ ಕಸ್ಮಾದ್ಬ್ರೂಹಿ ಮೇಽದ್ಯ ಶಚೀಪತೇ ।
ಕಿಂ ಕಾರ್ಯಂ ಕರವಾಣ್ಯದ್ಯ ಕಥ್ಯತಾಂ ಮಾವಿಲಂಬಿತಂ ॥ ೪೦ ॥
ಮಮ ಸ್ಮರಣಮಾತ್ರೇಣ ವಿಭ್ರಷ್ಟಾಹಿ ತಪಸ್ವಿನಃ ।
ತ್ವಮೇವ ಜಾನಾಸಿ ಹರೇ ಮಮ ವೀರ್ಯಪರಾಕ್ರಮೌ ॥ ೪೧ ॥
ಮಮ ವೀರ್ಯಂ ಚ ಜಾನಾತಿ ಶಕ್ತೇಃ ಪುತ್ರಃ ಪರಾಶರಃ ।
ಏವಂ ಚಾನ್ಯೇ ಚ ಬಹವೋ ಭೃಗ್ವಾದ್ಯಾ ಋಷಯೋ ಹ್ಯಮೀ ॥ ೪೨ ॥
ಗುರರಪ್ಯಭಿಜಾನಾತಿ ಭಾರ್ಯೋತಥ್ಯಸ್ಯ ಚೈವ ಹಿ ।
ತಸ್ಯಾಂ ಜಾತೋ ಭರದ್ವಾಜೋ ಗುರುಣಾ ಸಂಕರೋ ಹಿ ಸಃ ॥ ೪೩ ॥
ಭರ ದ್ವಾಜೋ ಮಹಾಭಾಗ ಇತ್ಯುವಾಚ ಗುರುಸ್ತದಾ ।
ಜಾನಾತಿ ಮಮ ವೀರ್ಯಂ ಚ ಶೌರ್ಯಂ ಚೈವ ಪ್ರಜಾಪತಿಃ ॥ ೪೪ ॥

---

ಮಹಾ ಕಾರ್ಯಸಾಧಕನಾದ ಆ ಮದನನೂ ಸಹ ಕುಸುಮಾಯುಧವನ್ನು ಹಿಡಿದು ತನ್ನ ಪ್ರಿಯೆಯಾದ ರತಿಯೊಡನೆಯೂ. ಮಂತ್ರಿಯಾದ ವಸಂತನೊಡನೆಯೂ ಆ ಮಹೇಂದ್ರನ ಸಭೆಗೈತಂದನು. ಬಳಿಕ ಅವನು ಮಹೇಂದ್ರನನ್ನು ಕುರಿತು, ಗರ್ವದೊಡಗೂಡಿದುದಾದರೂ ಕೇಳುವುದಕ್ಕೆ ಮನೋಹರವಾದ ಮಾತುಗಳಿಂದ "ಮಹೇಂದ್ರಾ! ಶಚೀಪತಿಯಾದ ನೀನು ನನ್ನನ್ನೇತಕ್ಕಾಗಿ ಕರೆಯಿಸಿರುವೆ? ಈಗ ನಾನು ಮಾಡಬೇಕಾದ ಕಾರ್ಯವೇನು; ಜಾಗ್ರತೆಯಾಗಿ ಹೇಳು. ಅದನ್ನು ಮಾಡಿಕೊಡುತ್ತೇನೆ.

೪೧–೪೫. ಅಯ್ಯಾ ದೇವೇಂದ್ರನೇ! ನನ್ನನ್ನು ಸ್ಮರಿಸಿದಮಾತ್ರದಿಂದಲೇ ತಪಸ್ವಿಗಳ ತಪಸ್ಸೆಲ್ಲವೂ ಭ್ರಷ್ಟವಾಗಿಹೋಗುವುದು. ನನ್ನ ವೀರ್ಯ ಸ್ಥೈರ್ಯ ಪರಾಕ್ರಮಗಳನ್ನು ನೀನು ಚೆನ್ನಾಗಿ ಬಲ್ಲೆ. ಶಕ್ತಿಯ ಮಗನಾದ ಪರಾಶರ ಮುನಿಯೂ ನನ್ನ ಪರಾಕ್ರಮವನ್ನು ಬಲ್ಲನು. ಅಂತೆಯೇ ಭೃಗುವೇ ಮೊದಲಾದ ಈ ಋಷಿಗಳೂ ಬಲ್ಲರು. ಬೃಹಸ್ಪತಿಯೂ ಬಲ್ಲನು. ಈತನು ಉತಥ್ಯನ ಭಾರ್ಯೆಯನ್ನು ಕಾಮಿಸಲಿಲ್ಲವೆ? ಅದರಿಂದತಾನೆ ಸಂಕರವಾಗಿ ಭಾರದ್ವಾಜನು ಜನಿಸಿದುದು! ಅವನು ಹುಟ್ಟಿದೊಡನೆಯೇ ಈ ಬೃಹಸ್ಪತಿಯು ಅವನನ್ನು ಕುರಿತು, 'ಭರ ದ್ವಾಜ (ಬಾಳು, ಇಬ್ಬರಿಂದ ಜನಿಸಿದವನೇ!)' ಎಂದು ಹೇಳಿದನಷ್ಟೆ. ಆದರಿಂದಲೇ ಅವನು ಭರದ್ವಾಜನೆಂದು ಹೆಸರಾದನು. ಎಲೈ ಪುರಂದರಾ! ಇದೂ ಅಲ್ಲದೆ ಬ್ರಹ್ಮನೂ ನನ್ನ ಶೌರ್ಯವನ್ನು ಬಲ್ಲವನೇ ಆಗಿರು

ಕ್ರೋಧೋ ಹಿ ಮಮಬಂಧುಶ್ಚ ಮಹಾಬಲ ಪರಾಕ್ರಮಃ ।
ಉಭಾಭ್ಯಾಂ ದ್ರಾವಿತಂ ವಿಶ್ವಂ ಜಂಗಮಾಜಂಗಮಂ ಮಹತ್ ।
ಬ್ರಹ್ಮಾದಿಸ್ತಂಬಪರ್ಯಂತಂ ಪ್ಲಾವಿತಂ ಸ ಚರಾಚರಂ ॥ ೪೫ ॥

ದೇವಾ ಊಚುಃ:—

ಮದನ ತ್ವಂ ಸಮರ್ಥೋಽಸಿ ಅಸ್ಮಾನ್‌ಜೇತುಂ ಸದೈವಹಿ ।
ಮಹೇಶಂ ಪ್ರತಿ ಗಚ್ಛಾಶು ಸುರಕಾರ್ಯಾರ್ಥಸಿದ್ಧಯೇ ।
ಪಾರ್ವತ್ಯಾ ಸಹಿತಂ ಶಂಭುಂ ಕುರುಷ್ವಾದ್ಯ ಮಹಾಮತೇ ॥ ೪೬ ॥
ಏವಮಭ್ಯರ್ಥಿತೋ ದೇವೈರ್ಮದನೋ ವಿಶ್ವಮೋಹನಃ ।
ಜಗಾಮ ತ್ವರಿತೋ ಭೂತ್ವಾ ಅಪ್ಸರೋಭಿಃ ಸಮನ್ವಿತಃ ॥ ೪೭ ॥

ತತೋ ಜಗಾಮಾಶು ಮಹಾ ಧನುರ್ಧರೋ
ವಿಸ್ಫಾರ್ಯ ಚಾಪಂ ಕುಸುಮಾನ್ವಿತಂ ಮಹತ್ ।
ತಥೈವ ಬಾಣಾಂಶ್ಚ ಮನೋರಮಾಂಶ್ಚ
ಪ್ರಗೃಹ್ಯ ವೀರೋ ಭುವನೈಕಜೇತಾ ॥ ೪೮ ॥
ತಸ್ಮಿನ್‌ಹಿಮಾದ್ರೌ ಪರಿದೃಶ್ಯಮಾನೋಽ
ವನೌ ಸ್ಮರೋ ಯೋಧಯುತಾಂ ವರಿಷ್ಠಃ ।

ತತ್ರಾಗತಾ ತದಾ ರಂಭಾ ಊರ್ವಶೀ ಪುಂಜಿಕಸ್ಥಲೀ ।
ಸುಮ್ಲೋಚಾ ಮಿಶ್ರಕೇಶೀ ಚ ಸುಭಗಾ ಚ ತಿಲೋತ್ತಮಾ ॥ ೪೯ ॥

---

ವನು. ಮಹಾ ಬಲಪರಾಕ್ರಮಶಾಲಿಯಾದ ಕ್ರೋಧನೇ ನನ್ನ ಬಂಧು. ನಾವಿಬ್ಬರೂ ಜಂಗಮಾಜಂಗಮವಾದ ಈ ಜಗತ್ತನ್ನೇ ಸಂಪೂರ್ಣವಾಗಿ, ಬ್ರಹ್ಮಾದಿಸ್ತಂಬಪರ್ಯಂತವೂ ಕದಡಿಬಿಟ್ಟಿರುವೆವು" ಎಂದನು.

೪೬–೫೩. ದೇವತೆಗಳು ಹೇಳುತ್ತಾರೆ:—"ಎಲೈ ಮನ್ಮಥನೇ! ನೀನು ನಮ್ಮನ್ನು ಗೆಲ್ಲಲು ಯಾವಾಗಲೂ ಸಮರ್ಥನಾಗಿಯೇ ಇರುವೆ. ಅದಂತಿರಲಿ; ಈಗ ನಿನ್ನಿಂದ ಒಂದಾನೊಂದು ದೇವಕಾರ್ಯವು ನೆರವೇರಬೇಕಾಗಿರುವುದು. ನೀನೀಗಲೇ ಜಾಗ್ರತೆಯಾಗಿ ಮಹೇಶ್ವರನ ಬಳಿಗೆ ಹೋಗು. ಅಯ್ಯಾ ಮಹಾ ಮತಿಯೇ! ನಿನ್ನ ಚಾತುರ್ಯವನ್ನು ಪ್ರಯೋಗಿಸಿ ಆ ಮಹೇಶ್ವರನು ಪಾರ್ವತಿ ಯೊಡಗೂಡುವಂತೆ ಮಾಡಬೇಕು." ದೇವತೆಗಳೆಲ್ಲರೂ ಈ ರೀತಿ ಪ್ರಾರ್ಥಿಸಲು, ವಿಶ್ವವನ್ನೇ ಮೋಹಗೊಳಿಸುವವನಾದ ಆ ಮನ್ಮಥನು ಏನೊಂದೂ ತಡಮಾಡದೆ ಕೂಡಲೇ ಅಪ್ಸರಸ್ತ್ರೀಯರೊಡಗೂಡಿ ಹಿಮವತ್ಪರ್ವತಕ್ಕೆ ಹೊರಟನು. ಆಗ ಯುದ್ಧವೀರನೂ, ಲೋಕವನ್ನೇ ಜಯಿಸುವವನೂ ಆದ ಆ ಮದನನು ಮಹಾ ಧನುರ್ಧರನಾಗಿ ಆ ತನ್ನ ಪುಷ್ಪ ಧನುಸ್ಸನ್ನು ಟೇಂಕರಿಸುತ್ತ, ಮನೋಹರವಾದ ಕುಸುಮಬಾಣಗಳನ್ನು ತೆಗೆದುಕೊಂಡು ಹಿಮವತ್ಪರ್ವತದಲ್ಲಿ ಪರಮೇಶ್ವರನು

ಅನ್ಯಾಶ್ಚ ವಿವಿಧಾ ಜಾತಾಃ ಸಾಹಾಯ್ಯೇ ಮದನಸ್ಯ ಚ ।
ಅಪ್ಸರಸೋ ಗಣೈರ್ದೃಷ್ಟ್ವಾ ಮದನೇನ ಸಹೈವ ತಾಃ ॥ ೫೦ ॥
ಸರ್ವೇ ಗಣಾಶ್ಚ ಸಹಸಾ ಮದನೇನ ವಿಮೋಹಿತಾಃ ।
ಭೃಂಗಿಣಾ ಚ ತದಾ ರಂಭಾ ಚಂಡೇನ ಸಹ ಚೋರ್ವಶೀ ॥ ೫೧ ॥
ಮೇನಕಾ ವೀರಭದ್ರೇಣ ಚಂಡೇನ ಪುಂಜಿಕಸ್ಥಲೀ ।
ತಿಲೋತ್ತಮಾದಯಸ್ತತ್ರ ಸಂವೃತಾಶ್ಚ ಗಣೈಸ್ತದಾ ॥ ೫೨ ॥
ಉನ್ಮತ್ತಭೂತೈರ್ಬಹುಭಿಸ್ತ್ರಪಾಂ ತ್ಯಕ್ತ್ವಾ ಮನೀಷಿಭಿಃ ।
ಅಕಾಲೇ ಕೋಕಿಲಾಭಿಶ್ಚ ವ್ಯಾಪ್ತಮಾಸೀನ್ಮಹೀಸ್ಥಲಂ ॥ ೫೩ ॥
ಅಶೋಕಾಶ್ಚಂಪಕಾಶ್ಚೂತಾ ಯೂಥ್ಯಶ್ಚೈವ ಕದಂಬಕಾಃ ।
ನೀಪಾಃ ಪ್ರಿಯಾಲಾಃ ಪನಸಾ ರಾಜವೃಕ್ಷಾಶ್ಚಿರಾಯಣಾಃ ॥ ೫೪ ॥
ದ್ರಾಕ್ಷಾವಲ್ಲ್ಯಃ ಪ್ರದೃಶ್ಯಂತೇ ಬಹುಲಾ ನಾಗಕೇಶರಾಃ ।
ತಥಾ ಕದಲ್ಯಃ ಕೇತಕ್ಯೋ ಭ್ರಮರೈರುಪಶೋಭಿತಾಃ ॥ ೫೫ ॥
ಮತ್ತಾಮದನಸಂಗೇನ ಹಂಸೀಭಿಃ ಕಲಹಂಸಕಾಃ ।
ಕರೇಣುಭಿರ್ಗಜಾ ಹ್ಯಾಸನ್ ಶಿಖಂಡೀಭಿಃ ಶಿಖಂಡಿನಃ ॥ ೫೬ ॥

---

ತಪಸ್ಸು ಮಾಡುತ್ತಿರುವ ಪ್ರದೇಶದಲ್ಲಿ ಬಹು ಜಾಗ್ರತೆಯಾಗಿಯೇ ಕಾಣಿಸಿಕೊಂಡನು. ಅದೇ ಸಮಯದಲ್ಲಿಯೇ ರಂಭೆ, ಊರ್ವಶಿ, ಪುಂಜಿಕಸ್ಥಲೆ, ಸುಮ್ಲೋಚೆ, ಮಿಶ್ರಕೇಶಿ, ಸುಭಗಾ, ತಿಲೋತ್ತಮೆ ಎಂಬುವರೂ, ಇನ್ನೂ ಇತರ ಅಪ್ಸರಾಂಗನೆಯರೂ ಸಹ ಆ ಮದನನಿಗೆ ನೆರವಾಗಲೋಸುಗ ಅಲ್ಲಿಗೈತಂದು, ಅವನೊಡನೆಯೇ ಅಲ್ಲಿದ್ದ ಶಿವಗಣಗಳಿಗೆ ಕಾಣಿಸಿಕೊಂಡರು. ಆ ಶಿವಗಣಗಳೆಲ್ಲವೂ ಬಹು ಜಾಗ್ರತೆಯಾಗಿಯೇ ಆ ಮದನನಿಂದ ವಿಮೋಹಿತರಾಗಿ ಹೋದರು. ಭೃಂಗಿಯೊಡನೆ ರಂಭೆಯೂ, ಚಂಡನೊಡನೆ ಊರ್ವಶಿಯೂ, ವೀರಭದ್ರನೊಡನೆ ಮೇನಕೆಯೂ, ಚಂಡನೊಡನೆ ಪುಂಜಿಕಸ್ಥಲೆಯೂ, ತಿಲೋತ್ತಮೆಯೇ ಮೊದಲಾದ ಇತರ ಅಪ್ಸರಾಂಗನೆಯರು ಇತರ ಶಿವಗಣಗಳೊಡನೆಯೂ ಸೇರಿ ಮೆರೆದರು. ಹೀಗೆ ಆ ಸುಂದರಿಯರು ನಾಚಿಕೆಯನ್ನೇ ತೊರೆದು ಮಹಾ ಬುದ್ಧಿಶಾಲಿಗಳಾದರೂ, ಕೇವಲ ಉನ್ಮತ್ತರೇ ಆಗಿಹೋಗಿದ್ದ ಆ ಶಿವಗಣಗಳೊಡನೆ ಸೇರಿ ನಲಿಯತೊಡಗಿದರು. ಆ ಸಮಯದಲ್ಲಿ ವಸಂತಕಾಲವಲ್ಲದಿದ್ದರೂ ಆ ಪ್ರದೇಶವೆಲ್ಲವೂ ಕೋಗಿಲೆಗಳಿಂದ ತುಂಬಿಹೋಯಿತು.

೫೪–೫೬. ಅಶೋಕ, ಸಂಪಗೆ, ಮಾವು, ಯೂಥಿಕಾ, ಕದಂಬ, ನೀಪ, ಪ್ರಿಯಾಲ, ಹಲಸು ಮೊದಲಾದ ರಾಜವೃಕ್ಷಗಳೂ, ದ್ರಾಕ್ಷಿಯ ಬಳ್ಳಿಗಳೂ, ಬಕುಲ, ನಾಗಕೇಸರ, ಬಾಳೆ, ತಾಳೆ ಮುಂತಾದುವೂ ಆ ಪ್ರದೇಶದಲ್ಲಿ ಶೋಭಿಸತೊಡಗಿದುವು. ಎತ್ತೆತ್ತಲೂ ದುಂಬಿಗಳು ಪುಷ್ಪವೃಕ್ಷಗಳಿಗೆರಗಿ

ನಿಷ್ಕಾಮಾಹ್ಯಾತುರಾಹ್ಯಾಸನ್ ಭವಸಂಪರ್ಕಜೈರ್ಗುಣೈಃ ।
ಅಕಸ್ಮಾಚ್ಚ ತಥಾಭೂತಂ ಕಥಂ ಜಾತಂ ವಿಮೃಶ್ಯ ಚ ॥ ೫೭ ॥
ಶೈಲಾದೋ ಹಿ ಮಹಾತೇಜಾ ನಂದೀ ಹ್ಯಮಿತವಿಕ್ರಮಃ ।
ರಕ್ಷಸಾಂ ವಿಬುಧಾನಾಂ ವಾ ಕೃತ್ಯಮಿತ್ಯೇತ್ಯಚಿಂತಯತ್ ॥ ೫೮ ॥
ಏತಸ್ಮಿನ್ನಂತರೇ ತತ್ರ ಮದನೋ ಹಿ ಧನುರ್ಧರಃ ।
ಪಂಚಬಾಣಾನ್ಸಮಾರೋಪ್ಯ ಸ್ವಕೀಯೇ ಧನುಷಿ ದ್ವಿಜಾಃ ।
ತರೋಶ್ಛಾಯಾಂ ಸಮಾಶ್ರಿತ್ಯ ದೇವದಾರುಗತಾಂ ತದಾ ॥ ೫೯ ॥

ನಿರೀಕ್ಷ್ಯ ಶಂಭುಂ ಪರಮಾಸನೇ ಸ್ಥಿತಂ
ತಪೋ ಜುಷಾಣಂ ಪರಮೇಷ್ಠಿನಾಂ ಪತಿಂ ।
ಗಂಗಾಧರಂ ನೀಲತಮಾಲಕಂಠಂ
ಕಪರ್ದಿನಂ ಚಂದ್ರಕಲಾಸಮೇತಂ ॥ ೬೦ ॥
ಭುಜಂಗ ಭೋಗಾಂಕಿತ ಸರ್ವಗಾತ್ರಂ
ಪಂಚಾನನಂ ಸಿಂಹವಿಶಾಲವಿಕ್ರಮಂ ।
ಕರ್ಪೂರಗೌರಂ ಪರಮಾನ್ವಿತಂ ಚ
ಸವೇದ್ಧುಕಾಮೋ ಮದನಸ್ತಪಸ್ವಿನಂ ॥ ೬೧ ॥

---

ಝೇಂಕರಿಸುತ್ತಿದ್ದುವು. ಮದನನ ಸಹವಾಸದಿಂದ ಅಲ್ಲಲ್ಲಿನ ಸರಸ್ಸುಗಳಲ್ಲಿದ್ದ ಕಲಹಂಸಗಳೆಲ್ಲವೂ ಮದಿಸಿ ಹೆಣ್ಣುಗಳೊಡನೆ ಕಲೆತವು. ಸಲಗಗಳು ಹೆಣ್ಣಾನೆಗಳೊಡನೆಯೂ, ನವಿಲುಗಳು ತಂತಮ್ಮ ಹೆಣ್ಣುಗಳೊಡನೆಯೂ ಬೆರತವು.

೫೭–೬೧. ಹೀಗೆ ಶಿವನಸಾನ್ನಿಧ್ಯಪ್ರಭಾವದಿಂದ ಕೇವಲ ನಿಷ್ಕಾಮವಾಗಿ ಬಹು ಶಾಂತವಾಗಿದ್ದ ಆ ಪ್ರದೇಶವೆಲ್ಲವೂ ಇದ್ದಕ್ಕಿದ್ದಂತೆಯೇ ಈ ಬದಲಾವಣೆಗಳಾದುದನ್ನು ಕಂಡು, ಹಾಗಾಗಲು ಕಾರಣವೇನೆಂದು ವಿಮರ್ಶಿಸಿ, ಮಹಾಪರಾಕ್ರಮಿಯೂ, ಮಹಾತೇಜಸ್ವಿಯೂ, ಶಿಲಾದನೂ ಆದ ನಂದೀಶ್ವರನು, ಇದು ದೇವತೆಗಳೋ ರಾಕ್ಷಸರೋ ಮಾಡಿದ ಕೃತ್ಯವೆಂದೇ ನಿರ್ಧರಿಸಿದನು. ಅಯ್ಯಾ ಬ್ರಾಹ್ಮಣರಿರಾ! ಈ ಸಮಯದಲ್ಲಿಯೇ ಮನ್ಮಥನೂ ಸಹ, ಅರವಿಂದ, ಅಶೋಕ, ಚೂತ, ನವಮಲ್ಲಿಕಾ, ನೀಲೋತ್ಪಲಗಳೆಂಬ ಐದು ಹೂವಂಬುಗಳನ್ನು ಪುಷ್ಪಧನುಸ್ಸಿನಲ್ಲಿ ಹೂಡಿ ದೇವದಾರುವೃಕ್ಷದ ನೆರಳಿನಲ್ಲಿ ನಿಂತು, ಪರಮಾಸನಾಸೀನನಾಗಿ ತಪಸ್ಸನ್ನೆಸಗುತ್ತಿರುವನೂ, ಪರಮೇಷ್ಠಿಗಳೆಲ್ಲರಿಗೂ ಒಡೆಯನೂ, ಗಂಗಾಧರನೂ, ನೀಲಕಂಠನೂ, ಕಪರ್ದಿಯೂ, ಚಂದ್ರಶೇಖರನೂ, ಸರ್ಪಾಲಂಕೃತಸರ್ವಗಾತ್ರನೂ, ಪಂಚಮುಖನೂ, ಸಿಂಹದಂತೆ ಅಪಾರಪರಾಕ್ರಮಿಯಾಗಿ ಕರ್ಪೂರದಂತೆ ಶುದ್ಧ ಧವಳವರ್ಣನೂ ಆಗಿ ವಿರಾಜಿಸುತ್ತಿದ್ದ ಆ ಶಂಭುವನ್ನು ನೋಡಿ ಅವನನ್ನು ಹೊಡೆಯಬಯಸಿದನು.

ದುರಾಸದಂ ದೀಪ್ತಿಮತಾಂ ವರಿಷ್ಠಂ
ಮಹೇಶಮುಗ್ರಂ ಸಹಮಾಧವೇನ ।
ಯಾವಚ್ಛಿವಂ ವೇದ್ಧುಕಾಮಃ ಶರೇಣ
ತಾವದ್ಯಾತಾ ಗಿರಿಜಾ ವಿಶ್ವಮಾತಾ ।
ಸಖೀಜನೈಃ ಸಂವೃತಾ ಪೂಜನಾರ್ಥಂ
ಸದಾಶಿವಂ ಮಂಗಲಂ ಮಂಗಲಾನಾಂ ॥ ೬೨ ॥
ಕನಕಕುಸುಮಮಾಲಾಂ ಸಂದಧೇ ನೀಲಕಂಠೇ
ಸಿತಕಿರಣಮನೋಜ್ಞಾ ದುರ್ಲಭಾ ಸಾ ತದಾನೀಂ ।
ಸ್ಮಿತವಿಕಸಿತನೇತ್ರಾ ಚಾರುವಕ್ತ್ರಂ ಶಿವಸ್ಯ
ಸಕಲಜನ ಜನಿತ್ರೀ ವೀಕ್ಷಮಾಣಾ ಬಭೂವ ॥ ೬೩ ॥
ತಾವದ್ವಿದ್ಧಃ ಶರೇಣೈವ ಮೋಹನಾಖ್ಯೇನ ಚ ತ್ವರಾತ್ ।
ವಿಧ್ಯಮಾನಸ್ತದಾ ಶಂಭುಃ ಶನೈರುನ್ಮೀಲ್ಯ ಲೋಚನೇ ।
ದದರ್ಶ ಗಿರಿಜಾಂ ದೇವೋಽಬ್ಧಿರ್ಯಥಾ ಶಶಿನಃ ಕಲಾಂ ॥ ೬೪ ॥
ಚಾರುಪ್ರಸನ್ನವದನಾಂ ಬಿಂಬೋಷ್ಠೀಂ ಸಸ್ಮಿತೇಕ್ಷಣಾಂ ।
ಸುದ್ವಿಜಾಮದ್ರಿಜಾಂ ತನ್ವೀಂ ವಿಶಾಲವದನೋತ್ಸವಾಂ ॥ ೬೫ ॥

---

೬೨–೬೪. ಎಲೈ ಮುನಿಗಳಿರಾ! ಹೀಗೆ ಆ ಮದನನು ವಸಂತಮಾಧವನೊಡಗೂಡಿದವನಾಗಿ, ಯಾರಿಂದಲೂ ಹೊಂದಲಸದಳನೂ, ತೇಜಸ್ವಿಯೂ, ಮಹಾ ಭಯಂಕರನೂ ಆದ ಆ ಶಂಭುವನ್ನು ತನ್ನ ಸುಮಬಾಣಗಳಿಂದ ಹೊಡೆಯುವುದರಲ್ಲಿರುವಷ್ಟರಲ್ಲಿಯೇ ವಿಶ್ವಮಾತೆಯೂ, ಸಮಸ್ತ ಮಂಗಲಗಳಿಗೂ ಮಂಗಲಸ್ವರೂಪಿಣಿಯೂ ಆದ ಗಿರಿಜೆಯು ಗೆಳತಿಯರೊಡನೆ ಶಿವನ ಸನ್ನಿಧಿಯನ್ನು ಸೇರಿದಳು. ಆಗ ಚಂದ್ರನಂತೆ ಅತ್ಯಂತ ಆಹ್ಲಾದಕರಳೂ, ಇತರರಿಗೆ ಅತ್ಯಂತ ದುರ್ಲಭಳೂ, ಜಗನ್ಮಾತೆಯೂ ಆದ ಆ ದೇವಿಯು ಕನಕಕುಸುಮಮಾಲಿಕೆಯನ್ನು ಆ ನೀಲಕಂಠನ ಕೊರಳಿಗೆ ಹಾಕಿ ನಸುನಗೆಯಿಂದ ಅರಳಿದ ಕಣ್ಣುಗಳುಳ್ಳವಳಾಗಿ ಆ ಪರಶಿವಮೂರ್ತಿಯ ಮನೋಹರವಾದ ಮುಖವನ್ನೇ ನೆಟ್ಟನೆ ನೋಡುತ್ತಿದ್ದಳು. ಅಷ್ಟರಲ್ಲಿಯೇ ಆ ಮದನನೂ ಸಹ ತಾನು ಹೂಡಿದ ಮೋಹನವೆಂಬ ಬಾಣದಿಂದ ಆ ಮಹಾದೇವನನ್ನು ಹೊಡೆದನು. ಆ ಬಾಣವು ಸೋಕಿದೊಡನೆಯೇ ಶಂಭುವು ಮೆಲ್ಲ ಮೆಲ್ಲನೆ ಕಣ್ಣುಗಳನ್ನು ತೆರೆದು ಬಳಿಯಲ್ಲಿಯೇ ಇದ್ದ ಆ ಗಿರಿಜೆಯನ್ನು ಕ್ಷೀರಸಾಗರವು ಚಂದ್ರಕಳೆಯನ್ನೆಂತೋ ಅಂತು ಒಮ್ಮೆ ವೀಕ್ಷಿಸಿದನು.

೬೫–೭೦. ಮನೋಹರವೂ, ಪ್ರಸನ್ನವೂ ಆದ ಮುಖವುಳ್ಳವಳೂ, ತೊಂಡೆಯ ಹಣ್ಣಿನಂತೆ ಕೆಂಪನ್ನು ಚಿಮ್ಮುವ ಚೆಂದುಟಿಯುಳ್ಳವಳೂ, ಅರಳು

ಗೌರೀಂ ಪ್ರಸನ್ನಮುದ್ರಾಂ ಚ ವಿಶ್ವಮೋಹನಮೋಹನಾಂ ।
ಯಯಾ ತ್ರಿಲೋಕರಚನಾ ಕೃತಾ ಬ್ರಹ್ಮಾದಿಭಿಃ ಸಹ ॥ ೬೬ ॥
ಉತ್ಪತ್ತಿಪಾಲನವಿನಾಶಕರೀ ಚ ಯಾ ವೈ
ಕೃತ್ವಾಗ್ರತಃ ಸತ್ತ್ವರಜಸ್ತಮಾಂಸಿ ।
ಸಾ ಚೇತನೇನ ದದೃಶೇ ಪುರತೋ ಹರಸ್ಯ
ಸಂಮೋಹನೀ ಸಕಲಮಂಗಲಮಂಗಲೈಕಾ ॥ ೬೭ ॥
ತಾಂ ನಿರೀಕ್ಷ್ಯ ಭವೋ ದೇವೋ ಗಿರಿಜಾಂ ಲೋಕಪಾವನೀಂ ।
ಮುಮೋಹ ದರ್ಶನಾತ್ತಸ್ಯಾ ಮದನೇನಾತುರೀಕೃತಃ
ವಿಸ್ಮಯೋತ್ಫುಲ್ಲನಯನೋ ಬಭೂವ ಸಹಸಾ ಶಿವಃ ॥ ೬೮ ॥
ಏವಂ ವಿಲೋಕಮಾನೋಽಸೌ ದೇವದೇವೋ ಜಗತ್ಪತಿಃ ।
ಮನಸಾ ಧ್ಯಾಯಮಾನೇನ ಇದಮಾಹ ಸದಾಶಿವಃ ॥ ೬೯ ॥
ಅನಯಾ ಮೋಹಿತಃ ಕಸ್ಮಾತ್ತಪಸ್ಥೋಽಹಂ ನಿರಾಮಯಃ ।
ಕುತಃ ಕಸ್ಮಾಚ್ಚ ಕೇನೇದಂ ಕೃತಮಸ್ತಿ ಮಮಾಪ್ರಿಯಂ ॥ ೭೦ ॥
ತತೋ ವಿಲೋಕಯಂಛಂಭುರ್ದಿಕ್ಷು ಸರ್ವಾಸು ಸಾದರಂ ।
ತಾವದ್ದೃಷ್ಟೋ ದಕ್ಷಿಣಸ್ಯಾಂ ದಿಶಿ ಹ್ಯಾತ್ತಶರಾಸನಃ ॥ ೭೧ ॥

---

ಗಂಗಳುಳ್ಳವಳಾಗಿ, ಸೊಗಸಾದ ರದನಪಂಕ್ತಿಯಿಂದೊಪ್ಪಿ, ಕೋಮಲೆಯಾಗಿ, ಪ್ರಸನ್ನಮುಖಮುದ್ರೆಯೊಡಗೂಡಿ ಬೆಳಗುತ್ತಿರುವ ಗೌರಿಯನ್ನು ಆ ತ್ರಿಲೋಚನನು ಕಂಡನು. ವಿಶ್ವಮೋಹನ ಮೋಹನೆಯಾದ ಯಾವಾಕೆಯಿಂದ ಹುಟ್ಟಿದ, ಲೋಕದ ಸ್ಥಿತಿನಾಶಗಳನ್ನುಂಟುಮಾಡುವ ಸತ್ವರಜಸ್ತಮೋಗುಣಗಳನ್ನು ಪುರಸ್ಕರಿಸಿಕೊಂಡು ಬ್ರಹ್ಮಾದಿಗಳು ಮೂರು ಲೋಕಗಳನ್ನೂ ಸೃಜಿಸಿ ರಚಿಸಿದರೋ ಅಂತಹ ಸಮಸ್ತ ಮಂಗಲಗಳಿಗೂ ಏಕಮಾತ್ರ ಮಂಗಲಪ್ರಾಯಳಾಗಿ, ಸಂಮೋಹಿನಿಯಾಗಿರುವ ಆ ಗಿರಿಜೆಯುನ್ನು ಪರಶಿವನು ಮನಸಾರ ಕಣ್ಣಾರ ನೋಡಿದನು. ದೇವದೇವನಾದ ಆ ಭವನು ಲೋಕಪಾವನೆಯಾದ ಆ ಗಿರಿಜೆಯನ್ನು ಕಂಡು ಆಕೆಯ ದರ್ಶನಮಾತ್ರದಿಂದಲೇ ಮುಗ್ಧನಾಗಿ ಮದನಬಾಧೆಗೊಳಗಾದನು. ಆಗಲಾತನು ಆಶ್ಚರ್ಯದಿಂದರಳಿದ ಕಂಗಳುಳ್ಳವನಾಗಿ ಆಕೆಯನ್ನೇ ನೋಡತೊಡಗಿದನು. ದೇವದೇವನೂ, ಜಗತ್ಪತಿಯೂ ಆದ ಆ ಸದಾಶಿವನು ಹೀಗೆ ಆ ದೇವಿಯನ್ನು ನೋಡುತ್ತಿರುವಂತೆಯೇ ಮನಶ್ಚಿಂತೆಗೊಳಗಾಗಿ, "ಆಹಾ! ತಪಸ್ಸಿನಲ್ಲಿ ತೊಡಗಿ ಕೇವಲ ವಿರಕ್ತನಾಗಿರುವ ನಾನು ಈಕೆಗೆ ಮನಸೋತುದೆಂತು? ಇದು ಸಂಭವಿಸಿದುದೆಂತು? ನನಗೆ ಇಂತಹ ಅಪ್ರಿಯವನ್ನೆಸಗಿದವರಾರು?" ಎಂದು ತನ್ನಲ್ಲಿ ತಾನೇ ಎಂದುಕೊಂಡನು.

೭೧–೭೫. ಬಳಿಕ ಹೀಗೆ ಯೋಚಿಸುತ್ತಲೇ ಆ ಶಂಭುವು ಆದರಪೂರ್ವಕ

ಚಕ್ರೀ ಕೃತಧನುಃ ಸಜ್ಜಂ ಚಕ್ರೇ ವೇದ್ಧುಂ ಸದಾಶಿವಂ ।
ಯಾವತ್ಪುನಃ ಸಂಧಯುತಿ ಮದನೋ ಮದನಾಂತಕಂ ।
ತಾವದ್ದೃಷ್ಟೋ ಮಹೇಶೇನ ಸ ರೋಷೇಣ ತದಾ ದ್ವಿಜಾಃ ॥ ೭೨ ॥
ನಿರೀಕ್ಷಿತಸ್ತೃತೀಯೇನ ಚಕ್ಷುಷಾ ಪರಮೇಣ ಹಿ ।
ಮದನಸ್ತತ್ಕ್ಷಣಾದೇವ ಜ್ವಾಲಾಮಾಲಾವೃತೋಽಭವತ್ ।
ಹಾಹಾಕಾರೋ ಮಹಾನಾಸೀದ್ದೇವಾನಾಂ ತತ್ರಪಶ್ಯತಾಂ ॥ ೭೩ ॥
ದೇವದೇವ ಮಹಾದೇವ ದೇವಾನಾಂ ವರದೋ ಭವ ।
ಗಿರಿಜಾಯಾಃ ಸಹಾಯಾರ್ಥಂ ಪ್ರೇಷಿತೋ ಮದನೋಽಧುನಾ ॥ ೭೪ ॥
ವೃಥಾ ತ್ವಯಾಥ ದಗ್ಧೋಽಸೌ ಮದನೋ ಹಿ ಮಹಾಪ್ರಭಃ ॥ ೭೫ ॥
ತ್ವಯಾ ಹಿ ಕಾರ್ಯಂ ಜಗದೇಕಬಂಧೋ
ಕಾರ್ಯಂ ಸುರಾಣಾಂ ಪರಮೇಣ ವರ್ಚಸಾ ।
ಅಸ್ಯಾಂ ಸಮುತ್ಪತ್ಸ್ಯತಿ ದೇವ ಶಂಭೋ
ತೇನೈವ ಸರ್ವಂ ಭವತೀಹ ಕಾರ್ಯಂ ॥ ೭೬ ॥
ತಾರಕೇಣ ಮಹಾದೇವ ದೇವಾಃ ಸಂಪೀಡಿತಾ ಭೃಶಂ ।
ತದರ್ಥಂ ಜೀವಿತಂ ಚಾಸ್ಯ ದತ್ವಾ ಚ ಗಿರಿಜಾಂ ಪ್ರಭೋ ॥ ೭೭ ॥

---

ವಾಗಿ ಎಲ್ಲ ದಿಕ್ಕುಗಳನ್ನೂ ಒಮ್ಮೆ ನೋಡಿದನು. ಆಗ ದಕ್ಷಿಣ ದಿಕ್ಕಿನಲ್ಲಿ ಬಿಲ್ಲನ್ನು ಚಕ್ರಾಕಾರವಾಗಿ ಎಳೆದು ಹಿಡಿದು ಬಾಣಪ್ರಯೋಗಮಾಡಲು ಸಿದ್ಧಪಡಿಸಿಕೊಂಡು ನಿಂತಿರುವ ಮನ್ಮಥನು ಆತನ ಕಣ್ಣಿಗೆ ಬಿದ್ದನು. ಮದನನು ಆ ಸದಾಶಿವನನ್ನು ಮತ್ತೆ ಸುಮಬಾಣದಿಂದ ಹೊಡೆಯುವಷ್ಟರಲ್ಲಿಯೇ ಆತನು ಮಹತ್ತರವಾಗಿ ರೋಷಗೊಂಡು ತನ್ನ ಮೂರನೆಯ ಕಣ್ಣನ್ನು ತೆರೆದು ಅವನನ್ನು ದುರದುರನೆ ನೋಡಿದನು. ಒಡನೆಯೇ ಮನ್ಮಥನು ಜ್ವಾಲೆಗಳಿಂದಾವೃತನಾಗಿ ಹೋದನು. ನೋಡುತ್ತ ನಿಂತಿದ್ದ ದೇವತೆಗಳ ಗುಂಪಿನಲ್ಲಿ ಮಹತ್ತರವಾದ ಹಾಹಾಕಾರವುಂಟಾಯಿತು. ದೇವತೆಗಳು ಹೇಳುತ್ತಾರೆ:—"ದೇವದೇವ, ಮಹಾದೇವ! ಈ ದೇವತೆಗಳ ವಿಷಯದಲ್ಲಿ ನೀನು ಸುಪ್ರಸನ್ನನಾಗು. ನೀನು ವರದನಾಗಬೇಕು. ನಾವೇ ಈ ಮನ್ಮಥನನ್ನು ಗಿರಿಜೆಯ ಸಹಾಯಕ್ಕಾಗಿ ಕಳುಹಿಸಿದ್ದೆವು. ಮಹಾತೇಜಸ್ವಿಯಾದ ಇವನನ್ನು ನೀನು ಅನ್ಯಾಯವಾಗಿ ದಹಿಸಿದೆ.

೭೬–೮೦. ಓ ಜಗದೇಕಬಂಧುವೇ! ಈಗ ನೀನು ದೇವತೆಗಳಾದ ನಮ್ಮ ಕಾರ್ಯವನ್ನು ಆಗಮಾಡಿಕೊಡಬೇಕು. ಎಲೈ ಶಂಭುವೇ! ಈ ಪಾರ್ವತಿಯಲ್ಲಿ ನೀನು ನಿನ್ನ ಪರಮತೇಜಸ್ಸನ್ನಿರಿಸಿ ಮಗನನ್ನು ಪಡೆದುದಾದರೆ ಆ ನಿನ್ನ ಕುಮಾರನಿಂದಲೇ ಅಸುರಸಂಹಾರರೂಪವಾದ ನಮ್ಮ ಕಾರ್ಯವು ನೆರವೇರುವುದು.

**ವರಯಸ್ವ ಮಹಾಭಾಗ ದೇವಕಾರ್ಯೋ ಭವ ಕ್ಷಮಃ ।**
**ಗಜಾಸುರಾತ್ತ್ವಯಾ ತ್ರಾತಾ ವಯಂ ಸರ್ವೇ ದಿವೌಕಸಃ ॥ ೭೮ ॥**
**ಕಾಲಕೂಟಾಚ್ಚ ನೂನಂ ಹಿ ರಕ್ಷಿತಾಃ ಸ್ಮೋ ನ ಚಾನ್ಯಥಾ ।**
**ಭಸ್ಮಾಸುರಾಚ್ಚ ಸರ್ವೇಶ ತ್ವಯಾ ತ್ರಾತಾ ನ ಸಂಶಯಃ ॥ ೭೯ ॥**
**ಮದನೋ ಯಂ ಸಮಾಯಾತಃ ಸುರಾಣಾಂ ಕಾರ್ಯಸಿದ್ಧಯೇ ।**
**ತಸ್ಮಾತ್ತ್ವಯಾ ರಕ್ಷಣೀಯಾ ಉಪಕಾರಃ ಪರೋ ಹಿ ನಃ ॥ ೮೦ ॥**
**ವಿನಾ ತೇನ ಜಗತ್ಸರ್ವಂ ನಾಶಮೇಷ್ಯತಿ ಶಂಕರ ।**
**ನಿಷ್ಕಾಮಸ್ತ್ವಂ ಕಥಂ ಶಂಭೋ ಸ್ವಬುದ್ಧ್ಯಾ ಚ ವಿಮೃಶ್ಯತಾಂ ॥ ೮೧ ॥**
**ತದೋವಾಚ ರುಷಾವಿಷ್ಟೋ ದೇವಾನ್ ಪ್ರತಿ ಮಹೇಶ್ವರಃ ॥ ೮೨ ॥**
**ವಿನಾ ಕಾಮೇನ ಭೋ ದೇವಾ ಭವಿತವ್ಯಂ ಚ ನಾನ್ಯಥಾ ॥ ೮೩ ॥**
**ಯದಾ ಕಾಮಂ ಪುರಸ್ಕೃತ್ಯ ಸರ್ವದೇವಾಃ ಸವಾಸವಾಃ ।**
**ಪದಭ್ರಷ್ಟಾಶ್ಚ ದುಃಖೇನ ವ್ಯಾಪ್ತಾ ದೈನ್ಯಂ ಸಮಾಶ್ರಿತಾಃ ॥ ೮೪ ॥**

---

ಓ ಮಹಾದೇವ! ಈಗ ನಾವು ತಾರಕಾಸುರನಿಂದ ಬಹಳವಾಗಿ ಪೀಡಿಸಲ್ಪಟ್ಟಿರುವೆವು. ಆದುದರಿಂದೆಲೈ ಸ್ವಾಮಿಯೇ! ಪ್ರಕೃತದಲ್ಲಿ ನೀನು ಈ ಮನ್ಮಥನನ್ನು ಳಿಸಿಕೊಟ್ಟು ಪಾರ್ವತಿಯನ್ನು ಮದುವೆಯಾಗಿ ದೇವತೆಗಳ ಕಾರ್ಯಕ್ಕೆ ನೆರವಾಗಬೇಕು. ಮಹಾದೇವ! ಪೂರ್ವದಲ್ಲಿ ನೀನು ಗಜಾಸುರನನ್ನು ಸಂಹರಿಸಿ ನಮ್ಮೆಲ್ಲರನ್ನೂ ಕಾಪಾಡಿದೆ; ಕ್ಷೀರಸಮುದ್ರ ಮಥನಕಾಲದಲ್ಲಿ ನೀನು ಮಹಾಭಯಂಕರವಾದ ಆ ಕಾಲಕೂಟ ವಿಷವನ್ನು ಪಾನಮಾಡದಿದ್ದಿದ್ದರೆ ನಾವು ಉಳಿಯುತ್ತಲೇ ಇರಲಿಲ್ಲವು. ಎಲೈ ಸರ್ವೇಶ್ವರನೇ! ಭಸ್ಮಾಸುರನನ್ನು ಸಂಹರಿಸಿ ನಮ್ಮನ್ನು ಸಂರಕ್ಷಿಸಿದವನೂ ನೀನೇ ಎಂಬುದರಲ್ಲಿ ಸಂಶಯವಿಲ್ಲವು. ಎಲೈ ದೇವದೇವನೇ! ಈ ಮದನನು ದೇವತೆಗಳ ಕಾರ್ಯಸಿದ್ಧಿಗಾಗಿಯೇ ಇಲ್ಲಿಗೆ ಬಂದನು. ಆದುದರಿಂದ ನೀನಿವನನ್ನು ಬದುಕಿಸಬೇಕು. ಅದು ನಮಗೆ ಪರಮೋಪಕಾರವಾಗುವುದು.

೮೧–೮೪. ಶಂಕರಾ! ಮದನನಿಲ್ಲದಿದ್ದರೆ ಜಗತ್ತೆಲ್ಲವೂ ನಾಶವಾಗುವುದು. ಎಲೈ ಶಂಭುವೇ! ನೀನಾದರೂ ನಿಷ್ಕಾಮನೆಂತೆಂಬುದನ್ನು ನಿನ್ನ ಮನಸ್ಸಿನಲ್ಲಿಯೇ ಯೋಚಿಸು.'' ದೇವತೆಗಳ ಈ ಮಾತುಗಳನ್ನು ಕೇಳಿ ಮಹೇಶ್ವರನು ಬಹಳವಾಗಿ ರೋಷಗೊಂಡು ಅವರನ್ನು ಕುರಿತು, ''ಎಲೈ ದೇವತೆಗಳಿರಾ! ಲೋಕದಲ್ಲಿ ಕಾಮನೆಂಬುವನಿರಲೇಕೂಡದು. ಈ ಕಾಮನನ್ನು ಪುರಸ್ಕರಿಸಿದುದರಿಂದಲೇ ದೇವತೆಗಳಾದ ನೀವೆಲ್ಲರೂ ನಿಮ್ಮ ಪ್ರಭುವಾದ ದೇವೇಂದ್ರನೊಡಗೂಡಿ ನಿಮ್ಮ ನಿಮ್ಮ ಪದವಿಗಳನ್ನು ಕಳೆದುಕೊಂಡು ದುಃಖಕ್ಕೀಡಾಗಿ ದೈನ್ಯವನ್ನು ಹೊಂದಿರುವಿರಿ. ಈ ಕಾಮನು ಸಮಸ್ತ ಪ್ರಾಣಿಗಳಿಗೂ ನರಕವನ್ನೇ

ತಾರಕೋಽಪಿ ದುರಾಚಾರೋ ನಿಷ್ಕಾಮೋಽದ್ಯ ಭವಿಷ್ಯತಿ ।
ವಿನಾ ಕಾಮೇನ ಚ ಕಥಂ ಪಾಪಮಾಚರತೇ ನರಃ ॥ ೮೫ ॥
ತಸ್ಮಾತ್ಕಾಮೋ ಮಯಾ ದಗ್ಧಃ ಸರ್ವೇಷಾಂ ಶಾಂತಿಹೇತವೇ ।
ಯುಷ್ಮಾಭಿಶ್ಚ ಸುರೈಃ ಸರ್ವೈರಸುರೈಶ್ಚ ಮಹರ್ಷಿಭಿಃ ॥ ೮೬ ॥
ಅನ್ಯೈಃ ಪ್ರಾಣಿಭಿರೇವಾತ್ರ ತಪಸೇ ಧೀಯತಾಂ ಮನಃ ।
ಕಾಮಕ್ರೋಧ ವಿಹೀನಂ ಚ ಜಗತ್ಸರ್ವಂ ಮಯಾಕೃತಂ ॥ ೮೭ ॥
ತಸ್ಮಾದೇನಂ ಪಾಪಿನಂ ದುಃಖಮೂಲಂ
ನ ಜೀವಯಿಷ್ಯಾಮಿ ಸುರಾಃ ಪ್ರತೀಕ್ಷ್ಯತಾಂ ।
ನಿರಂತರಂ ಚಾತ್ಮಸುಖಪ್ರಬೋಧ
ಮಾನಂದಲಕ್ಷ್ಣಣಮಗಾಧಮನನ್ಯರೂಪಂ ॥ ೮೮ ॥
ಏವಮುಕ್ತಸ್ತದಾ ತೇನ ಶಂಭುನಾ ಪರಮೇಷ್ಠಿನಾ ।
ಊಚುರ್ಮಹರ್ಷಯಃ ಸರ್ವೇ ಶಂಕರಂ ಲೋಕಶಂಕರಂ ॥ ೮೯ ॥
ಯದುಕ್ತಂ ಭವತಾ ಶಂಭೋ ಪರಂ ಶ್ರೇಯಸ್ಕರಂ ಹಿ ನಃ ।
ಕಿಂತು ವಕ್ಷ್ಯಾಮ ದೇವೇಶ ಶ್ರೂಯತಾಂ ಚಾವಧಾರ್ಯತಾಂ ॥ ೯೦ ॥

---

ಉಂಟುಮಾಡುತ್ತಾನೆ. ಇವನು ಕೇವಲ ದುಃಖರೂಪನಾದವನು. ನನ್ನ ಮಾತನ್ನು ನೀವು ಅರಿತುಕೊಳ್ಳಿರಿ. ದುರಾಚಾರನಾದ ಆ ತಾರಕನೂ ಸಹ, ಈಗ ಕಾಮನೇ ಸುಟ್ಟುಹೋದುದರಿಂದ ನಿಷ್ಕಾಮನಾಗುವನು. ಕಾಮವೇ ಇಲ್ಲದಿದ್ದರೆ ಮಾನವನು ಪಾಪವನ್ನು ಮಾಡುವುದೆಂತು ?

೮೬–೯೦. ಆದುದರಿಂದ ಲೋಕದ ಶಾಂತ್ಯರ್ಥವಾಗಿಯೇ ನಾನು ಈ ಕಾಮನನ್ನು ಸುಟ್ಟಿರುವೆನು. ದೇವತೆಗಳಾದ ನೀವೂ, ಈ ಮಹರ್ಷಿಗಳೂ, ಇತರ ಪ್ರಾಣಿಗಳೂ ಎಲ್ಲರೂ ತಪಸ್ಸನ್ನಾಚರಿಸಲು ಮನಸ್ಸುಮಾಡಿರಿ. ಹೀಗಾಗ ಬೇಕೆಂಬ ಉದ್ದೇಶದಿಂದಲೇ ನಾನೀಗ ಜಗತ್ತನ್ನೇ ಕಾಮಕ್ರೋಧರಹಿತವನ್ನಾಗಿ ಮಾಡಿರುತ್ತೇನೆ. ಅಯ್ಯಾ ದೇವತೆಗಳಿರಾ! ಈ ಎಲ್ಲ ಕಾರಣಗಳಿಂದಲೂ ಪಾಪಿಯೂ, ದುಃಖಕ್ಕೆ ಮೂಲಕಾರಣನೂ ಆದ ಈ ಕಾಮನನ್ನು ನಾನೆಂದಿಗೂ ಬದುಕಿಸುವುದೇ ಇಲ್ಲವು. ನೀವೆಲ್ಲರೂ ಆತ್ಮಸುಖಪ್ರಬೋಧವೂ, ಆನಂದ ಲಕ್ಷ್ಣಣಲಕ್ಷಿತವೂ, ಅನನ್ಯರೂಪವೂ ಆದ ಪರಬ್ರಹ್ಮವಸ್ತುವನ್ನೇ ನಿರಂತರವೂ ನಿರೀಕ್ಷಿಸಿರಿ'' ಎಂದು ಹೇಳಿದನು. ಅಯ್ಯಾ ವಿಪ್ರರೇ! ಪರಮೇಷ್ಠಿಯಾದ ಶಂಭುವಿಂತು ನುಡಿಯಲು, ಮಹರ್ಷಿಗಳೆಲ್ಲರೂ ಲೋಕಶಂಕರನಾದ ಆ ಶಂಕರ ನನ್ನು ಕುರಿತು, ''ಎಲೈ ಶಂಭುವೇ! ನೀನು ಹೇಳಿದುದೆಲ್ಲವೂ ನಮಗೆ ಪರಮ ಶ್ರೇಯಸ್ಕರವಾದುದೇ ಸರಿ. ಆದರೆ ನಾವು ಹೇಳುವುದನ್ನು ನೀನು ಲಾಲಿಸಿ ಪರ್ಯಾಲೋಚಿಸಬೇಕು.

ಯಥಾ ಸೃಷ್ಟಮಿದಂ ವಿಶ್ವಂ ಕಾಮಕ್ರೋಧಸಮನ್ವಿತಂ ।
ತತ್ಸರ್ವಂ ಕಾಮರೂಪಂ ಹಿ ಸಕಾಮೋ ನತು ಹನ್ಯತೇ ॥ ೯೧ ॥
ಧರ್ಮಾರ್ಥಕಾಮಮೋಕ್ಷಾಶ್ಚ ಚತ್ವಾರೋ ಹ್ಯೇಕರೂಪತಾಂ ।
ನೀತಾ ಯೇನ ಮಹಾದೇವ ಸ ಕಾಮೋಽಯಂ ನ ಹನ್ಯತೇ ॥ ೯೨ ॥
ಕಥಂ ತ್ವಯಾ ಹಿ ಸಂದಗ್ಧಃ ಕಾಮೋಹಿ ದುರತಿಕ್ರಮಃ ।
ಯೇನ ಸಂಘಟಿತಂ ವಿಶ್ವಮಾಬ್ರಹ್ಮಸ್ಥಾವರಾತ್ಮಕಂ ॥ ೯೩ ॥
ಕಾಮೇನ ಹೀಯತೇ ವಿಶ್ವಂ ವಿಶ್ವಂ ಕಾಮೇನ ಪಾಲ್ಯತೇ ।
ಕಾಮೇನೋತ್ಪಾದ್ಯತೇ ವಿಶ್ವಂ ತಸ್ಮಾತ್ಕಾಮೋ ಮಹಾಬಲಃ ॥ ೯೪ ॥
ಯಸ್ಮಾತ್ಕ್ರೋಧೋ ಭವತ್ಯುಗ್ರೋ ಯೇನ ತ್ವಂ ಚ ವಶೀಕೃತಃ ।
ತಸ್ಮಾತ್ಕಾಮಂ ಮಹಾದೇವ ಸಂಬೋಧಯಿತುಮರ್ಹಸಿ ॥ ೯೫ ॥
ತ್ವಯಾ ಸಂಪಾದಿತೋ ದೇವ ಮದನೋ ಹಿ ಮಹಾಬಲಃ ।
ಸಮರ್ಥೋ ಹಿ ಸಮರ್ಥತ್ವಾತ್ತತ್ಸಾಮರ್ಥ್ಯಂ ಕರಿಷ್ಯತಿ ॥ ೯೬ ॥
ಋಷಿಭಿಶ್ಚೈವಮುಕ್ತಸ್ತು ದ್ವಿಗುಣಂ ರೋಷಮಾಸ್ಥಿತಃ ।
ಚಕ್ಷುಷಾ ಹಿ ತೃತೀಯೇನ ದಗ್ಧಕಾಮೋ ಹರಸ್ತದಾ ॥ ೯೭ ॥

---

೯೧–೯೫. ದೇವಾ! ಈ ಜಗತ್ತೆಲ್ಲವೂ ಕಾಮಕ್ರೋಧಗಳೊಡನೆಯೇ ಸೃಷ್ಟಿಯಾಗಿರುವುದರಿಂದ ಇದು ಕಾಮರೂಪವೇ ಆಗಿರುವುದು. ಆದಕಾರಣ ಆ ಕಾಮನನ್ನು ಸಂಹರಿಸಲು ಹೇಗೆತಾನೆ ಸಾಧ್ಯವಾದೀತು? ಅವನನ್ನು ಕೊಂದರೂ ಅವನು ಸಾಯುವುದಿಲ್ಲ. ಪರಮೇಶ್ವರಾ! ಯಾವನಿಂದಲೇ ಆಬ್ರಹ್ಮಸ್ತಂಬಪರ್ಯಂತವಾದ ಈ ಪ್ರಪಂಚವೆಲ್ಲವೂ ಸಂಘಟಿಸಲಾಗಿರುವುದೋ ಅಂತಹ ಮೀರಲಸದಳನಾದ ಕಾಮನನ್ನು ನೀನು ಸುಟ್ಟುದೆಂತು? ಕಾಮನಿಂದಲೇ ಪ್ರಪಂಚವು ನಾಶವಾಗುವುದು; ಅವನಿಂದಲೇ ಇದರ ಪರಿಪಾಲನವೂ ಆಗುವುದು. ಆ ಕಾಮನಿಂದಲೇ ಈ ವಿಶ್ವವೆಲ್ಲವೂ ಸೃಷ್ಟಿಯಾಗುತ್ತದೆ. ಆದುದರಿಂದಲೈ ಶಂಕರನೇ! ಕಾಮನು ಮಹಾಬಲಿಷ್ಠನು. ಕ್ರೋಧನಾದರೋ ಅವನಿಗಿಂತಲೂ ಬಲಿಷ್ಠನಾದವನು. ಈಗ ನೀನು ಅಂತಹ ಕ್ರೋಧನಿಗೆ ವಶನಾಗಿಹೋದೆ. ಆದುದರಿಂದಲೈ ಮಹಾದೇವನೇ! ನೀನು ಕಾಮನನ್ನು ಬದುಕಿಸುವವನಾಗಬೇಕು.

೯೬–೯೭. ಈರೀತಿ ನೀನು ಬದುಕಿಸುವ ಮದನನು ಮಹಾಬಲನಾಗುತ್ತಾನೆ. ಲೋಕದಲ್ಲಿ ಸಮರ್ಥನಾದವನು ಸಮರ್ಥನೇ ಆಗಿರುತ್ತಾನೆಯಾದುದರಿಂದ ತನ್ನ ಆ ಸಾಮರ್ಥ್ಯವನ್ನು ವಿನಿಯೋಗಿಸಿ ಕಾರ್ಯವನ್ನು ಸಾಧಿಸದಿರನು.” ಅಯ್ಯಾ ವಿಪ್ರರೇ! ಮಹರ್ಷಿಗಳೂ ಈ ರೀತಿ ನುಡಿದ ತರುವಾಯ ಆ ಹರನು ಇಮ್ಮಡಿಯಾಗಿ ರೋಷಗೊಂಡು ತನ್ನ ಆ ಮೂರನೆಯ ಕಣ್ಣಿನಿಂದ ಅವರನ್ನೂ

ಮುನಿಭಿಶ್ಚಾರಣೈಃ ಸಿದ್ಧೈರ್ಗಣೈಶ್ಚಾಪಿ ಸದಾಶಿವಃ ।
ಸ್ತುತಶ್ಚ ವಂದಿತೋ ರುದ್ರಃ ಪಿನಾಕೀ ವೃಷವಾಹನಃ ॥ ೯೮ ॥
ಮದನಂ ಚ ತಥಾ ದಗ್ಧ್ವಾ ತ್ಯಕ್ತ್ವಾ ತಂ ಪರ್ವತಂ ರುಷಾ ।
ಹಿಮವಂತಾಭಿಧಂ ಸದ್ಯಸ್ತಿರೋಧಾನಗತೋಽಭವತ್ ॥ ೯೯ ॥
ತಿರೋಧಾನಗತಂ ದೇವೀ ವೀಕ್ಷ್ಯ ದಗ್ಧಂ ಚ ಮನ್ಮಥಂ ।
ಸ ಕೋಕಿಲಂ ಸ ಚೂತಂ ಚ ಸ ಭೃಂಗಂ ಸಹ ಚಂಪಕಂ ॥ ೧೦೦ ॥

ತಥೈವ ದಗ್ಧಂ ಮದನಂ ವಿಲೋಕ್ಯ
ರತ್ಯಾ ವಿಲಾಪಂ ಚ ತದಾ ಮನಸ್ವಿನೀ ।
ಸ ಬಾಷ್ಪದೀರ್ಘಂ ವಿಮನಾ ವಿಮೃಶ್ಯ
ಕಥಂ ಸರುದ್ರೋ ವಶಗೋ ಭವೇನ್ಮಮ ॥ ೧೦೧ ॥
ಏವಂ ವಿಮೃಶ್ಯ ಸುಚಿರಂ ಗಿರಿಜಾ ತದಾನೀಂ
ಸಂಮೋಹಮಾಪ ಚ ಸತೀ ಹಿ ತಥಾ ಬಭಾಷೇ ।
ಸಂಮುಹ್ಯಮಾನಾ ರುದತೀಂ ನಿರೀಕ್ಷ್ಯ
ರತಿಂ ಮಹಾರೂಪವತೀಂ ಮನಸ್ವಿನೀಂ ॥ ೧೦೨ ॥

ಮಾ ವಿಷಾದಂ ಕುರು ಸಖಿ ಮದನಂ ಜೀವಯಾಮ್ಯಹಂ ।
ತ್ವದರ್ಥಂ ಭೋ ವಿಶಾಲಾಕ್ಷಿ ತಪಸಾಽಽರಾಧಯಾಮ್ಯಹಂ ॥ ೧೦೩ ॥

---

ಸುಡುವುದರಲ್ಲಿದ್ದನು. ಆ ಸಮಯದಲ್ಲಿ ಮುನಿಗಳೂ, ಚಾರಣರೂ, ಸಿದ್ಧ ಸಮೂಹದವರೂ, ಪಿನಾಕಿಯೂ ವೃಷಭವಾಹನನೂ ಆದ ಆ ಸದಾಶಿವನನ್ನು ಸ್ತುತಿಸಿ ನಮಸ್ಕರಿಸಿ ಸಮಾಧಾನಗೊಳಿಸಿದರು. ತರುವಾಯ ಭಗವಂತನು ಈ ರೀತಿ ಮದನನ್ನು ಸುಟ್ಟು ರೋಷದಿಂದ ಆ ಹಿಮವತ್ಪರ್ವತವನ್ನೇ ತೊರೆದು ಅಂತರ್ಧಾನವಾದನು.

೧೦೦-೪. ಹೀಗೆ ಪರಶಿವನು ಅಂತರ್ಧಾನವಾದುದನ್ನೂ, ಮನ್ಮಥನು, ಕೋಗಿಲೆಗಳು-ಆಮ್ರ-ಭೃಂಗ-ಪಂಚಸಾಯಕಗಳು ಈ ಎಲ್ಲ ಪರಿಕರಗಳಿಂದ ಕೂಡಿಯೇ ಸುಟ್ಟುಹೋದುದನ್ನೂ, ಅಂತು ಸುಟ್ಟುಹೋದ ತನ್ನ ಪತಿಯಾದ ಆ ಮದನನ್ನು ಕಂಡು ರೋಧಿಸುತ್ತಿರುವ ರತೀದೇವಿಯನ್ನೂ ಕಂಡು ಪರ್ವತ ರಾಜಕುಮಾರಿಯಾದ ಗಿರಿಜೆಯು ಮನಕುಗ್ಗಿ ಕಂಬನಿಗರೆಯುತ್ತ, ರುದ್ರನು ಹೇಗೆ ವಶನಾಗುವನೆಂದು ತನ್ನಲ್ಲಿಯೇ ಆಲೋಚಿಸಿದಳು. ಆಕೆಯು ಈ ರೀತಿ ಬಹಳಹೊತ್ತು ಯೋಚಿಸಿ ಅತ್ತತ್ತು ಮೂರ್ಛೆಗೊಳ್ಳುತ್ತಿದ್ದಳು. ಆಗ ರತಿಯು ಮಹಾ ರೂಪವತಿಯಾದ ಆ ಗಿರಿಜೆಯನ್ನು ಕುರಿತು ಆಕೆಗೆ ಧೈರ್ಯಹೇಳುವವಳಾಗಿ, "ಎಲಾ ದೇವಿ! ದುಃಖಿಸಬೇಡ. ಮನ್ಮಥನನ್ನು ನಾನು ಬದುಕಿಸುತ್ತೇನೆ. ಎಲೌ ವಿಶಾಲಾಕ್ಷಿಯೇ! ನಾನು ನಿನಗಾಗಿಯೇ ಹರನೂ, ರುದ್ರನೂ,

ಹರಂ ರುದ್ರಂ ವಿರೂಪಾಕ್ಷಂ ದೇವದೇವಂ ಜಗದ್ಗುರುಂ ।
ಮಾ ಚಿಂತಾಂ ಕುರು ಸುಶ್ರೋಣಿ ಮದನಂ ಜೀವಯಾಮ್ಯಹಂ ॥ ೧೦೪ ॥
ಏವಮಾಶ್ವಾಸ್ಯ ತಾಂ ಸಾಧ್ವೀ ಗಿರಿಜಾಂ ರತಿರಂಜಸಾ ।
ತಪಸ್ತೇಪೇ ಚ ಸುಮಹತ್ಪತಿಂ ಪ್ರಾಪ್ತುಂ ಸುಮಧ್ಯಮಾ ॥ ೧೦೫ ॥
ಮದನೋ ಯತ್ರ ದಗ್ಧಶ್ಚ ರುದ್ರೇಣ ಪರಮಾತ್ಮನಾ ।
ತಪ್ಯಮಾನಾಂ ತಪಸ್ತತ್ರ ನಾರದೋ ದದೃಶೇ ತದಾ ॥ ೧೦೬ ॥
ಉವಾಚ ಗತ್ವಾ ಸಹಸಾ ಭಾಮಿನೀಂ ರತಿಮಂತಿಕೇ ।
ಕಸ್ಯಾಸಿ ತ್ವಂ ವಿಶಾಲಾಕ್ಷಿ ಕೇನ ವಾ ತಪ್ಯತೇ ತಪಃ ॥ ೧೦೭ ॥
ತರುಣೀ ರೂಪಸಂಪನ್ನಾ ಸೌಭಾಗ್ಯೇನ ಪರೇಣಹಿ ।
ನಾರದಸ್ಯ ವಚಃ ಶ್ರುತ್ವಾ ರೋಷೇಣ ಮಹತಾ ತದಾ ।
ಉವಾಚ ವಾಕ್ಯಂ ಮಧುರಂ ಕಿಂಚಿನ್ನಿಷ್ಠುರಮೇವಚ ॥ ೧೦೮ ॥

ರತಿರುವಾಚ :—

ನಾರದೋಽಸಿ ಮಯಾ ಜ್ಞಾತಃ ಕುಮಾರಸ್ತ್ವಂ ನ ಸಂಶಯಃ ।
ಸ್ವಸ್ವರೂಪಾದರ್ಶನಂ ಚ ಕರ್ತುಮರ್ಹಸಿ ಸುವ್ರತ ॥ ೧೦೯ ॥

---

ವಿರೂಪಾಕ್ಷನೂ, ದೇವದೇವನೂ, ಜಗದ್ಗುರುವೂ ಆದ ಆ ಪರಶಿವನನ್ನು ತಪಸ್ಸಿನಿಂದ ಆರಾಧಿಸುವೆನು. ಎಲೌ ಸುಶ್ರೋಣಿ! ನಾನು ಮದನನನ್ನು ನಿನಗಾಗಿಯೇ ಬದುಕಿಸುವೆನು. ನೀನು ಚಿಂತಿಸಬೇಡ” ಎಂದಳು.

೧೦೫–೮. ಎಲೈ ಮುನಿಗಳಿರಾ! ಸುಮಧ್ಯಮೆಯಾದ ರತೀದೇವಿಯು ಪಾರ್ವತಿಯನ್ನು ಈ ರೀತಿ ಸಮಾಧಾನಗೊಳಿಸಿ, ತರುವಾಯ ತನ್ನ ಪತಿಯಾದ ಮದನನು ಪರಮಾತ್ಮನಾದ ರುದ್ರನಿಂದ ದಗ್ಧವಾದೆಡೆಯಲ್ಲಿಯೇ ಕುಳಿತು ಆತನನ್ನು ಪಡೆಯಲೋಸುಗ ಮಹತ್ತರವಾದ ತಪಸ್ಸನ್ನು ಮಾಡಿದಳು. ಆಗ ನಾರದಮುನಿಯು ಈ ರೀತಿ ತಪಸ್ಸನ್ನೆಸಗುತ್ತಿದ್ದ ಆಕೆಯ ಬಳಿಗೈದಿ, “ಎಲೆ ವಿಶಾಲಾಕ್ಷಿ! ನೀನು ಯಾರ ಪತ್ನಿ. ಹೀಗೇಕೆ ತಪಸ್ಸುಮಾಡುತ್ತಿರುವೆ. ನೀನಾದರೋ ಯುವತಿಯಾಗಿರುವೆ. ನಿನ್ನ ರೂಪವೋ ಅಮೋಘವಾಗಿದೆ. ಶ್ರೇಷ್ಠವಾದ ಸೌಭಾಗ್ಯದಿಂದೊಪ್ಪುತ್ತಿರುವ ನೀನು ಈ ರೀತಿ ತಪಸ್ಸನ್ನಾಚರಿಸಲು ಕಾರಣವೇನು?” ಎಂದು ಕೇಳಿದನು. ನಾರದನ ಮಾತನ್ನು ಕೇಳಿ ರತಿಗೆ ಬಹಳವಾದ ರೋಷವು ಬಂದಿತು. ಆದರೂ ಆಕೆಯು ಮಧುರವಾಗಿದ್ದರೂ ಸ್ವಲ್ಪ ನಿಷ್ಠುರವಾಗಿಯೇ ಆತನನ್ನು ಕುರಿತು ಹೀಗೆಂದಳು.

೧೦೯–೧೪. “ಅಯ್ಯಾ! ನೀನು ನಾರದನೆಂಬುದನ್ನು ನಾನು ಬಲ್ಲೆನು. ನೀನು ಹುಡುಗಾಟಿಕೆಯವನೆಂಬುದರಲ್ಲಿ ಸಂಶಯವಿಲ್ಲ. ಎಲೈ ಸುವ್ರತನೇ! ನೀನು ದಯಮಾಡಿಟ್ಟು ಇಲ್ಲಿ ನಿಲ್ಲಬೇಡ. ಬಂದದಾರಿಯನ್ನು ಹಿಡಿದು

ಯಥಾಗತೇನ ಮಾರ್ಗೇಣ ಗಚ್ಛತ್ವಂ ಮಾವಿಲಂಬಿತಂ ।
ಒಟೋ ನ ಕಿಂಚಿಜ್ಜಾನಾಸಿ ಕೇವಲಂ ಕಲಿಕೃನ್ಮಹಾನ್ ॥ ೧೧೦ ॥
ಪರಸ್ತ್ರೀ ಕಾಮುಕಾಃ ಕ್ಷುದ್ರಾ ವಿಟಾ ವ್ಯಸನಿನಶ್ಚಯೇ ।
ತಥಾಹ್ಯಕರ್ಮಣಃ ಸ್ತಬ್ಧಾಸ್ತೇಷಾಂ ಮಧ್ಯೇ ತ್ವಮಗ್ರಣೀಃ ॥ ೧೧೧ ॥
ಏವಂ ನಿರ್ಭರ್ತ್ಸಿತೋ ರತ್ಯಾ ನಾರದೋ ಮುನಿಸತ್ತಮಃ ।
ಸ್ವಯಂ ಜಗಾಮ ತ್ವರಿತಂ ಶಂಬರಂ ದೈತ್ಯಪುಂಗವಂ ॥ ೧೧೨ ॥
ಶಶಂಸ ದೈತ್ಯರಾಜಾಯ ದಗ್ಧಂ ಮದನಮೇವಚ ।
ರುದ್ರೇಣ ಕ್ರೋಧಯುಕ್ತೇನ ತಸ್ಯ ಭಾರ್ಯಾ ಮನಸ್ವಿನೀ ॥ ೧೧೩ ॥
ತಾಮಾನಯ ಮಹಾಭಾಗ ಭಾರ್ಯಾಂ ಕುರು ಮಹಾಬಲ ।
ಅತೀವ ರೂಪಸಂಪನ್ನಾ ಯಾ ಆನೀತಾಸ್ತ್ವಯಾನಘ ।
ತಾಸಾಂ ಮಧ್ಯೇ ರೂಪವತೀ ರತಿಃ ಸಾ ಮದನಪ್ರಿಯಾ ॥ ೧೧೪ ॥
ಏವಮಾಕರ್ಣ್ಯ ವಚನಂ ದೇವರ್ಷೇರ್ಭಾವಿತಾತ್ಮನಃ ।
ಜಗಾಮ ಸಹಸಾ ತತ್ರ ಯತ್ರಾಸ್ತೇ ಸಾ ಸುಶೋಭನಾ ॥ ೧೧೫ ॥
ತಾಂ ದೃಷ್ಟ್ವಾ ಸುವಿಶಾಲಾಕ್ಷೀಂ ರತಿಂ ಮದನಮೋಹಿನೀಂ ।
ಉವಾಚ ಪ್ರಹಸನ್ ವಾಕ್ಯಂ ಶಂಬರೋ ದೇವಸಂಕಟಃ ॥ ೧೧೬ ॥

---

ಹೊರಟುಹೋಗು. ತಡಮಾಡಬೇಡ. ಎಲೈ ವಟುವೇ! ಕೇವಲ ಕಲಹ ಪ್ರಿಯನಾದ ನೀನು ಏನೂ ತಿಳಿಯೆಯಲ್ಲವೆ? ಪರಸ್ತ್ರೀ ಕಾಮುಕರು, ಕ್ಷುದ್ರರು, ವಿಟರು, ದುರ್ವ್ಯಸನಿಗಳು, ಪಾಪಿಷ್ಠರು, ಮೂಢರು ಆದವರಿಗೆಲ್ಲ ನೀನು ಮುಂದಾಳಾಗಿರುವೆ. ನಡೆ; ಹೋಗು. ಇಲ್ಲಿ ನಿಲ್ಲಬೇಡ'' ಎಂದಳು. ಈ ರೀತಿ ಗದರಿ ಹೆದರಿಸಿದೊಡನೆಯೇ ಮುನಿಸತ್ತಮನಾದ ಆ ನಾರದನು ಅಲ್ಲಿ ನಿಲ್ಲದೆ ದೈತ್ಯಪುಂಗವನಾದ ಶಂಬರಾಸುರನಲ್ಲಿಗೈತಂದು, ''ಅಯ್ಯಾ ಶಂಬರನೇ! ಮಹಾರುದ್ರನು ಮಹತ್ತರವಾಗಿ ಕೋಪಗೊಂಡು ಮನ್ಮಥನನ್ನು ಸುಟ್ಟನು. ಈಗ ಮಹಾಬಲಾಢ್ಯನಾದ ನೀನು ಆತನ ಭಾರ್ಯೆಯಾದ ರತೀದೇವಿಯನ್ನು ಕರೆದುತಂದು, ಅವಳನ್ನು ನಿನ್ನ ಭಾರ್ಯೆಯನ್ನಾಗಿ ಮಾಡಿಕೊ. ಅಯ್ಯಾ ಪುಣ್ಯಶಾಲಿಯೇ! ನೀನು ಕರೆತಂದಿರುವ ಮಹಾರೂಪಸಂಪನ್ನೆಯರಾದ ಸ್ತ್ರೀಯರೆಲ್ಲರಿಗಿಂತಲೂ ಮದನಪ್ರಿಯಳಾದ ಆ ರತೀದೇವಿಯು ಮಹಾ ರೂಪ ವತಿಯು'' ಎಂದು ಹೇಳಿದನು.

೧೧೫–೧೯. ಆತ್ಮಜ್ಞಾನಿಯಾದ ಆ ನಾರದನು ಮುಂದೆ ನಡೆಯುವುದನ್ನು ಚೆನ್ನಾಗಿ ಯೋಚಿಸಿ ಈ ರೀತಿ ನುಡಿದುದನ್ನು ಕೇಳಿ ದೇವಕಂಟಕನಾದ ಶಂಬರನು ಒಡನೆಯೇ ಸುಂದರಾಂಗಿಯಾದ ರತಿಯು ತಪಸ್ಸು ಮಾಡುತ್ತಿದ್ದ ಸ್ಥಳಕ್ಕೆ ಹೋದನು. ಮದನಪ್ರಿಯೆಯೂ ಮಹಾರೂಪವತಿಯೂ ಆದ ಅವಳನ್ನು

ಏಹಿ ತನ್ವಿ ಮಯಾ ಸಾರ್ಧಂ ರಾಜ್ಯಂ ಭೋಗಾನ್ಯಥೇಪ್ಸಿತಃ ।
ಭುಂಕ್ಷ್ವ ದೇವಿ ಪ್ರಸಾದಾನ್ಮೇ ತಪಸಾ ಕಿಂ ಪ್ರಯೋಜನಮ್ ॥ ೧೧೭ ॥
ಏವಮುಕ್ತಾ ತದಾ ತೇನ ಶಂಬರೇಣ ಮಹಾತ್ಮನಾ ।
ಉವಾಚ ತನ್ವೀ ಮಧುರಂ ಮಹಿಷೀ ಮದನಸ್ಯ ಸಾ ॥ ೧೧೮ ॥
ವಿಧವಾಹಂ ಮಹಾಬಾಹೋ ನೈವಂ ಭಾಷಿತುಮರ್ಹಸಿ ।
ರಾಜಾ ತ್ವಂ ಸರ್ವದೈತ್ಯಾನಾಂ ಲಕ್ಷಣೈಃ ಪರಿವಾರಿತಃ ॥ ೧೧೯ ॥
ಏತತ್ತದ್ವಚನಂ ಶ್ರುತ್ವಾ ಶಂಬರಃ ಕಾಮಮೋಹಿತಃ ।
ಕರೇ ಗ್ರಹೀತುಕಾಮೋಽಸೌ ತದಾ ರತ್ಯಾ ನಿವಾರಿತಃ ॥ ೧೨೦ ॥
ವಿಮೃಶ್ಯ ಮನಸಾ ಸರ್ವಮಜೇಯತ್ವಂ ಚ ತಸ್ಯ ವೈ ।
ಮಾಸ್ಪೃಶ ತ್ವಂ ಚ ರೇ ಮೂಢ ಮಮ ಸಂಸ್ಪರ್ಶಜೇನ ವೈ ॥ ೧೨೧ ॥
ಸಂಪರ್ಕೇಣ ಚ ದಗ್ಧೋಽಸಿ ನಾನ್ಯಥಾ ಮಮ ಭಾಷಿತಮ್ ।
ತದೋವಾಚ ಮಹಾತೇಜಾಃ ಶಂಬರಃ ಪ್ರಹಸನ್ನಿವ ॥ ೧೨೨ ॥
ಬಿಭೀಷಿಕಾಭಿರ್ಬಹ್ವೀಭಿರ್ಮಾಂ ಭೀಷಯಸಿ ಮಾನಿನಿ ।
ಗಚ್ಛ ಶೀಘ್ರಂ ಮಮ ಗೃಹಂ ಬಹೂಕ್ತ್ಯಾ ಕಿಂ ಪ್ರಯೋಜನಮ್ ॥ ೧೨೩ ॥
ಇತ್ಯುಚ್ಯಮಾನೇನ ತದಾ ನೀತಾ ಸಾ ಪ್ರಸಭಂ ತಥಾ ।
ಸ್ವಪುರಂ ಪರಮಂ ತನ್ವೀ ಶಂಬರೇಣ ಮನಸ್ವಿನೀ ॥ ೧೨೪ ॥

---

ಕಂಡು, "ಎಲೆ ಸುಂದರಿ! ನನ್ನೊಡನೆ ಬಾ. ನನ್ನ ಅನುಗ್ರಹದಿಂದ ನಿನ್ನ ಇಷ್ಟಾನುಸಾರ ರಾಜಭೋಗಗಳನ್ನನುಭವಿಸು. ಈ ತಪಸ್ಸಿನಿಂದೇನು ಪ್ರಯೋಜನ?" ಎಂದು ಹೇಳಿದನು. ಮಹಾತ್ಮನಾದ ಆ ಶಂಬರನಿಂತು ನುಡಿಯಲು, ಮದನಪ್ರಿಯೆಯಾದ ಆ ರತಿಯು ಅವನನ್ನು ಕುರಿತು ಬಹು ಮಧುರವಾಗಿ, "ಎಲೈ ಮಹಾಬಾಹುವೇ! ನಾನು ವಿಧವೆ. ನೀನು ದೈತ್ಯರೆಲ್ಲರಿಗೂ ದೊರೆಯಾಗಿ, ಸಕಲ ಲಕ್ಷಣಗಳಿಂದಲೂ ಕೂಡಿದವನಾಗಿ ನನ್ನೊಡನೆ ಹೀಗೆ ಮಾತನಾಡಬಹುದೇ?" ಎಂದಳು.

೧೨೦–೨೫. ಆ ಮಾತನ್ನು ಕೇಳಿ ಕಾಮಮೋಹಿತನಾದ ಆ ಶಂಬರನು ಅವಳ ಕೈಯನ್ನು ಹಿಡಿಯಹೋದನು. ಆಗಲಾಕೆಯು ಆ ದಾನವನು ಯಾರಿಂದಲೂ ಗೆಲ್ಲಲಸಾಧ್ಯನಾಗಿರುವುದನ್ನರಿತೂ ಅವನನ್ನು ಕುರಿತು, "ಎಲೈ ತಿಳಿಗೇಡಿಯೇ! ನನ್ನನ್ನು ಮುಟ್ಟಬೇಡ! ಹಾಗೇನಾದರೂ ಮುಟ್ಟಿದುದಾದರೆ ನೀನು ಖಂಡಿತವಾಗಿಯೂ ಸುಟ್ಟುಹೋಗುವೆಯೆಂಬುದರಲ್ಲಿ ಸಂಶಯವಿಲ್ಲವು. ಬೇಡ. ಮುಟ್ಟಬೇಡ" ಎಂದು ಹೇಳಿ ಅವನನ್ನು ತಡೆದಳು. ಆಗ ಮಹಾತೇಜಸ್ವಿಯಾದ ಶಂಬರನು ನಗುತ್ತ, "ಎಲೆ ಭಾಮಿನಿ! ಈ ರೀತಿ ಅನೇಕ ಹೆದರಿಕೆಗಳಿಂದ ನನ್ನನ್ನೇನು ಹೆದರಿಸುತ್ತಿರುವೆ. ಅದಂತಿರಲಿ, ಜಾಗ್ರತೆಯಾಗಿ

ಕೃತಾ ಮಹಾನಸೇಽಧ್ಯಕ್ಷಾ ನಾಮ್ನಾ ಮಾಯಾವತೀತಿ ಚ ॥ ೧೨೫ ॥

ಋಷಯ ಊಚುಃ:—

ಪಾರ್ವತ್ಯಾಧಿಕೃತಂ ಸರ್ವಂ ಮದನಾನಯನಂ ಪ್ರತಿ ।
ಶಂಬರೇಣ ಹೃತಾ ತಸ್ಮಿನ್ ಮದನಸ್ಯ ಪ್ರಿಯಾ ಸತೀ ।
ಅತ ಊರ್ಧ್ವಂ ತದಾ ಸೂತ ಕಿಂ ಜಾತಂ ತತ್ರ ವರ್ಣ್ಯತಾಂ ॥ ೧೨೬ ॥

ಸೂತ ಉವಾಚ:—

ಗತಂ ತದಾ ಶಿವಂ ದೃಷ್ಟ್ವಾ ದಗ್ಧ್ವಾ ಮದನಮೋಜಸಾ ।
ಪಾರ್ವತೀ ತಪಸಾ ಯುಕ್ತಾ ಸ್ಥಿತಾ ತತ್ರೈವ ಭಾಮಿನೀ ॥ ೧೨೭ ॥
ಪಿತ್ರಾ ತೇನ ತದಾ ತಸ್ಮಿನ್ ಮಾತ್ರಾ ಚೈವ ನಿಚಾರಿತಾ ।
ಬಾಲೇ ಏಹಿ ಗೃಹೇ ಶೀಘ್ರಂ ಮಾಶ್ರಮಂ ಕರ್ತುಮರ್ಹಸಿ ॥ ೧೨೮ ॥
ಉಕ್ತಾ ತಾಭ್ಯಾಂ ತದಾ ಸಾಧ್ವೀ ಗಿರಿಜಾ ವಾಕ್ಯಮಬ್ರವೀತ್ ॥ ೧೨೯ ॥

ಪಾರ್ವತ್ಯುವಾಚ:—

ನಾಗಚ್ಛಾಮಿ ಗೃಹಂ ಮಾತಸ್ತಾತ ಮೇ ಶೃಣು ತತ್ವತಃ ।
ವಾಕ್ಯಂ ಧರ್ಮಾರ್ಥಯುಕ್ತಂ ಚ ಯೇನ ತ್ವಂ ತೋಷಮೇಷ್ಯಸಿ ॥೧೩೦॥

---

ನಡೆ, ಹೆಚ್ಚು ಮಾತುಗಳಿಂದ ಪ್ರಯೋಜನವಿಲ್ಲ" ಎಂದು ಹೇಳಿ ಮನಸ್ವಿನಿಯಾದ ಅವಳನ್ನು ಬಲಾತ್ಕಾರವಾಗಿ ತನ್ನ ಪಟ್ಟಣಕ್ಕೆ ಕರೆದೊಯ್ದು ಅವಳನ್ನು ಮಾಯಾವತಿಯೆಂಬ ಹೆಸರಿನಿಂದ ತನ್ನ ಅಡಿಗೆಯ ಮನೆಯ ಅಧ್ಯಕ್ಷಳನ್ನಾಗಿ ಮಾಡಿದನು.

೧೨೬–೩೦. ಋಷಿಗಳು ಕೇಳುತ್ತಾರೆ:—"ಎಲೈ ಲೋಮಶಮಹರ್ಷಿಯೇ! ಪಾರ್ವತಿಗೆ ಸಹಾಯಮಾಡಲೋಸುಗ ದೇವತೆಗಳೆಲ್ಲರೂ ಮನ್ಮಥನನ್ನು ಕರೆತಂದುದು, (ಅವನನ್ನು ಶಂಕರನು ದಹಿಸಿದುದೂ) ಅವನ ಪತ್ನಿಯಾದ ರತಿಯನ್ನು ಶಂಬರನು ಕರೆದೊಯ್ದುದೂ ಮೊದಲಾದ ಸಂಗತಿಗಳನ್ನು ಹೇಳಿದೆ. ಇದಾದಮೇಲೆ ನಡೆದ ವೃತ್ತಾಂತವೇನು ಅದನ್ನು ತಿಳಿಸು." ಸೂತನು ಹೇಳುತ್ತಾನೆ:—ಎಲೈ ಮುನಿಗಳಿರಾ! ಪರಶಿವನು ಮನ್ಮಥನನ್ನು ದಹಿಸಿ ಅಂತರ್ಧಾನವಾದುದನ್ನು ಕಂಡು ಆ ಪಾರ್ವತಿಯು ಅದೇ ಪ್ರದೇಶದಲ್ಲಿಯೇ ತಪಸ್ಸಿಗೆ ಕುಳಿತಳು. ಆಗ ಅವಳ ತಾಯಿ ತಂದೆಯರಾದ ಮೇನಾ ಹಿಮವಂತರು ಅವಳ ಬಳಿಗೈದಿ, "ಮಗಳೇ! ನೀನೀರೀತಿ ಶ್ರಮಪಡಬೇಡ. ಶೀಘ್ರವಾಗಿ ಮನೆಗೆ ಬಾ!" ಎಂದರು. ಸಾಧ್ವಿಯಾದ ಗಿರಿಜೆಯು ಅವರ ಮಾತುಗಳನ್ನು ಕೇಳಿ, "ಎಲೌ ತಾಯೇ, ಎಲೈ ತಂದೆಯೇ! ನಾನು ಖಂಡಿತವಾಗಿಯೂ ಮನೆಗೆ ಬರುವುದಿಲ್ಲ. ನನ್ನ ಮಾತನ್ನು ಕೇಳಿರಿ. ಈಗ ನಾನು ಹೇಳುವ ಧರ್ಮಾರ್ಥಸಹಿತವಾದ ಮಾತನ್ನು ಕೇಳಿ ನೀವು ಸಂತೋಷಪಡುವಿರಿ.

**ಶಂಭುಃ ಪರೇಷಾಂ ಪರಮೋ ದಗ್ಧೋ ಯೇನ ಮಹಾಬಲಃ ।**
**ಮದನೋ ಮಮ ಸಾನ್ನಿಧ್ಯಮಾನಯೇಽತ್ರೈವ ತಂ ಶಿವಂ ॥ ೧೩೧ ॥**
**ದುರ್ಲಭೋ ಹಿ ಸದಾ ಶಂಭುಃ ಪ್ರಾಣಿನಾಂ ಗೃಹಮಿಚ್ಛತಾಂ ।**
**ನಾಗಚ್ಛಾಮಿ ಗೃಹಂ ಮಾತಸ್ತಸ್ಮಾತ್ಸರ್ವಂ ವಿಮೃಶ್ಯತಾಂ ॥ ೧೩೨ ॥**
**ತದೋವಾಚ ಮಹಾತೇಜಾ ಹಿಮವಾನ್ ಸ್ವಸುತಾಂ ಪ್ರತಿ ।**
**ದುರಾರಾಧ್ಯಃ ಶಿವಃ ಸಾಕ್ಷಾತ್ಸರ್ವದೇವನಮಸ್ಕೃತಃ ।**
**ತ್ವಯಾ ಪ್ರಾಪ್ತುಮಶಕ್ಯೋ ಹಿ ತಸ್ಮಾತ್ತ್ವಂ ಸ್ವಗೃಹಂ ವ್ರಜ ॥ ೧೩೩ ॥**
**ಸಾ ಬಾಷ್ಪಪೂರಿತೇನೈವ ಕಂಠೇನ ಸ್ವಸುತಾಂ ಪ್ರತಿ ।**
**ಉವಾಚ ಮೇನಾ ತನ್ವಂಗಿ ಯಾಹಿ ಶೀಘ್ರಂ ಗೃಹಂ ಪ್ರತಿ ॥ ೧೩೪ ॥**
**ತದಾ ಪ್ರಹಸ್ಯ ಚೋವಾಚ ಮಾತರಂ ಪ್ರತಿ ಪಾರ್ವತೀ ।**
**ಪ್ರತಿಜ್ಞಾಂ ಶೃಣು ಮೇ ಮಾತಸ್ತಪಸಾ ಪರಮೇಣ ಹಿ ॥ ೧೩೫ ॥**
**ಅತ್ರೈವ ತಂ ಸಮಾನೀಯ ವರಯಾಮಿ ವಿಚಕ್ಷಣಂ ।**
**ನಾಶಯಾಮಿ ಚ ರುದ್ರಸ್ಯ ರುದ್ರತ್ವಂ ವರವರ್ಣಿನಿ ॥ ೧೩೬ ॥**

---

೧೩೧–೩೨. ಮಹಾ ಬಲನಾದ ಮನ್ಮಥನನ್ನು ದಹಿಸಿ, ಇತರರಾರಿಗೂ ದೊರಕಲಸದಳನಾಗಿ ಅಂತರ್ಧಾನವಾಗಿರುವ ಆ ಶಂಭುವನ್ನು ನನ್ನ ತಪೋಬಲ ದಿಂದಲೇ ನನ್ನ ಬಳಿಗೆ ಬರುವಂತೆ ಮಾಡುವೆನು. ಆ ಶಂಭುವಾದರೋ ಮನೆ ಯನ್ನಪೇಕ್ಷಿಸುವವರಿಗೆ ದುರ್ಲಭನು. ಎಲೆ ತಾಯೇ! ಆದುದರಿಂದ ನಾನು ಮನೆಗೆ ಬರುವುದಿಲ್ಲವು. ನನ್ನ ಶ್ರೇಯಸ್ಸಿಗೆ ಭಾಗಿಗಳಾಗಿರುವ ನೀವೇ ಈ ಎಲ್ಲ ಸಂಗತಿಗಳನ್ನೂ ಯೋಚಿಸಿರಿ" ಎಂದಳು.

೧೩೩–೩೬. ಮಹಾ ತೇಜಸ್ವಿಯಾದ ಹಿಮವಂತನು ಅವಳನ್ನು ಕುರಿತು, "ಅಮ್ಮಾ ಪಾರ್ವತಿ! ದೇವತೆಗಳೆಲ್ಲರೂ ಮಣಿದು ಬೇಡಿದರೂ ಆ ಪರಶಿವನು ಪ್ರಸನ್ನನಾಗದೆ ಹೋದನು. ಅಂತಹನನ್ನು ಪಡೆಯಲು ನಿನಗೆ ಸಾಧ್ಯವಾಗುವುದಿಲ್ಲವು. ಆದುದರಿಂದ ನೀನು ಸುಮ್ಮನೆ ಮನೆಗೆ ಬಂದು ಬಿಡು" ಎಂದನು. ಮೇನೆಯಾದರೋ ಕಂಬನಿದುಂಬಿ ಗದ್ಗದಸ್ವರದಿಂದ, "ಮಗು! ಸುಂದರಿಯಾದ ನೀನಿಲ್ಲಿರುವುದು ಯೋಗ್ಯವಲ್ಲ. ಜಾಗ್ರತೆಯಾಗಿ ಮನೆಗೆ ಹೊರಡು" ಎಂದಳು. ಆಗ ಗಿರಿಜೆಯು ನಸುನಕ್ಕು ಆಕೆಯನ್ನು ಕುರಿತು, "ತಾಯೇ! ನನ್ನ ಪ್ರತಿಜ್ಞೆಯನ್ನು ಕೇಳು. ನಾನು ಶ್ರೇಷ್ಠವಾದ ನನ್ನ ತಪಸ್ಸಿನಿಂದಲೇ ಆ ಶಂಕರನನ್ನು ಇಲ್ಲಿಗೆ ಬರಮಾಡಿ ವಿಚಕ್ಷಣನಾದ ಅವನನ್ನೇ ವರಿಸುತ್ತೇನೆ. ಆ ರುದ್ರನಲ್ಲಿರುವ ರುದ್ರತ್ವವನ್ನು ನಾನು ಈ ನನ್ನ ತಪಸ್ಸಿನಿಂದಲೇ ನಾಶಗೊಳಿಸುವೆನು" ಎಂದಳು.

**ಸುಖರೂಪಂ ಪರಿತ್ಯಜ್ಯ ಗಿರಿಜಾ ಚ ಮನಸ್ವಿನೀ ।**
**ಶಂಭೋರಾರಾಧನಂ ಚಕ್ರೇ ಪರಮೇಣ ಸಮಾಧಿನಾ ॥ ೧೩೭ ॥**
**ಜಯಾ ಚ ವಿಜಯಾ ಚೈವ ಮಾಧವೀ ಚ ಸುಲೋಚನಾ ।**
**ಸುಶ್ರುತಾ ಚ ಶ್ರುತಾ ಚೈವ ತಥೈವ ಚ ಶುಕೀ ಪರಾ ॥ ೧೩೮ ॥**
**ಪ್ರಮ್ಲೋಚಾ ಸುಭಗಾ ಶ್ಯಾಮಾ ಚಿತ್ರಾಂಗೀ ಚಾರುಣೀ ಶುಭಾ ।**
**ಏತಾಶ್ಚಾನ್ಯಾಶ್ಚ ಬಹವಃ ಸಖ್ಯಸ್ತಾ ಗಿರಿಜಾಂ ಪ್ರತಿ ।**
**ಉಪಾಸಾಂಚಕ್ರಿರೇ ಸಾ ಚ ದೇವಗರ್ಭಾಽಥಭಾಮಿನಿ ॥ ೧೩೯ ॥**
**ತಪಸಾ ಪರಮೋಗ್ರೇಣ ಚರಂತೀ ಚಾರುಹಾಸಿನೀ ।**
**ಮದನೋ ಯತ್ರ ದಗ್ಧಶ್ಚ ರುದ್ರೇಣ ಚ ಮಹಾತ್ಮನಾ ।**
**ತತ್ರೈವ ವೇದಿಂ ಕೃತ್ವಾ ಚ ತಸ್ಯೋಪರಿ ಸುಸಂಸ್ಥಿತಾ ॥ ೧೪೦ ॥**
**ತ್ಯಕ್ತ್ವಾ ಜಲಾಶನಂ ಬಾಲಾ ಪರ್ಣಾದಾ ಹ್ಯಭವಚ್ಚ ಸಾ ।**
**ತತಃ ಸ್ವಾದ್ರಾಣಿ ಪರ್ಣಾನಿ ತ್ಯಕ್ತ್ವಾ ಶುಷ್ಕಾಣಿ ಚಾದದೇ ॥ ೧೪೧ ॥**
**ಶುಷ್ಕಾಣಿ ಚೈವ ಪರ್ಣಾನಿ ನಾಶಿತಾನಿ ತಯಾ ಯದಾ ।**
**ಅಪರ್ಣೇತಿ ಚ ವಿಖ್ಯಾತಾ ಬಭೂವ ತನುಮಧ್ಯಮಾ ॥ ೧೪೨ ॥**

---

೧೩೭–೪೦. ಎಲೈ ಮುನಿಗಳಿರಾ! ಸ್ಥಿರಮನಸ್ಕಳಾದ ಆ ಗಿರಿಜೆಯು ಈ ರೀತಿ ಹೇಳಿ ತಾಯಿ ತಂದೆಗಳಾದ ಮೇನಾ ಹಿಮವಂತರನ್ನು ಬೀಳ್ಕೊಟ್ಟ ತರುವಾಯ ಸುಖವನ್ನು ತೊರೆದು ಪರಮಸಮಾಧಿನಿಷ್ಠಳಾಗಿ ಪರಮೇಶ್ವರನನ್ನು ಆರಾಧಿಸಿದಳು. ಆಗ ಜಯೆ, ವಿಜಯೆ, ಮಾಧವಿ, ಸುಲೋಚನೆ, ಸುಶ್ರುತೆ, ಶ್ರುತೆ, ಶುಕಿ, ಪ್ರಮ್ಲೋಚೆ, ಸುಭಗೆಯಾದ ಶ್ಯಾಮೆ, ಚಿತ್ರಾಂಗಿ, ಅರುಣಿ, ಸುಂದರಿಯಾದ ದೇವಗರ್ಭೆ ಮೊದಲಾದ ಆಕೆಯ ಗೆಳತಿಯರು ಆಕೆಯನ್ನು ಉಪಚರಿಸತೊಡಗಿದರು. ಆ ಸಮಯದಲ್ಲಿ ಚಾರುಹಾಸಿನಿಯಾದ ಆ ಗಿರಿರಾಜ ಪುತ್ರಿಯು ರುದ್ರನಿಂದ ಮನ್ಮಥನು ದಗ್ಧವಾದೆಡೆಯಲ್ಲಿಯೇ ವೇದಿಕೆಯನ್ನು ರಚಿಸಿ ಅದರಮೇಲೆ ಕುಳಿತು ಅತ್ಯಂತ ಉಗ್ರವಾದ ತಪಸ್ಸನ್ನು ಮಾಡಲು ಉಪಕ್ರಮಿಸಿದಳು.

೧೪೧–೪೫. ಸುಕುಮಾರಿಯಾದ ಆ ದೇವಿಯು ಮೊದಲು ಜಲಪಾನ ಮಾಡುವುದನ್ನೇ ತೊರೆದು ಎಲೆಗಳನ್ನೇ ಆಹಾರವನ್ನಾಗಿ ತೆಗೆದುಕೊಳ್ಳುತ್ತ ಆ ತರುವಾಯ ಚಿಗುರೆಲೆಗಳನ್ನು ಮೆಲ್ಲುವುದನ್ನೂ ಬಿಟ್ಟು ಒಣಗಿದೆಲೆಗಳನ್ನು ಭುಜಿಸತೊಡಗಿ ಆ ಬಳಿಕ ಆ ಪರ್ಣಾಹಾರವನ್ನೂ ಪೂರ್ತಿಯಾಗಿ ತೊರೆದು ಬಿಟ್ಟಳು. ಇಂದರಿಂದಾದೇವಿಯು 'ಅಪರ್ಣಾ' ಎಂದು ಹೆಸರಾದಳು. ಇದಾದ ಮೇಲೆ ಕೇವಲ ಜಲಪಾನವನ್ನೇ ಕೆಲಕಾಲ ಮಾಡುತ್ತಿದ್ದು ಆ ಬಳಿಕ ಅದನ್ನೂ ತೊರೆದು ಕೇವಲ ಜಲಾಹಾರವನ್ನೇ ಮಾಡುತ್ತಿದ್ದು ಇನ್ನೂ ಕೆಲಕಾಲವಾದ

ವಾಯುಪಾನರತಾ ಜಾತಾ ಅಂಬುಪಾನಾದನಂತರಂ ।
ಕಾಲಕ್ರಮೇಣ ಮಹತಾ ಬಭೂವ ಗಿರಿಜಾಸತೀ ।
ಏಕಾಂಗುಷ್ಠೇನ ಚ ತದಾ ದಧಾರ ಚ ನಿಜಂ ವಪುಃ ॥ ೧೪೩ ॥
ಏವಮುಗ್ರೇಣ ತಪಸಾ ಶಂಕರಾರಾಧನಂ ಸತೀ ।
ಚಕಾರ ಪರಯಾ ತುಷ್ಟ್ಯಾ ಶಂಭೋಃ ಪ್ರೀತ್ಯರ್ಥಮೇವ ಚ ॥ ೧೪೪ ॥
ಪರಂ ಭಾವಂ ಸಮಾಶ್ರಿತ್ಯ ಜಗನ್ಮಂಗಲ ಮಂಗಲಾ ।
ತುಷ್ಟ್ಯರ್ಥಂ ಚ ಮಹೇಶಸ್ಯ ತತಾಪ ಪರಮಂ ತಪಃ ॥ ೧೪೫ ॥
ಏವಂ ದಿವ್ಯಸಹಸ್ರಾಣಿ ವರ್ಷಾಣಿ ಚ ತತಾಪ ವೈ ।
ಹಿಮಾಲಯಸ್ತದಾಗತ್ಯ ಪಾರ್ವತೀಂ ಕೃತನಿಶ್ಚಯಾಂ ॥ ೧೪೬ ॥
ಸಭಾರ್ಯಃ ಸ ಸುತಾಮಾಪ್ತ ಉವಾಚ ಚ ಮಹಾಸತೀಂ ।
ಮಾಖಿದ್ಯತಾಂ ಮಹಾದೇವಿ ತಪಸಾಽನೇನ ಭಾಮಿನಿ ॥ ೧೪೭ ॥
ಕ್ವರುದ್ರೋ ದೃಶ್ಯತೇ ಬಾಲೇ ವಿರಕ್ತೋ ನಾಽತ್ರಸಂಶಯಃ ।
ತ್ವಂ ತನ್ವೀ ತರುಣೀ ಬಾಲಾ ತಪಸಾ ಚ ವಿಮೋಹಿತಾ ॥ ೧೪೮ ॥
ಭವಿಷ್ಯತಿ ನ ಸಂದೇಹಃ ಸತ್ಯಂ ಪ್ರತಿವದಾಮಿ ತೇ ।
ತಸ್ಮಾದುತ್ತಿಷ್ಠ ಯಾಹ್ಯಾಶು ಸ್ವಗೃಹಂ ವರವರ್ಣಿನಿ ॥ ೧೪೯ ॥

---

ತರುವಾಯ ಅದನ್ನೂ ತೊರೆದು ವಾಯುವನ್ನೇ ಆಹಾರವನ್ನಾಗಿ ಸೇವಿಸಿದಳು. ಮಹಾ ಸತಿಯಾದ ಆ ಪಾರ್ವತಿಯು ಕಾಲಕ್ರಮವಾಗಿ ಪಾದದ ಹೆಬ್ಬೆರಳೊಂದರಿಂದಲೇ ನೆಲದ ಮೇಲೆ ನಿಂತು ತನ್ನ ಶರೀರವನ್ನೆಲ್ಲ ಹೊತ್ತು ತಪಸ್ಸನ್ನೆಸಗಿದಳು. ಎಲೈ ಶೌನಕಾದಿಗಳಿರಾ! ಈ ಪ್ರಕಾರ ಆ ಮಹಾದೇವಿಯು ಪರಮೇಶ್ವರನ ಪ್ರೀತ್ಯರ್ಥವಾಗಿ ಬಹಳ ಕಠಿನವಾದ ತಪಸ್ಸನ್ನೆಸಗಿ ಆ ಸ್ವಾಮಿಯನ್ನು ಪೂಜಿಸಿದಳು. ಜಗನ್ಮಂಗಲಮಂಗಲೆಯಾದ ಆಕೆಯು ಆ ಮಹೇಶ್ವರನಲ್ಲಿ ಪರಮ ಭಕ್ತಿಭರಿತಳಾಗಿ ಆತನ ಸಂತೋಷಾರ್ಥವಾಗಿಯೇ ಇಂತಹ ಮಹತ್ತರವಾದ ತಪಸ್ಸನ್ನು ಮಾಡಿದಳು.

೧೪೬–೫೧. ಅಯ್ಯಾ ವಿಪ್ರರೇ! ಈ ಪ್ರಕಾರ ಆ ಗಿರಿಜೆಯು ಒಂದು ದಿವ್ಯ ಸಹಸ್ರವರ್ಷಗಳ ಕಾಲ ಉಗ್ರತಪಸ್ಸನ್ನು ಮಾಡಿದ ಬಳಿಕ ಆಕೆಯ ತಂದೆಯಾದ ಹಿಮವಂತನು ಆಕೆಯ ಬಳಿಗೈದಿ ಇನ್ನೂ ತಪಸ್ಸನ್ನು ಮುಂದುವರಿಸಲು ಮನಸ್ಸು ಮಾಡಿರುವ ಆ ಮಹಾ ಸತಿಯನ್ನು ಕುರಿತು ತನ್ನ ಹೆಂಡತಿಯಾದ ಮೇನಾದೇವಿಯೊಡಗೂಡಿ, "ಎಲೆ ಭಾಮಿನಿ, ಓ ಮಹಾದೇವಿ! ಹೀಗೆ ನೀನು ತಪಸ್ಸನ್ನು ಮಾಡಿ ಕಷ್ಟಪಡಬೇಡ. ಆ ರುದ್ರನೆಲ್ಲಿರುವನು. ಕೇವಲ ವಿರಕ್ತನಾಗಿರುವ ಆತನು ಪ್ರತ್ಯಕ್ಷನಾಗುವುದಿಲ್ಲವೆಂಬುದರಲ್ಲಿ ಸಂದೇಹವಿಲ್ಲವು. ಕೇವಲ ಸುಕುಮಾರಿಯೂ, ತರುಣಿಯೂ, ಮುಗ್ಧೆಯೂ ಆದ ನೀನು ತಪಸ್ಸಿಗೆ ಮರುಳಾಗಿರುವೆ

ಕಿಂ ತೇನ ತವ ರುದ್ರೇಣ ಯೇನ ದಗ್ಧಃ ಪುರಾನಘೇ ।
ಮದನೋ ನಿರ್ವಿಕಾರಿತ್ವಾತ್ತಂ ಕಥಂ ಪ್ರಾರ್ಥಯಿಷ್ಯಸಿ ॥ ೧೫೦ ॥
ಗಗನಸ್ಥೋ ಯಥಾ ಚಂದ್ರೋ ಗ್ರಹೀತುಂ ನಹಿ ಶಕ್ಯತೇ ।
ತಥೈವ ದುರ್ಗಮಃ ಶಂಭುರ್ಜಾನೀಹಿ ತ್ವಂ ಶುಚಿಸ್ಮಿತೇ ॥ ೧೫೧ ॥
ತಥೈವ ಮೇನಯಾ ಚೋಕ್ತಾ ತಥಾ ಸಹ್ಯಾದ್ರಿಣಾ ಸತೀ ।
ಮೇರುಣಾ ಮಂದರೇಣೈವ ಮೈನಾಕೇನ ತಥೈವಚ ॥ ೧೫೨ ॥
ಏಭಿರುಕ್ತಾ ತದಾ ತನ್ವೀ ಪಾರ್ವತೀ ತಪಸಿ ಸ್ಥಿತಾ ।
ಉವಾಚ ಪ್ರಹಸಂತ್ಯೇವ ಹಿಮವಂತಂ ಶುಚಿಸ್ಮಿತಾ ॥ ೧೫೩ ॥
ಪುರಾ ಪ್ರೋಕ್ತಂ ತ್ವಯಾ ತಾತ ಅಂಬ ಕಿಂ ವಿಸ್ಮೃತಂ ತ್ವಯಾ ।
ಅಧುನೈವ ಪ್ರತಿಜ್ಞಾಂ ಚ ಶೃಣುಧ್ವಂ ಮಮ ಬಾಂಧವಾಃ ॥ ೧೫೪ ॥
ವಿರಕ್ತೋಽಸೌ ಮಹಾದೇವೋ ಮದನೋ ಯೇನವೈ ಹತಃ ।
ತಂ ತೋಷಯಾಮಿ ತಪಸಾ ಶಂಕರಂ ಲೋಕಶಂಕರಂ ॥ ೧೫೫ ॥
ಸರ್ವೇ ಯೂಯಂ ಚ ಗಚ್ಛಂತು ನಾತ್ರ ಕಾರ್ಯಾ ವಿಚಾರಣಾ ।
ದಗ್ಧೋಹಿ ಮದನೋ ಯೇನ ಯೇನ ದಗ್ಧಂ ಗಿರೇರ್ವನಂ ॥ ೧೫೬ ॥

---

ಯೆಂಬುದರಲ್ಲಿ ಸಂಶಯವಿಲ್ಲವೆಂದು ನಾನು ಸತ್ಯವಾಗಿಯೂ ಹೇಳುತ್ತೇನೆ. ಆದುದರಿಂದೆಲೌ ಸುಂದರಿ! ಏಳು. ಮನೆಗೆ ಬಾ. ಎಲೆ ನಿರ್ದುಷ್ಟಳೇ! ಮನ್ಮಥನನ್ನೇ ಸುಟ್ಟ ಆ ಶಿವನಿಂದ ನಿನಗಾವ ಪ್ರಯೋಜನವಾಗುವುದು? ಮದನನೇ ಹುಟ್ಟಡಗಿಹೋಗಿರುವಲ್ಲಿ ನೀನು ಅವನನ್ನು ಪ್ರಾರ್ಥಿಸುವುದುತಾನೆ ಹೇಗೆ? ಆಕಾಶದಲ್ಲಿರುವ ಚಂದ್ರನನ್ನು ಕೈಯಿಂದ ಹಿಡಿದುಕೊಳ್ಳಲು ಸಾಧ್ಯವೇ? ಎಲೆ ಶುಚಿಸ್ಮಿತೇ! ಅಂತೆಯೇ ಈ ಶಂಭುವೂ ಹೊಂದಲಸದಳನೆಂಬುದನ್ನು ತಿಳಿದುಕೊ" ಎಂದು ಹೇಳಿದನು.

೧೫೨–೫೪. ಅಯ್ಯಾ ಮುನಿಗಳಿರಾ! ಹಿಮವಂತನಿಂತು ನುಡಿದ ಬಳಿಕ ಆತನ ಸತಿಯಾದ ಮೇನಾದೇವಿಯೂ, ಮೂರ್ತಿಮಂತರಾದ ಸಹ್ಯಾದ್ರಿ, ಮೇರು, ಮಂದರ, ಮೈನಾಕರೂ ಆ ಪಾರ್ವತಿಯನ್ನು ಕುರಿತು ತಪಸ್ಸನ್ನು ನಿಲ್ಲಿಸಿ ಮನೆಗೆ ಬರಬೇಕೆಂದು ಹೇಳಿದರು. ತಪೋನಿಷ್ಠಳೂ, ಕೋಮಲೆಯೂ ಆದ ಆ ದೇವಿಯಾದರೋ ಅವರೆಲ್ಲರ ಮಾತುಗಳನ್ನೂ ಕೇಳಿ ತನ್ನ ತಂದೆಯಾದ ಹಿಮವಂತನನ್ನು ಕುರಿತು, "ಎಲೈ ತಂದೆಯೇ, ಓ ತಾಯೇ! ನಿಮಗೆ ನಾನು ಹಿಂದೆಯೇ ನನ್ನ ಸಂಕಲ್ಪವನ್ನು ಹೇಳಿರುವೆನು. ಈಗಲೂ ನನ್ನ ಪ್ರತಿಜ್ಞೆಯನ್ನುಕೇಳಿರಿ. ನನ್ನ ಬಂಧುಗಳಾದ ನೀವೂ ಕೇಳಿರಿ. ಮನ್ಮಥನನ್ನು ದಹಿಸಿ ವಿರಕ್ತನಾಗಿ ಕಣ್ಣಿಗೆ ಕಾಣಿಸದೆಹೋಗಿರುವ ಲೋಕಶಂಕರನಾದ ಆ ಶಂಕರನನ್ನು ನಾನು ತಪಸ್ಸಿನಿಂದ ಸಂತೋಷಗೊಳಿಸುತ್ತೇನೆ. ನೀವೆಲ್ಲರೂ ಈ ವಿಷಯವನ್ನು

ತಮಾನಯಾಮಿ ಚಾತ್ರೈವ ತಪಸಾ ಕೇವಲೇನಹಿ ।
ತಪೋಬಲೇನ ಮಹತಾ ಸುಸೇವ್ಯೋಹಿ ಸದಾಶಿವಃ ॥ ೧೫೭ ॥
ತಂ ಜಾನೀಧ್ವಂ ಮಹಾಭಾಗಾಃ ಸತ್ಯಂ ಸತ್ಯಂ ವದಾಮ್ಯಹಂ ॥ ೧೫೮ ॥
ಸಂಭಾಷಮಾಣಾ ಜನನೀ ತದಾನೀಂ
ಹಿಮಾಲಯಂ ಚೈವ ತಥಾ ಚ ಮೇನಾಂ ।
ತಥೈವ ಮೇರುಂ ಮಿತಭಾಷಿಣೀ ತದಾ
ಸಾ ಮಂದರಂ ಪರ್ವತರಾಜಕನ್ಯಾ ।
ಜಗ್ಮುಸ್ತದಾ ತೇನ ಪಥಾ ಚ ಪರ್ವತಾ
ಯಥಾಗತೇನಾಪಿ ವಿಚಕ್ಷಮಾಣಾಃ ॥ ೧೫೯ ॥
ಗತೇಷು ತೇಷು ಸರ್ವೇಷು ಸಖೀಭಿಃ ಪರಿವಾರಿತಾ ।
ತತ್ರೈವ ಚ ತಪಸ್ತೇಪೇ ಪರಮಾರ್ಥಾ ಸತೀ ತದಾ ॥ ೧೬೦ ॥
ತಪಸಾ ತೇನ ಮಹತಾ ತಪ್ತಮಾಸೀಚ್ಚರಾಚರಂ ।
ತದಾ ಸುರಾಸುರಾಃ ಸರ್ವೇ ಬ್ರಹ್ಮಾಣಂ ಶರಣಂ ಗತಾಃ ॥ ೧೬೧ ॥
ದೇವಾ ಊಚುಃ:—
ತ್ವಯಾ ಸೃಷ್ಟಮಿದಂ ಸರ್ವಂ ಜಗದ್ದೇವ ಚರಾಚರಂ ।
ತ್ರಾತುಮರ್ಹಸಿ ದೇವಾನ್ನಸ್ತ್ವದನ್ಯೋ ನೋಪಪದ್ಯತೇ ॥ ೧೬೨ ॥

---

ಬೆಳಸದೆ ಹೊರಟುಹೋಗಿರಿ. ಮದನನನ್ನು ಮಾತ್ರವಲ್ಲದೆ ಈ ಪರ್ವತದ ವನವನ್ನೂ ಸುಟ್ಟು ಹೊರಟುಹೋಗಿರುವ ಆ ಮಹಾದೇವನನ್ನು ನಾನು ತಪಸ್ಸಿನಿಂದಲೇ ಇಲ್ಲಿಗೆ ಬರಮಾಡುವೆನು. ಆ ಸದಾಶಿವನು ಕೇವಲ ತಪೋಬಲದಿಂದಲೇ ಸೇವಿಸಲು ಸಾಧ್ಯನೇ ಹೊರತು ಮತ್ತಾವುದರಿಂದಲೂ ಅಲ್ಲವು. ಆದುದರಿಂದ ನೀವೀ ವಿಷಯವನ್ನು ತಿಳಿದುಕೊಳ್ಳಿರಿ. ನಾನು ಸತ್ಯವಾಗಿ ಹೇಳುತ್ತಿರುವೆನು. ತೆರಳಿರಿ'' ಎಂದು ಹೇಳಿದಳು.

೧೫೯–೬೦. ಮಿತಭಾಷಿಣಿಯಾದ ಆ ಪರ್ವತರಾಜಕುಮಾರಿಯು ತನ್ನ ತಾಯಿ ತಂದೆಗಳನ್ನೂ, ಇತರ ಬಂಧುಗಳಾದ ಮೇರು ಮಂದರರೇ ಮೊದಲಾದವರನ್ನೂ ಕುರಿತು ಈ ಪ್ರಕಾರ ಹೇಳಲು ಅವರೆಲ್ಲರೂ ತಂತಮ್ಮಲ್ಲಿಯೇ ಮಾತನಾಡಿಕೊಂಡು ಬಂದ ದಾರಿಯನ್ನು ಹಿಡಿದು ಹೊರಟುಹೋದರು. ಅವರೆಲ್ಲರೂ ತೆರಳಿದ ತರುವಾಯ ಆ ಮಹಾಪತಿವ್ರತೆಯು ತನ್ನ ಸಖಿಯರೊಡಗೂಡಿ ಆ ಪ್ರದೇಶದಲ್ಲಿಯೇ ತಪಸ್ಸನ್ನು ಮುಂದುವರಿಸಿದಳು.

೧೬೧–೬೪. ಆಕೆಯ ತಪಃಪ್ರಭಾವದಿಂದ ಮೂರು ಲೋಕಗಳೂ ತಪಿಸಿಹೋದುವು. ಆಗ ಸುರಾಸುರರೆಲ್ಲರೂ ಬ್ರಹ್ಮನನ್ನು ಶರಣುಹೋದರು. ದೇವತೆಗಳು ಹೇಳುತ್ತಾರೆ:—''ಎಲೈ ಕಮಲಾಸನನೇ! ನೀನೇ ಸೃಜಿಸಿರುವ ಚರಾಚರಾ

**ಅಸ್ಮಾಕಂ ರಕ್ಷಣೇ ಶಕ್ತ ಇತ್ಯಾಕರ್ಣ್ಯ ವಚಸ್ತದಾ ।**
**ವಿಮೃಶ್ಯಚ ತದಾ ಬ್ರಹ್ಮಾ ಮನಸಾ ಪರಮೇಣ ಹಿ ॥ ೧೬೩ ॥**
**ಗಿರಿಜಾತಪಸೋದ್ಭೂತಂ ದಾವಾಗ್ನಿಂ ಪರಮಂ ಮಹತ್ ।**
**ಜ್ಞಾತ್ವಾ ಬ್ರಹ್ಮಾ ಜಗಾಮಾಶು ಕ್ಷೀರಾಬ್ಧಿಂ ಪರಮಾದ್ಭುತಂ ॥ ೧೬೪ ॥**
**ತತ್ರ ಸುಪ್ತಂ ಸುಪಲ್ಯಂಕೇ ಶೇಷಾಖ್ಯೇ ಚಾತಿಶೋಭನೇ ।**
**ಲಕ್ಷ್ಮ್ಯಾ ಪಾದೋಪಯುಗಲಂ ಸೇವ್ಯಮಾನಂ ನಿರಂತರಂ ॥ ೧೬೫ ॥**
**ದೂರಸ್ಥೇನಾಪಿ ತಾರ್ಕ್ಷ್ಯೇಣ ನತಕಂಧರಧಾರಿಣಾ ।**
**ಸೇವ್ಯಮಾನಂ ಶ್ರಿಯಾ ಕಾಂತ್ಯಾ ಕ್ಷಾಂತ್ಯಾ ವೃತ್ಯಾದಯಾದಿಭಿಃ ॥ ೧೬೬ ॥**
**ನವಶಕ್ತಿಯುತಂ ವಿಷ್ಣುಂ ಪಾರ್ಷದೈಃ ಪರಿವಾರಿತಂ ।**
**ಕುಮುದೋಽಥ ಕುಮುದ್ವಾಂಶ್ಚ ಸನಕಶ್ಚ ಸನಂದನಃ ॥ ೧೬೭ ॥**
**ಸನಾತನೋ ಮಹಾಭಾಗಃ ಪ್ರಸುಪ್ತೋ ವಿಜಯೋಽರಿಜಿತ್ ।**
**ಜಯಂತಶ್ಚ ಜಯತ್ಸೇನೋ ಜಯಶ್ಚೈವ ಮಹಾಪ್ರಭಃ ॥ ೧೬೮ ॥**
**ಸನತ್ಕುಮಾರಃ ಸುತಪಾ ನಾರದಶ್ಚೈವ ತುಂಬುರುಃ ।**
**ಪಾಂಚಜನ್ಯೋ ಮಹಾಶಂಖೋ ಗದಾ ಕೌಮೋದಕೀ ತಥಾ ॥ ೧೬೯ ॥**

---

ತ್ಮಕವಾದ ಈ ಜಗತ್ತನ್ನೂ, ದೇವತೆಗಳಾದ ನಮ್ಮನ್ನೂ ನೀನೇ ಕಾಪಾಡಬೇಕು. ನಿನ್ನನ್ನು ಬಿಟ್ಟರೆ ನಮ್ಮನ್ನೂ, ಈ ಪ್ರಪಂಚವನ್ನೂ ಕಾಪಾಡಲು ಸಮರ್ಥರಾದ ವರು ಮತ್ತಾರೂ ಇರುವುದಿಲ್ಲ." ಈ ಪ್ರಕಾರ ನುಡಿದ ಅವರ ಮಾತುಗಳನ್ನು ಕೇಳಿ ಆ ಬ್ರಹ್ಮದೇವನು ಶ್ರೇಷ್ಠವಾದ ತನ್ನ ಮನಸ್ಸಿನಲ್ಲಿಯೇ ಎಲ್ಲವನ್ನೂ ಆಲೋಚಿಸಿ, ಆ ದಾವಾಗ್ನಿಯು ಪಾರ್ವತಿಯ ತಪಸ್ಸಿನ ಮೂಲಕವಾಗಿಯೇ ಹುಟ್ಟಿರುವುದಾಗಿ ನಿಶ್ಚಯಿಸಿಕೊಂಡು ಬಹು ಜಾಗ್ರತೆಯಾಗಿ ಮಹಾದ್ಭುತವಾದ ಕ್ಷೀರಸಾಗರದ ಬಳಿಗೆ ಬಂದನು.

೧೬೫–೭೦. ಅಲ್ಲಿಯಾದರೋ ಆ ಚತುರ್ಮುಖನು, ಪರಮಮಂಗಳವಾದ ಶೇಷಶಯನದಲ್ಲಿ ಪವಳಿಸಿ, ನಿರಂತರವೂ ಲಕ್ಷ್ಮೀದೇವಿಯಿಂದ ಪಾದಸೇವೆ ಯನ್ನು ಕೈಕೊಳ್ಳುತ್ತಲೂ, ದೂರದಲ್ಲಿಯೇ ಭಕ್ತಿನಮ್ರನಾಗಿ ನಿಂತಿದ್ದ ಗರುಡ ನಿಂದ ಸಂಸೇವಿತನಾಗಿಯೂ, ಶ್ರೀ, ಕಾಂತಿ, ಕ್ಷಾಂತಿ, ವೃತ್ತಿ, ದಯಾ ಮೊದಲಾದ ನವಶಕ್ತಿ ದೇವತೆಗಳಿಂದುಪಸೇವಿತನಾಗಿಯೂ ಇರುವ ಶ್ರೀಮನ್ಮಹಾ ವಿಷ್ಣುವನ್ನು ಕಂಡನು. ಇಷ್ಟೆಯಲ್ಲದೆ ಆ ಸ್ವಾಮಿಯು ಕುಮುದ, ಕುಮು ದ್ವಂತ, ಸನಕ, ಸನಂದನ, ಸನಾತನ, ಮಹಾ ಭಾಗ್ಯಶಾಲಿಯಾದ ಪ್ರಸುಪ್ತ, ಶತ್ರುಗಳನ್ನು ಜಯಿಸಿರುವ ವಿಜಯ, ಜಯಂತ, ಜಯತ್ಸೇನ, ಮಹಾ ತೇಜಸ್ವಿ ಯಾದ ಜಯ, ಸನತ್ಕುಮಾರ, ಮಹಾ ತಪಸ್ವಿಯಾದ ನಾರದ, ತುಂಬುರು, ಮೊದಲಾದ ಭಕ್ತ ಪರಿವಾರದವರಿಂದ ಪರಿವೃತನಾಗಿದ್ದನು. ಪಾಂಚಜನ್ಯ

ಸುದರ್ಶನಂ ತಥಾ ಚಾಪಂ ಶಾರ್ಙ್ಗಂ ಚ ಪರಮಾದ್ಭುತಂ ।
ಏತಾನಿ ವೈ ರೂಪವಂತಿ ದೃಷ್ಟಾನಿ ಪರಮೇಷ್ಠಿನಾ ॥ ೧೭೦ ॥
ವಿಷ್ಣೋಃ ಸಮೀಪೇ ಪರಮಾಮನೋ ಭೃಶಂ
ಸಮೇತ್ಯ ಸರ್ವೇ ಸುರದಾನವಾಸ್ತದಾ ।
ವಿಷ್ಣುಂ ಚಾಹುಃ ಪರಮೇಷ್ಠಿನಾಂ ಪತಿಂ
ತೀರೇ ತದಾನೀಮುದಧೇರ್ಮಹಾತ್ಮನಃ ॥ ೧೭೧ ॥
ತ್ರಾಹಿ ತ್ರಾಹಿ ಮಹಾವಿಷ್ಣೋ ತಪ್ತಾನ್ನಃ ಶರಣಾಗತಾನ್ ।
ತಪಸೋಗ್ರೇಣ ಮಹತಾ ಪಾರ್ವತ್ಯಾಃ ಪರಮೇಣಹಿ ।
ಶೇಷಾಸನೇ ಚೋಪವಿಷ್ಟ ಉವಾಚ ಪರಮೇಶ್ವರಃ ॥ ೧೭೨ ॥
ಯುಷ್ಮಾಭಿಃ ಸಹಿತಶ್ಚಾಪಿ ವ್ರಜಾಮಿ ಪರಮೇಶ್ವರಂ ।
ಮಹಾದೇವಂ ಪ್ರಾರ್ಥಯಾಮೋ ಗಿರಿಜಾಂ ಪ್ರತಿ ವೈ ಸುರಾಃ ॥ ೧೭೩ ॥
ಪಾಣಿಗ್ರಹಾರ್ಥಮಧುನಾ ದೇವದೇವಃ ಪಿನಾಕಧೃಕ್ ।
ಯಥಾ ನೇಷ್ಯತಿ ತತ್ರೈವ ಕರಿಷ್ಯಾಮೋಽಧುನಾ ವಯಂ ॥ ೧೭೪ ॥
ತಸ್ಮಾದ್ವಯಂ ಗಮಿಷ್ಯಾಮೋ ಯತ್ರ ರುದ್ರೋ ಮಹಾಪ್ರಭುಃ ।
ತಪಸೋಗ್ರೇಣ ಸಂಯುಕ್ತೋ ಹ್ಯಾಸ್ತೇ ಪರಮಮಂಗಲಃ ॥ ೧೭೫ ॥

---

ಮಹಾಶಂಖ, ಕೌಮೋದಕೀ ಗದಾ, ಸುದರ್ಶನಚಕ್ರ, ಪರಮಾದ್ಭುತವಾದ ಶಾರ್ಙ್ಗಚಾಪ ಮುಂತಾದ ಆಯುಧಗಳೆಲ್ಲವೂ ಮೂರ್ತಿವೆತ್ತು ಆ ಭಗವಂತನನ್ನು ಪರಮ ಭಕ್ತಿಯಿಂದೋಲೈಸುತ್ತಿದ್ದುವು. ಪರಮೇಷ್ಠಿಯಾದ ಆ ಬ್ರಹ್ಮದೇವ ನಾದರೋ ಇಂತು ವಿರಾಜಿಸುತ್ತಿದ್ದ ಆ ನಾರಾಯಣನನ್ನು ಕಂಡನು.

೧೭೧—೭೫. ಆಗಲಾ ದೇವಾಸುರರೆಲ್ಲರೂ ಆ ಕ್ಷೀರಸಾಗರ ತೀರದಲ್ಲಿಯೇ ನಿಂತು ಪರಮ ಭಕ್ತಿಭರಿತರಾಗಿ ಪರಮೇಷ್ಠಿಗಳೆಲ್ಲರಿಗೂ ಒಡೆಯನಾದ ಮಹಾ ವಿಷ್ಣುವನ್ನು ಕುರಿತು, "ಎಲೈ ಮಹಾ ವಿಷ್ಣುವೇ! ಕಾಪಾಡು ಕಾಪಾಡು!! ಪಾರ್ವತಿಯ ಮಹೋಗ್ರವಾದ ತಪಸ್ಸಿನಿಂದ ತಪ್ತರಾಗಿ ನಿನ್ನನ್ನು ಶರಣು ಹೊಂದಿರುವ ನಮ್ಮನ್ನು ಕಾಪಾಡು" ಎಂದು ಪ್ರಾರ್ಥಿಸಿದರು. ಆಗ ಶೇಷಾಸನ ದಲ್ಲಿ ಕುಳಿತಿದ್ದ ಆ ಪರಮೇಶ್ವರನು, "ಅಯ್ಯಾ ದೇವತೆಗಳಿರಾ! ನಾನೂ ನಿಮ್ಮೊಡನೆ ಆ ಮಹಾದೇವನ ಬಳಿಗೆ ಬರುತ್ತೇನೆ. ಈಗ ನಾವೆಲ್ಲರೂ ದೇವ ದೇವನೂ, ಪಿನಾಕಪಾಣಿಯೂ ಆದ ಆ ಪರಶಿವನನ್ನು, ಪರ್ವತರಾಜ ಪುತ್ರಿ ಯಾದ ಆ ಪಾರ್ವತಿಯನ್ನು ಮದುವೆಯಾಗಬೇಕೆಂದು ಪ್ರಾರ್ಥಿಸೋಣ. ನಾವೆಲ್ಲರೂ ಆ ಮಹಾದೇವನು, ಪಾರ್ವತಿಯು ತಪಸ್ಸು ಮಾಡುತ್ತಿರುವ ಪ್ರದೇಶಕ್ಕೇ ಹೋಗುವಂತೆ ಮಾಡೋಣ. ಆ ಮಹಾಪ್ರಭುವು ತಪಸ್ಸು ಮಾಡುತ್ತಿರುವ ಸ್ಥಳಕ್ಕೆ ಹೋಗೋಣ, ನಡೆಯಿರಿ" ಎಂದು ಹೇಳಿದನು.

ವಿಷ್ಣೋಸ್ತದ್ವಚನಂ ಶ್ರುತ್ವಾ ಊಚುಃ ಸರ್ವೇ ಸುರಾಸುರಾಃ ।
ನ ಯಾಸ್ಯಾಮೋ ವಯಂ ಸರ್ವೇ ವಿರೂಪಾಕ್ಷಂ ಮಹಾಪ್ರಭಂ ॥೧೭೬॥
ಯದಾ ದಗ್ಧಃ ಪುರಾ ತೇನ ಮದನೋ ದುರತಿಕ್ರಮಃ ।
ತಥೈವ ಧಕ್ಷ್ಯತ್ಯಸ್ಮಾಕಂ ನಾತ್ರ ಕಾರ್ಯಾ ವಿಚಾರಣಾ ॥ ೧೭೭ ॥
ಪ್ರಹಸ್ಯ ಭಗವಾನ್ವಿಷ್ಣುರುವಾಚ ಪರಮೇಶ್ವರಃ ।
ಮಾ ಭಯಂ ಕ್ರಿಯತಾಂ ಸರ್ವೈಃ ಶಿವರೂಪೀ ಸದಾಶಿವಃ ॥ ೧೭೮ ॥
ಸ ನ ಧಕ್ಷ್ಯತಿ ಸರ್ವೇಷಾಂ ದೇವಾನಾಂ ಭಯನಾಶನಃ ।
ತಸ್ಮಾದ್ಭವದ್ಭಿರ್ಗಂತವ್ಯಂ ಮಯಾ ಸಾರ್ಧಂ ವಿಚಕ್ಷಣಾಃ ॥ ೧೭೯ ॥
ಶಂಭುಂ ಪುರಾಣಂ ಪುರುಷಂ ಹ್ಯಧೀಶಂ
ವರೇಣ್ಯರೂಪಂ ಚ ಪರಂ ಪರಾಣಾಂ ।
ತಪೋ ಜುಷಾಣಂ ಪರಮಾರ್ಥರೂಪಂ
ಪರಾತ್ಪರಂ ತಂ ಶರಣಂ ವ್ರಜಾಮಿ ॥ ೧೮೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಪಾರ್ವತೀ ತಪಶ್ಚರ್ಯಾ ವರ್ಣನಂ" ನಾಮ ಏಕವಿಂಶತಿತಮೋಽಧ್ಯಾಯಃ

---

೧೭೬-೮೦. ಈ ರೀತಿ ನುಡಿದ ಆ ಮಹಾವಿಷ್ಣುವಿನ ಮಾತುಗಳನ್ನು ಕೇಳಿ ದೇವತೆಗಳೆಲ್ಲರೂ "ಪ್ರಭುವೇ! ವಿರೂಪಾಕ್ಷನಾದ ಆ ಪರಮೇಶ್ವರನು ತಪಸ್ಸು ಮಾಡುತ್ತಿರುವೆಡೆಗೆ ನಾವು ಬರುವುದಿಲ್ಲ. ಆಗ ಯಾರಿಗೂ ಮೀರಲಸದಳನಾದ ಮನ್ಮಥನು ಆತನಿಂದ ಹಾಗೆ ದಗ್ಧನಾಗಿಹೋದನು. ಈಗ ನಾವೇನಾದರೂ ಅಲ್ಲಿಗೆ ಹೋದುದೇ ಆದರೆ ಹಾಗೆಯೇ ನಮ್ಮನ್ನೂ ದಹಿಸುವನೆಂಬುದರಲ್ಲಿ ಸಂಶಯ ವಿಲ್ಲವು" ಎಂದರು. ಮಹಾವಿಷ್ಣುವು ಈ ಮಾತುಗಳನ್ನು ಕೇಳಿ ಗಟ್ಟಿಯಾಗಿ ನಕ್ಕು, "ಅಯ್ಯಾ! ಹೆದರಬೇಡಿರಿ. ಸದಾಶಿವನು ಮಂಗಳರೂಪಿಯು. ಆತನೇ ದೇವತೆಗಳಾದ ನಿಮ್ಮೆಲ್ಲರ ಭಯವನ್ನೂ ನಿವಾರಣೆಮಾಡುವ ಸ್ವಾಮಿಯು. ಆತನು ನಿಮ್ಮನ್ನೆಂದಿಗೂ ಸುಡುವುದಿಲ್ಲ. ಆದುದರಿಂದ ಕುಶಲರಾದ ನೀವೆಲ್ಲರೂ ನನ್ನೊಡನೆ ಬನ್ನಿರಿ. ನಾನು ಶಂಭುವೂ, ಪುರಾಣಪುರುಷನೂ, ಅಧೀಶ್ವರನೂ, ವರೇಣ್ಯರೂಪನೂ, ಉತ್ತಮೋತ್ತಮನೂ, ತಪಸ್ಸನ್ನು ಮಾಡುತ್ತಿರುವವನೂ, ಪರಮಾರ್ಥರೂಪನೂ, ಪರಾತ್ಪರನೂ ಆದ ಆ ಮಹಾದೇವನನ್ನು ಶರಣು ಹೊಗುತ್ತೇನೆ" ಎಂದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಪಾರ್ವತಿಯ ತಪಶ್ಚರ್ಯೆ" ಎಂಬ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ದ್ವಾವಿಂಶೋಽಧ್ಯಾಯಃ

### ಪಾರ್ವತ್ಯೈ ಶಂಕರೇಣ ಸ್ವಸ್ವರೂಪದರ್ಶನ ವರ್ಣನಂ

ಸೂತ ಉವಾಚ :—

ಏವಮುಕ್ತಾಸ್ತದಾ ದೇವಾ ವಿಷ್ಣುನಾ ಪರಮೇಷ್ಠಿನಾ ।
ಜಗ್ಮುಃ ಸರ್ವೇ ಮಹೇಶಂ ಚ ದ್ರಷ್ಟುಕಾಮಾಃ ಪಿನಾಕಿನಂ ॥ ೧ ॥
ಪರೇ ಪಾರೇ ಸಮುದ್ರಸ್ಯ ಪರಮೇಣ ಸಮಾಧಿನಾ ।
ಯೋಗಪೀಠೇ ಸ್ಥಿತಂ ಶಂಭುಂ ಗಣೈಶ್ಚ ಪರಿವಾರಿತಂ ॥ ೨ ॥
ಯಜ್ಞೋಪವೀತವಿಧಿನಾ ಉರಸಾ ಬಿಭ್ರತಂ ವೃತಂ ।
ವಾಸುಕಿಂ ಸರ್ಪರಾಜಂ ಚ ಕಂಬಲಾಶ್ವತರೌ ತಥಾ ॥ ೩ ॥
ಕರ್ಣದ್ವಯೇ ಧಾರಯಂತಂ ತಥಾ ಕರ್ಕೋಟಕೇನಹಿ ।
ಪುಲಹೇನ ಚ ಬಾಹುಭ್ಯಾಂ ಧಾರಯಂತಂ ಚ ಕಂಕಣೇ ॥ ೪ ॥
ಸನ್ನೂಪುರೇ ಶಂಖಕ ಪದ್ಮಕಾಭ್ಯಾಂ
ಸಂಧಾರಯಂತಂ ಚ ವಿರಾಜಮಾನಂ ।
ಕರ್ಪೂರಗೌರಂ ಶಿತಕಂಠಮುದ್ಭುತಂ
ವೃಷಾನ್ವಿತಂ ದೇವವರಂ ದದರ್ಶುಃ ॥ ೫ ॥

---

### ಕನ್ನಡದ ಅನುವಾದ

#### ಪರಶಿವನು ಪಾರ್ವತಿಗೆ ನಿಜರೂಪದಿಂದ ಪ್ರತ್ಯಕ್ಷನಾದುದು

೧. ಸೂತಮಹರ್ಷಿಯು ಹೇಳುತ್ತಾನೆ:—ಪರಮೇಷ್ಠಿಯಾದ ಶ್ರೀಮನ್ಮಹಾವಿಷ್ಣುವು ಈ ಪ್ರಕಾರವಾಗಿ ಹೇಳಲು, ದೇವತೆಗಳೆಲ್ಲರೂ ಪಿನಾಕಪಾಣಿಯಾದ ಆ ಪರಮೇಶ್ವರನನ್ನು ಸಂದರ್ಶಿಸಲು ಹೊರಟರು.

೨–೫. ಆ ಸಮಯದಲ್ಲಿಯಾದರೋ ಆ ಪರಮೇಶ್ವರನು ಕ್ಷೀರಸಮುದ್ರದ ಆಚಿನ ದಡದಲ್ಲಿ ಶಿವಗಣಗಳಿಂದ ಪರಿವಾರಿತನಾಗಿ ಶ್ರೇಷ್ಠವಾದ ಸಮಾಧಿಯನ್ನು ಹೊಂದಿ ಯೋಗಪೀಠದಲ್ಲಿ ಕುಳಿತು ತಪಸ್ಸುಮಾಡುತ್ತಿದ್ದನು. ಆತನು ಆಗ ಯಜ್ಞೋಪವೀತವನ್ನೆಂತೋ ಅಂತು ಸರ್ಪರಾಜನಾದ ವಾಸುಕಿಯನ್ನು ಉರಸ್ಸಿನಲ್ಲಿ ಧರಿಸಿದ್ದನು. ಎರಡು ಕಿವಿಗಳಲ್ಲಿಯೂ ಕಂಬಲಾಶ್ವತರಗಳೆಂಬ ಸರ್ಪಗಳನ್ನು ಕರ್ಣಕುಂಡಲಗಳನ್ನಾಗಿಯೂ, ಕರ್ಕೋಟಕ ಪುಲಹಗಳೆಂಬ ಮಹಾಸರ್ಪಗಳೆರಡನ್ನೂ ಬಾಹುಜಿಗೆಗಳನ್ನಾಗಿಯೂ, ಶಂಖಕ ಪದ್ಮಕಗಳೆಂಬ ನಾಗಗಳನ್ನು ಕಾಲಂದುಗೆಗಳನ್ನಾಗಿಯೂ ಧರಿಸಿ, ಕರ್ಪೂರದಂತೆ ಗೌರವರ್ಣವುಳ್ಳವನಾಗಿ ಬೆಳಗುತ್ತಿದ್ದನು. ಇಂತು ವೃಷಭಾನ್ವಿತನಾಗಿಯೂ, ದೇವವರನಾಗಿಯೂ ಇರುವ ಆ ನೀಲಕಂಠನನ್ನು ದೇವತೆಗಳೆಲ್ಲರೂ ಕಂಡರು.

ತದಾ ಬ್ರಹ್ಮಾ ಚ ವಿಷ್ಣುಶ್ಚ ಋಷಯೋ ದೇವದಾನವಾಃ ।
ತುಷ್ಟುವುರ್ವಿವಿಧೈಃ ಸೂಕ್ತೈರ್ವೇದೋಪನಿಷದನ್ವಿತೈಃ ॥ ೬ ॥

ಬ್ರಹ್ಮೋವಾಚ :—

ನಮೋ ರುದ್ರಾಯ ದೇವಾಯ ಮದನಾಂತಕರಾಯ ಚ ।
ಭರ್ಗಾಯ ಭೂರಿಭಾಗ್ಯಾಯ ತ್ರಿನೇತ್ರಾಯ ತ್ರಿವಿಷ್ಟಪೇ ॥ ೭ ॥
ಶಿಪಿವಿಷ್ಟಾಯ ಭೀಮಾಯ ಶೇಷಶಾಯಿನ್ನಮೋಸ್ತುತೇ ।
ತ್ರ್ಯಂಬಕಾಯ ಜಗದ್ಧಾತ್ರೇ ವಿಶ್ವರೂಪಾಯ ವೈ ನಮಃ ॥ ೮ ॥
ತ್ವಂ ಧಾತಾ ಸರ್ವಲೋಕಾನಾಂ ಪಿತಾ ಮಾತಾ ತ್ವಮೀಶ್ವರಃ ।
ಕೃಪಯಾ ಪರಯಾ ಯುಕ್ತಃ ಪಾಹ್ಯಸ್ಮಾಂಸ್ತ್ವಂ ಮಹೇಶ್ವರ ॥ ೯ ॥
ಇತ್ಥಂ ಸ್ತುವತ್ಸು ದೇವೇಷು ನಂದೀ ಪ್ರೋವಾಚ ತಾನ್ಪ್ರತಿ ।
ಕಿಮರ್ಥಮಾಗತಾ ಯೂಯಂ ಕಿಂ ವಾ ಮನಸಿ ವರ್ತತೇ ॥ ೧೦ ॥
ತೇ ಪ್ರೋಚುರ್ದೇವಕಾರ್ಯಾರ್ಥಂ ವಿಜ್ಞಪ್ತುಂ ಶಂಭುಮಾಗತಾಃ ।
ವಿಜ್ಞಪ್ತೇ ನಂದಿನಾ ತೇನ ಶೈಲಾದೇನ ಮಹಾತ್ಮನಾ ।
ಹ್ಯವಸ್ಥಿತೋ ಮಹಾದೇವಃ ಸುರಕಾರ್ಯಾರ್ಥಸಿದ್ಧಯೇ ॥ ೧೧ ॥

---

೬. ಆಗ ಬ್ರಹ್ಮನೂ, ವಿಷ್ಣುವೂ, ಋಷಿಗಳೂ, ದೇವದಾನವರೂ ವೇದೋಪನಿಷತ್ತುಗಳ ಅನೇಕ ಸೂಕ್ತಗಳಿಂದಾಸ್ವಾಮಿಯನ್ನು ಸ್ತುತಿಸಿ ಸಂತೋಷಗೊಳಿಸಿದರು.

೭–೧೦. ಬ್ರಹ್ಮನು ಹೇಳುತ್ತಾನೆ:—"ಓ ಸ್ವಾಮಿಯೇ! ಮದನಸಂಹಾರಿಯಾದ ಓ ರುದ್ರಮೂರ್ತಿಯೇ!! ನಿನಗೆ ನಮಸ್ಕಾರವು. ಭರ್ಗನೂ, ಅಪಾರ ಭಾಗ್ಯಶಾಲಿಯೂ, ತ್ರಿಣೇತ್ರನೂ, ಮೂರು ಲೋಕಗಳಲ್ಲಿಯೂ ಶಿಪಿವಿಷ್ಟನೆಂದೂ, ಭೀಮನೆಂದೂ, ಶೇಷಶಯನನೆಂದೂ ಹೆಸರಾಗಿರುವ ನಿನಗೆ ನಮೋ ನಮಃ! ತ್ರ್ಯಂಬಕನೂ, ಜಗತ್ತನ್ನೇ ಧರಿಸಿರುವವನೂ, ವಿಶ್ವರೂಪನೂ ಆಗಿರುವ ನಿನಗೆ ನಮಸ್ಕಾರವು! ಎಲೈ ಪರಮೇಶ್ವರನೇ! ಸಮಸ್ತ ಲೋಕಗಳಿಗೂ ನೀನೇ ದಾತೃವಾದವನು. ತಾಯಿಯೂ, ತಂದೆಯೂ, ಒಡೆಯನೂ ನೀನೇ! ಮಹೇಶ್ವರ! ಇಂತಹ ಅನಂತಮಹಿಮನಾದ ನೀನು ಪರಮಕೃಪೆಯಿಂದ ನಮ್ಮನ್ನೀಗ ಸಂರಕ್ಷಿಸಬೇಕು!" ಹೀಗೆ ಬ್ರಹ್ಮಾದಿ ದೇವತೆಗಳೆಲ್ಲರೂ ಆ ಸ್ವಾಮಿಯನ್ನು ಸ್ತುತಿಸುತ್ತಿರಲು ಶಿವಕಿಂಕರನಾದ ನಂದಿಯು ಅವರನ್ನು ಕುರಿತು, "ಅಯ್ಯಾ ದೇವತೆಗಳಿರಾ! ಈಗ ನೀವು ಬಂದುದೇನು? ನಿಮ್ಮ ಮನೋಭೀಷ್ಟವಾದರೂ ಯಾವುದು?" ಎಂದು ಕೇಳಿದನು.

೧೧–೧೪. ಆಗಲವರು, "ಎಲೈ ನಂದಿಯೇ! ನಾವು ದೇವತೆಗಳ ಕಾರ್ಯಸಿದ್ಧಿಗಾಗಿ ಶ್ರೀ ಶಂಭುಶಂಕರನನ್ನು ಸಂದರ್ಶಿಸಲು ಬಂದಿರುವೆವು" ಎಂದು

ಬ್ರಹ್ಮಾದಯಃ ಸುರಗಣಾಃ ಸುರಸಿದ್ಧಸಂಘಾ
ಸ್ತ್ವಾಂ ದೃಷ್ಟುಮೇವ ಸುರವರ್ಯ ವಿಶೇಷಯಂತಿ ।
ಕಾರ್ಯಾರ್ಥಿನೋಽಸುರವರೈಃ ಪರಿಭರ್ತ್ಸ್ಯಮಾನಾ
ಅಭ್ಯಾಗತಾಃ ಸಪದಿ ಶತ್ರುಭಿರರ್ದಿತಾಶ್ಚ ॥ ೧೨ ॥
ತಸ್ಮಾತ್ತ್ವಯಾ ಹಿ ದೇವೇಶ ತ್ರಾತವ್ಯಾಶ್ಚಾಧುನಾ ಸುರಾಃ ।
ಏವಂ ತೇನ ತದಾ ಶಂಭುರ್ವಿಜ್ಞಪ್ತೋ ನಂದಿನಾ ದ್ವಿಜಾಃ ॥ ೧೩ ॥
ಶನೈಃ ಶನೈರುಪರಮಚ್ಛಂಭುಃ ಪರಮಕೋಪನಃ ।
ಸಮಾಧೇಃ ಪರಮಾತ್ಮಾಽಸಾವುವಾಚ ಪರಮೇಶ್ವರಃ ॥ ೧೪ ॥

ಮಹಾದೇವ ಉವಾಚ :—

ಕಸ್ಮಾದ್ಯೂಯಂ ಮಹಾಭಾಗಾ ಹ್ಯಾಗತಾ ಮತ್ಸಮೀಪಗಾಃ ।
ಬ್ರಹ್ಮಾದಯೋ ಹ್ಯಮೀ ದೇವಾ ಬ್ರೂತ ಕಾರಣಮದ್ಯ ವೈ ॥ ೧೫ ॥
ತದಾ ಬ್ರಹ್ಮಾ ಹ್ಯುವಾಚೇದಂ ಸುರಕಾರ್ಯಂ ಮಹತ್ತರಂ ।
ತಾರಕೇಣ ಕೃತಂ ಶಂಭೋ ದೇವಾನಾಂ ಪರಮಾದ್ಭುತಂ ॥ ೧೬ ॥
ಕಷ್ಟಾತ್ಕಷ್ಟತರಂ ದೇವ ತದ್ವಿಜ್ಞಪ್ತುಮಿಹಾಗತಾಃ ।
ಹೇ ಶಂಭೋ ತವಪುತ್ರೇಣ ಔರಸೇನ ಹತೋ ಭವೇತ್ ।
ತಾರಕೋ ದೇವಶತ್ರುಶ್ಚ ನಾನ್ಯಥಾ ಮಮಭಾಷಿತಂ ॥ ೧೭ ॥

---

ಹೇಳಿದರು. ಇದನ್ನು ಕೇಳಿ ನಂದಿಯು ಧ್ಯಾನದಲ್ಲಿರುವ ಮಹಾದೇವನಿಗೆ ದೇವತೆಗಳ ಕಾರ್ಯಸಿದ್ಧಿಗೋಸುಗ ಅವರೆಲ್ಲರೂ ಅಲ್ಲಿಗೈತಂದಿರುವ ವಿಷಯ ವನ್ನು ಅರಿಕೆಮಾಡಿದನು :—" ಎಲೈ ಸುರಶ್ರೇಷ್ಠನಾದ ಮಹಾದೇವನೇ! ಬ್ರಹ್ಮಾದಿ ದೇವತಾ ಸಮೂಹಗಳೂ, ಸುರಸಿದ್ಧಸಮೂಹಗಳೂ ಶತ್ರುಗಳಾದ ದಾನವೋತ್ತಮರಿಂದ ಪೀಡಿತರಾಗಿ, ತಮ್ಮ ಕಾರ್ಯವನ್ನು ಆಗಮಾಡಿಕೊಳ್ಳ ಲೋಸುಗ ಇಲ್ಲಿಗೆ ಬಂದು ನಿನ್ನನ್ನು ಸಂಪ್ರಾರ್ಥಿಸುತ್ತಿರುವರು. ಆದುದರಿಂದೆಲೈ ದೇವೇಶ್ವರನೇ! ಈಗ ನೀನು ಇವರೆಲ್ಲರನ್ನೂ ಸಂರಕ್ಷಿಸಿ ಅನುಗ್ರಹಿಸಬೇಕು." ಎಲೈ ಮುನಿಗಳಿರಾ! ನಂದಿಯು ಈ ಪ್ರಕಾರವಾಗಿ ಅರಿಕೆಮಾಡಲು ಪರಮ ಕೋಪನನೂ, ಪರಮಾತ್ಮನೂ ಆದ ಆ ಪರಮೇಶ್ವರನು ಮೆಲ್ಲಮೆಲ್ಲಗೆ ಧ್ಯಾನ ದಿಂದ ಬಹಿರ್ಮುಖನಾಗಿ ಸಮಾಧಿನಿಷ್ಠನಾಗಿಯೇ ಹೀಗೆಂದನು.

೧೫–೨೦. ಮಹಾದೇವನು ಹೇಳುತ್ತಾನೆ:—" ಎಲೈ ಮಹಾಭಾಗರೇ! ಬ್ರಹ್ಮನೇ ಮೊದಲಾದ ನೀವೆಲ್ಲರೂ ನನ್ನ ಬಳಿಗೇಕೆ ಬಂದಿರಿ? ಅದನ್ನು ಹೇಳಿರಿ." ಆಗ ಬ್ರಹ್ಮನು ದೇವತೆಗಳಿಗೆ ಆಗಬೇಕಾಗಿದ್ದ ಮಹತ್ಕಾರ್ಯವನ್ನು ಈ ರೀತಿ ಹೇಳಿದನು. "ಎಲೈ ಶಂಭುವೇ! ತಾರಕಾಸುರನು ದೇವತೆಗಳೆಲ್ಲರಿಗೂ ವರ್ಣಿಸ ಲಸದಳವಾದ ಕಷ್ಟಗಳನ್ನು ಕೊಡುತ್ತಿರುವನು. ಅದನ್ನು ಅರಿಕೆಮಾಡಲು

ತಸ್ಮಾತ್ತ್ವಯಾ ಗಿರಿಜಾ ದೇವ ಶಂಭೋ
ಗೃಹೀತವ್ಯಾ ಪಾಣಿನಾ ದಕ್ಷಿಣೇನ ।
ಪಾಣಿಗ್ರಹೇಣೈವ ಮಹಾನುಭಾವ
ದತ್ತಾ ಗಿರೀಂದ್ರೇಣ ಚ ತಾಂ ಕುರುಷ್ವ ॥ ೧೮ ॥
ಬ್ರಹ್ಮಣೋ ಹಿ ವಚಃ ಶ್ರುತ್ವಾ ಪ್ರಹಸನ್ನಬ್ರವೀಚ್ಛಿವಃ ।
ಯದಾ ಮಯಾ ಕೃತಾ ದೇವೀ ಗಿರಿಜಾ ಸರ್ವಸುಂದರೀ ॥ ೧೯ ॥
ತದಾ ಸರ್ವೇ ಸುರೇಂದ್ರಾಶ್ಚ ಋಷಯೋ ಮುನಯಸ್ತಥಾ ।
ಸ ಕಾಮಾಶ್ಚ ಭವಿಷ್ಯಂತಿ ಅಕ್ಷಮಾಶ್ಚ ಪರೇ ಪಥಿ ॥ ೨೦ ॥
ಮದನೋಹಿ ಮಯಾ ದಗ್ಧಃ ಸರ್ವೇಷಾಂ ಕಾರ್ಯಸಿದ್ಧಯೇ ।
ಮಯಾ ಹ್ಯಧಿಕೃತಾ ತನ್ವೀ ಗಿರಿಜಾ ಚ ಸುಮಧ್ಯಮಾ ॥ ೨೧ ॥
ತದಾನೀಮೇವ ಭೋ ದೇವಾಃ ಪಾರ್ವತೀ ಮದನಂ ಚ ಸಾ ।
ಜೀವಯಿಷ್ಯತಿ ಭೋ ಬ್ರಹ್ಮನ್ನತ್ರ ಕಾರ್ಯವಿಚಾರಣಾ ॥ ೨೨ ॥
ಏವಂ ವಿಮೃಶ್ಯ ಭೋ ದೇವಾಃ ಕಾರ್ಯಾಕಾರ್ಯವಿಚಾರಣಾ ।
ಮದನೇನೈವ ದಗ್ಧೇನ ಸುರಕಾರ್ಯಂ ಮಹತ್ಕೃತಂ ॥ ೨೩ ॥
ಯೂಯಂ ಸರ್ವೇ ಚ ನಿಷ್ಕಾಮಾ ಮಯಾ ನಾಸ್ತ್ಯತ್ರ ಸಂಶಯಃ ।
ಯಥಾಹಂ ಚ ಸುರಾಃ ಸರ್ವೇ ತಥಾ ಯೂಯಂ ಪ್ರಯತ್ನತಃ ॥ ೨೪ ॥

---

ನಾವೆಲ್ಲರೂ ಈಗ ನಿನ್ನ ಸನ್ನಿಧಿಗೆ ಬಂದಿರುವೆವು. ಎಲೈ ಸ್ವಾಮಿಯೆ, ಶಂಭುವೇ! ದೇವ ಶತ್ರುವಾದ ಆ ತಾರಕಾಸುರನು ನಿನ್ನ ಸ್ವಂತ ಮಗನಿಂದಲೇ ಮಡಿಯುತ್ತಾನೆ. ನನ್ನ ಈ ಮಾತು ಸಟೆಯಲ್ಲವು. ಎಲೈ ಶಂಭುವೇ! ಈಗ ಗಿರಿರಾಜನು ನಿನಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡಿಕೊಡುವವನಾಗಿರುವನು. ಆದುದರಿಂದ ನೀನು ಆ ಗಿರಿಜಾದೇವಿಯ ಪಾಣಿಗ್ರಹಣವನ್ನೆಸಗುವವನಾಗು.'' ಈ ರೀತಿ ನುಡಿದ ಬ್ರಹ್ಮದೇವನ ಮಾತನ್ನು ಕೇಳಿ ಶಿವನು ನಗುತ್ತ ''ಎಲೈ ಬ್ರಹ್ಮನೇ! ನಾನು ಸರ್ವಾಂಗಸುಂದರಿಯಾದ ಆ ಗಿರಿಜೆಯನ್ನು ವರಿಸಿದೊಡನೆಯೇ ಈ ಸುರಶ್ರೇಷ್ಠರೂ, ಋಷಿಗಳೂ, ಮುನಿಗಳೂ ಎಲ್ಲರೂ ಕಾಮಸಹಿತರಾಗಿ ಮೋಕ್ಷ ಮಾರ್ಗವನ್ನು ಸಾಧಿಸಲು ಸಮರ್ಥರಾಗದೆ ಹೋಗುತ್ತಾರೆ.

೨೧–೨೭. ಅಯ್ಯಾ! ಹಿಂದೆ ನಾನು ದೇವತೆಗಳೆಲ್ಲರ ಕಾರ್ಯಸಿದ್ಧಿಗಾಗಿಯೇ ಮನ್ಮಥನನ್ನು ದಹಿಸಿದೆನು. ಈಗಲಾದರೋ ನಾನು ಸುಮಧ್ಯಮೆಯಾದ ಆ ಗಿರಿಜಾ ಸುಂದರಿಯನ್ನು ಮದುವೆಯಾದೊಡನೆಯೇ ಅವಳು ಆ ಮದನನ್ನು ಖಂಡಿತವಾಗಿಯೂ ಬದುಕಿಸುತ್ತಾಳೆಯೆಂಬುದರಲ್ಲಿ ಸಂಶಯವೇ ಇರುವುದಿಲ್ಲವು. ಆದುದರಿಂದೆಲೈ ದೇವತೆಗಳಿರಾ! ನೀವೀಗ ಮಾಡತಕ್ಕ ಕಾರ್ಯವಾವುದು? ಮಾಡಬಾರದುದಾವುದು? ಎಂಬುದನ್ನು ಚೆನ್ನಾಗಿ ವಿಚಾರಮಾಡಿರಿ. ಸುಟ್ಟು

ತಪಃ ಪರಮಸಂಯುಕ್ತಾಃ ಕಾರಯಾಮಃ ಸುದುಷ್ಕರಂ ।
ಪರಮಾನಂದ ಸಂಯುಕ್ತಾಃ ಸುಖಿನಃ ಸರ್ವಏವಹಿ ॥ ೨೫ ॥
ಯೂಯಂ ಸಮಾಧಿನಾ ತೇನ ಮದನೇನ ಚ ವಿಸ್ಮೃತಂ ।
ಕಾಮೋಹಿ ನರಕಾಯೈವ ತಸ್ಮಾತ್ಕ್ರೋಧೋಭಿ ಜಾಯತೇ ॥ ೨೬ ॥
ಕ್ರೋಧಾದ್ಭವತಿ ಸಂಮೋಹಃ ಸಂಮೋಹಾದ್ಭ್ರಮತೇ ಮನಃ ।
ಕಾಮಕ್ರೋಧೌ ಪರಿತ್ಯಜ್ಯ ಭವದ್ಭಿಃ ಸುರಸತ್ತಮೈಃ ।
ಸರ್ವೈರೇವ ಚ ಮಂತವ್ಯಂ ಮದ್ವಾಕ್ಯಂ ನಾನ್ಯಥಾ ಕ್ವಚಿತ್ ॥ ೨೭ ॥
ಏವಂ ವಿಶ್ರಾವ್ಯ ಭಗವಾನ್ ಸಹಿ ದೇವೋ ವೃಷಧ್ವಜಃ ।
ಸುರಾನ್ ಪ್ರಬೋಧಯಾಮಾಸ ತಥಾ ಋಷಿಗಣಾನ್ಮುನೀನ್ ॥ ೨೮ ॥
ತೂಷ್ಣೀಂ ಭೂತೋಽಭವಚ್ಛಂಭುರ್ಧ್ಯಾನಮಾಶ್ರಿತ್ಯ ವೈ ಪುನಃ ।
ಆಸ್ತೇ ಪುರಾ ಯಥಾವಚ್ಚ ಗಣೈಶ್ಚ ಪರಿವಾರಿತಃ ॥ ೨೯ ॥
ಧ್ಯಾನಸ್ಥಿತಂ ಚ ತಂ ದೃಷ್ಟ್ವಾ ನಂದೀ ಸರ್ವಾನ್ವಿಸೃಜ್ಯ ತಾನ್ ।
ಸ ಬ್ರಹ್ಮೇಂದ್ರಾನ್ವಿಬುಧಾನುವಾಚ ಪ್ರಹಸನ್ನಿವ ॥ ೩೦ ॥

---

ಹೋದ ಆ ಮದನನೇ ದೇವತೆಗಳಾದ ನಿಮ್ಮ ಕಾರ್ಯವನ್ನು ಬಹಳ ಮಟ್ಟಿಗೆ ಆಗಮಾಡಿರುವನು. ನೀವೆಲ್ಲರೂ ಈಗ ನಿಷ್ಕಾಮರಾಗಿರುವರೆಂಬುದರಲ್ಲಿ ನನಗಾವ ಸಂದೇಹವೂ ಇರುವುದಿಲ್ಲವು. ಈಗ ನೀವೂ ನನ್ನಂತೆಯೇ ಪ್ರಯತ್ನ ಪೂರ್ವಕವಾಗಿ ತಪಸ್ಸನ್ನುಮಾಡಿರಿ. ಹೀಗೆ ನಾವೆಲ್ಲರೂ ತಪಸ್ಸುಮಾಡಿ ಪರಮಾನಂದಭರಿತರೂ, ಸುಖಿಗಳೂ ಆಗೋಣ. ನೀವು ಸಮಾಧಿ ಸಂಪನ್ನರಾದುದಾದರೆ ಆ ಮದನನ್ನೇ ಮರೆತುಬಿಡುವಿರಿ. ಅಯ್ಯಾ ದೇವತೆಗಳಿರಾ! ಕಾಮವೆಂಬುದು ನರಕವನ್ನೇ ಉಂಟುಮಾಡುತ್ತದೆ. ಕೇಳಿರಿ; ಕಾಮದಿಂದ ಕ್ರೋಧವು ಹುಟ್ಟುತ್ತದೆ. ಕ್ರೋಧದಿಂದ ಸಂಮೋಹವೂ (ಚಿತ್ತ ಭ್ರಾಂತಿಯೂ)ಹುಟ್ಟುತ್ತದೆ. ಅದರಿಂದ ಮನಸ್ಸು ಒಂದೆಡೆನಿಲ್ಲದೆ ಎತ್ತೆತ್ತಲೂ ಅಲೆದಾಡುತ್ತದೆ. ಆದುದರಿಂದ ಸುರಸತ್ತಮರಾದ ನೀವೆಲ್ಲರೂ ಈ ಕಾಮಕ್ರೋಧಗಳನ್ನು ತೊರೆದು ಬಿಡಬೇಕು. ಈ ನನ್ನ ಮಾತು ಎಂದಿಗೂ ಸುಳ್ಳಾಗುವುದಿಲ್ಲವೆಂಬುದನ್ನು ನೀವೆಲ್ಲರೂ ತಿಳಿಯಬೇಕು'' ಎಂದು ಹೇಳಿದನು.

೨೮–೩೧. ಎಲೈ ಶೌನಕಾದಿ ಮುನಿಗಳಿರಾ! ಷಡ್ಗುಣೈಶ್ವರ್ಯ ಸಂಪನ್ನನೂ, ಸಕಲಲೋಕೇಶ್ವರನೂ ಆದ ಆ ವೃಷಭಧ್ವಜನು ಈರೀತಿ ಹೇಳಿ ಆ ದೇವತೆಗಳನ್ನೂ ಅಲ್ಲಿದ್ದ ಋಷಿ ಸಮೂಹಗಳನ್ನೂ ಎಚ್ಚರಗೊಳಿಸಿ ತರುವಾಯ ಮತ್ತೆ ಹಿಂದಿನಂತೆಯೇ ಶಿವಗಣಗಳಿಂದ ಪರಿವಾರಿತನಾಗಿ ತಪೋಮಗ್ನನಾಗಿ ಮೌನವನ್ನಾಶ್ರಯಿಸಿದನು. ಈರೀತಿ ತನ್ನ ಪ್ರಭುವು ಧ್ಯಾನಮಗ್ನನಾದುದನ್ನು ನೋಡಿ ನಂದಿಯೂ ಬ್ರಹ್ಮೇಂದ್ರಾದಿ ಸಮಸ್ತದೇವತೆಗಳನ್ನೂ ಅಲ್ಲಿ ನಿಲ್ಲಗೊಡದೆ

ಯಥಾಗತೇನ ಮಾರ್ಗೇಣ ಗಚ್ಛಧ್ವಂ ಮಾ ವಿಲಂಬಥ ।
ತಥೇತಿಮುಕ್ತ್ವಾ ತೇ ಸರ್ವೇ ಸ್ವಂ ಸ್ವಂ ಸ್ಥಾನಮಥಾವ್ರಜನ್ ॥ ೩೧ ॥
ಗತೇಷು ತೇಷು ಸರ್ವೇಷು ಸಮಾಧಿಸ್ಥೋಽಭವದ್ಭವಃ ।
ಆತ್ಮಾನಮಾತ್ಮನಾ ಕೃತ್ವಾ ಆತ್ಮನ್ಯೇವ ವಿಚಿಂತಯನ್ ॥ ೩೨ ॥
ಪರಾತ್ಪರತರಂ ಸ್ವಚ್ಛಂ ನಿರ್ಮಲಂ ನಿರವಗ್ರಹಂ ।
ನಿರಂಜನಂ ನಿರಾಭಾಸಂ ಯಸ್ಮಿನ್ಮುಹ್ಯತಿ ಸೂರಯಃ ॥ ೩೩ ॥

ಭಾನುರ್ನಭಾತ್ಯಗ್ನಿರಥೋ ಶಶೀವಾ
ನ ಜ್ಯೋತಿರೇವಂ ನ ಚ ಮಾರುತೋ ನಹಿ ।
ಯಂ ಕೇವಲಂ ವಸ್ತುವಿಚಾರತೋಽಪಿ
ಸೂಕ್ಷ್ಮಾತ್ಪರಂ ಸೂಕ್ಷ್ಮತರಾತ್ಪರಂ ಚ ॥ ೩೪ ॥

ಅನಿರ್ದೇಶ್ಯಮಚಿಂತ್ಯಂ ಚ ನಿರ್ವಿಕಾರಂ ನಿರಾಮಯಂ ।
ಜ್ಞಪ್ತಿಮಾತ್ರ ಸ್ವರೂಪಂ ಚ ನ್ಯಾಸಿನೋ ಯಾಂತಿ ಯತ್ರ ವೈ ॥ ೩೫ ॥

ಶಬ್ದಾತೀತಂ ನಿರ್ಗುಣಂ ನಿರ್ವಿಕಾರಂ
ಸತ್ತಾಮಾತ್ರಂ ಜ್ಞಾನಗಮ್ಯಂ ತ್ವಗಮ್ಯಂ ।
ಯತ್ತದ್ವಸ್ತು ಸರ್ವದಾ ಕಥ್ಯತೇ ವೈ
ವೇದಾತೀತೈಶ್ಚಾಗಮೈರ್ಮಂತ್ರಭೂತೈಃ ॥ ೩೬ ॥

---

ಆಚೆಗೆ ಕಳುಹಿಸುವವನಾಗಿ, "ಅಯ್ಯಾ! ನೀವೆಲ್ಲರೂ ಬಂದ ದಾರಿಯನ್ನು ಹಿಡಿದು ಹಿಂತಿರುಗಿರಿ; ಇಲ್ಲಿ ನಿಲ್ಲಕೂಡದು. ನಡೆಯಿರಿ ತಡಮಾಡಬೇಡಿ" ಎಂದು ಹೇಳಿದನು. ಅವರೆಲ್ಲರೂ ಹಾಗೆಯೇ ಆಗಲೆಂದು ತಮ್ಮ ತಮ್ಮ ಲೋಕಗಳಿಗೆ ಹೊರಟು ಬಂದರು.

೩೨–೩೬. ಬಳಿಕ ಆ ಭವನು ಮತ್ತೆ ಸಮಾಧಿಸ್ಥಿತನಾಗಿ ಆತ್ಮನನ್ನು ಪರಮಾತ್ಮನಲ್ಲಿ ನೆಲೆಗೊಳಿಸಿ ಆತ್ಮನಲ್ಲಿಯೇ (ತನ್ನಲ್ಲಿಯೇ) ಪರಾತ್ಪರವೂ, ಸ್ವಚ್ಛವೂ, ನಿರ್ಮಲವೂ, ಯಾವ ಎಡರುಗಳೂ ಇಲ್ಲದುದೂ ನಿರಂಜನವೂ, ಆಭಾಸರಹಿತವೂ, ಆದ ತನ್ನನ್ನೇ ಧ್ಯಾನಿಸತೊಡಗಿದನು. ಆ ಪರಶಿವನು, ದಿವ್ಯ ಜ್ಞಾನಿಗಳೆಲ್ಲರೂ ಯಾವುದರಲ್ಲಿಯೇ ಮೋಹಗೊಳ್ಳುವರೋ, ಸೂರ್ಯನಾಗಲಿ, ಅಗ್ನಿಯಾಗಲಿ, ಚಂದ್ರನಾಗಲಿ ಇತರ ಯಾವುದೇ ಜ್ಯೋತಿಯಾಗಲಿ, ವಾಯುವಾಗಲಿ ಎಲ್ಲಿ ಬೆಳಗುವುದಿಲ್ಲವೋ, ವಸ್ತುವಿಚಾರದಿಂದಲೂ ಸೂಕ್ಷ್ಮಕ್ಕಿಂತಲೂ ಸೂಕ್ಷ್ಮವಾಗಿ, ಸೂಕ್ಷ್ಮತರಕ್ಕಿಂತಲೂ ಸೂಕ್ಷ್ಮತರವೂ ಆಗಿ, ಇಂತೆಂದು, ಇದೆಂದು ನಿರ್ದೇಶಿಸಲು ಅಸಾಧ್ಯವಾಗಿ, ಯೋಚಿಸಲಸದಳವೂ, ವಿಕಾರರಹಿತವೂ, ನಿರಾಮಯವೂ, ಜ್ಞಪ್ತಿಮಾತ್ರವೇ ಸ್ವರೂಪವುಳ್ಳುದೂ ಆದ ಯಾವುದನ್ನು ಕೇವಲ ಬ್ರಹ್ಮವೆನ್ನುತ್ತಾರೆಯೋ, ಸಂನ್ಯಾಸಿಗಳೆಲ್ಲರೂ (ಸಮಸ್ತ

ತದ್ವಸ್ತುಭೂತೋ ಭಗವಾನ್ ಹಿ ಈಶ್ವರಃ
ಪಿನಾಕಪಾಣಿರ್ಭಗವಾನ್ ವೃಷಧ್ವಜಃ ।
ಯೇನೈವ ಸಾಕ್ಷಾನ್ಮಕರಧ್ವಜೋ ಹತ
ಸ್ತಪೋಜುಷಾಣಃ ಪರಮೇಶ್ವರಃ ಸಃ ॥ ೩೭ ॥

ಲೋಮಶ ಉವಾಚ :—

ಗಿರಿಜಾ ಹಿ ತದಾ ದೇವೀ ತತಾಪ ಪರಮಂ ತಪಃ ।
ತಪಸಾ ತೇನ ರುದ್ರೋಽಪಿ ಉತ್ತಮಂ ಭಯಮಾಗತಃ ॥ ೩೮ ॥
ವಿಜಿತ್ಯ ತಪಸಾ ದೇವೀ ಪಾರ್ವತೀ ಪರಮೇಣ ಹಿ ।
ಶಂಭುಂ ಸರ್ವಾರ್ಥದಂ ಸ್ಥಾಣುಂ ಕೇವಲಂ ಸ್ವ ಸ್ವರೂಪಿಣಂ ॥ ೩೯ ॥
ಯದಾ ಜಿತಸ್ತಯಾ ದೇವ್ಯಾ ತಪಸಾ ವೃಷಭಧ್ವಜಃ ।
ಸಮಾಧೇಶ್ಚಲಿತೋ ಭೂತ್ವಾ ಯತ್ರಸಾ ಪಾರ್ವತೀ ಸ್ಥಿತಾ ॥ ೪೦ ॥
ಜಗಾಮ ತ್ವರಿತೇನೈವ ದೇವದೇವಃ ಪಿನಾಕಭೃತ್ ।
ತತ್ರಾಪಶ್ಯತ್ಸ್ಥಿತಾಂ ದೇವೀಂ ಸಖೀಭಿಃ ಪರಿವಾರಿತಾಂ ॥ ೪೧ ॥
ವೇದಿಕೋಪರಿ ವಿನ್ಯಸ್ತಾಂ ಯಥೈವ ಶಶಿನಃ ಕಲಾಂ ।
ಸ ದೇವಸ್ತಾಂ ನಿರೀಕ್ಷ್ಯಾಥ ಬಟುರ್ಭೂತ್ವಾಥ ತತ್ಕ್ಷಣಾತ್ ॥ ೪೨ ॥

---

ವನ್ನೂ ತೊರೆದವರು) ಯಾವುದನ್ನೇ ಸೇರುತ್ತಾರೆಯೋ, ಶಬ್ದಕ್ಕೆ ವಿಾರಿದುದಾಗಿ, ಗುಣರಹಿತವಾಗಿ, ನಿರ್ವಿಕಾರವಾಗಿ ಸತ್ತಾ (ಚೇತನ) ಮಾತ್ರವೂ, ಜ್ಞಾನ ಗಮ್ಯವೂ, ಅಗಮ್ಯವೂ ಆದ ಯಾವ ಪರಬ್ರಹ್ಮವಸ್ತುವು ಮಂತ್ರರೂಪಗಳಾದ ವೇದೋಪನಿಷತ್ತುಗಳಿಂದ ವರ್ಣಿತವಾಗಿರುವುದೋ ಆ ವಸ್ತುವೇ ತಾನಾಗಿದ್ದರೂ, ಪಿನಾಕಪಾಣಿಯೂ, ವೃಷಭಧ್ವಜನೂ, ಸಾಕ್ಷಾತ್ ಮನ್ಮಥನನ್ನೇ ದಹಿಸಿದವನೂ ಆದ ಆ ಪರಮೇಶ್ವರನು ಅದನ್ನೇ ಕುರಿತು ತಪಸ್ಸನ್ನು ಮಾಡತೊಡಗಿದನು.

೩೮–೪೦. ಲೋಮಶನು ಹೇಳುತ್ತಾನೆ:—ಎಲೈ ಮುನಿಗಳಿರಾ! ಇತ್ತ ಅದೇ ಸಮಯದಲ್ಲಿಯೇ ಗಿರಿಜಾದೇವಿಯೂ ಸಹ ಶ್ರೇಷ್ಠವಾದ ತಪಸ್ಸನ್ನು ಮಾಡಿದಳು. ಆ ತಪಸ್ಸಿನಿಂದ ಸಾಕ್ಷಾತ್ ರುದ್ರನೂ ಸಹ ಬಹಳ ಭಯವನ್ನು ಹೊಂದಿದನು. ಆ ದೇವಿಯು ಸರ್ವಾಭೀಷ್ಟಪ್ರದನೂ, ಸ್ಥಾಣುವೂ, ಕೇವಲ ಸ್ವ (ಆತ್ಮ) ಸ್ವರೂಪನೂ ಆದ ಆ ಪರಮೇಶ್ವರನನ್ನೂ ಜಯಿಸಿ ಉತ್ತಮೋತ್ತಮ ವಾದ ತಪಸ್ಸನ್ನೆಸಗಿದಳು. ಆ ವೃಷಭಧ್ವಜನು ಯಾವಾಗ ಆ ಗಿರಿಜೆಯ ತಪಸ್ಸಿಗೆ ಸೋತನೋ ಆಗಲೇ ಸಮಾಧಿಯಿಂದ ಚಲಿತನಾಗಿ ಆಕೆಯು ತಪಸ್ಸು ಮಾಡುತ್ತಿದ್ದ ಪ್ರದೇಶಕ್ಕೈತಂದನು.

೪೧–೪೪. ದೇವದೇವನಾದ ಆ ಪಿನಾಕಪಾಣಿಯು ಬಹು ಜಾಗ್ರತೆಯಾಗಿ ಆ ಪ್ರದೇಶಕ್ಕೆ ಬಂದು ಅಲ್ಲಿ ಸಖಿಯರಿಂದ ಪರಿವಾರಿತೆಯಾಗಿ, ವೇದಿಕೆಯಮೇಲೆ

ಬ್ರಹ್ಮಚಾರಿಸ್ವರೂಪೇಣ ಮಹೇಶೋ ಭಗವಾನ್ ಭವಃ ।
ಸಖೀನಾಂ ಮಧ್ಯಮಾಶ್ರಿತ್ಯ ಹ್ಯುವಾಚ ಬಟುರೂಪವಾನ್ ।
ಕಿಮರ್ಥಮಾಲಿಮಧ್ಯಸ್ಥಾ ತನ್ವೀ ಸರ್ವಾಂಗಸುಂದರೀ ॥ ೪೩ ॥
ಕೇನ ಕಸ್ಯ ಕುತೋ ಯಾತಾ ಕಿಮರ್ಥಂ ತಪ್ಯತೇ ತಪಃ ।
ಸರ್ವಂ ಮೇ ಕಥ್ಯತಾಂ ಸಖ್ಯೋ ಯಥಾ ತಥ್ಯೇನ ಸಂಪ್ರತಿ ॥ ೪೪ ॥
ತದೋವಾಚ ಜಯಾ ರುದ್ರಂ ತಪಸಃ ಕಾರಣಂ ಪರಂ ॥ ೪೫ ॥
ಹಿಮಾದ್ರೇರ್ದುಹಿತೇಯಂ ವೈ ತಪಸಾ ರುದ್ರಮೀಶ್ವರಂ ।
ಪ್ರಾಪ್ತುಕಾಮಾ ಪತಿತ್ವೇನ ಸೇಯಮತ್ರೋಪವಿಶ್ಯಚ ॥ ೪೬ ॥
ತಪಸ್ತತಾಪ ಸುಮಹತ್ಸರ್ವೇಷಾಂ ದುರತಿಕ್ರಮಂ ।
ಬಟೋ ಜಾನೀಹಿ ಮೇ ವಾಕ್ಯಂ ನಾನ್ಯಥಾ ಮಮ ಭಾಷಿತಂ ॥ ೪೭ ॥
ತಚ್ಛ್ರುತ್ವಾ ವಚನಂ ತಸ್ಯಾಃ ಪ್ರಹಸ್ಯೇದಮುವಾಚಹ ।
ಶೃಣ್ವತೀನಾಂ ಸಖೀನಾಂ ವೈ ಮಹೇಶೋ ಬಟುರೂಪವಾನ್ ॥ ೪೮ ॥
ಮೂಢೇಯಂ ಪಾರ್ವತೀ ಸಖ್ಯೋ ನ ಜಾನಾತಿ ಹಿತಾಹಿತಂ ।
ಕಿಮರ್ಥಂ ಚ ತಪಃ ಕಾರ್ಯಂ ರುದ್ರಪ್ರಾಪ್ತ್ಯರ್ಥಮೇವಚ ॥ ೪೯ ॥
ಸೋಽಮಂಗಲಃ ಕಪಾಲೀ ಚ ಶ್ಮಶಾನಾಲಯ ಏವಚ ।
ಅಶಿವಃ ಶಿವಶಬ್ದೇನ ಭಣ್ಯತೇ ಚ ವೃಥಾಽಥವೈ ॥ ೫೦ ॥

---

ಕುಳಿತು ಚಂದ್ರಕಲೆಯಂತೊಪ್ಪಿ ಬೆಳಗುತ್ತಿರುವ ಆ ದೇವಿಯನ್ನು ಕಂಡನು. ಒಡನೆಯೇ ಆ ಸ್ವಾಮಿಯು ವಟುರೂಪವನ್ನು ತಾಳಿದನು. ಇಂತು ಮಹೇಶ್ವರನೂ, ಷಡ್ಗುಣ್ಯೈಶ್ವರ್ಯ ಸಂಪನ್ನನೂ ಆದ ಆ ಭವನು ಬ್ರಹ್ಮಚಾರಿಯ ವೇಷದಿಂದಲೇ ಆ ಉಮಾದೇವಿಯ ಸಖಿಯರ ನಡುವೆ ಹೋಗಿ ಅವರನ್ನು ಕುರಿತು, "ಎಲೌ! ಸಖಿಯರೇ! ಬಹು ಸುಕುಮಾರಿಯೂ, ಸರ್ವಾಂಗ ಸುಂದರಿಯೂ ಆದ ಈ ಕನ್ಯೆಯು ಏತಕ್ಕೋಸುಗ ಈ ರೀತಿ ಗೆಳತಿಯರ ನಡುವೆ ಕುಳಿತು, ತಪಸ್ಸುಮಾಡುತ್ತಿರುವಳು? ಈಕೆಯು ಯಾರ ಮಗಳು? ಎಲ್ಲಿಂದ ಬಂದಳು? ಈ ರೀತಿ ತಪಸ್ಸನ್ನು ಮಾಡುತ್ತಿರುವುದಾದರೂ ಏಕೆ? ಎಲೈ ಗೆಳತಿಯರಿರಾ! ಈ ಎಲ್ಲ ವಿಚಾರವನ್ನೂ ನನಗೆ ಇದ್ದುದನ್ನಿದ್ದಂತೆಯೇ ತಿಳಿಸಿರಿ" ಎಂದು ಕೇಳಿದನು.

೪೫–೫೦. ಆಗಲಾಸಖಿಯರಲ್ಲೊಬ್ಬಳಾದ ಜಯೆಯೆಂಬವಳು ಆ ರುದ್ರನಿಗೆ ಉಮಾದೇವಿಯ ತಪಸ್ಸಿನ ಪರಮ ಕಾರಣವನ್ನು ತಿಳಿಸುವವಳಾಗಿ ಅವನನ್ನು ಕುರಿತು, "ಅಯ್ಯಾ ವಟುವೇ! ಈ ನಮ್ಮ ಸಖಿಯು ಹಿಮವಂತನ ಮಗಳು. ಈಕೆಯು ರುದ್ರನಾದ ಪರಮೇಶ್ವರನನ್ನು ಪತಿಯನ್ನಾಗಿ ಪಡೆಯಲೋಸುಗ ಈ ಸ್ಥಳದಲ್ಲಿ ಕುಳಿತು ಯಾರೊಬ್ಬರಿಗೂ ಮಾಡಲಸಾಧ್ಯವಾದ ಮಹಾ ತಪಸ್ಸನ್ನು

ಅನಯಾ ಹಿ ವೃತೋ ರುದ್ರೋ ಯದಾ ಸಖ್ಯಃ ಸಮೇಷ್ಯತಿ ।
ತದೇಯಮಶುಭಾ ತನ್ವೀ ಭವಿಷ್ಯತಿ ನ ಸಂಶಯಃ ॥ ೫೧ ॥
ಯೋ ದಕ್ಷಶಾಪಾದ್ವಿಕೃತೋ ಯಜ್ಞಬಾಹ್ಯೋಽಭವದ್ವಿಟಃ ।
ಯೇಽಹ್ಯಂಗಭೂತಾಃ ಶರ್ವಸ್ಯ ಸರ್ಪಾಹ್ಯಾಸನ್ಮಹಾವಿಷಾಃ ॥ ೫೨ ॥
ಶವಭಸ್ಮಾನ್ವಿತೋ ರುದ್ರಃ ಕೃತ್ತಿವಾಸಾಹ್ಯಮಂಗಲಃ ।
ಪಿಶಾಚೈಃ ಪ್ರಮಥೈರ್ಭೂತೈರಾವೃತೋ ಹಿ ನಿರಂತರಂ ॥ ೫೩ ॥
ತೇನ ರುದ್ರೇಣ ಕಿಂ ಕಾರ್ಯಮನಯಾ ಸುಕುಮಾರಯಾ ।
ನಿವಾರ್ಯತಾಂ ಸಖೀಭಿಶ್ಚ ಮತ್ರ್ಕಾಮಾ ಪಿಶಾಚವತ್ ॥ ೫೪ ॥
ಇಂದ್ರಂ ಹಿತ್ವಾ ಮನೋಜ್ಞಂ ಚ ಯಮಂ ಚೈವ ಮಹಾ ಪ್ರಭಂ ।
ನೈರ್ಋತಂ ಚ ವಿಶಾಲಾಕ್ಷಂ ವರುಣಂ ಚ ಅಪಾಂಪತಿಂ ॥ ೫೫ ॥
ಕುಬೇರಂ ಪವನಂ ಚೈವ ತಥೈವ ಚ ವಿಭಾವಸುಂ ।
ಏವಮಾದೀನಿ ವಾಕ್ಯಾನಿ ಉವಾಚ ಪರಮೇಶ್ವರಃ ।
ಸಖೀನಾಂ ಶೃಣ್ವತೀನಾಂ ಚ ಯತ್ರಸಾ ತಪಸಿ ಸ್ಥಿತಾ ॥ ೫೬ ॥

---

ಮಾಡುತ್ತಿರುವಳು. ಎಲೈ ವಟುವೇ! ಈ ನನ್ನ ಮಾತು ನಿಜವೆಂದು ತಿಳಿ'' ಎಂದು ಹೇಳಿದಳು. ವಟುರೂಪಧರನಾದ ಪರಮೇಶ್ವರನು ಈ ಮಾತನ್ನು ಕೇಳಿ ನಕ್ಕು ಆ ಸಖಿಯರೆಲ್ಲರೂ ಕೇಳುವಂತೆಯೇ ಅವರೆಲ್ಲರನ್ನೂ ಕುರಿತು, ''ಎಲೈ ಸಖಿಯರೇ! ಈ ಪಾರ್ವತಿಯು ದಿಟವಾಗಿಯೂ ಮೂಢಳು. ಇವಳಿಗೆ ಹಿತ ವಾವುದು, ಹಿತವಲ್ಲದುದಾವುದು ಎಂಬುದೇ ತಿಳಿಯದು. ಈಕೆಯು ಆ ರುದ್ರ ನನ್ನು ಪತಿಯಾಗಿ ಪಡೆಯಲೋಸುಗ ಈ ರೀತಿ ತಪಸ್ಸನ್ನೇಕೆಮಾಡಬೇಕು? ಅವನಾದರೋ ಅಮಂಗಲನು; ಕಪಾಲವನ್ನು ಧರಿಸಿರುವನು; ಶ್ಮಶಾನದಲ್ಲಿ ವಾಸಮಾಡುವವನು. ಕೇವಲ ಅಮಂಗಳ (ಅಶಿವ)ನಾಗಿದ್ದರೂ ಅವನನ್ನು ಶಿವ ಎಂದು ಎಲ್ಲರೂ ನಿಷ್ಪ್ರಯೋಜನವಾಗಿ ಕರೆಯುತ್ತಾರೆ.

೫೧–೬೦. ಎಲೈ ಸಖಿಯರೇ! ಮಂಗಳಾಂಗಿಯಾದ ಈ ಬಾಲೆಯು ಆ ರುದ್ರನನ್ನು ಮದುವೆಯಾಗಿ ಅವನೊಡಗೂಡಿದೊಡನೆಯೇ ಅಮಂಗಳೆಯಾಗು ತ್ತಾಳೆಯೆಂಬುದರಲ್ಲಿ ಸಂಶಯವಿಲ್ಲವು. ವಿಟನಾದ ಆ ರುದ್ರನು ದಕ್ಷನ ಶಾಪ ದಿಂದ ವಿಕಾರವನ್ನು ಹೊಂದಿ ಯಜ್ಞಬಾಹಿರನಾಗಲಿಲ್ಲವೆ? ಇಷ್ಟರಮೇಲೋ, ಅವನ ಮೈಯಲ್ಲಿರುವ ಸರ್ಪಗಳೆಲ್ಲವೂ ಮಹಾ ವಿಷಗಳನ್ನೊಳಗೊಂಡಿರುವುವು. ಆ ರುದ್ರನು ಮೈಗೆಲ್ಲ ಹೆಣದ ಬೂದಿಯನ್ನು ಬೊಳಿದುಕೊಂಡಿರುವನು; ಆನೆ ದೊಗಲನ್ನು ಹೊದ್ದು ಅಮಂಗಳನಾಗಿ ಪಿಶಾಚಗಳಿಂದಲೂ, ಪ್ರಥಮಗಣಗ ಳಿಂದಲೂ, ಭೂತಗಣಗಳಿಂದಲೂ ಯಾವಾಗಲೂ ಪರಿವೃತನಾಗಿರುತ್ತಾನೆ. ಸುಕುಮಾರಿಯಾದ ಈ ಪಾರ್ವತಿಗೆ ಇಂತಹ ಆ ರುದ್ರನಿಂದಾಗಬೇಕಾದ ಕಾರ್ಯ

ಇತ್ಯಾಕರ್ಣ್ಯ ವಚಸ್ತಸ್ಯ ರುದ್ರಸ್ಯ ಬಟುರೂಪಿಣಃ ।
ಚುಕೋಪ ಚ ಶಿವಾ ಸಾಧ್ವೀ ಮಹೇಶಂ ಬಟುರೂಪಿಣಂ ॥ ೫೭ ॥
ಜಯೇ ತ್ವಂ ವಿಜಯೇ ಸಾಧ್ವಿ ಪ್ರಮ್ಲೋಚೇಪ್ಯಥ ಸುಂದರಿ ।
ಸುಲೋಚನೇ ಮಹಾಭಾಗೇ ಸಮೀಚೀನಂ ಕೃತಂ ಹಿ ಮೇ ॥ ೫೮ ॥
ಕಿಮೇತಸ್ಯ ಬಟೋಃ ಕಾರ್ಯಂ ಭವತೀನಾಮಿಹಾಧುನಾ ।
ಬಟುಸ್ವರೂಪಮಾಸ್ಥಾಯ ಆಗತೋ ದೇವನಿಂದಕಃ ॥ ೫೯ ॥
ಅಯಂ ವಿಸೃಜ್ಯತಾಂ ಸಖ್ಯಃ ಕಿಮನೇನ ಪ್ರಯೋಜನಂ ।
ಬಟುಸ್ವರೂಪಿಣಂ ರುದ್ರಂ ಕುಪಿತಾ ಸಾ ತತೋಽಬ್ರವೀತ್ ॥ ೬೦ ॥
ಬಟೋ ಗಚ್ಛಾಶು ತ್ವರಿತೋ ನಸ್ಥೇಯಂ ಚ ತ್ವಯಾಧುನಾ ।
ಕಿಮನೇನ ಪ್ರಲಾಪೇನ ತವ ನಾಸ್ತಿ ಪ್ರಯೋಜನಂ ॥ ೬೧ ॥
ಬಟುರ್ನಿರ್ಭರ್ತ್ಸಿತಸ್ತತ್ರ ತಯಾ ಚೈವಂ ತದಾ ಪುನಃ ।
ಪ್ರಹಸ್ಯ ವೈ ಸ್ಥಿರೋ ಭೂತ್ವಾ ಪುನರ್ವಾಕ್ಯಮಥಾಬ್ರವೀತ್ ॥ ೬೨ ॥

---

ವಾವುದು? ಎಲೌ ಗೆಳತಿಯರೇ! ಈರೀತಿ ಆ ಶಿವನನ್ನು ವರಿಸಿ ಪಿಶಾಚಿಯಂತೆ ಸಾಯಬಯಸಿರುವ ಇವಳನ್ನು ತಡೆಯಿರಿ. ಮನೋಹರನಾದ ಇಂದ್ರನನ್ನೋ, ಮಹಾ ತೇಜಸ್ವಿಯಾದ ಯಮನನ್ನೋ, ವಿಶಾಲನೇತ್ರನಾದ ನಿರ್ಋತಿಯನ್ನೋ, ನೀರುಗಳಿಗೆಲ್ಲ ಒಡೆಯನಾದ ವರುಣನನ್ನೋ, ಕುಬೇರ, ವಾಯು, ಅಗ್ನಿ ಮುಂತಾದವರನ್ನೋ ವರಿಸುವುದನ್ನು ಬಿಟ್ಟು ಈಕೆಯು ರುದ್ರನನ್ನೇ ಮದುವೆಯಾಗುವುದು? ಚೆನ್ನಾಯಿತು!!" ಎಲೈ ಮುನಿಗಳಿರಾ! ಆ ಪರಮೇಶ್ವರನು ಇವೇ ಮೊದಲಾದ ಮಾತುಗಳನ್ನುಹೇಳಿದನು. ಸಖಿಯರೆಲ್ಲರೂ ಅವುಗಳನ್ನುಕೇಳುತ್ತಿರಲು ತಪಸ್ಸಿನಲ್ಲಿ ತೊಡಗಿದ್ದ ಸಾಧ್ವಿಯಾದ ಪಾರ್ವತಿಯೂ ಸಹ ಅವುಗಳನ್ನು ಕೇಳಿ ವಟುರೂಪಿಯಾದ ಆ ರುದ್ರನಲ್ಲಿ ಕೋಪಗೊಂಡು "ಎಲೆ ಜಯೆ, ವಿಜಯೆ, ಸಾಧ್ವಿಯಾದ ಪ್ರಮ್ಲೋಚೆ, ಸುಂದರಿ, ಮಹಾಭಾಗೆ ಸೌಲೋಚನೆ!! ನೀವೆಲ್ಲರೂ ನನ್ನನ್ನು ಚೆನ್ನಾಗಿಯೇ ಓಲೈಸುತ್ತಿರುವಿರಿ. ನಿಮಗೆ ಈ ಬ್ರಹ್ಮಚಾರಿಯೊಡನೇನು ಕೆಲಸ? ಇವನಾವನೋ ದೇವನಿಂದಕನು; ವಟುರೂಪವನ್ನು ತಾಳಿ ಇಲ್ಲಿಗೆ ಬಂದಿರುವನು. ಎಲೌ ಸಖಿಯರೇ! ಇವನನ್ನು ಮೊದಲು ಆಚೆಗೆ ಕಳುಹಿಸಿರಿ. ನಿಮಗೆ ಇವನಿಂದಾಗಬೇಕಾದುದೇನು?" ಎಂದು ಹೇಳಿದಳು.

೬೧–೬೫. ತರುವಾಯ ಆ ಪರ್ವತರಾಜಕುಮಾರಿಯು ಕೋಪಗೊಂಡು ವಟುರೂಪಧರನಾದ ಆ ಪರಮೇಶ್ವರನನ್ನು ಕುರಿತು "ಅಯ್ಯಾ ವಟುವೇ! ಜಾಗ್ರತೆಯಾಗಿ ಇಲ್ಲಿಂದ ಹೊರಟು ಹೋಗು. ನೀನಿಲ್ಲಿ ನಿಲ್ಲಕೂಡದು. ಈ ನಿನ್ನ ಪ್ರಲಾಪದಿಂದೇನು ಪ್ರಯೋಜನ? ಹೊರಡು" ಎಂದು ಗದರಿದಳು. ಈ ರೀತಿ ಗದರಿದರೂ ಆ ಶಂಭುವು ಮತ್ತೆಯೂ ಗಟ್ಟಿಯಾಗಿ ನಕ್ಕು ಧೈರ್ಯವಾಗಿ

ಶನೈಃ ಶನೈರವಿತಥಂ ವಿಜಯಾಂ ಪ್ರತಿ ಸತ್ವರಂ ।
ಕಸ್ಮಾತ್ಕೋಪಸ್ತ್ವಯಾ ತಸ್ಮಿ ಕೃತಃ ಕೇನೈವ ಹೇತುನಾ ॥ ೬೩ ॥
ಸರ್ವೇಷಾಮಪಿ ತದ್ವಾಚ್ಯಂ ವಚನಂ ಸೂಕ್ತಮೇವ ಯತ್ ।
ಯಥೋಕ್ತೇನ ಚ ವಾಕ್ಯೇನ ಕಸ್ಮಾತ್ತನ್ವೀ ಪ್ರಕೋಪಿತಾ ॥ ೬೪ ॥
ಯಃ ಶಂಭುರುಚ್ಯತೇ ಲೋಕೇ ಭಿಕ್ಷುಕೋ ಭಿಕ್ಷುಕಪ್ರಿಯಃ ।
ಯದಿ ಮೇ ಹ್ಯನೃತಂ ಪ್ರೋಕ್ತಂ ತದಾ ಕೋಪ ಇಹೋಚಿತಃ ॥ ೬೫ ॥
ಇಯಂ ತಾವತ್ಸುರೂಪಾಚ ವಿರೂಪೋಽಸೌ ಸದಾಶಿವಃ ।
ವಿಶಾಲಾಕ್ಷೀ ತ್ವಿಯಂ ಬಾಲಾ ವಿರೂಪಾಕ್ಷೋ ಭವಸ್ತಥಾ ॥ ೬೬ ॥
ಏವಂ ಭೂತೇನ ರುದ್ರೇಣ ಮೋಹಿತೋಽಯಂ ಕಥಂ ಭವೇತ್ ।
ಸಭಾಗ್ಯೋ ಹಿ ಪತಿಃ ಸ್ತ್ರೀಣಾಂ ಸದಾ ಭಾವ್ಯೋ ರತಿಪ್ರಿಯಃ ॥ ೬೭ ॥
ಇಯಂ ಕಥಂ ಮೋಹಿತಾಸ್ತಿ ನಿರ್ಗುಣೇನ ಗುಣಾತ್ಮಿಕಾ ।
ನ ಶ್ರುತೋ ನ ಚ ವಿಜ್ಞಾತೋ ನ ದೃಷ್ಟಃ ಕೇನ ವಾ ಶಿವಃ ॥ ೬೮ ॥
ಸಕಾಮಾನಾಂ ಚ ಭೂತಾನಾಂ ದುರ್ಲಭೋ ಹಿ ಸದಾ ಶಿವಃ ।
ತಪಸಾ ಪರಮೇಣೈವ ಗರ್ವಿತೇಯಂ ಸುಮಧ್ಯಮಾ ॥ ೬೯ ॥

---

ಅಲ್ಲಿಯೇ ನಿಂತು ಮತ್ತೆ ಈ ಮಾತನ್ನಾಡಿದನು. ಆ ಶಿವನು ವಿಜಯೆಯನ್ನೇ ಕುರಿತು ಮೆಲ್ಲಮೆಲ್ಲನೆ ಸ್ಪಷ್ಟವಾಗಿಯೂ, ಜಾಗ್ರತೆಯಾಗಿಯೂ ಹೇಳಿದನು. "ಎಲೆ ಸುಂದರಿ! ನಿನ್ನ ಈ ಗೆಳತಿಯು ಯಾವ ಕಾರಣದಿಂದ ಈ ರೀತಿ ಕೋಪ ಗೊಂಡಳೋ ನಾನು ಬೇರೆ ಕಾಣೆ? ಯುಕ್ತವಾಗಿರುವ ಒಳ್ಳೆಯ ಮಾತುಗಳನ್ನು ಎಲ್ಲರೂ ಹೇಳತಕ್ಕುದೇ ಅಲ್ಲವೇ? ನಾನು ಇದ್ದುದನ್ನಿದ್ದಂತೆಯೇ ಹೇಳಿದರೆ ಈ ಕೋಮಲಾಂಗಿಯು ಕೋಪಗೊಳ್ಳುವಳಲ್ಲ! ಲೋಕದಲ್ಲಿ ಶಂಭುವೆಂದು ಯಾರನ್ನು ಕರೆಯುತ್ತಾರೆಯೋ ಅವನು ಭಿಕ್ಷುಕನು; ಭಿಕ್ಷುಕರೆಲ್ಲರಿಗೂ ಪ್ರಿಯ ನಾದವನು. ಈಗ ನಾನು ಹೇಳಿರುವ ಈ ಮಾತು ಸುಳ್ಳಾದರೆ ಈಕೆಯು ನನ್ನಲ್ಲಿ ಕೋಪಗೊಳ್ಳುವುದು ಯುಕ್ತವೇ ಸರಿ.

೬೬-೭೦. ಈ ನಿಮ್ಮ ಗೆಳತಿಯಾದರೋ ಒಳ್ಳೆಯ ರೂಪುಳ್ಳವಳು; ಆ ಸದಾ ಶಿವನಾದರೋ ವಿರೂಪನು. ಈ ಬಾಲೆಯು ವಿಶಾಲಾಕ್ಷಿ; ಆ ಭವನು ವಿರೂಪಾ ಕ್ಷನು (ಮುಕ್ಕಣ್ಣನು). ಇಂತಿರುವ ಈ ಸುಂದರಿಯು ಆ ರುದ್ರನನ್ನು ಮೋಹಿಸಿ ದುದೆಂತು? ಸ್ತ್ರೀಯರು ಯಾವಾಗಲೂ ಭಾಗ್ಯವಂತನೂ, ರತಿಪ್ರಿಯನೂ ಆದ ಪತಿಯನ್ನು ಬಯಸಬೇಕು. ಹೀಗಿರುವಲ್ಲಿ ಗುಣವತಿಯಾದ ಈಕೆಯು ನಿರ್ಗುಣ ನಾದ ಆ ರುದ್ರನಿಗೆ ಮನಸೋತುದು ಹೇಗೆ? ಇದರ ಮೇಲಾಗಿಯೋ ಆ ಶಿವನಾ ರೆಂಬುದನ್ನು ಯಾರೂ ಕೇಳಿಲ್ಲ; ಯಾರೂ ತಿಳಿದಿಲ್ಲ; ಯಾರೂ ನೋಡಿಯೂ ಇಲ್ಲ. ಇಷ್ಟೇ ಅಲ್ಲ. ಆ ಸದಾಶಿವನು ಕಾಮಸಹಿತರಾಗಿರುವವರಿಗೆ ಕೇವಲ

ನಿಃಸ್ತಂಭೋ ಹಿ ಸದಾ ಸ್ಥಾಣುಃ ಕಥಂ ಪ್ರಾಪ್ಸ್ಯತಿ ತಂ ಪತಿಂ ।
ಮಯೋಕ್ತಂ ಕಿಂ ವಿಶಾಲಾಕ್ಷಿ ಕಸ್ಮಾನ್ಮೇ ರುಷಿತಾಽಧುನಾ ॥ ೭೦ ॥
ಯಾವದ್ರೋಷೋ ಭವೇನ್ನೄಣಾಂ ನಾರೀಣಾಂ ಚ ವಿಶೇಷತಃ ।
ತೇನ ರೋಷೇಣ ತತ್ಸರ್ವಂ ಭಸ್ಮೀಭೂತಂ ಭವಿಷ್ಯತಿ ॥ ೭೧ ॥
ಸುಕೃತಂ ಚಾರ್ಜಿತಂ ತನ್ವಿ ಸತ್ಯಮೇವೋದಿತಂ ಪ್ರತಿ ।
ಕಾಮಃ ಕ್ರೋಧಶ್ಚ ಲೋಭಶ್ಚ ದಂಭೋ ಮಾತ್ಸರ್ಯಮೇವಚ ॥ ೭೨ ॥
ಹಿಂಸೇರ್ಷ್ಯಾ ಚ ಪ್ರಪಂಚಶ್ಚ ತೇನ ಸರ್ವಂ ವಿನಶ್ಯತಿ ।
ತಸ್ಮಾತ್ತಪಸ್ವಿಭಿರ್ಯುಕ್ತಂ ಕಾಮ ಕ್ರೋಧ ವಿವರ್ಜಿತಂ ॥ ೭೩ ॥

ಯದೀಶ್ವರೋ ಹೃದಿಮಧ್ಯೇ ವಿಭಾವ್ಯೋ
ಮುನೀಷಿಭಿಸ್ಸರ್ವದಾ ಜ್ಞಪ್ತಿಮಾತ್ರಃ ।
ತದಾ ಸರ್ವೈರ್ಮುನಿವೃತ್ತ್ಯಾ ವಿಭಾವ್ಯ
ಸ್ತಪಸ್ಯಾಭಿರ್ನಾನ್ಯಥಾ ಚಿಂತನೀಯಃ ॥ ೭೪ ॥
ಏತಚ್ಛ್ರುತ್ವಾ ವಚನಂ ತಸ್ಯ ಶಂಭೋಃ
ತದಾಬ್ರವೀದ್ವಿಜಯಾ ತಂ ಚ ಸರ್ವಂ ।
ಗಚ್ಛಾತ್ರ ಕಿಂಚಿತ್ತವ ನಾಸ್ತಿ ಕಾರ್ಯಂ
ನ ವಕ್ತವ್ಯಂ ವಚನಂ ಬಾಲಿಶತ್ವಾತ್ ॥ ೭೫ ॥

---

ದುರ್ಲಭನು. ಈ ಸುಮಧ್ಯಮೆಯು ಕೇವಲ ತನ್ನ ತಪಸ್ಸಿನಿಂದಲೇ ಗರ್ವಿಸಿಹೋಗಿರುವಳು. ಆ ಸ್ಥಾಣುವು ಯಾವಾಗಲೂ ಸ್ತಂಭರಹಿತನಾದವನು. ಅಂತಹನನ್ನು ಇವಳು ಪತಿಯನ್ನಾಗಿ ಹೇಗೆತಾನೆ ಪಡೆಯುತ್ತಾಳೆ? ಓ ವಿಶಾಲಾಕ್ಷಿ! ನಾನು ಇದ್ದುದನ್ನಿದ್ದಂತೆಯೇ ಈ ಪ್ರಕಾರವಾಗಿ ಹೇಳಿದರೆ ನೀನೇಕೆ ನನ್ನಲ್ಲಿ ರೋಷಗೊಳ್ಳುವೆ?

೭೧—೭೬. ಎಲೌ ಸುಂದರಿಯೇ! ಕೇಳು; ಗಂಡಸರಿಗಾಗಲಿ, ಅದರಲ್ಲಿಯೂ ವಿಶೇಷವಾಗಿ ಹೆಂಗಸರಿಗಾಗಲಿ ಎದುವರೆಗೆ ರೋಷವೆಂಬುದಿರುತ್ತದೆಯೋ ಅದುವರೆಗೆ ಆ ರೋಷದಿಂದಲೇ ಅವರು ಮಾಡಿದ ಸುಕೃತವೆಲ್ಲವೂ ಭಸ್ಮವಾಗಿ ಹೋಗುತ್ತದೆ. ನಿಜವಾಗಿಯೂ ಹೇಳುತ್ತಿರುವೆನು. ಎಲೌ ಸತಿಯೇ! ಕಾಮ, ಕ್ರೋಧ, ಲೋಭ, ದಂಭ, ಮಾತ್ಸರ್ಯ, ಹಿಂಸೆ, ಅಸೂಯೆ ಇವುಗಳಿಂದ ಪ್ರಪಂಚವೇ ನಾಶವಾಗುತ್ತದೆ. ಆದುದರಿಂದ ತಪಸ್ವಿಗಳಾದವರು ಕಾಮ ಕ್ರೋಧಾದಿಗಳನ್ನು ತೊರೆಯಬೇಕು. ಮಹರ್ಷಿಗಳಾದವರು ತಮ್ಮ ಹೃದಯದಲ್ಲಿ ಜ್ಞಪ್ತಿಮಾತ್ರನಾಗಿ ಸರ್ವಕಾಲಗಳಲ್ಲಿಯೂ ನೆಲಸಿರುವ ಯಾವ ಪರಮೇಶ್ವರನನ್ನು ಭಾವಿಸುತ್ತಾರೆಯೋ ಆ ಪರಮೇಶ್ವರನನ್ನೇ ತಪಸ್ವಿಗಳಾದವರು ಮುನಿವೃತ್ತಿಯನ್ನವಲಂಬಿಸಿ ಧ್ಯಾನಿಸಬೇಕಲ್ಲದೆ ಬೇರೊಂದು ವಿಧವಾಗಿ ಧ್ಯಾನ ಮಾಡಲೇಕೂಡದು.'' ಈ ರೀತಿ ನುಡಿದ ಆ ಶಂಭುವಿನ ನುಡಿಯನ್ನಾಲಿಸಿ ವಾಕ್ಯ

ಏವಂ ವಿವದಮಾನಂ ತಂ ವಟುರೂಪಂ ಸದಾಶಿವಂ ।
ವಿಸರ್ಜಯಾಮಾಸ ತದಾ ವಿಜಯಾ ವಾಕ್ಯಕೋವಿದಾ ॥ ೭೬ ॥
ತಿರೋಧಾನಂ ಗತಃ ಸದ್ಯೋ ಮಹೇಶೋ ಗಿರಿಜಾಂ ಪ್ರತಿ ।
ಅಲಕ್ಷ್ಯಮಾಣಃ ಸರ್ವಾಸಾಂ ಸಖೀನಾಂ ಪರಮೇಶ್ವರಃ ॥ ೭೭ ॥
ಪ್ರಾದುರ್ಬಭೂವ ಸಹಸಾ ನಿಜರೂಪಧರಸ್ತದಾ ।
ಯದಾ ಧ್ಯಾನಸ್ಥಿತಾ ದೇವೀ ನಿಜಧ್ಯಾನಪರಾ ಸತೀ ॥ ೭೮ ॥
ತದಾ ಹೃದಿಸ್ಥೋ ದೇವೇಶಃ ಬಹಿರ್ದೃಷ್ಟಿಚರೋ ಭವೇತ್ ।
ನೇತ್ರೇ ಉನ್ಮೀಲ್ಯ ಸಾ ಸಾಧ್ವೀ ಗಿರಿಜಾಯತಲೋಚನಾ ।
ಅಪಶ್ಯದ್ದೇವದೇವೇಶಂ ಸರ್ವಲೋಕಮಹೇಶ್ವರಂ ॥ ೭೯ ॥
ದ್ವಿಭುಜಂ ಚೈಕವಕ್ತ್ರಂ ಚ ಕೃತ್ತಿವಾಸಸಮುದ್ಭುತಂ ।
ಕಪರ್ದಂ ಚಂದ್ರರೇಖಾಂಕಂ ನಿವೀತಂ ಗಜಚರ್ಮಣಾ ॥ ೮೦ ॥
ಕರ್ಣಸ್ಥೌ ಹಿ ಮಹಾನಾಗೌ ಕಂಬಲಾಶ್ವತರೌ ತದಾ ।
ವಾಸುಕಿಃ ಸರ್ಪರಾಜಶ್ಚ ಕೃತಹಾರೋ ಮಹಾದ್ಯುತಿಃ ॥ ೮೧ ॥

---

ಕೋವಿದೆಯಾದ ಆ ವಿಜಯೆಯು "ಅಯ್ಯಾ ವಟುವೇ! ನೀನಿನ್ನು ಹೊರಡು. ಇಲ್ಲಿ ನಿನಗಾವ ಕೆಲಸವೂ ಇಲ್ಲ. ಸುಮ್ಮನೆ ಈ ಹುಡುಗಾಟಿಕೆಯ ಮಾತುಗಳನ್ನಾಡಬೇಡ" ಎಂದು ಹೇಳಿ ಇನ್ನೂ ಮಾತನಾಡಬೇಕೆಂದಿರುವ ಆ ವಟುರೂಪಧರನಾದ ಸದಾಶಿವನನ್ನು ಅಲ್ಲಿರಗೊಳಿಸದೆ ಕಳುಹಿಸಿಬಿಟ್ಟಳು.

೭೭–೮೦. ಆ ಪರಮೇಶ್ವರನಾದರೋ ಆ ಕೂಡಲೇ ಅಂತರ್ಧಾನವಾಗಿ ಆ ಸಖಿಯರಾರಿಗೂ ಕಾಣಿಸಿಕೊಳ್ಳದೆ ನಿಜರೂಪವನ್ನು ತಾಳಿ ಗಿರಿಜೆಯ ಮುಂಗಡೆ ಪ್ರತ್ಯಕ್ಷವಾದನು. ಆ ಪಾರ್ವತೀದೇವಿಯಾದರೋ ಸಮಾಧಿನಿಷ್ಠೆಯಾಗಿ ತನ್ನಲ್ಲಿಯೇ ಇರುವ ಆ ಪರಮಾತ್ಮನನ್ನೇ ಧ್ಯಾನಿಸುತ್ತಿರಲು ಆಕೆಯ ಹೃದಯಮಂದಿರದಲ್ಲಿದ್ದ ಆ ದೇವನು ಹೊರಗೆ ಕಾಣಿಸಿಕೊಂಡನು. ಆಗ ಸಾಧ್ವಿಯೂ, ವಿಶಾಲಾಕ್ಷಿಯೂ ಆದ ಆ ಗಿರಿಜೆಯು ಕಣ್ಣುಗಳನ್ನು ತೆರೆದು ದೇವದೇವೇಶ್ವರನಾದ ಆ ಸರ್ವಲೋಕ ಮಹೇಶ್ವರನನ್ನು ಕಂಡಳು. ಆ ಸಮಯದಲ್ಲಿ ಶಂಕರನೂ ಸಹ ದ್ವಿಭುಜನೂ, ಏಕವಕ್ತ್ರನೂ, ಕೃತ್ತಿವಾಸನೂ, ಕಪರ್ದಿಯೂ, ಚಂದ್ರಶೇಖರನೂ, ಗಜ ಚರ್ಮವನ್ನು ಹಾರವಾಗಿ ಧರಿಸಿದವನೂ ಆಗಿ ಅದ್ಭುತವಾಗಿ ವಿರಾಜಿಸುತ್ತಿದ್ದನು.

೮೧–೮೫. ಆತನ ಎರಡು ಕಿವಿಗಳಲ್ಲಿಯೂ ಕಂಬಲ ಅಶ್ವತರಗಳೆಂಬ ಸರ್ಪಗಳು ಬೆಳಗುತ್ತಿದ್ದವು. ಮಹಾ ತೇಜಸ್ವಿಯಾದ ಆ ಸ್ವಾಮಿಯು ಸರ್ಪರಾಜನಾದ ವಾಸುಕಿಯನ್ನು ಹಾರವನ್ನಾಗಿ ಧರಿಸಿದ್ದನು. ಆತನ ಕೈಗಳಲ್ಲಿ ಸರ್ಪವಲಯಗಳು ಬೆಳಗುತ್ತಿದ್ದವು. ಇಂತು ಪರಮಶೋಭಾಕರವಾದ ಅಲಂಕಾರದಿಂದೊಪ್ಪಿ

ವಲಯಾನಿ ಮಹಾರ್ಹಾಣಿ ತದಾ ಸರ್ಪಮಯಾನಿಚ ।
ಕೃತಾನಿ ತೇನ ರುದ್ರೇಣ ತಥಾ ಶೋಭಾಕರಾಣಿ ಚ ॥ ೮೨ ॥
ಏವಂ ಭೂತಸ್ತದಾ ಶಂಭುಃ ಪಾರ್ವತೀಂ ಪ್ರತಿ ಚಾಗ್ರತಃ ।
ಉವಾಚ ತ್ವರಯಾ ಯುಕ್ತೋ ವರಂ ವರಯ ಭಾಮಿನಿ ॥ ೮೩ ॥
ವ್ರೀಡಯಾ ಪರಯಾ ಯುಕ್ತಾ ಸಾಧ್ವೀ ಪ್ರೋವಾಚ ಶಂಕರಂ ।
ತ್ವಂ ನಾಥೋ ಮಮ ದೇವೇಶ ತ್ವಯಾ ಕಿಂ ವಿಸ್ಮೃತಂ ಪುರಾ ॥ ೮೪ ॥
ದಕ್ಷಯಜ್ಞವಿನಾಶಂ ಚ ಯದರ್ಥಂ ಕೃತವಾನ್ಪ್ರಭೋ ।
ಸತ್ವಂ ಸಾಹಂ ಸಮುತ್ಪನ್ನಾ ಮೇನಾಯಾಂ ಕಾರ್ಯಸಿದ್ಧಯೇ ॥ ೮೫ ॥
ದೇವಾನಾಂ ದೇವದೇವೇಶ ತಾರಕಸ್ಯ ವಧಂ ಪ್ರತಿ ।
ಭವತೋ ಹಿ ಮಯಾ ದೇವ ಭವಿಷ್ಯತಿ ಕುಮಾರಕಃ ॥ ೮೬ ॥
ತಸ್ಮಾತ್ತ್ವಯಾ ಹಿ ಕರ್ತವ್ಯಂ ಮಮ ವಾಕ್ಯಂ ಮಹೇಶ್ವರ ।
ಗಂತವ್ಯಂ ಹಿಮವತ್ಪಾರ್ಶ್ವಂ ನಾತ್ರ ಕಾರ್ಯಾ ವಿಚಾರಣಾ ॥ ೮೭ ॥
ಯಾಚಸ್ವ ಮಾಂ ಮಹಾದೇವ ಋಷಿಭಿಃ ಪರಿವಾರಿತಃ ।
ಕರಿಷ್ಯತಿ ನ ಸಂದೇಹಸ್ತವ ವಾಕ್ಯಂ ಚ ಮೇ ಮತಾ ॥ ೮೮ ॥
ದಕ್ಷಕನ್ಯಾಪುರಾಹಂ ವೈ ಪಿತ್ರಾ ದತ್ತಾ ಯದಾ ತವ ।
ಯಥೋಕ್ತ ವಿಧಿನಾ ತತ್ರ ವಿವಾಹೋ ನ ಕೃತಸ್ತ್ವಯಾ ॥ ೮೯ ॥

---

ಮೆರೆಯುತ್ತಿದ್ದ ಆ ದೇವದೇವನು ಪಾರ್ವತಿಯ ಮುಂಗಡೆ ಪ್ರತ್ಯಕ್ಷನಾಗಿ ಬಹು ಬೇಗನೆ "ಎಲೆ ಭಾಮಿನಿ! ನಿನ್ನ ತಪಸ್ಸಿಗೆ ಮೆಚ್ಚಿರುವೆನು. ವರವನ್ನು ಬೇಡು" ಎಂದನು. ಆಗಲಾದೇವಿಯಾದರೋ ಬಹಳವಾದ ನಾಚಿಕೆಯಿಂದ ಆ ಶಂಕರನನ್ನು ಕುರಿತು, "ದೇವೇಶ್ವರಾ! ಪೂರ್ವದಲ್ಲಿ ನೀನು ನನ್ನ ಸ್ವಾಮಿಯಾಗಿದ್ದುದನ್ನು ಮರೆತು ಹೋದೆಯೇನು? ಪ್ರಭುವೇ! ಯಾರಿಗೋಸುಗ ನೀನು ದಕ್ಷನ ಯಾಗವನ್ನು ಧ್ವಂಸಮಾಡಿದೆಯೋ ಆ ಸತಿಯೇ ನಾನು. ನಾನೇ ದೇವತೆಗಳ ಕಾರ್ಯಸಿದ್ಧಿಗಾಗಿ ಹಿಮವಂತನ ಪತ್ನಿಯಾದ ಮೇನಾದೇವಿಯಲ್ಲಿ ಜನಿಸಿದೆನು.

೮೬–೯೦. ಎಲೈ ದೇವದೇವೇಶ್ವರನೇ! ತಾರಕನ ವಧೆಗಾಗಿ ನಿನ್ನಿಂದ ನನ್ನಲ್ಲಿ ಕುಮಾರನು ಜನಿಸುವನು. ಆದುದರಿಂದಲೈ ಮಹೇಶ್ವರನೇ! ಈಗ ನೀನು ನಾನು ಹೇಳುವಂತೆ ಮಾಡಬೇಕು. ನೀನು ಯಾವ ಯೋಚನೆಯನ್ನೂ ಮಾಡದೆ ಹಿಮವಂತನಲ್ಲಿಗೆ ಹೋಗು. ಮಹಾದೇವ! ನೀನು ಋಷಿಗಳೆಲ್ಲರೊಡಗೂಡಿದವನಾಗಿ ಆತನಲ್ಲಿಗೆ ಹೋಗಿ, ನನ್ನನ್ನು ನಿನಗೆ ಮದುವೆಮಾಡಿಕೊಡಬೇಕೆಂದು ಆತನನ್ನು ಯಾಚಿಸು. ನನ್ನ ತಂದೆಯಾದ ಆ ಹಿಮವಂತನು ನಿನ್ನ ಮಾತನ್ನು ಖಂಡಿತವಾಗಿಯೂ ನಡೆಸಿಕೊಡುವನೆಂಬುದರಲ್ಲಿ ಸಂದೇಹವಿಲ್ಲವು. ಎಲೈ ಶಂಕರನೇ! ನಾನು ದಕ್ಷನ ಮಗಳಾದ ಸತೀದೇವಿಯಾಗಿದ್ದಾಗ

ನ ಗ್ರಹಾಃ ಪೂಜಿತಾಸ್ತೇನ ದಕ್ಷೇಣ ಚ ಮಹಾತ್ಮನಾ ।
ಗ್ರಹಾಣಾಂ ವಿಷಯತ್ವೇನ ಸಚ್ಛಿದ್ರೋಽಯಂ ಮಹಾನಭೂತ್ ॥ ೯೦ ॥
ತಸ್ಮಾದ್ಯಥೋಕ್ತವಿಧಿನಾ ಕರ್ತುಮರ್ಹಸಿ ಸುವ್ರತ ।
ವಿವಾಹಂ ಸ್ವಂ ಮಹಾಭಾಗ ದೇವಾನಾಂ ಕಾರ್ಯಸಿದ್ಧಯೇ ॥ ೯೧ ॥
ತದೋವಾಚ ಮಹಾಬಾಹುರ್ಗಿರಿಜಾಂ ಪ್ರಹಸನ್ನಿವ ।
ಸ್ವಭಾವೇನೈವ ತತ್ಸರ್ವಂ ಜಂಗಮಾಜಂಗಮಂ ಮಹತ್ ।
ಜಾತಂ ತ್ವಯಾ ಮೋಹಿತಂ ಚ ತ್ರಿಗುಣೈಃ ಪರಿವೇಷ್ಟಿತಂ ॥ ೯೨ ॥
ಅಹಂಕಾರಾತ್ಸಮುತ್ಪನ್ನಂ ಮಹತ್ತತ್ತ್ವಂ ಚ ಪಾರ್ವತಿ
ಮಹತ್ತತ್ತ್ವಾತ್ತಮೋ ಜಾತಂ ತಮಸಾವೇಷ್ಟಿತಂ ನಭಃ ॥ ೯೩ ॥
ನಭಸೋ ವಾಯುರುತ್ಪನ್ನೋ ವಾಯೋರಗ್ನಿರಜಾಯತ ।
ಅಗ್ನೇರಾಪಃ ಸಮುತ್ಪನ್ನಾ ಅದ್ಭ್ಯೋ ಜಾತಾ ಮಹೀ ತದಾ ॥ ೯೪ ॥
ಮಹ್ಯಾದಿಕಾನಿ ಸ್ಥಾಸ್ನೂನಿ ಚರಾಣಿ ಚ ವರಾನನೇ ।
ದೃಶ್ಯಂ ಯತ್ಸರ್ವಮೇವೈತನ್ನಶ್ವರಂ ವಿದ್ಧಿ ಮಾನಿನಿ ॥ ೯೫ ॥

---

ಆತನು ನನ್ನನ್ನು ನಿನಗೆ ವಿವಾಹಾರ್ಥವಾಗಿ ಕೊಟ್ಟಾಗ ಶಾಸ್ತ್ರೋಕ್ತ ವಿಧಿಯಿಂದ ವಿವಾಹವು ನಡೆಯಲಿಲ್ಲವು. ಮಹಾತ್ಮನಾದ ಆ ದಕ್ಷನು ಆಗ ಗ್ರಹಗಳನ್ನೂ ಪೂಜಿಸಲಿಲ್ಲವು. ಆದುದರಿಂದಲೇ ಆ ಗ್ರಹದೇವತೆಗಳ ದೆಸೆಯಿಂದ ನಮಗೆ ಮಹತ್ತರವಾದ ದುಃಖವುಂಟಾಯಿತು.

೯೧–೯೨. ಆದುದರಿಂದಲೈ ಸುವ್ರತನಾದ ಶಂಕರನೇ! ಈಗ ನೀನು ದೇವತೆಗಳ ಕಾರ್ಯಸಿದ್ಧಿಗಾಗಿ ಶಾಸ್ತ್ರೋಕ್ತ ವಿಧಾನದಿಂದಲೇ ಈ ಮದುವೆಯನ್ನು ಆಗಗೊಳಿಸು" ಎಂದು ಹೇಳಿದಳು. ಆಗ ಮಹಾದೇವನು ನಸುನಗುತ್ತಲೇ ಆ ಪಾರ್ವತಿಯನ್ನು ಕುರಿತು, "ಎಲೌ ದೇವಿ! ಸ್ಥಾವರ ಜಂಗಮಾತ್ಮಕವಾದ ಈ ಪ್ರಪಂಚವೆಲ್ಲವೂ ಸ್ವಾಭಾವಿಕವಾಗಿಯೇ ನಿನ್ನಿಂದ ಸೃಷ್ಟಿಯಾಗಿ ನಿನ್ನಿಂದಲೇ ಮೋಹಿತವೂ ಆಗಿ, ಸತ್ವರಜಸ್ತಮೋಗುಣಗಳಿಂದ ಕೂಡಿದುದಾಗಿದೆ.

೯೩–೯೫. ಪಾರ್ವತಿ! ಅಹಂಕಾರದಿಂದ ಮಹತ್ತತ್ವವು ಹುಟ್ಟಿರುವುದು. ಈ ಮಹತ್ತತ್ವದಿಂದ ತಮಸ್ಸು ಹುಟ್ಟಿತು. ಈ ತಮಸ್ಸಿನಿಂದಲೇ ಆಕಾಶವೆಲ್ಲವೂ ತುಂಬಿರುವುದು. ಆಕಾಶದಿಂದ ವಾಯುವು ಹುಟ್ಟಿತು. ಈ ವಾಯುವಿನಿಂದ ಅಗ್ನಿಯೂ, ಅದರಿಂದ ಜಲವೂ, ಜಲದಿಂದ ನೆಲವೂ ಉಂಟಾಗಿರುವುದು. ಎಲೌ ವರಾನನೆಯೇ! ನೆಲವೇ ಮುಂತಾದ ಈ ಸ್ಥಾವರಗಳೂ, ಜಂಗಮಗಳೂ ಯಾವಾವುವು ಕಣ್ಣಿಗೆ ಕಾಣುತ್ತಿರುವುವೋ ಅವೆಲ್ಲವೂ ನಶ್ವರವೆಂದು ತಿಳಿದುಕೊ!

ಏಕೋಽನೇಕತ್ವಮಾಪನ್ನೋ ನಿರ್ಗುಣೋಹಿ ಗುಣಾವೃತಃ ।
ಸ್ವಜ್ಯೋತಿರ್ಭಾತಿ ಯೋ ನಿತ್ಯಂ ಪರಜ್ಯೋತಿಸ್ಸ್ವನ್ವಿತೋಽಭವತ್ ।
ಸ್ವತಂತ್ರಃ ಪರತಂತ್ರಶ್ಚ ತ್ವಯಾ ದೇವಿ ಮಹತ್ಕೃತಂ ॥ ೯೬ ॥

ಮಾಯಾಮಯಂ ಕೃತಮಿದಂ ಚ ಜಗತ್ಸಮಗ್ರಂ
ಸರ್ವಾತ್ಮನಾ ಅವಧೃತಂ ಪರಯಾ ಚ ಬುದ್ಧ್ಯಾ ।
ಸರ್ವಾತ್ಮಭಿಃ ಸುಕೃತಿಭಿಃ ಪರಮಾರ್ಥಭಾವೈಃ
ಸಂಸಕ್ತಿರಿಂದ್ರಿಯಗಣೈಃ ಪರಿವೇಷ್ಟಿತಂ ಚ ॥ ೯೭ ॥

ಕೇ ಗ್ರಹಾಃ ಕೇ ಉಡುಗಣಾಃ ಕೇ ಬಾಧ್ಯಂತೇ ತ್ವಯಾ ಕೃತಾಃ ।
ವಿಮುಕ್ತಂ ಚಾಧುನಾ ದೇವಿ ಶರ್ವಾರ್ಥಂ ವರವರ್ಣಿನಿ ॥ ೯೮ ॥
ಗುಣಕಾರ್ಯಪ್ರಸಂಗೇನ ಆವಾಂ ಪ್ರಾದುರ್ಭವಃ ಕೃತಃ ।
ತ್ವಂ ಹಿ ವೈ ಪ್ರಕೃತಿಃ ಸೂಕ್ಷ್ಮಾ ರಜಸ್ಸತ್ವತಮೋಮಯಿ ॥ ೯೯ ॥
ವ್ಯಾಪಾರದಕ್ಷಾ ಸತತಮಹಂ ಚೈವ ಸು ಮಧ್ಯಮೇ ।
ಹಿಮಾಲಯಂ ನ ಗಚ್ಛಾಮಿ ನಯಾಚಾಮಿ ಕಥಂಚನ ॥ ೧೦೦ ॥

---

೯೬–೧೦೦. ಎಲೌ ಮಾನಿನಿಯೇ! ಯಾವ ಬ್ರಹ್ಮವಸ್ತುವು ಒಂದಾಗಿದ್ದುದು ಅನೇಕವಾಗಿಯೂ, ಗುಣರಹಿತವಾಗಿದ್ದುದು ಗುಣಸಹಿತವಾಗಿಯೂ ಆಯಿತು. ಯಾವುದು ತನ್ನದೇ ಆದ ಜ್ಯೋತಿಯಿಂದ ಬೆಳಗುತ್ತಿರುವುದೋ ಅದೇ ಇತರ ಜ್ಯೋತಿಗಳೊಡಗೂಡಿ ಅನೇಕ ಜ್ಯೋತಿಗಳಾಗಿ ತೋರುತ್ತಿರುವುದು. ದೇವಿ! ಹೀಗೆ ನೀನು ಸ್ವತಂತ್ರ ಪರತಂತ್ರಗಳೆರಡನ್ನೂ ಮಹತ್ತರವಾಗಿ ಸೃಷ್ಟಿಸಿರುವೆ. ಈ ಪ್ರಕಾರವಾಗಿ ಶ್ರೇಷ್ಠವಾದ ಬುದ್ಧಿಯಿಂದ ಚೆನ್ನಾಗಿ ಯೋಚಿಸಿ ನೋಡಿದರೆ ನೀನೇ ಮಾಯಾಮಯವಾದ ಈ ಜಗತ್ತೆಲ್ಲವನ್ನೂ ನಿರ್ಮಾಣಮಾಡಿರುವೆಯೆಂಬುದು ತಿಳಿದು ಬರುತ್ತದೆ. ಹೀಗೆ ನೀನು ಸೃಷ್ಟಿ ಮಾಡಿರುವ ಈ ಜಗತ್ತಾದರೋ ಪುಣ್ಯಾತ್ಮರೂ, ಪರಮಾರ್ಥ (ಮೋಕ್ಷ)ದಲ್ಲಿಯೇ ಮನಸ್ಸುಳ್ಳವರೂ ಆದ ಸರ್ವ ಪ್ರಾಣಿಗಳಿಂದಲೂ, ಇಂದ್ರಿಯ ಗಣಗಳಿಂದಲೂ ಪರಿವೇಷ್ಟಿತವಾಗಿ ಇದರಲ್ಲಿಯೇ ಆಸಕ್ತರಾಗಿರುವದರಿಂದಲೂ ತುಂಬಿರುವುದು. ಆದುದರಿಂದೆಲೌ ಪಾರ್ವತಿಯೇ! ನೀನೇ ಸೃಷ್ಟಿಮಾಡಿರುವ ಯಾವ ಗ್ರಹಗಳು, ಯಾವ ನಕ್ಷತ್ರ ಸಮೂಹಗಳು ತಾನೇ ನಿನ್ನನ್ನೂ ನನ್ನನ್ನೂ ಭಾಧಿಸುತ್ತವೆ? ಅವುಗಳನ್ನು ಬಿಟ್ಟರೆ ನಮಗಾಗುವುದೇನು? ಇದರ ಮೇಲಾಗಿಯೋ, ಈ ಗುಣಕಾರ್ಯ ಪ್ರಸಂಗವಿಂತಿರಲು ನಾವಿಬ್ಬರೂ ಹುಟ್ಟಿದುದೆಂತು? ನಾವು ಯಾವಾಗಲೂ ಇರುವವರೇ ಅಲ್ಲವೆ? ಕೇವಲ ಸೂಕ್ಷ್ಮಳೂ, ಸತ್ವರಜಸ್ತಮೋ ಗುಣಭರಿತಳೂ ಆದ ಪ್ರಕೃತಿಯೇ ನೀನು. ನೀನು ಯಾವಾಗಲೂ ನಿನ್ನ (ಸೃಷ್ಟಿ ಸಂಮೋಹನ) ಕಾರ್ಯವನ್ನೆಸಗುವುದರಲ್ಲಿಯೇ ಸಮರ್ಥಳಾದವಳು.

ದೇಹೀತಿ ವಚನಾತ್ಸದ್ಯಃ ಪುರುಷೋ ಯಾತಿ ಲಾಘವಂ ।
ಇತ್ಥಂ ಜ್ಞಾತ್ವಾ ಚ ಭೋ ದೇವಿ ಕಿಮಸ್ಮಾಕಂ ವದಸ್ವ ವೈ ॥ ೧೦೧ ॥
ಕಾರ್ಯಂ ತ್ವದಾಜ್ಞಯಾ ಭದ್ರೇ ತತ್ಸರ್ವಂ ವಕ್ತುಮರ್ಹಸಿ ।
ತೇನೋಕ್ತಾಽತ್ರ ತದಾ ಸಾಧ್ವೀ ಉವಾಚ ಕಮಲೇಕ್ಷಣಾ ॥ ೧೦೨ ॥
ತ್ವಮಾತ್ಮಾ ಪ್ರಕೃತಿಶ್ಚಾಹಂ ನಾತ್ರ ಕಾರ್ಯಾ ವಿಚಾರಣಾ ।
ತಥಾಪಿ ಶಂಭೋ ಕರ್ತವ್ಯಂ ಮಮ ಚೋದ್ವಹನಂ ಮಹತ್ ॥ ೧೦೩ ॥
ದೇಹೋ ಹ್ಯವಿದ್ಯಯಾ ಕ್ಲಿಪ್ತೋ ವಿದೇಹೋ ಹಿ ಭವಾನ್ಪರಃ ।
ತಥಾಪ್ಯೇವಂ ಮಹಾದೇವ ಶರೀರಾವರಣಂ ಕುರು ॥ ೧೦೪ ॥
ಪ್ರಪಂಚ ರಚನಾಂ ಶಂಭೋ ಕುರುವಾಕ್ಯಾನ್ಮಮ ಪ್ರಭೋ
ಯಾಚಸ್ವ ಮಾಂ ಮಹಾದೇವ ಸೌಭಾಗ್ಯಂ ಚೈವ ದೇಹಿಮೇ ॥ ೧೦೫ ॥
ಇತ್ಯೇವಮುಕ್ತಃ ಸ ತಯಾ ಮಹಾತ್ಮಾ
ಮಹೇಶ್ವರೋ ಲೋಕವಿಡಂಬನಾಯ ।
ತಥೇತಿ ಮತ್ವಾ ಪ್ರಹಸನ್ ಜಗಾಮ
ಸ್ವಮಾಲಯಂ ದೇವವರೈಃ ಸುಪೂಜಿತಃ ॥ ೧೦೬ ॥

---

ನಾನಾದರೋ ಪುರುಷನು. ಇಂತಹ ನಾನು ಹಿಮವಂತನಲ್ಲಿಗೆ ಹೋಗುವುದಿಲ್ಲ. ನಾನೆಂದಿಗೂ ಅವನನ್ನು ಯಾಚಿಸುವುದೂ ಇಲ್ಲ.

೧೦೧–೫. ಓ ದೇವೀ! 'ದೇಹಿ' ಎಂದೊಡನೆಯೇ ಮನುಷ್ಯನು ಹಗುರ ವಾಗಿ ಹೋಗುತ್ತಾನೆ. ಈ ವಿಷಯವನ್ನರಿತಿದ್ದರೂ ನೀನು ನನಗೆ ಈ ಮಾತನ್ನೇಕೆ ಹೇಳುವೆ. ಈ ಮಾತೊಂದನ್ನುಳಿದು ನಿನ್ನ ಅಪ್ಪಣೆಯಂತೆ ನಾನು ಮಾಡಬೇಕಾದ ಕಾರ್ಯವೇನಿದ್ದರೂ ಹೇಳು" ಎಂದನು. ಆಗಲಾ ಕಮಲೇಕ್ಷಣೆಯಾದ ಪಾರ್ವತಿಯು, "ನಾಥಾ! ನೀನೇ ಪರಮಾತ್ಮನು; ನಾನೇ ಪ್ರಕೃತಿಯು; ಇದರಲ್ಲಿ ಸಂಶಯವಿಲ್ಲವು. ಆದರೂ ನೀನು ನನ್ನನ್ನು ಮದುವೆಯಾಗಲೇಬೇಕು. ದೇಹವೆಂಬುದು ಅವಿದ್ಯೆಯಿಂದಾಗಿರುವುದು. ನೀನಾದರೋ ವಿದೇಹನಾದ ಪರಮ ಪುರುಷನು. ಆದರೂ ಎಲೈ ಮಹಾದೇವನೇ! ನೀನೀಗ ಶರೀರಕ್ಕೆ ಒಂದು ಆವರಣವನ್ನುಂಟುಮಾಡುವವನಾಗು. ಎಲೈ ಶಂಭುವೇ! ಪ್ರಭು; ಈಗ ನೀನು ನನ್ನ ಮಾತಿನಂತೆ ಪ್ರಪಂಚ ರಚನೆಯನ್ನೆಸಗುವವನಾಗು. ನನಗಾಗಿ ನೀನು ನನ್ನ ತಂದೆಯನ್ನು ಯಾಚಿಸಬೇಕು. ನನಗೆ ಸೌಭಾಗ್ಯವನ್ನು ದಯ ಪಾಲಿಸಬೇಕು" ಎಂದು ಹೇಳಿದಳು.

೧೦೬–೧೧. ಪಾರ್ವತೀದೇವಿಯು ಈರೀತಿ ಹೇಳಲು ಮಹಾತ್ಮನಾದ ಆ ಮಹೇಶ್ವರನು ನಕ್ಕು ಲೋಕವಿಡಂಬನಕ್ಕಾಗಿ ಹಾಗೆಯೇ ಆಗಲೆಂದು ಹೇಳಿ, ದೇವಶ್ರೇಷ್ಠರಿಂದ ಪೂಜಿತನಾಗಿ ತನ್ನ ಮನೆಗೆ ಹೋದನು. ಇದೇ ಸಮಯ

ಏತಸ್ಮಿನ್ನಂತರೇ ತತ್ರ ಹಿಮವಾನ್‌ಗಿರಿಭಿಃ ಸಹ ।
ಮೇನಯಾ ಭಾರ್ಯಯಾ ಸಾರ್ಧಮಾಜಗಾಮ ತ್ವರಾನ್ವಿತಃ ॥ ೧೦೭ ॥
ಪಾರ್ವತೀ ದರ್ಶನಾರ್ಥಂ ಚ ಸುತೈಶ್ಚ ಪರಿವಾರಿತಃ ।
ತೇನ ದೃಷ್ಟ್ವಾ ಮಹಾದೇವೀ ಸಖೀಭಿಃ ಪರಿವಾರಿತಾ ॥ ೧೦೮ ॥
ಪಾರ್ವತ್ಯಾಚ ತದಾ ದೃಷ್ಟೋ ಹಿಮವಾನ್‌ಗಿರಿಭಿಃ ಸಹ ।
ಅಭ್ಯುತ್ಥಾನಪರಾ ಸಾಧ್ವೀ ಪ್ರಣಮ್ಯ ಶಿರಸಾ ತದಾ ।
ಪಿತರೌ ಚ ತದಾ ಭ್ರಾತೄನ್ ಬಂಧೂಂಶ್ಚೈವ ಚ ಸರ್ವಶಃ ॥ ೧೦೯ ॥
ಸ್ವಮಂಕಮಾರೋಪ್ಯ ಮಹಾಯಶಾಸ್ತದಾ
ಸುತಾಂ ಪರಿಷ್ವಜ್ಯ ಚ ಬಾಷ್ಪಪೂರಿತಃ ।
ಉವಾಚ ವಾಕ್ಯಂ ಮಧುರಂ ಹಿಮಾಲಯಃ
ಕಿಂ ವೈ ಕೃತಂ ಸಾಧ್ವಿ ಯಥಾತಥೇನ ॥ ॥ ೧೧೦ ॥
ತತ್ಕಥ್ಯತಾಂ ಮಹಾಭಾಗೇ ಸರ್ವಂ ಶುಶ್ರೂಷತಾಂ ಹಿ ನಃ ।
ತಚ್ಛ್ರುತ್ವಾ ಮಧುರಂ ವಾಕ್ಯಮುವಾಚ ಪಿತರಂ ಪ್ರತಿ ॥ ೧೧೧ ॥
ತಪಸಾ ಪರಮೇಣೈವ ಪ್ರಾರ್ಥಿತೋ ಮದನಾಂತಕಃ ।
ಶಾಂತಂ ಚ ಮೇ ಮಹತ್ಕಾರ್ಯಂ ಸರ್ವೇಷಾಮಪಿ ದುರ್ಲಭಂ ॥೧೧೨॥

---

ದಲ್ಲಿಯೇ ಹಿಮವಂತನೂ ಸಹ ಇತರ ಪರ್ವತರಾಜರೊಡನೆಯೂ, ಭಾರ್ಯೆಯಾದ ಮೇನಾದೇವಿಯೊಡನೆಯೂ ಬಹು ತ್ವರೆಯುಳ್ಳವನಾಗಿ ಆ ಪ್ರದೇಶಕ್ಕೆ ಬಂದನು. ಮಕ್ಕಳೊಡಗೂಡಿ ಪಾರ್ವತಿಯನ್ನು ನೋಡಲೋಸುಗ ಬಂದಿದ್ದ ಆತನು ಗೆಳತಿಯರ ನಡುವೆ ಕುಳಿತಿದ್ದ ಆ ಮಹಾದೇವಿಯನ್ನು ಕಂಡನು. ಆಗ ಪಾರ್ವತಿಯೂ ಸಹ ಪರ್ವತರಾಜರೊಡಗೂಡಿ ಬಂದಿರುವ ತನ್ನ ತಂದೆಯಾದ ಆ ಹಿಮವಂತನನ್ನು ಕಂಡು ಕೂಡಲೆ ಸಖಿಯರೊಡನೆ ಮೇಲಕ್ಕೆದ್ದು ನಿಂತು ಮೊದಲು ತನ್ನ ತಾಯಿ ತಂದೆಯರನ್ನೂ ಆ ಬಳಿಕ ಇತರ ಪರ್ವತರಾಜರನ್ನೂ ನಮಸ್ಕರಿಸಿದಳು. ಆಗ ಮಹಾಯಶಸ್ವಿಯಾದ ಹಿಮವಂತನು, ಅವಳನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಅವಳನ್ನಪ್ಪಿ ಆನಂದಬಾಷ್ಪಗಳನ್ನು ಸುರಿಸುತ್ತ ಅವಳನ್ನು ಕುರಿತು ಮಧುರವಾಗಿ "ಮಗಳೇ! ಸಾಧ್ವಿಯಾದ ನೀನು ಯಾವ ಕಾರ್ಯವನ್ನು ಸಾಧಿಸಿದೆಯೆಂಬುದನ್ನು ಯಥಾರ್ಥವಾಗಿ ತಿಳಿಸು. ನಾವೆಲ್ಲರೂ ಅದನ್ನು ಕೇಳಲು ಬಹಳ ಕುತೂಹಲರಾಗಿರುವೆವು" ಎನ್ನಲು, ಆ ಗಿರಿಜೆಯು ಮನೋಹರವಾದ ಆ ಮಾತನ್ನು ಕೇಳಿ ಅವನನ್ನು ಕುರಿತು ಹೀಗೆಂದಳು.

೧೧೨-೧೪. "ತಂದೆಯೇ! ನಾನು ಶ್ರೇಷ್ಠವಾದ ತಪಸ್ಸಿನಿಂದಲೇ ಮದನಾಂತಕನಾದ ಆ ಮಹಾದೇವನನ್ನು ಮೆಚ್ಚಿಸಿದೆನು. ಇತರರಾರಿಗೂ ದುರ್ಲಭವಾದ ಮಹತ್ಕಾರ್ಯವನ್ನು ನಾನೀಗ ಸಾಧಿಸಿರುವೆನು. ಆ ಪರಶಿವನು ನನ್ನ

ತತ್ರ ತುಷ್ಟೋ ಮಹಾದೇವೋ ವರಣಾರ್ಥಂ ಸಮಾಗತಃ ।
ಸಮಯೋಕ್ತಸ್ತದಾ ಶಂಭುರ್ಮಮ ಪಾಣಿಗ್ರಹಃ ಕಥಂ ॥ ೧೧೩ ॥
ಕ್ರಿಯತೇ ಚ ತದಾ ಶಂಭೋ ಮಮ ಪಿತ್ರಾ ವಿನಾಽಧುನಾ ।
ಯಥಾಗತೇನ ಮಾರ್ಗೇಣ ಗತೋಽಸೌ ತ್ರಿಪುರಾಂತಕಃ ॥ ೧೧೪ ॥
ತಸ್ಯಾಸ್ತದ್ವಚನಂ ಶ್ರುತ್ವಾ ಅವಾಪ ಪರಮಾಂ ಮುದಂ ।
ಬಂಧುಭಿಃ ಸಹ ಧರ್ಮಾತ್ಮಾ ಉವಾಚ ಸ್ವಸುತಾಂ ಪುನಃ ॥ ೧೧೫ ॥
ಸ್ವಗೃಹಂ ಚಾದ್ಯ ಗಚ್ಛಾಮೋ ವಯಂ ಸರ್ವೇ ಚ ಭೂಧರಾಃ ।
ಅನಯಾರಾಧಿತೋ ದೇವಃ ಪಿನಾಕೀ ವೃಷಭಧ್ವಜಃ ॥ ೧೧೬ ॥
ಇತ್ಯುಚಸ್ತೇ ಸುರಾಃ ಸರ್ವೇ ಹಿಮಾಲಯಪುರೋಗಮಾಃ ।
ಪಾರ್ವತೀ ಸಹಿತಾಃ ಸರ್ವೇ ತುಷ್ಟುವುರ್ವಾಗ್ಭಿರಾದೃತಾಃ ॥ ೧೧೭ ॥
ತಾಂ ಸ್ತೂಯಮಾನಾಂ ಚ ತದಾ ಹಿಮಾಲಯೋ
ಹ್ಯಾರೋಪ್ಯ ಚಾಂಸಂ ವರವರ್ಣಿನೀಂ ಚ ।
ಸರ್ವೇಽಥ ಶೈಲಾಃ ಪರಿವಾರ್ಯ ಚೋತ್ಸುಕಾಃ
ಸಮಾನಯಾಮಾಸುರಥ ಸ್ವಮಾಲಯಂ ॥ ೧೧೮ ॥
ದೇವದುಂದಭಯೋ ನೇದುಃ ಶಂಖತೂರ್ಯಾಣ್ಯನೇಕಶಃ ।
ವಾದಿತ್ರಾಣಿ ಬಹೂನ್ಯೇವ ವಾದ್ಯಮಾನಾನಿ ಸರ್ವಶಃ ॥ ೧೧೯ ॥

---

ತಪಸ್ಸಿಗೊಲಿದು ನನ್ನನ್ನು ವರಿಸಲು ಇಲ್ಲಿಗೈತಂದನು. ನಾನಾದರೋ, 'ಎಲೈ ಶಂಭುವೇ! ನಮ್ಮ ತಂದೆಯ ಅನುಮತಿಯಿಲ್ಲದೆಯೇ ನನ್ನ ಪಾಣಿಗ್ರಹಣ ವಾಗುವುದೆಂತು?' ಎಂದೆನು. ಈ ಮಾತನ್ನು ಕೇಳಿ ಆ ತ್ರಿಪುರಾಂತಕನು ಬಂದ ದಾರಿಯನ್ನು ಹಿಡಿದು ಹೊರಟುಹೋದನು."

೧೧೫–೨೦. ಆಕೆಯ ಈ ಮಾತನ್ನು ಕೇಳಿ ಬಂಧುಗಳೊಡಗೂಡಿದ ಧರ್ಮಾತ್ಮನಾದ ಆ ಹಿಮವಂತನು ಪರಮಸಂತೋಷಭರಿತನಾಗಿ, "ಎಲೈ ಪರ್ವತ ರಾಜರೇ! ನನ್ನ ಮಗಳಾದ ಪಾರ್ವತಿಯು ಪಿನಾಕಪಾಣಿಯಾದ ಆ ವೃಷಭ ಧ್ವಜನನ್ನು ತಪಸ್ಸಿನಿಂದ ಮೆಚ್ಚಿಸಿರುವಳು. ಆದುದರಿಂದ ನಾವು ಈಕೆಯೊಡನೆ ನಮ್ಮಮನೆಗೆ ಹೋಗೋಣ" ಎಂದು ಹೇಳಿದನು. ಈ ರೀತಿ ನುಡಿದ ಬಳಿಕ ಸಮಸ್ತ ದೇವತೆಗಳೂ, ಹಿಮವಂತನಾದಿಯಾದ ಸಮಸ್ತ ಪರ್ವತರಾಜರೂ ಉತ್ಸಾಹಕರ ವಾದ ವಾಕ್ಕುಗಳಿಂದ ಆ ಮಹಾದೇವಿಯನ್ನು ಸ್ತುತಿಸಿದರು. ಹೀಗೆ ಎಲ್ಲರೂ ಆಕೆಯನ್ನು ಸ್ತುತಿಸುತ್ತಿರಲು ಹಿಮವಂತನು, ವರವರ್ಣಿನಿ(ಸುಂದರಿ)ಯಾದ ಆಕೆಯನ್ನು ಭುಜದ ಮೇಲೆ ಕುಳ್ಳಿರಿಸಿಕೊಂಡನು. ತರುವಾಯ ಸಮಸ್ತ ಪರ್ವತರಾಜರೂ ಸಹ ಆ ತಂದೆ ಮಕ್ಕಳನ್ನು ಅಕ್ಕರೆಯಿಂದ ಮನೆಗೆ ಕರೆತಂದರು. ಆಗ ದೇವದುಂದುಭಿಗಳು ಮೊಳಗಿದುವು. ಅನೇಕ ಶಂಖಗಳೂ, ತುತ್ತೂರಿಗಳೂ

ಪುಷ್ಪವರ್ಷೇಣ ಮಹತಾ ತೇನಾನೀತಾ ಗೃಹಂ ಪ್ರತಿ ॥ ೧೨೦ ॥
ಸಾ ಪೂಜ್ಯಮಾನಾ ಬಹುಭಿಸ್ತದಾನೀಂ
ಮಹಾವಿಭೂತ್ಯುಲ್ಲಸಿತಾ ತಪಸ್ವಿನೀ ।
ತಥೈವ ದೇವೈಃ ಸಹಚಾರಣೈಶ್ಚ
ಮಹರ್ಷಿಭಿಃ ಸಿದ್ಧಗಣೈಶ್ಚ ಸರ್ವಶಃ ॥ ೧೨೧ ॥
ಪೂಜ್ಯಮಾನಾ ತದಾ ದೇವೀ ಉವಾಚ ಕಮಲಾಸನಂ ।
ದೇವಾನೃಷೀನ್ಪಿತೄನ್ಯಕ್ಷಾನನ್ಯಾನ್ಸರ್ವಾನ್ಸಮಾಗತಾನ್ ॥ ೧೨೨ ॥
ಗಚ್ಛಧ್ವಂ ಸರ್ವಏವೈತೇ ಯೇಽನ್ಯೇ ಹ್ಯತ್ರ ಸಮಾಗತಾಃ ।
ಸ್ವಂ ಸ್ವಂ ಸ್ಥಾನಂ ಯಥಾ ಜೋಷಂ ಸೇವ್ಯತಾಂ ಪರಮೇಶ್ವರಃ ॥ ೧೨೩ ॥
ಏವಂ ತದಾನೀಂ ಸ್ವಪಿತುರ್ಗೃಹಂ ಗತಾ
ಸಂಶೋಭಮಾನಾ ಪರಮೇಣ ವರ್ಚಸಾ ।
ಸಾ ಪಾರ್ವತೀ ದೇವವರ್ಯೈಃ ಸುಪೂಜಿತಾ
ಸಂಚಿಂತಯಂತೀ ಮನಸಾ ಸದಾಶಿವಂ ॥ ೧೨೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಪಾರ್ವತ್ಯೈ ಶಂಕರೇಣ
ಸ್ವರೂಪದರ್ಶನಂ" ನಾಮ ದ್ವಾವಿಂಶೋಽಧ್ಯಾಯಃ

---

ಧ್ವನಿಗೈದುವು. ಎತ್ತತ್ತಲೂ ಅನೇಕ ಬಗೆಯ ವಾದಿತ್ರಗಳು ಮೊಳಗಿದುವು. ಮಹತ್ತರವಾದ ಪುಷ್ಪವೃಷ್ಟಿಯಾಗುತ್ತಿರಲು ಅವರೆಲ್ಲರೂ ಆ ದೇವಿಯನ್ನು ಮನೆಗೆ ಕರೆತಂದರು.

೧೨೧–೨೪. ಆಗಲಾ ತಪಸ್ವಿನಿಯಾದ ಪಾರ್ವತಿಯು ಬಹುಮಂದಿ ದೇವತೆಗಳಿಂದಲೂ, ಚಾರಣರಿಂದಲೂ, ಮಹರ್ಷಿಗಳಿಂದಲೂ, ಸಿದ್ಧಗಣಗಳಿಂದಲೂ ಪೂಜಿತೆಯಾಗಿ ಮಹತ್ತರವಾದ ತೇಜಸ್ಸಿನಿಂದೊಪ್ಪಿ ಬೆಳಗಿದಳು. ಹೀಗೆ ಎಲ್ಲರಿಂದಲೂ ಪೂಜೆಯನ್ನು ಕೈಕೊಂಡ ಬಳಿಕ ಆ ದೇವಿಯು, ಅಲ್ಲಿಗೆ ಬಂದಿದ್ದ ಬ್ರಹ್ಮನನ್ನೂ, ದೇವತೆಗಳನ್ನೂ, ಋಷಿಗಳನ್ನೂ, ಪಿತೃ ದೇವತೆಗಳನ್ನೂ, ಯಕ್ಷರನ್ನೂ ಕುರಿತು, "ಎಲೈ ದೇವತೆಗಳಿರಾ! ಇಲ್ಲಿಗೈತಂದಿರುವ ನೀವೆಲ್ಲರೂ ಅಲ್ಲದೆ ಇತರರೂ ಸಹ ನಿಮ್ಮ ನಿಮ್ಮ ಸ್ಥಾನಗಳಿಗೆ ಹೋಗಿ ಪರಮೇಶ್ವರನನ್ನು ನಿಮ್ಮಿಷ್ಟಾನುಸಾರ ಪೂಜಿಸಿರಿ" ಎಂದು ಹೇಳಿದಳು. ಈ ರೀತಿ ಆ ಪಾರ್ವತಿಯು ತನ್ನ ತಂದೆಯ ಮನೆಯನ್ನು ಸೇರಿ ಪರಮತೇಜಸ್ಸಿನಿಂದ ಶೋಭಿಸುತ್ತ ದೇವಶ್ರೇಷ್ಠರ ಪೂಜೆಯನ್ನು ಕೈಕೊಂಡವಳಾಗಿ ತನ್ನ ಮನಸ್ಸಿನಲ್ಲಿಯೇ ಆ ಸದಾಶಿವನನ್ನು ಧ್ಯಾನಿಸುತ್ತಿದ್ದಳು.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ
ಕೇದಾರಖಂಡದಲ್ಲಿ "ಪರಶಿವನು ಪಾರ್ವತಿಗೆ ನಿಜರೂಪದಿಂದ ಪ್ರತ್ಯಕ್ಷನಾದುದು" ಎಂಬ
ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ತ್ರಯೋವಿಂಶೋಽಧ್ಯಾಯಃ

## ಶ್ರೀ ಶಿವಸ್ಯ ವಿವಾಹ ವರ್ಣನಂ

**ಲೋಮಶ ಉವಾಚ:—**

**ಏತಸ್ಮಿನ್ನಂತರೇ ತತ್ರ ಮಹೇಶೇನ ಪ್ರಚೋದಿತಾಃ ।**
**ಆಜಗ್ಮುಃ ಸಹಸಾ ಸದ್ಯಃ ಋಷಯೋಽಪಿ ಹಿಮಾಲಯಂ ॥ ೧ ॥**
**ತಾನ್ ದೃಷ್ಟ್ವಾ ಸಹಸೋತ್ಥಾಯ ಹಿಮಾದ್ರಿಃ ಪ್ರೀತಮಾನಸಃ ।**
**ಪೂಜಯಾಮಾಸ ತಾನ್ಸರ್ವಾನುವಾಚ ನತಕಂಧರಃ ॥ ೨ ॥**
**ಕಿಮರ್ಥಮಾಗತಾ ಯೂಯಂ ಬ್ರೂತಾಽಗಮನಕಾರಣಂ ।**
**ತದೋಚುಃ ಸಪ್ತಋಷಯೋ ಮಹೇಶಪ್ರೇರಿತಾ ವಯಂ ॥ ೩ ॥**
**ಸಮಾಗತಾಸ್ತ್ವತ್ಸಕಾಶಂ ಕನ್ಯಾಯಾಶ್ಚ ವಿಲೋಕನೇ ।**
**ತಾನಸ್ಮಾನ್ವಿದ್ಧಿ ಭೋಃ ಶೈಲ ಸ್ವಾಂ ಕನ್ಯಾಂ ದರ್ಶಯಾಽಶುವೈ ॥ ೪ ॥**
**ತಥೇತ್ಯುಕ್ತ್ವಾ ಋಷಿಗಣಾನಾನೀತಾ ತತ್ರ ಪಾರ್ವತೀ ।**
**ಸ್ವೋತ್ಸಂಗೇ ಪರಿಗೃಹ್ಯಾಶು ಗಿರೀಂದ್ರಃ ಪುತ್ರವತ್ಸಲಃ ।**
**ಹಿಮವಾನ್ ಗಿರಿರಾಜೋಽಥ ಉವಾಚ ಪ್ರಹಸನ್ನಿವ ॥ ೫ ॥**

---

### ಕನ್ನಡದ ಅನುವಾದ

#### ಶ್ರೀ ಶಿವ ವಿವಾಹ ವರ್ಣನವು

೧–೪. ಲೋಮಶನು ಹೇಳುತ್ತಾನೆ:—ಅಯ್ಯಾ ಶೌನಕಾದಿ ಮಹರ್ಷಿಗಳಿರಾ! ಇದೇ ಸಮಯದಲ್ಲಿಯೇ ಪರಮೇಶ್ವರನು ಕಳುಹಿಸಿದ ಮಹರ್ಷಿಗಳೂ ಸಹ ಹಿಮಮತ್ಪರ್ವತಕ್ಕೈತಂದರು. ಹಿಮವಂತನಾದರೋ ಈ ರೀತಿ ದಯಮಾಡಿಸಿದ ಆ ಮಹರ್ಷಿಗಳನ್ನು ಕಂಡು ಕೂಡಲೇ ಎದ್ದುನಿಂತು ಅವರನ್ನು ಗೌರವಿಸಿ ಸಂತುಷ್ಟಮಾನಸನಾಗಿ ವಿನಯದಿಂದ ತಲೆಬಾಗಿ ಅವರೆಲ್ಲರನ್ನೂ ಕುರಿತು, "ಎಲೈ ಮುನಿಗಳಿರಾ! ತಾವೆಲ್ಲರೂ ಬಂದ ಉದ್ದೇಶವೇನೆಂಬುದನ್ನು ತಿಳಿಸಿರಿ" ಎಂದು ಕೇಳಿದನು. ಆಗಲಾ ಸಪ್ತರ್ಷಿಗಳು ಆ ಹಿಮವಂತನನ್ನು ಕುರಿತು, "ಎಲೈ ಗಿರಿರಾಜನೇ! ನಾವೆಲ್ಲರೂ ಮಹೇಶ್ವರನಿಂದ ಪ್ರೇರಿತರಾಗಿ ಕನ್ಯೆಯನ್ನು ನೋಡಲೋಸುಗ ನಿನ್ನಲ್ಲಿಗೆ ಬಂದಿರುವೆವೆಂದು ತಿಳಿ. ಆದುದರಿಂದ ನೀನು ನಿನ್ನ ಮಗಳನ್ನು ಜಾಗ್ರತೆಯಾಗಿ ನಮಗೆ ತೋರಿಸುವವನಾಗು" ಎಂದರು.

೫–೧೦. ಈ ಮಾತನ್ನು ಕೇಳಿ ಪುತ್ರವತ್ಸಲನಾದ ಆ ಹಿಮವಂತನು ಹಾಗೆಯೇ ಆಗಲೆಂದು ನುಡಿದು ಪಾರ್ವತಿಯನ್ನು ಕರೆತಂದು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಆ ಮಹರ್ಷಿಗಳನ್ನು ಕುರಿತು ನಸುನಗುತ್ತ, "ಎಲೈ ಸಪ್ತರ್ಷಿಗಳಿರಾ! ಈಕೆಯೇ ನನ್ನ ಮಗಳು; ಅದಂತಿರಲಿ. ಈಗ ನಾನು

**ಇಯಂ ಸುತಾ ಮದೀಯಾ ಹಿ ವಾಕ್ಯಂ ಶೃಣುತ ಮೇ ಪುನಃ ।**
**ತಪಸ್ವಿನಾಂ ವರಿಷ್ಠೋಽಸೌ ವಿರಕ್ತೋ ಮದನಾಂತಕಃ ॥ ೬ ॥**
**ಕಥಮುದ್ವಹನಾರ್ಥೀ ಚ ಯೇನಾಽನಂಗಃ ಕೃತಃ ಸ್ಮರಃ ।**
**ಅತ್ಯಾಸನ್ನೇ ಚಾತಿದೂರೇ ಆಢ್ಯೇ ಧನವಿವರ್ಜಿತೇ ।**
**ವೃತ್ತಿಹೀನೇ ಚ ಮೂರ್ಖೇ ಚ ಕನ್ಯಾದಾನಂ ನ ಶಸ್ಯತೇ ॥ ೭ ॥**
**ಮೂಢಾಯ ಚ ವಿರಕ್ತಾಯ ಆತ್ಮಸಂಭಾವಿತಾಯ ಚ ।**
**ಆತುರಾಯ ಪ್ರಮತ್ತಾಯ ಕನ್ಯಾದಾನಂ ನ ಕಾರಯೇತ್ ॥ ೮ ॥**
**ತಸ್ಮಾನ್ಮಯಾ ವಿಚಾರ್ಯೈವ ಭವದ್ಭಿರ್ಋಷಿಸತ್ತಮಾಃ ।**
**ಪ್ರದಾತವ್ಯಾ ಮಹೇಶಾಯ ಏತನ್ಮೇ ವ್ರತಮುತ್ತಮಂ ॥ ೯ ॥**
**ತಚ್ಛ್ರುತ್ವಾ ಗಿರಿರಾಜಸ್ಯ ವಚನಂ ತೇ ಮಹರ್ಷಯಃ ।**
**ಏಕಪದ್ಯೇನ ಊಚುಸ್ತೇ ಪ್ರಹಸ್ಯ ಚ ಹಿಮಾಲಯಂ ॥ ೧೦ ॥**
**ಯಯಾ ಕೃತಂ ತಪಸ್ತೀವ್ರಂ ಯಯಾಽಚಾರಾಧಿತಃ ಶಿವಃ ।**
**ತಪಸಾ ತೇನ ಸಂತುಷ್ಟಃ ಪ್ರಸನ್ನೋಽದ್ಯ ಸದಾಶಿವಃ ॥ ೧೧ ॥**
**ಅಸ್ಯಾಸ್ತಸ್ಯ ಚ ಭೋ ಶೈಲ ನ ಜಾನಾಸಿ ಚ ಕಿಂಚನ ।**
**ಮಹಿಮಾನಂ ಪರಂ ಚೈವ ತಸ್ಮಾದೇನಾಂ ಪ್ರಯಚ್ಛನ್ವೈ ॥ ೧೨ ॥**

---

ಹೇಳುವ ಮಾತನ್ನು ಕೇಳಿರಿ. ನಿಮ್ಮ ಪರಮೇಶ್ವರನು ಪರಮ ಪತಸ್ವಿಯು. ಮದನನ್ನೇ ಮುಗಿಸಿದ ವಿರಕ್ತನು. ಹೀಗೆ ಸ್ಮರನನ್ನೇ ಅನಂಗನನ್ನಾಗಿಸಿದ ಆ ಪರಶಿವನು ವಿವಾಹವನ್ನು ಬಯಸಿದುದೆಂತು? ಬಹಳ ಹತ್ತಿರವಿರುವವನೂ, ಬಹುದೂರವಿರುವವನೂ, ಆಢ್ಯನೂ, ದರಿದ್ರನೂ, ನಡತೆಯಿಲ್ಲದವನೂ, ಮೂರ್ಖನೂ ಆದ ಪುರುಷನಿಗೆ ಕನ್ಯಾದಾನ ಮಾಡುವುದು ಶ್ರೇಷ್ಠವಲ್ಲವು. ಮೂಢನೂ, ವಿರಕ್ತನೂ, ತಾನೇ ದೊಡ್ಡವನೆಂದು ಬೀಗುವವನೂ, ರೋಗಿಯೂ, ಮದಿಸಿರುವವನೂ ಆದವನಿಗೆ ಕನ್ಯಾದಾನಮಾಡಲೇಬಾರದು. ಆದುದರಿಂದೆಲೈ ಮಹರ್ಷಿಗಳೇ! ನಾನು ಇದೆಲ್ಲವನ್ನೂ ನಿಮ್ಮೊಡನೆ ವಿಚಾರಮಾಡಿಯೇ ಆ ಮಹೇಶ್ವರನಿಗೆ ನನ್ನ ಮಗಳನ್ನು ಕೊಡಬೇಕೆಂಬುದು ನನ್ನ ಉತ್ತಮ ವ್ರತ ವಾಗಿರುವುದು'' ಎಂದನು. ಗಿರಿಶನಾಡಿದ ಈ ಮಾತುಗಳನ್ನು ಕೇಳಿ ಆ ಮಹರ್ಷಿಗಳೆಲ್ಲರೂ ಏಕಕಾಲದಲ್ಲಿಯೇ ನಕ್ಕು ಆತನನ್ನು ಕುರಿತು ಹೀಗೆಂದರು.

೧೧–೧೫. ''ಅಯ್ಯಾ ಗಿರಿರಾಜನೇ! ಮಹಾತ್ಮನಾದ ಸದಾಶಿವನು ನಿನ್ನ ಮಗಳಾದ ಪಾರ್ವತಿಯೆಸಗಿದ ತಪಸ್ಸು ಮತ್ತು ಪೂಜೆಗಳಿಂದ ಪ್ರಸನ್ನನಾಗಿರು ವನು. ನೀನು ನಿನ್ನ ಮಗಳಾದ ಪಾರ್ವತಿಯ ಮತ್ತು ಪರಮೇಶ್ವರನ ಮಹಿಮೆ ಯನ್ನು ಸ್ವಲ್ಪವೂ ತಿಳಿದಿರುವುದಿಲ್ಲ. ಆದುದರಿಂದ ನೀನು ಯಾವ ಯೋಚನೆ ಯನ್ನೂ ಮಾಡದೆ ಆಕೆಯನ್ನು ಪರಶಿವನಿಗಿತ್ತು ಮದುವೆಮಾಡು. ನಮ್ಮ

ಶಿವಾಯ ಗಿರಿಜಾಮೇನಾಂ ಕುರುಷ್ವ ವಚನಂ ಹಿ ನಃ ।
ತಚ್ಛ್ರುತ್ವಾ ವಚನಂ ತೇಷಾಮೃಷೀಣಾಂ ಭಾವಿತಾತ್ಮನಾಂ ॥ ೧೩ ॥
ಉವಾಚ ತ್ವರಯಾ ಯುಕ್ತಃ ಪರ್ವತಾನ್ ಪರ್ವತೇಶ್ವರಃ ।
ಹೇ ಮೇರೋ ಹೇ ನಿಷಧ ಕಿಂ ಗಂಧಮಾದನ ಮಂದರ ।
ಮೈನಾಕ ಕ್ರಿಯತಾಮದ್ಯ ಶಂಸಧ್ವಂ ಚ ಯಥಾತಥಂ ॥ ೧೪ ॥
ಮೇನಾ ತದಾ ಉವಾಚೇದಂ ವಾಕ್ಯಂ ವಾಕ್ಯವಿಶಾರದಾ ।
ಅಧುನಾ ಕಿಂ ವಿಮರ್ಶೇನ ಕೃತಂ ಕಾರ್ಯಂ ತದೈವಹಿ ॥ ೧೫ ॥
ಉತ್ಪನ್ನೇಯಂ ಮಹಾಭಾಗ ದೇವಕಾರ್ಯಾರ್ಥಮೇವಚ ।
ಪ್ರದಾತವ್ಯಾ ಶಿವಾಯೇತಿ ಶಿವಸ್ಯಾಽರ್ಥೇಽವತಾರಿತಾ ॥ ೧೬ ॥
ಅನಯಾರಾಧಿತೋ ರುದ್ರೋ ರುದ್ರೇಣ ಪರಿಭಾವಿತಾ ।
ಇಯಂ ಸತೀ ಮಹಾಭಾಗಾ ಶಿವಾಯ ಪ್ರತಿದೀಯತಾಂ ॥ ೧೭ ॥
ನಿಮಿತ್ತಮಾತ್ರಂ ಚ ಕೃತಂ ತಯಾ ವೈ ಶಿವಪೂಜನೇ ।
ಏತಚ್ಛ್ರುತ್ವಾ ವಚಸ್ತಸ್ಯಾ ಮೇನಾಯಾಂ ಪರಿಭಾಷಿತಂ ॥ ೧೮ ॥
ಪರಿತುಷ್ಟೋ ಹಿಮಾದ್ರಿಶ್ಚ ವಾಕ್ಯಂ ಚೇದಮುವಾಚಹ ।
ಋಷೀನ್ಪ್ರತಿ ನಿರೀಕ್ಷ್ಯಂ ತಾಂ ಕನ್ಯೇಯಂ ಮಮ ಸಂಪ್ರತಿ ॥ ೧೯ ॥

---

ಈ ಮಾತನ್ನು ನಡೆಸಿಕೊಡು.'' ಹಿಮವಂತನಾದರೋ ಮಹಾ ಜ್ಞಾನಿಗಳಾದ ಅವರ ಈ ನುಡಿಯನ್ನಾಲಿಸಿ ಆ ಬಳಿಕ ಬಹಳ ತ್ವರೆಯುಳ್ಳವನಾಗಿ ತನ್ನ ನೆಂಟರಿಷ್ಟರೆಲ್ಲರನ್ನೂ ಕುರಿತು, ''ಎಲೈ ಮೇರುವೇ, ಮಂದರ, ಗಂಧಮಾದನ, ಮೈನಾಕ! ಈ ಮದುವೆಯ ವಿಷಯದಲ್ಲಿ ನಾನು ಯಾವರೀತಿ ನಡೆಯಬೇಕೆಂಬುದನ್ನು ನೀವೆಲ್ಲರೂ ಸರಿಯಾಗಿ ತಿಳಿಯ ಹೇಳಿರಿ'' ಎಂದು ಕೇಳಿದನು. ಆಗ ಅವನ ಹೆಂಡತಿಯೂ ವಾಕ್ಯವಿಶಾರದೆಯೂ ಆದ ಮೇನಾದೇವಿಯು ''ಎಲೈ ಪ್ರಿಯನೇ! ಈಗ ಈ ರೀತಿ ವಿಮರ್ಶೆಮಾಡಿ ಫಲವೇನು ?

೧೬–೧೯. ಈ ಕಾರ್ಯವು ಅಂದೇ ನಡೆದಿರುತ್ತದೆ. ಮಹಾ ಭಾಗ್ಯಶಾಲಿನಿಯಾದ ನಮ್ಮ ಗಿರಿಜೆಯು ದೇವತೆಗಳ ಕಾರ್ಯಸಿದ್ಧಿಗಾಗಿಯೇ ನಮ್ಮ ಮಗಳಾಗಿ ಜನಿಸಿರುವಳು. ಪರಶಿವನಿಗೆ ಮದುವೆಮಾಡಿ ಕೊಡಲೋಸುಗವೇ ಈ ದೇವಿಯು ಅವತರಿಸಿರುತ್ತಾಳೆ. ಈಕೆಯು ತನ್ನ ತಪಸ್ಸಿನಿಂದ ಆ ರುದ್ರನನ್ನು ಸಂತೋಷಗೊಳಿಸಿರುವಳು. ಆತನೂ ಸಹ ಈಕೆಗೊಲಿದು ಈಕೆಯನ್ನು ತನ್ನವಳನ್ನಾಗಿಯೇ ಭಾವಿಸಿರುವನು. ಆದುದರಿಂದ ಈಕೆಯನ್ನು ಆತನಿಗೆ ಕೊಟ್ಟು ಮದುವೆಮಾಡಿಕೊಡು. ಎಲೈ ಪ್ರಿಯನೇ! ಆಕೆಯೆಸಗಿದ ಶಿವಪೂಜೆಯು ಕೇವಲ ನಿಮಿತ್ತ ಮಾತ್ರಕ್ಕೇ ಹೊರತು ಮತ್ತೆ ಬೇರೆಯಲ್ಲ. ಪರಶಿವನಿಗೂ ಈಕೆಗೂ ಇರುವ ಸಂಬಂಧವು ಚಿರಂತನವಾದುದು. ಇವರಿಬ್ಬರೂ

ತತಃ ಸಮಾನೀಯ ಸುಲೋಚನಾಂ ತಾಂ ।
ಶ್ಯಾಮಾಂ ನಿತಂಬಾರ್ಪಿತ ಮೇಖಲಾಂ ಶುಭಾಂ ।
ವೈಡೂರ್ಯಮುಕ್ತಾವಲಯಾನ್ ದಧಾನಾಂ
ಭಾಸ್ವತ್ಪ್ರಭಾಂ ಚಾಂದ್ರಮಸೀವ ರೇಖಾಂ ॥ ೨೦ ॥
ಲಾವಣ್ಯಾಮೃತವಾಪಿಕಾಂ ಸುವದನಾಂ
ಗೌರೀಂ ಸುವಾಸಾಂ ಶುಭಾಂ ।
ದೃಷ್ಟ್ವಾತೇ ಹ್ಯೃಷಯೋಽಪಿ ಮೋಹಮಗಮನ್
ಭ್ರಾಂತಾಸ್ತದಾ ಸಂಭ್ರಮಾತ್ ।
ನೋಚುಃ ಕಿಂಚನ ವಾಕ್ಯಮೇವ ಸುಧಿಯೋ
ಹ್ಯಾಸನ್ಪ್ರಮತ್ತಾ ಇವ ।
ಸ್ತಬ್ಧಾಃ ಕಾಂತಿಮತೀಮತೀವ ರುಚಿರಾಂ
ತ್ರೈಲೋಕ್ಯನಾಥ ಪ್ರಿಯಾಂ ॥ ೨೧ ॥
ಏವಂ ತದಾತೇ ಹ್ಯೃಷಯೋಽಪಿ ಮೋಹಿತಾ
ರೂಪೇಣ ತಸ್ಯಾಃ ಕಿಮುತಾಥ ದೇವತಾಃ ।
ತಥೈವ ಸರ್ವೇ ಚ ನಿರೀಕ್ಷ್ಯ ತನ್ವೀಂ
ಸತೀಂ ಗಿರೀಂದ್ರಸ್ಯ ಸುತಾಂ ಶಿವಪ್ರಿಯಾಂ ॥ ೨೨ ॥

---

ಪುರಾಣ ದಂಪತಿಗಳು" ಎಂದಳು. ಮೇನಾದೇವಿಯು ಈರೀತಿ ಹೇಳಿದುದನ್ನು ಕೇಳಿ ಹಿಮವಂತನು ಬಹಳ ಸಂತೋಷಗೊಂಡು ಆ ಸಪ್ತರ್ಷಿಗಳನ್ನು ಕುರಿತು, "ಎಲೈ ಮುಷಿಗಳಿರಾ! ಈಗ ನೀವು ನನ್ನ ಮಗಳಾದ ಪಾರ್ವತಿಯನ್ನು ಕನ್ಯಾ ದೃಷ್ಟಿಯಿಂದ ನೋಡಿರಿ" ಎಂದು ಹೇಳಿದನು.

೨೦–೨೩. ತರುವಾಯ ಆ ಹಿಮವಂತನು, ಸೊಗಸಾದ ಕಣ್ಣುಗಳುಳ್ಳವಳಾಗಿ, ಯೌವನವತಿಯಾಗಿ ಒಡ್ಯಾಣದಿಂದಲಂಕೃತವಾದ ನಿತಂಬ ಪ್ರದೇಶವುಳ್ಳವಳಾಗಿ, ಮಂಗಳಾಂಗಿಯೂ, ವೈಡೂರ್ಯ ಮುಕ್ತಾಮಣಿಗಳ ಬಳೆಗಳನ್ನು ತೊಟ್ಟು ಚಂದ್ರರೇಖೆಯಂತೆ ಬೆಳಗುತ್ತಿರುವವಳೂ ಆದ ಆ ಗಿರಿಜೆಯನ್ನು ಅಲ್ಲಿಗೆ ಕರೆತಂದನು. ಲಾವಣ್ಯವೆಂಬ ಅಮೃತಕ್ಕೆ ಕೊಳದಂತೆ ಕಂಗೊಳಿಸುವವಳಾಗಿ, ಸುವದನೆಯೂ, ಸರ್ವೋತ್ತಮವಾದ ವಸ್ತ್ರಗಳನ್ನುಟ್ಟಿರುವವಳೂ, ಮಂಗಳಾಂಗಿಯೂ, ಗೌರಿಯೂ ಆದ ಆಕೆಯನ್ನು ಕಂಡು ಆ ಋಷಿಗಳೂ ಸಹ ದಿಗ್ಭ್ರಮೆ ಹಿಡಿದವರಾಗಿ, ಆ ಸಂಭ್ರಮದಿಂದಲೇ ಬಹಳ ಬುದ್ಧಿಶಾಲಿಗಳಾದರೂ, ಹುಚ್ಚರಂತೆ ಸ್ತಬ್ಧರಾಗಿ ಯಾವ ಮಾತನ್ನೂ ಆಡದೆ ಹೋದರು. ಅಯ್ಯಾ ಶೌನಕಾದಿಗಳಿರಾ! ಕಾಂತಿಮತಿಯೂ, ಸುಮನೋಹರೆಯೂ, ತ್ರೈಲೋಕ್ಯನಾಥನಾದ ಪರಶಿವನ ಪ್ರಿಯೆಯೂ ಆದ ಆ ಪಾರ್ವತಿಯನ್ನು ಕಂಡಾಗ ಆಕೆಯ ಅನುಪಮ

ತತಃ ಪುನಶ್ಚೈತ್ಯ ಶಿವಂ ಶಿವಪ್ರಿಯಾಃ ।
ಶಶಂಸುರಸ್ಮಾ ಋಷಯಸ್ತದಾನೀಂ ॥ ೨೩ ॥

ಋಷಯ ಊಚುಃ:—

ಭೂಷಿತಾಹಿ ಗಿರೀಂದ್ರೇಣ ಸ್ವಸುತಾ ನಾಸ್ತಿ ಸಂಶಯಃ ।
ಉದ್ವೋಢುಂ ಗಚ್ಛ ದೇವೇಶ ದೇವೈಶ್ಚ ಪರಿವಾರಿತಃ ॥ ೨೪ ॥
ಗಚ್ಛ ಶೀಘ್ರಂ ಮಹಾದೇವ ಪಾರ್ವತೀಮಾತ್ಮಜನ್ಮನೇ ।
ತಚ್ಛ್ರುತ್ವಾ ವಚನಂ ತೇಷಾಂ ಪ್ರಹಸ್ಯೇದಮುವಾಚಹ ॥ ೨೫ ॥
ವಿವಾಹೋಹಿ ಮಹಾಭಾಗಾ ನ ದೃಷ್ಟೋ ನ ಶ್ರುತೋಽಪಿ ವಾ ।
ಮಯಾ ಪುರಾಚ ಋಷಯಃ ಕಥ್ಯತಾಂ ಚ ವಿಶೇಷತಃ ॥ ೨೬ ॥
ತದೋಚುರ್ಋಷಯಃ ಸರ್ವೇ ಪ್ರಹಸಂತಃ ಸದಾಶಿವಂ ।
ವಿಷ್ಣುಮಾಹ್ವಯ ವೈ ದೇವ ಬ್ರಹ್ಮಾಣಂ ಚ ಶತಕ್ರತುಂ ॥ ೨೭ ॥
ತಥಾ ಋಷಿಗಣಾಂಶ್ಚೈವ ಯಕ್ಷಗಂಧರ್ವಪನ್ನಗಾನ್ ।
ಸಿದ್ಧವಿದ್ಯಾಧರಾಂಶ್ಚೈವ ಕಿನ್ನರಾಂಶ್ಚಾಪ್ಸರೋಗಣಾನ್ ॥ ೨೮ ॥

---

ರೂಪದಿಂದ ಆ ಋಷಿಗಳೆಲ್ಲರೂ ಮೋಹಿತರಾದರೆಂದ ಬಳಿಕ ಇನ್ನು ದೇವತೆಗಳ ಪಾಡೇನು? ಅಂತು ಇಂತು ಆ ಮಹರ್ಷಿಗಳು ಗಿರೀಂದ್ರನ ಮಗಳೂ, ಶಿವಪ್ರಿಯೆಯೂ, ಸುಕುಮಾರಿಯೂ, ಸುಂದರಿಯೂ ಆದ ಆ ಪಾರ್ವತಿಯನ್ನು ನೋಡಿದ ತರುವಾಯ ಪುನಃ ಶಿವನ ಸನ್ನಿಧಿಗೈತಂದು ಅವನನ್ನು ಕುರಿತು ಹೀಗೆ ಹೇಳಿದರು.

೨೪–೨೬. ಋಷಿಗಳು ಹೇಳುತ್ತಾರೆ:—"ಎಲೈ ಪರಮೇಶ್ವರನೇ! ಗಿರಿರಾಜನಾದ ಹಿಮವಂತನು ತನ್ನ ಮಗಳಾದ ಪಾರ್ವತಿಗೆ ಸರ್ವಾಲಂಕಾರವನ್ನುಮಾಡಿ ನಿನಗೋಸ್ಕರವೇ ಕಾದಿರುವನೆಂಬುದರಲ್ಲಿ ಸಂಶಯವಿಲ್ಲವು. ಆದುದರಿಂದ ಪುತ್ರಪ್ರಾಪ್ತಿಗಾಗಿ ಆಕೆಯನ್ನು ವರಿಸಲು ನೀನೀಗಲೇ ದೇವತೆಗಳೆಲ್ಲರೊಡಗೂಡಿ ಹಿಮಗಿರಿಗೆ ಹೊರಡುವವನಾಗು." ಹೀಗೆ ನುಡಿದ ಅವರ ಮಾತುಗಳನ್ನು ಕೇಳಿ ಪರಶಿವನು ನಗುತ್ತ "ಅಯ್ಯಾ ಪುಣ್ಯಾತ್ಮರಿರಾ! ನಾನು ವಿವಾಹವೆಂಬುದನ್ನು ಹಿಂದಾವಾಗಲೂ ನೋಡಿಯೂ ಇಲ್ಲ; ಕೇಳಿಯೂ ಇರುವುದಿಲ್ಲ. ಆದುದರಿಂದ ನೀವು ಅದನ್ನು ವಿಸ್ತಾರವಾಗಿ ಹೇಳಿರಿ" ಎಂದನು.

೨೭–೩೦. ಆಗಲಾ ಋಷಿಗಳೆಲ್ಲರೂ ನಸುನಗುತ್ತ ಆ ಸದಾಶಿವನನ್ನು ಕುರಿತು, "ದೇವಾ! ಈಗ ನೀನು ವಿಷ್ಣುವನ್ನೂ, ಬ್ರಹ್ಮನನ್ನೂ, ದೇವೇಂದ್ರನನ್ನೂ ಅಂತೆಯೇ ಋಷಿಗಣಗಳನ್ನೂ, ಯಕ್ಷ ಗಂಧರ್ವ ಪನ್ನಗರನ್ನೂ, ಸಿದ್ಧ ವಿದ್ಯಾಧರರನ್ನೂ, ಕಿನ್ನರರನ್ನೂ, ಅಪ್ಸರರನ್ನೂ ಇನ್ನೂ ಇತರರೆಲ್ಲರನ್ನೂ ಮದುವೆಗಾಗಿ ಜಾಗ್ರತೆಯಾಗಿ ಆಹ್ವಾನಿಸುವವನಾಗು" ಎಂದರು. ಋಷಿಗಳು ಹೇಳಿದ ಈ ಮಾತನ್ನು ಕೇಳಿ ವಾಕ್ಯವಿಶಾರದನಾದ ಆ ಸದಾಶಿವನು ನಾರದನನ್ನು ಕುರಿತು, "ಎಲೈ ನಾರದನೇ!

ಏತಾಂಶ್ಚಾನ್ಯಾಂಶ್ಚ ಸುಬಹೂನಾನಯಸ್ವೇತಿ ಸತ್ವರಂ ।
ತದಾಕರ್ಣ್ಯ ಋಷಿಪ್ರೋಕ್ತಂ ವಾಕ್ಯಂ ವಾಕ್ಯವಿಶಾರದಃ ॥ ೨೯ ॥
ಉವಾಚ ನಾರದಂ ದೇವೋ ವಿಷ್ಣುಮಾನಯ ಸತ್ವರಂ ।
ಬ್ರಹ್ಮಾಣಂ ಚ ಮಹೇಂದ್ರಂ ಚ ಅನ್ಯಾಂಶ್ಚೈವ ಸಮಾನಯ ॥ ೩೦ ॥
ಶಂಭೋರ್ವಚನಮಾದಾಯ ಶಿರಸಾ ಲೋಕಪಾವನಃ ।
ಜಗಾಮ ತ್ವರಿತೋ ಭೂತ್ವಾ ವೈಕುಂಠಂ ವಿಷ್ಣುವಲ್ಲಭಃ ॥ ೩೧ ॥
ದದರ್ಶ ದೇವಂ ಪರಮಾಸನೇ ಸ್ಥಿತಂ
ಶ್ರಿಯಾ ಚ ದೇವ್ಯಾ ಪರಿಸೇವ್ಯಮಾನಂ ।
ಚತುರ್ಭುಜಂ ದೇವವರಂ ಮಹಾಪ್ರಭಂ
ನೀಲೋತ್ಪಲಶ್ಯಾಮತನುಂ ವರೇಣ್ಯಂ ॥ ೩೨ ॥
ಮಹಾರ್ಹರತ್ನಾವೃತ ಚಾರುಕುಂಡಲಂ
ಮಹಾಕಿರೀಟೋತ್ತಮರತ್ನಭಾಸ್ವರಂ ।
ಸುವೈಜಯಂತ್ಯಾ ವನಮಾಲಯಾ ವೃತಂ
ಸ ನಾರದಸ್ತಂ ಭುವನೈಕಸುಂದರಂ ॥ ೩೩ ॥
ಉವಾಚ ನಾರದೋಽಭ್ಯೇತ್ಯ ಶಂಭೋರ್ವಾಕ್ಯಮಥಾದರಾತ್ ।
ಬ್ರಹ್ಮವೀಣಾಂ ವಾದ್ಯಮಾನಃ ಸರ್ವಜ್ಞಃ ಋಷಿಸತ್ತಮಃ ॥ ೩೪ ॥
ಏಹ್ಯೇಹಿ ತ್ವಂ ಮಹಾವಿಷ್ಣೋ ಮಹಾದೇವಂ ತ್ವರಾನ್ವಿತಃ ।
ಉದ್ವಾಹನಾರ್ಥಂ ಶಂಭೋಶ್ಚ ತ್ವಮೇಕಃ ಕಾರ್ಯಸಾಧಕಃ ॥ ೩೫ ॥

---

ನೀನೀಗಲೇ ಜಾಗ್ರತೆಯಾಗಿ ಹೋಗಿ, ವಿಷ್ಣುವನ್ನೂ, ಬ್ರಹ್ಮನನ್ನೂ, ಮಹೇಂದ್ರನನ್ನೂ, ಇತರ ದೇವತೆಗಳನ್ನೂ ಕರೆತರುವವನಾಗು'' ಎಂದು ಹೇಳಿದನು.

೩೧-೩೫. ಲೋಕಪಾವನನೂ, ವಿಷ್ಣುವಲ್ಲಭನೂ ಆದ ಆ ನಾರದ ಮುನೀಂದ್ರನಾದರೋ ಪರಶಿವನ ಈ ಆಜ್ಞಾವಚನವನ್ನು ಶಿರಸಾವಹಿಸಿ ಕೂಡಲೇ ಅಲ್ಲಿಂದ ತೆರಳಿ ವೈಕುಂಠಲೋಕಕ್ಕೆ ಹೋಗಿ ಅಲ್ಲಿ ಪರಮಾಸನದಲ್ಲಿ ಮಂಡಿಸಿ ಶ್ರೀದೇವಿಯಿಂದ ಸಂಸೇವಿತನಾಗಿದ್ದ ಚತುರ್ಭುಜನೂ, ಮಹಾಪ್ರಭನೂ, ನೀಲೋತ್ಪಲದಂತೆ ಶ್ಯಾಮಲವರ್ಣವುಳ್ಳವನೂ, ವರೇಣ್ಯನೂ, ಅಮೂಲ್ಯರತ್ನಾಲಂಕೃತವಾದ ಮನೋಹರಕರ್ಣಕುಂಡಲಗಳನ್ನು ಧರಿಸಿರುವವನೂ, ಮಹಾ ಕಿರೀಟೋತ್ತಮ ರತ್ನ ವಿರಾಜಮಾನನೂ, ಮನೋಹರವಾದ ವೈಜಯಂತೀ ಮಾಲೆಯಿಂದಲಂಕೃತನೂ, ಭುವನೈಕಸುಂದರನೂ ಆದ ಶ್ರೀಮನ್ನಾರಾಯಣನನ್ನು ಕಂಡನು. ಆಗಲಾ ಸರ್ವಜ್ಞನೂ, ಮುನಿಸತ್ತಮನೂ ಆದ ನಾರದನು, ಆ ಸ್ವಾಮಿಯ ಬಳಿಗೈದಿ ಬ್ರಹ್ಮವೀಣೆಯನ್ನು ನುಡಿಸುತ್ತ ಬಹು ಪ್ರೀತಿಯಿಂದ ಆ ಶಂಭುವಿನ ಮಾತನ್ನು ಆತನಿಗೆ ಹೇಳುವವನಾಗಿ,

ಪ್ರಹಸ್ಯ ಭಗವಾನ್ಪ್ರಾಹ ನಾರದಂ ಪ್ರತಿ ವೈ ತದಾ ।
ಕಥಮುದ್ವಹನೇ ಬುದ್ಧಿರುತ್ಪನ್ನಾ ತಸ್ಯ ಶೂಲಿನಃ ।
ವಿಜ್ಞಾತಾರ್ಥೋಽಪಿ ಭಗವಾನ್ನಾರದಂ ಪರಿಪೃಷ್ಟವಾನ್ ॥ ೩೬ ॥

ನಾರದ ಉವಾಚ :—

ತಪಸಾ ಮಹತಾ ರುದ್ರಃ ಪಾರ್ವತ್ಯಾ ಪರಿತೋಷಿತಃ ।
ಸ್ವಯಮೇವಾಗತಸ್ತತ್ರ ಯತ್ರಾಸ್ತೇ ಗಿರಿಜಾ ಸತೀ ॥ ೩೭ ॥
ದಾಸೋಽಹಮವದಚ್ಛಂಭುಃ ಪಾರ್ವತ್ಯಾ ಪರಿತೋಷಿತಃ ।
ಪಾರ್ವತೀಂ ಚ ಸಮಭ್ಯರ್ಥ್ಯ ವರಯಸ್ವ ಚ ಭಾಮಿನಿ ॥ ೩೮ ॥
ತ್ವರಿತೇನಾವದಚ್ಛಂಭುಸ್ತ್ವಾಮಾಹ್ವಯತಿ ಸಂಪ್ರತಿ ।
ತಸ್ಯ ತದ್ವಚನಂ ಶ್ರುತ್ವಾ ದೇವದೇವೋ ಜನಾರ್ದನಃ ।
ನಾರದೇನ ಸಮಾಯುಕ್ತಃ ಪಾರ್ಷದೈಃ ಪರಿವಾರಿತಃ ॥ ೩೯ ॥
ಸುಪರ್ಣಮಾರುಹ್ಯ ತದಾ ಮಹಾತ್ಮಾ
ಯೋಗೀಶ್ವರಾಣಾಂ ಪ್ರಭುರುಚ್ಯತೇ ಮಹಾನ್ ।
ಯಯೌ ತದಾಕಾಶಪಥಾ ಹರಿಃ ಸ್ವಯಂ
ಸ ನಾರದೋ ದೇವವರೈಸ್ಸಮೇತಃ ॥ ೪೦ ॥

---

"ಎಲೈ ವಿಷ್ಣುವೇ! ನೀನು ಪರಶಿವನಲ್ಲಿಗೆ ಈಗಲೇ ಜಾಗ್ರತೆಯಾಗಿ ಹೊರಡ ಬೇಕು. ಶಂಭುವಿನ ವಿವಾಹಕಾರ್ಯವನ್ನು ಸಾಧಿಸಲು ಸಮರ್ಥನಾದವನು ನೀನೊಬ್ಬನೇ ಅಲ್ಲವೆ!" ಎಂದನು.

೩೬–೪೦. ಆಗಲಾ ನಾರಾಯಣನು ನಸುನಗುತ್ತ ಆ ಮುನಿಯನ್ನು ಕುರಿತು, "ಅಯ್ಯಾ ನಾರದನೇ! ಆ ಶೂಲಿಗೆ ಮದುವೆಯಲ್ಲಿ ಮನಸ್ಸಾದುದೆಂತು?" ಎಂದು ಕೇಳಿದನು. ಎಲೈ ವಿಪ್ರರಿರಾ! ಆ ಸ್ವಾಮಿಯು ತನಗೆಲ್ಲವೂ ತಿಳಿದಿದ್ದರೂ ಸಹ ವಿನೋದಕ್ಕಾಗಿಯೇ ನಾರದನನ್ನು ಕುರಿತು ಹೀಗೆ ಕೇಳಿದನು. ಆಗ ನಾರದನು ಹೇಳುತ್ತಾನೆ:—"ಎಲೈ ಸ್ವಾಮಿಯೇ! ಕೇಳು, ಪಾರ್ವತಿಯು ಮಹತ್ತರವಾದ ತಪಸ್ಸನ್ನುಮಾಡಿ ಆ ಪರಶಿವನನ್ನು ಮೆಚ್ಚಿಸಿದಳು. ಹೀಗೆ ಆಕೆಯ ತಪಸ್ಸಿನಿಂದ ಸಂತುಷ್ಟನಾದ ಆ ಪರಶಿವನು ಆಕೆಯಿದ್ದೆಡೆಗೇ ಬಂದು 'ಎಲೆ ಪ್ರಿಯಳೇ! ಇದೋ ನಾನು ನಿನಗೆ ದಾಸನಾಗಿದ್ದೇನೆ' ಎಂದು ಹೇಳಿದನು. ಇಷ್ಟೆಯಲ್ಲದೆ, 'ಓ ಭಾಮಿನಿ! ನನ್ನನ್ನು ವರಿಸು' ಎಂದವಳನ್ನು ಪ್ರಾರ್ಥಿಸಿರುವನು. ಈಗಲಾತನು ತನ್ನ ಮದುವೆಗಾಗಿ ನನ್ನ ಮೂಲಕ ನಿನ್ನನ್ನು ಕರೆಯುತ್ತಿರುವನು" ಎಂದನು. ದೇವದೇವನಾದ ಜನಾರ್ದನನು ನಾರದನಾಡಿದ ಮಾತನ್ನು ಕೇಳಿ ಅವನೊಡನೆಯೂ, ತನ್ನ ಪರಿವಾರದವರೊಡನೆಯೂ ಗರುಡನನ್ನೇರಿ ಹೊರಟನು. ಮಹಾತ್ಮನೂ, ಯೋಗೀಶ್ವರರೆಲ್ಲರಿಗೂ ಪ್ರಭುವೂ,

ತಂ ದೃಷ್ಟ್ವಾ ತ್ವರಿತಂ ದೇವೋ ಯೋಗಿಧ್ಯೇಯಾಂಘ್ರಿಪಂಕಜಃ ।
ಅಭ್ಯುತ್ಥಾಯ ಮುದಾಯುಕ್ತಃ ಪರಿಷ್ವಜ್ಯ ಚ ಶಾರ್ಙ್ಗಿಣಂ ॥ ೪೧ ॥
ತದಾ ಹರಿಹರೌ ದೇವಾವೇಕಪದ್ಯೇನ ತಿಷ್ಠತಃ ।
ಊಚತುಃಸ್ಮ ತದಾನ್ಯೋನ್ಯಂ ಕ್ಷೇಮಂ ಕುಶಲಮೇವ ಚ ॥ ೪೨ ॥
ಗಿರಿಜಾ ತಪಸಾ ವಿಷ್ಣೋ ಜಿತೋಽಹಂ ನಾತ್ರ ಸಂಶಯಃ ।
ಪಾಣಿಗ್ರಹಾರ್ಥಮೇವಾದ್ಯ ಗಂತುಕಾಮೋ ಹಿಮಾಲಯಂ ॥ ೪೩ ॥
ಯಥಾರ್ಥೇನ ಚ ಭೋ ವಿಷ್ಣೋ ಕಥಯಾಮಿ ತವಾಗ್ರತಃ ।
ಯದಾ ದಕ್ಷೇಣ ಭೋ ವಿಷ್ಣೋ ಪ್ರದತ್ತಾ ಚ ಪುರಾ ಸತೀ ॥ ೪೪ ॥
ನ ಚ ಸಂಕಲ್ಪ ವಿಧಿನಾ ಮಯಾ ಪಾಣಿಗ್ರಹಃ ಕೃತಃ ।
ಅಧುನೈವ ಮಯಾ ಕಾರ್ಯಂ ಕರ್ಮವಿಸ್ತಾರಣಂ ಬಹು ॥ ೪೫ ॥
ಯತ್ಕಾರ್ಯಂ ತನ್ನಜಾನಾಮಿ ಸರ್ವಪಾಣಿಗ್ರಹೋಚಿತಂ ।
ಶಂಭೋಸ್ತದ್ವಚನಂ ಶ್ರುತ್ವಾ ಪ್ರಹಸ್ಯ ಮಧುಸೂದನಃ ॥ ೪೬ ॥
ಯಾವದ್ವಕ್ತುಂ ಸಮಾರೇಭೇ ತಾವದ್ಬ್ರಹ್ಮಾ ಸಮಾಗತಃ ।
ಇಂದ್ರೇಣ ಸಹ ಸರ್ವೈಶ್ಚ ಲೋಕಪಾಲೈಸ್ತ್ವರಾನ್ವಿತಃ ॥ ೪೭ ॥

---

ಅಚ್ಯುತನೂ ಆದ ಆ ನಾರಾಯಣನು ಈ ಪ್ರಕಾರ ಗರುಡಾರೂಢನಾಗಿ ನಾರದನೊಡನೆಯೂ, ಇತರ ದೇವಶ್ರೇಷ್ಠರೊಡನೆಯೂ ಪರಶಿವನಿದ್ದಲ್ಲಿಗೈತಂದನು.

೪೧–೪೫. ಯೋಗಿಗಳೆಲ್ಲರೂ ಧ್ಯಾನಮಾಡುವ ಪಾದ ಕಮಲಗಳುಳ್ಳ ಪರಶಿವನು ಆತನನ್ನು ಕಂಡು, ಒಡನೆಯೇ ಮೇಲಕ್ಕೆದ್ದು ಆತನ ಬಳಿಗೈದಿ ಸಂತೋಷದಿಂದಾತನನ್ನಪ್ಪಿದನು. ಆಗಲಾಹರಿಹರರೀರ್ವರೂ ಒಕ್ಕಡೆ ನಿಂತು ಪರಸ್ಪರವಾಗಿ ಯೋಗಕ್ಷೇಮಗಳನ್ನು ಕುರಿತು ಮಾತನಾಡಿಕೊಂಡರು. ಈಶ್ವರನು ಹೇಳುತ್ತಾನೆ:—"ಎಲೈ ವಿಷ್ಣುವೇ! ನಾನು ಗಿರಿಜೆಯೆಸಗಿದ ತಪಸ್ಸಿಗೆ ಮನ ಸೋತಿರುವೆನು. ಈಗ ನಾನು ಆಕೆಯ ಕೈಹಿಡಿಯಲೋಸುಗ ಹಿಮಾಲಯಕ್ಕೆ ಹೋಗಬೇಕೆಂದಿರುವೆನು. ಈ ವಿಷಯವನ್ನು ನಾನು ನಿನಗೆ ಯಥಾರ್ಥವಾಗಿ ಹೇಳುತ್ತಿರುವೆನು. ಪೂರ್ವದಲ್ಲಿ ದಕ್ಷನು ತನ್ನ ಮಗಳಾದ ಸತೀದೇವಿಯನ್ನು ನನಗೆ ಕೊಟ್ಟಾಗ ಸಂಕಲ್ಪಪೂರ್ವಕವಾಗಿ ಆಕೆಯನ್ನು ನಾನು ಮದುವೆಯಾಗಲಿಲ್ಲ. ಈಗಲಾದರೋ ನಾನು ಆ ವೈವಾಹಿಕ ಕರ್ಮವೆಲ್ಲವನ್ನೂ ಬಹಳ ವಿಸ್ತಾರವಾಗಿ ಮಾಡಬೇಕಾಗಿರುವುದು.

೪೬–೪೭. ಆದರೆ ಅದಕ್ಕಾಗಿ ಏನು ಮಾಡಬೇಕೆಂಬುದನ್ನು ಮಾತ್ರ ನಾನರಿಯೆ." ಈ ರೀತಿ ನುಡಿದ ಶಂಭುವಿನ ಮಾತನ್ನು ಕೇಳಿ ಮಧುಸೂದನನು ಆ ವಿಚಾರವನ್ನು ಹೇಳಬೇಕೆಂದಿರುವಷ್ಟರಲ್ಲಿಯೇ ಬ್ರಹ್ಮದೇವನು ಇಂದ್ರನೇ ಮೊದಲಾದ ಲೋಕಪಾಲಕರೊಡನೆ ತ್ವರೆಯಿಂದಲ್ಲಿಗೈತಂದನು. ಅಂತೆಯೇ

ತಥೈವ ದೇವಾಸುರಯಕ್ಷದಾನವಾ
ನಾಗಾಃ ಪತಂಗಾಪ್ಸರಸೋ ಮಹರ್ಷಯಃ ।
ಸಮೇತ್ಯ ಸರ್ವೇ ಪರಿವಕ್ತುಮೀಶ
ಮೂಚುಸ್ತದಾನೀಂ ಶಿರಸಾ ಪ್ರಣಮ್ಯ ॥ ೪೮ ॥
ಗಚ್ಛ ಗಚ್ಛ ಮಹಾದೇವ ಅಸ್ಮಾಭಿಃ ಸಹಿತಃ ಪ್ರಭೋ ।
ತತೋ ವಿಷ್ಣುರುವಾಚೇದಂ ಪ್ರಸ್ತಾವಸದೃಶಂ ವಚಃ ॥ ೪೯ ॥
ಗೃಹ್ಯೋಕ್ತ ವಿಧಿನಾ ಶಂಭೋ ಕರ್ಮಕರ್ತುಮಿಹಾರ್ಹಸಿ ॥ ೫೦ ॥
ನಾಂದೀಮುಖಂ ಮಂಡಪಸ್ಥಾಪನಂ ಚ
ತಥಾ ಚೈತತ್ಕುರು ಧರ್ಮೇಣ ಯುಕ್ತಂ ।
ಮಹಾನದೀಸಂಗಮಂ ವರ್ಜಯಿತ್ವಾ
ಕುರ್ವಂತಿ ಕೇಚಿದ್ವೇದಮುನೀಷಿಣಶ್ಚ ॥ ೫೧ ॥
ಮಂಡಪಸ್ಥಾಪನಂ ಚೈವ ಕ್ರಿಯತಾಂ ಹ್ಯಧುನಾ ವಿಭೋ ।
ತಥೋಕ್ತೋ ವಿಷ್ಣುನಾ ಶಂಭುಶ್ಚಕಾರಾತ್ಮಹಿತಾಯ ವೈ ॥ ೫೨ ॥
ಬ್ರಹ್ಮಾದಿಭಿಃ ಕೃತಂ ತೇನ ಸರ್ವಮಭ್ಯುದಯೋಚಿತಂ ।
ಗ್ರಹಾಣಾಂ ಪೂಜನಂ ಚಕ್ರೇ ಕಾಶ್ಯಪೋ ಬ್ರಹ್ಮಣಾ ಯುತಃ ॥ ೫೩ ॥
ತಥಾತ್ರಿಶ್ಚ ವಸಿಷ್ಠಶ್ಚ ಗೌತಮೋಽಥ ಗುರುರ್ಭೃಗುಃ ।
ಕಣ್ವೋ ಬೃಹಸ್ಪತಿಃ ಶಕ್ತಿರ್ಜಮದಗ್ನಿಃ ಪರಾಶರಃ ॥ ೫೪ ॥

---

ದೇವತೆಗಳು, ಅಸುರರು, ಯಕ್ಷರು, ದಾನವರು, ನಾಗರು, ಪತಗರು, ಅಪ್ಸರರು, ಮಹರ್ಷಿಗಳು ಎಲ್ಲರೂ ಅಲ್ಲಿಗೆ ಬಂದರು. ಅವರೆಲ್ಲರೂ ಒಟ್ಟಿಗೆಯೇ ಆ ಮಹೇಶ್ವರನನ್ನು ಶಿರಸಾ ನಮಸ್ಕರಿಸಿ "ಎಲೈ ಮಹಾದೇವನೇ! ಗಿರಿಜಾಪಾಣಿಗ್ರಹಣಕ್ಕಾಗಿ ನಮ್ಮೊಡನೆ ಬಿಜಮಾಡು" ಎಂದು ಪ್ರಾರ್ಥಿಸಿದರು. ಆಗ ವಿಷ್ಣುವು ಆ ಶಿವನನ್ನು ಕುರಿತು, "ಎಲೈ ಶಂಭುವೇ! ನೀನೀಗ ಗೃಹ್ಯೋಕ್ತವಿಧಿಯಿಂದ ಮದುವೆಯಾಗಬೇಕಾಗಿರುವುದು. ನಾಂದೀಮುಖ, ಮಂಡಪಸ್ಥಾಪನೆಗಳನ್ನು ವಿಧಿಪೂರ್ವಕವಾಗಿ ನಡೆಸಬೇಕು. ವೇದವಿತ್ತುಗಳಾದ ಪಂಡಿತರು ಈ ಕರ್ಮಗಳನ್ನು ಮಹಾನದೀ ಸಂಗಮಗಳಿಲ್ಲದೆಡೆಗಳಲ್ಲಿ ಮಾಡಬೇಕೆಂದು ಹೇಳುತ್ತಾರೆ. ಎಲೈ ವಿಭುವೇ! ಈಗ ನೀನು ಮಂಡಪಸ್ಥಾಪನೆಯನ್ನುಮಾಡು" ಎಂದು ಆ ಕಾಲಕ್ಕೆ ತಕ್ಕಂತೆ ಮಾತನಾಡಿದನು. ಅಂತೆಯೇ ಶಂಭುವೂ ಸಹ ತನ್ನ ಹಿತಕ್ಕಾಗಿ ಆ ಮಂಡಪಸ್ಥಾಪನ ಕರ್ಮವನ್ನೆಸಗಿದನು. ಆಗ ಬ್ರಹ್ಮನೇ ಮೊದಲಾದವರೆಲ್ಲರೊಡನೆಯೂ ಆ ಪರಮೇಶ್ವರನು ತನ್ನ ಅಭ್ಯುದಯಕ್ಕುಚಿತವಾದ ಆ ಶುಭಕರ್ಮವನ್ನು ಮಾಡಿದನು. ಆ ಸಮಯದಲ್ಲಿ ಕಶ್ಯಪಋಷಿಯು ಬ್ರಹ್ಮನೊಡಗೂಡಿ ನವಗ್ರಹಗಳನ್ನು ಪೂಜಿಸಿದನು. ಆಗ ಅತ್ರಿ, ವಸಿಷ್ಠ, ಗೌತಮ, ಬೃಹಸ್ಪತಿ, ಶುಕ್ರ, ಕಣ್ವ,

ಮಾರ್ಕಂಡೇಯಃ ಶಿಲಾವಾಕಃ ಶೂನ್ಯಪಾಲೋಽಕ್ಷತಶ್ರಮಃ ।
ಅಗಸ್ತ್ಯಶ್ಚ್ಯವನೋ ಗರ್ಗಃ ಶಿಲಾದೋಽಥ ಮಹಾಮುನಿಃ ॥ ೫೫ ॥
ಏತೇ ಚಾನ್ಯೇ ಚ ಬಹವೋ ಹ್ಯಾಗತಾಃ ಶಿವಸನ್ನಿಧೌ ।
ಬ್ರಹ್ಮಣಾ ನೋದಿತಾಸ್ತತ್ರ ಚಕ್ರುಸ್ತೇ ವಿಧಿವತ್ಕ್ರಿಯಾಂ ॥ ೫೬ ॥
ವೇದೋಕ್ತವಿಧಿನಾ ಸರ್ವೇ ವೇದವೇದಾಂಗ ಪಾರಗಾಃ ।
ಚಕ್ರೂ ರಕ್ಷಾಂ ಮಹೇಶಸ್ಯ ಕೃತಕೌತುಕಮಂಗಲಾಂ ॥ ೫೭ ॥
ಋಗ್ಯಜುಃಸಾಮಸಹಿತೈಃ ಸೂಕ್ತೈರ್ನಾನಾವಿಧೈಸ್ತಥಾ ।
ಮಂಗಲಾನಿ ಚ ಭೂರೀಣಿ ಋಷಯಸ್ತತ್ವವೇದಿನಃ ॥ ೫೮ ॥
ಅಭ್ಯಂಜನಾದಿಕಂ ಸರ್ವೇ ಚಕ್ರುಸ್ತಸ್ಯ ಪರಾತ್ಮನಃ ।
ಖ್ಯಾತಃ ಕಪರ್ದಸ್ತಸ್ಯೈವ ಶಿವಸ್ಯ ಪರಮಾತ್ಮನಃ ॥ ೫೯ ॥
ಅನೇಕೈರ್ಮೌಕ್ತಿಕೈರ್ಯುಕ್ತಾ ಮುಂಡಮಾಲಾಭವತ್ತದಾ ।
ಯೇ ಸರ್ಪಾ ಹ್ಯಂಗಭೂತಾಶ್ಚ ತೇ ಸರ್ವೇ ತಕ್ಷಣಾದಿವ ।
ಬಭೂವುರ್ಮಂಡನಾನ್ಯೇವ ಜಾತರೂಪಮಯಾನಿ ಚ ॥ ೬೦ ॥
ಸರ್ವಭೂಷಣ ಸಂಪನ್ನೋ ದೇವದೇವೋ ಮಹೇಶ್ವರಃ ।
ಯಯೌ ದೈವೈಃ ಪರಿವೃತಃ ಶೈಲರಾಜಪುರಂ ಪ್ರತಿ ॥ ೬೧ ॥

---

ಶಕ್ತಿ, ಜಮದಗ್ನಿ, ಪರಾಶರ, ಮಾರ್ಕಂಡೇಯ, ಶಿಲಾವಾಕ, ಶೂನ್ಯಪಾಲ, ಅಕ್ಷತಶ್ರಮ, ಅಗಸ್ತ್ಯ, ಚ್ಯವನ, ಗರ್ಗ, ಶಿಲಾದ ಇವರೇ ಮೊದಲಾದ ಅನೇಕ ಮಹಾಮುನಿಗಳು ಪರಶಿವನ ಸನ್ನಿಧಿಗೆ ಬಂದರು. ಅವರೆಲ್ಲರೂ ಬ್ರಹ್ಮನಿಂದ ಪ್ರೇರಿತರಾಗಿ ಕಲ್ಯಾಣಕ್ಕೆ ಪೂರ್ವಾಂಗವಾಗಿ ಮಾಡಬೇಕಾದ ಶುಭಕರ್ಮಗಳೆಲ್ಲವನ್ನೂ ಮಾಡಿ ಮುಗಿಸಿದರು.

೫೭–೬೧. ಇಷ್ಟೆಯಲ್ಲದೆ ವೇದವೇದಾಂಗ ಪಾರಂಗತರಾದ ಆ ಮಹರ್ಷಿಗಳು ಆ ಮಹೇಶ್ವರನಿಗೆ ಕೌತುಕ ಮಂಗಳವನ್ನೆಸಗಿ ರಕ್ಷೆಯನ್ನುಮಾಡಿ ಕಟ್ಟಿದರು. ತತ್ವಜ್ಞಾನಿಗಳಾದ ಆ ಮುನಿಗಳು ಋಗ್ಯಜುಸ್ಸಾಮಗಳೆಂಬ ಮೂರೂ ವೇದಗಳ ನಾನಾವಿಧ ಸೂಕ್ತಗಳನ್ನು ಹೇಳಿ ಅನೇಕ ಮಂಗಳಗಳನ್ನಾಚರಿಸಿದರು. ಆ ಪರಮಾತ್ಮನಿಗೆ ಅಭ್ಯಂಜನವೇ ಮೊದಲಾದವುಗಳನ್ನು ಮಾಡಿಸಿದರು. ಆ ಸಮಯದಲ್ಲಿ ಆ ಪರಮಾತ್ಮನು ಧರಿಸಿದ್ದ ಮುಂಡಮಾಲೆಯು ಮುತ್ತಿನ ಹಾರವಾಯಿತು, ಸರ್ಪಗಳೆಲ್ಲವೂ ಆತನಿಗೆ ಸ್ವರ್ಣಾಭರಣಗಳಾಗಿ ಪರಿಣಮಿಸಿದುವು. ಹೀಗೆ ಆ ದೇವದೇವನಾದ ಮಹೇಶ್ವರನು ಸರ್ವಭೂಷಣ ಸಂಪನ್ನನಾಗಿ ದೇವತೆಗಳೆಲ್ಲರೊಡನೆಯೂ ವಿವಾಹಾರ್ಥವಾಗಿ ಶೈಲರಾಜನಾದ ಹಿಮವಂತನ ಪಟ್ಟಣಕ್ಕೆ ಹೊರಟನು.

ಚಂಡಿಕಾ ಹರ ಭಗಿನೀ ತದಾ ಜಾತಾ ಭಯಾವಹಾ ।
ಪ್ರೇತಾಸನಾ ಗತಾ ಚಂಡೀ ಸರ್ಪಾಭರಣ ಭೂಷಿತಾ ॥ ೬೨ ॥
ಹೈಮಂ ಕಲಶಮಾದಾಯ ಪೂರ್ಣಂ ಮೂರ್ಧ್ನಾ ಮಹಾಪ್ರಭಾ ।
ಪರಿವಾರೈರ್ಮಹಾಚಂಡೀ ದೀಪ್ತಾಸ್ಯಾಹ್ಯುಗ್ರಲೋಚನಾ ॥ ೬೩ ॥
ತತತ್ಸಭೂತಾನ್ಯನೇಕಾನಿ ವಿರೂಪಾಣಿ ಸಹಸ್ರಶಃ ।
ತೈಃಸಮೇತಾಗ್ರತಶ್ಚಂಡೀ ಜಗಾಮ ವಿಕೃತಾನನಾ ॥ ೬೪ ॥
ತಸ್ಯಾ ಸರ್ವೇ ಪೃಷ್ಠತಶ್ಚ ಗಣಾಃ ಪರಮದಾರುಣಾಃ ।
ಕೋಟ್ಯೇಕಾದಶ ಸಂಖ್ಯಾಕಾ ರೌದ್ರಾ ರುದ್ರಪ್ರಿಯಾಶ್ಚ ಯೇ ॥ ೬೫ ॥
ತದಾ ಡಮರು ನಿರ್ಘೋಷಃ ವ್ಯಾಪ್ತಮಾಸೀಜ್ಜಗತ್ತ್ರಯಂ ।
ಭೇರೀ ಭಾಂಕಾರ ಶಬ್ದೇನ ಶಂಖಾನಾಂ ನಿನದೇನ ಚ ॥ ೬೬ ॥
ತಥಾ ದುಂದುಭಿನಿರ್ಘೋಷೈಃ ಶಬ್ದಃ ಕೋಲಾಹಲೋಽಭವತ್ ।
ಗಣಾನಾಂ ಪೃಷ್ಠತೋ ಭೂತ್ವಾ ಸರ್ವೇ ದೇವಾಃ ಸಮುತ್ಸುಕಾಃ ॥ ೬೭ ॥
ಮಧ್ಯೇ ವ್ರಜನ್ಮಹೇಂದ್ರೋಥ ಐರಾವತಮುಪಸ್ಥಿತಃ ।
ಶುಭ್ರೇಣೋಚ್ಛ್ರಿಯಮಾಣೇನ ಛತ್ರೇಣ ಪರಮೇಣಹಿ ॥ ೬೮ ॥
ಚಾಮರೈರ್ವೀಜ್ಯಮಾನೋಽಸೌ ಸುರೈರ್ಬಹುಭಿರಾವೃತಃ ।
ತದಾತು ವ್ರಜಮಾನಾಸ್ತು ಋಷಯೋ ಬಹವೋ ಹ್ಯಮೀ ॥ ೬೯ ॥

---

೬೨–೬೫. ಆ ಪರಮೇಶ್ವರನ ತಂಗಿಯೂ, ಮಹಾ ಭಯಂಕರೆಯೂ ಆದ ಚಂಡಿಕೆಯೂ ಸಹ ಆ ಸಮಯದಲ್ಲಿಯೇ ಮದುವೆಗೆ ಹೊರಡಲು ಸಿದ್ಧವಾದಳು. ಪ್ರೇತಾಸನದಲ್ಲಿ ಕುಳಿತು ಸರ್ಪಾಭರಣ ಭೂಷಿತೆಯಾಗಿ ಚಿನ್ನದ ಪೂರ್ಣಕಳಶ ವನ್ನು ತಲೆಯಮೇಲೆ ಧರಿಸಿ, ಮಹಾತೇಜಸ್ವಿನಿಯೂ, ಪ್ರಜ್ವಲಿಸುತ್ತಿರುವ ಮುಖವುಳ್ಳವಳೂ, ಉಗ್ರಲೋಚನೆಯೂ, ವಿಕೃತಾನನೆಯೂ ಆದ ಆ ಮಹಾ ಚಂಡಿಯು, ವಿರೂಪಗಳಾದ ಅನೇಕ ಸಹಸ್ರಭೂತಪರಿವಾರದೊಡನೆ ಮುಂದೆ ಹೊರಟಳು. ಅವಳ ಹಿಂದೆ ಬಹು ಭಯಂಕರರೂ ರುದ್ರಪ್ರಿಯರೂ ಆದ ಹನ್ನೊಂದುಕೋಟಿ ಶಿವಗಣಗಳು ಹೊರಟವು.

೬೬–೭೪. ಆಗ ಭೇರಿಗಳ ಭಾಂಕಾರ ಶಬ್ದದಿಂದಲೂ, ಶಂಖನಿನಾದ ಗಳಿಂದಲೂ, ಡಮರುಗ ಧ್ವನಿಗಳಿಂದಲೂ ಮೂರುಲೋಕಗಳೂ ತುಂಬಿ ಹೋದುವು. ಅಂತೆಯೇ ದುಂದುಭಿಗಳ ಶಬ್ದದಿಂದ ಬಹು ಕೋಲಾಹಲಧ್ವನಿ ಯುಂಟಾಯಿತು. ತರುವಾಯ ಆ ಶಿವಗಣಗಳ ಹಿಂಗಡೆ ಸಮಸ್ತದೇವತೆಗಳೂ, ಸಿದ್ಧರೂ ಲೋಕಪಾಲಕರೊಡಗೂಡಿ ಹೊರಟರು. ಇವರೆಲ್ಲರ ನಡುವೆ ದೇವ ರಾಜನಾದ ಮಹೇಂದ್ರನು ಐರಾವತವನ್ನೇರಿ ಶುಭ್ರವಾದ ಛತ್ರದಿಂದೊಪ್ಪಿ ಮೆರೆಯುತ್ತ, ಚಾಮರಗಳಿಂದ ವೀಜಿತನಾಗಿ ಬಹುಮಂದಿ ದೇವತೆಗಳೊಡ

**ಭರದ್ವಾಜಾದಯೋ ವಿಪ್ರಾಃ ಶಿವಸ್ಯೋದ್ವಹನಂ ಪ್ರತಿ ।**
**ಶಾಕಿನ್ಯೋ ಯಾತುಧಾನಾಶ್ಚ ವೇತಾಲ ಬ್ರಹ್ಮರಾಕ್ಷಸಾಃ ॥ ೭೦ ॥**
**ಭೂತಪ್ರೇತ ಪಿಶಾಚಾಶ್ಚ ತಥಾನ್ಯೇ ಪ್ರಮಥಾದಯಃ ।**
**ಪೃಚ್ಛಮಾನಾಸ್ತದಾ ಚಂಡೀಂ ಪೃಷ್ಠತೋಽನ್ವಗಮಂ ಸ್ತದಾ ॥ ೭೧ ॥**
**ಕ್ವ ಗತಾ ಸಾಽಧುನಾ ಚಂಡೀ ಧಾವಮಾನಾ ಸ್ತದಾ ಭೃಶಂ ।**
**ಪ್ರಾಪ್ತಾಗತಾ ವ್ರಜಂತೀಂ ತಾಂ ಪ್ರಣಿಪತ್ಯ ಮಹಾಪ್ರಭಾಂ ॥ ೭೨ ॥**
**ಅಥ ಪ್ರೋಚುಸ್ತದಾ ಸರ್ವೇ ಚಂಡೀಂ ಭೈರವ ಸಂಯುತಾಂ ।**
**ವಿನಾಸ್ಮಾಭಿಃ ಕುತೋಯಾಸಿ ವದ ಚಂಡಿ ಯಥಾ ತಥಾ ॥ ೭೩ ॥**
**ಪ್ರಹಸ್ಯೋವಾಚ ಸಾ ಚಂಡೀ ಭೂತಾನಾಂ ತತ್ರ ಶೃಣ್ವತಾಂ ।**
**ಶಂಭೋರುದ್ವಹನಾರ್ಥಾಯ ಪ್ರೇತಾರೂಢಾ ವ್ರಜಾಮ್ಯಹಂ ॥ ೭೪ ॥**
**ಹೈಮಂ ಕಲಶಮಾದಾಯ ಶಿರಸಾ ಬಿಭ್ರತೀ ಸ್ವಯಂ ।**
**ಕರವಾಲೀ ಸ್ವರೂಪೇಣ ಚಂಡೀ ಜಾತಾ ತತಃ ಸ್ವಯಂ ॥ ೭೫ ॥**
**ಭೂತೈಃ ಪರಿವೃತಾ ಸರ್ವೈಃ ಸರ್ವೇಷಾಮಗ್ರತೋಽವ್ರಜತ್ ।**
**ಗಣಾಸ್ತಾಮನುಜಗ್ಮುಸ್ತೇ ಗಣಾನಾಂ ಪೃಷ್ಠತಃ ಸುರಾಃ ॥ ೭೬ ॥**
**ಇಂದ್ರಾದಯೋ ಲೋಕಪಾಲಾ ಋಷಯಸ್ತೇಽಗ್ರಪೃಷ್ಠತಃ ।**
**ಋಷೀಣಾಂ ಪೃಷ್ಠತೋ ಭೂತ್ವಾ ಪಾರ್ಷದಾಶ್ಚ ಮಹಾಪ್ರಭಾಃ ॥ ೭೭ ॥**

---

ಗೂಡಿ ಹೊರಟನು. ಅದೇ ಸಮಯದಲ್ಲಿ ಭರದ್ವಾಜನೇ ಮೊದಲಾದ ಅನೇಕ ಮಂದಿ ಮಹರ್ಷಿಗಳು ಆ ಪರಮೇಶ್ವರನ ಪಾಣಿಗ್ರಹಣ ಮಹೋತ್ಸವಕ್ಕೆ ಚಿತ್ತೈಸಿದರು. ಶಾಕಿನಿಯರೂ, ರಾಕ್ಷಸರೂ, ಭೇತಾಳರೂ, ಬ್ರಹ್ಮರಾಕ್ಷಸರೂ, ಭೂತಪ್ರೇತಪಿಶಾಚಗಳೂ, ಅಂತೆಯೇ ಇತರ ಪ್ರಮಥಗಣಗಳೂ ತಾವೂ ಮದುವೆಗೆ ಬರಲು ಅಪ್ಪಣೆಕೇಳಿಕೊಂಡು ಚಂಡಿಯನ್ನು ಹಿಂಬಾಲಿಸಿ ಹೊರಟರು. ಈ ಶಾಕಿನಿಯೇ ಮುಂತಾದವರೆಲ್ಲರೂ "ಚಂಡಿಯು ಎಲ್ಲಿ ಹೋದಳು" ಎಂದು ಕೂಗುತ್ತ ಬಹು ಬೇಗಬೇಗನೆ ಓಡುತ್ತ ಮುಂದೆ ಮುಂದೆ ಹೋಗುತ್ತಿರುವ ಆ ಚಂಡಿಯನ್ನು ಬಳಿಸಾರಿ ಅವಳಿಗೆ ಮಣಿದು ಭೈರವನೊಡಗೂಡಿ ಹೊರಟಿರುವ ಆಕೆಯನ್ನು ಕುರಿತು, "ಎಲೌ ಚಂಡಿಯೇ! ನಮ್ಮನ್ನು ಬಿಟ್ಟು ನೀನೊಬ್ಬಳೇ ಎಲ್ಲಿಗೇ ಹೊರಟಿರುವೆ? ಇದ್ದುದನ್ನಿದ್ದಂತೆಯೇ ತಿಳಿಸು" ಎಂದು ಕೇಳಿದರು. ಆಗಲಾ ಚಂಡಿಯು ನಗುತ್ತ ಅಲ್ಲಿರುವ ಎಲ್ಲ ಭೂತಗಳಿಗೂ ಕೇಳಿಸುವಂತೆಯೇ ಅವರೆಲ್ಲರನ್ನೂ ಕುರಿತು, "ಎಲೈ! ನಾನು ನಮ್ಮ ಶಂಭುವಿನ ಮದುವೆಗಾಗಿ ಪ್ರೇತಾರೂಢೆಯಾಗಿ ಹೊರಟಿರುವೆನು" ಎಂದಳು.

೭೫–೮೦. ಆಗಲಾಚಂಡಿಯು ಸ್ವರ್ಣಕಲಶವನ್ನು ತಲೆಯಮೇಲೆ ಹೊತ್ತು ಖಡ್ಗದಂತೆ ಬೆಳಗುತ್ತಿದ್ದಳು. ಅವಳು ಸಮಸ್ತಭೂತಗಳಿಂದಲೂ ಪರಿವೃತಳಾಗಿ

ವಿಷ್ಣೋರಮಿತಭಾವಜ್ಞಾ ಮುಕುಂದಾಚ್ಚ ಮನೋರಮಾಃ ।
ಸರ್ವೇ ಪಯೋದಸಂಕಾಶಾಃ ಸ್ರಗ್ವಿಣೋ ವನಮಾಲಿನಃ ।
ಶ್ರೀವತ್ಸಾಂಕಧರಾಃ ಸರ್ವೇ ಪೀತವಾಸೋಽನ್ವಿತಾಶ್ಚ ತೇ ॥ ೭೮ ॥
ಚತುರ್ಭುಜಾಃ ಕುಂಡಲಿನಃ ಕಿರೀಟಿ ಕಟಕಾಂಗದೈಃ ।
ಹಾರನೂಪುರ ಸೂತ್ರೈಶ್ಚ ಕಟಿಸೂತ್ರಾಂಗುಲೀಯಕೈಃ ।
ಶೋಭಿತಾಃ ಸರ್ವಏವೈತೇ ಮಹಾಪುರುಷ ಲಕ್ಷಣಾಃ ॥ ೭೯ ॥
ತೇಷಾಂ ಮಧ್ಯೇ ಗತೋ ವಿಷ್ಣುಃ ಶ್ರಿಯೋಪೇತಃ ಸುರಾರಿಹಾ ॥ ೮೦ ॥

ಬಭೌ ತ್ರಿಲೋಕೀ ಕೃತವಿಶ್ವಮಂಗಲೋ
ಮಹಾನುಭಾವೈರ್ಹೃದಿ ಕೃತ್ಯ ಧಿಷ್ಠಿತಃ ।
ಶಿವೇನ ಸಾಕಂ ಪರಮಾರ್ಥದಸ್ತದಾ
ಹರಿಃ ಪರಾತ್ಮಾ ಜಗದೇಕಬಂಧುಃ ॥ ೮೧ ॥
ಸ ತಾರ್ಕ್ಷ್ಯ ಪತ್ರೋಪರಿ ಸಂಸ್ಥಿತೋ ಮಹಾನ್
ಲಕ್ಷ್ಮ್ಯಾಸಮೇತೋ ಭುವನೈಕಭರ್ತಾ ।
ಸ ಚಾಮರೈರ್ವೀಜ್ಯಮಾನೋ ಮುನೀಂದ್ರೈಃ
ಸರ್ವೈಃ ಸಮೇತೋ ಹರಿರೀಶ್ವರೋ ಮಹಾನ್ ॥ ೮೨ ॥

---

ಎಲ್ಲರಿಗೂ ಮುಂದಾಗಿ ಹೊರಟಳು. ತರುವಾಯ ಅವಳ ಹಿಂದೆ ಶಿವಗಣಗಳು ಹೊರಟವು. ಇವರ ಹಿಂದೆ ದೇವತೆಗಳು ಹೊರಟರು. ಇಂದ್ರನೇ ಮೊದಲಾದ ಲೋಕಪಾಲಕರೂ, ಅವರ ಹಿಂದೆ ಋಷಿಗಳೂ, ಅವರ ಹಿಂದೆ ಮಹಾಪ್ರಭರಾದ ವಿಷ್ಣುಪಾರ್ಷದರೂ ಹೊರಟರು. ಈ ವಿಷ್ಣುಪಾರ್ಷದರೆಲ್ಲರೂ ಪ್ರಭುವಿನ ಮನಸ್ಸನ್ನು ಚೆನ್ನಾಗಿ ಬಲ್ಲವರು. ಅವನಿಗಿಂತಲೂ ಸುಂದರರಾದವರು; ಎಲ್ಲರೂ ಮುಗಿಲಿನಂತೆ ನೀಲವರ್ಣವುಳ್ಳವರಾಗಿ, ವನಮಾಲೆಗಳನ್ನು ಧರಿಸಿ, ಶ್ರೀವತ್ಸ ಚಿಹ್ನೆಯಿಂದಲಂಕೃತವಾದ ಕಂಧರರೂ, ಪೀತಾಂಬರಧರರೂ, ಚತುರ್ಭುಜರೂ, ಕರ್ಣಕುಂಡಲಧಾರಿಗಳೂ, ಕಿರೀಟ, ಕಟಕ ಅಂಗದ, ಹಾರನೂಪುರಸೂತ್ರ ಕಟಿಸೂತ್ರ, ಅಂಗುಲೀಯಕವೇ ಮೊದಲಾದ ಆಭರಣಗಳಿಂದ ಅಲಂಕೃತರೂ ಆಗಿ ಶೋಭಿಸುತ್ತಿದ್ದ ಇವರೆಲ್ಲರೂ ಮಹಾ ಪುರುಷ ಲಕ್ಷಣವನ್ನೊಳಗೊಂಡವರು. ಅಸುರ ಸಂಹಾರಿಯಾದ ಶ್ರೀಮನ್ಮಹಾವಿಷ್ಣುವು ಇವರೆಲ್ಲರ ನಡುವೆ ಶ್ರೀದೇವಿ ಯೊಡನೆ ಹೊರಟನು.

೮೧–೮೬. ಆಗ ಮೂರು ಲೋಕಗಳಿಗೂ ಮಂಗಲವನ್ನುಂಟುಮಾಡು ವವನೂ, ಮಹಾನುಭಾವರು ತಮ್ಮ ಹೃದಯಗಳಲ್ಲಿ ನೆಲೆಗೊಳಿಸಿಕೊಳ್ಳಲಾಗಿರು ವವನೂ, ಪರಮಾತ್ಮನೂ, ಜಗದೇಕಬಂಧುವೂ, ಮೋಕ್ಷಪ್ರದನೂ ಭುವನೈಕ ಭರ್ತನೂಆದ ಆ ಮಹಾವಿಷ್ಣುವು ಗರುಡಾರೂಢನಾಗಿ ಶ್ರೀ ಮಹಾ ಲಕ್ಷ್ಮೀ

ತಥಾ ವಿರಿಂಚಿರ್ನಿಜವಾಹನಸ್ಥೋ
ವೇದೈಃ ಸಮೇತಃ ಸಹ ಷಡ್ಭಿರಂಗೈಃ ।
ತಥಾಗಮೈಃ ಸೇತಿಹಾಸೈಃ ಪುರಾಣೈಃ
ಸ ಸಂವೃತೋ ಹೇಮಗರ್ಭೋ ಬಭೂವ ॥ ೮೩ ॥
ವೇಧೋ ಹರಿಭ್ಯಾಂ ಚ ತದಾ ಸುರೇಂದ್ರೈಃ
ಸಮಾವೃತಶ್ಚರ್ಷಿಭಿಃ ಸಂಪರೀತಃ ।
ವೃಷಾರೂಢೋ ವೃಷಕೇತುರ್ದುರಾಪೋ
ಯೋಗೀಶ್ವರೈರಪಿ ಸರ್ವೈರಗಮ್ಯಃ ॥ ೮೪ ॥
ಶುದ್ಧಸ್ಫಟಿಕಸಂಕಾಶಂ ವೃಷಭಂ ಧರ್ಮವತ್ಸಲಂ ।
ಸಮೇತೋ ಮಾತೃಭಿಶ್ಚೈವ ಗೋಭಿಶ್ಚ ಕೃತಲಕ್ಷಣಂ ॥ ೮೫ ॥
ಏಭಿಸ್ಸಮೇತೋಽಸುರದಾನವೈಃ ಸಹ
ಯಯೌ ಮಹೇಶೋ ವಿಬುಧೈರಲಂಕೃತಃ ।
ಹಿಮಾಲಯಂ ಗಿರಿವರ್ಯಂ ತದಾನೀಂ
ಪಾಣಿಗ್ರಹಾರ್ಥಂ ಪ್ರಮದೋತ್ತಮಾಯಾಃ ॥ ೮೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಶ್ರೀ ಶಿವಸ್ಯ ವಿವಾಹ ವರ್ಣನಂ" ನಾಮ ತ್ರಯೋವಿಂಶೋಽಧ್ಯಾಯಃ

---

ಸಮೇತನಾಗಿ ಶಿವನೊಡನೆ ಹೊರಟನು. ಆಗಲಾತನು ಚಾಮರಗಳಿಂದ ವೀಜಿತನಾಗಿ ಸಮಸ್ತ ಮುನೀಂದ್ರರೊಡನೆಯೂ ಬಿಜಮಾಡಿದನು. ಅಂತೆಯೇ ಸ್ವರ್ಣಗರ್ಭನಾದ ಬ್ರಹ್ಮನೂ ಸಹ ನಾಲ್ಕು ವೇದಗಳಿಂದಲೂ, ಷಡಂಗಗಳಿಂದಲೂ, ಆಗಮ, ಇತಿಹಾಸ, ಪುರಾಣಗಳಿಂದಲೂ ಕೂಡಿದವನಾಗಿ ಪ್ರಯಾಣಮಾಡಿದನು. ಆ ಸಮಯದಲ್ಲಿ ಯಾರಿಗೂ ಹೊಂದಲಸದಳನೂ, ಯೋಗೀಶ್ವರರಿಗೂ ದೊರಕದವನೂ ಆದ ಆ ಪರಮಶಿವನಾದರೋ ಹರಿಬ್ರಹ್ಮರಿಂದಲೂ, ದೇವತೆಗಳಿಂದಲೂ, ಋಷಿಗಳಿಂದಲೂ ಕೂಡಿ ವೃಷಭಾರೂಢನಾಗಿ ಹೊರಟನು. ಈ ಪ್ರಕಾರ ಆತನು ಧರ್ಮವತ್ಸಲವಾದುದೂ, ಶುದ್ಧ ಸ್ಫಟಿಕ ಕಾಂತಿಯುಳ್ಳುದೂ ಮಾತೃದೇವತೆಗಳಿಂದಲೂ, ಗೋವುಗಳಿಂದಲೂ ಕೂಡಿದುದೂ, ಆದ ವೃಷಭವನ್ನೇರಿ ಅಸುರರಿಂದಲೂ, ದಾನವರಿಂದಲೂ, ದೇವತೆಗಳಿಂದಲೂ ಕೂಡಿ ಪ್ರಮದೋತ್ತಮೆಯಾದ ಆ ಪಾರ್ವತಿಯ ಪಾಣಿಗ್ರಹಣಕ್ಕಾಗಿ ಪರ್ವತೋತ್ತಮವಾದ ಹಿಮವಂತಕ್ಕೈತಂದನು.

ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಶ್ರೀ ಶಿವ ವಿವಾಹವರ್ಣನ" ವೆಂಬ ಇಪ್ಪತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಚತುರ್ವಿಂಶೋಽಧ್ಯಾಯಃ

### ಪಾರ್ವತೀ ಪರಿಣಯೇ ಹಿಮಾದ್ರಿಣಾ ದೇವಾನಾಂ ನಿವಾಸಸ್ಥಾನ ಕರಣ ವರ್ಣನಂ

**ಲೋಮಶ ಉವಾಚ :—**

ತಥೈವ ಸರ್ವಂ ಪರಯಾ ಮುದಾನ್ವಿತ
ಶ್ಚಕ್ರೇ ಗಿರೀಂದ್ರಃ ಸ್ವಸುತಾರ್ಥಮೇವ ।
ಗರ್ಗಂ ಪುರಸ್ಕೃತ್ಯ ಮಹಾನುಭಾವೋ
ಮಾಂಗಲ್ಯಭೂಮಿಂ ಪರಯಾ ವಿಭೂತ್ಯಾ ॥ ೧ ॥
ಆಹೂಯ ವಿಶ್ವಕರ್ಮಾಣಂ ಕಾರಯಾಮಾಸ ಸಾದರಂ ।
ಮಂಡಪಂ ಚ ಸುವಿಸ್ತೀರ್ಣಂ ವೇದಿಕಾಭಿರ್ಮನೋರಮಂ ॥ ೨ ॥
ಅಯುತೇನೈವ ವಿಸ್ತಾರಂ ಯೋಜನಾನಾಂ ದ್ವಿಜೋತ್ತಮಾಃ ।
ಮಂಡಪಂ ಚ ಗುಣೋಪೇತಂ ನಾನಾಶ್ಚರ್ಯ ಸಮನ್ವಿತಂ ॥ ೩ ॥
ಸ್ಥಾವರಂ ಜಂಗಮಂ ಚೈವ ಸದೃಶಂ ಚ ಮನೋಹರಂ ।
ಜಂಗಮಂ ಚ ಜಿತಂ ತತ್ರ ಸ್ಥಾವರೇಣ ತಥೈವ ಚ ॥ ೪ ॥
ಜಂಗಮೇನ ಚ ತತ್ರೈವ ಜಿತಂ ಸ್ಥಾವರಮೇವವಾ ।
ಪಯಸಾ ಚ ಜಿತಾ ತತ್ರ ಸ್ಥಲಭೂಮಿರಭೂತ್ತದಾ ॥ ೫ ॥

---

### ಕನ್ನಡದ ಅನುವಾದ

#### ಶ್ರೀ ಶಿವ ವಿವಾಹ ವರ್ಣನ—ಹಿಮಾದ್ರಿಯು ದೇವತೆಗಳಿಗೆ ಬಿಡದಿಗಳನ್ನು ರಚಿಸಿದುದು

೧–೨. ಲೋಮಶನು ಹೇಳುತ್ತಾನೆ:—ಇತ್ತ ಗಿರೀಂದ್ರನಾದ ಹಿಮವಂತನೂ ಸಹ ಪರಮ ಸಂತೋಷಭರಿತನಾಗಿ ತನ್ನ ಮಗಳಾದ ಪಾರ್ವತಿಯ ಕಲ್ಯಾಣಕ್ಕಾಗಿ, ಪುರೋಹಿತನಾದ ಗರ್ಗಾಚಾರ್ಯನನ್ನು ಮುಂದಿರಿಸಿಕೊಂಡು ಕಲ್ಯಾಣಮಂಟಪ ರಚನೆಯನ್ನು ಬಹು ವಿಜೃಂಭಣೆಯಿಂದ ಮಾಡತೊಡಗಿದನು. ಆತನು ದೇವಶಿಲ್ಪಿಯಾದ ವಿಶ್ವಕರ್ಮನನ್ನು ಕರೆಯಿಸಿ ಅವನನ್ನು ಆದರಿಸಿ ಅವನಿಂದ ಬಹು ವಿಸ್ತಾರವೂ, ಜಗುಲಿಗಳಿಂದ ಬಹುಮನೋಹರವೂ ಆದ ಕಲ್ಯಾಣಮಂಟಪವನ್ನು ಪರಮೋತ್ಸಾಹದಿಂದ ಮಾಡಿಸತೊಡಗಿದನು.

೩–೧೦. ಎಲೈ ವಿಪ್ರರೇ! ಸೌಂದರ್ಯಸಮನ್ವಿತವೂ, ನಾನಾಶ್ಚರ್ಯಭರಿತವೂ ಆದ ಆ ಮಂಟಪದ ವಿಸ್ತಾರವು ಹತ್ತುಸಾವಿರ ಯೋಜನಗಳು. ಆ ದಿವ್ಯ ಮಂಟಪದಲ್ಲಿ ರಚಿತವಾಗಿದ್ದ ಸ್ಥಾವರ ಜಂಗಮಗಳೆರಡೂ ಒಂದೇ ವಿಧವಾದ ಸೌಂದರ್ಯವನ್ನೊಳಕೊಂಡು, ಜಂಗಮಗಳು (ಚಲಿಸುವ ವಸ್ತುಗಳು) ಸ್ಥಾವರಗಳನ್ನೂ (ಚಲಿಸದ ವಸ್ತುಗಳನ್ನೂ) ಸ್ಥಾವರಗಳು ಜಂಗಮಗಳನ್ನೂ ತಮ್ಮ ಸೊಬಗಿನಿಂದ ಗೆಲ್ಲುವುವೋ ಎಂಬಂತಿದ್ದುವು. ಅಲ್ಲಿ ರಚಿತವಾಗಿದ್ದ

**ಜಲಂ ಕಿಂ ನು ಸ್ಥಲಂ ಕಿಂ ನು ನ ವಿದುಸ್ತತ್ವತೋ ಜನಾಃ ।**
**ಕ್ವಚಿತ್ಸಿಂಹಾಃ ಕ್ವಚಿದ್ಧಂಸಾಃ ಸಾರಸಾಶ್ಚ ಮಹಾಪ್ರಭಾಃ ॥ ೬ ॥**
**ಕ್ವಚಿಚ್ಛಿಖಂಡಿನಸ್ತತ್ರ ಕೃತ್ರಿಮಾಃ ಸುಮನೋಹರಾಃ ।**
**ತಥಾ ನಾಗಾಃ ಕೃತ್ರಿಮಾಸ್ತೇ ಹಯಾಶ್ಚೈವ ತಥಾ ಮೃಗಾಃ ॥ ೭ ॥**
**ಕೇ ಸತ್ಯಾಃ ಕೇ ಅಸತ್ಯಾಶ್ಚ ಸಂಸ್ಕೃತಾ ವಿಶ್ವಕರ್ಮಣಾ ।**
**ತಥೈವ ಚೈವಂ ವಿಧಿನಾ ದ್ವಾರಪಾ ಅದ್ಭುತಾಃ ಕೃತಾಃ ॥ ೮ ॥**
**ಪುಂಸೋ ಧನೂಂಷಿ ಚೋತ್ಕೃಷ್ಯ ಸ್ಥಾವರಾ ಜಂಗಮೋಪಮಾಃ ।**
**ತಥಾಶ್ವಾಃ ಸಾದಿಭಿಶ್ಚೈವ ಗಜಾಶ್ಚ ಗಜಸಾದಿಭಿಃ ॥ ೯ ॥**
**ಚಾಮರೈರ್ವಿಜ್ಯಮಾನಾಶ್ಚ ಕೇಚಿತ್ಪುಷ್ಪಾಂಕುರಾನ್ವಿತಾಃ ।**
**ಕೇಚಿಚ್ಚ ಪುರುಷಾಸ್ತತ್ರ ವಿರೇಜುಃ ಸ್ರಗ್ವಿಣಸ್ತದಾ ॥ ೧೦ ॥**
**ಕೃತ್ರಿಮಾಶ್ಚ ತಥಾ ಬಹ್ವ್ಯಃ ಪತಾಕಾಃ ಕಲ್ಪಿತಾಸ್ತಥಾ ।**
**ದ್ವಾರಿ ಸ್ಥಿತಾ ಮಹಾಲಕ್ಷ್ಮೀಃ ಕ್ಷೀರೋದಧಿ ಸಮುದ್ಭವಾ ॥ ೧೧ ॥**

---

ಕೊಳಗಳು ಸ್ಥಳಭೂಮಿಗಳನ್ನೂ, ಸ್ಥಳಗಳು ಕೊಳಗಳನ್ನೂ ಮೀರಿಸುತ್ತಿದ್ದುವು. ಹೆಚ್ಚೇಕೆ? ಆ ಮಂಟಪದಲ್ಲಿ ಜಲ ಪ್ರದೇಶವಾವುದು ಸ್ಥಲ ಪ್ರದೇಶವಾವುದು ಎಂಬುದನ್ನೇ ಜನರು ತಿಳಿಯದೆ ಹೋದರು. ದೇವ ಶಿಲ್ಪಿಯಾದ ವಿಶ್ವಕರ್ಮನು ಆ ಮಂಟಪದಲ್ಲಿ ಕೆಲವೆಡೆ ಕೃತಕ ಸಿಂಹಗಳನ್ನೂ, ಕೆಲೆವೆಡೆ ಮಹಾ ಪ್ರಭಗಳಾದ ಹಂಸಗಳನ್ನೂ, ಕೆಲವೆಡೆ ನವಿಲುಗಳನ್ನೂ ಬಹು ಸುಂದರವಾಗಿ ಮಾಡಿಟ್ಟನು. ಅಂತೆಯೇ ಕೃತ್ರಿಮನಾಗಗಳನ್ನೂ, (ಆನೆ) ಕುದುರೆಗಳನ್ನೂ, ಜಿಂಕೆಗಳನ್ನೂ ರಚಿಸಿದ್ದನು. ಅವುಗಳಲ್ಲಿ ಯಾವುವು ನಿಜವಾದುವು, ಯಾವುದು ಕೃತ್ರಿಮವೆಂಬುದೇ ಗೊತ್ತಾಗದಿದ್ದಿತು. ಇದರಂತೆಯೇ ಆ ದೇವಶಿಲ್ಪಿಯು ಆ ವೈವಾಹಿಕ ಮಂಡಪದ ಹೆಬ್ಬಾಗಿಲಿನಲ್ಲಿ ಬಾಗಿಲು ಕಾಯುವ ಸೇವಕರನ್ನು ಹೋಲುವ ಗೊಂಬೆಗಳನ್ನು ಮಾಡಿಟ್ಟದ್ದನು. ಸ್ಥಾವರಗಳಾದ ಆ ಮನುಷ್ಯ ಪ್ರತಿಮೆಗಳು ಬಿಲ್ಲನ್ನು ಸೆಳೆದು ನಿಂತಿರುವ ಜಂಗಮ ಮಾನವರನ್ನೇ ಹೋಲುತ್ತಿದ್ದವು. ಇಷ್ಟೆಯಲ್ಲದೆ ಆ ವಿಶ್ವಕರ್ಮನು ಸವಾರರೊಡಗೂಡಿದ ಕುದುರೆಗಳನ್ನೂ, ಮಾವುತರೊಡಗೂಡಿದ ಆನೆಗಳನ್ನೂ, ಚಾಮರಗಳನ್ನು ಹಿಡಿದು ಬೀಸುತ್ತಿರುವ ಸೇವಕರು ಕೆಲವರನ್ನೂ, ಹೂ ಚಿಗುರುಗಳನ್ನು ಹಿಡಿದು ನಿಂತಿರುವ ಕೆಲ ಸೇವಕರನ್ನೂ ಮಾಡಿಟ್ಟನು. ಕೆಲಮಂದಿ ಕೃತ್ರಿಮ ಪುರುಷರು ಪುಷ್ಪಮಾಲೆಗಳನ್ನು ಧರಿಸಿ ಶೋಭಿಸುತ್ತಿದ್ದರು.

೧೧–೧೫. ಅಲ್ಲಿಯೇ ಅನೇಕ ಕೃತ್ರಿಮ ಪತಾಕೆಗಳೂ ರಚಿತವಾಗಿದ್ದುವು. ಕ್ಷೀರಸಾಗರಸಂಭೂತೆಯಾದ ಶ್ರೀ ಮಹಾಲಕ್ಷ್ಮಿಯೂ ಆ ವಿವಾಹ ಮಂಡಪದ ಬಾಗಿಲಿನಲ್ಲಿರುವಂತೆ ಚಿತ್ರಿತವಾಗಿದ್ದಳು. ಬಹು ಚೆನ್ನಾಗಿ ಅಲಂಕರಿಸಿದ್ದ

ಗಜಾಃ ಸ್ವಲಂಕೃತಾ ಹ್ಯಾಸನ್ ಕೃತ್ರಿಮಾ ಹ್ಯಕೃತೋಪಮಾಃ ।
ತಥಾಶ್ವಾಃ ಸಾದಿಭಿಶ್ಚೈವ ಗಜಾಶ್ಚ ಗಜಸಾದಿಭಿಃ ॥ ೧೨ ॥
ರಥಾ ರಥಿಯುತಾ ಹ್ಯಾಸನ್ ಕೃತ್ರಿಮಾ ಹ್ಯಕೃತೋಪಮಾಃ ।
ಸರ್ವೇಷಾಂ ಮೋಹನಾರ್ಥಾಯ ತಥಾ ಚ ಸಂಸದಃ ಕೃತಾಃ ॥ ೧೩ ॥
ಮಹಾದ್ವಾರಿ ಸ್ಥಿತೋ ನಂದೀ ಕೃತಸ್ತೇನ ಹಿ ಮಂಡಪೇ ।
ಶುದ್ಧಸ್ಫಟಿಕಸಂಕಾಶೋ ಯಥಾ ನಂದೀ ತಥೈವ ಸಃ ॥ ೧೪ ॥
ತಸ್ಯೋಪರಿ ಮಹದ್ದಿವ್ಯಂ ಪುಷ್ಪಕಂ ರತ್ನಭೂಷಿತಂ ।
ರಾಜಿತಂ ಪಲ್ಲವಚ್ಛತ್ರೈಶ್ಚಾಮರೈಶ್ಚ ಸುಶೋಭಿತಂ ॥ ೧೫ ॥
ವಾಮಪಾರ್ಶ್ವೇ ಗಜೌ ದ್ವೌಚ ಶುದ್ಧಕಾಶ್ಮೀರಸನ್ನಿಭೌ ।
ಚತುರ್ದಂತೌ ಷಷ್ಟಿವರ್ಷೌ ಮಹಾತ್ಮಾನೌ ಮಹಾಪ್ರಭೌ ॥ ೧೬ ॥
ತಥೈವ ದಕ್ಷಿಣೇ ಪಾರ್ಶ್ವೇ ದ್ವಾವಶ್ವೌ ದಂಶಿತೌ ಕೃತೌ ।
ರತ್ನಾಲಂಕಾರ ಸಂಯುಕ್ತಾಂ ಲೋಕಪಾಲಾಂ ಸ್ತಥೈವಚ ॥ ೧೭ ॥
ಷೋಡಶ ಪ್ರಕೃತೀಸ್ತೇನ ಯಾಥಾತಥ್ಯೇನ ಧೀಮತಾ ।
ಸರ್ವೇ ದೇವಾ ಯಥಾರ್ಥೇನ ಕೃತಾವ್ವೈ ವಿಶ್ವಕರ್ಮಣಾ ॥ ೧೮ ॥

---

ಕೃತ್ರಿಮ ಗಜಗಳು ಬದುಕಿರುವ ಸಜೀವಗಜಗಳನ್ನೇ ಅನುಕರಿಸುತ್ತಿದ್ದವು. ಸವಾರರೊಡಗೂಡಿದ ಕುದುರೆಗಳೂ, ಮಾವುತರೊಡಗೂಡಿದ ಆನೆಗಳೂ, ರಥಿಕರೊಡಗೂಡಿದ ರಥಗಳೂ ನಿಜವಾದವುಗಳನ್ನೇ ಹೋಲುವಂತೆ ರಚಿತವಾಗಿದ್ದವು. ಆ ವಿಶ್ವಕರ್ಮನು ಎಲ್ಲರನ್ನೂ ಮುಗ್ಧಗೊಳಿಸಲೋಸುಗ ಕೃತ್ರಿಮ ಸಭೆಯೊಂದನ್ನೂ ರಚಿಸಿದ್ದನು. ಆ ಸಭೆಯ ಬಾಗಿಲಿನಲ್ಲಿ ಭಗವಾನ್ ನಂದಿಯು ಚಿತ್ರಿತವಾಗಿದ್ದನು. ಆ ಕೃತಕ ನಂದಿಯ ಪ್ರತಿಮೆಯು ಶುದ್ಧ ಸ್ಫಟಿಕ ಸಂಕಾಶನಾದ ಸಜೀವನಂದಿಯನ್ನೇ ಹೋಲುತ್ತಿದ್ದಿತು. ಆ ನಂದಿಯ ಮೇಲೆ ದಿವ್ಯವೂ, ರತ್ನಾಲಂಕೃತವೂ ಆದ ದೊಡ್ಡ ಪುಷ್ಪಕ ವಿಮಾನವೂ ರಚಿತವಾಗಿದ್ದಿತು. ಚಿಗುರುಗಳಿಂದಲೂ, ಛತ್ರಗಳಿಂದಲೂ ಆ ವಿಮಾನವು ಬಹು ಸುಂದರವಾಗಿ ಬೆಳಗುತ್ತಿದ್ದಿತು.

೧೬–೨೧. ಅದರ ಎಡಭಾಗದಲ್ಲಿ ಬಹು ಎತ್ತರವೂ, ನಾಲ್ಕು ದಂತಗಳುಳ್ಳವೂ, ಶುದ್ಧವಾದ ಕಾಶ್ಮೀರ ಕೇಸರಿಯ ವರ್ಣದವೂ, ಅರುವತ್ತು ವರ್ಷ ವಯಸ್ಸಿನವೂ ಆಗಿ ಬೆಳಗುತ್ತಿರುವ ಆನೆಗಳೆರಡನ್ನು ರಚಿಸಿದ್ದನು. ಅಂತೆಯೇ ಆ ಪುಷ್ಪಕದ ಎಡಭಾಗದಲ್ಲಿ ಹಾರಿನಿಂತಂತಿರುವ ಎರಡು ಕುದುರೆಗಳನ್ನು ಮಾಡಿಟ್ಟಿದ್ದನು. ಅವು ರತ್ನಾಲಂಕೃತವಾಗಿದ್ದುವು. ಇದರಂತೆಯೇ ಮಹಾಬುದ್ಧಿಶಾಲಿಯಾದ ಆ ದೇವಶಿಲ್ಪಿಯು ಲೋಕಪಾಲಕರನ್ನೂ, ಷೋಡಶ ಪ್ರಕೃತಿಗಳನ್ನೂ ಇತರ ಪರಿವಾರದವರನ್ನೂ, ಸಮಸ್ತ ದೇವತೆಗಳನ್ನೂ ಯಥಾ

ತಥೈವ ಋಷಯಃ ಸರ್ವೇ ಭೃಗ್ವಾದ್ಯಾಶ್ಚ ತಪೋಧನಾಃ ।
ವಿಶ್ವೇಚ ಪಾರ್ಷದ್ಯೈಃ ಸಾಕಮಿಂದ್ರೋ ಹಿ ಪರಮಾರ್ಥತಃ ॥ ೧೯ ॥
ಕೃತಾಃ ಸರ್ವೇ ಮಹಾತ್ಮಾನೋ ಯಾಥಾತಥ್ಯೇನ ಧೀಮತಾ ।
ಏವಂ ಭೂತಃ ಕೃತಸ್ತೇನ ಮಂಡಪೋ ದಿವ್ಯರೂಪವಾನ್ ॥ ೨೦ ॥
ಅನೇಕಾಶ್ಚರ್ಯಸಂಭೂತೋ ದಿವ್ಯೋ ದಿವ್ಯವಿಮೋಹನಃ ।
ಏತಸ್ಮಿನ್ನಂತರೇ ತತ್ರ ಆಗತೋ ನಾರದೋಽಗ್ರತಃ ॥ ೨೧ ॥
ಬ್ರಹ್ಮಣಾ ನೋದಿತಸ್ತತ್ರ ಹಿಮಾಲಯಗೃಹಂ ಪ್ರತಿ ।
ನಾರದೋಽಥ ದದರ್ಶಾಗ್ರೇ ಆತ್ಮಾನಂ ವಿನಯಾನ್ವಿತಂ ॥ ೨೨ ॥
ಭ್ರಾಂತೋಹಿ ನಾರದಸ್ತೇನ ಕೃತ್ರಿಮೇಣ ಮಹಾಯಶಾಃ ।
ಅವಲೋಕ ಪರಸ್ತತ್ರ ಚರಿತಂ ವಿಶ್ವಕರ್ಮಣಃ ॥ ೨೩ ॥
ಪ್ರವಿಷ್ಟೋ ಮಂಡಪಂ ತಸ್ಯ ಹಿಮಾದ್ರೇ ರತ್ನಚಿತ್ರಿತಂ ।
ಸುವರ್ಣ ಕಲಶೈರ್ಜುಷ್ಟಂ ರಂಭಾದ್ಯೈರುಪಶೋಭಿತಂ ॥ ೨೪ ॥
ಸಹಸ್ರಸ್ತಂಬ ಸಂಯುಕ್ತಂ ತತೋಽದ್ರಿಃ ಸ್ವಗಣೈರ್ವೃತಃ ।
ತಮೃಷಿಂ ಪೂಜಯಾಮಾಸ ಕಿಂ ಕಾರ್ಯಮಿತಿ ಪೃಷ್ಟವಾನ್ ॥ ೨೫ ॥

---

ವತ್ತಾಗಿಯೇ ರಚಿಸಿದ್ದನು. ಹಾಗೆಯೇ ಭೃಗುವೇ ಮೊದಲಾದ ಮಹರ್ಷಿಗಳೆಲ್ಲ ರನ್ನೂ ಮಾಡಿಟ್ಟನು. ವಿಶ್ವೇದೇವತೆಗಳನ್ನೂ, ಸೇವಕರೊಡಗೂಡಿದ ಮಹೇಂದ್ರ ನನ್ನೂ, ಇನ್ನೂ ಇತರ ಮಹಾತ್ಮರನ್ನೂ ನಿಜವಾಗಿರುವಂತೆಯೇ ರಚಿಸಿದನು. ಎಲೈ ಶೌನಕಾದಿಗಳಿರಾ! ಆ ವಿಶ್ವಕರ್ಮನು ಈರೀತಿ ದಿವ್ಯರೂಪವೂ, ಅನೇಕ ಆಶ್ಚರ್ಯಗಳಿಂದ ತುಂಬಿದುದೂ, ದಿವ್ಯವೂ, ದಿವ್ಯಮೋಹನವೂ, ದಿವ್ಯರೂಪವೂ ಆದ ವಿವಾಹಮಂಟಪವನ್ನು ರಚಿಸಿದನು. ಈ ಸಮಯದಲ್ಲಿಯೇ ನಾರದ ಮುನಿಯು ಅಲ್ಲಿಗೆ ಬಂದನು.

೨೨–೨೫. ಅವನು ಬ್ರಹ್ಮನಿಂದ ಪ್ರೇರಿತನಾಗಿ ಹಿಮವಂತನ ಮನೆಗೆ ಬಂದು ಅಲ್ಲಿ ಮುಂಗಡೆಯೇ ಇರಿಸಿದ್ದ ವಿನಯದೊಡಗೂಡಿರುವಂತೆ ರಚಿಸಿದ್ದ ತನ್ನ ಸ್ವಂತ ಪ್ರತಿಮೆಯನ್ನುಕಂಡನು. ಮಹಾಶಯನಾದ ಆ ಮುನಿಯು ಅದನ್ನು ಕಂಡೊಡನೆಯೇ ದಿಗ್ಭ್ರಾಂತನಾಗಿ ಆ ವಿಶ್ವಕರ್ಮನು ರಚಿಸಿದ್ದ ಆ ವಿವಾಹ ಮಂಟಪವನ್ನು ಇನ್ನೂ ನೋಡಬಯಸಿ ಒಳಕ್ಕೆ ಪ್ರವೇಶಿಸಿದನು. ಆ ಮಂಟಪ ವಾದರೋ ರತ್ನ ಚಿತ್ರಿತಗಳಾದುವೂ, ಸುವರ್ಣಕಲಶಗಳಿಂದ ವಿರಾಜಿತವೂ, ಬಾಳೆಯ ಕಂಬಗಳೇ ಮೊದಲಾದ ಮಂಗಳಾಲಂಕಾರ ಶೋಭಿತವೂ, ಸಹಸ್ರ ಸ್ತಂಭ ಸಹಿತವೂ ಆಗಿ ಒಪ್ಪುತ್ತಿದ್ದಿತು. ತರುವಾಯ ಹಿಮವಂತನು ತನ್ನವ ರೊಡಗೂಡಿ ಹೀಗೆ ಬಿಜೆಮಾಡಿದ ಆ ನಾರದ ಮುನಿಯನ್ನು ಪೂಜಿಸಿ, ಬಂದ ಕಾರ್ಯವೇನೆಂದು ಪ್ರಶ್ನಿಸಿದನು.

ನಾರದ ಉವಾಚ :—

ಆಗತಾಸ್ತೇ ಮಹಾತ್ಮಾನೋ ದೇವಾ ಇಂದ್ರ ಪುರೋಗಮಾಃ ।
ತಥಾ ಮಹರ್ಷಯಃ ಸರ್ವೇ ಗಣೈಶ್ಚ ಪರಿವಾರಿತಾಃ ।
ಮಹಾದೇವೋ ವೃಷಾರೂಢೋ ಹ್ಯಾಗತೋದ್ವಹನಂ ಪ್ರತಿ ॥ ೨೬ ॥
ತತಸ್ತದ್ವಚನಂ ಶ್ರುತ್ವಾ ಹಿಮವಾನ್ ಗಿರಿಸತ್ತಮಃ ।
ಉವಾಚ ನಾರದಂ ವಾಕ್ಯಂ ಪ್ರಶಸ್ತಮಧುರಂ ಮಹತ್ ॥ ೨೭ ॥
ಪೂಜಯಿತ್ವಾ ಯಥಾನ್ಯಾಯಂ ಗಚ್ಛತ್ವಂ ಶಂಕರಂ ಪ್ರತಿ ॥ ೨೮ ॥
ತತಸ್ತದ್ವಚನಂ ಶ್ರುತ್ವಾ ಮುನಿರ್ಹಿಮವತೋ ಗಿರೇಃ ।
ತಥೈವ ಮತ್ವಾ ವಚನಂ ಶೈಲರಾಜಾನಮಬ್ರವೀತ್ ।
ಮೈನಾಕೇನ ಚ ಸಹ್ಯೇನ ಮೇರುಣಾ ಗಿರಿಣಾ ಸಹ ॥ ೨೯ ॥

ಏಭಿಃ ಸಮೇತೋ ಹ್ಯಧುನಾ ಮಹಾಮತೇ
ಯತಸ್ವ ಶೀಘ್ರಂ ಶಿವಮತ್ರ ಚಾನಯ ।
ದೇವೈಃ ಸಮೇತಂ ಚ ಮಹರ್ಷಿವರ್ಯೈಃ
ಸುರಾಸುರೈರರ್ಚಿತಪಾದಪಂಕಜಂ ॥ ೩೦ ॥
ತಥೇತಿ ಮತ್ವಾ ಸ ಜಗಾಮ ತೂರ್ಣಂ
ಸಹೈವ ತೈಃ ಪರ್ವತರಾಜಭಿಶ್ಚ ।
ತ್ವರಾಗತಶ್ಚೈಕಪದೇನ ಶಂಭುಂ
ಪ್ರಾಪ್ಯೋದೃಷೀಣಾಂ ಪ್ರವರೋ ಮಹಾತ್ಮಾ ॥ ೩೧ ॥

---

೨೬–೩೯. ನಾರದನು ಹೇಳುತ್ತಾನೆ:— “ಅಯ್ಯಾ ಹಿಮವಂತನೇ! ಇಂದ್ರನೇ ಮೊದಲಾದ ದೇವತೆಗಳೂ, ಮಹರ್ಷಿಗಳೂ ತಮ್ಮ ತಮ್ಮ ಗುಂಪುಗಳೊಡಗೂಡಿ ಇಲ್ಲಿಗೆ ಬಿಜಯಮಾಡಿರುತ್ತಾರೆ. ಮಹಾದೇವನು ವೃಷಭಾರೂಢನಾಗಿ ವಿವಾಹಕ್ಕೋಸ್ಕರ ಇಲ್ಲಿಗೆ ದಯಮಾಡಿಸಿರುವನು.” ಅದನ್ನು ಕೇಳಿ ಗಿರಿಸತ್ತಮನಾದ ಹಿಮವಂತನು ಆತನನ್ನು ವಿಧಿವತ್ತಾಗಿ ಮತ್ತೆ ಪೂಜಿಸಿ ಶ್ರೇಷ್ಠವೂ, ಮಧುರವೂ ಆದ ಮಾತುಗಳನ್ನು ಆಡಿ, “ಮುನಿಯೇ! ನೀನು ಶಂಕರನ ಬಳಿಗೆ ಹೋಗು” ಎಂದನು. ಆಗಲಾ ನಾರದಮುನಿಯು ಆ ಹಿಮವಂತನ ಮಾತನ್ನು ಕೇಳಿ ಹಾಗೆಯೇ ಆಗಲೆಂದು ಅವನನ್ನು ಕುರಿತು, “ಎಲೈ ಹಿಮವಂತನೇ! ನೀನು ಈಗಲೇ ನಿನ್ನ ಬಂಧುಗಳಾದ ಈ ಸಹ್ಯ, ಮೇರುಗಳೊಡನೆ ಹೊರಟು ದೇವತೆಗಳಿಂದಲೂ, ಮಹರ್ಷಿಗಳಿಂದಲೂ ಇತರ ಸುರಾಸುರರಿಂದಲೂ ಪೂಜೆಯನ್ನು ಕೈಕೊಂಡ ಪಾದಕಮಲಗಳುಳ್ಳ ಶಿವನನ್ನು ಇಲ್ಲಿಗೆ ಕರೆತರುವವನಾಗು” ಎಂದು ಹೇಳಿದನು. ಅಂತೆಯೇ ಆ ಹಿಮವಂತನು ಆ ಪರ್ವತರಾಜರೊಡನೆ ಶಿವನನ್ನು ಕರೆತರುವುದಕ್ಕಾಗಿ

ತಾವದ್ದೃಷ್ಟೋ ಮಹಾದೇವಃ ದೇವೈಶ್ಚ ಪರಿವಾರಿತಃ ।
ತದಾ ಬ್ರಹ್ಮಾ ಚ ವಿಷ್ಣುಶ್ಚ ರುದ್ರಶ್ಚೈವ ಸುರೈಃ ಸಹ ॥ ೩೨ ॥
ಪಪ್ರಚ್ಛುರ್ನಾರದಂ ಸರ್ವೇ ಯೇಽನ್ಯೇ ರುದ್ರಚರಾ ಭೃಶಂ ।
ಕಥ್ಯತಾಂ ಪೃಚ್ಛಮಾನಾನಾಮಸ್ಮಾಕಂ ಕಥ್ಯತೇ ನ ಹಿ ॥ ೩೩ ॥
ಏಕೈಕಸ್ಯಾತ್ಮಜಾಃ ಸ್ವಾಃ ಸ್ವಾಃ ಸಹ್ಯ ನ್ಯೈನಾಕ ಮೇರವಃ ।
ಕನ್ಯಾಂ ದಾಸ್ಯಂತಿ ವಾ ಶಂಭೋಃ ಕಿಂ ತ್ವಿದಾನೀಂ ಪ್ರವರ್ತತೇ ॥ ೩೪ ॥
ತತೋಽವೋಚನ್ಮಹಾತೇಜಾ ನಾರದಶ್ಚರ್ಷಿಸತ್ತಮಃ ।
ಬ್ರಹ್ಮಾಣಂ ಪುರತಃ ಕೃತ್ವಾ ವಿಷ್ಣುಂ ಪ್ರತಿ ಸ ಹೇತುಕಂ ॥ ೩೫ ॥

ಏಕಾಂತ ಮಾಶ್ರಿತ್ಯ ತದಾ ಸುರೇಂದ್ರಂ
ಸ ನಾರದೋ ವಾಕ್ಯಮಿದಂ ಬಭಾಷೇ ।
ತ್ವಷ್ಟ್ರಾ ಕೃತಂ ವೈ ಭವನಂ ಮಹತ್ತರಂ
ಯೇನೈವ ಸರ್ವೇ ಚ ವಿಮೋಹಿತಾ ವಯಂ ॥ ೩೬ ॥
ಪುರಾ ಕೃತಂ ತಸ್ಯ ಮಹಾತ್ಮನಸ್ತ್ವಯಾ
ಕಿಂ ವಿಸ್ಮೃತಂ ತತ್ಸಕಲಂ ಶಚೀಪತೇ ।
ತಸ್ಮಾದಸೌ ತ್ವಾಂ ವಿಜಿಗೀಷುಕಾಮೋ
ಗೃಹೇ ವಸಂಸ್ತಸ್ಯ ಗಿರೇರ್ಮಹಾತ್ಮನಃ ॥ ೩೭ ॥
ಅಹೋ ವಿಮೋಹಿತಸ್ತೇನ ಪ್ರತಿರೂಪೇಣ ಭಾಸ್ವತಾ ।
ತಥಾ ವಿಷ್ಣುಃ ಕೃತಸ್ತೇನ ಶಂಖಚಕ್ರಗದಾದಿಭೃತ್ ॥ ೩೮ ॥

---

ಹೊರಟನು. ಅಷ್ಟರಲ್ಲಿಯೇ ಮಹಾತ್ಮನೂ, ಋಷಿಶ್ರೇಷ್ಠನೂ ಆದ ನಾರದ ಮುನಿಯು ಜಾಗ್ರತೆಯಾಗಿ ಹೊರಟು ಶಂಭುವಿನ ಬಳಿಗೈದಿ ದೇವತೆಗಳಿಂದ ಪರಿವಾರಿತನಾದ ಆ ಸ್ವಾಮಿಯನ್ನು ಕಂಡನು. ಆಗ ಬ್ರಹ್ಮನೂ, ವಿಷ್ಣುವೂ, ರುದ್ರನೂ, ಇತರ ದೇವತೆಗಳೂ, ಶಿವಗಣಗಳೂ, "ಅಯ್ಯಾ ನಾರದ ಮುನಿಯೇ! ಪ್ರಶ್ನಿಸುತ್ತಿರುವ ನಮಗೆ ನೀನು ಉತ್ತರ ಕೊಡುವುದಿಲ್ಲವೇಕೆ?" ಎಂದು ಪ್ರಶ್ನಿಸಿದರು. ತರುವಾಯ ಮಹಾ ತೇಜಸ್ವಿಯಾದ ಆ ನಾರದ ಮುನಿಶ್ರೇಷ್ಠನು ಬ್ರಹ್ಮ ವಿಷ್ಣುಗಳಿಗೆ ಇದ್ದ ವಿಷಯನ್ನು ಇದ್ದಂತೆಯೇ ತಿಳಿಸಿದ ಬಳಿಕ ದೇವೇಂದ್ರನ ಬಳಿಗೆ ಏಕಾಂತವಾಗಿ ಹೋಗಿ ಅವನನ್ನು ಕುರಿತು ಹೀಗೆಂದನು. "ಮಹೇಂದ್ರಾ! ತ್ವಷ್ಟೃವು ಮಹತ್ತರವಾದ ಭವನವನ್ನು ನಿರ್ಮಾಣಮಾಡಿರುವನು. ನಾವು ಅದನ್ನು ನೋಡಿ ಮುಗ್ಧರಾಗಿಹೋದೆವು. ಎಲೈ ಶಚೀಪತಿಯೇ! ನೀನು ಹಿಂದೆ ಆ ತ್ವಷ್ಟೃವಿಗೆ ಮಾಡಿದ ಅಪಕಾರವೆಲ್ಲವನ್ನೂ ಮರೆತೆಯೇನು? ಅವನು ಆ ಕಾರಣ ದಿಂದಲೇ ನಿನ್ನನ್ನು ಗೆಲ್ಲಬಯಸಿ ಮಹಾತ್ಮನಾದ ಆ ಹಿಮವಂತನ ಮನೆಯನ್ನು ಸೇರಿರುವನು. ಆಹಾ! ಅವನು ರಚಿಸಿರುವ ನಿನ್ನ ಪ್ರತಿರೂಪವನ್ನು ಕಂಡು

ಬ್ರಹ್ಮಾ ಚೈವ ತಥಾಭೂತ ಸ್ತ್ವಂ ಚೈವ ಕೃತವಾನಸೌ ॥ ೩೯ ॥
ಮಾಯಾಮಯೋ ವೃಷಭಸ್ತೇನ ವೇಷಾತ್
ಕೃತೋ ಹಿ ನಾಗೋಽಶ್ವರತಸ್ತತ್ಥೈವ ।
ತಥಾ ಚಾನ್ಯಾನ್ಯಪ್ಯನೇನಾಮರೇಂದ್ರ
ಸರ್ವಾಣ್ಯೇವೋಲ್ಲಿಖಿತಾನ್ಯತ್ರ ವಿದ್ಧಿ ॥ ೪೦ ॥
ತಚ್ಛ್ರುತ್ವಾ ವಚನಂ ತಸ್ಯ ದೇವೇಂದ್ರೋ ವಾಕ್ಯಮಬ್ರವೀತ್ ॥ ೪೧ ॥
ವಿಷ್ಣುಂ ಪ್ರತಿ ತದಾ ಶೀಘ್ರಂ ದೃಷ್ಟ್ವಾ ಯಾಮಿ ವಸಾತ್ರ ಭೋಃ ।
ಪುತ್ರಶೋಕೇನ ತಪ್ತೋಽಸೌ ವ್ಯಾಜೇನಾನ್ಯೇನವಾಽಕರೋತ್ ॥ ೪೨ ॥
ತಸ್ಯ ತದ್ವಚನಂ ಶ್ರುತ್ವಾ ದೇವದೇವೋ ಜನಾರ್ದನಃ ।
ಉವಾಚ ಪ್ರಹಸನ್ವಾಕ್ಯಂ ಶಕ್ರಮಾಪ್ತಭಯಂ ತದಾ ॥ ೪೩ ॥
ನಿವಾತಕವಚೈಃ ಪೂರ್ವಂ ಮೋಹಿತೋಽಸಿ ಶಚೀಪತೇ ।
ವಿದ್ಯಾಽಮೃತಾ ತತ್ರ ಮಯಾ ಸಮಾನೀತೋಪಸತ್ತಯೇ ॥ ೪೪ ॥
ಮಹಾವಿದ್ಯಾ ಬಲೇನೈವ ಪ್ರವಿಶ್ಯ ಮಂಡಪೇಽಧುನಾ ।
ಪರ್ವತೋ ಹಿಮವಾನೇಷ ತಥಾನ್ಯೇ ಪರ್ವತೋತ್ತಮಾಃ ॥ ೪೫ ॥

---

ನಾನು ಮುಗ್ಧನಾಗಿ ಹೋದೆನು. ಅಂತೆಯೇ ಅವನು ಶಂಖಚಕ್ರಗಧಾಧಾರಿಯಾದ ವಿಷ್ಣುವನ್ನೂ, ಬ್ರಹ್ಮನನ್ನೂ ಬಹು ಸಹಜವಾಗಿ ರಚಿಸಿಟ್ಟಿರುವನು.

೪೦. ದೇವೇಂದ್ರಾ! ವಿಶ್ವಕರ್ಮನು ಈ ಪ್ರಕಾರವಾಗಿಯೇ ಮಾಯಾಮಯವಾದ ವೃಷಭವನ್ನೂ, ಐರಾವತವನ್ನೂ, ಇನ್ನೂ ಇತರ ಸಮಸ್ತವನ್ನೂ ಅಲ್ಲಿ ಚಿತ್ರಿಸಿರುವನೆಂದು ತಿಳಿ.''

೪೧-೪೭. ನಾರದನ ಈ ಮಾತನ್ನು ಕೇಳಿ ದೇವೇಂದ್ರನು ವಿಷ್ಣುವನ್ನು ಕುರಿತು, ''ಎಲೈ ವಿಷ್ಣುವೇ! ಆ ತ್ವಷ್ಟೃವು ಪುತ್ರಶೋಕ ಪೀಡಿತನಾಗಿ ಇಷ್ಟೆಲ್ಲವನ್ನೂ ರಚಿಸಿರುವನೋ ಅಥವಾ ಇತರ ಕಾರಣದಿಂದೀರೀತಿ ಮಂಡಪರಚನೆಯನ್ನೆಸಗಿರುವನೋ ಎಂಬುದನ್ನು ತಿಳಿದು ಬರುತ್ತೇನೆ. ನೀನಿಲ್ಲಿಯೇ ಇರು'' ಎಂದನು. ದೇವದೇವನಾದ ಜನಾರ್ದನನು ಆ ಮಾತನ್ನು ಕೇಳಿ ಭಯಗೊಂಡಿರುವ ಆ ದೇವರಾಜನನ್ನು ಕುರಿತು ನಗುತ್ತ, ''ವಾಸವ! ಶಚೀಪತಿಯಾದ ನೀನು ಪೂರ್ವದಲ್ಲಿ ನಿವಾತಕವಚರಿಗೆ ಭಯಪಟ್ಟಿದ್ದೆ. ಈಗ ನಿನ್ನನ್ನು ಸಮಾಧಾನಗೊಳಿಸಲು ಅಮೃತವಿದ್ಯೆಯನ್ನು ಕರೆತಂದಿರುವೆನು. ಈ ಮಹಾವಿದ್ಯೆಯ ಬಲದಿಂದಲೇ ನೀನು ವಿವಾಹ ಮಂಡಪವನ್ನು ಪ್ರವೇಶಿಸು. ಪೂರ್ವದಲ್ಲಿ ನೀನು ನನ್ನ ಅಪ್ಪಣೆಯಂತೆ ಈ ಹಿಮವಂತನ ಮತ್ತು ಇತರ ಪರ್ವತರಾಜರ ರೆಕ್ಕೆಗಳನ್ನು ಕಡಿದುಹಾಕಿರುವ ಈ ಕಾರಣವನ್ನು ನೆನೆಸಿಕೊಂಡೇ ಈಗಲೀ ವಿಶ್ವಕರ್ಮನು ತನ್ನ ಮಾಯೆಯಿಂದ ಈ ವಿಧವಾದ ಮಂಡಪವನ್ನು ರಚಿಸಿರು

ವಿಪಕ್ಷಾ ಹಿ ಕೃತಾಃ ಸರ್ವೇ ಮಮವಾಕ್ಯಾಚ್ಚ ವಾಸವ ।
ಹೇತುಂ ಸ್ಮೃತ್ವಾಥ ವೈ ತ್ವಷ್ಟಾ ಮಾಯಯಾ ಹ್ಯಕರೋದಿದಂ ॥ ೪೬ ॥
ಜಯಮಿಚ್ಛಂತಿ ವೈ ಮೂಢಾ ನ ಚ ಭೇತವ್ಯಮಣ್ವಪಿ ॥ ೪೭ ॥
ಏವಂ ವಿವದಮಾನಾಂಸ್ತಾನ್ ದೇವಾಂಚ್ಛಕ್ರಪುರೋಗಮಾನ್ ।
ಸಾಂತ್ವಯಾ ಮಾಸ ವೈ ವಿಷ್ಣುರ್ನಾರದಂ ತೇ ತತೋಽಬ್ರುವನ್ ॥ ೪೮ ॥

ದದಾತಿ ವಾ ನದದಾತಿ ಕನ್ಯಾಂ ಗಿರೀಂದ್ರಃ
ಸ್ವಾಂ ವೈ ಕಥ್ಯತಾಂ ಶೀಘ್ರಮೇವ ।
ಕಿಂ ತೇನ ದೃಷ್ಟಂ ಕಿಂ ಕೃತಂ ಚಾದ್ಯ ಶಂಸ
ತತ್ಸರ್ವಂ ಭೋ ನಾರದ ತೇ ನಮೋಽಸ್ತು ॥ ೪೯ ॥

ತಚ್ಛ್ರುತ್ವಾ ಪ್ರಹಸನ್ ಶಂಭುರುವಾಚ ವಚನಂ ತದಾ ।
ಕನ್ಯಾಂ ದಾಸ್ಯತಿ ಚೇನ್ಮಹ್ಯಂ ಪರ್ವತೋ ಹಿ ಹಿಮಾಲಯಃ ।
ಮಾಯಯಾ ಮಮ ಕಿಂ ಕಾರ್ಯಂ ವದ ವಿಷ್ಣೋ ಯಥಾ ತಥಂ ॥ ೫೦ ॥

ಕೇನಾಪ್ಯುಪಾಯೇನ ಫಲಂ ಹಿ ಸಾಧ್ಯ
ಮಿತ್ಯುಚ್ಯತೇ ಪಂಡಿತೈರ್ನ್ಯಾಯವದ್ಭಿಃ ।
ತಸ್ಮಾತ್ಸರ್ವೈರ್ಗಮ್ಯತಾಂ ಶೀಘ್ರಮೇವ
ಕಾರ್ಯಾರ್ಥಿಭಿಶ್ಚೇಂದ್ರ ಪುರೋಗಮೈಶ್ಚ ॥ ೫೧ ॥

---

ವನು. ಈ ಮೂಢರು ಈರೀತಿ ಜಯವನ್ನು ಪಡೆಯಬಯಸುವರು. ನೀನು ಸ್ವಲ್ಪವೂ ಹೆದರಬೇಡ" ಎಂದು ಹೇಳಿದನು.

೪೮–೫೦. ಈ ಪ್ರಕಾರ ಶ್ರೀಮನ್ಮಹಾವಿಷ್ಣುವು, ಪರಸ್ಪರವಾಗಿ ಹೆದರಿ ಮಾತನಾಡಿಕೊಳ್ಳುತ್ತಿದ್ದ ಇಂದ್ರಾದಿದೇವತೆಗಳನ್ನು ಸಮಾಧಾನಗೊಳಿಸಿದ ತರುವಾಯ, ಅವರೆಲ್ಲರೂ ನಾರದನನ್ನು ಕುರಿತು, "ಅಯ್ಯಾ! ಮುನಿಯೇ! ಆ ಹಿಮವಂತನು ಶಂಕರನಿಗೆ ಮಗಳನ್ನು ಕೊಡುವನೇ ಇಲ್ಲವೇ ಎಂಬುದನ್ನು ಜಾಗ್ರತೆಯಾಗಿ ತಿಳಿಸು. ಅವನು ಕಂಡುದೇನು? ಮಾಡಿದುದೇನು ಎಂಬೀ ವಿಷಯಗಳೆಲ್ಲವನ್ನೂ ತಿಳಿಸು. ನಿನಗೆ ನಮೋನಮಃ" ಎಂದರು. ಈ ಮಾತನ್ನು ಕೇಳಿದ ಬಳಿಕ ಶಂಭುವು ನಗುತ್ತ, "ಎಲೈ ವಿಷ್ಣುವೇ! ಒಂದುವೇಳೆ ಹಿಮವಂತನು ಮಗಳನ್ನು ಕೊಟ್ಟರೂ ಆ ಮಾಯೆಯಿಂದ ನನಗೇನು ಪ್ರಯೋಜನ? ನೀನೇ ಯಥಾರ್ಥವಾಗಿ ಹೇಳು.

೫೧–೫೨. ಅಯ್ಯಾ! ನ್ಯಾಯವನ್ನು ಬಲ್ಲ ಪಂಡಿತರು ಯಾವ ಉಪಾಯದಿಂದಾದರೂ ಫಲವನ್ನು ಸಾಧಿಸಬೇಕೆಂದು ಹೇಳುತ್ತಾರೆಯಲ್ಲವೆ! ಆದುದರಿಂದ ಈಗ ದೇವೇಂದ್ರನಾದಿಯಾಗಿ ದೇವತೆಗಳಾದ ನೀವೆಲ್ಲರೂ ಹಿಮವಂತನಲ್ಲಿಗೆ ಹೊರಡಿರಿ" ಎಂದನು. ಆಗ ವಿಶ್ವಾತ್ಮನಾದ ಪರಶಿವನೂ ಸಹ (ಗಿರಿಜೆಯನ್ನಗು

ತದಾ ಶಿವೋಽಪಿ ವಿಶ್ವಾತ್ಮಾ ಪಂಚಬಾಣೇನ ಮೋಹಿತಃ ।
ಮಹಾಭೂತೇನ ಭೂತೇಶಸ್ತ್ವನ್ಯೇಷಾಂಚೈವ ಕಾ ಕಥಾ ॥ ೫೨ ॥
ಏವಂ ಚ ವಿದ್ಯಮಾನೇಽಸೌ ಶಂಭುಃ ಪರಮ ಶೋಭನಃ ।
ಕೃತೋಽಹ್ಯನಂಗೇನ ವಶೇ ಯಥಾನ್ಯಃ ಪ್ರಾಕೃತೋ ಜನಃ ॥ ೫೩ ॥
ಮದನೋ ಹಿ ಬಲೀ ಲೋಕೇ ಯೇನ ಸರ್ವಮಿದಂ ಜಗತ್ ।
ಜಿತಮಸ್ತಿ ನಿಜಪ್ರೌಢ್ಯಾ ಸದೇವರ್ಷಿಸಮನ್ವಿತಂ ॥ ೫೪ ॥
ಸರ್ವೇಷಾಮೇವ ಭೂತಾನಾಂ ದೇವಾನಾಂ ಚ ವಿಶೇಷತಃ ।
ರಾಜಾಹ್ಯನಂಗೋ ಬಲವಾನ್ಯಸ್ಯ ಚಾಜ್ಞಾ ಬಲೀಯಸೀ ॥ ೫೫ ॥
ಪಾರ್ವತೀಸ್ತ್ರೀಸ್ವರೂಪೇಣ ಅಜೇಯೋ ಭುವನತ್ರಯೇ ।
ತಾಂ ದೃಷ್ಟ್ವಾ ಹಿ ಸ್ತ್ರಿಯಂ ಸರ್ವೇ ಋಷಯೋಽಪಿ ವಿಚಕ್ಷಣಾಃ ॥ ೫೬ ॥
ದೇವಾ ಮನುಷ್ಯಾ ಗಂಧರ್ವಾಃ ಪಿಶಾಚೋರಗ ರಾಕ್ಷಸಾಃ ।
ಆಜ್ಞಾನುಲ್ಲಂಘಿನಃ ಸರ್ವೇ ಮದನಸ್ಯ ಮಹಾತ್ಮನಃ ॥ ೫೭ ॥
ತಪೋಬಲೇನ ಮಹತಾ ತಥಾ ದಾನಬಲೇನ ಚ ।
ವೇತ್ತುಂ ನ ಶಕ್ಯೋ ಮದನೋ ವಿನಯೇನ ವಿನಾ ದ್ವಿಜಾಃ ॥ ೫೮ ॥

---

ಲಿರಲಾರದೆ ಆಕೆಯನ್ನು ಯಾವಾಗ ಪರಿಣಯವಾಗುವೆನೋ ಎಂದು ತಳಮಳಿಸಿ) ಮದನ ತಾಪಕ್ಕೆ ತುತ್ತಾಗಿಹೋದನು. ಹೀಗೆ ಆತನು ಭೂತಾಧಿಪನಾಗಿದ್ದರೂ, ಮಹಾಭೂತನಾದ ಮನ್ಮಥನಿಂದ ಮೋಹಿತನಾದ ಬಳಿಕ ಉಳಿದ ಸಾಮಾನ್ಯ ಮಾನವರ ಪಾಡೇನು? ಇಂತು ಪರಮ ಶೋಭನನಾದ ಆ ಪರಮಾತ್ಮನು ಕೇವಲ ಪ್ರಾಕೃತರಂತೆ ಕಾಮುಪರವಶನಾಗಿ ತಪಿಸಿಹೋದನು. ಈ ಕಾರಣ ದಿಂದಲೇ ಲೋಕದಲ್ಲಿ ಮದನನೇ ಮಹಾಬಲಿಷ್ಠನೆಂದು ಅರಿತವರು ಹೇಳು ವುದು. ಆ ಮದನನು ಈ ಜಗತ್ತನ್ನೇ ಜಯಿಸಿರುವನು. ಅವನ ಸ್ವಪ್ರೌಢಿಮೆ ಯಿಂದ ದೇವತೆಗಳನ್ನೂ, ಋಷಿಗಳನ್ನೂ ಸಹ ಗೆದ್ದಿರುವನು. ಆದುದರಿಂದ ಸಮಸ್ತಭೂತಗಳಿಗೂ, ದೇವತೆಗಳಿಗೂ ಆ ಅನಂಗನೇ ಮಹಾಬಲಿಷ್ಠನಾದ ಪ್ರಭುವೆಂದು ಹೇಳಬಹುದು. ಅವನ ಆಜ್ಞೆಯೇ ಬಲವತ್ತರವಾದುದು.

೫೬–೬೦. ಎಲೈ ಮುನಿಗಳಿರಾ! ಕೇಳಿರಿ; ಆ ಮನ್ಮಥನು ಪಾರ್ವತಿ ಯೆಂಬ ಸ್ತ್ರೀಯ ರೂಪವನ್ನು ಧರಿಸಿ (ಪರಶಿವನನ್ನೂ ಗೆದ್ದು) ಮೂರು ಲೋಕ ಗಳಲ್ಲಿಯೂ ಅಜೇಯನಾದನು. ಆ ಪಾರ್ವತೀದೇವಿಯನ್ನು ಕಂಡೊಡನೆಯೇ ಆ ಶರ್ವನೂ ಸಹ ಕ್ಷಣಮಾತ್ರದಲ್ಲಿಯೇ ಜಿತನಾದನು. ವಿಚಕ್ಷಣರಾದ ಋಷಿಗಳೂ, ದೇವತೆಗಳೂ, ಮಾನವರೂ, ಗಂಧರ್ವ-ಪಿಶಾಚರೂ, ಉರಗರೂ, ರಾಕ್ಷಸರೂ ಎಲ್ಲರೂ ಮಹಾತ್ಮನಾದ ಆ ಮನ್ಮಥನ ಅಪ್ಪಣೆಯನ್ನು ಮೀರಲಾರ ದವರಾದರು. ಅಯ್ಯಾ ಶೌನಕಾದಿಗಳಿರಾ! ಆ ಮದನನನ್ನು ವಿನಯದಿಂದಲ್ಲದೆ

ತಸ್ಮಾದನಂಗಸ್ಯ ಮಹಾನ್ ಕ್ರೋಧೋ ಹಿ ಬಲವತ್ತರಃ ।
ಈಶ್ವರಂ ಮದನೇನೈವಂ ಮೋಹಿತಂ ವೀಕ್ಷ್ಯ ಮಾಧವಃ ॥ ೫೯ ॥
ಉವಾಚ ವಾಕ್ಯಂ ವಾಕ್ಯಜ್ಞೋ ಮಾ ಚಿಂತಾಂ ಕುರು ವೈ ಪ್ರಭೋ ।
ಯದುಕ್ತಂ ನಾರದೇನೈವ ಮಂಡಪಂ ಪ್ರತಿ ಸರ್ವಶಃ ॥ ೬೦ ॥
ತ್ವಷ್ಟ್ರಾ ಕೃತಂ ವಿಚಿತ್ರಂ ಚ ತತ್ಸರ್ವಂ ಮದನಾತ್ಪ್ರಭೋಃ ।
ತದಾನೀಂ ಶಂಕರೋ ವಾಕ್ಯಮುವಾಚ ಮಧುಸೂದನಂ ॥ ೬೧ ॥
ಅವಿದ್ಯಯಾ ವೃತಂ ತೇನ ಕೃತಂ ತ್ವಷ್ಟ್ರಾ ಹಿ ಮಂಡಪಂ ।
ಕಿಂತು ವಕ್ಷ್ಯಾಮಹೇ ವಿಷ್ಣೋ ಮಂಡಪಃ ಕೇವಲೇನ ಹಿ ॥ ೬೨ ॥
ವಿವಾಹೋ ಹಿ ಮಹಾಭಾಗ ಅವಿದ್ಯಾಮೂಲ ಏವಚ ।
ತಸ್ಮಾತ್ಸರ್ವೇ ವಯಂ ಯಾಮ ಉದ್ವಾಹಾರ್ಥಂ ಚ ಸಂಪ್ರತಿ ॥ ೬೩ ॥
ನಾರದಂ ಚ ಪುರಸ್ಕೃತ್ಯ ಸರ್ವೇ ದೇವಾಃ ಸವಾಸವಾಃ ।
ಹಿಮಾದ್ರಿ ಸಹಿತಾ ಜಗ್ಮುರ್ಮಂದಿರಂ ಪರಮಾದ್ಭುತಂ ।
ಅನೇಕಾಶ್ಚರ್ಯ ಸಂಯುಕ್ತಂ ವಿಚಿತ್ರಂ ವಿಶ್ವಕರ್ಮಣಾ ॥ ೬೪ ॥

---

ಮತ್ತಾವುದರಿಂದಲೂ ಗೆಲ್ಲಲಾಗುವುದಿಲ್ಲವು; ಗೆಲ್ಲುವುದಂತಿರಲಿ; ತಿಳಿಯಲೂ ಆಗುವುದಿಲ್ಲವು. ಆತನ ಕ್ರೋಧವೆಂದರೆ ಮಹತ್ತರವಾದುದು. ಇಂತಹನಿಗೆ ಸೋತು ಮೋಹಿತನಾದ ಆ ಪರಮೇಶ್ವರನನ್ನು ಕುರಿತು ಮಾತನಾಡಲು ಬಹು ಚೆನ್ನಾಗಿ ಬಲ್ಲವನಾದ ಮಧುಸೂದನನು, "ಎಲೈ ಶಂಕರನೇ! ನೀನು ಚಿಂತಿಸಬೇಡ. ಪ್ರಭುವೇ! ಈ ನಾರದನು ಈವರೆಗೆ ವರ್ಣಿಸಿದ ಆ ವಿವಾಹ ಮಂಡಪವನ್ನೆಲ್ಲ, ಆ ವಿಶ್ವಕರ್ಮನು ಮಹಾ ಸಮರ್ಥನಾದ ಮದನನಿಂದ ಪ್ರೇರಿತನಾಗಿಯೇ ವಿಚಿತ್ರವಾಗಿಯೇ ರಚಿಸಿರುತ್ತಾನೆ" ಎಂದು ಹೇಳಿದನು.

೬೧–೬೪. ಶಂಕರನು ಈರೀತಿ ನುಡಿದ ಮಧುಸೂದನನ್ನು ಕುರಿತು, "ಎಲೈ ವಿಷ್ಣುವೇ! ದೇವ ಶಿಲ್ಪಿಯಾದ ಆ ವಿಶ್ವಕರ್ಮನು ಆ ವಿವಾಹ ಮಂಡಪವನ್ನು ಅವಿದ್ಯೆಯ ಸಹಾಯದಿಂದಲೇ ರಚಿಸಿರುವುದರಿಂದ ಅದು ಸಾಮಾನ್ಯವಾಗಿರುವುದಿಲ್ಲವು. ಅಯ್ಯಾ ಮಹಾಭಾಗನೇ! ಈಗ ನಡೆಯಬೇಕಾಗಿರುವ ವಿವಾಹವೂ ಅವಿದ್ಯಾಮೂಲಕವಾದುದೇ! ಪ್ರಕೃತದಲ್ಲಿ ನಾವೂ ಸಹ ಅವಿದ್ಯೆಯ ನೆರವಿನಿಂದಲೇ ಈ ಮದುವೆಗೆ ಹೋಗುವೆವಲ್ಲವೆ!" ಎಂದು ಹೇಳಿದನು. ಆ ಬಳಿಕ ಸಮಸ್ತದೇವತೆಗಳೂ ಮಹೇಂದ್ರನೊಡನೆ ನಾರದ ಮುನೀಂದ್ರನನ್ನು ಪುರಸ್ಕರಿಸಿಕೊಂಡು ತಮ್ಮನ್ನು ಕರೆದುಕೊಂಡು ಹೋಗಲೈತಂದಿದ್ದ ಹಿಮವಂತನೊಡನೆಯೇ ಮಹಾದ್ಭುತವಾದ ಆ ವಿವಾಹ ಮಂಟಪಕ್ಕೆ ಹೊರಟರು. ವಿಶ್ವಕರ್ಮನಿರ್ಮಿತವಾಗಿದ್ದ ಆ ಕಲ್ಯಾಣಮಂಟಪವಾದರೋ ಬಹು ವಿಚಿತ್ರವಾಗಿ ರಚಿತವಾಗಿದ್ದಿತು.

ಕೃತಂ ಚ ತೇನಾದ್ಯ ಪವಿತ್ರಮುತ್ತಮಂ
ತಂ ಯಜ್ಞವಾಟಂ ಬಹುಭಿಃ ಪುರಸ್ಕೃತಂ ।
ವಿಚಿತ್ರಚಿತ್ರಂ ಮನಸೋ ಹರಂ ಚ
ತಂ ಯಜ್ಞವಾಟಂ ಚ ಚಕಾರ ಬುದ್ಧಿಮಾನ್ ॥ ೬೫ ॥
ಪ್ರವೇಕ್ಷ್ಯಮಾಣಾಸ್ತೇ ಸರ್ವೇ ಸುರೇಂದ್ರಾ ಋಷಿಭಿಃ ಸಹ ।
ದೃಷ್ಟ್ವಾ ಹಿಮಾದ್ರಿಣಾ ತತ್ರ ಅಭ್ಯುತ್ಥಾನ ಗತೋಽಭವತ್ ॥ ೬೬ ॥
ತಥೈವ ತೇಷಾಂ ಚ ಮನೋಹರಾಣಿ
ಹರ್ಮ್ಯಾಣಿ ತೇನ ಪ್ರತಿಕಲ್ಪಿತಾನಿ ।
ಗಂಧರ್ವಯಕ್ಷಾಃ ಪ್ರಮುಥಾಶ್ಚ ಸಿದ್ಧಾಃ
ದೇವಾಶ್ಚ ನಾಗಾಪ್ಸರಸಾಂ ಗಣಾಶ್ಚ ।
ವಸಂತಿ ತತ್ರೈವ ಸುಖೇನ ತೇಭ್ಯಃ
ಸ ತತ್ರ ತತ್ರೋಪವನಂ ಚಕಾರ ॥ ೬೭ ॥
ತೇಷಾಮರ್ಥೇ ಮಹಾರ್ಹಾಣಿ ಧಾರಾಜಿರ ಗೃಹಾಣಿಚ ।
ಅತ್ಯದ್ಭುತಾನಿ ಶೋಭಂತೇ ಕೃತಾನ್ಯೇವ ಮಹಾತ್ಮನಾ ॥ ೬೮ ॥
ನಿವಾಸಾರ್ಥೇ ಕಲ್ಪಿತಾನಿ ಸಾವಕಾಶಾನಿ ತತ್ರವೈ ।
ದೇವಾನಾಂ ಚೈವ ಸರ್ವೇಷಾಮೃಷೀಣಾಂ ಭಾವಿತಾತ್ಮನಾಂ ॥ ೬೯ ॥
ಏವಂ ವಿಸ್ತಾರಯಾಮಾಸ ವಿಶ್ವಕರ್ಮಾ ಬಹೂನ್ಯಪಿ ।
ಮಂದಿರಾಣಿ ಯಥಾಯೋಗ್ಯಂ ಯತ್ರ ತತ್ರೈವ ತಿಷ್ಠತಾಂ ॥ ೭೦ ॥

---

೬೫. ಮಹಾ ಬುದ್ಧಿಶಾಲಿಯಾದ ಆ ದೇವಶಿಲ್ಪಿಯು ಪವಿತ್ರವೂ, ಉತ್ತಮವೂ, ಅನೇಕ ಮುನಿಜನ ಸಮನ್ವಿತವೂ, ಬಹು ವಿಚಿತ್ರವೂ, ಮನೋಹರವೂ ಆದ ಯಜ್ಞವಾಟಿಯೊಂದನ್ನೂ ಸಹ ಅಲ್ಲಿ ನಿರ್ಮಿಸಿದ್ದನು.

೬೬–೭೪. ದೇವತೆಗಳೆಲ್ಲರೂ ಮಹರ್ಷಿಗಳೊಡನೆ ಆ ಶುಭ ಮಂಟಪವನ್ನು ಪ್ರವೇಶಿಸುತ್ತಿರುವಂತೆಯೇ ಹಿಮವಂತನು ಅವರನ್ನು ಎದುರುಗೊಂಡು ಗೌರವಿಸುವುದಕ್ಕಾಗಿ ಮೇಲಕ್ಕೆದ್ದು ಬಂದನು. ಅಯ್ಯಾ ಮಹರ್ಷಿಗಳಿರಾ! ಸಮಸ್ತ ದೇವತೆಗಳಿಗೂ ಅಲ್ಲಿಯೇ ಬಹು ಮನೋಹರವಾದ ಬಿಡದಿಯ ಮನೆಗಳು ನಿರ್ಮಿತವಾಗಿದ್ದುವು. ಗಂಧರ್ವರು, ಯಕ್ಷರು, ಪ್ರಮಥರು, ಸಿದ್ಧರು ಇವರೇ ಮೊದಲಾದವರೂ, ನಾಗರು, ಅಪ್ಸರರ ಸಮೂಹಗಳೂ, ಇನ್ನೂ ಇತರ ದೇವತೆಗಳೂ ಎಲ್ಲೆಲ್ಲಿದ್ದರೋ ಅಲ್ಲಲ್ಲಿಯೇ ಅವರವರು ಸುಖವಾಗಿ ವಿಹರಿಸುವಂತೆ ಉಪವನಗಳೂ ನಿರ್ಮಿತವಾಗಿದ್ದುವು. ಮಹಾತ್ಮನಾದ ವಿಶ್ವಕರ್ಮನು ಈ ದೇವತೆಗಳಿಗಾಗಿಯೇ ನಿರ್ಮಿಸಿದ್ದ ಧಾರಾಗೃಹಗಳೂ, ತೊಟ್ಟಿಯ ಮನೆಗಳೂ ಅತ್ಯದ್ಭುತವಾಗಿ ಶೋಭಿಸುತ್ತಲಿದ್ದುವು. ದೇವತೆಗಳಿಗೂ, ಆತ್ಮಜ್ಞಾನಿಗಳಾದ ಸಮಸ್ತ

ಭೈರವಾಃ ಕ್ಷೇತ್ರಪಾಲಾಶ್ಚ ಯೇಽನ್ಯೇ ಚ ಕ್ಷೇತ್ರವಾಸಿನಃ ।
ಶ್ಮಶಾನವಾಸಿನಶ್ಚಾನ್ಯೇ ಯೇಽನ್ಯೇ ನ್ಯಗ್ರೋಧವಾಸಿನಃ ॥ ೭೧ ॥
ಅಶ್ವತ್ಥಸೇವಿನಶ್ಚಾನ್ಯೇ ಖೇಚರಾಶ್ಚ ತಥಾಪರೇ ।
ಯೇ ಯೇ ಯತ್ರೋಪವಿಷ್ಟಾಶ್ಚ ತತ್ರ ತತ್ರೈವ ತೇನ ವೈ ॥ ೭೨ ॥
ಕೃತಾನಿ ಚ ಮನೋಜ್ಞಾನಿ ಭವನಾನಿ ಮಹಾಂತಿ ವೈ ।
ತೇಷಾಮೇವಾನುಕೂಲಾನಿ ಭೂತಾನಾಂ ವಿಶ್ವಕರ್ಮಣಾ ॥ ೭೩ ॥
ತತ್ರೈವ ತೇ ಸರ್ವಗಣೈಃ ಸಮೇತಾ
ನಿವಾಸಿತಾಸ್ತೇ ನ ಹಿಮಾದ್ರಿಣಾ ಸ್ವಯಂ ।
ಸೇಂದ್ರಾಃ ಸುರಾ ಯಕ್ಷ ಪಿಶಾಚ ರಕ್ಷಸಾಂ
ಗಂಧರ್ವವಿದ್ಯಾಪ್ಸರಸಾಂ ಸಮೂಹಾಃ ॥ ೭೪ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ
ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ
“ಪಾರ್ವತೀ ಪರಿಣಯೇ ಹಿಮಾದ್ರಿಣಾ ದೇವಾನಾಂ
ನಿವಾಸಸ್ಥಾನ ಕರಣ ವರ್ಣನಂ” ನಾಮ
ಚತುರ್ವಿಂಶೋಽಧ್ಯಾಯಃ

---

ಋಷಿಗಳಿಗೂ ನೆಲಸಲು ರಚಿತವಾಗಿದ್ದ ಭವನಗಳು ಬಹು ವಿಶಾಲವಾಗಿದ್ದವು. ಹೀಗೆ ಆ ದೇವಶಿಲ್ಪಿಯು ಯಾರಾರು ಎಲ್ಲೆಲ್ಲಿದ್ದರೋ ಅಲ್ಲಲ್ಲಿಯೇ ಅವರವರಿಗೆ ಅವರವರ ಯೋಗ್ಯತೆಗನುಗುಣವಾಗಿ ದಿವ್ಯ ಭವನಗಳನ್ನು ನಿರ್ಮಿಸಿದನು. ಭೈರವರು, ಕ್ಷೇತ್ರಪಾಲಕರು, ವಿವಿಧ ಕ್ಷೇತ್ರವಾಸಿಗಳು, ಶ್ಮಶಾನವಾಸಿಗಳು, ಆಲದ ಮರದಲ್ಲಿ ನೆಲಸಿರುವವರು, ಅಶ್ವತ್ಥವಾಸಿಗಳು, ಖೇಚರರು ಮುಂತಾದವರು ನೆಲಸಿದ್ದೆಡೆಯಲ್ಲಿಯೇ ಆ ದೇವಶಿಲ್ಪಿಯು ಅವರಿಗೆ ರಮಣೀಯವೂ, ವಿಶಾಲವೂ ಆದ ಮಹಾ ಭವನಗಳನ್ನು ರಚಿಸಿದನು. ಮಹಾತ್ಮನಾದ ಹಿಮವಂತನಾದರೋ ಈರೀತಿ ಸಮಸ್ತಭೂತಗಣಗಳನ್ನೂ, ಇಂದ್ರಾದಿದೇವತೆಗಳನ್ನೂ, ಯಕ್ಷ ಪಿಶಾಚ ರಾಕ್ಷಸರನ್ನೂ, ಗಂಧರ್ವವಿದ್ಯಾಧರ ಅಪ್ಸರರನ್ನೂ ಆ ಭವ್ಯ ಭವನಗಳಲ್ಲಿ ಬಿಡದಿಮಾಡಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರ
ಖಂಡದಲ್ಲಿ “ಶ್ರೀ ಶಿವ ವಿವಾಹ ವರ್ಣನ-ಹಿಮಾದ್ರಿಯು ದೇವತೆಗಳಿಗೆ ಬಿಡದಿಗಳನ್ನು
ರಚಿಸಿದುದು” ಎಂಬ ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಪಂಚವಿಂಶೋಽಧ್ಯಾಯಃ

### ಶ್ರೀ ಪಾರ್ವತೀ ವಿವಾಹ ವರ್ಣನಂ

ಲೋಮಶ ಉವಾಚ :—

ತತ್ರೈವ ವಿವಿಶುಃ ಸರ್ವೇ ಸತ್ಕೃತಾಶ್ಚ ಹಿಮಾದ್ರಿಣಾ ।
ತೇ ದೇವಾಃ ಸ ಪರೀವಾರಾಃ ಸಹರ್ಷಾಶ್ಚ ಸ ವಾಹನಾಃ ॥ ೧ ॥
ತತ್ರೈವ ಚ ಮಹಾಮಾತ್ರಂ ನಿರ್ಮಿತಂ ವಿಶ್ವಕರ್ಮಣಾ ।
ದೀಪ್ತ್ಯಾ ಪರಮಯಾ ಯುಕ್ತಂ ನಿವಾಸಾರ್ಥಂ ಸ್ವಯಂಭುವಃ ॥ ೨ ॥
ತಥೈವ ವಿಷ್ಣೋಸ್ತ್ವಪರಂ ಭವನಂ ಸ್ವಯಮೇವ ಹಿ ।
ಭಾಸ್ವರಂ ಸುವಿಚಿತ್ರಂ ಚ ಕೃತಂ ತ್ವಷ್ಟ್ರಾ ಮನೋರಮಂ ।
ವಂಡೀಗೃಹಂ ಮನೋಜ್ಞಂ ಚ ತಥೈವ ಕೃತವಾನ್ಸ್ವಯಂ ॥ ೩ ॥
ತಥೈವ ಶ್ವೇತಂ ಪರಮಂ ಮನೋಜ್ಞಂ
ಮಹಾಪ್ರಭಂ ದೇವವರೈಃ ಸುಪೂಜಿತಂ ।
ಕೈಲಾಸ ಲಕ್ಷ್ಮೀ ಪ್ರಭಯಾ ಮಹತ್ಯಾ
ಸು ಶೋಭಿತಂ ತದ್ಭವನಂ ಚಕಾರ ॥ ೪ ॥
ತತ್ರೈವ ಶಂಭುಃ ಪರಯಾ ವಿಭೂತ್ಯಾ
ಸಂಸ್ಥಾಪಿತಸ್ತೇನ ಹಿಮಾದ್ರಿಣಾ ವೈ ॥ ೫ ॥

---

### ಕನ್ನಡದ ಅನುವಾದ

### ಶ್ರೀ ಪಾರ್ವತೀ ವಿವಾಹ ವರ್ಣನವು

೧. ಲೋಮಶನು ಹೇಳುತ್ತಾನೆ.—ಎಲೈ ಶೌನಕಾದಿ ಮಹರ್ಷಿಗಳಿರಾ! ಕೇಳಿರಿ; ಈ ಪ್ರಕಾರ ಪರಿವಾರಗಳೊಡನೆಯೂ, ವಾಹನಗಳೊಡನೆಯೂ ಶಿವನ ಮದುವೆಗೆ ಬಂದ ಆ ದೇವತೆಗಳೆಲ್ಲರೂ ಹಿಮವಂತನಿಂದ ಸತ್ಕೃತರಾಗಿ ಬಹು ಸಂತೋಷದಿಂದ ಆ ಕಲ್ಯಾಣ ಮಂಟಪವನ್ನು ಪ್ರವೇಶಿಸಿದರು.

೨. ದೇವಶಿಲ್ಪಿಯಾದ ವಿಶ್ವಕರ್ಮನಾದರೋ ಆ ವಿವಾಹ ಮಂಟಪ ದಲ್ಲಿಯೇ ಬ್ರಹ್ಮದೇವನ ನಿವಾಸಾರ್ಥವಾಗಿ ಬಹು ಪ್ರಕಾಶಮಾನವಾಗಿ ಬೆಳಗು ತ್ತಿರುವ ವಿಶಾಲವಾದ ಭವನವೊಂದನ್ನು ನಿರ್ಮಿಸಿದನು.

೩–೫. ಅದರಂತೆಯೇ ಶ್ರೀಮನ್ಮಹಾವಿಷ್ಣುವಿಗೂ ಬೇರೊಂದು ಭವನವನ್ನು ತಾನೇ ಸ್ವಂತವಾಗಿ ರಚಿಸಿದನು. ಆ ಭವ್ಯ ಭವನವಾದರೋ ಬಹು ವಿಚಿತ್ರ ವಾಗಿಯೂ, ಪ್ರಕಾಶಮಾನವಾಗಿಯೂ, ಬಹು ಮನೋಹರವಾಗಿಯೂ ಇದ್ದಿತು. ಇದೂ ಅಲ್ಲದೆ ಆ ಶಿಲ್ಪಿಯು ಎಲ್ಲರೂ ಕುಳಿತು ವಿನೋದವಾಗಿ ಕಾಲ ಕಳೆಯಲು ತಕ್ಕಂತಹ ''ವಂಡೀಗೃಹ''ವೆಂಬ ದೊಡ್ಡದೊಂದು ಸಭಾಂಗಣವನ್ನೂ

ಏತಸ್ಮಿನ್ನಂತರೇ ಮೇನಾ ಸಮಾಯಾತಾ ಸಖೀಗಣೈಃ ।
ನೀರಾಜನಾರ್ಥಂ ಶಂಭುಂ ಚ ಋಷಿಭಿಃ ಪರಿವಾರಿತಾ ॥ ೬ ॥
ತದಾ ವಾದಿತ್ರ ನಿರ್ಘೋಷೈರ್ನಾದಿತಂ ಭುವನತ್ರಯಂ ।
ನೀರಾಜನಂ ಕೃತಂ ತಸ್ಯ ಮೇನಯಾ ಚ ತಪಸ್ವಿನಃ ॥ ೭ ॥
ಅವಲೋಕ್ಯ ಪರಾ ಸಾಧ್ವೀ ಮೇನಾಽಜಾನಾದ್ಧರಂ ತದಾ ।
ಗಿರಿಜೋಕ್ತ ಮನುಸ್ಮೃತ್ಯ ಮೇನಾ ವಿಸ್ಮಯಮಾಗತಾ ॥ ೮ ॥
ಯದ್ವೈ ಪುರೋಕ್ತಂ ಚ ತಯಾ ಪಾರ್ವತ್ಯಾ ಮಮ ಸನ್ನಿಧೌ ।
ತತೋಽಧಿಕಂ ಪ್ರಪಶ್ಯಾಮಿ ಸೌಂದರ್ಯಂ ಪರಮೇಷ್ಠಿನಃ ।
ಮಹೇಶಸ್ಯ ಮಯಾ ದೃಷ್ಟಮನಿರ್ವಾಚ್ಯಂ ಚ ಸಂಪ್ರತಿ ॥ ೯ ॥
ಏವಂ ವಿಸ್ಮಯಮಾಪನ್ನಾ ವಿಪ್ರಪತ್ನೀಭಿರಾವೃತಾ ।
ಅಹತಾಂಬರಯುಗ್ಮೇನ ಶೋಭಿತಾ ವರವರ್ಣಿನೀ ॥ ೧೦ ॥

---

ನಿರ್ಮಿಸಿದನು. ಅದೂ ಸಹ ಬಹು ಮನೋಹರವಾಗಿದ್ದಿತು. ಇದಾದ ಬಳಿಕ ಆ ತ್ವಷ್ಟೃವು ಸುಣ್ಣ ತೊಳೆದು ಬೆಳ್ಳನೆ ಬೆಳಗುತ್ತ, ಬಹು ಸುಂದರವಾಗಿಯೂ, ದೇವಶ್ರೇಷ್ಠರಿಂದ ಪೂಜಿತವಾಗಿ ಕೈಲಾಸ ಲಕ್ಷ್ಮಿಯ ಮಹಾ ಕಾಂತಿಯಿಂದ ಕಣ್ಗೊಪ್ಪಿ ರಂಜಿಸುವುದಾಗಿಯೂ ಇರುವ ಪ್ರತ್ಯೇಕವಾದ ಮಂದಿರವನ್ನು ನಿರ್ಮಿಸಿದನು. ಈ ಭವನದಲ್ಲಿಯೇ ಹಿಮವಂತನು ಶಂಭುವನ್ನು ಬಹು ವಿಜೃಂಭಣೆಯಿಂದ ಕರೆತಂದು ಬಿಡದಿಮಾಡಿಸಿದನು.

೬. ಈ ಮಧ್ಯದಲ್ಲಿ ಗಿರಿರಾಜನ ಮಡದಿಯಾದ ಮೇನಾದೇವಿಯು ತನ್ನ ಸಖಿಯರೊಡನೆಯೂ, ಮಹರ್ಷಿಗಳೊಡನೆಯೂ ಆ ಪರಮ ಶಿವನಿಗೆ ಮಂಗಳ ದಾರತಿಯನ್ನೆತ್ತಲು ಅಲ್ಲಿಗೆ ಚಿತ್ತೈಸಿದಳು.

೭. ಆ ಸಮಯದಲ್ಲಿ ಬಗೆ ಬಗೆಯ ಮಂಗಳ ವಾದ್ಯಗಳು ಭೋರ್ಗರೆದು ಮೂರು ಲೋಕಗಳನ್ನೂ ಪ್ರತಿಧ್ವನಿಗೊಳಿಸಿದುವು. ಹೀಗೆ ಮಂಗಳ ವಾದ್ಯಗಳು ಭೋರ್ಗರೆಯುತ್ತಿರುವಂತೆಯೇ ಆ ಮೇನಾದೇವಿಯು ಪರಮ ತಪಸ್ವಿಯಾದ ಪರಶಿವನಿಗೆ ಆರತಿಯನ್ನೆತ್ತಿದಳು.

೮. ಆಗಲಾದೇವಿಯು ಆ ಪರಮೇಶ್ವರನನ್ನು ಕಣ್ತುಂಬ ನೋಡಿ ತನ್ನ ಮಗಳಾದ ಗಿರಿಜೆಯು ಹೇಳಿದ್ದ ಮಾತುಗಳನ್ನು ನೆನೆಸಿಕೊಂಡು ಆತನ ಸೌಂದರ್ಯ ವನ್ನರಿತು ಪರಮಾಶ್ಚರ್ಯ ಭರಿತೆಯಾದಳು.

೯-೧೦. "ಆಹಾ! ಹಿಂದೆ ನಮ್ಮ ಪಾರ್ವತಿಯು ನನ್ನ ಸನ್ನಿಧಿಯಲ್ಲಿ ವರ್ಣಿಸಿದುದಕ್ಕಿಂತಲೂ ಅಧಿಕವಾದ ಸೌಂದರ್ಯವನ್ನೀ ಪರಮೇಷ್ಠಿಯಲ್ಲಿ ನಾನೀಗ ಕಾಣುತ್ತಿರುವೆನು. ಈಗ ನಾನು ಈ ಪರಮೇಶ್ವರನ ಅನಿರ್ವಾಚ್ಯ ವಾದ ಸೌಂದರ್ಯವನ್ನು ಕಂಡುದಾಯಿತು" ಎಂದು ಹೇಳುತ್ತ ವರವರ್ಣಿನಿ

**ಕಂಚುಕೀ ಪರಮಾ ದಿವ್ಯಾ ನಾನಾ ರತ್ನೈಶ್ಚ ಶೋಭಿತಾ ।**
**ಅಂಗೀಕೃತಾ ತದಾ ದೇವ್ಯಾ ರರಾಜ ಪರಯಾ ಶ್ರಿಯಾ ॥ ೧೧ ॥**
**ಬಿಭ್ರತೀಚ ತದಾ ಹಾರಂ ದಿವ್ಯರತ್ನ ವಿಭೂಷಿತಂ ।**
**ವಲಯಾಣಿ ಮಹಾರ್ಹಾಣಿ ಶುದ್ಧಚಾಮೀಕರಾಣಿ ಚ ॥ ೧೨ ॥**
**ತತ್ರೋಪವಿಷ್ಟಾ ಸುಭಗಾ ಧ್ಯಾಯಂತೀ ಪರಮೇಶ್ವರಂ ।**
**ಸಖೀಭಿಃ ಸೇವ್ಯಮಾನಾ ಸಾ ವಿಪ್ರಪತ್ನೀಭಿರೇವ ಚ ॥ ೧೩ ॥**
**ಏತಸ್ಮಿನ್ನಂತರೇ ತತ್ರ ಗರ್ಗೋ ವಾಕ್ಯಮಭಾಷತ ।**
**ಪಾಣಿಗ್ರಹಾರ್ಥಂ ಶಂಭುಂ ಚ ಆನಯಧ್ವಂ ಸ್ವ ಮಂದಿರಂ ।**
**ತ್ವರಿತೇನೈವ ವೇಳಾಯಾಮಸ್ಯಾಮೇವ ವಿಚಕ್ಷಣಾಃ ॥ ೧೪ ॥**
**ತಚ್ಛೃತ್ವಾ ವಚನಂ ತಸ್ಯ ಗರ್ಗಸ್ಯ ಚ ಮಹಾತ್ಮನಃ ।**
**ಅಭ್ಯುತ್ಥಾನ ಪರಾಃಸರ್ವೇ ಪರ್ವತಾಃ ಸ ಕಲತ್ರಕಾಃ ॥ ೧೫ ॥**
**ಮಹಾವಿಭೂತ್ಯಾ ಸಂಯುಕ್ತಾಃ ಸರ್ವೇ ಮಂಗಲಪಾಣಯಃ ।**
**ಸಾಲಂಕೃತಾಸ್ತದಾ ತೇಷಾಂ ಪತ್ನ್ಯೋಽಲಂಕಾರ ಮಂಡಿತಾಃ ॥ ೧೬ ॥**

---

ಯಾದ ಆ ಮೇನಾದೇವಿಯು ವಿಪ್ರಪತ್ನಿಯರೊಡಗೂಡಿ ದೀಕ್ಷಾವಸ್ತ್ರಗಳೆರಡನ್ನೂ ಕೈಯಲ್ಲಿ ಹಿಡಿದು ಶೋಭಿಸುತ್ತ ಪರಮಾಶ್ಚರ್ಯಭರಿತೆಯಾದಳು.

೧೧–೧೩. ಆಗಲಾದೇವಿಯು ಪರಶಿವನಿತ್ತ ನಾನಾರತ್ನ ಶೋಭಿತ ವಾದುದೂ, ಪರಮ ದಿವ್ಯವಾದುದೂ ಆದ ಕಂಚುಕ (ರವಿಕೆಯ ಕಣ)ವನ್ನು ಕೈಕೊಂಡು ಅತಿಶಯವಾದ ಕಾಂತಿಯಿಂದ ವಿರಾಜಿಸಿದಳು. ಆಗಲಾಕೆಯು ದಿವ್ಯರತ್ನಾಲಂಕೃತವಾದ ಹಾರವನ್ನುಧರಿಸಿ, ಅಮೂಲ್ಯಗಳಾದ ಅಪರಂಜಿಯ ಬಳೆಗಳನ್ನು ತೊಟ್ಟು ಗೆಳತಿಯರಿಂದಲೂ, ವಿಪ್ರಪತ್ನಿಯರಿಂದಲೂ ಸೇವೆಯನ್ನು ಕೈಗೊಳ್ಳುತ್ತ ಆ ಪರಮೇಶ್ವರನನ್ನೇ ಧ್ಯಾನಿಸುತ್ತ ಅಲ್ಲಿಯೇ ಕುಳಿತಳು.

೧೪. ಈ ನಡುವೆ ಪುರೋಹಿತನಾದ ಗರ್ಗಾಚಾರ್ಯನು ಹಿಮವಂತನನ್ನು ಕುರಿತು, "ಅಯ್ಯಾ ವಿಚಕ್ಷಣರೇ! ಈ ಮುಹೂರ್ತದಲ್ಲಿಯೇ ಪಾಣಿಗ್ರಹ ಣಾರ್ಥವಾಗಿ ಶ್ರೀ ಶಂಭುವನ್ನು ಜಾಗ್ರತೆಯಾಗಿ ಕರೆದುಕೊಂಡು ಬನ್ನಿರಿ" ಎಂದು ಹೇಳಿದನು.

೧೫. ಮಹಾತ್ಮನಾದ ಗರ್ಗಾಚಾರ್ಯನ ಈ ಮಾತನ್ನು ಕೇಳಿ ಅಲ್ಲಿದ್ದ ಪರ್ವತರಾಜರೆಲ್ಲರೂ ತಮ್ಮತಮ್ಮ ಪತ್ನಿಯರೊಡನೆ ಪರಮೇಶ್ವರನಿದ್ದೆಡೆಗೆ ಹೊರಡಲು ಸಿದ್ಧರಾದರು.

೧೬–೧೮. ಅವರೆಲ್ಲರೂ ಬಹಳ ಶ್ರೀಮಂತಿಕೆಯೊಡಗೂಡಿ, ಮಂಗಲ ದ್ರವ್ಯಗಳನ್ನು ಕೈಯಲ್ಲಿ ಹಿಡಿದು ಹೊರಟರು. ಆ ಪರ್ವತರಾಜರ ಪತ್ನಿಯ ರಾದರೋ ಸರ್ವಾಲಂಕಾರ ವಿಭೂಷಿತರಾಗಿ ಅವರೊಡನೆ ಹೊರಟರು. ಸುಂದರ

ಉಪಾಯನಾನ್ಯನೇಕಾನಿ ಜಗೃಹುಃ ಸ್ನಿಗ್ಧಲೋಚನಾಃ ।
ತದಾ ವಾದಿತ್ರ ಘೋಷೇಣ ಬ್ರಹ್ಮಘೋಷೇಣ ಭೂಯಸಾ ॥ ೧೭ ॥
ಆಜಗ್ಮುಃ ಸಕಲತ್ರಾಸ್ತೇ ಯತ್ರ ದೇವೋ ಮಹೇಶ್ವರಃ ।
ಪ್ರಮಥೈರಾವೃತಸ್ತತ್ರ ಚಂಡ್ಯಾ ಚೈವಾಭಿಸೇವಿತಃ ॥ ೧೮ ॥
ತಥಾ ಮಹರ್ಷಿಭಿಸ್ತತ್ರ ತಥಾ ದೇವಗಣೈಃ ಸಹ ।
ಏಭಿಃ ಪರಿವೃತಃ ಶ್ರೀಮಾನ್ ಶಂಕರೋ ಲೋಕಶಂಕರಃ ॥ ೧೯ ॥
ಶ್ರುತ್ವಾ ವಾದಿತ್ರ ನಿರ್ಘೋಷಂ ಸರ್ವೇ ಶಂಕರಸೇವಕಾಃ ।
ಉತ್ಥಿತಾ ಏಕಪದ್ಯೇನ ದೇವೈರ್ಋಷಿಭಿರಾವೃತಾಃ ॥ ೨೦ ॥

ತಥೋದ್ಯತೋ ಯೋಗಿನೀ ಚಕ್ರಯುಕ್ತೋ
ಗಣೋ ಗಣಾನಾಂ ಪತಿರೇಕ ವರ್ಚಸಾಂ ।
ಶಿವಂ ಪುರಸ್ಕೃತ್ಯ ಮಹಾನುಭಾವಾ
ಸ್ತಥೈವ ಸರ್ವೇ ಗಣನಾಯಕಾಶ್ಚ ॥ ೨೧ ॥
ತದ್ಯೋಗಿನೀಚಕ್ರಮತಿಪ್ರಚಂಡಂ
ಟಂಕಾರ ಭೇರೀರವ ನಿಸ್ವನೇನ ।
ಚಂಡೀಂ ಪುರಸ್ಕೃತ್ಯ ಭಯಾನಕಾಂ ತದಾ
ಮಹಾವಿಭೂತ್ಯಾ ಸಮಲಂಕೃತಾಂ ತದಾ ॥ ೨೨ ॥

---

ಲೋಚನೆಯರಾದ ಆ ಹೆಂಗಸರೆಲ್ಲರೂ ವರನಿಗೆ ಅನೇಕ ಉಪಾಯನಗಳನ್ನು ತೆಗೆದುಕೊಂಡರು. ಆಗ ಹಿಮವಂತನೇ ಮೊದಲಾದ ಪರ್ವತರಾಜರೆಲ್ಲರೂ ತಮ್ಮ ಸತಿಯರೊಡನೆ, ಮಂಗಳವಾದ್ಯಗಳು ಘೋರ್ಗರೆಯುತ್ತಿರಲು, ಋಷಿಗಳೆಲ್ಲರೂ ವೇದಘೋಷವನ್ನು ಮಾಡುತ್ತಿರಲು ಪರಮೇಶ್ವರನಿದ್ದಲ್ಲಿಗೈತಂದರು.

೧೯. ಆಗಲಾ ಲೋಕಶಂಕರನಾದರೋ ಪ್ರಮಥಗಣಗಳಿಂದಾವೃತನೂ, ಸೋದರಿಯಾದ ಚಂಡಿಯಿಂದಲೂ, ಮಹರ್ಷಿಗಳಿಂದಲೂ, ದೇವತಾ ಸಮೂಹಗಳಿಂದಲೂ ಸೇವಿತನಾಗಿ ಸುಖಾಸೀನನಾಗಿದ್ದನು.

೨೦. ಹೀಗೆ ವಾದ್ಯಧ್ವನಿಗಳು ಕೇಳಿ ಬಂದೊಡನೆಯೇ ಆ ಪರಮೇಶ್ವರನ ಸೇವಕರೆಲ್ಲರೂ ಅಲ್ಲಿದ್ದ ಋಷಿಗಳೊಡನೆ ಒಂದೇ ತಡವೆಯೇ ಎದ್ದು ನಿಂತರು.

೨೧. ಹಾಗೆಯೇ ಯೋಗಿನೀಚಕ್ರಯುಕ್ತನೂ, ಒಂದೇ ಬಗೆಯ ತೇಜಸ್ಸುಳ್ಳ ಶಿವಗಣಗಳ ಗುಂಪಿಗೆ ಒಡೆಯನೂ ಆದ ಗಣಪತಿಯೂ, ಮಹಾನುಭಾವರಾದ ಸಮಸ್ತಗಣನಾಯಕರೂ ಶಿವನನ್ನು ಪುರಸ್ಕರಿಸಿಕೊಂಡು ಹೊರಡಲು ಸಿದ್ಧರಾದರು.

೨೨. ಪ್ರಚಂಡವಾದ ಆ ಯೋಗಿನಿಯರ ಗುಂಪಾದರೋ ಟಂಕಾರಗೈಯುತ್ತಿರುವ ಭೇರಿಗಳ ಧ್ವನಿಗಳೊಡನೆ ಬಹು ಲಕ್ಷಣವಾಗಿ ಅಲಂಕರಿಸಿ

ಕಂಠೇ ಕರ್ಕೋಟಕಂ ನಾಗಂ ಹಾರಭೂತಂ ಚಕಾರ ಸಾ ।
ಪದಕಂ ವೃಶ್ಚಿಕಾನಾಂ ಚ ದಂದಶೂಕಾಂಶ್ಚ ಬಿಭ್ರತೀ ॥ ೨೩ ॥
ಕರ್ಣಾವತಂಸಾನ್ಯಾದಧ್ರೇ ಪಾಣಿಪಾದ ಮಯಾನ್ಸ್ತಥಾ ।
ರಣೇ ಹತಾನಾಂ ವೀರಾಣಾಂ ಶಿರಾಂಸ್ಯುರಸಿ ಚಾಪರಾನ್ ॥ ೨೪ ॥
ದ್ವೀಪಿಚರ್ಮ ಪರೀಧಾನಾ ಯೋಗಿನೀ ಚಕ್ರ ಸಂಯುತಾ ।
ಕ್ಷೇತ್ರಪಾಲಾವೃತಾ ತದ್ವದ್ಭೈರವೈಃ ಪರಿವಾರಿತಾ ॥ ೨೫ ॥
ತಥಾ ಪ್ರೇತೈಶ್ಚ ಭೂತೈಶ್ಚ ಕಪರ್ಟ್ಯೈಃ ಪರಿವಾರಿತಾ ।
ವೀರಭದ್ರಾದಯಶ್ಚೈವ ಗಣಾಃ ಪರಮ ದಾರುಣಾಃ ।
ಯೇ ದಕ್ಷಯಜ್ಞ ನಾಶಾರ್ಥಂ ಶಿವೇನಾಜ್ಞಾಪಿತಾಸ್ತದಾ ॥ ೨೬ ॥
ತಥಾ ಕಾಲೀ ಭೈರವೀ ಚ ಮಾಯಾ ಚೈವ ಭಯಾವಹಾ ।
ತ್ರಿಪುರಾ ಚ ಜಯಾಚೈವ ತಥಾ ಕ್ಷೇಮಕರೀ ಶುಭಾ ॥ ೨೭ ॥
ಅನ್ಯಾಶ್ಚೈವ ತಥಾ ಸರ್ವಾಃ ಪುರಸ್ಕೃತ್ಯ ಸದಾಶಿವಂ ।
ಗಂತುಕಾಮಾಶ್ಚೋಗ್ರತರಾ ಭೂತೈಃ ಪ್ರೇತೈಃ ಸಮಾವೃತಾಃ ॥ ೨೮ ॥

---

ಕೊಂಡಿರುವಳೂ ಭಯಂಕರಳೂ ಆದ ಚಂಡಿಯನ್ನು ಪುರಸ್ಕರಿಸಿಕೊಂಡು ಹೊರಟರು.

೨೩–೨೫. ಆ ಚಂಡಿಯಾದರೋ ಕಂಠದಲ್ಲಿ ಕಾರ್ಕೋಟಕ ಸರ್ಪವನ್ನು ಹಾರವನ್ನಾಗಿ ಧರಿಸಿದ್ದಳು. ಚೇಳುಗಳ ಪದಕವನ್ನೂ, ಇತರ ಹಾವುಗಳನ್ನೂ ಧರಿಸಿದ್ದಳಲ್ಲದೆ, ಕೈಕಾಲುಗಳನ್ನೇ ಕಿವಿಯೋಲೆಗಳನ್ನಾಗಿಯೂ ಧರಿಸಿದ್ದಳು. ಕಾಳಗದಲ್ಲಿ ಮಡಿದ ವೀರರ ತಲೆಗಳನ್ನೂ, ಇನ್ನೂ ಇತರ ತಲೆಗಳನ್ನೂ ವಕ್ಷಸ್ಥಳದಲ್ಲಿ ತಾಳಿದ್ದಳು. ಹುಲಿದೊಗಲನ್ನು ಹೊದ್ದು, ಯೋಗಿನಿಯರ ಗುಂಪಿನಿಂದಲೂ, ಕ್ಷೇತ್ರಪಾಲಕರಿಂದಲೂ, ಭೈರವರಿಂದಲೂ ಪರಿವೃತಳಾಗಿದ್ದಳು.

೨೬. ಇಷ್ಟೆಯಲ್ಲದೆ ಆ ಚಂಡಿಯು ಮಾಯಾವಿಗಳಾದ ಪ್ರೇತಗಳಿಂದಲೂ, ಭೂತಗಳಿಂದಲೂ ಪರಿವಾರಿತೆಯಾಗಿದ್ದಳು. ಆಗ ಮಹಾ ಭಯಂಕರರಾದ ವೀರಭದ್ರನೇ ಮೊದಲಾದ ಶಿವಗಣಗಳೂ ಲಗ್ನಕ್ಕೆ ಹೊರಟು ನಿಂತರಲ್ಲದೆ ದಕ್ಷಬ್ರಹ್ಮನ ಯಜ್ಞವನ್ನು ನಾಶಗೊಳಿಸಲು ಹಿಂದೆ ಯಾರಾರು ಶಿವನಿಂದ ಆಜ್ಞಾಪಿತರಾಗಿದ್ದರೋ ಅವರೆಲ್ಲರೂ ಸಹ ಹೊರಟರು.

೨೭–೨೮. ಹಾಗೆಯೇ ಇತರರಾದ ಕಾಲೀ, ಭೈರವಿ, ಮಾಯಾ, ಮಹಾ ಭಯಂಕರೆಯಾದ ತ್ರಿಪುರಾ, ಜಯಾ, ಮಂಗಳಕರಳಾದ ಕ್ಷೇಮಕರೀ ಮೊದಲಾದ ಸಮಸ್ತರೂ ಶಿವನನ್ನು ಹಿಂಬಾಲಿಸಿ ಭೂತ ಪ್ರೇತಗಳಿಂದ ಪರಿವೃತರಾಗಿ ಹೊರಡಬಯಸಿದರು.

ಏತಾಃ ಸರ್ವಾ ವಿಲೋಕ್ಯಾಥ ಶಿವಭಕ್ತೋ ಜನಾರ್ದನಃ ।
ಮಹರ್ಷೀಂಶ್ಚ ಪುರಸ್ಕೃತ್ಯ ಹ್ಯಮರಾಂಶ್ಚ ತಥೈವ ಚ ।
ಅನಸೂಯಾಂ ಪುರಸ್ಕೃತ್ಯ ತಥೈವ ಚ ಹ್ಯರುಂಧತೀಂ ॥ ೨೯ ॥

ವಿಷ್ಣುರುವಾಚ :—

ಚಂಡೀಂ ಕುರು ಸಮೀಪಸ್ಥಾಂ ಲೋಕಪಾಲನತಾಂ ಪ್ರಭೋ ॥ ೩೦ ॥
ತದುಕ್ತಂ ವಿಷ್ಣುನಾ ವಾಕ್ಯಂ ನಿಶಮ್ಯ ಜಗದೀಶ್ವರಃ ।
ಉವಾಚ ಪ್ರಹಸನ್ನೇವ ಚಂಡೀಂ ಪ್ರತಿ ಸದಾಶಿವಃ ॥ ೩೧ ॥
ಅತ್ರೈವ ಸ್ಥೀಯತಾಂ ಚಂಡಿ ಯಾವದುದ್ವಹನಂ ಭವೇತ್ ।
ಮಮ ಭಾವಾನ್ವಿಜಾನಾಸಿ ಕಾರ್ಯಾಕಾರ್ಯೇ ಸುಶೋಭನೇ ॥ ೩೨ ॥
ಏವಮಾಕರ್ಣ್ಯ ವಚನಂ ಶಂಭೋರಮಿತತೇಜಸಃ ।
ಉವಾಚ ಕುಪಿತಾ ಚಂಡೀ ವಿಷ್ಣುಮುದ್ದಿಶ್ಯ ಸಾದರಂ ॥ ೩೩ ॥
ತಥಾನ್ಯೇ ಪ್ರಮಥಾಃ ಸರ್ವೇ ವಿಷ್ಣುಮೂಚುಃ ಪ್ರಕೋಪಿತಾಃ ।
ಯತ್ರ ಯತ್ರ ಶಿವೋ ಭಾತಿ ತತ್ರತತ್ರ ವಯಂ ಪ್ರಭೋ ॥ ೩೪ ॥
ತ್ವಯಾ ನಿವಾರಿತಾಃ ಕಸ್ಮಾದ್ವಯಮಾಭ್ಯುದಯೇ ಪರೇ ।
ತೇಷಾಂ ತದ್ವಚನಂ ಶ್ರುತ್ವಾ ಕೇಶವೋ ವಾಕ್ಯಮಬ್ರವೀತ್ ॥ ೩೫ ॥

---

೨೯. ಮಹರ್ಷಿಗಳೊಡನೆಯೂ, ದೇವತೆಗಳೊಡನೆಯೂ ಸೇರಿ ಅನಸೂಯಾ ಅರುಂಧತಿಯರೊಡನೆಯೂ ಶಿವನ ಮದುವೆಗೆ ಹೊರಟಿದ್ದ ಮಹಾ ಶಿವಭಕ್ತನಾದ ಜನಾರ್ದನನು ಇವರೆಲ್ಲರನ್ನೂ ನೋಡಿ ಸ್ವಾಮಿಯಾದ ಶಂಕರನನ್ನು ಕುರಿತು ಹೇಳಿದನು.

೩೦–೩೨. ವಿಷ್ಣುವು ಹೇಳುತ್ತಾನೆ:—"ಎಲೈ ಪ್ರಭುವೇ! ಲೋಕಪಾಲಕರಿಂದ ನಮಸ್ಕೃತೆಯಾದ ಈ ಚಂಡಿಯನ್ನು ಹತ್ತಿರದಲ್ಲಿಯೇ ಎಲ್ಲಿಯಾದರೂ ಇರುವಂತಾಜ್ಞಾಪಿಸು." ಇಂತು ನುಡಿದ ವಿಷ್ಣುವಿನ ಮಾತನ್ನು ಕೇಳಿದ ಬಳಿಕ ಜಗದೀಶ್ವರನಾದ ಆ ಸದಾಶಿವನು ನಗುತ್ತಲೇ ಆ ಚಂಡಿಯನ್ನು ಕುರಿತು, "ಎಲೌ ಚಂಡಿಯೇ! ನೀನು ಮದುವೆಯು ಮುಗಿಯುವವರೆಗೂ ಇಲ್ಲಿಯೇ ಇರು. ಎಲೌ ಮಂಗಳಕರಳೇ! ಕಾರ್ಯಾಕಾರ್ಯಗಳಲ್ಲಿ ನೀನು ನನ್ನ ಮನಸ್ಸನ್ನರಿತಿರುವೆಯಷ್ಟೆ. ಇಲ್ಲಿಯೇ ನಿಲ್ಲು" ಎಂದು ಹೇಳಿದನು.

೩೩. ಮಹಾ ತೇಜಸ್ವಿಯಾದ ಶಂಭುವಿನ ಈ ಮಾತನ್ನುಕೇಳಿ ಆ ಚಂಡಿಯು ಬಹಳವಾಗಿ ರೇಗಿ ವಿಷ್ಣುವನ್ನುದ್ದೇಶಿಸಿ ಆದರಪೂರ್ವಕವಾಗಿ ಹೀಗೆಂದಳು.

೩೪–೩೬. ಅಂತೆಯೇ ಇತರ ಪ್ರಮಥಗಣಗಳೂ ಬಹಳವಾಗಿ ಮುನಿದು ಆತನನ್ನು ಕುರಿತು, "ಎಲೈ ಪ್ರಭುವೇ! ನಾವು ನಮ್ಮೊಡೆಯನಾದ ಶಿವನೆಲ್ಲಿರುತ್ತಾನೆಯೋ ಅಲ್ಲೆಲ್ಲ ಇರತಕ್ಕವರು. ಇಂತಹ ನಮ್ಮನ್ನು ಶ್ರೇಷ್ಠವಾದ ಈ

ಚಂಡೀಮುದ್ದಿಶ್ಯ ಪ್ರಮಥಾನನ್ಯಾಂಶ್ಚೈವ ತಥಾವಿಧಾನ್ ।
ಯೂಯಂ ಚೈವ ಮಯಾ ಪ್ರೋಕ್ತಾ ನಾಕೋಪಂ ಕರ್ತುಮರ್ಹಥ॥ ೩೬॥
ಏವಮುಕ್ತಾ ಸ್ತದಾತೇನ ಚಂಡೀಮುಖ್ಯಾ ಗಣಾಸ್ತದಾ ।
ಏಕಾಂತಮಾಶ್ರಿತಾ ಸರ್ವೇ ವಿಷ್ಣ್ವಾಕ್ಯಾಜ್ಜ್ವಲದ್ಧೃದಃ ॥ ೩೭ ॥
ತಾವತ್ಸರ್ವೇ ಸಮಾಯಾತಾಃ ಪರ್ವತೇಂದ್ರಸ್ಯ ಮಂತ್ರಿಣಃ ।
ಸಕಲತ್ರಾಃ ಸಂಭ್ರಮೇಣ ಮಹೇಶಂ ಪ್ರತಿ ಸತ್ವರಂ ॥ ೩೮ ॥
ಪಂಚವಾದ್ಯ ಪ್ರಘೋಷೇಣ ಬ್ರಹ್ಮಘೋಷೇಣ ಭೂಯಸಾ ।
ಯೋಷಿದ್ಭಿಃ ಸಂವೃತಾಸ್ತತ್ರ ಗೀತಶಬ್ದೇನ ಭೂಯಸಾ ॥ ೩೯ ॥
ಏವಂ ಪ್ರಾಪ್ತಾ ಯತ್ರ ಶಂಭುಃ ಸಕಲೈಃ ಪರಿವಾರಿತಃ ।
ಆಗತ್ಯ ಕಲಶೈಃ ಸಾಕಂ ಸ್ನಾಪಿತೋ ಹಿ ಸದಾಶಿವಃ ।
ಸ್ತ್ರೀಭಿರ್ಮಂಗಲಗೀತೇನ ಸರ್ವಾಭರಣ ಭೂಷಿತಃ ॥ ೪೦ ॥
ಋಷಯೋ ದೇವಗಂಧರ್ವಾಃ ತಥಾನ್ಯೇ ಪರ್ವತೋತ್ತಮಾಃ ।
ಶಂಭ್ವಗ್ರಗಾಸ್ತದಾ ಜಗ್ಮುಃ ಸ್ತ್ರಿಯಶ್ಚೈವ ಸುಭೂಷಿತಾಃ ।
ಬಭೌ ಛತ್ರೇಣ ಮಹತಾ ಧ್ರಿಯಮಾಣೇನ ಮೂರ್ಧನಿ ॥ ೪೧ ॥

---

ಮದುವೆಗೆ ಬರಕೂಡದೆಂದು ತಡೆದುದೇಕೆ?" ಎಂದು ಕೇಳಿದರು. ಆ ಮಾತನ್ನು ಕೇಳಿ ಕೇಶವನು ಚಂಡಿಯನ್ನೂ, ಇತರ ಪ್ರಮಥಗಣಗಳನ್ನೂ ಕುರಿತು, "ಓ ಚಂಡಿ, ಎಲ್ಲೈ ಪ್ರಮಥಗಣಗಳೇ! ನಾನು ಈ ರೀತಿ ಹೇಳಿದುದಕ್ಕೆ ನೀವಾರೂ ನನ್ನಲ್ಲಿ ಕೋಪಗೊಳ್ಳಬೇಡಿರಿ. ಸಮಾಧಾನತಂದುಕೊಳ್ಳಿರಿ" ಎಂದನು.

೩೭. ಆತನಿಂತೆನಲು ಚಂಡಿಯೇ ಮೊದಲಾದ ಆ ಶಿವಗಣಗಳೆಲ್ಲರೂ ಕೋಪರೋಷಗಳಿಂದುರಿಯುತ್ತಿರುವ ಹೃದಯಗಳುಳ್ಳವರಾಗಿ ನಿರ್ವಾಹವಿಲ್ಲದೆ ಏಕಾಂತವಾದೊಂದು ಪ್ರದೇಶವನ್ನು ಸೇರಿದರು.

೩೮–೩೯. ಇಷ್ಟರಲ್ಲಿಯೇ ಪರ್ವತೇಂದ್ರನಾದ ಹಿಮವಂತನ ಮಂತ್ರಿಗಳೆಲ್ಲರೂ ಪತ್ನಿಯರೊಡನೆ ಬಹು ಸಂಭ್ರಮಯುಕ್ತರಾಗಿ ತ್ವರೆಯಿಂದ ಕೂಡಿ ಅತಿಶಯವಾದ ಪಂಚವಾದ್ಯಗಳ ಘೋಷದಿಂದಲೂ, ವೇದಘೋಷದಿಂದಲೂ ಹಾಡುಗಳನ್ನು ಹೇಳುತ್ತಲಿರುವ ಮುತ್ತೈದೆಯರಿಂದಲೂ ಕೂಡಿ ಆ ಮಹೇಶ್ವರನ ಬಳಿಗೈದಿದರು.

೪೦. ಹೀಗೆ ಅವರೆಲ್ಲರೂ ಸಮಸ್ತಪರಿವಾರದೊಡನಿದ್ದ ಶಂಭುವಿನ ಬಳಿಗೈದಿದ ತರುವಾಯ ಮುತ್ತೈದೆಯರು ಮಂಗಲಗೀತಗಳನ್ನು ಹಾಡಿ ಆತನಿಗೆ ಎಣ್ಣೆಯಶಾಸ್ತ್ರವನ್ನುಮಾಡಿ ಮಂಗಳಕಳಶಗಳಿಂದ ಮಂಗಳಸ್ನಾನವನ್ನು ಮಾಡಿಸಿದರಲ್ಲದೆ ಸಮಸ್ತಾಭರಣಗಳಿಂದಲೂ ಆತನಿಗೆ ಅಲಂಕಾರಮಾಡಿದರು.

೪೧–೪೨. ಆ ಬಳಿಕ ಋಷಿಗಳೂ, ದೇವಗಂಧರ್ವರೂ, ಇತರ ಪರ್ವ

**ಚಾಮರೈರ್ವೀಜ್ಯಮಾನೋಽಸೌ ಮಕುಟೇನ ವಿರಾಜಿತಃ ।**
**ಬ್ರಹ್ಮಾ ವಿಷ್ಣು ಸ್ತಥಾ ಚಂದ್ರೋ ಲೋಕಪಾಲಾ ಸ್ತಥೈವಚ ।**
**ಅಗ್ರಗಾಹ್ಯಪಿ ಶೋಭಂತಃ ಶ್ರಿಯಾ ಪರಮಯಾ ಪುನಃ ॥ ೪೨ ॥**
**ತಥಾ ಶಂಖಾಶ್ಚ ಭೇರ್ಯಶ್ಚ ಪಟಹಾನಕಗೋಮುಖಾಃ ॥ ೪೩ ॥**
**ತಥೈವ ಗಾಯಕಾಃ ಸರ್ವೇ ಜಗ್ಮುಃ ಪರಮಮಂಗಲಂ ।**
**ಪುನಃಪುನರವಾದ್ಯಂತ ವಾದಿತ್ರಾಣಿ ಮಹೋತ್ಸವೇ ॥ ೪೪ ॥**
**ಅರುಂಧತೀ ಮಹಾಭಾಗಾ ಅನಸೂಯಾ ತಥೈವಚ ।**
**ಸಾವಿತ್ರೀ ಚ ತಥಾ ಲಕ್ಷ್ಮೀರ್ಮಾತೃಭಿಃ ಪರಿವಾರಿತಾಃ ॥ ೪೫ ॥**
**ಏಭಿಃ ಸಮೇತೋ ಜಗದೇಕ ಬಂಧು**
**ರ್ಬಭೌ ತದಾನೀಂ ಪರಮೇಣ ವರ್ಚಸಾ ।**
**ಸ ಚಂದ್ರಸೂರ್ಯಾನಿಲವಾಯುನಾವೃತಃ**
**ಸ ಲೋಕಪಾಲ ಪ್ರವರೈರ್ಮಹರ್ಷಿಭಿಃ ॥ ೪೬ ॥**

---

ತೋತ್ತಮರೂ, ಸರ್ವಾಭರಣಾಲಂಕೃತರಾದ ಪರ್ವತರಾಜಪತ್ನಿಯರೂ ಆ ಪರಶಿವನ ಮುಂಗಡೆ ಹೊರಟರು. ಆ ಸಮಯದಲ್ಲಿ ಸಾಕ್ಷಾತ್ ಪರಶಿವ ನಾದರೋ ಚಾಮರಗಳಿಂದ ವೀಜಿತನೂ, ಕಿರೀಟಾಲಂಕೃತನೂ ಆಗಿ ವಿರಾಜಿಸುತ್ತಿದ್ದನು. ಆಗ ಬ್ರಹ್ಮವಿಷ್ಣುಗಳೂ, ಚಂದ್ರನೂ, ಇತರ ಲೋಕ ಪಾಲಕರೂ ಅಪರಿಮಿತವಾದ ದಿವ್ಯ ತೇಜಸ್ಸಿನಿಂದ ಶೋಭಿಸುತ್ತ ಮುಂದೆ ಹೊರಟರು.

೪೩–೪೪. ಆ ಸಮಯದಲ್ಲಿ ಶಂಖ, ಭೇರಿ, ಪಟಹ, ಗೋಮುಖ ಮೊದಲಾದ ವಾದ್ಯಗಳು ಭೋರ್ಗರೆದವು. ಅಂತೆಯೇ ದೇವಗಾಯಕರೆಲ್ಲರೂ ಪರಮಮಂಗಳಕರವಾದ ಗೀತಗಳನ್ನು ಪಾಡಿದರು. ಆ ಶುಭ ಮಹೋತ್ಸವ ದಲ್ಲಿ ಅಡಿಗಡಿಗೂ ಸ್ವರ್ಗಲೋಕದ ಮಂಗಳವಾದ್ಯಗಳು ನುಡಿಸಲ್ಪಡು ತ್ತಿದ್ದವು.

೪೫. ಅದೇ ಸಮಯದಲ್ಲಿಯೇ ಮಹಾ ಪುಣ್ಯಶಾಲಿನಿಯಾದ ಅರುಂಧ ತಿಯೂ, ಅನಸೂಯಾದೇವಿಯೂ, ಸಾವಿತ್ರಿಯೂ, ಲಕ್ಷ್ಮೀದೇವಿಯೂ ಮಾತೃದೇವತೆಗಳೊಡನೆ ಮುಂದೆ ಹೊರಟರು.

೪೬. ಎಲೈ ಮುನಿಗಳಿರಾ! ಜಗದೇಕಬಂಧುವಾದ ಆ ಪರಮೇಶ್ವರ ನಾದರೋ ಇವರೆಲ್ಲರೂ ಸಂಗಡ ಬರುತ್ತಿರಲು ಅಪಾರವಾದ ತೇಜಸ್ಸಿನಿಂದ ವಿರಾಜಿಸಿದನು. ಆಗ ಸೂರ್ಯಚಂದ್ರರೂ, ಅಗ್ನಿವಾಯುಗಳೂ ಇತರ ಲೋಕಪಾಲಕರೂ ಮಹರ್ಷಿಗಳೊಡನೆ ಆ ಸ್ವಾಮಿಯನ್ನು ಹಿಂಬಾಲಿಸಿ ಹೊರಟರು.

ಸ ವೀಜ್ಯಮಾನಃ ಪವನೇನ ಸಾಕ್ಷಾತ್
ಛತ್ರಂ ಚ ತಸ್ಮೈ ಶಶಿನಾಹ್ಯಧಿಷ್ಠಿತಂ ।
ಸೂರ್ಯಃ ಪುರಸ್ತಾದಭವತ್ಪ್ರಕಾಶಃ
ಶ್ರಿಯಾನ್ವಿತೋ ವಿಷ್ಣುರಭೂಚ್ಚ ಸನ್ನಿಧೌ ॥ ೪೭ ॥
ಪುಷ್ಪೈರ್ವವರ್ಷುರ್ಹ್ಯವಕೀರ್ಯಮಾಣಾಃ
ದೇವಾಸ್ತದಾನೀಂ ಮುನಿಭಿಃ ಸಮೇತಾಃ ।
ಯಯೌ ಗೃಹಂ ಕಾಂಚನಕುಟ್ಟಿಮಂ ಮಹತ್
ಮಹಾ ವಿಭೂತ್ಯಾ ಪರಿಶೋಭಿತಂ ತದಾ ।
ವಿವೇಶ ಶಂಭುಃ ಪರಯಾ ಸಪರ್ಯಯಾ
ಸಂಪೂಜ್ಯಮಾನೋ ನರದೇವದಾನವೈಃ ॥ ೪೮ ॥
ಏವಂ ಸಮಾಗತಃ ಶಂಭುಃ ಪ್ರವಿಷ್ಟೋ ಯಜ್ಞಮಂಡಪಂ ।
ಸಂಸ್ತೂಯಮಾನೋ ವಿಬುಧೈಃ ಸ್ತುತಿಭಿಃ ಪರಮೇಶ್ವರಃ ॥ ೪೯ ॥
ಗಜಾದುತ್ತಾರಯಾಮಾಸ ಮಹೇಶಂ ಪರ್ವತೋತ್ತಮಃ ।
ಉಪವಿಶ್ಯ ತತಃ ಪೀಠೇ ಕೃತ್ವಾ ನೀರಾಜನಂ ಮಹತ್ ॥ ೫೦ ॥
ಮೇನಯಾ ಸಖಿಭಿಃ ಸಾಕಂ ತಥೈವ ಚ ಪುರೋಧಸಾ ।
ಮಧುಪರ್ಕಾದಿಕಂ ಸರ್ವಂ ಯತ್ಕೃತಂ ಚೈವ ತತ್ರ ವೈ ॥ ೫೧ ॥

---

೪೭. ಆ ಸಮಯದಲ್ಲಿ ಸಾಕ್ಷಾತ್ ವಾಯುದೇವನೇ ಆ ಪ್ರಭುವಿಗೆ ಚಾಮರಗಳನ್ನು ಹಾಕಿದನು. ಚಂದ್ರನು ಛತ್ರವನ್ನು ಹಿಡಿದನು. ಸೂರ್ಯನು ಮುಂದೆ ಹೊರಟು (ದೀವಟಿಗೆಗಳನ್ನು ಹಿಡಿದವರಂತೆ) ಪ್ರಕಾಶಕನಾದನು. ಅಲ್ಲದೆ ಸಾಕ್ಷಾತ್ ಮಹಾವಿಷ್ಣುವು ಶ್ರೀದೇವಿಯೊಡನೆ ಆ ಪ್ರಭುವಿನ ಸಮೀಪ ದಲ್ಲಿಯೇ ಇದ್ದರು.

೪೮. ದೇವತೆಗಳಾದರೋ ಮಹರ್ಷಿ ಸಮನ್ವಿತರಾಗಿ ಆ ಪರಶಿವನ ಮೇಲೆ ಪುಷ್ಪವರ್ಷವನ್ನು ಸುರಿಸುತ್ತಲೂ, ಲಾಜಾಕ್ಷತೆಗಳನ್ನೆರಚುತ್ತಲೂ ಹೊರಟರು. ಆಗಲಾಶಂಭುವು ಈ ರೀತಿ ನರದೇವದಾನವರ ಪೂಜೆಯನ್ನು ಕೈಕೊಳ್ಳುತ್ತ, ಅಪರಿಮಿತವಾದ ಸತ್ಕಾರ ಸಮಾರಂಭದೊಡನೆ ಮಹ ದೈಶ್ವರ್ಯ ಸಮನ್ವಿತವೂ, ಕಾಂಚನ ಮಯವೂ ಆದ ವಿವಾಹ ಮಂಡಪಕ್ಕೆ ನಡೆತಂದನು.

೪೯. ಹೀಗೆ ಆ ಶಂಭುವು ವಿಬುಧರೆಲ್ಲರೂ ಸ್ತುತಿಗೀತಗಳಿಂದ ಸ್ತುತಿಸು ತ್ತಿರಲು ವೈವಾಹಿಕಯಜ್ಞಮಂಡಪಕ್ಕೆ ಬಿಜಯಗೈದನು.

೫೦–೫೧ ಆಗ ಪರ್ವತೋತ್ತಮನಾದ ಹಿಮವಂತನು ಆ ಮಹೇಶ್ವರ ನನ್ನು ಆನೆಯಿಂದಿಳಿಸಿ ಮಣೆಯ ಮೇಲೆ ಕುಳ್ಳಿರಿಸಿದನು. ಆ ಸಮಯದಲ್ಲಿ

ಬ್ರಹ್ಮಣಾ ನೋದಿತಃ ಸದ್ಯಃ ಪುರೋಧಾಃ ಕೃತವಾನ್ಪ್ರಭುಃ ।
ಮಂಗಲಂ ಶುಭಕಲ್ಯಾಣಂ ಪ್ರಸ್ತಾವಸದೃಶಂ ಬಹು ॥ ೫೨ ॥
ಅಂತರ್ವೇದ್ಯಾಂ ಸಂಪ್ರವೇಶ್ಯ ಯತ್ರ ಸಾ ಪಾರ್ವತೀ ಸ್ಥಿತಾ ।
ವೇದಿಕೋಪರಿ ತನ್ವಂಗೀ ಸರ್ವಾಭರಣ ಭೂಷಿತಾ ॥ ೫೩ ॥
ತತ್ರಾನೀತೋ ಹರಃ ಸಾಕ್ಷಾದ್ವಿಷ್ಣುನಾ ಬ್ರಹ್ಮಣಾ ಸಹ ।
ಲಗ್ನಂ ನಿರೀಕ್ಷಮಾಣಾಸ್ತೇ ವಾಚಸ್ಪತಿ ಪುರೋಗಮಾಃ ॥ ೫೪ ॥
ಗರ್ಗೋ ಮುನಿಶ್ಚೋಪವಿಷ್ಟಸ್ತತ್ರೈವ ಘಟಿಕಾಲಯೇ ।
ಯಾವತ್ಪೂರ್ಣಾ ಘಟೀ ಜಾತಾ ತಾವತ್ಪ್ರಣವ ಭಾಷಣಂ ॥ ೫೫ ॥
ಓಂ ಪುಣ್ಯೇತಿ ಪ್ರಣಿಗದನ್ ಗರ್ಗೋ ವಧ್ವಂಜಲಿಂ ದಧೇ ।
ಪಾರ್ವತ್ಯಕ್ಷತಪೂರ್ಣಂ ಚ ಶಿವೋಪರಿ ವವರ್ಷನ್ವೈ ॥ ೫೬ ॥
ತಯಾ ಸಂಪೂಜಿತೋ ರುದ್ರೋ ದಧ್ಯಕ್ಷತ ಕುಶಾದಿಭಿಃ ।
ಮುದಾ ಪರಮಯಾ ಯುಕ್ತಾ ಪಾರ್ವತೀ ರುಚಿರಾನನಾ ॥ ೫೭ ॥
ವಿಲೋಕಯಂತೀ ಶಂಭುಂ ತಂ ಯದರ್ಥೇ ಪರಮಂ ತಪಃ ।
ಕೃತಂ ಪುರಾ ಮಹಾದೇವ್ಯಾ ಪರೇಷಾಂ ಪರಮಂ ಮಹತ್ ॥ ೫೮ ॥

---

ಮೇನಾದೇವಿಯು ತನ್ನ ಸಖಿಯರೊಡನೆ ಆ ಸ್ವಾಮಿಗೆ ಶುಭ ಮಂಗಳ ದಾರತಿಯನ್ನು ಮಾಡಿದಳು. ಪುರೋಹಿತನಾದ ಗರ್ಗಾಚಾರ್ಯನಾದರೋ ಆ ಸಮಯದಲ್ಲಿಯೇ ವಿವಾಹಕ್ಕೆ ಪೂರ್ವದಲ್ಲಿ ಮಾಡಬೇಕಾದ ಮಧು ಪರ್ಕವೇ ಮೊದಲಾದುವುಗಳೆಲ್ಲವನ್ನೂ ಜಾಗ್ರತೆಯಾಗಿ ಮಾಡಿಸಿದನು. ಮಹಾ ಸಮರ್ಥನಾದ ಆ ಮುನಿಯು ಬ್ರಹ್ಮನು ಅಪ್ಪಣೆಮಾಡಿದಂತೆಯೇ ಪ್ರಾಸ್ತಾವಿಕ ವಾದ ಮಂಗಳ ಕಾರ್ಯಗಳನ್ನೂ, ಶುಭ ಕಲ್ಯಾಣಗಳನ್ನೂ ಬಹು ಚೆನ್ನಾಗಿ ಮಾಡಿಸಿದನು.

೫೩–೫೬. ತರುವಾಯ ಸರ್ವಾಭರಣ ಭೂಷಿತೆಯೂ, ಕೋಮಲಾಂಗಿಯೂ ಆದ ಪಾರ್ವತಿಯು ಅಂತರ್ವೇದಿಯನ್ನು ಪ್ರವೇಶಿಸಿ ಕುಳಿತಿದ್ದ ಹಸೆಯ ಜಗುಳಿಯ ಬಳಿಗೆ ಆ ಪರಶಿವಮೂರ್ತಿಯನ್ನು ಬ್ರಹ್ಮವಿಷ್ಣುಗಳೀರ್ವರೂ ಕರೆತಂದರು. ಆಗ ಬೃಹಸ್ಪತಿಯೇ ಮೊದಲಾದವರೆಲ್ಲರೂ ಲಗ್ನವನ್ನೇ ನಿರೀಕ್ಷಿಸುತ್ತ ಕುಳಿತಿರಲು, ಪುರೋಹಿತನಾದ ಗರ್ಗಾಚಾರ್ಯನು ಘಟಿಕಾ ಲಯದಲ್ಲಿಯೇ ಕಾದಿದ್ದು, ಲಗ್ನದ ಘಳಿಗೆಯು ತುಂಬಿ ಬರುತ್ತಲೇ "ಓಂ ಪುಣ್ಯಾಹಂ" ಎಂಬುದಾಗಿ ಪ್ರಣವವನ್ನುಚ್ಚರಿಸಿದೊಡನೆಯೇ ವಧುವಾದ ಪಾರ್ವತಿಯು ಅಕ್ಷತೆ ತುಂಬಿದ ಅಂಜಲಿಯನ್ನು ಶಿವನ ಮೇಲೆ ವರ್ಷಿಸಿದಳು.

೫೭–೫೮. ಹೀಗೆ ಆ ಅಕ್ಷತಾರೋಪಣ ಸಮಯದಲ್ಲಿ ಪರಶಿವನು ಆ ಗಿರಿ ಜಾಂಬಿಕೆಯಿಂದ ಮೊಸರು, ಅಕ್ಷತೆ, ಕುಶ ಮೊದಲಾದವುಗಳಿಂದ ಸಂಪೂಜಿತ

ತಪಸಾ ತೇನ ಸಂಪ್ರಾಪ್ತೋ ಜಗಜ್ಜೀವನಜೀವನಃ ।
ನಾರದೇನ ತತಃ ಪ್ರೋಕ್ತೋ ಮಹಾದೇವೋ ವೃಷಧ್ವಜಃ ॥ ೫೯ ॥
ತಥಾ ಗರ್ಗಾದಿಭಿಶ್ಚಾನ್ಯೈರ್ಮುನಿಭಿಃ ಸನಕಾದಿಭಿಃ ।
ಪ್ರತಿಪೂಜಾಂ ಕುರು ಕ್ಷಿಪ್ರಂ ಪಾರ್ವತ್ಯಾಶ್ಚ ತ್ರಿಲೋಚನ ॥ ೬೦ ॥
ತದಾ ಶಿವೇನ ಸಾ ತನ್ವೀ ಪೂಜಿತಾರ್ಘ್ಯಾಕ್ಷತಾದಿಭಿಃ ।
ಏವಂ ಪರಸ್ಪರಂ ತೌ ಚ ಪಾರ್ವತೀ ಪರಮೇಶ್ವರೌ ।
ಅರ್ಚ್ಯಮಾನೌ ತದಾನೀಂ ಚ ಶುಶುಭಾತೇ ಜಗನ್ಮಯೌ ॥ ೬೧ ॥
ತ್ರೈಲೋಕ್ಯ ಲಕ್ಷ್ಮ್ಯಾ ಸಂವೀತೌ ನಿರೀಕ್ಷಂತೌ ಪರಸ್ಪರಂ ।
ತದಾ ನೀರಾಜಿತೌ ಲಕ್ಷ್ಮ್ಯಾ ಸಾವಿತ್ರ್ಯಾ ಚ ವಿಶೇಷತಃ ।
ಅರುಂಧತ್ಯಾ ತದಾ ತೌ ಚ ದಂಪತೀ ಪರಮೇಶ್ವರೌ ॥ ೬೨ ॥
ಅನಸೂಯಾ ತಥಾ ಶಂಭುಂ ಪಾರ್ವತೀಂ ಚ ಯಶಸ್ವಿನೀಂ ।
ದೃಷ್ಟ್ವಾ ನೀರಾಜಯಾಮಾಸ ಪ್ರೀತ್ಯುತ್ಕಲಿತಲೋಚನಾ ॥ ೬೩ ॥

---

ನಾದನು. ಆಗಲಾ ಮಹಾದೇವಿಯು ಯಾರಿಗಾಗಿ ಅತಿ ಶ್ರೇಷ್ಠವೂ, ಇತರರಿಂದೆನಗಲಸಾಧ್ಯವೂ ಆದ ತಪಸ್ಸನ್ನೆಸಗಿದ್ದಳೋ ಆ ಸದಾಶಿವನನ್ನು ವರಿಸಿ ಆತನನ್ನೇ ನೋಡುತ್ತಿದ್ದಳು.

೫೯-೬೦. ಹೀಗೆ ಆಕೆಯು ಮಾಡಿದ ಆ ತಪಸ್ಸಿನಿಂದ ಜಗಜ್ಜೀವನ ಜೀವನನಾದ ಪರಮಶಿವನು ಪತಿಯಾಗಿ ಪಡೆಯಲಾದನು. ಹೀಗೆ ಪಾರ್ವತಿಯು ತನ್ನ ಪ್ರಿಯನಾದ ಆ ಶಂಕರನನ್ನೇ ವೀಕ್ಷಿಸುತ್ತಿರಲು, ನಾರದಮುನಿಯೂ ಗರ್ಗಾದಿಗಳೂ, ಸನಕಾದಿಗಳೂ, ಇತರ ಮುನಿಗಳೂ ವೃಷಭಧ್ವಜನಾದ ಆ ಮಹಾದೇವನನ್ನು ಕುರಿತು "ಓ ತ್ರಿಲೋಚನ! ಈಗ ನೀನೀ ಪಾರ್ವತೀದೇವಿಗೆ ಪ್ರತಿಪೂಜೆಯನ್ನೆಸಗುವವನಾಗು" ಎಂದರು.

೬೧. ಆಗಲಾ ಮಹೇಶ್ವರನು ಆ ದೇವಿಗೆ ಪ್ರತಿಪೂಜೆಯನ್ನು ಮಾಡಿದನು. ಹೀಗೆ ಜಗನ್ಮಯರಾದ ಆ ಪಾರ್ವತೀ ಪರಮೇಶ್ವರರು ಪರಸ್ಪರವಾಗಿ ಪೂಜೆಯನ್ನು ಕೈಕೊಂಡು ವಿರಾಜಿಸಿದರು.

೬೨. ಆ ಬಳಿಕ ಮೂರುಲೋಕದ ದಿವ್ಯ ತೇಜಸ್ಸಿನಿಂದೊಪ್ಪುತ್ತಿರುವ ಆ ಪಾರ್ವತೀ ಪರಮೇಶ್ವರರೀರ್ವರೂ ಒಬ್ಬರನ್ನೊಬ್ಬರು ನೋಡುತ್ತ ಕುಳಿತಿರಲು, ಮಹಾಲಕ್ಷ್ಮಿಯೂ, ಸಾವಿತ್ರೀದೇವಿಯೂ, ವಸಿಷ್ಠಮುನಿ ಭಾರ್ಯೆಯಾದ ಅರುಂಧತೀ ದೇವಿಯೂ ಸಹ ಆ ದಂಪತಿಗಳಿಗೆ ಆರತಿಯನ್ನೆತ್ತಿದರು.

೬೩. ಆಮೇಲೆ ಅತ್ರಿಮುನಿಯ ಪತ್ನಿಯಾದ ಅನಸೂಯೆಯು ಆ ಶಂಭುವನ್ನೂ, ಮಹಾ ಯಶಸ್ವಿನಿಯಾದ ಪಾರ್ವತಿಯನ್ನೂ ಕಂಡು ಪ್ರೀತಿಯಿಂದರಳಿದ ಕಣ್ಣುಗಳುಳ್ಳವಳಾಗಿ ಮಂಗಳದಾರತಿಯನ್ನೆತ್ತಿದಳು.

ತಥೈವ ಸರ್ವಾ ದ್ವಿಜಯೋಷಿತಶ್ಚ
ನೀರಾಜಯಾಮಾಸುರಹೋ ಪುನಃ ಪುನಃ ।
ಸತೀಂ ಚ ಶಂಭುಂ ಚ ವಿಲೋಕಯಂತ್ಯ
ಸ್ತಥೈವ ಸರ್ವಾ ಮುದಿತಾ ಹಸಂತ್ಯಃ ॥ ೬೪ ॥

ಲೋಮಶ ಉವಾಚ :—

ಏತಸ್ಮಿನ್ನಂತರೇ ತತ್ರ ಗರ್ಗಾಚಾರ್ಯಪ್ರಣೋದಿತಃ ।
ಹಿಮವಾನ್ಮೇನಯಾ ಸಾರ್ಧಂ ಕನ್ಯಾಂ ದಾತುಂ ಪ್ರಚಕ್ರಮೇ ॥ ೬೫ ॥
ಹೈಮಂ ಕಲಶಮಾದಾಯ ಮೇನಾಚಾರ್ಧಾಂಗಮಾಶ್ರಿತಾ ।
ಹಿಮಾದ್ರೇಶ್ಚ ಮಹಾಭಾಗಾ ಸರ್ವಾಭರಣಭೂಷಿತಾ ॥ ೬೬ ॥
ತದಾ ಹಿಮಾದ್ರಿಣಾ ಪ್ರೋಕ್ತೋ ವಿಶ್ವನಾಥೋ ವರಪ್ರದಃ ।
ಬ್ರಹ್ಮಣಾ ಸಹ ಸಂಗತ್ಯ ವಿಷ್ಣುನಾ ಚ ತಥೈವಚ ॥ ೬೭ ॥
ಸಾರ್ಧಂ ಪುರೋಧಸಾ ಚೈವ ಗರ್ಗೇಣ ಸುಮಹಾತ್ಮನಾ ।
ಕನ್ಯಾದಾನಂ ಕರೋಮ್ಯದ್ಯ ದೇವದೇವಸ್ಯ ಶೂಲಿನಃ ॥ ೬೮ ॥
ಪ್ರಯೋಗೋ ಭಣ್ಯತಾಂ ಬ್ರಹ್ಮನ್ನಸ್ಮಿನ್ಸಮಯ ಆಗತೇ ।
ತಥೇತಿ ಮತ್ವಾ ತೇ ಸರ್ವೇ ಕಾಲಜ್ಞಾ ದ್ವಿಜಸತ್ತಮಾಃ ॥ ೬೯ ॥

೬೪. ಅಂತೆಯೇ ಬ್ರಾಹ್ಮಣ ಸ್ತ್ರೀಯರೆಲ್ಲರೂ ಸತಿಯಾದ ಗಿರಿಜೆಯನ್ನೂ, ಶಂಕರನನ್ನೂ ನೋಡಿ ಮಹದಾನಂದಭರಿತರಾಗಿ ನಸುನಗುತ್ತ ಅಡಿಗಡಿಗೂ ಆರತಿಯನ್ನೆತ್ತಿದರು.

೬೫. ಲೋಮಶನು ಹೇಳುತ್ತಾನೆ:—ಅಯ್ಯಾ ಶೌನಕಾದಿ ಮಹರ್ಷಿಗಳಿರಾ! ಇದೇ ಸಮಯದಲ್ಲಿಯೇ ಗರ್ಗಾಚಾರ್ಯನಿಂದ ಪ್ರೇರಿತನಾದ ಹಿಮವಂತನು ತನ್ನ ಸತಿಯಾದ ಮೇನಾದೇವಿಯೊಡನೆ ಕನ್ಯಾದಾನವನ್ನು ಮಾಡಲುಪಕ್ರಮಿಸಿದನು.

೬೬. ಆಗ ಹಿಮವಂತನರ್ಧಾಂಗಿಯೂ, ಸರ್ವಾಭರಣಭೂಷಿತೆಯೂ, ಮಹಾಪುಣ್ಯಶಾಲಿನಿಯೂ ಆದ ಮೇನಾದೇವಿಯು ಸುವರ್ಣಕಳಶವನ್ನು ತೆಗೆದುಕೊಂಡಳು.

೬೭–೭೦. ಆ ಸಮಯದಲ್ಲಿ ಹಿಮಾದ್ರಿಯಾದರೋ ಬ್ರಹ್ಮವಿಷ್ಣುಗಳೊಡನೆಯೂ, ಪುರೋಹಿತನೂ ಮಹಾತ್ಮನೂ ಆದ ಗರ್ಗಾಚಾರ್ಯನೊಡನೆಯೂ, "ಈಗ ದೇವದೇವನಾದ ಪರಶಿವನಿಗೆ ಕನ್ಯಾದಾನಮಾಡುತ್ತೇನೆ" ಎಂದು ಸಂಕಲ್ಪಮಾಡಿ ಅಲ್ಲಿದ್ದ ಬ್ರಾಹ್ಮಣರನ್ನು ಕುರಿತು, "ಎಲೈ ವಿಪ್ರರೇ! ಈ ಸಮಯದಲ್ಲಿ ನಡೆಸಬೇಕಾದ ಪ್ರಯೋಗವನ್ನು ಹೇಳಿರಿ" ಎಂದು ಕೇಳಿದನು. ಆಗಲಾ ಕಾಲಜ್ಞಾನಿಗಳಾದ ಬ್ರಾಹ್ಮಣರೆಲ್ಲರೂ ಪರಶಿವನನ್ನು ಕುರಿತು "ಅಪ್ಪಾ! ಸದಾ

ಕಥ್ಯತಾಂ ತಾತ ಗೋತ್ರಂ ಸ್ವಂ ಕುಲಂ ಚೈವ ವಿಶೇಷತಃ ।
ಕಥಯಸ್ವ ಮಹಾಭಾಗ ಇತ್ಯಾಕರ್ಣ್ಯ ವಚಸ್ತಥಾ ।
ಸುಮುಖೋ ವಿಮುಖಃ ಸದ್ಯಃ ಹ್ಯಶೋಚ್ಯೋ ಶೋಚ್ಯತಾಂ ಗತಃ ॥ ೭೦ ॥
ಏವಂ ವಿಧಃ ಸುರವರೈಃ ಋಷಿಭಿಸ್ತದಾನೀಂ
ಗಂಧರ್ವ ಯಕ್ಷಮುನಿಸಿದ್ಧ ಗಣೈಸ್ತಥೈವ ।
ದೃಷ್ಟೋ ನಿರುತ್ತರಮುಖೋ ಭಗವಾನ್ಮಹೇಶೋ
ಹಾಸ್ಯಂ ಚಕಾರ ಸುಭೃಶಂ ತ್ವಥ ನಾರದಶ್ಚ ॥ ೭೧ ॥
ವೀಣಾಂ ಪ್ರಕಟಯಾಮಾಸ ಬ್ರಹ್ಮಪುತ್ರೋಽಥ ನಾರದಃ ।
ತದಾನೀಂ ವಾರಿತೋ ಧೀಮಾನ್ವೀಣಾಂ ಮಾವಾದಯ ಪ್ರಭೋ ॥ ೭೨ ॥
ಇತ್ಯುಕ್ತಃ ಪರ್ವತೇನೈವ ನಾರದೋ ವಾಕ್ಯಮಬ್ರವೀತ್ ।
ತ್ವಂಮಾ ಪೃಷ್ಟೋ ಭವಃ ಸಾಕ್ಷಾತ್ಸ್ವಗೋತ್ರಕಥನಂ ಪ್ರತಿ ॥ ೭೩ ॥
ಅಸ್ಯ ಗೋತ್ರಂ ಕುಲಂಚೈವ ನಾದ ಏವ ಪರಂ ಗಿರೇ ।
ನಾದೇ ಪ್ರತಿಷ್ಠಿತಃ ಶಂಭುರ್ನಾದೋ ಹ್ಯಸ್ಮಿನ್ಪ್ರತಿಷ್ಠಿತಃ ॥ ೭೪ ॥

---

ಶಿವನೇ! ನಿನ್ನ ಗೋತ್ರವಾವುದು? ವಿಶೇಷವಾಗಿ ನಿನ್ನ ಕುಲವಾವುದು? ಅಪ್ಪಣೆ ಕೊಡಿಸು" ಎಂದು ಕೇಳಿದರು. ಇಂತು ಪ್ರಶ್ನಿಸಿದ ಆ ವಿಪ್ರರ ಮಾತನ್ನಾಲಿಸಿ ಆ ಪರಮೇಶ್ವರನಾಸಮಯದಲ್ಲಿ ಸುಮುಖನಾದರೂ ವಿಮುಖನಾದನು; ಅಶೋಚ್ಯನಾದರೂ ಶೋಚನೀಯನಾದನು.

೭೧. ಆಗ ಸುರಶ್ರೇಷ್ಠರೂ, ಋಷಿಗಳೂ, ಗಂಧರ್ವಯಕ್ಷಮುನಿಸಿದ್ಧ ಗಣಗಳೂ ಭಗವಾನ್ ಮಹೇಶ್ವರನೀರೀತಿ ಏನೊಂದೂ ಉತ್ತರವೀಯದಿರುವುದನ್ನು ಕಂಡರು. ಅದೇ ಸಮಯದಲ್ಲಿಯೇ ದೇವಮುನಿಯಾದ ನಾರದನಾದರೋ ಆ ಶಂಕರನನ್ನು ಬಹಳವಾಗಿ ಹಾಸ್ಯಮಾಡಿದನು.

೭೨. ಆತನು ಈರೀತಿ ಹಾಸ್ಯಮಾಡಿ ತನ್ನ ವೀಣೆಯನ್ನು ನುಡಿಸತೊಡಗಿದನು. ಆಗ ಹಿಮವಂತನು, "ಅಯ್ಯಾ ಮುನಿಯೇ! ನೀನೀರೀತಿ ವೀಣೆಯನ್ನು ನುಡಿಸಬೇಡ; ನಿಲ್ಲಿಸು" ಎಂದು ಹೇಳಿ ಅವನನ್ನು ತಡೆದನು.

೭೩–೭೪. ಗಿರಿರಾಜನಿಂತೆನಲು ಆ ಬ್ರಹ್ಮಪುತ್ರನು ಅವನನ್ನು ಕುರಿತು, "ಎಲೈ ಹಿಮವಂತನೇ! ನೀನು ಸಾಕ್ಷಾತ್ ಭವನಾದ ಈ ಪರಮೇಶ್ವರನನ್ನು 'ನಿನ್ನ ಗೋತ್ರವಾವುದು' ಎಂದು ಕೇಳಿದೆ. ಈತನ ಕುಲ ಗೋತ್ರ ಎಲ್ಲವೂ ವಿಶೇಷವಾಗಿ ನಾದವೆಂದೇ ತಿಳಿ. ಈ ಶಂಭುವು ನಾದದಲ್ಲಿ ಪ್ರತಿಷ್ಠಿತನಾಗಿರುವನು. ಆ ನಾದವಾದರೋ ಈತನಲ್ಲಿ ಪ್ರತಿಷ್ಠಿತವಾಗಿರುವುದು.

**ತಸ್ಮಾನ್ನಾದಮಯಃ ಶಂಭುರ್ನಾದಾಚ್ಚ ಪ್ರತಿಲಭ್ಯತೇ ।**
**ತಸ್ಮಾದ್ವೀಣಾ ಮಯಾ ಚಾದ್ಯ ವಾದಿತಾ ಹಿ ಪರಂತಪ ॥ ೭೫ ॥**

**ಅಸ್ಯ ಗೋತ್ರಂ ಕುಲಂ ನಾಮ ನ ಜಾನಂತಿ ಹಿ ಪರ್ವತ ।**
**ಬ್ರಹ್ಮಾದಯೋ ಹಿ ವಿಬುಧಾ ಅನ್ಯೇಷಾಂ ಚೈವ ಕಾ ತಥಾ ॥ ೭೬ ॥**

**ತ್ವಂ ಹಿ ಮೂಢತ್ವಮಾಪನ್ನೋ ನ ಜಾನಾಸಿ ಹಿ ಕಿಂಚನ ।**
**ವಾಚ್ಯಾವಾಚ್ಯಂ ಮಹೇಶಸ್ಯ ವಿಷಯಂ ಹಿ ಬಹಿರ್ಮುಖಃ ॥ ೭೭ ॥**

**ಯೇ ಯೇ ಆಗಮಿಕಾಶ್ಚಾದ್ರೇ ನಷ್ಟಾಸ್ತೇ ನಾತ್ರ ಸಂಶಯಃ ।**
**ಅರೂಪೋಽಯಂ ವಿರೂಪಾಕ್ಷೋ ಹ್ಯಕುಲೀನೋಽಯಮುಚ್ಯತೇ ॥೭೮॥**

**ಅಗೋತ್ರೋಽಯಂ ಗಿರಿಶ್ರೇಷ್ಠ ಜಾಮಾತಾ ತೇ ನ ಸಂಶಯಃ ।**
**ನ ಕರ್ತವ್ಯೋ ವಿಮರ್ಶೋಽತ್ರ ಭವತಾ ವಿಬುಧೇನ ಹಿ ॥ ೭೯ ॥**

**ನ ಜಾನಂತಿ ಹರಂ ಸರ್ವೇ ಕಿಂ ಬಹೂಕ್ತ್ಯಾ ಮಮ ಪ್ರಭೋ ।**
**ಯಸ್ಯಾಜ್ಞಾನಾನ್ಮಹಾಭಾಗ ಮೋಹಿತಾ ಋಷಯೋ ಹ್ಯಮೀ ॥ ೮೦ ॥**

೭೫. ಆದುದರಿಂದ ಈತನು ನಾದಮಯನು. ಈ ನಾದದಿಂದಲೇ ಈ ಶಂಕರನು ಭಕ್ತರಿಗೆ ದೊರಕುತ್ತಾನೆ. ಆದುದರಿಂದಲೈ ಪರಂತಪನೇ! ನಾನು ಆ ವೀಣೆಯನ್ನೇ ನುಡಿಸುತ್ತಿದ್ದೇನೆ.

೭೬–೭೭. ಅಯ್ಯಾ ಪರ್ವತನೇ! ಬ್ರಹ್ಮಾದಿದೇವತೆಗಳೂ ಸಹ ಈ ತ್ರಿಲೋಚನನ ಗೋತ್ರವನ್ನಾಗಲಿ, ಕುಲವನ್ನಾಗಲಿ ತಿಳಿದಿಲ್ಲವೆಂದಮೇಲೆ ಇತರರ ಪಾಡೇನು? ನೀನಾದರೋ ಕೇವಲ ಮೌಢ್ಯವನ್ನು ಹೊಂದಿರುವೆಯಾಗಿ ಏನೂ ತಿಳಿದಿಲ್ಲ. ಕೇವಲ ಬಹಿರ್ಮುಖನಾದ ನೀನು ಈ ಪರಮೇಶ್ವರನನ್ನು ಕುರಿತು ಕೇಳತಕ್ಕ ಮತ್ತು ಕೇಳಬಾರದ ವಿಷಯವೇನೆಂಬುದನ್ನೇ ಅರಿಯೆ.

೭೮–೭೯. ಈ ಮಹಾತ್ಮನ ಕುಲಗೋತ್ರಗಳನ್ನು ಹೇಳುತ್ತೇವೆಯೆಂದು ವಿಜೃಂಭಿಸುವ ಆಗಮಿಕರು ಯಾರಾರಿರುವರೋ ಅವರೆಲ್ಲರೂ ಹಾಳಾದರೆಂದರಿತುಕೋ! ಓ ಗಿರಿಶ್ರೇಷ್ಠ! ಈ ವಿರೂಪಾಕ್ಷನಿಗೆ ರೂಪವೇ ಇರುವುದಿಲ್ಲ. ಇವನು ಅಕುಲೀನ (ಕುಲವಿಲ್ಲದವ)ನೆಂದು ಹೇಳಲ್ಪಡುತ್ತಾನೆ. ಇವನು ಅಗೋತ್ರನು. ಇಂತಹನು ಈ ನಿನ್ನ ಅಳಿಯನಾದ ಶಂಕರನು. ಬುದ್ಧಿವಂತನಾದ ನೀನು ಈ ವಿಷಯದಲ್ಲಿ ವಿಮರ್ಶೆಮಾಡಬಾರದು.

೮೦. ಈ ಹರನನ್ನಾರೂ ಅರಿತಿರುವುದಿಲ್ಲ. ಅಯ್ಯಾ ಪ್ರಭುವೇ! ನಾನು ಸುಮ್ಮನೆ ಹೇಳುವುದರಿಂದೇನು? ಈತನ ಮಾಯೆಯಿಂದಲೇ ಈ ಮಹರ್ಷಿಗಳೆಲ್ಲರೂ ಮೋಹಿತರಾಗಿ ಹೋಗಿದ್ದಾರೆ.

ಬ್ರಹ್ಮಾಪಿ ತಂ ನ ಜಾನಾತಿ ಮಸ್ತಕಂ ಪರಮೇಷ್ಠಿನಃ ।
ವಿಷ್ಣುರ್ಗತೋಽಹಿ ಪಾತಾಲಂ ನ ದೃಷ್ಟೋಽ ಹಿ ತಥೈವ ಚ ॥ ೮೧ ॥
ತೇನ ಲಿಂಗೇನ ಮಹತಾ ಹ್ಯಗಾಧೇನ ಜಗತ್ರಯಂ ।
ವ್ಯಾಪ್ತಮಸ್ತೀತಿ ತದ್ವಿದ್ಧಿ ಕಿಮನೇನ ಪ್ರಯೋಜನಂ ॥ ೮೨ ॥
ಅನಯಾರಾಧಿತಂ ನೂನಂ ತವಪುತ್ರ್ಯಾ ಹಿಮಾಲಯ ।
ತತ್ತ್ವತೋಽ ಹಿ ನ ಜಾನಾಸಿ ಕಥಂ ಚೈವ ಮಹಾಗಿರೇ ॥ ೮೩ ॥
ಆಭ್ಯಾಮುತ್ಪಾದ್ಯತೇ ವಿಶ್ವಮಾಭ್ಯಾಂ ಚೈವ ಪ್ರತಿಷ್ಠಿತಂ ।
ಏತಚ್ಛ್ರುತ್ವಾ ವಚಸ್ತಸ್ಯ ನಾರದಸ್ಯ ಮಹಾತ್ಮನಃ ॥ ೮೪ ॥
ಹಿಮಾದ್ರಿಪ್ರಮುಖಾಃ ಸರ್ವೇ ತಥಾ ಚೇಂದ್ರ ಪುರೋಗಮಾಃ ।
ಸಾಧು ಸಾಧ್ವಿತಿ ತೇ ಸರ್ವೇ ಊಚುರ್ವಿಸ್ಮಿತ ಮಾನಸಾಃ ॥ ೮೫ ॥
ಈಶ್ವರಸ್ಯ ತು ಗಾಂಭೀರ್ಯಂ ಜ್ಞಾತ್ವಾ ಸರ್ವೇ ವಿಚಕ್ಷಣಾಃ ।
ವಿಸ್ಮಯೇನ ಸಮಾಶ್ಲಿಷ್ಟಾ ಊಚುಸ್ಸರ್ವೇ ಪರಸ್ಪರಂ ॥ ೮೬ ॥

---

೮೧–೮೨. ಎಲೈ ಹಿಮವಂತನೇ! ಬ್ರಹ್ಮನೂ ಸಹ ಪರಮೇಷ್ಠಿಯಾದ ಈ ಪ್ರಭುವಿನ (ಲಿಂಗ) ಮಸ್ತಕವನ್ನರಿಯನು. ಮಹಾ ವಿಷ್ಣುವು ಈತನ ಅಂತವನ್ನು ಕಾಣಲು ಪಾತಾಳಕ್ಕೆ ಹೋದನು ಆದರೇನು? ಆತನೂ ಅದನ್ನು ಕಾಣಲಿಲ್ಲವು. ಅಗಾಧವಾದ ಆ ಲಿಂಗದಿಂದಲೇ ಮೂರು ಲೋಕಗಳೂ ವ್ಯಾಪ್ತವಾಗಿರುವುವೆಂದು ತಿಳಿ. ಹೀಗಿರುವಲ್ಲಿ ಈತನನ್ನು ಈರೀತಿ ಪ್ರಶ್ನಿಸುವುದರಿಂದೇನು ಪ್ರಯೋಜನ?

೮೩. ನಿನ್ನ ಮಗಳಾದ ಈ ಮಹಾದೇವಿಯು ತಪಸ್ಸಿನಿಂದಲೇ ಮಹಾನುಭಾವನನ್ನು ಆರಾಧಿಸಿರುವಳೆಂಬುದರಲ್ಲಿ ಸಂಶಯವಿಲ್ಲವಾದುದರಿಂದಲೇ ಈಕೆಯು ಈತನ ಸ್ವರೂಪವನ್ನು ಚೆನ್ನಾಗಿ ತಿಳಿದಿರುತ್ತಾಳೆ. ಎಲೈ ಮಹಾಗಿರಿಯೇ! ನೀನು ಈ ವಿಷಯವೆಲ್ಲವನ್ನೂ ಯಥಾರ್ಥವಾಗಿ ತಿಳಿಯುವುದಿಲ್ಲವೇಕೆ?

೮೪–೮೫. ಕೇಳು; ಈ ಪಾರ್ವತೀಪರಮೇಶ್ವರರಿಂದಲೇ ಈ ವಿಶ್ವವು ಸೃಷ್ಟಿಯಾಗುತ್ತದೆ; ಇವರಿಂದಲೇ ಸುಪ್ರತಿಷ್ಠಿತವಾಗಿಯೂ ಇರುವುದು" ಎಂದು ಹೇಳಿದನು. ಇಂತೆಂದ ಮಹಾತ್ಮನಾದ ನಾರದ ಮುನಿಯ ಮಾತುಗಳನ್ನು ಕೇಳಿ ಹಿಮಾದ್ರಿಯೇ ಮೊದಲಾದ ಗಿರಿರಾಜರೂ, ಇಂದ್ರಾದಿ ದೇವತೆಗಳೂ ಆಶ್ಚರ್ಯಭರಿತರಾಗಿ "ಭಲೇ ಭಲೆ" ಎಂದು ಹೊಗಳಿದರು.

೮೬–೮೭. ಎಲೈ ಶೌನಕಾದಿಗಳಿರಾ! ತರುವಾಯ ವಿಚಕ್ಷಣರಾದ ಆ ಗಿರೀಂದ್ರನೇ ಮೊದಲಾದ ಸಮಸ್ತರೂ ನಾರದ ಮುನಿಯು ಬಣ್ಣಿಸಿದ ಶಿವ ಪಾರಮ್ಯವನ್ನು (ಮಹಿಮೆಯನ್ನು) ಕೇಳಿ ಆ ಪರಶಿವನ ಮಾಹಾತ್ಮ್ಯದ ಅಗಾಧತೆ

**ಯಸ್ಯಾಜ್ಞಯಾ ಜಗದಿದಂ ಚ ವಿಶಾಲಮೇವ**
**ಜಾತಂ ಪರಾತ್ಪರಮಿದಂ ನಿಜ ಬೋಧರೂಪಂ ।**
**ಸರ್ವಂ ಸ್ವತಂತ್ರ ಪರಮೇಶ್ವರ ಭಾವಗಮ್ಯಂ**
**ಸೋಽಸೌ ತ್ರಿಲೋಕ ನಿಜರೂಪಯುತೋ ಮಹಾತ್ಮಾ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಶಿವಶಾಸ್ತ್ರೇ ಶಿವ ಪಾರ್ವತೀ ವಿವಾಹ ವರ್ಣನಂ" ನಾಮ ಪಂಚವಿಂಶೋಽಧ್ಯಾಯಃ**

---

ಯನ್ನರಿತು ಆಶ್ಚರ್ಯಸಮನ್ವಿತರಾಗಿ ಆ ವಿಷಯವಾಗಿಯೇ ಪರಸ್ಪರವಾಗಿ ಮಾತನಾಡಿಕೊಂಡರು. (ಆಗ) ಋಷಿಗಳು ಹೇಳುತ್ತಾರೆ:—ಯಾವನ ಆಜ್ಞೆಯಿಂದ ವಿಶಾಲವಾದೀ ಜಗತ್ತು ಸೃಷ್ಟಿಯಾಗಿರುತ್ತದೆಯೋ, ಆತ್ಮಜ್ಞಾನದಿಂದಲೇ ತಿಳಿಯಲು ಸಾಧ್ಯವಾದ ಇದೆಲ್ಲವೂ ಸ್ವತಂತ್ರ ಪುರುಷನಾದ ಪರಮೇಶ್ವರನಲ್ಲಿನ ಯಾವ ಭಕ್ತಿಯಿಂದಲೇ (ಅಥವಾ ಸರ್ವವೂ ಪರಮೇಶ್ವರಸ್ವರೂಪವೇ ಎಂಬ ಭಾವನೆಯಿಂದ) ತಿಳಿಯಲಾಗುತ್ತದೆಯೋ ಅಂತಹ ಮೂರು ಲೋಕಗಳ ಸ್ವರೂಪದಿಂದಿರುವ ಆ ಪರಮಾತ್ಮನೇ, ಮಹಾತ್ಮನಾದ ಈ ಶಿವನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಶಿವ ಪಾರ್ವತಿಯರ ವಿವಾಹ ವರ್ಣನ"ವೆಂಬ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಷಡ್ತ್ರಿಂಶೋಽಧ್ಯಾಯಃ

## ಶಿವ ಪಾರ್ವತೀ ವಿವಾಹಮಂಗಳೋತ್ಸವ ವರ್ಣನಂ

ಲೋಮಶ ಉವಾಚ :—

ಅಥ ತೇ ಪರ್ವತ ಶ್ರೇಷ್ಠಾ ಮೇರ್ವಾದ್ಯಾ ಜಾತ ಸಂಭ್ರಮಾಃ ।
ಊಚುಸ್ತೇ ಚೈಕಪದ್ಯೇನ ಹಿಮವಂತಂ ಮಹಾಗಿರಿಂ ॥ ೧ ॥

ಪರ್ವತಾ ಊಚುಃ :—

ಕನ್ಯಾದಾನಂ ಕ್ರಿಯತಾಂ ಚಾದ್ಯ ಶೈಲ
ಶ್ರೀಮಚ್ಛಂಭುರ್ಭಾಗ್ಯತಸ್ತೇಽದ್ಯಲಬ್ಧಃ ।
ಹ್ಯನ್ಮಧ್ಯೇ ವೈ ನಾತ್ರ ಕಾರ್ಯೋ ವಿಮರ್ಶ
ಸ್ತ್ವಸ್ಮಾದೇಷಾ ದೀಯತಾಮೀಶ್ವರಾಯ ॥ ೨ ॥

ತಚ್ಛ್ರುತ್ವಾ ವಚನಂ ತೇಷಾಂ ಸುಹೃದಾಂ ವೈ ಹಿಮಾಲಯಃ ।
ಸಮ್ಯಕ್ಸಂಕಲ್ಪಮಕರೋತ್ ಬ್ರಹ್ಮಣಾ ನೋದಿತ ಸ್ತದಾ ।
ಇಮಾಂ ಕನ್ಯಾಂ ತುಭ್ಯಮಹಂ ದದಾಮಿ ಪರಮೇಶ್ವರ ॥ ೩ ॥
ಭಾರ್ಯಾರ್ಥಂ ಪ್ರತಿಗೃಹ್ಣೀಷ್ವ ಮಂತ್ರೇಣಾನೇನ ದತ್ತವಾನ್ ।
ಅಸ್ಮೈ ರುದ್ರಾಯ ಮಹತೇ ದೇವದೇವಾಯ ಶಂಭವೇ ।
ಕನ್ಯಾ ದತ್ತಾ ಮಹೇಶಾಯ ಗಿರೀಂದ್ರೇಣ ಮಹಾತ್ಮನಾ ॥ ೪ ॥

---

### ಕನ್ನಡದ ಅನುವಾದ

#### ಶಿವ ಪಾರ್ವತೀ ವಿವಾಹ ಮಂಗಳೋತ್ಸವ ವರ್ಣನೆ

೧. ಲೋಮಶನು ಹೇಳುತ್ತಾನೆ :—ತರುವಾಯ ಮೇರುವೇ ಮೊದಲಾದ ಪರ್ವತಶ್ರೇಷ್ಠರೆಲ್ಲರೂ ಬಹು ಸಂಭ್ರಮಸಮನ್ವಿತರಾಗಿ ಎಲ್ಲರೂ ಒಟ್ಟಾಗಿಯೇ ಮಹಾಗಿರಿಯಾದ ಆ ಹಿಮವಂತನನ್ನು ಕುರಿತು ಹೀಗೆ ಹೇಳಿದರು.

೨. ಪರ್ವತರಾಜರು ಹೇಳುತ್ತಾರೆ :—"ಎಲೈ ಗಿರಿರಾಜನೇ! ನೀನೀಗ ಕನ್ಯಾದಾನವನ್ನೆಸಗು. ಕೇಳು, ಮಹಾಸಂಪದ್ಯುಕ್ತನಾದ ಈ ಶಂಭುವು ನಿನಗೆ ಅಳಿಯನಾಗಿ ದೊರೆತುದು ನಿನ್ನ ಭಾಗ್ಯೋದಯವೇ ಸರಿ! ನೀನೀಗ ಯಾವ ಯೋಚನೆಯನ್ನೂ ಮಾಡಬೇಡ. ಈ ಪರಮೇಶ್ವರನಿಗೆ ನಿನ್ನ ಮಗಳನ್ನು ಕೊಟ್ಟು ಮದುವೆಮಾಡು."

೩–೪. ಆ ಬಳಿಕ ಬ್ರಹ್ಮದೇವನೂ ಪ್ರೇರೇಪಿಸಲು ಆ ಗಿರೀಂದ್ರನು, ಕನ್ಯಾದಾನಕ್ಕೆ ಸರಿಯಾಗಿ ಸಂಕಲ್ಪಮಾಡಿದನು. ಆತನು, "ಓ ಪರಮೇಶ್ವರ! ನಾನು ನನ್ನ ಮಗಳಾದ ಪಾರ್ವತಿಯೆಂಬ ಈ ಕನ್ಯೆಯನ್ನು ನಿನಗೆ ದಾನಮಾಡುತ್ತೇನೆ. ನೀನೀಕೆಯನ್ನು ಭಾರ್ಯಾರ್ಥವಾಗಿ ಪರಿಗ್ರಹಿಸುವವನಾಗು" ಎಂಬೀ ಮಂತ್ರ

ವೇದ್ಯಾಂ ಚ ಬಹಿರಾನೀತೌ ದಂಪತೀ ಕಮಲೇಕ್ಷಣೌ ।
ಉಪವೇಶಿತೌ ಬಹಿರ್ವೇದ್ಯಾಂ ಪಾರ್ವತೀಪರಮೇಶ್ವರೌ ॥ ೫ ॥
ಆಚಾರ್ಯೇಣಾಥ ತತ್ರೈವ ಕಶ್ಯಪೇನ ಮಹಾತ್ಮನಾ ।
ಆಹ್ವಾನಂ ಹವನಾರ್ಥಾಯ ಕೃತಮಗ್ನೇಸ್ತದಾ ದ್ವಿಜಾಃ ॥ ೬ ॥
ಬ್ರಹ್ಮಾ ಬ್ರಹ್ಮಾಸನಗತೋ ಬಭೂವ ಶಿವಸನ್ನಿಧೌ ।
ಪ್ರವರ್ತಮಾನೇ ಹವನ ಋಷಯಶ್ಚ ವಿಚಕ್ಷಣಾಃ ॥ ೭ ॥
ಊಚುಃ ಪರಸ್ಪರಂ ತತ್ರ ನಾನಾದರ್ಶನವೇದಿನಃ ।
ವೇದವಾದರತಾಃ ಕೇಚಿದವದನ್ಸಮ್ಮತೇನ ವೈ ॥ ೮ ॥
ಏವಮೇವ ನ ಚಾಪ್ಯೇವಮೇವಮೇವ ನ ಚಾನ್ಯಥಾ ।
ಕಾರ್ಯಮೇವ ನ ವಾ ಕಾರ್ಯಂ ಕಾರ್ಯಾಕಾರ್ಯಂ ತಥಾಪರೇ ॥ ೯ ॥
ಇತ್ಯೇವಂ ಬ್ರುವತಾಂ ಶಬ್ದಃ ಶ್ರೂಯತೇ ಶಿವಸನ್ನಿಧೌ ।
ಸ್ವಕೀಯಂ ಮತಮಾಸ್ಥಾಯ ಹ್ಯಬ್ರುವಂಸ್ತೇ ಪರಸ್ಪರಂ ।
ತತ್ತ್ವಜ್ಞಾನ ವಿಹೀನಾಸ್ತೇ ಕೇವಲಂ ವೇದಬುದ್ಧಯಃ ॥ ೧೦ ॥

---

ದಿಂದ ತನ್ನ ಮಗಳನ್ನಾಶಿವನಿಗೆ ಧಾರೆಯೆರೆದುಕೊಟ್ಟನು. (ಹೀಗೆ ಮಹಾತ್ಮನಾದ ಆ ಗಿರೀಂದ್ರನು ರುದ್ರನೂ, ಮಹಾದೇವನೂ ಆದ ಶಂಭುವಿಗೆ ತನ್ನ ಮಗಳನ್ನು ಧಾರೆಯೆರೆದನು.)

೫. ಆ ಬಳಿಕ ಕಮಲೇಕ್ಷಣರಾದ ಆ ಪಾರ್ವತೀ ಪರಮೇಶ್ವರರೀರ್ವರೂ ಗರ್ಗಾಚಾರ್ಯನಿಂದ ಅಂತರ್ವೇದಿಕೆಯಿಂದ ಹೊರಕ್ಕೆ ಬಿಜಯಗೈಸಲ್ಪಟ್ಟವರಾಗಿ ಬಹಿರ್ವೇದಿಕೆಯಲ್ಲಿ ಕುಳ್ಳಿರಿಸಲ್ಪಟ್ಟರು.

೬-೮. ಆಗ ಮಹಾತ್ಮನಾದ ಕಶ್ಯಪಋಷಿಯು ಹವನಕರ್ಮಕ್ಕಾಗಿ ಅಲ್ಲಿಯೇ ಯಜ್ಞೇಶ್ವರನನ್ನಾಹ್ವಾನಿಸಿದನು. ಆ ಸಮಯದಲ್ಲಿ ಬ್ರಹ್ಮನಾದರೋ ಆ ಶಿವಸನ್ನಿಧಿಯಲ್ಲಿ ಬ್ರಹ್ಮಸ್ಥಾನದಲ್ಲಿ ಕುಳಿತನು. ಹೀಗೆ ವಿವಾಹ ಸಂಬಂಧವಾದ ಹವನವು ನಡೆಯುತ್ತಿರಲು, ಇತ್ತ ಸಭೆಯಲ್ಲಿ ಕುಳಿತಿದ್ದ ಮಹಾ ವಿಚಕ್ಷಣರೂ, ಅನೇಕ ಶಾಸ್ತ್ರಗಳಲ್ಲಿ ಪರಿಣತಜ್ಞಾನವುಳ್ಳವರೂ ಆದ ಋಷಿಗಳು ಆ ಹವನವನ್ನು ಹೇಗೆ ಮಾಡಬೇಕೆಂಬ ವಿಚಾರವಾಗಿ ಒಬ್ಬರಿಗೊಬ್ಬರು ವಾದ ಮಾಡತೊಡಗಿದರು. ಸುತ್ತಲೂ ಕುಳಿತಿದ್ದ ಕೆಲ ವೇದವಾದರತರಾದ ವಿಪ್ರರಾದರೋ ತಮ್ಮತಮ್ಮಲ್ಲಿಯೇ ಈರೀತಿ ಮಾತನಾಡಿಕೊಂಡರು.

೯-೧೦. "ಇದು ಹೀಗೆಯೇ; ಅಲ್ಲ, ಎಂದಿಗೂ ಹಾಗಲ್ಲ ; ಅದು ಹೀಗೆಯೇ! ಬೇರೆ ವಿಧವಾಗಿ ಅಲ್ಲವೇ ಅಲ್ಲ! ಇದನ್ನು ಮಾಡಲೇಬೇಕು ; ಕೂಡದು, ಹೀಗೆ ಮಾಡಲೇ ಕೂಡದು" ಎಂದು ಕೆಲವರೂ, ಮತ್ತೆ ಕೆಲವರು "ಅಥವಾ ಹೀಗೆ ಮಾಡಿದರೂ ಮಾಡಬಹುದು" ಎಂದೂ ತರ್ಕಮಾಡತೊಡಗಿದರು. ಹೀಗೆ ತಮ್ಮ

ತೇಷಾಂ ತದ್ವಚನಂ ಶ್ರುತ್ವಾ ಪರಸ್ಪರ ಜಯೈಷಿಣಾಂ ।
ಪ್ರಹಸ್ಯ ನಾರದೋ ವಾಕ್ಯಮುವಾಚ ಶಿವ ಸನ್ನಿಧೌ ॥ ೧೧ ॥
ಯೂಯಂ ಸರ್ವೇ ವಾದಿನಶ್ಚ ವೇದವಾದರತಾಸ್ತಥಾ ।
ಮೌನಮಾಸ್ಥಾಯ ಭೋ ವಿಪ್ರಾ ಹೃದಿ ಕೃತ್ಯ ಸದಾಶಿವಂ ॥ ೧೨ ॥
ಆತ್ಮಾನಂ ಪರಮಾತ್ಮಾನಂ ಪರಾಣಾಂ ಪರಮಂ ಚ ತತ್ ।
ಯೇನೇದಂ ಕಾರಿತಂ ವಿಶ್ವಂ ಯತಃ ಸರ್ವಂ ಪ್ರವರ್ತತೇ ।
ಯಸ್ಮಿನ್ನಿಲೀಯತೇ ವಿಶ್ವಂ ತಸ್ಮೈ ಸರ್ವಾತ್ಮನೇ ನಮಃ ॥ ೧೩ ॥
ಸೋಽಯಮಾಸ್ತೇಽಧುನಾ ಗೇಹೇ ಪರ್ವತೇಂದ್ರಸ್ಯ ಭೋ ದ್ವಿಜಾಃ ।
ಮುಖಾದಸ್ಯೈವ ಸಂಜಾತಾಃ ಸರ್ವೇ ಯೂಯಂ ವಿಚಕ್ಷಣಾಃ ॥ ೧೪ ॥
ಏವಮುಕ್ತಾಸ್ತದಾ ತೇನ ನಾರದೇನ ದ್ವಿಜೋತ್ತಮಾಃ ।
ಉಪದೇಶಕರೈರ್ವಾಕ್ಯೈರ್ಬೋಧಿತಾಸ್ತೇ ದ್ವಿಜೋತ್ತಮಾಃ ॥ ೧೫ ॥

---

ತಮ್ಮ ಪಕ್ಷಪ್ರತಿಪಕ್ಷಗಳನ್ನು ಹಿಡಿದು ಒಬ್ಬರೊಡನೊಬ್ಬರು ವಾದಮಾಡುತ್ತಿದ್ದ ಆ ಬ್ರಾಹ್ಮಣರ ಕೋಲಾಹಲವು ಆ ಪರಮೇಶ್ವರನ ಸನ್ನಿಧಿಯಲ್ಲಿ ವಿಶೇಷವಾಗಿ ಕೇಳಿಬರುತ್ತಲಿದ್ದಿತು. ಅಯ್ಯಾ ಶೌನಕಾದಿಗಳಿರಾ! ಹೀಗೆ ತರ್ಕದಲ್ಲಿ ತೊಡಗಿದ್ದ ಅವರೆಲ್ಲರೂ ತತ್ತ್ವಜ್ಞಾನ ವಿಹೀನರೂ, ವೇದ ಬುದ್ಧಿಗಳೂ ಆದವರೇ ಆಗಿದ್ದರು.

೧೧–೧೨. ಹೀಗೆ ಒಬ್ಬರನ್ನೊಬ್ಬರು ಗೆಲ್ಲಬೇಕೆಂದು ಬಯಸಿ ಮಾತನಾಡುತ್ತಿರುವ ಆ ಬ್ರಾಹಣರ ಮಾತುಗಳನ್ನಾಲಿಸಿ ದೇವಮುನಿಯಾದ ನಾರದನು ಗಟ್ಟಿಯಾಗಿ ನಕ್ಕು ಶಿವನ ಸನ್ನಿಧಿಯಲ್ಲಿಯೇ ಅವರೆಲ್ಲರನ್ನೂ ಕುರಿತು "ಅಯ್ಯಾ ವಿಪ್ರರೇ! ವೇದವಾದನಿರತರಾದ ನೀವೆಲ್ಲರೂ ಈರೀತಿ ವಾದಮಾಡುವುದನ್ನು ನಿಲ್ಲಿಸಿ. ಪರಮೇಶ್ವರನನ್ನೇ ನಿಮ್ಮ ಹೃದಯಗಳಲ್ಲಿ ನೆಲೆಗೊಳಿಸಿಕೊಂಡು ಧ್ಯಾನಿಸುತ್ತ ಮೌನವನ್ನವಲಂಬಿಸಿರಿ.

೧೩. ಎಲೈ ಬ್ರಾಹ್ಮಣರೇ! ಈ ಮಹಾತ್ಮನಾರೆಂದು ತಿಳಿದಿರಿ? ಕೇಳಿರಿ; ಆತ್ಮನೂ, ಪರಮಾತ್ಮನೂ, ಶ್ರೇಷ್ಠಕ್ಕಿಂತಲೂ ಶ್ರೇಷ್ಠನೂ ಆದ ಯಾರಿಂದ ಈ ವಿಶ್ವವೆಲ್ಲ ಸೃಷ್ಟಿಮಾಡಲ್ಪಟ್ಟಿರುವುದೋ, ಯಾರಿಂದ ಇದೆಲ್ಲವೂ ನಡೆಯುತ್ತಿರುವುದೋ, ಕಡೆಗೆ ಎಲ್ಲವೂ ಯಾರಲ್ಲಿ ಲಯವಾಗುತ್ತದೆಯೋ ಆ ಪರಬ್ರಹ್ಮನೇ ಈತನು. ಈತನಿಗೆ ನಮೋನಮಃ (ನಮಸ್ಕರಿಸಿರಿ).

೧೪. ಆ ಪರಾತ್ಪರ ವಸ್ತುವೇ ಈಗಲೀ ಗಿರಿರಾಜನ ಭವನದಲ್ಲಿ (ನಿಮ್ಮೆದುರಿಗೆ) ಇರುತ್ತಾನೆ. ಆತನೇ ಈ ಸದಾಶಿವನು. ಭೋ ದ್ವಿಜರೇ! ಈತನ ಮುಖದಿಂದಲೇ ವಿಚಕ್ಷಣರಾದ ನೀವೆಲ್ಲರೂ ಜನಿಸಿರುತ್ತೀರಿ" ಎಂದು ಹೇಳಿದನು.

೧೫. ಎಲೈ ಮುನಿಗಳಿರಾ! ಹೀಗೆ ಆ ನಾರದ ಮುನಿಯು ಅಲ್ಲಿದ್ದ ದ್ವಿಜೋತ್ತಮರೆಲ್ಲರಿಗೂ ಉಪದೇಶಕರವಾದ ವಾಕ್ಯಗಳಿಂದ ಶಿವಸ್ವರೂಪ

ವರ್ತಮಾನೇ ಚ ಯಜ್ಞೇ ಚ ಬ್ರಹ್ಮಾ ಲೋಕಪಿತಾಮಹಃ ।
ದದರ್ಶ ಚರಣೌ ದೇವ್ಯಾ ನಖೇಂದುಂ ಚ ಮನೋಹರಂ ॥ ೧೬ ॥
ದರ್ಶನಾತ್ ಸ್ಖಲಿತಃ ಸದ್ಯೋ ಬಭೂವಾಂಬುಜಸಂಭವಃ ।
ಮದನೇನ ಸಮಾವಿಷ್ಟೋ ವೀರ್ಯಂ ಚ ಪ್ರಾಚ್ಯವದ್ಭುವಿ ॥ ೧೭ ॥
ರೇತಸಾ ಕ್ಷರಮಾಣೇನ ಲಜ್ಜಿತೋಽಭೂತ್ಪಿತಾಮಹಃ ।
ಚರಣಾಭ್ಯಾಂ ಮಮರ್ದಾಥ ಮಹದ್ಗೋಪ್ಯಂ ದುರತ್ಯಯಂ ॥ ೧೮ ॥
ಬಹವಶ್ಚರ್ಷಯೋ ಜಾತಾ ವಾಲಖಿಲ್ಯಾಃ ಸಹಸ್ರಶಃ ।
ಉಪತಸ್ಥುಸ್ತದಾ ಸರ್ವೇ ತಾತತಾತೇತಿ ಚಾ ಬ್ರುವನ್ ॥ ೧೯ ॥
ನಾರದೇನ ತದೋಕ್ತಾಸ್ತೇ ವಾಲಖಿಲ್ಯಾಃ ಪ್ರಕೋಪಿನಾ ।
ಗಚ್ಛಂತು ಬಟವೋ ಯೂಯಂ ಪರ್ವತಂ ಗಂಧಮಾದನಂ ॥ ೨೦ ॥
ನ ಸ್ಥಾತವ್ಯಂ ಭವದ್ಭಿಶ್ಚ ಭವತಾಂ ನ ಪ್ರಯೋಜನಂ ।
ಇತ್ಯೇವಮುಕ್ತಾಸ್ತೇ ಸರ್ವೇ ವಾಲಖಿಲ್ಯಾಶ್ಚ ಪರ್ವತಂ ।
ನಾರದೇನ ಸಮಾದಿಷ್ಟಾ ಯಯುಃ ಸರ್ವೇ ತ್ವರಾನ್ವಿತಾಃ ॥ ೨೧ ॥

---

ವನ್ನು ತಿಳಿಯಹೇಳಿದನು. ಅದನ್ನು ಕೇಳಿ ಅವರೆಲ್ಲರೂ ಮೌನವನ್ನಾ ಶ್ರಯಿಸಿದರು.

೧೬. ಇತ್ತ ವೈವಾಹಿಕಹೋಮವು ನಡೆಯುತ್ತಿರಲು ಬ್ರಹ್ಮಸ್ಥಾನದಲ್ಲಿ ಕುಳಿತಿದ್ದ ಲೋಕಪಿತಾಮಹನಾದ ಬ್ರಹ್ಮನು ಪಾರ್ವತೀದೇವಿಯ ಚರಣಗಳನ್ನೂ, ಅಲ್ಲಿಯ ಮನೋಹರವಾದ ನಖಚಂದ್ರನನ್ನೂ ನೋಡಿದನು.

೧೭–೧೮. ಹೀಗೆ ನೋಡಿದುದರಿಂದಲೇ ಆ ಕಮಲಸಂಭವನಿಗೆ ಚಿತ್ತ ಸ್ಖಲನವಾಯಿತು. ಆ ಬಳಿಕ ಆತನು ಮನ್ಮಥಾವಿಷ್ಟನಾಗಿ ಹೋದನು. ಆಗಲೇ ಆತನಿಗೆ ವೀರ್ಯಸ್ಖಲನವೂ ಆಯಿತು. ಹೀಗೆ ಸ್ಖಲನವಾಗಿ ಜಾರುತ್ತಿರುವ ತಡೆಯಲಸಾಧ್ಯವಾದ ಆ ವೀರ್ಯವನ್ನಾತನು ಬಹು ಲಜ್ಜಿತನಾಗಿ ಗೋಪ್ಯವಾಗಿ ಕಾಲುಗಳಿಂದುಜ್ಜಿದನು.

೧೯–೨೧. ಆ ಕೂಡಲೇ ಸಾವಿರಾರು ಮಂದಿ ವಾಲಖಿಲ್ಯರೆಂಬ ಮಹರ್ಷಿಗಳುದಿಸಿದರು. ಅವರೆಲ್ಲರೂ ಕೂಡಲೇ "ಅಪ್ಪ! ಅಪ್ಪಾ!!" ಎಂದು ಕೂಗಿಕೊಂಡು ಬ್ರಹ್ಮನನ್ನು ಸುತ್ತುವರಿದರು. ಆಗ ನಾರದ ಮಹರ್ಷಿಯು ಬಹಳ ಕೋಪದಿಂದವರೆಲ್ಲರನ್ನೂ ಕುರಿತು, "ಎಲೈ ವಟುಗಳೇ! ಹೊರಡಿ; ನೀವೆಲ್ಲರೂ ಗಂಧಮಾದನ ಪರ್ವತಕ್ಕೆ ಹೊರಟು ಹೋಗಿರಿ. ನೀವಿಲ್ಲಿರಕೂಡದು. ಇಲ್ಲಿ ನಿಮಗಾವ ಪ್ರಯೋಜನವೂ ಇರುವುದಿಲ್ಲ. ಹೊರಡಿ" ಎಂದು ಗದರಿಸಿ ಹೇಳಿದನು. ಆತನಿಂತು ನುಡಿದೊಡನೆಯೇ ಬ್ರಹ್ಮನ ಮಕ್ಕಳಾದ ಆ ವಾಲಖಿಲ್ಯರೆಲ್ಲರೂ ತ್ವರೆಗೊಂಡು ಆ ಪರ್ವತಕ್ಕೆ ಹೊರಟು ಹೋದರು.

ನಾರದೇನ ತದಾಬ್ರಹ್ಮಾಽಶ್ವಾಸಿತೋ ವಚನೈಃ ಶುಭೈಃ ।
ತಾವಚ್ಚ ಹವನಂ ಪೂರ್ಣಂ ಜಾತಂ ತಸ್ಯ ಮಹಾತ್ಮನಃ ॥ ೨೨ ॥
ಮಹೇಶಸ್ಯ ತಥಾ ವಿಪ್ರಾಃ ಶಾಂತಿಪಾಠ ಪರಾಬಭೂಃ ।
ಬ್ರಹ್ಮಘೋಷೇಣ ಮಹತಾ ವ್ಯಾಪ್ತಮಾಸೀದ್ದಿಗಂತರಂ ॥ ೨೩ ॥
ತತೋ ನೀರಾಜಿತೋ ದೇವೋ ದೇವಪತ್ನೀಭಿರುತ್ತಮಃ ।
ತಥೈವ ಋಷಿಪತ್ನೀಭಿರರ್ಚಿತಃ ಪೂಜಿತಸ್ತಥಾ ॥ ೨೪ ॥
ತಥಾ ಗಿರೀಂದ್ರಸ್ಯ ಮನೋರಮಾಃ ಶುಭಾ
ನೀರಾಜಯಾಮಾಸುರಥೈವ ಯೋಷಿತಃ ।
ಗೀತೈಃ ಸುಗೀತಜ್ಞ ವಿಶಾರದಾಶ್ಚ
ತಥೈವ ಚಾನ್ಯೇ ಸ್ತುತಿಭಿರ್ಮಹರ್ಷಯಃ ॥ ೨೫ ॥
ರತ್ನಾನಿಚ ಮಹಾರ್ಹಾಣಿ ದದೌ ತೇಭ್ಯೋ ಮಹಾಮನಾಃ ।
ಹಿಮಾಲಯೋ ಮಹಾಶೈಲಃ ಸ ಹೃಷ್ಟಃ ಪರಿತೋಷಯನ್ ॥ ೨೬ ॥

---

೨೨. ತರುವಾಯ ಆ ದೇವರ್ಷಿಯು ಬ್ರಹ್ಮದೇವನನ್ನು ಶುಭ ವಾಕ್ಯಗಳನ್ನಾಡಿ ಸಮಾಧಾನಗೊಳಿಸಿದನು. ಅಷ್ಟರಲ್ಲಿಯೇ ಆ ಮಹಾತ್ಮನ ಹವನವೂ ಸಂಪೂರ್ಣವಾಯಿತು.

೨೩. ಆಗ ಆ ವಿವಾಹ ಮಂಟಪದಲ್ಲಿದ್ದ ವಿಪ್ರರೆಲ್ಲರೂ ಆ ಮಹೇಶ್ವರನಿಗೆ ಶಾಂತಿ ಪಾಠಗಳನ್ನು ಹೇಳಿದರು. ಆ ಸಮಯದಲ್ಲಿ ದಿಗಂತರಗಳೆಲ್ಲವೂ ಮಹತ್ತರವಾದ ವೇದ ಘೋಷದಿಂದ ತುಂಬಿಹೋಯಿತು.

೨೪. ಅದೇ ಸಮಯದಲ್ಲಿಯೇ ದೇವಪತ್ನಿಯರೆಲ್ಲರೂ ಆ ಸ್ವಾಮಿಗೆ ಆರತಿಯನ್ನೆತ್ತಿದರು. ಅಂತೆಯೇ ಋಷಿಪತ್ನಿಯರೂ ಸಹ ಆತನನ್ನು ಪೂಜಿಸಿದರು.

೨೫. ಹಾಗೂ, ಗಿರೀಂದ್ರನಾದ ಹಿಮವಂತನ ಮನೋಹರೆಯರೂ, ಮಂಗಳಾಂಗಿಯರೂ ಒಳ್ಳೆಯ ಮಂಗಳಗೀತಗಳನ್ನರಿತವರಲ್ಲಿ ವಿಚಕ್ಷಣೆಯರೂ ಆದ ಪತ್ನಿಯರೆಲ್ಲರೂ ಹಾಡುಗಳನ್ನು ಹೇಳಿ ಆ ಭಗವಂತನಿಗೆ ನೀರಾಜನವನ್ನು ಮಾಡಿದರು. ಆಗ ಇತರ ಮಹರ್ಷಿಗಳೆಲ್ಲರೂ ಆ ದೇವ ದೇವನನ್ನು ಸ್ತುತಿಸಿದರು.

೨೬. ಉದಾರಮನಸ್ಕನಾದ ಆ ಹಿಮಾಲಯ ಮಹಾಶೈಲನು ಈರೀತಿ ಹಾಡಿ ನೀರಾಜನಗಳನ್ನುಮಾಡಿದ ಮುತ್ತೈದೆಯರಿಗೂ, ವೇದ ಘೋಷಗಳನ್ನೂ, ಸ್ತುತಿಗಳನ್ನೂ ಮಾಡಿದ ಮಹರ್ಷಿಗಳಿಗೂ ಅಮೂಲ್ಯಗಳಾದ ರತ್ನಗಳನ್ನು ಪಾರಿತೋಷಿಕವಾಗಿ ಕೊಟ್ಟು ತಾನೂ ಸಂತೋಷಿಸಿ ಅವರನ್ನೂ ಸಂತೋಷಗೊಳಿಸಿದನು.

ಬಭೌ ತದಾನೀಂ ಸುರಸಿದ್ಧ ಸಂಘೈ
ರ್ವೇದ್ಯಾಂ ಸ್ಥಿತೋऽಸೌ ಸಕಲತ್ರಕೋ ವಿಭುಃ ।
ಸರ್ವೈರುಪೇತೋ ನಿಜಪಾರ್ಷದೈರ್ಗಣೈಃ
ಪ್ರಹೃಷ್ಟಚೇತಾ ಜಗದೇಕ ಸುಂದರಃ ॥ ೨೭ ॥

ಏತಸ್ಮಿನ್ನಂತರೇ ತತ್ರ ಬ್ರಹ್ಮವಿಷ್ಣು ಪುರೋಗಮಾಃ ।
ಋಷಿಗಂಧರ್ವಯಕ್ಷಾಶ್ಚ ಯೇ ನ್ಯೇ ತತ್ರ ಸಮಾಗತಾಃ ॥ ೨೮ ॥

ಸರ್ವಾನ್ಸಮಭ್ಯರ್ಚ್ಯ ತದಾ ಮಹಾತ್ಮಾ
ಮಹಾನ್ ಗಿರೀಶಃ ಪರಮೇಣ ವರ್ಚಸಾ ।
ಸದ್ರತ್ನ ವಸ್ತ್ರಾಭರಣಾನಿ ಸಮ್ಯಕ್
ದದೌ ಚ ತಾಂಬೂಲಸುಗಂಧವಾರ್ಯಪಿ ॥ ೨೯ ॥

ತದಾ ಶಿವಂ ಪುರಸ್ಕೃತ್ಯಭ್ಯವಜಹ್ರುಃ ಸುರೇಶ್ವರಾಃ ।
ತಥಾ ಸರ್ವೇ ಮಿಲಿತ್ವಾ ತು ಏಕಪದ್ಯೇನ ಮೋದಿತಾಃ ॥ ೩೦ ॥

ಪಂಙ್ಕ್ತೀ ಭೂತಾಶ್ಚ ಬುಭುಜುರ್ಲಿಂಗಿಣಾ ಶೃಂಗಿಣಾಸಹ ।
ಕೇಚಿದ್ಗಣಾಃ ಪೃಥಗ್ಭೂತಾಃ ನಾನಾಹಾಸ್ಯರಸೈರ್ವಿಭುಂ ॥ ೩೧ ॥

ಅತೋಷಯನ್ನಾರದಾದ್ಯಾ ಅನೇಕಾಲೀಕ ಸಂಯುತಾಃ ।
ತಥಾ ಚಂಡೀ ಗಣಾಃಸರ್ವೇ ಬುಭುಜುಃ ಕೃತಭಾಜನಾಃ ॥ ೩೨ ॥

---

೨೭. ಆಗಲಾ ಜಗದೇಕ ಸುಂದರನಾದ ಪರಮೇಶ್ವರನಾದರೋ ತನ್ನ ಸತಿಯಾದ ಗಿರಿಜೆಯೊಡನೆ ಹಸೆಯ ಮೇಲೆ ಕುಳಿತು, ಸಮಸ್ತ ಪಾರ್ಷದ ಸಮೂಹಗಳಿಂದಲೂ ಪರಿವೃತನಾಗಿ ಮಹದಾನಂದಭರಿತನಾದನು.

೨೮–೨೯. ಈ ಮಧ್ಯದಲ್ಲಿ ಬ್ರಹ್ಮವಿಷ್ಣು ಮೊದಲಾದವರೂ, ಋಷಿ ಗಂಧರ್ವ ಯಕ್ಷರೂ, ಅಲ್ಲಿಗೆ ಬಂದಿದ್ದ ಇನ್ನೂ ಇತರರೂ ಈ ಎಲ್ಲರನ್ನೂ ಮಹಾತ್ಮನೂ, ಮಹಾತೇಜಸ್ವಿಯೂ ಆದ ಗಿರೀಂದ್ರನು ಒಳ್ಳೊಳ್ಳೆಯ ರತ್ನಗಳಿಂದಲೂ, ವಸ್ತ್ರಾಭರಣಗಳಿಂದಲೂ, ಗಂಧ ತಾಂಬೂಲಾದಿಗಳಿಂದಲೂ ಪೂಜಿಸಿ ಸತ್ಕರಿಸಿದನು.

೩೦. ತರುವಾಯ ಆ ದೇವತೆಗಳೆಲ್ಲರೂ ಸಂತೋಷಭರಿತರಾಗಿ ಒಂದೆಡೆ ಸೇರಿ ಶಿವನನ್ನು ಪುರಸ್ಕರಿಸಿಕೊಂಡು ಭೋಜನಮಾಡಿದರು.

೩೧. ಆ ಸಮಯದಲ್ಲಿ ಕೆಲವು ಶಿವಗಣಗಳು ಬೇರೊಂದೆಡೆ ಸಾಲುಸಾಲುಗಳಾಗಿ ಕುಳಿತು ಲಿಂಗಿ ಮತ್ತು ಶೃಂಗಿಗಳೊಡನೆ ಅನೇಕ ಹಾಸ್ಯಗಳನ್ನುಮಾಡಿ ತಮ್ಮ ಪ್ರಭುವಾದ ಪರಮೇಶ್ವರನನ್ನು ಸಂತೋಷಗೊಳಿಸುತ್ತ ಊಟಮಾಡಿದರು.

೩೨. ನಾರದಮುನಿಯೇ ಮೊದಲಾದವರಾದರೋ ಅನೇಕ ಹಾಸ್ಯಗಳನ್ನೆಸಗಿ ಶಿವನನ್ನು ಸಂತೋಷಪಡಿಸಿದರು. ಅಂತೆಯೇ ಚಂಡಿಯ ಗಣಗಳೆಲ್ಲರೂ ಸತ್ಕೃತರಾಗಿ ಭೋಜನಮಾಡಿಸಲ್ಪಟ್ಟರು.

ವೈತಾಲಾಃ ಕ್ಷೇತ್ರಪಾಲಾಶ್ಚ ಬುಭುಜುಃ ಕೃತಭಾಜನಾಃ ।
ಶಾಕಿನೀ ಡಾಕಿನೀಚೈವ ಯಕ್ಷಿಣ್ಯೋ ಮಾತೃಕಾದಯಃ ॥ ೩೩ ॥
ಯೋಗಿನ್ಯೋಽಥಚತುಃಷಷ್ಠಿರ್ಯೋಗಿನೋ ಹಿ ತಥಾಪರೇ ।
ದಶ ಕೋಟ್ಯೋ ಗಣಾನಾಂ ಚ ಕೋಟ್ಯೇಕಾ ಚ ಮಹಾತ್ಮನಾಂ ॥ ೩೪ ॥
ಏವಂತು ಋಷಯಃ ಸರ್ವೇ ತಥಾನ್ಯೇ ವಿಬುಧಾದಯಃ ।
ಯೋಗಿನೋ ಹಿ ಮಯಾ ಚಾನ್ಯೇ ಕಥಿತಾಃ ಪೂರ್ವಮೇವಹಿ ॥ ೩೫ ॥
ಯೋಗಿನ್ಯಶ್ಚೈವ ಕಥಿತಾಸ್ತಾಸಾಂ ಭಕ್ಷ್ಯಂ ವದಾಮಿ ವಃ ।
ಖಡ್ಗಾನಾಂ ಕೇಚಿದಾನೀಯ ಕ್ರವ್ಯಂ ಪವಿತ್ರಮೇವ ಚ ॥ ೩೬ ॥
ಭುಂಜಂತಿ ಚಾಸ್ಥಿಸಂಯುಕ್ತಂ ತಥಾಂತ್ರಾಣಿ ಬುಭುಕ್ಷಿತಾಃ ।
ಆನೀಯ ಕೇಚಿಚ್ಛೀರ್ಷಾಣಿ ಮಹಿಷಾಣಾಂ ಗುರೂಣಿ ಚ ॥ ೩೭ ॥
ತಥಾ ಕೇಚಿನ್ನೃತ್ಯಮಾನಾಸ್ತದಾನೀಂ
ರೋರೂಯ್ಯಮಾಣಾಃ ಪ್ರಮಥಾಶ್ಚೈವ ಚಾನ್ಯೇ ।
ಕೇಚಿತ್ತೂಷ್ಣೀ ಮಾಸ್ಥಿತಾ ರುದ್ರರೂಪಾಃ
ಪರೇಚಾನ್ಯಾಂಲ್ಲೋಕಮಾನಾಸ್ತಥೈವ ॥ ೩೮ ॥

---

೩೩–೩೪. ಭೇತಾಳರು, ಕ್ಷೇತ್ರಪಾಲರು, ಶಾಕಿನಿ, ಡಾಕಿನಿ, ಯಕ್ಷಿಣಿಯರು, ಮಾತೃಕಾದಿಗಳು, ಚತುಃಷಷ್ಟಿ (ಅರುವತ್ತುನಾಲ್ಕು) ಯೋಗಿನೀ ಗಣಗಳು, ಇತರ ಹತ್ತುಕೋಟಿ ಶಿವಗಣಗಳು, ಇನ್ನೂ ಇತರ ಮಹಾತ್ಮರ ಮತ್ತೊಂದು ಕೋಟಿಯೂ ಆ ಹಿಮವಂತನಿಂದ ಸತ್ಕೃತರಾಗಿ ಸುಖಭೋಜನಗೈದರು.

೩೫. ಹೀಗೆ ಸಮಸ್ತ ಋಷಿಗಳೂ, ದೇವತೆಗಳೇ ಮೊದಲಾದವರೂ ಆ ಪರಮೇಶ್ವರನ ಕಲ್ಯಾಣೋತ್ಸವಸಮಯದಲ್ಲಿ ಆನಂದವಾಗಿ ಭುಂಜಿಸಿದರು. ಯೋಗಿನಿಯರ ವಿಷಯವನ್ನಂತೂ ಹಿಂದೆಯೇ ಹೇಳಿರುವೆನಷ್ಟೆ!

೩೬–೩೭. ಅಯ್ಯಾ ಋಷಿಗಳಿರಾ! ನಾನು ಈ ಹಿಂದೆಯೇ ಯೋಗಿನಿಯರ ವಿಷಯವನ್ನೂ ಹೇಳಿದ್ದೇನೆ. ಈಗ ಅವರ ಭಕ್ಷ್ಯವನ್ನು ಹೇಳುತ್ತೇನೆ; ಕೇಳಿರಿ. ಆ ಯೋಗಿನಿಯರೆಲ್ಲರೂ ಪವಿತ್ರವಾದ ಗೇಂಡಾಮೃಗಗಳ ಮಾಂಸವನ್ನು ತಂದಿಟ್ಟುಕೊಂಡು ಹಸಿದಿದ್ದುದರಿಂದ ಎಲವುಗಳೊಡನೆಯೇ ಆ ಮಾಂಸವನ್ನು ಭುಜಿಸಿದರಲ್ಲದೆ, ಕರುಳಗಳನ್ನೂ ಕಡಿದುತಿಂದರು. ಅವರಲ್ಲಿ ಕೆಲವರು ಎಮ್ಮೆಗಳ ದೊಡ್ಡದೊಡ್ಡ ತಲೆಗಳನ್ನು ತಂದಿಟ್ಟುಕೊಂಡು ತಿನ್ನುತ್ತಿದ್ದರು.

೩೮. ಹಾಗೆಯೇ ಆ ಗುಂಪಿನಲ್ಲಿ ಕೆಲವರು ಆನಂದವುಕ್ಕೇರಿ ಬಂದು ಕುಣಿದಾಡುತ್ತಿದ್ದರು. ಕೆಲ ಪ್ರಮಥರೂ ಕುಣಿದು ನಲಿದರು. ಭಯಂಕರ ರೂಪ

ಯೋಗಿನೀ ಚಕ್ರಮಧ್ಯಸ್ಥೋ ಭೈರವೋ ಹಿ ನನರ್ತ ಚ ।
ತಥಾನ್ಯೇ ಭೂತವೇತಾಲಾ ಮಾಮೇತ್ಯೇವಂ ಪ್ರಲಾಪಿನಃ ॥ ೩೯ ॥
ಏವಂ ತೇಷಾಮುತ್ಸವಂ ಹಿ ನಿರೀಕ್ಷ್ಯ ಮಧುಸೂದನಃ ।
ಉವಾಚ ಪ್ರಹಸನ್ವಾಕ್ಯಂ ಶಂಕರಂ ಲೋಕಶಂಕರಂ ॥ ೪೦ ॥
ಏತಾನ್ ಗಣಾನ್ವಾರಯ ಭೋ ಅತ್ರ ಮತ್ತಾಂಶ್ಚ ಸಂಪ್ರತಿ ।
ತಸ್ಮಿನ್ಕಾಲೇಚ ಯತ್ಕಾರ್ಯಂ ಸರ್ವೈಸ್ತತ್ಕಾರ್ಯಮೇವಚ ॥ ೪೧ ॥
ಪಾಂಡಿತ್ಯೇನ ಮಹಾದೇವ ತಸ್ಮಾದೇತಾನ್ನಿವಾರಯ ।
ತಚ್ಛ್ರುತ್ವಾ ಭಗವಾನ್ರುದ್ರೋ ವೀರಭದ್ರಮುವಾಚಹ ॥ ೪೨ ॥

ರುದ್ರ ಉವಾಚ :—

ವಾರಯಸ್ವ ಪ್ರಮತ್ತಾಂಶ್ಚ ಕ್ಲೀಬಾಂಶ್ಚೈವ ವಿಶೇಷತಃ ।
ತೇನೋಕ್ತೋ ವೀರಭದ್ರಶ್ಚ ಶಂಭುನಾ ಪರಮೇಷ್ಠಿನಾ ॥ ೪೩ ॥
ಆಜ್ಞಾಪಿತಾಃ ಪ್ರಮತ್ತಾಶ್ಚ ವೀರಭದ್ರೇಣ ಧೀಮತಾ ।
ಪ್ರಮಥಾ ವಾರಿತಾಸ್ತೇನ ತೂಷ್ಣೀಮಾಶ್ರಿತ್ಯ ತೇ ಸ್ಥಿತಾಃ ॥ ೪೪ ॥
ನಿಶ್ಚಲಾ ಯೋಗಿನೀಮಧ್ಯೇ ಭೂತ ಪ್ರಮಥ ಗುಹ್ಯಕಾಃ ।
ಶಾಕಿನ್ಯೋ ಯಾತುಧಾನಾಶ್ಚ ಕೂಷ್ಮಾಂಡಾಃ ಕೋಪಿಕರ್ಪಟಾಃ ॥ ೪೫ ॥

---

ರಾದ ಮತ್ತೆ ಕೆಲವರು ಮೌನವಾಗಿ ಕುಳಿತಿದ್ದರು. ಇನ್ನು ಕೆಲವರು ಇವರೆಲ್ಲರನ್ನೂ ನಿಟ್ಟುಕಂಗಳಿಂದ ದುರದುರನೆ ನೋಡುತ್ತಲಿದ್ದರು.

೩೯. ಭೈರವನಾದರೋ ಯೋಗಿನಿಯರ ಗುಂಪಿನ ನಡುವೆ ನರ್ತನಮಾಡಿದನು. ಅವನ ಭಯಂಕರ ನಾಟ್ಯವನ್ನು ಕಂಡು ಇತರ ಭೂತ ಭೇತಾಳರೆಲ್ಲರೂ ಭಯಗೊಂಡು, "ಬೇಡ! ಬೇಡ!!" ಎಂದು ಅರಚುತ್ತಿದ್ದರು.

೪೦. ಆ ಸಮಯದಲ್ಲಿ ಹೀಗೆ ಮದೋನ್ಮತ್ತರಾಗಿದ್ದ ಅವರ ಮಹೋತ್ಸವವನ್ನು ಕಂಡು ಮಧುಸೂದನನು ನಗುತ್ತ, ಲೋಕಶಂಕರನಾದ ಶಂಕರನನ್ನು ಕುರಿತು ಹೀಗೆ ಹೇಳಿದನು.

೪೧–೪೨. "ಎಲೈ ಶಂಕರನೇ! ಬಹಳ ಮದಿಸಿ ಹುಚ್ಚು ಹುಚ್ಚಾಗಿ ಅಲುತ್ತ ಕೂಗಿ ಕುಣಿಯುತ್ತಿರುವ ಇವರೆಲ್ಲರನ್ನೂ ನಿವಾರಿಸುವವನಾಗು. ಓ ಮಹಾದೇವ! ಇಂತಹ ಉತ್ಸವಕಾಲದಲ್ಲಿ ಎಲ್ಲರೂ ತಮ್ಮ ಪಾಂಡಿತ್ಯ ಬಲದಿಂದಲೇ ಎಲ್ಲ ಕಾರ್ಯಗಳನ್ನೂ ಮಾಡಬೇಕು. ಆದುದರಿಂದವರನ್ನು ತಡೆ". ಈ ಮಾತನ್ನು ಕೇಳಿ ಭಗವಾನ್ ರುದ್ರನು ವೀರಭದ್ರನನ್ನು ಕುರಿತು ಹೇಳಿದನು.

೪೩–೪೫. ರುದ್ರನು ಹೇಳುತ್ತಾನೆ:—"ಎಲೈ ವೀರಭದ್ರನೇ! ಹೀಗೆ ಪ್ರಮತ್ತರೂ, ವಿಶೇಷವಾಗಿ ಕ್ಲೀಬರೂ ಆಗಿರುವ ಈ ಗಣಗಳೆಲ್ಲವನ್ನೂ ನಿವಾರಿಸು." ಆಗ ಮಹಾ ಬುದ್ಧಿಶಾಲಿಯಾದ ವೀರಭದ್ರನು ಪ್ರಮತ್ತರಾದ

ತಥಾನ್ಯೇ ಭೂತವೇತಾಲಾ ಕ್ಷೇತ್ರಪಾಲಾಶ್ಚ ಭೈರವಾಃ ।
ಸರ್ವೇ ಶಾಂತಾಃ ಪ್ರಮತ್ತಾಶ್ಚ ಬಭೂವುಃ ಪ್ರಮಥಾದಯಃ ॥ ೪೬ ॥
ಏವಂ ವಿಸ್ತಾರಸಂಯುಕ್ತಂ ಕೃತಮುದ್ವಹನಂ ತದಾ ।
ಹಿಮಾದ್ರಿಣಾ ಪರಂ ವಿಪ್ರಾಃ ಸುಮಂಗಲ್ಯಂ ಸುಶೋಭನಂ ॥ ೪೭ ॥
ಚತ್ವಾರೋ ದಿವಸಾ ಜಾತಾಃ ಪರಿಪೂರ್ಣೇನ ಚೇತಸಾ ।
ಹಿಮಾದ್ರಿಣಾ ಕೃತಾ ಪೂಜಾ ದೇವದೇವಸ್ಯ ಶೂಲಿನಃ ॥ ೪೮ ॥
ವಸ್ತ್ರಾಲಂಕಾರಾಭರಣೈ ರತ್ನೈರುಚ್ಚಾವಚೈಸ್ತತಃ ।
ಪೂಜಯಿತ್ವಾ ಮಹಾದೇವಂ ವಿಷ್ಣೋರ್ವಚನತಃ ಪರಂ ॥ ೪೯ ॥
ಲಕ್ಷ್ಮೀಸಮೇತಂ ವಿಷ್ಣುಂ ಚ ವಸ್ತ್ರಾಲಂಕರಣೈಃ ಶುಭೈಃ ।
ಪೂಜಯಾಮಾಸ ಹಿಮವಾಂಸ್ತಥಾ ಬ್ರಹ್ಮಾಣಮೇವಚ ॥ ೫೦ ॥
ಇಂದ್ರಂ ಪುರೋಧಸಾ ಸಾರ್ಧಮಿಂದ್ರಾಣ್ಯಾ ಸಹಿತಂ ವಿಭುಂ ।
ತಥೈವ ಲೋಕಪಾಲಾಂಶ್ಚ ಪೂಜಯಿತ್ವಾ ಪೃಥಕ್ ಪೃಥಕ್ ॥ ೫೧ ॥

---

ಆ ಪ್ರಮಥರೆಲ್ಲರನ್ನೂ ತಡೆದನು. ಆಗ ಅವರೆಲ್ಲರೂ ಸದ್ದಿಲ್ಲದೆ ಸುಮ್ಮನಾದರು. ಭೂತ ಪ್ರಮಥ ಗಣಗಳೆಲ್ಲವೂ ಯೋಗಿನಿಯರ ಗುಂಪಿನಲ್ಲಿ ಹುದುಗಿಕೊಂಡರು. ಶಾಕಿನಿಯರೂ, ಯಾತುಧಾನ ಕೂಷ್ಮಾಂಡಕೋಪಿ ಕರ್ಪಟರೂ ಸಹ ಅಂತೆಯೇ ಅಡಗಿದರು.

೪೬. ಅವರಂತೆಯೇ ಭೂತಗಳೂ, ಭೇತಾಳರೂ, ಕ್ಷೇತ್ರಪಾಲಕರೂ, ಭೈರವರೂ ಮದಿಸಿಹೋಗಿರುವ ಪ್ರಮಥಾದಿ ಶಿವಗಣಗಳೂ ಎಲ್ಲರೂ ಸದ್ದಿಲ್ಲದೆ ಶಾಂತರಾಗಿ ಕುಳಿತರು.

೪೭. ಎಲೈ ಶೌನಕಾದಿಗಳಿರಾ! ಈ ಪ್ರಕಾರ ಆ ಹಿಮವಂತನು ಸುಮಂಗಲವೂ, ಸುಶೋಭನವೂ ಆದ ಗಿರಿಜಾಕಲ್ಯಾಣವನ್ನು ಬಹು ವಿಸ್ತಾರವಾಗಿ ನಡೆಸಿದನು.

೪೮–೫೦. ಆ ಗಿರಿರಾಜನು ಪರಿಪೂರ್ಣವಾದ ಮನಸ್ಸಿನಿಂದ ನಾಲ್ಕು ದಿನಗಳ ಕಾಲ ಆ ಕಲ್ಯಾಣಮಹೋತ್ಸವವನ್ನು ಜರುಗಿಸಿದನು. ತರುವಾಯ ಆತನು ದೇವದೇವನಾದ ಪರಮೇಶ್ವರನನ್ನು ವಸ್ತ್ರಾಲಂಕಾರಾಭರಣಗಳಿಂದಲೂ ಅತ್ಯುತ್ತಮವಾದ ರತ್ನಗಳಿಂದಲೂ ಪೂಜಿಸಿದನು. ಬಳಿಕಲಾತನು ಲಕ್ಷ್ಮೀ ಸಮೇತನಾದ ವಿಷ್ಣುವನ್ನೂ, ಬ್ರಹ್ಮನನ್ನೂ ಸಹ ವಸ್ತ್ರಾಲಂಕಾರಗಳ ಉಡುಗೊರೆಗಳಿಂದ ಸತ್ಕರಿಸಿದನು.

೫೧. ಇದಾದ ಬಳಿಕ ಆತನು ಇಂದ್ರಾಣಿಯಾದ ಶಚೀದೇವಿಯೊಡ ಗೂಡಿದ ಮಹೇಂದ್ರನನ್ನೂ, ಇತರ ಲೋಕಪಾಲಕರನ್ನೂ ಬೇರೆ ಬೇರೆಯಾಗಿ ಪೂಜಿಸಿದನು.

**ತಥೈವ ಪೂಜಿತಾ ಚಂಡೀ ಭೂತಪ್ರಮಥ ಗುಹ್ಯಕೈಃ ।**
**ವಸ್ತ್ರಾಲಂಕರಣೈಶ್ಚೈವ ರತ್ನೈರ್ನಾನಾವಿಧೈರಪಿ ।**
**ಯೇ ಚಾನ್ಯ ಆಗತಾಸ್ತತ್ರ ತೇ ಚ ಸರ್ವೇ ಪ್ರಪೂಜಿತಾಃ ॥ ೫೨ ॥**
**ಏವಂ ತದಾನೀಂ ಪ್ರತಿಪೂಜಿತಾಶ್ಚ**
**ದೇವಾಶ್ಚ ಸರ್ವೇ ಋಷಯಶ್ಚ ಯಕ್ಷಾಃ ।**
**ಗಂಧರ್ವವಿದ್ಯಾಧರ ಸಿದ್ಧಚಾರಣಾ**
**ಸ್ತಥೈವ ಮರ್ತ್ಯಾಪ್ಸರಸಾಂ ಗಣಾಶ್ಚ ॥ ೫೩ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಶಿವಪಾರ್ವತೀ ವಿವಾಹಮಂಗಲ ಮಹೋತ್ಸವ ವರ್ಣನಂ" ನಾಮ ಷಡ್ತ್ರಿಂಶೋಽಧ್ಯಾಯಃ**

---

೫೨. ಹಾಗೆಯೇ ಭೂತ ಪ್ರಮಥ ಗುಹ್ಯಕ ಗಣಗಳಿಂದ ಕೂಡಿದ ಚಂಡಿಗೂ, ಅಲ್ಲಿಗೈತಂದಿದ್ದ ಇತರರಿಗೂ ಆ ಹಿಮವಂತನು ವಸ್ತ್ರಾಲಂಕಾರಗಳನ್ನಿತ್ತು ಮರ್ಯಾದಿಸಿದನು.

೫೩. ಹೀಗೆ ಗಿರಿಜಾಕಲ್ಯಾಣಕ್ಕೆ ಬಂದಿದ್ದ ಸಮಸ್ತ ದೇವತೆಗಳನ್ನೂ, ಋಷಿಗಳು, ಯಕ್ಷರು, ಗಂಧರ್ವ ವಿದ್ಯಾಧರ ಸಿದ್ಧಚಾರಣರೂ, ಮರ್ತ್ಯಲೋಕದವರು, ಅಪ್ಸರೋಗಣಗಳು ಮುಂತಾದ ಸಮಸ್ತರನ್ನೂ ಸತ್ಕರಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಶಿವ ಪಾರ್ವತೀ ವಿವಾಹ ಮಂಗಲ ಮಹೋತ್ಸವ ವರ್ಣನ"ವೆಂಬ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಸಪ್ತವಿಂಶೋಽಧ್ಯಾಯಃ

### ಕಾರ್ತಿಕೇಯಸ್ವಾಮಿ ಕುಮಾರೋತ್ಪತ್ತಿ ವರ್ಣನಂ

**ಲೋಮಶ ಉವಾಚ :—**

**ತಥೈವ ವಿಷ್ಣುನಾ ಸರ್ವೇ ಪರ್ವತಾಶ್ಚ ಪ್ರಪೂಜಿತಾಃ ।**
**ಸಹ್ಯಾಚಲಶ್ಚ ವಿಂಧ್ಯಶ್ಚ ಮೈನಾಕೋ ಗಂಧಮಾದನಃ ॥ ೧ ॥**
**ಮಾಲ್ಯವಾನ್ಮಲಯಶ್ಚೈವ ಮಹೇಂದ್ರೋ ಮಂದರಸ್ತಥಾ ।**
**ಮೇರುಶ್ಚೈವ ಪ್ರಯತ್ನೇನ ಪೂಜಿತೋ ವಿಷ್ಣುನಾ ತದಾ ॥ ೨ ॥**
**ಶ್ವೇತಃಕೃತಃ ಶ್ವೇತಗಿರಿರ್ನೀಲಾದ್ರಿಶ್ಚ ತಥೈವಚ ।**
**ಉದಯಾದ್ರಿಶ್ಚ ಶೃಂಗಶ್ಚ ಅಸ್ತಾಚಲವರೋ ಮಹಾನ್ ॥ ೩ ॥**
**ಮಾನಸಾದ್ರಿಸ್ತಥಾ ಶೈಲಃ ಕೈಲಾಸಃ ಪರ್ವತೋತ್ತಮಃ ।**
**ಲೋಕಾಲೋಕಸ್ತಥಾ ಶೈಲಃ ಪೂಜಿತಃ ಪರಮೇಷ್ಠಿನಾ ॥ ೪ ॥**
**ಏವಂ ತೇ ಪರ್ವತಶ್ರೇಷ್ಠಾಃ ಪೂಜಿತಾಃ ಸರ್ವ ಏವತು ।**
**ತಥಾನ್ಯೇ ಪೂಜಿತಾಸ್ತೇನ ಸರ್ವೇ ಪರ್ವತವಾಸಿನಃ ॥ ೫ ॥**
**ವಿಷ್ಣುನಾ ಬ್ರಹ್ಮಣಾ ಸಾರ್ಧಂ ಕೃತಂ ಸರ್ವಂ ಯಥೋಚಿತಂ ।**
**ಅನ್ಯೇಽಹನಿ ಚ ಸಂಪ್ರಾಪ್ತೇ ವರಯಾತ್ರಾ ಕೃತಾ ತಥಾ ॥ ೬ ॥**

---

### ಕನ್ನಡದ ಅನುವಾದ

#### ಕಾರ್ತಿಕೇಯಸ್ವಾಮಿ ಕುಮಾರೋತ್ಪತ್ತಿ ವರ್ಣನ

೧–೨. ಲೋಮಶನು ಹೇಳುತ್ತಾನೆ:—ಎಲೈ ಶೌನಕಾದಿ ಮುನಿಗಳಿರಾ! ಈ ರೀತಿ ಹಿಮವಂತನು ದೇವತೆಗಳೆಲ್ಲರನ್ನೂ ಸತ್ಕರಿಸಿದ ಬಳಿಕ, ಶ್ರೀಮನ್ಮಹಾ ವಿಷ್ಣುವು ಅದರಂತೆಯೇ ಪರ್ವತರಾಜರೆಲ್ಲರನ್ನೂ ಗೌರವಿಸಿದನು. ಸಹ್ಯಾಚಲ, ವಿಂಧ್ಯಾಚಲ, ಮೈನಾಕ, ಗಂಧಮಾದನ, ಮಾಲ್ಯವಂತ, ಮಲಯ, ಮಹೇಂದ್ರ, ಮಂದರ, ಮೇರು ಮುಂತಾದ ಪರ್ವತರಾಜರನ್ನು ಆ ವಿಷ್ಣುವು ಪ್ರಯತ್ನ ಪುರಸ್ಸರವಾಗಿ ಪೂಜಿಸಿದನು.

೩–೪. ಆಗಲಾ ಸ್ವಾಮಿಯು ಶ್ವೇತಗಿರಿಯನ್ನು ಶ್ವೇತವನ್ನಾಗಿಯೂ, ನೀಲಾದ್ರಿಯನ್ನು ನೀಲವನ್ನಾಗಿಯೂ ಮಾಡಿದನು. ಆ ಪರಮೇಷ್ಠಿಯು ಉದಯಾದ್ರಿ, ಶೃಂಗ, ಅಸ್ತಾಚಲ, ಮಾನಸಾದ್ರಿ, ಕೈಲಾಸ, ಲೋಕಾಲೋಕ ಮೊದಲಾದ ಪರ್ವತಶ್ರೇಷ್ಠರನ್ನು ಅಂತೆಯೇ ಸತ್ಕರಿಸಿದನು.

೫–೬. ಅಯ್ಯಾ ವಿಪ್ರರೇ! ಈ ರೀತಿ ಶ್ರೀಮನ್ನಾರಾಯಣನು ಬ್ರಹ್ಮನೊಡಗೂಡಿ ಯಾರನ್ನೂ ಬಿಡದೆ ಎಲ್ಲ ಪರ್ವತಶ್ರೇಷ್ಠರನ್ನೂ ಅವರವರ ಯೋಗ್ಯತೆಗನುಸಾರವಾಗಿ ಗೌರವಿಸಿ ಸತ್ಕರಿಸಿದನು. ತರುವಾಯ ಮಾರನೆಯ ದಿನ ಗಿರಿರಾಜನಾದ ಹಿಮವಂತನು ಬಂಧುಗಳೆಲ್ಲರೊಡಗೂಡಿ ವರಯಾತ್ರಾ

**ಹಿಮಾದ್ರಿಣಾ ಬಂಧುಬಿಶ್ಚ ಪರ್ವತಂ ಗಂಧಮಾದನಂ ।**
**ಯಯುಃ ಸರ್ವೇ ಸುರಗಣಾ ಗಣಾಶ್ಚವರಿ ಭಾವಿತಾ ॥ ೭ ॥**
**ಪ್ರಮಥಾಶ್ಚ ತಥಾ ಸರ್ವೇ ತಥಾ ಚಂಡೀ ಗಣಾಃ ಪರೇ ।**
**ಯೇಚಾನ್ಯೇ ಬಹವಸ್ತತ್ರ ಸಮಾಯಾತಾ ಹಿಮಾಲಯಂ ॥ ೮ ॥**
**ಶಿವಸ್ಯೋದ್ವಹನಂ ವಿಪ್ರಾಃ ಶಿವೇನ ಪರಿಭಾವಿತಾಃ ।**
**ಪರಂ ಹರ್ಷಂ ಸಮಾಪನ್ನಾ ದೃಷ್ಟ್ವಾ ತೌ ದಂಪತೀ ತದಾ ॥ ೯ ॥**
**ಪಾರ್ವತೀಸಹಿತಃ ಶಂಭುಃ ಶಂಭುನಾ ಸಹ ಪಾರ್ವತೀ ।**
**ಪುಷ್ಪಗಂಧೌ ಯಥಾ ಸ್ಯಾತಾಂ ವಾಗಾರ್ಥಾವಿವ ತತ್ವತಃ ॥ ೧೦ ॥**
**ತಥಾ ಪ್ರಕೃತಿ ಪುಂಸಾಂ ಚ ಐಕಪದ್ಯೇನ ನಾನ್ಯಥಾ ।**
**ದಂಪತೀ ತೌ ಗಜಾರೂಢೌ ಶುಶುಭಾತೇ ಮಹಾಪ್ರಭೌ ॥ ೧೧ ॥**
**ವಿಮಾನಸ್ಥಸ್ತದಾ ಬ್ರಹ್ಮಾ ವಿಷ್ಣುಶ್ಚ ಗರುಡೋಪರಿ ।**
**ಐರಾವತ ಗತಶ್ಚೇಂದ್ರಃ ಕುಬೇರಃ ಪುಷ್ಪಕೋಪರಿ ॥ ೧೨ ॥**
**ಪಾಶೀ ಚ ಮಕರಾರೂಢೋ ಯಮೋ ಮಹಿಷ ಮೇವಚ ।**
**ಪ್ರೇತಾರೂಢೋ ನೈಋರ್ತಃ ಸ್ಯಾದಗ್ನಿರ್ಬಸ್ತಗತೋ ಮಹಾನ್ ॥ ೧೩ ॥**

---

ಮಹೋತ್ಸವವನ್ನೆಸಗಿದನು. ತರುವಾಯ ಸಮಸ್ತ ದೇವತೆಗಳೂ, ಪ್ರಮಥ ಗಣಗಳೂ ಹಿಮವಂತನಿಂದ ಸತ್ಕೃತರಾಗಿ ಗಂಧಮಾದನ ಪರ್ವತಕ್ಕೆ ಹೊರಟರು.

೮-೯. ಅಯ್ಯಾ ವಿಪ್ರರೇ! ಪರಶಿವನ ಕಲ್ಯಾಣಕ್ಕಾಗಿ ಹಿಮಾಲಯಕ್ಕೈ ತಂದಿದ್ದ ಪ್ರಮಥ ಗಣಗಳೂ, ಸಮಸ್ತ ಚಂಡೀ ಗಣಗಳೂ, ಇನ್ನೂ ಇತರ ಅನೇಕ ಶಿವಸುರ ಗಣಗಳೂ ಆ ಪರಮಾತ್ಮನಿಂದಲೇ ಸತ್ಕೃತರಾದರಲ್ಲದೆ ಅವರೆಲ್ಲರೂ ಆ ದಂಪತಿಗಳೀರ್ವರನ್ನೂ ಕಣ್ತುಂಬ ನೋಡಿ ಪರಮಾನಂದಭರಿತರಾದರು.

೧೦-೧೧. ಆ ಸಮಯದಲ್ಲಿ ಪಾರ್ವತಿಯೊಡಗೂಡಿದ ಶಂಭುವೂ ಶಂಭುವಿನೊಡಗೂಡಿದ ಪಾರ್ವತಿಯೂ, ಪುಷ್ಪವೂ ಅದರಲ್ಲಿನ ಪರಿಮಳವೂ ಹೇಗೆಯೋ, ಮಾತೂ ಅದರಲ್ಲಿಯೇ ಅಡಗಿರುವ ಅರ್ಥವೂ ಹೇಗೆಯೋ ಹಾಗೆಯೇ ಬೆಳಗುತ್ತಲಿದ್ದರು. ಹೀಗೆ ಆ ಪ್ರಕೃತಿ ಪುರುಷರಾದ ಪಾರ್ವತೀ ಪರಮೇಶ್ವರರೀರ್ವರೂ ಏಕಪ್ರಕಾರವಾಗಿ (ಒಂದಾಗಿಯೇ) ವಿರಾಜಿಸುತ್ತ ಗಜಾರೂಢರಾಗಿ ಮಹಾಪ್ರಭಾನ್ವಿತರಾಗಿ ಕಂಗೊಳಿಸಿ ಶೋಭಿಸುತ್ತಿದ್ದರು.

೧೨-೧೩. ಆಗ ಬ್ರಹ್ಮನು ವಿಮಾನಾರೂಢನಾಗಿಯೂ, ವಿಷ್ಣುವು ಗರುಡನನ್ನೇರಿಯೂ, ಇಂದ್ರನು ಐರಾವತವನ್ನೇರಿಯೂ, ಕುಬೇರನು ಪುಷ್ಪಕ ವಿಮಾನವನ್ನೇರಿಯೂ, ವರುಣನು ಮಕರಾರೂಢನಾಗಿಯೂ, ಯಮಧರ್ಮನು ಮಹಿಷಾರೂಢನಾಗಿಯೂ, ನಿಋರ್ತಿಯು ಪ್ರೇತಾರೂಢನಾಗಿಯೂ, ಅಗ್ನಿಯು ಆಡನ್ನೇರಿಯೂ ಆ ಪರಶಿವನ ಹಿಂದೆ ಹೊರಟರು.

ಮೃಗಾರೂಢೋಽಥ ಪವನ ಈಶೋ ವೃಷಭಮೇವಚ ।
ಇತ್ಯೇವಂ ಲೋಕಪಾಲಾಶ್ಚ ಸಗ್ರಹಾಃ ಪರಮೇಷ್ಠಿನಃ ॥ ೧೪ ॥
ಸ್ವೈಃ ಸ್ವೈರ್ಬಲೈಃ ಪರಿಕ್ರಾಂತಾಸ್ತಥಾನ್ಯೇ ಪ್ರಮಥಾದಯಃ ।
ಹಿಮಾದ್ರಿಶ್ಚ ಮಹಾಶೈಲ ಋಷಭೋ ಗಂಧಮಾದನಃ ॥ ೧೫ ॥
ಸಹ್ಯಾಚಲೋ ನೀಲಗಿರಿರ್ಮಂದರೋ ಮಲಯಾಚಲಃ ।
ಕೈಲಾಸೋ ಹಿ ಮಹಾತೇಜಾ ಮೈನಾಕಶ್ಚ ಮಹಾಪ್ರಭಃ ॥ ೧೬ ॥
ಏತೇಚಾನ್ಯೇ ಚ ಗಿರಯಃ ಶ್ರೀಮಂತೋ ಹಿ ಮಹಾಪ್ರಭಾಃ ।
ಸ ಕಲತ್ರಾಶ್ಚತೇ ಸರ್ವೇ ಸಸುತಾಶ್ಚ ಮನೋರಮಾಃ ॥ ೧೭ ॥
ಬಲಿನೋ ರೂಪಿಣಃ ಸರ್ವೇ ಮೇರ್ವಾದ್ಯಾಸ್ತತ್ರ ಪರ್ವತಾಃ
ವರಯಾತ್ರಾಪ್ರಸಂಗೇನ ಶಿವಾರ್ಚನಪರಾಭವನ್ ॥ ೧೮ ॥
ನಂದಿನಾಹ್ಯುಪವಿಷ್ಟಾಸ್ತೇ ಮೇರ್ವಾದ್ಯಾಸ್ತತ್ರ ಪರ್ವತಾಃ ।
ವರಯಾತ್ರಾ ಕೃತಾ ತೇನ ಯಥೋಕ್ತಾ ಚ ಹಿಮಾದ್ರಿಣಾ ।
ಸರ್ವೈಸ್ಸ್ವೈರ್ಬಂಧುಭಿಃ ಸಾರ್ಧಂ ಪುನರಾಗಮನಂ ಕೃತಂ ॥ ೧೯ ॥
ಸ್ವಕಾಲಯಸ್ಥೋ ಹಿಮವಾನ್ ಸ ರೇಜೇ ಹಿ ಮಹಾಯಶಾಃ ।
ಶಿವಸಂಪರ್ಕಜೇನೈವ ಮಹಸಾ ಪರಮೇಣ ಚ ॥ ೨೦ ॥

---

೧೪–೧೮. ವಾಯುದೇವನು ಮೃಗಾರೂಢನಾಗಿಯೂ, ಈಶನು ವೃಷಭಾರೂಢನಾಗಿಯೂ ಹೊರಟರು. ಹೀಗೆ ಲೋಕಪಾಲಕರೆಲ್ಲರೂ ಆ ಪರಮೇಷ್ಠಿಯ ವರಯಾತ್ರಾ ಮಹೋತ್ಸವದಲ್ಲಿ ತಮ್ಮ ತಮ್ಮ ಸೈನ್ಯಗಳೊಡನೆ ಆತನನ್ನು ಹಿಂಬಾಲಿಸಿ ಹೊರಟರು. ಅಂತೆಯೇ ಇತರರಾದ ಪ್ರಮಥಾದಿಗಳೂ ಸಹ ಆ ಸ್ವಾಮಿಯ ಹಿಂದೆ ಹೊರಟರು. ಮಹಾ ಶೈಲನಾದ ಹಿಮವಂತನೂ, ಋಷಭ, ಗಂಧಮಾದನ, ಸಹ್ಯಾಚಲ, ನೀಲಾಚಲ, ಮಂದರ, ಮಲಯಾಚಲ, ಮಹಾ ತೇಜನಾದ ಕೈಲಾಸ, ಮಹಾ ಪ್ರಭನಾದ ಮೈನಾಕ, ಮೇರು ಇವರೇ ಮೊದಲಾದ ಶ್ರೀಮಂತರೂ, ಮಹಾ ಪ್ರಭಾವಶಾಲಿಗಳೂ, ಮನೋಹರರೂ ಮಹಾ ಬಲಾಢ್ಯರೂ, ಮಹಾ ರೂಪಶಾಲಿಗಳೂ ಆದ ಸಮಸ್ತ ಪರ್ವತರಾಜರೂ ಸಹ ತಮ್ಮ ತಮ್ಮ ಕಲತ್ರಪುತ್ರ ಸಹಿತರಾಗಿ ವರಯಾತ್ರಾ ಮಹೋತ್ಸವ ಪ್ರಸಂಗದಿಂದ ಆ ಪರಮೇಶ್ವರನನ್ನು ಪೂಜಿಸಿದರು.

೧೯–೨೧. ತರುವಾಯ ಮೇರುವೇ ಮೊದಲಾದ ಆ ಪರ್ವತರಾಜರೆಲ್ಲರೂ ಶಿವಕಿಂಕರನಾದ ನಂದಿಯಿಂದ ಕುಳ್ಳಿರಿಸಲ್ಪಟ್ಟರು. ಹೀಗೆ ಹಿಮವಂತನು ಸಮಸ್ತ ಬಂಧುಗಳೊಡನೆ ಶಿವನ ಆ ವರಯಾತ್ರಾ ಮಹೋತ್ಸವವನ್ನು ಶಾಸ್ತ್ರೋಕ್ತವಾಗಿ ನೆರವೇರಿಸಿ ತನ್ನ ಭವನಕ್ಕೆ ಹಿಂತಿರುಗಿ ಬಂದನು. ಮಹಾ ಯಶಸ್ವಿಯಾದ ಆತನು ನಿಜಭವನದಲ್ಲಿ ಕುಳಿತು, ಶಿವಸಂಪರ್ಕ (ಸಂಬಂಧ)ದಿಂದ

ವಿಖ್ಯಾತೋ ಹಿ ಮಹಾಶೈಲಸ್ತ್ರಿಷುಲೋಕೇಷು ವಿಶ್ರುತಃ ।
ಕನ್ಯಾದಾನೇನ ಮಹತಾ ತುಷ್ಟೋ ಯಸ್ಯ ಚ ಶಂಕರಃ ॥ ೨೧ ॥
ತೇ ಧನ್ಯಾಸ್ತೇ ಮಹಾತ್ಮಾನಃ ಕೃತಕೃತ್ಯಾಸ್ತಥೈವಚ ।
ದ್ವ್ಯಕ್ಷರಂ ನಾಮ ಯೇಷಾಂ ಚ ಜಿಹ್ವಾಗ್ರೇ ಸಂಸ್ಥಿತಂ ಸದಾ ॥ ೨೨ ॥
ಶಿವೇತಿ ದ್ವ್ಯಕ್ಷರಂ ನಾಮ ಯ್ಯೈರ್ಹೃದೀರಿತಮುದ್ಯವೈ ।
ತೇ ವೈ ಮನುಷ್ಯರೂಪೇಣ ರುದ್ರಾ ಏವ ನ ಸಂಶಯಃ ॥ ೨೩ ॥
ಕಿಂಚಿದ್ದಾನೇನ ಸಂತುಷ್ಟಃ ಪತ್ರೇಣಾಪಿ ತಥೈವಚ ।
ತೋಯೇನಾಪಿ ಹಿ ಸಂತುಷ್ಟೋ ಮಹಾದೇವೋ ನಿರಂತರಂ ॥ ೨೪ ॥
ಪತ್ರೇಣ ಪುಷ್ಪೇಣ ತಥಾ ಜಲೇನ
ಪ್ರೀತೋ ಭವತ್ಯೇಷ ಸದಾಶಿವೋ ಹಿ ।
ತಸ್ಮಾಚ್ಚ ಸರ್ವೈಃ ಪ್ರತಿಪೂಜನೀಯಃ
ಶಿವೋ ಮಹಾಭಾಗ್ಯಕರೋ ನೃಣಾಮಿಹ ॥ ೨೫ ॥
ಏಕೋ ಮಹಾನ್ ಜ್ಯೋತಿರಜಃ ಪರೇಶಃ
ಪರಂ ಪರಾಣಾಂ ಪರಮೋ ಮಹಾತ್ಮಾ ।
ನಿರಂತರೋ ನಿರ್ವಿಕಾರೋ ನಿರೀಶೋ
ನಿರಾಬಾಧೋ ನಿರ್ವಿಕಲ್ಪೋ ನಿರೀಹಃ ॥ ೨೬ ॥

---

ಉಂಟಾದ ಪರಮ ತೇಜಸ್ಸಿನಿಂದಲೇ ಬಹಳವಾಗಿ ವಿರಾಜಿಸಿದನು. ಇಷ್ಟೆಯಲ್ಲದೆ ಆ ಮಹಾಶೈಲನು ಶಂಕರನಿಗೆ ಕನ್ಯಾದಾನಮಾಡಿ ಆತನನ್ನು ಸಂತೋಷಗೊಳಿಸಿ ಮೂರು ಲೋಕಗಳಲ್ಲಿ ಮಹಾ ಕೀರ್ತಿಯನ್ನು ಪಡೆದು ಮಹಾ ಪ್ರಸಿದ್ಧನಾದನು.

೨೨–೨೩. ಎಲೈ ಶೌನಕಾದಿ ಮಹರ್ಷಿಗಳಿರಾ! ಯಾರ ನಾಲಗೆಯಲ್ಲಿ 'ಶಿವ' ಎಂಬ ಎರಡಕ್ಷರದ ಹೆಸರು ಜಪಿಸಲ್ಪಡುತ್ತಿರುತ್ತದೆಯೋ ಅವರೇ ಧನ್ಯರು; ಅವರೇ ಮಹಾತ್ಮರು; ಅವರೇ ಕೃತಕೃತ್ಯರು. 'ಶಿವ' ಎಂಬ ಎರಡಕ್ಷರದ ಹೆಸರು ಯಾರ ಹೃದಯದಲ್ಲಿ ಹೇಳಿಕೊಳ್ಳಲ್ಪಡುತ್ತಿರುತ್ತದೆಯೋ ಅವರು ಮನುಷ್ಯರೂಪದಿಂದಿರುವ ರುದ್ರರೇ ಎಂಬುದರಲ್ಲಿ ಸಂಶಯವಿಲ್ಲವು.

೨೪–೨೫. ಶ್ರೀಮನ್ಮಹಾದೇವನು, ಸ್ವಲ್ಪವಾದ ದಾನದಿಂದಲೋ, ಅಥವಾ ಒಂದೇ ಒಂದು (ಬಿಲ್ವ) ಪತ್ರೆಯಿಂದಲೋ, ಅಥವಾ ನೀರಿನಿಂದಲೋ ನಿರಂತರವೂ ಸಂತೋಷಪಡುತ್ತಾನೆ. ಪತ್ರ, ಪುಷ್ಪ, ಜಲಗಳಿಂದ ಶ್ರೀ ಸದಾಶಿವನು ಸುಪ್ರೀತನಾಗುತ್ತಾನೆಯಾದುದರಿಂದ ಸಮಸ್ತರೂ ಆತನನ್ನು ಪೂಜಿಸಬೇಕು. ಈ ಲೋಕದಲ್ಲಿ ಶಿವಪೂಜಾರತರಾದ ಮಾನವರಿಗೆ ಆ ಸ್ವಾಮಿಯು ಮಹಾ ಭಾಗ್ಯವನ್ನುಂಟುಮಾಡುವಾತನು.

೨೬–೨೭. ಒಂದೇ ಒಂದಾದ ಮಹಾ ಜ್ಯೋತಿಸ್ಸ್ವರೂಪನೂ, ಶಾಶ್ವತನೂ,

ನಿರಂಜನೋ ನಿತ್ಯರೂಪೋ ನಿರೋಧೋ
ನಿತ್ಯಾನಂದೋ ನಿತ್ಯಮುಕ್ತಸ್ತಥೈವ ।
ಏವಂ ಭೂತೋ ದೇವದೇವೋಽರ್ಚಿತಶ್ಚ
ತೈರ್ದೇವಾದ್ಯೈರ್ವಿಶ್ವವೇದ್ಯೋ ಭವಶ್ಚ ।
ಸ್ತುತೋ ಧ್ಯಾತಃ ಪೂಜಿತಶ್ಚಿಂತಿತಶ್ಚ
ಸರ್ವಜ್ಞೋಽಸೌ ಸರ್ವದಾ ಸರ್ವದಶ್ಚ ॥ ೨೭ ॥
ಯಥಾವರಿಷ್ಠೋ ಹಿಮವಾನ್ ಪ್ರಸಿದ್ಧಃ
ಸರ್ವೈರ್ಗುಣೈಃ ಸರ್ವಗುಣೋ ಮಹಾತ್ಮಾ ।
ವಿಶ್ವೇಶವಂದ್ಯೋ ಹಿ ತದಾ ಹಿಮಾಲಯೋ
ಜಾತೋ ಗಿರೀಣಾಂ ಪ್ರವರಸ್ತದಾನೀಂ ॥ ೨೮ ॥
ಮೇನಯಾ ಸಹ ಧರ್ಮಾತ್ಮಾ ಯಥಾಸ್ಥಾನ ಗತಸ್ತತಃ ।
ಸರ್ವಾನ್ ವಿಸರ್ಜಯಾಮಾಸ ಪರ್ವತಾನ್ ಪರ್ವತೇಶ್ವರಃ ।
ಗತೇಷು ತೇಷು ಹಿಮವಾನ್ ಪುತ್ರೈಃ ಪೌತ್ರೈಃ ಪ್ರಪೌತ್ರಕೈಃ ।
ರಾಜಾ ಗಿರೀಣಾಂ ಪ್ರವರೋ ಮಹಾತ್ಮಾ ಮಹಾದೇವಪ್ರಸಾದತಃ ॥ ೨೯ ॥

---

ಪರೇಶನೂ, ಶ್ರೇಷ್ಠಾತಿಶ್ರೇಷ್ಠಗಳಾದ ಎಲ್ಲಕ್ಕೂ ಶ್ರೇಷ್ಠನೂ, ಮಹಾತ್ಮನೂ, ನಿರಂತರನೂ, ವಿಕಾರವಿಲ್ಲದವನೂ, ನಿರೀಶನೂ, ಯಾವ ಬಾಧೆಗಳೂ ಇಲ್ಲದವನೂ, ಯಾವ ಮಾರ್ಪಾಡೂ ಇಲ್ಲದೆ ಸರ್ವಕಾಲದಲ್ಲಿಯೂ ಒಂದೇ ಸಮನಾಗಿರುವವನೂ, ನಿರೀಹನೂ, ನಿರಂಜನನೂ, ನಿತ್ಯವಾದ ರೂಪವುಳ್ಳವನೂ, ನಿರೋಧನೂ (ಯಾವ ತಡೆಯೂ ಇಲ್ಲದವನೂ), ನಿತ್ಯಾನಂದಸ್ವರೂಪನೂ. ನಿತ್ಯಮುಕ್ತನಾಗಿ ತನ್ನ ಭಕ್ತರೆಲ್ಲರಿಗೂ ಎಲ್ಲ ಕಾಲಗಳಲ್ಲಿಯೂ ಶಾಶ್ವತವಾದ ಮುಕ್ತಿಯನ್ನು ಕರುಣಿಸುವಾತನೂ, ಸಮಸ್ತ ಪ್ರಪಂಚದಿಂದಲೂ ವೇದ್ಯನೂ, ಭವನೂ, ಸರ್ವಜ್ಞನೂ, ಸಮಸ್ತವನ್ನೂ ಅನುಗ್ರಹಿಸುವಾತನೂ ದೇವದೇವನೂ ಆದ ಆ ಪರಮಶಿವನನ್ನು ದೇವತೆಗಳೇ ಮೊದಲಾದ ಅವರೆಲ್ಲರೂ ಪೂಜಿಸಿ, ಸ್ತುತಿಸಿ, ಧ್ಯಾನಿಸಿ ಚಿಂತಿಸಿದರು.

೨೮. ಮಹಾಶ್ರೇಷ್ಠನೂ, ಸಮಸ್ತ ಗುಣಗಳಿಂದ ಕೂಡಿ ಸರ್ವಗುಣನೆನಿಸಿದವನೂ, ಮಹಾತ್ಮನೂ, ಪರ್ವತಗಳಿಗೆಲ್ಲ ಉತ್ತಮನೂ, ಪ್ರಸಿದ್ಧನೂ ಆದ ಆ ಹಿಮವಂತನು ಅಂತಹ ವಿಶ್ವೇಶ್ವರನಾದ ಪರಶಿವನಿಂದ ನಮಸ್ಕೃತನಾಗಿ ಇನ್ನೂ ಅತಿಶಯವಾದ ಪ್ರಭಾವವನ್ನು ಪಡೆದು ವಿರಾಜಿಸಿದನು.

೨೯–೩೦. ಧರ್ಮಾತ್ಮನೂ, ಪರ್ವತೇಶ್ವರನೂ, ಗಿರಿರಾಜನೂ, ಮಹಾತ್ಮನೂ ಆದ ಆ ಹಿಮವಂತನು ವಿವಾಹ ಮಹೋತ್ಸವಕ್ಕೈತಂದಿದ್ದ ದೇವತೆಗಳೇ ಮೊದಲಾದವರೆಲ್ಲರೂ ಅವರವರ ಲೋಕಗಳಿಗೆ ಹೊರಟುಹೋದ ತರುವಾಯ

ಅಥೋ ಗಿರಿಜಯಾ ಸಾಕಂ ಮಹೇಶೋ ಗಂಧಮಾದನೇ ।
ಏಕಾಂತೇ ಚ ಮತಿಂ ಚಕ್ರೇ ರಮಣಾರ್ಥಂ ಸ್ವರೂಪವಾನ್ ॥ ೩೦ ॥
ಸುರತೇನೈವ ಮಹತಾ ತಪಸಾ ಹಿ ಸಮಾಗಮೆ ।
ದ್ವಯೋಃ ಸುರತಮಾರಬ್ಧಂ ತದ್ದ್ವಯೋಶ್ಚ ತದಾಭವತ್ ॥ ೩೧ ॥
ಅನಿಷ್ಟಂ ಮಹದಾಶ್ಚರ್ಯಂ ಪ್ರಲಯೋಪಮಮೇವ ಚ ।
ತಸ್ಮಿನ್ಮಹಾರತೇ ಪ್ರಾಪ್ತೇ ನಾ ವಿಂದಂತ ಸುಖಂ ಪರಂ ॥ ೩೨ ॥
ಸರ್ವೇ ಬ್ರಹ್ಮಾದಯೋ ದೇವಾಃ ಕಾರ್ಯಾಕಾರ್ಯ ವ್ಯವಸ್ಥಿತಾ ।
ರೇತಸಾ ಚ ಜಗತ್ಸರ್ವಂ ನಷ್ಟಂ ಸ್ಥಾವರ ಜಂಗಮಂ ॥ ೩೩ ॥
ಸಸ್ಮಾರ ಚಾಗ್ನಿಂ ಬ್ರಹ್ಮಾ ಚ ವಿಷ್ಣುಶ್ಚಾಧ್ಯಾತ್ಮದಾಯಕಃ ।
ಮನಸಾ ಸಂಸ್ಮೃತಃ ಸದ್ಯೋ ಜಗಾಮಾಗ್ನಿಸ್ತ್ವರಾನ್ವಿತಃ ॥ ೩೪ ॥
ತಾಭ್ಯಾಂ ಸಂಪ್ರೇಷಿತೋಽಪಶ್ಯದ್ರುಚಿರಂ ಶಿವಮಂದಿರಂ ।
ದ್ವಾರಿಸ್ಥಿತಂ ನಂದಿನಂ ಚ ದದರ್ಶಾಗ್ರೇ ಮಹಾಪ್ರಭಂ ॥ ೩೫ ॥

---

ನಿಜಪತ್ನಿಯಾದ ಮೇನಾದೇವಿಯೊಡನೆ ತನ್ನ ನೆಲೆಯನ್ನು ಸೇರಿ, ಶ್ರೀಮನ್ಮಹಾದೇವನ ಮಹಾಪ್ರಸಾದ ಬಲದಿಂದ ಮಕ್ಕಳು, ಮೊಮ್ಮಕ್ಕಳು, ಮುಮ್ಮಕ್ಕಳುಗಳನ್ನು ಪಡೆದು ಪರಮಾನಂದಭರಿತನಾದನು. ತರುವಾಯ ಸ್ವರೂಪವಂತನಾದ (ಸಗುಣ ನಿರ್ಗುಣ ರೂಪನಾದ) ಮಹೇಶ್ವರನು ಗಂಧಮಾದನ ಪರ್ವತದಲ್ಲಿ ಏಕಾಂತವಾಗಿ ಗಿರಿಜೆಯೊಡನೆ ರತಿಕ್ರೀಡೆಯನ್ನನುಭವಿಸಲು ಮನಸ್ಸುಮಾಡಿದನು.

೩೧–೩೨. ಆಗ ಮಹತ್ತರವಾದ ಚಿತ್ತೈಕಾಗ್ರತೆಯ ತಪಸ್ಸಿನಿಂದಲೇ ಸಮಾಗಮವನ್ನು ಪಡೆದಿದ್ದ ಆ ಪಾರ್ವತೀ ಪರಮೇಶ್ವರರೀರ್ವರೂ ಸುರತವನ್ನಾರಂಭಿಸಿದರು. ಈ ರೀತಿ ಅವರೀರ್ವರೂ ಮೊದಲುಮಾಡಿದ ಆ ಮಹಾಸುರತವು ಪ್ರಪಂಚಕ್ಕೇ ಅನಿಷ್ಟಕರವೂ, ಮಹದಾಶ್ಚರ್ಯಕರವೂ, ಪ್ರಲಯಕ್ಕೆ ಸಾಟಿಯೂ ಆಗಿಹೋಯಿತು. ಅದರಿಂದ ಪ್ರಪಂಚವೆಲ್ಲ ಸುಖವನ್ನು ಪಡೆಯಲಿಲ್ಲವಲ್ಲದೆ ದುಃಖಕ್ಕೂ ಈಡಾಯಿತು.

೩೩. ಅದೇ ಸಮಯದಲ್ಲಿ ಬ್ರಹ್ಮಾದಿ ಸಮಸ್ತ ದೇವತೆಗಳೂ ಸಹ ಕಾರ್ಯಾಕಾರ್ಯಗಳಲ್ಲಿ ದಿಕ್ಕುತೋಚದವರಾದರು. ಆ ಪರಮೇಶ್ವರನ ರೇತಸ್ಸಿನಿಂದ ಸ್ಥಾವರ ಜಂಗಮಾತ್ಮಕವಾದ ಜಗತ್ತೆಲ್ಲವೂ ನಷ್ಟವಾಗಿ ಹೋಯಿತು.

೩೪. ಆಗ ಬ್ರಹ್ಮನೂ, ಅಧ್ಯಾತ್ಮವಿದ್ಯೆಯನ್ನು ದಯಪಾಲಿಸುವವನಾದ ಮಹಾವಿಷ್ಣುವೂ ತಮ್ಮ ಮನಸ್ಸಿನಲ್ಲಿಯೇ ಯಜ್ಞೇಶ್ವರನನ್ನು ಸ್ಮರಿಸಲು, ಆತನು ಬಹು ಜಾಗ್ರತೆಯಾಗಿ ಅಲ್ಲಿಗೈತಂದನು.

೩೫–೩೭. ತರುವಾಯ ಬ್ರಹ್ಮವಿಷ್ಣುಗಳೀರ್ವರೂ ಆತನನ್ನು ಶಿವಸನ್ನಿಧಿಗೆ

ಅಗ್ನಿರ್ಹ್ರಸ್ವಸ್ತದಾ ಭೂತ್ವಾ ಕಾಶ್ಮೀರ ಸದೃಶಚ್ಛವಿಃ ।
ಪ್ರವಿಷ್ಟೋಽಂತಃಪುರಂ ಶಂಭೋರ್ನಾನಾಶ್ಚರ್ಯಸಮನ್ವಿತಂ ॥ ೩೬ ॥
ಅನೇಕರತ್ನಸಂವೀತಂ ಪ್ರಾಸಾದೈಶ್ಚ ಸ್ವಲಂಕೃತಂ ।
ತದಂಗಣಮನುಪ್ರಾಪ್ಯ ಉಪವಿಶ್ಯಾಹ ಹವ್ಯವಾಟ್ ॥ ೩೭ ॥
ಪಾಣಿಪಾತ್ರಸ್ಯ ಮೇ ಹ್ಯಂಬ ಭಿಕ್ಷಾಂ ದೇಹ್ಯವರೋಧತಃ ।
ತಚ್ಛ್ರುತ್ವಾ ವಚನಂ ತಸ್ಯ ಪಾಣಿಪಾತ್ರಸ್ಯ ಬಾಲಿಕಾ ॥ ೩೮ ॥
ಯಾವದ್ದಾತುಂ ಚ ಸಾರೇಭೇ ಭಿಕ್ಷಾಂ ತಸ್ಮೈ ತತಃ ಸ್ವಯಂ ।
ಉತ್ಥಾಯ ಸುರತಾತ್ತಸ್ಮಾಚ್ಛಿವೋ ಹಿ ಕುಪಿತೋ ಭೃಶಂ ॥ ೩೯ ॥
ರುದ್ರಸ್ತ್ರಿಶೂಲಮುದ್ಯಮ್ಯ ಭೈರವೋ ಹ್ಯಭವತ್ತದಾ ।
ನಿವಾರಿತೋ ಗಿರಿಜಯಾ ವಧಾತ್ತಸ್ಮಾಚ್ಛಿವಃ ಸ್ವಯಂ ।
ಭಿಕ್ಷಾಂ ತಸ್ಮೈ ದದೌ ವಾಚಾ ಅಗ್ನಯೇ ಜಾತವೇದಸೇ ॥ ೪೦ ॥
ಪಾಣೌ ಭಿಕ್ಷಾಂ ಗೃಹೀತ್ವಾಥ ಪ್ರತ್ಯಕ್ಷಂ ತೇನಚಾಗ್ನಿನಾ ।
ಭಿಕ್ಷಿತಾ ಕುಪಿತಾ ತಂ ವೈ ಶಶಾಪ ಗಿರಿಜಾ ತತಃ ॥ ೪೧ ॥

---

ಕಳುಹಿಸಲು ಆತನು ಬಹುಬೇಗನೆ ಹೊರಟು ಗಂಧಮಾದನ ಪರ್ವತಕ್ಕೆ ಬಂದು ಬಹು ಮನೋಹರವಾದ ಶಿವಮಂದಿರವನ್ನೂ, ಆ ಮಂದಿರದ ಬಾಗಿಲಿನಲ್ಲಿಯೇ ಕಾವಲಿರುವ ಮಹಾ ತೇಜಸ್ವಿಯಾದ ನಂದಿಯನ್ನೂ ಕಂಡನು. ಆಗಲಾ ಅಗ್ನಿಯು ಹ್ರಸ್ವಾಕಾರವನ್ನು ತಾಳಿ ಕುಂಕುಮಕೇಸರಿಯ ಕಾಂತಿಯಿಂದ ಬೆಳಗುತ್ತ ನಾನಾಶ್ಚರ್ಯಸಮನ್ವಿತವೂ, ಅನೇಕ ರತ್ನಾಲಂಕೃತವೂ, ಅನೇಕ ಉಪ್ಪರಿಗೆಗಳಿಂದ ಶೋಭಿಸುತ್ತಿರುವುದೂ ಆದ ಶಿವನ ಅಂತಃಪುರವನ್ನು ಪ್ರವೇಶಿಸಿ ಅಲ್ಲಿಯ ಅಂಗಳಕ್ಕೆ ಹೋಗಿ ಕುಳಿತುಕೊಂಡು ಹೀಗೆಂದನು.

೩೮-೩೯. "ಎಲೌ ತಾಯೇ! ಈ ಪಾಣಿಪಾತ್ರನಿಗೆ ತಡೆಮಾಡದೆ ಭಿಕ್ಷೆ ವನ್ನು ನೀಡು." ಇಂತು ನುಡಿದ ಪಾಣಿಪಾತ್ರನಾದ ಆ ಯಜ್ಞೇಶ್ವರನ ಮಾತನ್ನು ಕೇಳಿ ಬಾಲಿಕೆಯಾದ ಗಿರಿಜೆಯು ಸುರತಕ್ರೀಡೆಯನ್ನು ಬಿಟ್ಟೆದ್ದು ತಾನೇ ಆತನಿಗೆ ಭಿಕ್ಷೆಯನ್ನು ನೀಡಲು ಮೊದಲುಮಾಡಿದಳು. ಆಗ ಸುರತಸಮಾರಂಭವು ತಪ್ಪಿದುದರಿಂದ ಶಿವನು ಬಹಳವಾಗಿ ಕನಲಿಹೋದನು.

೪೦. ಕೂಡಲೇ ಆ ರುದ್ರನು ಅಗ್ನಿಯನ್ನು ವಧಿಸಲೋಸುಗ ತ್ರಿಶೂಲ ವನ್ನೆತ್ತಿಹಿಡಿದು ಮಹಾ ಭೈರವಾಕಾರವನ್ನು ತಾಳಿರಲು ಗಿರಿಜೆಯು ಆತನನ್ನಾ ವಧೆಯಿಂದ ತಡೆದಳು. ಅಲ್ಲದೆ ಯಜ್ಞೇಶ್ವರನಿಗೆ ಬಾಯಿಮಾತಿನಿಂದಲೇ ಭಿಕ್ಷೆಯನ್ನು ನೀಡಿದಳು.

೪೧-೪೩. ತರುವಾಯ ಆ ಯಜ್ಞೇಶ್ವರನು ಪ್ರತ್ಯಕ್ಷವಾಗಿಯೇ ಆ ರೇತೋ ಭಿಕ್ಷವನ್ನು ತೆಗೆದುಕೊಂಡನು. ಆಗಲಾ ಗಿರಿಜಾದೇವಿಯು ಕೋಪಗೊಂಡು

ರೇ ಭಿಕ್ಷೋ ಭವಿತಾ ಶಾಪಾತ್ಸರ್ವ ಭಕ್ಷೋ ಮಮಾಶು ವೈ ।
ಅನೇನ ರೇತಸಾ ಸದ್ಯಃ ಪೀಡಾಂ ಪ್ರಾಪ್ಸ್ಯಸಿ ಸರ್ವತಃ ॥ ೪೨ ॥
ಇತ್ಯುಕ್ತೋ ಭಕ್ಷಯಿತ್ವಾಗ್ನೀ ರೇತ ಈಶಸ್ಯ ಹವ್ಯವಾಟ್ ।
ಯತ್ರ ದೇವಾಃ ಸ್ಥಿತಾಃ ಸರ್ವೇ ಬ್ರಹ್ಮಾದ್ಯಾಶ್ಚೈವ ಸರ್ವಶಃ ॥ ೪೩ ॥
ಆಗತ್ಯಾಕಥಯತ್ಸರ್ವಂ ತದ್ರೇತೋ ಭಕ್ಷಣಾದಿಕಂ ।
ಸರ್ವೇ ಸಗರ್ಭಾಹ್ಯಭವನ್ನಿಂದ್ರಾದ್ಯಾ ದೇವತಾಗಣಾಃ ॥ ೪೪ ॥
ಅಗ್ನೇರ್ಯಥಾ ಹವಿಶ್ಚೈವ ಸರ್ವೇಷಾಮುಪತಿಷ್ಠತಿ ।
ಅಗ್ನೇರ್ಮುಖೋಭವೇಸ್ತೈವ ರೇತಸಾ ತೇ ಸುರೇಶ್ವರಾಃ ॥ ೪೫ ॥
ಸಗರ್ಭಾ ಹ್ಯಭವನ್ ಸರ್ವೇ ಚಿಂತಯಾ ಚ ಪ್ರಪೀಡಿತಾಃ ।
ವಿಷ್ಣುಂ ಶರಣಮಾಜಗ್ಮುರ್ದೇವದೇವೇಶ್ವರಂ ಪ್ರಭುಂ ॥ ೪೬ ॥

ದೇವಾ ಊಚುಃ:—

ತ್ವಂ ತ್ರಾತಾ ಸರ್ವದೇವಾನಾಂ ಲೋಕಾನಾಂ ಪ್ರಭುರೇವಚ ।
ತಸ್ಮಾದ್ರಕ್ಷಾ ವಿಧಾತವ್ಯಾ ಶರಣಾಗತವತ್ಸಲ ॥ ೪೭ ॥
ವಯಂ ಸರ್ವೇ ಮರ್ತುಕಾಮಾ ರೇತಸಾಽನೇನ ಪೀಡಿತಾಃ ।
ಅಸುರೇಭ್ಯಃ ಪರಿತ್ರಸ್ತಾ ವಯಂ ಸರ್ವೇ ದಿವೌಕಸಃ
ಶರಣಂ ಶಂಕರಂ ಯಾತಾಃ ಪರಿತ್ರಾತುಂ ಕೃತೋದ್ವಹಂ । ॥ ೪೮ ॥

---

ಅವನನ್ನು, "ಎಲೆವೋ ಭಿಕ್ಷುಕನೇ! ನೀನು ನನ್ನ ಶಾಪದಿಂದ ಸರ್ವಭಕ್ಷಕನಾಗುವೆಯಲ್ಲದೆ ಈ ರೇತಸ್ಸಿನಿಂದ ಎಲ್ಲೆಡೆಗಳಲ್ಲಿಯೂ ಪೀಡೆಯನ್ನೂ ಪಡೆಯುತ್ತೀಯೆ" ಎಂದು ಶಪಿಸಿದಳು.

೪೩–೪೪. ಪಾರ್ವತಿಯು ಈ ರೀತಿ ಶಪಿಸಿದ ಬಳಿಕಲೂ ಹವ್ಯವಾಹನನಾದ ಆ ಅಗ್ನಿಯು ಪರಶಿವನ ವೀರ್ಯವನ್ನು ಪಾನಮಾಡಿ ಅಲ್ಲಿಂದ ಹೊರಟು ಬ್ರಹ್ಮಾದಿ ದೇವತೆಗಳೆಲ್ಲರೂ ಇದ್ದ ಸ್ಥಳಕ್ಕೈತಂದು ಅವರಿಗೆ ತಾನೆಸಗಿದ ರೇತೋಭಕ್ಷಣಾದಿ ಕಾರ್ಯವೆಲ್ಲವನ್ನೂ ಹೇಳಿದನು. ಆ ಕೂಡಲೇ ಇಂದ್ರಾದಿ ದೇವತಾ ಸಮೂಹವೆಲ್ಲವೂ ಗರ್ಭವಂತರಾದರು.

೪೫–೪೬. ದೇವತೆಗಳೆಲ್ಲರಿಗೂ ಸೇರಬೇಕಾದ ಹವಿಸ್ಸೆಲ್ಲವೂ ಅಗ್ನಿಮುಖದಿಂದಲೇ ಸೇರುತ್ತದೆಯಾದಕಾರಣ ಅಲ್ಲಿದ್ದ ಸುರೇಶ್ವರರೆಲ್ಲರೂ ಅವನನ್ನು ಕಂಡೊಡನೆಯೇ ಗರ್ಭವಂತರಾಗಿ ದುಃಖಪೀಡಿತರಾಗಿ ಒಡನೆಯೇ ದೇವದೇವೇಶ್ವರನೂ, ಸರ್ವಪ್ರಭುವೂ ಆದ ಶ್ರೀಮನ್ಮಹಾವಿಷ್ಣುವನ್ನು ಶರಣು ಹೊಕ್ಕರು.

೪೭–೪೮. ದೇವತೆಗಳು ಹೇಳುತ್ತಾರೆ:—ಎಲೈ ಪರಮಾತ್ಮನೇ! ಸಮಸ್ತ ದೇವತೆಗಳನ್ನೂ, ಸಮಸ್ತ ಲೋಕಗಳನ್ನೂ ಸಂರಕ್ಷಿಸುವ ಸ್ವಾಮಿಯು ನೀನೇ

ಯದಾ ಪುತ್ರೋ ಹಿ ರುದ್ರಸ್ಯ ಭವಿಷ್ಯತಿ ತದಾವಯಂ ।
ಸುಖಿನಃ ಸ್ಯಾಮ ಸರ್ವೇ ವೈ ನಿರ್ಭಯಾಶ್ಚ ತ್ರಿವಿಷ್ಟಪೇ ॥ ೪೯ ॥
ಏವಂ ವಿಷ್ಟಭ್ಯಮಾನಾನಾಂ ಸರ್ವೇಷಾಂ ಭಯಮಾಗತಂ ।
ಅನೇನ ರೇತಸಾ ವಿಷ್ಣೋ ಜೀವಿತುಂ ಶಕ್ಯತೇ ಕಥಂ ॥ ೫೦ ॥
ತ್ರಿವರ್ಗೋ ಹಿ ಯಥಾ ಪುಂಸಾಂ ಕೃತೋ ಹಿ ಸುಪರಿಷ್ಕೃತಃ ।
ವಿಪರೀತೋ ಭವತ್ಯೇವ ವಿನಾ ದೈವೇನ ನಾನ್ಯಥಾ ॥ ೫೧ ॥
ತಸ್ಮಾತ್ತದ್ದೈವ ಬಲಂ ಮತ್ವಾ ಸರ್ವೇಷಾಮಪಿ ದೇಹಿನಾಂ ।
ಕಾರ್ಯಾಕಾರ್ಯವ್ಯವಸ್ಥಾಯಾಂ ಸರ್ವೇ ಮನ್ಯಾಮಹೇ ವಯಂ ॥ ೫೨ ॥
ತಥಾ ನಿಶಮ್ಯ ದೇವಾನಾಂ ಪರೇಶಃ ಪರಿದೇವನಂ ।
ಉವಾಚ ಪ್ರಹಸನ್ವಾಕ್ಯಂ ದೇವಾನಾಂ ದೇವತಾರಿಹಾ ॥ ೫೩ ॥
ಸ್ತೂಯತಾಂ ವೈ ಮಹಾದೇವೋ ಮಹೇಶಃ ಕಾರ್ಯಗೌರವಾತ್ ॥ ೫೪ ॥
ತಥೇತಿ ಗತ್ವಾ ತೇ ಸರ್ವೇ ದೇವಾ ವಿಷ್ಣು ಪುರೋಗಮಾಃ ।
ತಥಾ ಬ್ರಹ್ಮಾದಯಃ ಸರ್ವೇ ಈಡಿರೇ ಋಷಯೋ ಹರಂ ॥ ೫೫ ॥

---

ಆಗಿರುವೆಯಾದುದರಿಂದ, ಶರಣಾಗತವತ್ಸಲನಾದ ನೀನು, ನಿನ್ನನ್ನೇ ಶರಣು ಹೊಕ್ಕಿರುವ ನಮ್ಮನ್ನು ಕಾಪಾಡಬೇಕು! ಓ ಪ್ರಭುವೇ! ನಾವೆಲ್ಲರೂ ಪ್ರಕೃತದಲ್ಲಿ ಈ (ಶಿವನ) ರೇತಸ್ಸಿನಿಂದ ಪೀಡಿತರಾಗಿ ಸಾಯುಬಯಸಿರುತ್ತೇವೆ!! ಎಲೈ ಸ್ವಾಮಿಯೇ ದಿವೌಕಸರಾದ ನಾವೆಲ್ಲರೂ ಅಸುರರ ಭಯದಿಂದ ಪೀಡಿತರಾಗಿ ಸಂರಕ್ಷಣೆಗಾಗಿ ಶಂಕರನಲ್ಲಿ ಹೋದೆವು.

೪೯–೫೧. ಆ ದೇವನು ನಮ್ಮನ್ನು ಕಾಪಾಡಲೋಸುಗ ಗಿರಿಜೆಯನ್ನು ಮದುವೆಯಾದನು. ಆ ರುದ್ರನಿಗೆ ಪುತ್ರನುಂಟಾದೊಡನೆಯೇ ನಾವು ಸ್ವರ್ಗದಲ್ಲಿ ಸುಖವಾಗಿರುತ್ತೇವೆಂದು ನಂಬಿ ನಿರೀಕ್ಷಿಸುತ್ತಿರುವಲ್ಲಿಯೇ ಈ ರೇತಸ್ಸಿನ ಭಯದಿಂದ ಪೀಡಿತರಾದೆವು. ಇನ್ನು ನಾವು ಬದುಕುವುದೆಂತು? ಎಲೈ ಸ್ವಾಮಿಯೇ! ಲೋಕದಲ್ಲಿ ಪುರುಷರಿಗಾಗಿ ಚೆನ್ನಾಗಿ ಪರಿಷ್ಕೃತವಾಗಿ ಸೃಷ್ಟಿಮಾಡಲಾಗಿರುವ ಧರ್ಮಾರ್ಥಕಾಮಗಳು ದೈವ ಬಲವಿಲ್ಲದಿದ್ದಲ್ಲಿ ವಿಪರೀತವಾಗುತ್ತದೆಯಲ್ಲದೆ ಮತ್ತೆ ಬೇರೆಯಾಗುವುದಿಲ್ಲವು.

೫೨. ಆದುದರಿಂದ ಕಾರ್ಯಾಕಾರ್ಯವ್ಯವಸ್ಥೆಯಲ್ಲಿ ಸಮಸ್ತದೇಹಿಗಳಿಗೂ ದೈವಬಲವೆಂತಿರುವುದೆಂಬುದನ್ನು ತಿಳಿದೇ ಮುಂದುವರಿಯಬೇಕೆಂಬುದನ್ನು ನಾವು ಅರಿತುಕೊಂಡಿರುವೆವು. (ಅಂತಹ ದೈವಬಲವೇ ನಮಗೆ ತಪ್ಪಿಹೋಗಿರುವುದರಿಂದ ನಮಗಿಂತಹ ಆಪತ್ತು ಸಂಪ್ರಾಪ್ತವಾಗಿರುವುದು.)

೫೩–೫೫. ಈ ಪ್ರಕಾರವಾದ ಆ ದೇವತೆಗಳ ಅಳುವನ್ನು ಕೇಳಿ, ಪರೇಶನೂ, ಅಸುರಮರ್ದನನೂ ಆದ ಶ್ರೀಮನ್ಮಹಾವಿಷ್ಣುವು ನಗುತ್ತಲೇ ಅವರನ್ನು ಕುರಿತು,

ಓಂ ನಮೋ ಭರ್ಗಾಯ ದೇವಾಯ ನೀಲಕಂಠಾಯ ಮೀಢುಷೇ ।
ತ್ರಿನೇತ್ರಾಯ ತ್ರಿವೇದಾಯ ಲೋಕತ್ರಿತಯಧಾರಿಣೇ ॥ ೫೬ ॥
ತ್ರಿಸ್ವರಾಯ ತ್ರಿಮಾತ್ರಾಯ ತ್ರಿವೇದಾಯ ತ್ರಿಮೂರ್ತಯೇ ।
ತ್ರಿವರ್ಗಾಯ ತ್ರಿಧಾಮಾಯ ತ್ರಿಪದಾಯ ತ್ರಿಶೂಲಿನೇ ।
ತ್ರಾಹಿ ತ್ರಾಹಿ ಮಹಾದೇವ ರೇತಸೋ ಜಗತಃ ಪತೇ ॥ ೫೮ ॥
ಬ್ರಹ್ಮಣಾತು ಸ್ತುತೋ ಯಾವತ್ತಾವದ್ದೇವೋ ವೃಷಧ್ವಜಃ ।
ಪ್ರಾದುರ್ಬಭೂವ ತತ್ರೈವ ಸುರಾಣಾಂ ಕಾರ್ಯಸಿದ್ಧಯೇ ॥ ೫೯ ॥

ದೃಷ್ಟಸ್ತದಾನೀಂ ಜಗದೇಕ ಬಂಧು
ರ್ಮಹಾತ್ಮಭಿರ್ದೇವವರೈಃ ಸುಪೂಜಿತಃ ।
ಸಂಸ್ತೂಯಮಾನೋ ವಿವಿಧೈರ್ವಚೋಭಿಃ
ಪ್ರತ್ಯಗ್ರರೂಪೈಃ ಶ್ರುತಿಸಮ್ಮತೈಶ್ಚ ॥ ೬೦ ॥

---

"ಅಯ್ಯಾ ದೇವತೆಗಳಿರಾ! ನಿಮಗೀಗ ಒದಗಿರುವ ಕಾರ್ಯಗೌರವದಿಂದ ನೀವೆಲ್ಲರೂ ಆ ಮಹೇಶ್ವರನನ್ನು ಈ ಪೀಡಾ ಪರಿಹಾರಕ್ಕಾಗಿ ಸ್ತೋತ್ರಮಾಡಿರಿ" ಎಂದು ಹೇಳಿದನು. ದೇವತೆಗಳೆಲ್ಲರೂ ಅಂತಯೇ ಆಗಲೆಂದು ಶ್ರೀಮನ್ಮಹಾ ದೇವನಿದ್ದೆಡೆಗೈತಂದರು. ಬಳಿಕ ವಿಷ್ಣುವೇ ಮೊದಲಾದ ಆ ದೇವತೆಗಳೂ, ಬ್ರಹ್ಮನೂ, ಸಮಸ್ತ ಋಷಿಗಳೂ ಸಹ ಶ್ರೀಮತ್ಪರಶಿವನನ್ನು ಸ್ತುತಿಸಿದರು.

೫೬–೫೮. "ಎಲೈ ಪ್ರಭುವೇ! ಪ್ರಣವಾಕ್ಷರ ಸ್ವರೂಪನಾಗಿ, ಭರ್ಗ ದೇವನೂ, ನೀಲಕಂಠನೂ, ಮೀಢುರ್ಷನೂ, ಮೂರು ಕಣ್ಣುಗಳುಳ್ಳವನೂ, ಋಗ್ಯಜುಸ್ಸಾಮಗಳೆಂಬ ಮೂರು ವೇದಗಳ ಸ್ವರೂಪನೂ, ಸ್ವರ್ಗ ಮರ್ತ್ಯ ಪಾತಾಳಗಳೆಂಬ ಮೂರು ಲೋಕಗಳನ್ನೂ ಧರಿಸಿರುವವನೂ, ಅಕಾರ, ಉಕಾರ ಮಕಾರಗಳೆಂಬ ತ್ರ್ಯಕ್ಷರಮೂರ್ತಿಯೂ (ತ್ರಿಸ್ವರನೂ), ತ್ರಿಮಾತ್ರನೂ, ತ್ರಿವೇದನೂ, ತ್ರಿಮೂರ್ತಿಸ್ವರೂಪನೂ, ಧರ್ಮಾರ್ಥಕಾಮಗಳೆಂಬ ತ್ರಿವರ್ಗ ಸ್ವರೂಪನೂ, ತ್ರಿಧಾಮನೂ, ತ್ರಿಪದನೂ, ತ್ರಿಶೂಲಿಯೂ ಆದ ಓ ಮಹಾ ದೇವನೇ! ಜಗತ್ಪತಿಯೇ! ಈ ರೇತಸ್ಸಿನಿಂದ ಪೀಡಿತರಾಗಿರುವ ನಮ್ಮನ್ನು ಕಾಪಾಡು, ಕಾಪಾಡು!"

೫೯. ಈ ಪ್ರಕಾರ ಬ್ರಹ್ಮನು ಸ್ತುತಿಸಿದೊಡನೆಯೇ ವೃಷಭಧ್ವಜನಾದ ಶಿವನು ಅಲ್ಲಿಯೇ ದೇವತೆಗಳ ಕಾರ್ಯಸಿದ್ಧಿಗಾಗಿ ಪ್ರತ್ಯಕ್ಷನಾದನು.

೬೦. ಆಗಲಾ ಮಹಾತ್ಮರಾದ ಆ ದೇವತೆಗಳೆಲ್ಲರೂ ಜಗದೇಕಬಂಧು ವಾದ ಆ ಮಹಾದೇವನನ್ನು ಕಂಡು ಆತನನ್ನು ವಿಧಿಪೂರ್ವಕವಾಗಿ ಚೆನ್ನಾಗಿ ಪೂಜಿಸಿ ಬೇರೆಬೇರೆಯಾದವುಗಳೂ, ವೇದ ಸಮ್ಮತಗಳೂ ಆದ ಸ್ತುತಿವಚನ ಗಳಿಂದ ಸ್ತುತಿಸಿದರು.

ಸ್ತುವತಾಂ ಚೈವ ದೇವಾನಾಮುವಾಚ ಪರಮೇಶ್ವರಃ ।
ತ್ರಾಸಂ ಕುರ್ವಂತು ಮಾ ಸರ್ವೇ ರೇತಸಾನೇನ ಪೀಡಿತಾಃ ॥ ೬೧ ॥
ವಮನಂ ವೈ ಭವದ್ಭಿಶ್ಚ ಕಾರ್ಯಮದ್ಯೈವ ಭೋ ಸುರಾಃ ।
ತಥೇತಿ ಮತ್ವಾ ತೇ ಸರ್ವ ಇಂದ್ರಾದ್ಯಾ ದೇವತಾ ಗಣಾಃ ।
ವೇಮುಃ ಸರ್ವೇ ತದಾ ವಿಪ್ರಾಸ್ತದ್ರೇತಃ ಶಂಕರಸ್ಯ ಚ ॥ ೬೨ ॥
ಏಕಪದ್ಯೇನ ತದ್ರೇತೋ ಮಹಾಪರ್ವತಸನ್ನಿಭಂ ।
ತಪ್ತಚಾಮೀಕರಪ್ರಖ್ಯಂ ಬಭೂವ ಪರಮಾದ್ಭುತಂ ॥ ೬೩ ॥
ಸರ್ವೇ ಚ ಸುಖಿನೋ ಜಾತಾ ಇಂದ್ರಾದ್ಯಾ ದೇವತಾ ಗಣಾಃ ।
ವಿನಾ ಹ್ಯಗ್ನಿಂ ಚ ತೇ ಸರ್ವೇ ಪರಿತುಷ್ಟಾಸ್ತದಾ ಭವನ್ ॥ ೬೪ ॥
ತೇನಾಗ್ನಿನಾಪಿ ಚೋಕ್ತಸ್ತು ಶಂಕರೋ ಲೋಕಶಂಕರಃ ।
ಕಿಂ ಮಯಾದ್ಯ ಮಹಾದೇವ ಕರ್ತವ್ಯಂ ದೇವತಾವರ ॥ ೬೫ ॥
ತದ್ಬ್ರೂಹಿ ಮೇ ಪ್ರಭೋಽದ್ಯ ತ್ವಂ ಯೇನಾಹಂ ಸರ್ವದಾ ಸುಖೀ ।
ಭವಿಷ್ಯಾಮಿ ಚ ಯೇನಾಹಂ ದೇವಾನಾಂ ಹವ್ಯವಾಹಕಃ ॥ ೬೬ ॥

---

೬೧–೬೨. ಅವರೀರೀತಿ ಸ್ತುತಿಸುತ್ತಿರುವಂತೆಯೇ ಆ ಪರಮೇಶ್ವರನು ಅವರನ್ನು ಕುರಿತು, "ಎಲೈ ದೇವತೆಗಳಿರಾ! ಈ ರೇತಸ್ಸಿನಿಂದ ಪೀಡಿತರಾದ ನೀವಾರೂ ಭಯಗೊಳ್ಳಬೇಡಿರಿ. ಈಗಲೇ ನೀವೆಲ್ಲರೂ ಈ ರೇತಸ್ಸನ್ನು ವಮನ ಮಾಡಿರಿ" ಎಂದು ಹೇಳಿದನು. ಆ ಪ್ರಭುವಿನ ಮಾತನ್ನಾಲಿಸಿ ಇಂದ್ರಾದಿ ದೇವತೆಗಳೆಲ್ಲರೂ ಹಾಗೆಯೇ ಆಗಲೆಂದು ಆ ಶಂಕರನ ರೇತಸ್ಸನ್ನು ಅಲ್ಲಿಯೇ ವಮನಮಾಡಿದರು.

೬೩. ಹೀಗೆ ಆ ಸುರೋತ್ತಮರೆಲ್ಲರೂ ಒಟ್ಟಾಗಿ ವಮನಮಾಡಿದ ಆ ಪರಶಿವನ ರೇತಸ್ಸು ದೊಡ್ಡ ಪರ್ವತಕ್ಕೆ ಸಾಟಿಯಾಗಿ ಪುಟಪಾಕಶೋಧಿತವಾದ ಬಂಗಾರದಂತೆ ಹೊಳೆಯುತ್ತ ಪರಮಾದ್ಭುತವಾಗಿ ಶೋಭಿಸಿತು.

೬೪. ಇದಾದ ತರುವಾಯ ಅಗ್ನಿಯನ್ನುಳಿದು ಇಂದ್ರಾದಿ ಸಮಸ್ತ ದೇವತೆಗಳೂ ಆ ರೇತಸ್ಸಿನ ಪೀಡೆಯಿಂದ ಬಿಡುಗಡೆಹೊಂದಿ ಸುಖಿಗಳಾಗಿ ಪರಿತುಷ್ಟರಾದರು.

೬೫–೬೬. ಆ ಸಮಯದಲ್ಲಿ ಯಜ್ಞೇಶ್ವರನೂ ಸಹ ಲೋಕಶಂಕರನಾದ ಶಂಕರನನ್ನು ಕುರಿತು, "ದೇವದೇವೋತ್ತಮನಾದ ಓ ಮಹಾದೇವನೇ! ಪ್ರಭೂ, ದೇವತೆಗಳೆಲ್ಲರಿಗೂ ಹವಿಸ್ಸನ್ನು ಹೊತ್ತು ತರುವ ನಾನು ಯಾವುದರಿಂದ ಸರ್ವಕಾಲದಲ್ಲಿಯೂ ಸುಖಿಯಾಗುವೆನೋ, ಅದಕ್ಕಾಗಿ ನಾನು ಮಾಡತಕ್ಕುದೇನುಂಟೋ ಅದನ್ನು ಅಪ್ಪಣೆ ಕೊಡಿಸುವವನಾಗು" ಎಂದು ಕೇಳಿಕೊಂಡನು.

**ತದೋವಾಚ ಶಿವಃ ಸಾಕ್ಷಾದ್ದೇವಾನಾಮಿಹ ಶೃಣ್ವತಾಂ ।**
**ರೇತೋ ವಿಸೃಜ್ಯತಾಂ ಯೋನೌ ತದಾಗ್ನಿಃ ಪ್ರಹಸನ್ನಿವ ॥ ೬೭ ॥**
**ಉವಾಚ ಶಂಕರಂ ದೇವಂ ಭವತ್ತೇಜೋ ದುರಾಸದಂ ।**
**ಇದಮುಲ್ಬಣವತ್ತೇಜೋ ಧಾರ್ಯತೇ ಪ್ರಾಕೃತೈಃ ಕಥಂ ॥ ೬೮ ॥**
**ತತಃ ಪ್ರೋವಾಚ ಭಗವಾನಗ್ನಿಂ ಪ್ರತಿ ಮಹೇಶ್ವರಃ ।**
**ಮಾಸಿಮಾಸಿ ಪ್ರತಸ್ನಾತಾನಾಂ ದೇಹೇ ತೇಜೋ ವಿಸೃಜ್ಯತಾಂ ॥ ೬೯ ॥**
**ತಥೇತಿ ಮತ್ವಾ ವಚನಂ ಮಹಾಪ್ರಭುಃ**
**ಸ ಜಾತವೇದಾಃ ಪರಮೇಣ ತೇಜಸಾ ।**
**ಸಮುಜ್ಜ್ವಲಂಸ್ತತ್ರ ಮಹಾಪ್ರಭಾವೋ**
**ಬ್ರಾಹ್ಮೇ ಮುಹೂರ್ತೇ ಹಿ ಸ ಚೋಪವಿಷ್ಟಃ ॥ ೭೦ ॥**
**ತದಾ ಪ್ರಾತಃ ಸಮುತ್ಥಾಯ ಪ್ರಾತಃಸ್ನಾನಪರಾಃ ಸ್ತ್ರಿಯಃ ।**
**ಯಯುಸ್ತದಾ ಋಷೀಣಾಂ ಚ ಸತ್ಯಸ್ತಾ ಜಾತವೇದಸಂ ॥ ೭೧ ॥**
**ದೃಷ್ಟ್ವಾ ಪ್ರಜ್ವಲಿತಂ ತತ್ರ ಸರ್ವಾಸ್ತಾಃ ಶೀತಕರ್ಷಿತಾಃ ।**
**ತಪ್ತುಕಾಮಾಸ್ತದಾ ಸರ್ವಾ ಹ್ಯರುಂಧತ್ಯಾ ನಿವಾರಿತಾಃ ॥ ೭೨ ॥**

---

೬೭–೬೮. ಆಗಲಾ ಸಾಕ್ಷಾತ್ಪರಮೇಶ್ವರನು ಎಲ್ಲ ದೇವತೆಗಳೂ ಕೇಳುವಂತೆಯೇ ಆ ಅಗ್ನಿಯನ್ನು ಕುರಿತು, "ಎಲೈ ಅಗ್ನಿಯೇ! ನೀನೀ ರೇತಸ್ಸನ್ನು (ಯಾವುದಾದರೊಂದು) ಯೋನಿಯಲ್ಲಿ ವಿಸರ್ಜನೆ ಮಾಡಿಬಿಡು" ಎಂದು ಹೇಳಿದನು. ಆಗಲಾ ಯಜ್ಞೇಶ್ವರನು ನಸುನಗುತ್ತ ಸ್ವಾಮಿಯಾದ ಆ ಶಂಕರನನ್ನು ಕುರಿತು, "ಪ್ರಭುವೇ! ಈ ನಿನ್ನ ತೇಜಸ್ಸು ಯಾರಿಂದಲೂ ತಾಳಲು ಸಾಧ್ಯವಾದುದಲ್ಲವು. ಪ್ರಜ್ವಲಿಸುತ್ತಿರುವ ಮಹಾವಿಷದಂತಿರುವ ಈ ತೇಜಸ್ಸನ್ನು ಪ್ರಾಕೃತ (ಸ್ತ್ರೀಯ)ರು ಧರಿಸುವುದೆಂತು?" ಎಂದನು.

೬೯. ಆಗಲಾ ಭಗವಾನ್ ಮಹೇಶ್ವರನು ಅಗ್ನಿಯನ್ನು ಕುರಿತು, "ಅಯ್ಯಾ ಯಜ್ಞೇಶ್ವರನೇ! ನೀನೀ ರೇತಸ್ಸನ್ನು ತಿಂಗಳು ತಿಂಗಳಿಗೂ ಋತುವಾಗುವವರ ದೇಹದಲ್ಲಿ ವಿಸರ್ಜಿಸು" ಎಂದನು.

೭೦. ಆಗಲಾ ಮಹಾಪ್ರಭಾವಶಾಲಿಯೂ, ಮಹಾತೇಜನೂ ಆದ ಜಾತವೇದನು ಅಂತೇ ಆಗಲೆಂದು ಹೇಳಿ ಆ ಪರಶಿವನ ಪರಮ ತೇಜಸ್ಸಮನ್ವಿತನಾಗಿಯೇ ಪ್ರಜ್ವಲಿಸುತ್ತ ಬ್ರಾಹ್ಮೀ ಮುಹೂರ್ತ ಸಮಯದಲ್ಲಿ ಅಲ್ಲಿಯೇ ಕುಳಿತುಕೊಂಡನು.

೭೧–೭೨. ಆಗ ಸ್ತ್ರೀಯರೂ, ಋಷಿಸತಿಯರೂ ಆ ಸಮಯಕ್ಕೆದ್ದು ಪ್ರಾತಃಸ್ನಾನಮಾಡಲೋಸುಗ ನಿದ್ರೆಯಿಂದೆಚ್ಚತ್ತು ಆ ಜಾತವೇದನ ಬಳಿಗೆ ಬಂದರು. ಆ ಸಮಯದಲ್ಲಿ ಚಳಿಯಿಂದ (ನಡುಗುತ್ತಲಿದ್ದ) ಅವರೆಲ್ಲರೂ

ತಯಾ ನಿವಾರಿತಾಶ್ಚಾಪಿ ತಾಸ್ತೇಪುಃ ಕೃತ್ತಿಕಾಃ ಸ್ವಯಂ ।
ಯಾವತ್ತೇಪುಶ್ಚ ತಾಃ ಸರ್ವಾ ರೇತಸಃ ಪರಮಾಣವಃ ।
ವಿವಿಶೂ ರೋಮಕೂಪೇಷು ತಾಸಾಂ ತತ್ರೈವ ಸತ್ವರಂ ॥ ೭೩ ॥
ನೀರೇತೋಽಗ್ನಿಸ್ತದಾ ಜಾತೋ ವಿಶ್ರಾಂತಃ ಸ್ವಯಮೇವಹಿ ॥ ೭೪ ॥
ತತಸ್ತಾ ಋಷಿಭಾರ್ಯಾ ಹಿ ಯಯುಃ ಸ್ವಭವನಂ ಪ್ರತಿ ।
ಋಷಿಭಿಸ್ತು ತದಾ ಶಪ್ತಾಃ ಕೃತ್ತಿಕಾಃ ಖೇಚರಾಭವನ್ ॥ ೭೫ ॥
ತದಾನೀಮೇವ ತಾಃ ಸರ್ವಾ ವ್ಯಭಿಚಾರೇಣ ದುಃಖಿತಾಃ ।
ತತ್ಸಸರ್ಜುಸ್ತದಾ ರೇತಃ ಪೃಷ್ಠೇ ಹಿಮವತೋ ಗಿರೇಃ ॥ ೭೬ ॥
ಏಕಪದ್ಯೇನ ತದ್ರೇತಸ್ತಪ್ತಚಾಮೀಕರಪ್ರಭಂ ।
ಗಂಗಾಯಾಂಚ ತದಾಕ್ಷಿಪ್ತಂ ಕೀಚಕೈಃ ಪರಿವೇಷ್ಟಿತಂ ॥ ೭೭ ॥

---

ಅಲ್ಲಿಯೇ ಪ್ರಜ್ವಲಿಸುತ್ತಿದ್ದ ಆ ಅಗ್ನಿಯನ್ನು ಕಂಡು ಮೈಕಾಸಿಕೊಳ್ಳಬಯಸಿದರು. ಆಗ ವಸಿಷ್ಠಮುನಿಯ ಪತ್ನಿಯಾದ ಅರುಂಧತೀದೇವಿಯು (ತನ್ನ ಪಾತಿವ್ರತ್ಯ ಮಹಿಮೆಯಿಂದ ಆ ಅಗ್ನಿಯ ಆಗಿನ ಸ್ವರೂಪವನ್ನು ಕಂಡುಕೊಂಡವಳಾಗಿ) ಅವರೆಲ್ಲರನ್ನೂ "ಎಲೌ ಭಾಮಿನಿಯರೇ! ನೀವೀ ಅಗ್ನಿಯಲ್ಲಿ ಮೈಕಾಸಿಕೊಳ್ಳಬೇಡಿರಿ" ಎಂದು ಹೇಳಿ ತಡೆದಳು.

೭೩. ಆದರೂ ಆಕೆಯ ಮಾತನ್ನು ಲಕ್ಷ್ಯಕ್ಕೆ ತಾರದೆ ಷಟ್ಕೃತ್ತಿಕೆಯರು ಮಾತ್ರ ತಾವಾಗಿಯೇ ಆ ಬೆಂಕಿಯಲ್ಲಿ ಮೈಕಾಸಿಕೊಂಡರು. ಅವರು ಆ ರೀತಿ ಮೈ ಕಾಸಿಕೊಳ್ಳುತ್ತಿರುವಷ್ಟರಲ್ಲಿಯೇ ಶಿವನ ರೇತಸ್ಸಿನ ಪರಮಾಣುಗಳೆಲ್ಲವೂ ಅವರ ರೋಮಕೂಪಗಳ ಮೂಲಕ ಬಹುಬೇಗನೆ ಅವರ ಮೈಯನ್ನು ಹೊಕ್ಕವು.

೭೪. ಆಗಲಾ ಯಜ್ಞೇಶ್ವರನಾದರೋ ರೇತೋರಹಿತನಾಗಿ ವಿಶ್ರಾಂತಿಯನ್ನು ಪಡೆದನು.

೭೫. ಅಯ್ಯಾ ಋಷಿಗಳಿರಾ! ತರುವಾಯ ಆ ಋಷಿಭಾರ್ಯೆಯರೆಲ್ಲರೂ (ರೇತಸ್ಸಿನ ಪರಮಾಣುಗಳಿಂದ ಕೂಡಿದವರಾಗಿಯೇ) ತಮ್ಮ ತಮ್ಮ ಮನೆಗಳಿಗೆ ಹೋದರು. ಆಗ ಋಷಿಗಳೆಲ್ಲರೂ ಆ ಷಟ್ಕೃತ್ತಿಕೆಯರನ್ನು ಶಪಿಸಿದರು. ಒಡನೆಯೇ ಎಲ್ಲರೂ ಗಗನ ಸಂಚಾರಿಗಳಾದರು.

೭೬–೭೭. ಆ ಸಮಯದಲ್ಲಿಯೇ ಮಹಾ ಪತಿವ್ರತೆಯರಾದ ಅವರೆಲ್ಲರೂ, ವ್ಯಭಿಚಾರದೋಷವು ತಮಗೆ ಬಂದುದಕ್ಕಾಗಿ ದುಃಖಿತರಾಗಿ ಆ ಶಿವರೇತಸ್ಸನ್ನು ಹಿಮವತ್ಪರ್ವತದ ತಪ್ಪಲಿನಲ್ಲಿ ತೊರೆದರು. ಹೀಗೆ ಆ ಕೃತ್ತಿಕೆಯರು ಏಕಕಾಲದಲ್ಲಿಯೇ ಒಟ್ಟಾಗಿ ವಿಸರ್ಜಿಸಿದ ಆ ರೇತಸ್ಸಾದರೋ ಪುಟಪಾಕಶೋಧಿತವಾದ ಬಂಗಾರದ ಕಾಂತಿಯನ್ನು ತಳೆದು ಬೆಳಗುತ್ತಿರಲು ಅವರು ಅದನ್ನು ಗಂಗಾನದಿಯಲ್ಲಿ ಬಿಸುಟರು. ಅದು ಕೊಳಲ ಬಿದಿರಿನ ಪೊದರಿನಿಂದ ಸುತ್ತುವರೆಯಲ್ಪಟ್ಟಿತು.

**ಷಣ್ಮುಖಂ ಬಾಲಕಂ ಜ್ಞಾತ್ವಾ ಸರ್ವೇ ದೇವಾ ಮುದಾನ್ವಿತಾಃ ।**
**ಗರ್ಗೇಣೋಕ್ತಾಸ್ತದಂತೇ ವೈ ಸುಖೇನ ಹ್ರಿಯತಾಮಿತಿ ॥ ೭೮ ॥**
**ಶಂಭೋಃ ಪುತ್ರಪ್ರಸಾದೇನ ಸರ್ವಂ ಭವತಿ ಶಾಶ್ವತಃ ।**
**ಗಂಗಾಯಾಃ ಪುಲಿನೇ ಜಾತಃ ಕಾರ್ತಿಕೇಯೋ ಮಹಾಬಲಃ ॥ ೭೯ ॥**
**ಉಪವಿಷ್ಟೋಽಥ ಗಾಂಗೇಯೋ ಹ್ಯಹೋರಾತ್ರೋಷಿತಸ್ತದಾ ।**
**ಶಾಖೋ ವಿಶಾಖೋಽತಿ ಬಲಃ ಷಣ್ಮುಖೋಽಸೌ ಮಹಾಬಲಃ ॥ ೮೦ ॥**
**ಜಾತೋ ಯದಾಥ ಗಂಗಾಯಾಂ ಷಣ್ಮುಖಃ ಶಂಕರಾತ್ಮಜಃ ।**
**ತದಾನೀಮೇವ ಗಿರಿಜಾ ಸಂಜಾತಾ ಪ್ರಸ್ನುತಸ್ತನೀ ॥ ೮೧ ॥**
**ಶಿವಂ ನಿರೀಕ್ಷ್ಯ ಸಾ ಪ್ರಾಹ ಹೇ ಶಂಭೋ ಪ್ರಸ್ನವೋ ಮಹಾನ್ ।**
**ಸಂಜಾತೋ ಮೇ ಮಹಾದೇವ ಕಿಮರ್ಥಸ್ತನ್ನಿರೀಕ್ಷ್ಯತಾಂ ।**
**ಸರ್ವಜ್ಞೋಽಪಿ ಮಹಾದೇವೋ ಹ್ಯಬ್ರವೀತ್ತ್ವಮಥಾಜ್ಞವತ್ ॥ ೮೨ ॥**
**ನಾರದಸ್ತತ್ರಚಾಗತ್ಯ ಪ್ರೋಕ್ತವಾನ್ ಜನ್ಮ ತಸ್ಯ ತತ್ ।**
**ಶಿವಾಯ ಚ ಶಿವಾಯೈ ಚ ಪುತ್ರೋ ಜಾತೋ ಹಿ ಸುಂದರಃ ॥ ೮೩ ॥**

---

೭೮–೮೦. ಆಗಲೇ ದೇವತೆಗಳೆಲ್ಲರೂ ಅದು ಶ್ರೀ ಷಣ್ಮುಖ ಬಾಲಕನೆಂದು ಬಗೆದು ಸಂತೋಷಭರಿತರಾದರು. ಆ ಸಮಯದಲ್ಲಿ ಗರ್ಗಾಚಾರ್ಯನೂ ಸಹ, "ಅಯ್ಯಾ ದೇವತೆಗಳಿರಾ! ಇನ್ನು ನಿಮ್ಮ ದುಃಖವನ್ನು ದೂರಮಾಡಿರಿ. ಶಂಭು ಪುತ್ರನಾದ ಈ ಷಣ್ಮುಖನ ಪ್ರಸಾದದಿಂದ ಸಮಸ್ತವೂ ಶಾಶ್ವತವಾಗುತ್ತದೆ" ಎಂದು ಹೇಳಿದನು. ಎಲೈ ವಿಪ್ರರಿರಾ! ಹೀಗೆ ಮಹಾ ಬಲಾಢ್ಯನಾದ ಕಾರ್ತಿಕೇಯ ಸ್ವಾಮಿಯು ಗಂಗಾನದಿಯ ಮಳಲಿನಲ್ಲಿ ಜನಿಸಿದನು. ಶಾಖನೂ, ವಿಶಾಖನೂ, ಅತಿಬಲ ಮಹಾಬಲನೂ, ಗಂಗಾನದಿಯಲ್ಲಿ ಜನಿಸಿದವನೂ ಆದ ಶ್ರೀ ಷಣ್ಮುಖ ಸ್ವಾಮಿಯು ಆ ಪ್ರದೇಶದಲ್ಲಿಯೇ ಹಗಲಿರುಳೂ ವಾಸಮಾಡಿದನು.

೮೧. ಎಲೈ ಶೌನಕಾದಿ ಮುನಿಗಳಿರಾ! ಅತ್ತ ಗಂಗಾನದಿಯಲ್ಲಿ ಶಂಕರಾತ್ಮಜನಾದ ಷಣ್ಮುಖನು ಜನಿಸಿದೊಡನೆಯೇ ಇತ್ತ ಶಿವಸತಿಯಾದ ಗಿರಿಜಾದೇವಿಗೆ ಸ್ತನ್ಯವುಕ್ಕಿ ಬಂದಿತು.

೮೨. ಆಗಲಾಕೆಯು ತನ್ನ ಪತಿದೇವನಾದ ಶಿವನನ್ನು ನೋಡಿ, "ಎಲೈ ಶಂಭುವೇ! ನನಗೇಕೋ ಬಹಳವಾಗಿ ಸ್ತನ್ಯವುಕ್ಕಿಬರುತ್ತಿರುವುದು. ಇದೇತಕ್ಕೆಂಬುದನ್ನು ನೋಡಿ ಹೇಳುವವನಾಗು" ಎಂದು ಕೇಳಿದಳು. ಆಗ ಮಹಾದೇವನು ಸರ್ವಜ್ಞನಾಗಿ ಸಮಸ್ತವನ್ನೂ ಬಲ್ಲವನಾದರೂ ಸಹ ಏನೂ ತಿಳಿಯದವನಂತೆ "ಗಿರಿಜೆ! ನನಗೇನೂ ಗೊತ್ತಾಗಲಿಲ್ಲವಲ್ಲ!" ಎಂದು ಹೇಳಿದನು.

೮೩. ಆ ಸಮಯದಲ್ಲಿ ದೇವಮುನಿಯಾದ ನಾರದನಲ್ಲಿಗೈತಂದು ಆ ಪಾರ್ವತೀ ಪರಮೇಶ್ವರರೀರ್ವರಿಗೂ ಬಹು ಸುಂದರನಾದ ಪುತ್ರನು ಜನಿಸಿರುವ ವಿಚಾರವನ್ನು ಅರಿಕೆಮಾಡಿದನು.

ತದಾಕರ್ಣ್ಯ ವಚೋ ವಿಪ್ರಾ ಹರ್ಷನಿರ್ಭರಮಾನಸಾಃ ।
ಬಭೂವುಃ ಪ್ರಮಥಾಃ ಸರ್ವೇ ಗಂಧರ್ವಾ ಗೀತತತ್ಪರಾಃ ॥ ೮೪ ॥
ಅನೇಕಾಭಿಃ ಪತಾಕಾಭಿಶ್ಚೈಲ ಪಲ್ಲವ ತೋರಣೈಃ ।
ತಥಾ ವಿಮಾನೈರ್ಬಹುಭಿರ್ಬಭೌ ಪ್ರಜ್ವಲಿತೋ ಮಹಾನ್ ।
ಪರ್ವತಃ ಪುತ್ರಜನನಾಚ್ಛಂಕರಸ್ಯ ಮಹಾತ್ಮನಃ ॥ ೮೫ ॥
ತದಾ ಸರ್ವೇ ಸುರಗಣಾ ಋಷಯಃ ಸಿದ್ಧಚಾರಣಾಃ ।
ರಕ್ಷೋ ಗಂಧರ್ವಯಕ್ಷಾಶ್ಚ ಅಪ್ಸರೋಗಣಸೇವಿತಾಃ ॥ ೮೬ ॥
ಏಕಪದ್ಯೇನ ತೇ ಸರ್ವೇ ಸಹಿತಾಃ ಶಂಕರೇಣ ತು ।
ದ್ರಷ್ಟುಂ ಗಾಂಗೇಯಮಧಿಕಂ ಜಗ್ಮುಃ ಪುಲಿನಸಂಸ್ಥಿತಂ ॥ ೮೭ ॥
ತತೋ ವೃಷಭಮಾರುಹ್ಯ ಯಯೌ ಗಿರಿಜಯಾ ಸಹ ।
ಅನ್ಯೈಃ ಸಮೇತೋ ಭಗವಾನ್ ಸುರೈರಿಂದ್ರಾದಿಭಿಸ್ತಥಾ ॥ ೮೮ ॥
ತದಾ ಶಂಖಾಶ್ಚ ಭೇರ್ಯಶ್ಚ ನೇದುಸ್ತೂರ್ಯಾಣ್ಯನೇಕಶಃ ॥ ೮೯ ॥
ತದಾನೀಮೇವ ಸರ್ವೇಶಂ ವೀರಭದ್ರಾದಯೋ ಗಣಾಃ ।
ಅನ್ವಯುಃ ಕೇಲಿಸಂರಬ್ಧಾಃ ನಾನಾವಾದಿತ್ರವಾದಕಾಃ ।
ವಾದಯಂತಶ್ಚ ವಾದ್ಯಾನಿ ತತಾನಿ ವಿತತಾನಿ ಚ ॥ ೯೦ ॥

---

೮೪. ಆ ಮಾತನ್ನು ಕೇಳಿ ಪ್ರಮಥಗಣಗಳೆಲ್ಲರೂ ಪರಮಾನಂದಭರಿತರಾದರು. ಗಂಧರ್ವರೆಲ್ಲರೂ ಗಾನಮಾಡಲಾರಂಭಿಸಿದರು.

೮೫. ಇತ್ತ, ಮಹಾತ್ಮನಾದ ಶಂಕರನಿಗೆ ಪುತ್ರಜನನವಾದ ಪ್ರಯುಕ್ತ ಪರ್ವತರಾಜನಾದ ಹಿಮವಂತನು ಬಹು ಸಂತುಷ್ಟನಾಗಿ ತನ್ನ ಭವನವೆಲ್ಲವನ್ನೂ ಅಸಂಖ್ಯಾಕವಾದ ಪತಾಕೆಗಳಿಂದಲೂ, ಏಲಕ್ಕಿಯ ಚಿಗುರುಬಳ್ಳಿಗಳ ತೋರಣಗಳಿಂದಲೂ, ಅಂತೆಯೇ ಅನೇಕ ವಿಮಾನಗಳಿಂದಲೂ ಅಲಂಕರಿಸಿದನು. ಅದರಿಂದ ಒಟ್ಟು ಪರ್ವತವೇ ಬಹು ಶೃಂಗಾರವಾಗಿ ಬೆಳಗುತ್ತಲಿದ್ದಿತು.

೮೬-೮೭. ತರುವಾಯ ಸಮಸ್ತ ಸುರಗಣಗಳೂ, ಋಷಿಗಳೂ, ಸಿದ್ಧಚಾರಣರೂ, ರಾಕ್ಷಸರೂ, ಗಂಧರ್ವರೂ, ಯಕ್ಷರೂ, ಅಪ್ಸರೋಗಣಗಳೂ ಗುಂಪುಗೂಡಿ ಶಂಕರನೊಡನೆಯೇ ಆ ಮಳಲಿನಲ್ಲಿ ಮಲಗಿರುವ ಗಾಂಗೇಯನಾದ ಷಣ್ಮುಖಸ್ವಾಮಿಯನ್ನು ಸಂದರ್ಶಿಸಲು ಹೊರಟರು.

೮೮. ಆಗಲಾ ಪರಮೇಶ್ವರನಾದರೋ ಗಿರಿಜಾಂಬಿಕೆಯೊಡನೆ ವೃಷಭಾರೂಢನಾಗಿ ಇತರರಾದ ಇಂದ್ರಾದಿ ಸಮಸ್ತ ದೇವತೆಗಳಿಂದಲೂ ಪರಿವೃತನಾಗಿ ಪುತ್ರನನ್ನು ಕಾಣಲು ಹೊರಟನು.

೮೯-೯೦. ಆ ಸಮಯದಲ್ಲಿಯೇ ಅಸಂಖ್ಯಾಕವಾದ ಶಂಖಗಳೂ, ಭೇರಿಗಳೂ, ತುತ್ತೂರಿಗಳೂ ಮೊಳಗಿದವು. ಆಗ ವೀರಭದ್ರನೇ ಮೊದಲಾದವರ

ಕೇಚಿನ್ನೃತ್ಯಪರಾಸ್ತತ್ರ ಗಾಯಕಾಶ್ಚ ತಥಾಪರೇ ।
ಸ್ತಾವಕಾಃ ಸ್ತೂಯಮಾನಾಶ್ಚ ಚಕ್ರುಸ್ತೇ ಗುಣಕೀರ್ತನಂ ॥ ೯೧ ॥
ಏವಂ ವಿಧಾಸ್ತೇ ಸುರಸಿದ್ಧಯಕ್ಷಾ
ಗಂಧರ್ವ ವಿದ್ಯಾಧರ ಪನ್ನಗಾಹ್ಯಮೀ ।
ಶಿವೇನ ಸಾರ್ಧಂ ಪರಿಹೃಷ್ಟಚಿತ್ತಾ
ದ್ರಷ್ಟುಂ ಯಯುಸ್ತಂ ವರದಂ ಚ ಶಾಂಕರಿಂ ॥ ೯೨ ॥
ಯಾವತ್ಸಮೀಕ್ಷ್ಯಯಾಮಾಸುರ್ಗಾಂಗೇಯಂ ಶಂಕರೋಪಮಂ ।
ದದೃಶುಸ್ತೇ ಮಹತ್ತೇಜೋ ವ್ಯಾಪ್ತಮಾಸೀಜ್ಜಗತ್ರಯಂ ॥ ೯೩ ॥
ತತ್ತೇಜಸಾವೃತಂ ಬಾಲಂ ತಪ್ತಚಾಮೀಕರಪ್ರಭಂ ।
ಸುಮುಖಂ ಸುಶ್ರಿಯಾ ಯುಕ್ತಂ ಸುನಸಂ ಸುಸ್ಮಿತೇಕ್ಷಣಂ ॥ ೯೪ ॥
ಚಾರುಪ್ರಸನ್ನವದನಂ ತಥಾ ಸರ್ವಾಂಗಸುಂದರಂ ।
ತಂ ದೃಷ್ಟ್ವಾ ಮಹದಾಶ್ಚರ್ಯಂ ಗಾಂಗೇಯಂ ಪ್ರಥಿತಾತ್ಮಕಂ ॥ ೯೫ ॥
ವವಂದಿರೇ ತದಾ ಬಾಲಂ ಕುಮಾರಂ ಸೂರ್ಯವರ್ಚಸಂ ।
ಪ್ರಮಥಾಶ್ಚ ಗಣಾಸ್ಸರ್ವೇ ವೀರಭದ್ರಾದಯಸ್ತಥಾ ॥ ೯೬ ॥

---

ಗುಂಪೂ ಸಹ ಅನೇಕ ಆಟಗಳಲ್ಲಿ ತೊಡಗಿದವರಾಗಿ, ಅನೇಕ ಬಗೆಯ ಕಿವಿಗಿಂಪಾದ ಮನೋಹರ ವಾದ್ಯಧ್ವನಿಗಳನ್ನು ಮಾಡುತ್ತ ಆ ಸ್ವಾಮಿಯನ್ನು ಹಿಂಬಾಲಿಸಿದರು.

೯೧. ಹೀಗೆ ಶಂಕರನನ್ನು ಹಿಂಬಾಲಿಸಿ ಬಂದವರಲ್ಲಿ ಕೆಲವರು ನರ್ತನ ಮಾಡುತ್ತಿದ್ದರು. ಕೆಲವರು ಸಂಗೀತವನ್ನು ಹಾಡುತ್ತಲಿದ್ದರು. ಕೆಲವರು ಸ್ತುತಿಪಾಠಕರು ಹೊಗಳಿ ಗುಣಕೀರ್ತನವನ್ನೆಸಗಿದರು.

೯೨. ಈ ಪ್ರಕಾರವಾಗಿ ಆ ಸುರಸಿದ್ಧ ಯಕ್ಷಗಂಧರ್ವ ವಿದ್ಯಾಧರ ಪನ್ನಗರೆಲ್ಲರೂ ಸಂತುಷ್ಟಮಾನಸರಾಗಿ ಶಿವನೊಡನೆಯೇ ಆತನ ಪುತ್ರನಾದ ಷಣ್ಮುಖನನ್ನು ನೋಡಲು ಹೊರಟರು.

೯೩. ಅವರೆಲ್ಲರೂ ಶಂಕರನಿಗೆ ಸಮಾನನಾದ ಆ ಗಾಂಗೇಯನನ್ನು ಕಂಡೊಡನೆಯೇ ಆತನ ಮಹತ್ತರವಾದ ತೇಜಸ್ಸಿನಿಂದ ಮೂರು ಲೋಕಗಳೂ ವ್ಯಾಪ್ತವಾದುವು.

೯೪–೯೬. ಇಂತಹ ಅನುಪಮವಾದ ತೇಜಸ್ಸಿನಿಂದ ಕೂಡಿ ಬೆಳಗುತ್ತ ಅಪರಂಜಿಯ ಕಾಂತಿಯನ್ನು ತಳೆದು ಒಪ್ಪುತ್ತಲಿದ್ದ ಸೊಗಸಾದ ಮುಖ, ಒಳ್ಳೆಯ ತೇಜಸ್ಸು, ಚೆಲುವಾದ ಮೂಗು, ನಗುತ್ತಿರುವ ಬೊಗಸೆಗಣ್ಣುಗಳು, ಮನೋಹರವಾದ ಪ್ರಸನ್ನವಾದ ವದನ, ಅಂತೆಯೇ ಸರ್ವಾಂಗ ಸುಂದರನೂ ಮಹದಾಶ್ಚರ್ಯಕರನೂ, ಸೂರ್ಯಸಮಾನವಾದ ತೇಜಸ್ಸಿನಿಂದ ಕೂಡಿದವನೂ

ಪರಿವಾರ್ಯೋಪತಸ್ಥುಸ್ತೇ ವಾಮದಕ್ಷಿಣಭಾಗತಃ ।
ತಥಾ ಬ್ರಹ್ಮಾ ಚ ವಿಷ್ಣುಶ್ಚ ಇಂದ್ರಶ್ಚಾಪಿ ಸುರೈರ್ವೃತಃ ॥ ೯೭ ॥
ಋಷಯೋ ಯಕ್ಷಗಂಧರ್ವಾಃ ಪರಿವಾರ್ಯ ಕುಮಾರಕಂ ।
ದಂಡವತ್ಪತಿತಾ ಭೂಮೌ ಕೇಚಿಚ್ಚ ನತಕಂಧರಾಃ ॥ ೯೮ ॥
ಪ್ರಣೇಮುಃ ಶಿರಸಾ ಚಾನ್ಯೇ ಮತ್ವಾ ಸ್ವಾಮಿನಮವ್ಯಯಂ ।
ಅವಾದ್ಯಂತ ವಿಚಿತ್ರಾಣಿ ವಾದಿತ್ರಾಣಿ ಮಹೋತ್ಸವೇ ।
ಏವಮಭ್ಯುದಯೇ ತಸ್ಮಿನ್ನೃಷಯಃ ಶಾಂತಿಮಾಪಠನ್ ॥ ೯೯ ॥
ಏತಸ್ಮಿನ್ನಂತರೇ ಯಾತಃ ಶಂಕರೋ ಗಿರಿಜಾಪತಿಃ ।
ಅವತಾರ್ಯ ವೃಷಾಚ್ಛೀಘ್ರಂ ಪಾರ್ವತ್ಯಾ ಸಹ ಸುವ್ರತಾಃ ॥ ೧೦೦ ॥

ಪುತ್ರಂ ನಿರೈಕ್ಷತ ತದಾ ಜಗದೇಕಬಂಧುಃ
ಪ್ರೀತ್ಯಾಯುತಃ ಪರಮಯಾ ಸಹ ವೈ ಭವಾನ್ಯಾ ।
ಸ್ನೇಹಾನ್ವಿತೋ ಭುಜಗಭೋಗಯುತೋ ಹಿ ಸಾಕ್ಷಾತ್
ಸರ್ವೇಶ್ವರಃ ಪರಿವೃತಃ ಪ್ರಮಥೈಃ ಪ್ರಹೃಷ್ಟಃ ॥ ೧೦೧ ॥

---

ಆದ ಬಾಲಕನಾದ ಆ ಕುಮಾರಸ್ವಾಮಿಯನ್ನು ಸಂದರ್ಶಿಸಿ, ವೀರಭದ್ರನೇ ಮೊದಲಾದ ಪ್ರಮಥರೆಲ್ಲರೂ ಆತನಿಗೆ ಮಣಿದರು.

೯೭. ತರುವಾಯ ಅವರೆಲ್ಲರೂ ಎಡಬಲ ಭಾಗಗಳಲ್ಲಿ ಆ ಬಾಲಕನನ್ನು ಸುತ್ತುವರೆದು ನಿಂತರು. ಹಾಗೆಯೇ ಅದೇ ಸಮಯದಲ್ಲಿ ಬ್ರಹ್ಮನೂ, ವಿಷ್ಣುವೂ, ಸುರಸಮೂಹ ಸಮೇತನಾದ ಮಹೇಂದ್ರನೂ ಸಹ ಆ ಕುಮಾರಸ್ವಾಮಿಯನ್ನು ಸುತ್ತ ಬಳಸಿಕೊಂಡು ನಿಂತರು.

೯೮–೯೯. ದೇವರ್ಷಿಗಳೂ, ಯಕ್ಷ ಗಂಧರ್ವರೂ ಆ ಕುಮಾರನನ್ನು ಸುತ್ತಬಳಸಿ ನಿಂತು ದೀರ್ಘದಂಡ ನಮಸ್ಕಾರಗಳನ್ನೆಸಗಿದರು. ಕೆಲವರು ಆತನೇ ಅವ್ಯಯನಾದ ಕುಮಾರಸ್ವಾಮಿಯೆಂದರಿತು ತಲೆವಾಗಿ, ಮಣಿದರು. ಆ ಸಮಯದಲ್ಲಿ (ದೇವತೆಗಳಾದರೋ) ವಿಚಿತ್ರವಾದ ದೇವವಾದ್ಯಗಳನ್ನು ಬಾಜಿಸಿದರು. ಆ ಕುಮಾರೋದಯದ ಶುಭ ಮಹೋತ್ಸವ ಸಮಯದಲ್ಲಿ ಮಹರ್ಷಿಗಳೆಲ್ಲರೂ ಶಾಂತಿ ಪಾಠಗಳನ್ನು ಪಠಿಸಿದರು.

೧೦೦–೧೦೧. ಇದೇ ಸಮಯದಲ್ಲಿಯೇ ಗಿರಿಜಾಪತಿಯಾದ ಶಂಕರನು ಅಲ್ಲಿಗೈತಂದು ಬಹು ಬೇಗನೆ ಪಾರ್ವತಿಯೊಡನೆ ವೃಷಭದಿಂದಿಳಿದನು. ಎಲೈ ಸುವ್ರತರಾದ ಶೌನಕಾದಿ ಮುನಿಗಳಿರಾ! ಆಗಲಾ ಜಗದೇಕಬಂಧುವೂ, ಭುಜಗಭೂಷಣನೂ ಆದ ಆ ಪರಮೇಶ್ವರನು ಪರಮಪ್ರೀತಿಸಮನ್ವಿತನಾಗಿ ಪ್ರಮಥಗಣ ಪರಿವೃತನಾಗಿ ಕುಮಾರನನ್ನು ಕಂಡು ಪರಮಾನಂದಭರಿತ ನಾದನು.

ಉಪಗುಹ್ಯ ಗುಹಂ ತತ್ರ ಪಾರ್ವತೀ ಜಾತಸಂಭ್ರಮಾ ।
ಪ್ರಸ್ನುತಂ ಪಾಯಯಾಮಾಸ ಸ್ತನಂ ಸ್ನೇಹಪರಿಪ್ಲುತಾ ॥ ೧೦೨ ॥
ತದಾ ನೀರಾಜಿತೋ ದೇವೈಃ ಸಕಲತ್ರೈರ್ಮುದಾನ್ವಿತೈಃ ।
ಜಯಶಬ್ದೇನ ಮಹತಾ ವ್ಯಾಪ್ತಮಾಸೀಜ್ಜಗತ್ರಯಂ ॥ ೧೦೩ ॥
ಋಷಯೋ ಬ್ರಹ್ಮಘೋಷೇಣ ಗೀತೇನೈವ ಚ ಗಾಯಕಾಃ ।
ವಾದ್ಯೈಶ್ಚ ವಾದಕಾಶ್ಚೈವ ಉಪತಸ್ಥುಃ ಕುಮಾರಕಂ ॥ ೧೦೪ ॥
ಸ್ವಮಂಕಮಾರೋಪ್ಯ ತದಾ ಗಿರೀಶಃ ।
ಕುಮಾರಕಂ ತಂ ಪ್ರಭಯಾ ಮಹಾಪ್ರಭಂ ।
ಬಭೌ ಭವಾನೀಪತಿರೇವ ಸಾಕ್ಷಾತ್
ಶ್ರಿಯಾ ಯುತಃ ಪುತ್ರವತಾಂ ವರಿಷ್ಠಃ ॥ ೧೦೫ ॥
ದಂಪತೀ ತೌ ತದಾ ತತ್ರ ಐಕಪದ್ಯೇನ ನಂದತುಃ ।
ಅಭಿಷಿಚ್ಯಮಾನ ಋಷಿಭಿರಾವೃತಃ ಸುರಸತ್ತಮೈಃ ॥ ೧೦೬ ॥
ಕುಮಾರಃ ಕ್ರೀಡಯಾಮಾಸ ಉತ್ಸಂಗೇ ಶಂಕರಸ್ಯ ಚ ।
ಕಂಠೇ ಸ್ಥಿತಂ ವಾಸುಕಿಂ ಚ ಪಾಣಿಭ್ಯಾಂ ಸಮಪೀಡಯತ್ ॥ ೧೦೭ ॥

---

೧೦೨. ಆಗ ಪುತ್ರಸ್ನೇಹದಿಂದ ಪರಿಪ್ಲುತೆಯಾದ ಪಾರ್ವತೀದೇವಿಯು ಬಹು ಸಂಭ್ರಮದಿಂದ ಆ ಷಣ್ಮುಖ ಕುಮಾರಕನನ್ನು ಎತ್ತಿಕೊಂಡು ಆಲಿಂಗಿಸಿ ಸ್ರವಿಸುತ್ತಿರುವ ಸ್ತನ್ಯವನ್ನವನಿಗೆ ಪಾನಮಾಡಿಸಿದಳು.

೧೦೩–೧೦೪. ಆಗ ದೇವತೆಗಳೆಲ್ಲರೂ ತಮ್ಮತಮ್ಮ ಮಡದಿಯರೊಡಗೂಡಿ ಆ ಕುಮಾರನಿಗೆ ಮಂಗಳದ ನೀರಾಜನವನ್ನೆಸಗಿದರು. ಆಗ ಮೂರುಲೋಕಗಳೂ ಮಹತ್ತರವಾದ ಜಯಜಯಕಾರಗಳಿಂದ ತುಂಬಿಹೋದುವು. ಅದೇ ಸಮಯ ದಲ್ಲಿಯೇ ಋಷಿಗಳು ಬ್ರಹ್ಮಘೋಷವನ್ನು ಮಾಡಿದರು. ದೇವಗಾಯಕರು ಗಾಯನಮಾಡಿದರು. ದೇವವಾದಕರಾದರೋ ವಾದ್ಯಗಳನ್ನು ಬಾಜಿಸಿದರು. ಹೀಗೆ ಅವರೆಲ್ಲರೂ ಪರಮಪ್ರೀತಿಯಿಂದ ಕುಮಾರಸ್ವಾಮಿಯನ್ನು ಸೇವಿಸಿದರು.

೧೦೫–೧೦೭. ತರುವಾಯ ಗಿರೀಶನೂ, ಭವಾನೀಪತಿಯೂ ಆದ ಆ ಪರಮೇಶ್ವರನಾದರೋ ತಾನಾಗಿಯೇ, ಮಹಾ ಪ್ರಭಾವಶಾಲಿಯಾದ ಆ ಕುಮಾರನನ್ನು ತೊಡೆಯಮೇಲೆತ್ತಿಕೊಂಡು, ಪುತ್ರವಂತರೆಲ್ಲರಿಗೂ ಮಹಾ ವರಿಷ್ಠನಾಗಿ ಅತಿಶಯವಾದ ಕಾಂತಿಯಿಂದ ವಿರಾಜಿಸಿದನು. ಆ ದಂಪತಿಗಳೀರ್ವರೂ, ದೇವರ್ಷಿಗಳಿಂದ ಪರಿವೃತರಾಗಿ ದೇವಶ್ರೇಷ್ಠರಿಂದ ಅಭಿಷೇಚಿತರಾಗಿ ಏಕಕಾಲದಲ್ಲಿಯೇ ಸಂತೋಷವನ್ನು ತಾಳಿದರು. ಆಗಲಾ ಕುಮಾರನಾದರೋ ಶಂಕರನ ತೊಡೆಯ ಮೇಲೆ ಆಟವಾಡುತ್ತ ಆತನ ಕೊರಳಲ್ಲಿದ್ದ ವಾಸುಕಿಯನ್ನು ತನ್ನೆರಡೂ ಕೈಗಳಿಂದ ಪೀಡಿಸಿದನು. ಆತನು ಆ ಸರ್ಪರಾಜನ ಮುಖವನ್ನು

ಮುಖಂ ಪ್ರಪೀಡಯಿತ್ವಾಽಸೌ ಫಣೀನಗಣಯತ್ತದಾ ।
ಏಕಂ ತ್ರೀಣಿ ದಶಾಷ್ಟೌ ಚ ವಿಪರೀತ ಕ್ರಮೇಣಚ ॥ ೧೦೮ ॥
ಪ್ರಹಸ್ಯ ಭಗವಾನ್ ಶಂಭುರುವಾಚ ಗಿರಿಜಾಂ ತದಾ ॥ ೧೦೯ ॥
ಮಂದಸ್ಮಿತೇನ ಚ ತದಾ ಭಗವಾನ್ಮಹೇಶಃ
ಪ್ರಾಪ್ತೋ ಮುದಂ ಚ ಪರಮಾಂ ಗಿರಿಜಾಸಮೇತಃ ।
ಪ್ರೇಮ್ಣಾ ಸಗದ್ಗದಗಿರಾ ಜಗದೇಕ ಬಂಧುಃ
ನೋವಾಚ ಕಿಂಚನ ತದಾ ಭುವನೈಕ ಭರ್ತಾ ॥ ೧೧೦ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಕಾರ್ತಿಕೇಯಸ್ವಾಮಿ
ಕುಮಾರೋತ್ಪತ್ತಿ ವರ್ಣನಂ" ನಾಮ ಸಪ್ತವಿಂಶೋಽಧ್ಯಾಯಃ

---

ಹಿಡಿದು ಆತನ ಹೆಡೆಗಳನ್ನು ಒಂದು, ಮೂರು, ಹತ್ತು, ಎಂಟು ಎಂಬುದಾಗಿ ತಪ್ಪುತಪ್ಪಾಗಿ ಎಣಿಕೆಮಾಡಿದನು.

೧೦೯–೧೧೦. ಆಗಲಾ ಭಗವಂತನು ನಸುನಕ್ಕು ಗಿರಿಜಾದೇವಿಯನ್ನು ಕುರಿತು ಏನೋ ಹೇಳಹೋದನು. ಆದರೆ ಭುವನೈಕಭರ್ತನೂ, ಜಗದೇಕ ಬಂಧುವೂ, ಗಿರಿಜಾ ಸಮೇತನೂ ಆದ ಆ ಸ್ವಾಮಿಯು ಮುಗುಳ್ನಗೆ ನಕ್ಕು ಪರಮಾನಂದಭರಿತನೂ, ಗದ್ಗದ ಸ್ವರಭರಿತನೂ ಆಗಿ ಏನನ್ನೂ ಹೇಳಲಿಲ್ಲವು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ
"ಕಾರ್ತಿಕೇಯಸ್ವಾಮಿ ಕುಮಾರೋತ್ಪತ್ತಿ ವರ್ಣನ"ವೆಂಬ
ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಅಷ್ಟಾವಿಂಶೋಽಧ್ಯಾಯಃ

**ದೈತ್ಯೈಃ ಸಹ ತಾರಕಾಸುರಸ್ಯ ಸಂಗ್ರಾಮೇ ದೇವದೈತ್ಯಸೇನಾಸನ್ನಾಹ ವರ್ಣನಂ**

ಲೋಮಶ ಉವಾಚ :—

**ಕುಮಾರಂ ಸ್ವಾಂಕಮಾರೋಪ್ಯ ಉವಾಚ ಜಗದೀಶ್ವರಃ ।**
**ದೇವಾನ್ ಪ್ರತಿ ತದಾ ರುದ್ರಃ ಸೇಂದ್ರಾನ್ ಭರ್ಗಃ ಪ್ರತಾಪವಾನ್ ॥೧॥**
**ಕಿಂ ಕಾರ್ಯಂ ಕಥ್ಯತಾಂ ದೇವಾಃ ಕುಮಾರೇಣಾಧುನಾ ಮಮ ।**
**ತದೋಚುಃ ಸಹಿತಾಃ ಸರ್ವೇ ದೇವಂ ಪಶುಪತಿಂ ಪ್ರತಿ ॥ ೨ ॥**
**ತಾರಕಾದ್ಭಯಮುತ್ಪನ್ನಂ ಸರ್ವೇಷಾಂ ಜಗತಾಂ ವಿಭೋ ।**
**ತ್ರಾತಾ ತ್ವಂ ಜಗತಾಂ ಸ್ವಾಮಿನ್ ತಸ್ಮಾತ್ತ್ರಾಣಂ ವಿಧೀಯತಾಂ ॥ ೩ ॥**
**ಕುಮಾರೇಣ ಹತೋಽದ್ಯೈವ ತಾರಕೋ ಭವಿತಾ ಪ್ರಭೋ ।**
**ತಸ್ಮಾದದ್ಯೈವ ಯಾಸ್ಯಾಮಸ್ತಾರಕಂ ಹಂತುಮುದ್ಯತಾಃ ॥ ೪ ॥**
**ತಥೇತಿ ಮತ್ವಾ ಸಹಸಾ ನಿರ್ಜಗ್ಮುಸ್ತೇ ತದಾ ಸುರಾಃ ।**
**ಕಾರ್ತಿಕೇಯಂ ಪುರಸ್ಕೃತ್ಯ ಶಂಕರಾತ್ಮಜಮೇವ ಹಿ ।**
**ಸರ್ವೇ ಮಿಲಿತ್ವಾ ಸಹಸಾ ಬ್ರಹ್ಮವಿಷ್ಣು ಪುರೋಗಮಾಃ ॥ ೫ ॥**

---

## ಕನ್ನಡದ ಅನುವಾದ

**ದೇವತೆಗಳಿಗೂ ತಾರಕನಿಗೂ ನಡೆದ ಯುದ್ಧದಲ್ಲಿ ದೇವದೈತ್ಯ ಸೇನೆಯ ಸನ್ನಾಹದ ವರ್ಣನ**

೧–೨. ಲೋಮಶನು ಹೇಳುತ್ತಾನೆ :—ಕೇಳಿರೈ ಋಷಿಗಳಿರಾ! ಆ ಬಳಿಕ ಪ್ರತಾಪಶಾಲಿಯೂ, ಭರ್ಗನೂ, ಜಗದೀಶ್ವರನೂ, ರುದ್ರನೂ ಆದ ಪರಮೇಶ್ವರನು ಕುಮಾರಸ್ವಾಮಿಯನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಅಲ್ಲಿದ್ದ ಇಂದ್ರಾದಿ ದೇವತೆಗಳೆಲ್ಲರನ್ನೂ ಕುರಿತು, "ಎಲೈ ದೇವತೆಗಳಿರಾ! ಪ್ರಕೃತದಲ್ಲಿ ನಮ್ಮೀಕುಮಾರನಿಂದ ನಿಮಗಾವ ಕಾರ್ಯವಾಗತಕ್ಕುದಿರುವುದು? ಅದನ್ನೀಗ ಹೇಳಿರಿ" ಎಂದು ಹೇಳಿದನು. ಆಗಲಾ ದೇವತೆಗಳೆಲ್ಲರೂ ಆ ಪಶುಪತಿಯನ್ನು ಕುರಿತು ಹೀಗೆಂದರು.

೩–೫. "ಎಲೈ ಜಗತ್ಪ್ರಭುವಾದ ಪರಶಿವನೇ! ಈಗ ನಮ್ಮೆಲ್ಲರಿಗೂ ತಾರಕಾಸುರನಿಂದ ಮಹತ್ತರವಾದ ಭಯವುಂಟಾಗಿರುವುದು. ದೇವಾ! ನೀನು ಜಗತ್ತಿಗೆಲ್ಲಾ ಒಡೆಯನಾದುದರಿಂದ ನಮ್ಮನ್ನೀಗ ಕಾಪಾಡಬೇಕು. ಎಲೈ ಪ್ರಭುವೇ! ನಿನ್ನ ಮಗನಾದ ಈ ಕುಮಾರಸ್ವಾಮಿಯಿಂದ ಆ ತಾರಕಾಸುರ ನೀಗಾಗಲೆ ಹತನಾದಂತೆಯೇ ಸರಿ. ಆದುದರಿಂದ ನಾವೀಗಲೇ ಆ ರಾಕ್ಷಸ

ದೇವಾನಾಮುದ್ಯಮಂ ಶ್ರುತ್ವಾ ತಾರಕೋऽಪಿ ಮಹಾಬಲಃ ॥ ೬ ॥
ಸೈನ್ಯೇನ ಮಹತಾ ಚೈವ ಯಯೌ ಯೋದ್ಧುಂ ಸುರಾನ್ಪ್ರತಿ ।
ದೇವೈರ್ದೃಷ್ಟಂ ಸಮಾಯಾತಂ ತಾರಕಸ್ಯ ಮಹದ್ಬಲಂ ॥ ೭ ॥
ತದಾ ನಭೋಗತಾ ವಾಣೀ ಹ್ಯುವಾಚ ಪರಿಸಾಂತ್ವ್ಯ ತಾನ್ ।
ಶಾಂಕರಿಂ ಚ ಪುರಸ್ಕೃತ್ಯ ಸರ್ವೇ ಯೂಯಂ ಪ್ರತಿಷ್ಠಿತಾಃ ॥ ೮ ॥
ದೈತ್ಯಾನ್ವಿಜಿತ್ಯ ಸಂಗ್ರಾಮೇ ಜಯಿನೋಹಿ ಭವಿಷ್ಯಥ ॥ ೯ ॥
ವಾಚಂತು ಖೇಚರೀಂ ಶ್ರುತ್ವಾ ದೇವಾಃ ಸರ್ವೇ ಸಮುತ್ಸುಕಾಃ ।
ಕುಮಾರಂ ಚ ಪುರಸ್ಕೃತ್ಯ ಸರ್ವೇ ತೇ ಗತ ಸಾಧ್ವಸಾಃ ॥ ೧೦ ॥
ಯೋದ್ಧುಕಾಮಾಃ ಸುರಾ ಯಾವತ್ತಾವತ್ಸರ್ವೇ ಸಮಾಗತಾಃ ।
ವರಣಾರ್ಥಂ ಕುಮಾರಸ್ಯ ಸುತಾ ಮೃತ್ಯೋರ್ದುರತ್ಯಯಾ ॥ ೧೧ ॥

---

ರೊಡನೆ ಕಾಳಗಮಾಡಲು ಸರ್ವಸನ್ನದ್ಧರಾಗಿ ಹೊರಡುವೆವು'' ಎಂದು ಹೇಳಿದರು. ಆಗ ಪರಮೇಶ್ವರನು ಹಾಗೆಯೇ ಆಗಬಹುದೆಂದು ಅಪ್ಪಣೆಯಿತ್ತನು. ತರುವಾಯ ಸಮಸ್ತ ದೇವತೆಗಳೂ ಶಂಕರನ ಮಗನಾದ ಆ ಕಾರ್ತಿಕೇಯ ಸ್ವಾಮಿಯನ್ನು ಪುರಸ್ಕರಿಸಿಕೊಂಡು ಒಡನೆಯೇ ಕಾಳಗಕ್ಕೆ ತೆರಳಿದರು. ಅವರೊಡನೆ ಬ್ರಹ್ಮವಿಷ್ಣುಗಳೂ ಸಹ ಸೇರಿ ರಣಪ್ರಯಾಣವನ್ನು ಬೆಳಸಿದರು.

೬–೭. ಇತ್ತ ಮಹಾಬಲಾಢ್ಯನಾದ ತಾರಕಾಸುರನೂ ಸಹ ಈ ರೀತಿಯಾದ ದೇವತೆಗಳ ರಣೋದ್ಯಮವನ್ನು ಕೇಳಿ ತಿಳಿದುಕೊಂಡು ಮಹತ್ತರವಾದ ತನ್ನ ಸೈನ್ಯದೊಡಗೂಡಿ ಅವರೊಡನೆ ಯುದ್ಧಮಾಡಲು ಹೊರಟನು. ಆಗಲಾ ದೇವತೆಗಳೆಲ್ಲರೂ ಕಾಳಗಕ್ಕಾಗಿ ಬಂದ ಆ ತಾರಕಾಸುರನ ಮಹಾಸೇನೆಯನ್ನು ಕಂಡರು.

೮–೯. ಆ ಸಮಯದಲ್ಲಿ ಆಕಾಶವಾಣಿಯು ಆ ದೇವತೆಗಳೆಲ್ಲರನ್ನೂ ಸಮಾಧಾನಗೊಳಿಸುತ್ತ, ''ಎಲೈ ದೇವತೆಗಳಿರಾ! ಪ್ರಕೃತದಲ್ಲಿ ನೀವು ಶ್ರೀ ಶಂಕರ ಕುಮಾರನಾದ ಈ ಕಾರ್ತಿಕೇಯನನ್ನು ಮುಂದಿರಿಸಿಕೊಂಡು ಕಾಳಗಕ್ಕೆ ಪ್ರಯಾಣಮಾಡಿರುತ್ತೀರಿ. ನೀವೀ ಕಾಳಗದಲ್ಲಿ ದೈತ್ಯರೆಲ್ಲರನ್ನೂ ಸೋಲಿಸಿ ಜಯವನ್ನು ಪಡೆಯುವಿರಿ'' ಎಂದು ಹೇಳಿತು.

೧೦–೧೧. ದೇವತೆಗಳೆಲ್ಲರೂ ಆ ಆಕಾಶವಾಣಿಯ ನುಡಿಯನ್ನು ಕೇಳಿ ಸಂಭ್ರಮಪೂರಿತರಾಗಿ ಭಯವನ್ನು ದೂರಮಾಡಿ ಆ ಕುಮಾರಸ್ವಾಮಿಯನ್ನು ಪುರಸ್ಕರಿಸಿಕೊಂಡು ತಾರಕಾಸುರನೊಡನೆ ಕಾಳಗಮಾಡಲು ಹೊರಡಬೇಕೆಂದಿರುವಷ್ಟರಲ್ಲಿಯೇ, ಮಾರಲಸದಳೆಯೂ, ಮೃತ್ಯುಕುಮಾರಿಯೂ ಆದೋರ್ವ ಕುಮಾರಿಯು ಆ ಕಾರ್ತಿಕೇಯ ಸ್ವಾಮಿಯನ್ನು ವರಿಸಲಲ್ಲಿಗೈತಂದಳು.

ಬ್ರಹ್ಮಣಾ ನೋದಿತಾ ಪೂರ್ವಂ ತಪಃ ಪರಮಮಾಶ್ರಿತಾ ।
ತಪಸಾ ತೇನ ಮಹತಾ ಕುಮಾರಂ ಪ್ರತಿ ವೈ ತದಾ ।
ಆಗತಾ ದುಹಿತಾ ಮೃತ್ಯೋಃ ಸೇನಾ ನಾಮ್ನೈಕ ಸುಂದರೀ ॥ ೧೨ ॥
ತಾಂ ದೃಷ್ಟ್ವಾ ತೇಽಬ್ರುವನ್ ಸರ್ವೇ ದೇವಂ ಪಶುಪತಿಂ ಪ್ರತಿ ।
ಏನಂ ಕುಮಾರಮುದ್ದಿಶ್ಯ ಆಗತಾ ಹ್ಯತಿಸುಂದರೀ ॥ ೧೩ ॥
ಬ್ರಹ್ಮಣೋ ವಚನಾಚ್ಚೈವ ಕುಮಾರೇಣ ತದಾ ವೃತಾ ।
ಅಥ ಸೇನಾಪತಿರ್ಜಾತಃ ಕುಮಾರಃ ಶಾಂಕರಿಸ್ತದಾ ॥ ೧೪ ॥
ತದಾ ಶಂಖಾಶ್ಚ ಭೇರ್ಯಶ್ಚ ಪಟಹಾನಕಗೋಮುಖಾಃ ।
ತಥಾ ದುಂದುಭಯೋ ನೇದುರ್ಮೃದಂಗಾಶ್ಚ ಮಹಾಸ್ವನಾಃ ॥ ೧೫ ॥
ತೇನ ನಾದೇನ ಮಹತಾ ಪೂರಿತಂ ಚ ನಭಸ್ತಲಂ ।
ತದಾ ಗೌರೀ ಚ ಗಂಗಾ ಚ ಕೃತ್ತಿಕಾ ಮಾತರಸ್ತಥಾ ।
ಪರಸ್ಪರಮಥೋಚುಸ್ತೇ ಸುತೋ ಮಮ ಮಮೇತಿ ಚ ॥ ೧೬ ॥
ಏವಂ ವಿವಾದಮಾಪನ್ನಾಃ ಸರ್ವಾಸ್ತಾ ಮಾತೃಕಾದಯಃ ।
ನಿವಾರಿತಾ ನಾರದೇನ ಮೌಢ್ಯಂ ಮಾ ಕುರುತೇತಿಚ ॥ ೧೭ ॥

---

೧೨. ಈ ಮೃತ್ಯುಕನ್ಯೆಯು ಪೂರ್ವದಲ್ಲಿ ಬ್ರಹ್ಮನ ಪ್ರೇರಣೆಯಂತ ತಪಸ್ಸನ್ನೆಸಗಿದಳು. ಮಹತ್ತರವಾದ ಆ ತಪಸ್ಸಿನಿಂದಲೇ ಕುಮಾರನನ್ನು ವರಿಸಲು ಆಕೆಯು ಇದೀಗ ಅಲ್ಲಿಗೆ ಬಂದಳು. ಆಕೆಯ ಹೆಸರು ಸೇನಾ ಎಂದು. ಆಕೆಯು ಮಹಾ ಸೌಂದರ್ಯವತಿಯು.

೧೩-೧೪. ಆ ಸೇನಾದೇವಿಯನ್ನು ಕಂಡು ದೇವತೆಗಳೆಲ್ಲರೂ ಪಶುಪತಿಯನ್ನು ಕುರಿತು, "ಎಲೈ ಪರಮೇಶ್ವರನೇ! ಮಹಾಸುಂದರಿಯಾದ ಈ ಕುಮಾರಿಯು ಕುಮಾರಸ್ವಾಮಿಯನ್ನು ವರಿಸಬಯಸಿ ಇಲ್ಲಿಗೆ ಬಂದಿರುವಳು" ಎಂದು ಹೇಳಿದರು. ತರುವಾಯ (ಆ ಪ್ರಭುವೂ ಅನುಜ್ಞೆಯನ್ನೀಯಲು) ಬ್ರಹ್ಮನ ಮಾತಿನಂತೆ ಕುಮಾರಸ್ವಾಮಿಯು ಆ ಕುಮಾರಿಯನ್ನು ವರಿಸಿದನು. ಬಳಿಕ ಶಂಕರಾತ್ಮಜನಾದ ಆ ಕಾರ್ತಿಕೇಯನು ಸೇನಾಪತಿಯಾದನು.

೧೫-೧೬. ಆಗ ಶಂಖ, ಭೇರಿ, ಪಟಹ, ಆನಕ, ಗೋಮುಖ, ದುಂದುಭಿ, ಮೃದಂಗ ಮೊದಲಾದ ದೇವವಾದ್ಯಗಳೆಲ್ಲವೂ ಮೊಳಗಿ ಅವುಗಳ ನಾದದಿಂದ ನಭಸ್ತಲವೆಲ್ಲವೂ ತುಂಬಿಹೋಯಿತು. ಇದಾದ ಬಳಿಕ ಗೌರೀದೇವಿಯೂ, ಗಂಗಾದೇವಿಯೂ, ಆರು ಮಂದಿ ಕೃತ್ತಿಕೆಯರೂ, 'ಆ ಕುವರನು ನನ್ನ ಮಗ, ತನ್ನ ಮಗ' ಎಂಬುದಾಗಿ ಹುರುಡಿಸುತ್ತ ಆ ಪ್ರದೇಶಕ್ಕೈತಂದರು.

೧೭-೧೮. ಆಗ ಈ ಪ್ರಕಾರವಾಗಿ ಒಬ್ಬರಿಗೊಬ್ಬರು ವಿವಾದಮಾಡುತ್ತಿದ್ದ ಆ ಮಾತೃದೇವತೆಗಳೇ ಮೊದಲಾದವರನ್ನು ಕಂಡು ನಾರದ ಮುನಿಯು,

ಪಾರ್ವತ್ಯಾಂ ಶಂಕರಾಜ್ಜಾತೋ ದೇವಕಾರ್ಯಾರ್ಥ ಸಿದ್ಧಯೇ ।
ತೂಷ್ಣೀಂ ಭೂತಾಸ್ತದಾ ಸರ್ವಾಃ ಕೃತ್ತಿಕಾ ಮಾತೃಭಿಸ್ತದಾ ॥ ೧೮ ॥
ಗುಹೇನೋಕ್ತಾಸ್ತದಾ ಸರ್ವಾ ಋಷಿಪತ್ನ್ಯಶ್ಚ ಕೃತ್ತಿಕಾಃ ।
ನಕ್ಷತ್ರಾಣಿ ಸಮಾಶ್ರಿತ್ಯ ಭವದ್ಭಿಸ್ಥೀಯತಾಂ ಚಿರಂ ॥ ೧೯ ॥
ತಥಾ ಮಾತೃಗಣಾಸ್ತೇನ ಸ್ವಾಮಿನಾ ಸ್ಥಾಪಿತೋ ದಿವಿ ।
ಮೃತ್ಯೋಃ ಕನ್ಯಾಂ ಚ ಸಂಗೃಹ್ಯ ಕಾರ್ತಿಕೇಯಸ್ತ್ವರಾನ್ವಿತಃ ॥ ೨೦ ॥
ಇಂದ್ರಂ ಪ್ರೋವಾಚ ಭಗವಾನ್ ಕುಮಾರಃ ಶಂಕರಾತ್ಮಜಃ ।
ದಿವಂ ಯಾಹಿ ಸುರೈಸ್ಸಾರ್ಧಂ ರಾಜ್ಯಂ ಕುರು ನಿರಂತರಂ ॥ ೨೧ ॥
ಇಂದ್ರೇಣೋಕ್ತಃ ಕುಮಾರೋ ಹಿ ತಾರಕೇಣ ಪ್ರಪೀಡಿತಾಃ ।
ಸ್ವರ್ಗಾದ್ವಿದ್ರಾವಿತಾಃ ಸರ್ವೇ ವಯಂ ಯಾತಾಃ ದಿಶೋ ದಶ ॥ ೨೨ ॥
ಕಿಂ ಪೃಚ್ಛಸಿ ಮಹಾಭಾಗ ಅಸ್ಮಾನ್‌ಪದಪರಿಚ್ಯುತಾನ್ ।
ಏವಮುಕ್ತಸ್ತದಾ ತೇನ ವಜ್ರಿಣಾ ಶಂಕರಾತ್ಮಜಃ ।
ಪ್ರಹಸ್ಯೇಂದ್ರಂ ಪ್ರತಿ ತದಾ ಮಾ ಭೈಷೀತ್ಯಭಯಂ ದದೌ ॥ ೨೩ ॥

---

"ಅಮ್ಮಾ! ನೀವೀರೀತಿ ಮೂರ್ಖತನವನ್ನು ಮಾಡಬೇಡಿರಿ. ಈ ಕುಮಾರ ಸ್ವಾಮಿಯು ದೇವತೆಗಳ ಕಾರ್ಯಸಿದ್ಧಿಗಾಗಿ ಪಾರ್ವತಿಯಲ್ಲಿ ಶಂಕರನಿಂದ ಹುಟ್ಟಿರುತ್ತಾನೆ" ಎಂದು ಹೇಳಿದನು. ಆಗಲಾ ಷಟ್‌ಕೃತ್ತಿಕೆಯರೂ ಮಾತೃ ದೇವತೆಗಳೂ ಸಹ ಯಾವ ಮಾತನ್ನೂ ಆಡದೆ ಸುಮ್ಮನಾದರು.

೧೯. ಆ ಸಮಯದಲ್ಲಿ ಗುಹನು ಆ ಋಷಿಪತ್ನಿಯರನ್ನೂ ಕೃತ್ತಿಕೆಯರನ್ನೂ ಸಮಸ್ತರನ್ನೂ ಕುರಿತು, "ಎಲೌ ತಾಯಿಯರಿರಾ! ನೀವೆಲ್ಲರೂ ನಕ್ಷತ್ರಗಳನ್ನು ಆಶ್ರಯಿಸಿ (ನಕ್ಷತ್ರರೂಪದಿಂದ) ಆಕಾಶದಲ್ಲಿ ಶಾಶ್ವತವಾಗಿರಿ" ಎಂದನು.

೨೦–೨೧. ಆ ಕುಮಾರಸ್ವಾಮಿಯು ಅದೇ ರೀತಿಯಾಗಿಯೇ ಮಾತೃದೇವಿ ಯರನ್ನೂ ಸಹ ನಕ್ಷತ್ರರೂಪದಿಂದ ಗಗನದಲ್ಲಿ ನೆಲೆಗೊಳಿಸಿದನು. ಬಳಿಕ ಆ ಕಾರ್ತಿಕೇಯಸ್ವಾಮಿಯು ಸೇನಾದೇವಿಯೊಡಗೂಡಿ ಜಾಗ್ರತೆಯಾಗಿ ಹೊರಡ ಲನುವಾಗಿ ಅಲ್ಲಿಯೇ ಇದ್ದ ಮಹೇಂದ್ರನನ್ನು ಕುರಿತು, "ಎಲೈ ದೇವೇಂದ್ರನೇ! ನೀನೀಗಲೇ ಈ ದೇವತೆಗಳೆಲ್ಲರೊಡಗೂಡಿ ಸ್ವರ್ಗಲೋಕಕ್ಕೆ ಹೋಗಿ ಶಾಶ್ವತ ವಾಗಿ ರಾಜ್ಯವಾಳಿಕೊಂಡಿರು" ಎಂದನು.

೨೨–೨೩. ಆಗಲಾ ಮಹೇಂದ್ರನು ಆ ಕುಮಾರಸ್ವಾಮಿಯನ್ನು ಕುರಿತು, "ಎಲೈ ಪ್ರಭುವೇ! ನಾವೆಲ್ಲರೂ ತಾರಕಾಸುರನ ಪೀಡೆಗೊಳಗಾಗಿ ಸ್ವರ್ಗದಿಂದ ಓಡಿಸಲ್ಪಟ್ಟು ಹತ್ತೂ ದಿಟ್ಟುಗಳಿಗೂ ಹೊರಟುಬಂದಿರುವೆವು. ಎಲೈ ಮಹಾಭಾಗನೇ! ಹೀಗೆ ಪದವೀಭ್ರಷ್ಟರಾಗಿರುವ ನಮ್ಮನ್ನೇಕೆ ಈ ಪ್ರಕಾರವಾಗಿ ಕೇಳುವೆ!" ಎಂದು ಹೇಳಿದನು. ಆಗಲಾ ಶಂಕರಾತ್ಮಜ

ಯಾವತ್ಕಥಯತಸ್ತಸ್ಯ ಶಾಂಕರೇಶ್ಚ ಮಹಾತ್ಮನಃ ।
ಕೈಲಾಸಂತು ಗತೇ ರುದ್ರೇ ಪಾರ್ವತ್ಯಾ ಪ್ರಮಥೈಃ ಸಹ ॥ ೨೪ ॥
ಆಜಗಾಮ ಮಹಾದೈತ್ಯೋ ದೈತ್ಯಸೇನಾಭಿರಾವೃತಃ ।
ರಣದುಂದುಭಯೋ ನೇದುಸ್ತಥಾ ಪ್ರಲಯಭೀಷಣಾಃ ॥ ೨೫ ॥
ರಣಕರ್ಕಶ ತೂರ್ಯಾಣಿ ಡಿಂಡಿಮಾನ್ಯದ್ಭುತಾನಿ ಚ ।
ಗೋಮುಖಾಃ ಖರಶೃಂಗಾಣಿ ಕಾಹಳಾನ್ಯೇವ ಭೂರಿಶಃ ॥ ೨೬ ॥
ವಾದ್ಯಭೇದಾ ಅವಾದ್ಯಂತ ತಸ್ಮಿನ್ ದೈತ್ಯಸಮಾಗಮೇ ।
ಗರ್ಜಮಾನಾಸ್ತದಾ ವೀರಾಸ್ತಾರಕೇಣ ಸಹೈವ ತು ॥ ೨೭ ॥
ಉವಾಚ ನಾರದೋ ವಾಕ್ಯಂ ತಾರಕಂ ದೇವಕಂಟಕಂ ॥ ೨೮ ॥

ನಾರದ ಉವಾಚ :—

ಪುರಾ ದೇವೈಃ ಕೃತೋ ಯತ್ನೋ ವಧಾರ್ಥಂ ನಾತ್ರ ಸಂಶಯಃ ।
ತವೈವ ಚಾಸುರಶ್ರೇಷ್ಠ ಮಯೋಕ್ತಂ ನಾನ್ಯಥಾ ಭವೇತ್ ॥ ೨೯ ॥
ಕುಮಾರೋಽಯಂ ಚ ಶರ್ವಸ್ಯ ತವಾರ್ಥಂ ಚೋಪಪಾದಿತಃ ।
ಏವಂ ಜ್ಞಾತ್ವಾ ಮಹಾಬಾಹೋ ಕುರು ಯತ್ನಂ ಸಮಾಹಿತಃ ॥ ೩೦ ॥

---

ನಾದ ಕಾರ್ತಿಕೇಯನು ನಕ್ಕು ಆ ಮಹೇಂದ್ರನನ್ನು ಕುರಿತು, "ಅಯ್ಯಾ! ನೀನು ಹೆದರಬೇಡ" ಎಂದು ಹೇಳಿ ಅವನಿಗೆ ಅಭಯಪ್ರದಾನ ಮಾಡಿದನು.

೨೪-೨೭. ಮಹಾತ್ಮನಾದ ಆ ಕಾರ್ತಿಕೇಯನೀರೀತಿ ಮಹೇಂದ್ರನಿಗೆ ಸಮಾಧಾನ ವಚನಗಳನ್ನು ಹೇಳುತ್ತಿರುವಂತೆಯೇ, ಪರಮೇಶ್ವರನು ಪಾರ್ವತಿಯೊಡನೆಯೂ, ಪ್ರಮಥಗಣಗಳೊಡನೆಯೂ, ಕೈಲಾಸಕ್ಕೆ ಹೊರಟುಹೋದ ಬಳಿಕ, ಮಹಾದೈತ್ಯನಾದ ತಾರಕಾಸುರನು ದೈತ್ಯಸೇನೆಗಳೊಡನೆ ಅಲ್ಲಿಗೆ ಬಂದೇ ಬಿಟ್ಟನು. ಆಗ ರಣಕಹಳೆಗಳೂ, ಪ್ರಲಯ ಭಯಂಕರಗಳೂ, ರಣಕರ್ಕಶಗಳೂ ಆದ ತುತ್ತೂರಿಗಳೂ, ಡಿಂಡಿಮಗಳೂ, ಅದ್ಭುತವಾದ ಗೋಮುಖ, ಖರಶೃಂಗ, ಅನೇಕ ಕಹಳೆಗಳು, ಇತರ ವಾದ್ಯಭೇದಗಳೂ ಧ್ವನಿಗೊಳಿಸಲಾದವು. ಆಗಲೇ ದೈತ್ಯಸೇನೆಯೆಲ್ಲವೂ ತಾರಕಾಸುರನೊಡನೆಯೇ ಗರ್ಜಿಸುತ್ತಲಿದ್ದಿತು.

೨೮-೩೦. ಆ ಸಮಯದಲ್ಲಿ ನಾರದ ಮುನಿಯು ದೇವಕಂಟಕನಾದ ಆ ತಾರಕನನ್ನು ಕುರಿತು ಹೀಗೆಂದನು. ನಾರದನು ಹೇಳುತ್ತಾನೆ.—"ಅಯ್ಯಾ ಅಸುರಶ್ರೇಷ್ಠನೇ! ಪೂರ್ವದಲ್ಲಿ ಈ ದೇವತೆಗಳೆಲ್ಲರೂ ನಿನ್ನ ಸಂಹಾರಕ್ಕಾಗಿ ಪ್ರಯತ್ನಮಾಡಿರುತ್ತಾರೆ. ನನ್ನ ಈ ಮಾತು ಸುಳ್ಳಲ್ಲವು. ಈ ಕುಮಾರ ಸ್ವಾಮಿಯು ನಿನ್ನ ಸಂಹಾರಕ್ಕಾಗಿಯೇ ಉತ್ಪಾದಿತನಾಗಿರುವನು. ಎಲೈ ಮಹಾ

ನಾರದೋಕ್ತಂ ನಿಶಮ್ಯಾಥ ತಾರಕಃ ಪ್ರಹಸನ್ನಿವ ।
ಉವಾಚ ವಾಕ್ಯಂ ಮೇಧಾವೀ ಗಚ್ಛ ತ್ವಂ ಚ ಪುರಂದರಂ ॥ ೩೧ ॥
ಮಮ ವಾಕ್ಯಂ ಮಹರ್ಷೇ ತ್ವಂ ವದ ಶೀಘ್ರಂ ಯಥಾತಥಂ ।
ಕುಮಾರಂ ಚ ಪುರಸ್ಕೃತ್ಯ ಮಯಾ ಯೋದ್ಧುಂ ತ್ವಮಿಚ್ಛಸಿ ॥ ೩೨ ॥
ಮೂಢಂ ಭಾವಂ ಸಮಾಶ್ರಿತ್ಯ ಕರ್ತುಮಿಚ್ಛಸಿ ನಾನ್ಯಥಾ ।
ಮನುಷ್ಯಮೇಕಮಾಶ್ರಿತ್ಯ ಮುಚುಕುಂದಾಖ್ಯಮೇವ ಚ ॥ ೩೩ ॥
ತತ್ಪ್ರಭಾವೇಽಮರಾವತ್ಯಾಂ ಸ್ಥಿತೋಽಸಿ ತ್ವಂ ನ ಚಾನ್ಯಥಾ ।
ಕೌಮಾರಂ ಬಲಮಾಶ್ರಿತ್ಯ ತಿಷ್ಠಸೇ ತ್ವಂ ಮಮಾಗ್ರತಃ ॥ ೩೪ ॥
ತ್ವಾಂ ಹನಿಷ್ಯಾಮ್ಯಹಂ ಮಂದ ಲೋಕಪಾಲೈಃ ಸಹೈವ ಹಿ ।
ಏವಂ ಕಥಯ ದೇವೇಂದ್ರಂ ದೇವರ್ಷೇ ನಾನ್ಯಥಾ ವದ ॥ ೩೫ ॥
ತಥೇತಿ ಮತ್ವಾ ಭಗವಾನ್ಸ ನಾರದೋ
ಯಯೌ ಸುರಾನ್ ಶಕ್ರ ಪುರೋಗಮಾಂಶ್ಚ ।
ಆಚಷ್ಟ ಸರ್ವಂ ಹ್ಯಸುರೇಂದ್ರ ಭಾಷಿತಂ
ಸಹೋಪಹಾಸಂ ಮತಿಮಾಂಸ್ತಥೈವ ॥ ೩೬ ॥

---

ಬಾಹುವೇ! ಇದನ್ನು ತಿಳಿದು ನೀನು ಬಹು ಎಚ್ಚರಿಕೆಯಿಂದ ರಣಪ್ರಯತ್ನವನ್ನು ಮಾಡಬೇಕು.''

೩೧–೩೨. ನಾರದನಾಡಿದ ಮಾತನ್ನು ಕೇಳಿ ಮೇಧಾವಿಯಾದ ಆ ತಾರಕಾಸುರನು ನಗುತ್ತ ಅವನನ್ನು ಕುರಿತು, ''ಅಯ್ಯಾ ಮಹರ್ಷಿಯೇ! ನೀನೀಗಲೇ ಪುರಂದರನ ಬಳಿಗೈದಿ ಈಗ ನಾನು ಹೇಳುವ ಮಾತನ್ನವನಿಗೆ ಜಾಗ್ರತೆಯಾಗಿ ತಿಳಿಸು: 'ಎಲವೋ ಪುರಂದರನೇ! ನೀನು ಓರ್ವ ಕುಮಾರನನ್ನು ಮುಂದಿರಿಸಿಕೊಂಡು ನನ್ನೊಡನೆ ಯುದ್ಧಮಾಡಬಯಸಿರುವೆ.

೩೩–೩೬. ನೀನೀರೀತಿ ಮಾಡಿಕೊಂಡಿರುವುದು ಕೇವಲ ಆ ನಿನ್ನ ತಿಳಿಗೇಡಿತನದಿಂದಲೇ ಹೊರತು ಮತ್ತೆ ಬೇರೆಯಲ್ಲವು. ಪೂರ್ವದಲ್ಲಿ ನೀನು ಮುಚುಕುಂದನೆಂಬೋರ್ವ ಮಾನವನ ಸಹಾಯವನ್ನು ಪಡೆದು ಆತನ ಪ್ರಭಾವದಿಂದ ಅಮರಾವತಿಯಲ್ಲಿ ನಿಂತೆಯಲ್ಲದೆ ಮತ್ತೆ ಬೇರೆಯಲ್ಲವು. ಆ ರೀತಿಯೇ ಈಗಲೂ ಸಹ ಒಬ್ಬ ಹುಡುಗನನ್ನಾಶ್ರಯಿಸಿಕೊಂಡು ನನ್ನ ಮುಂದೆ ಯುದ್ಧಕ್ಕೆ ನಿಲ್ಲುವೆ. ಈಗ ನಾನು ನಿನ್ನನ್ನು ಲೋಕಪಾಲಕರೆಲ್ಲರೊಡಗೂಡಿದವನನ್ನಾಗಿಯೇ ವಧಿಸುತ್ತೇನೆ' ಎಲೈ ನಾರದಮುನಿಯೇ! ನೀನು ಆ ದೇವೇಂದ್ರನಿಗೀರೀತಿಯಾಗಿಯೇ ಹೇಳು. ಬೇರಿನ್ನಾವ ಮಾತನ್ನೂ ಹೇಳಬೇಡ.'' ಭಗವಾನ್ ನಾರದನು ಹಾಗೆಯೇ ಆಗಲೆಂದು ಹೇಳಿ ಅಲ್ಲಿ ದೇವೇಂದ್ರನೇ ಮೊದಲಾದ

ನಾರದ ಉವಾಚ:—

ಭವದ್ಭಿಃ ಶ್ರೂಯತಾಂ ದೇವಾ ವಚನಂ ಮಮ ನಾನ್ಯಥಾ ।
ತಾರಕೇಣ ಯದುಕ್ತಂ ಚ ಸಾನುಗೇನಾವಧಾರ್ಯತಾಂ ॥ ೩೭ ॥

ತಾರಕ ಉವಾಚ:—

ತ್ವಾಂ ಹನಿಷ್ಯಾಮಿ ರೇ ಮೂಢ ನಾನ್ಯಥಾ ಮಮ ಭಾಷಿತಂ ॥ ೩೮ ॥
ಮುಚುಕುಂದಂ ಸಮಾಸಾದ್ಯ ಲೋಕಪಾಲೈಶ್ಚ ಪೂಜಿತಃ ।
ನ ತ್ವಯಾ ಭೀರುಣಾ ಯೋತ್ಸ್ಯೇ ದೇವೋ ಭೂತ್ವಾ ನರಾಶ್ರಿತಃ ॥ ೩೯ ॥
ತಸ್ಯ ವಾಕ್ಯಂ ನಿಶಮ್ಯೋಚುಃ ಸರ್ವೇ ದೇವಾಃ ಸವಾಸವಾಃ ।
ಕುಮಾರಂ ಚ ಪುರಸ್ಕೃತ್ಯ ನಾರದಂ ಚರ್ಷಿಸತ್ತಮಂ ॥ ೪೦ ॥
ಜಾನಾಸಿ ತ್ವಂ ಹಿ ದೇವರ್ಷೇ ಕುಮಾರಸ್ಯ ಬಲಾಬಲಂ ।
ಅಜ್ಞೋ ಭೂತ್ವಾ ಕಥಂ ವಾಕ್ಯಮುಕ್ತಂ ತಸ್ಯ ಮಮಾಗ್ರತಃ ॥ ೪೧ ॥
ಪ್ರಹಸ್ಯ ನಾರದೋ ವಾಕ್ಯಮುವಾಚ ತಸ್ಯ ಸನ್ನಿಧೌ ।
ಅಹಮಪ್ಯುಪಹಾಸಂ ಚ ವಾಕ್ಯಂ ತಾರಕಮುಕ್ತವಾನ್ ॥ ೪೨ ॥

---

ದೇವತೆಗಳಿದ್ದೆಡೆಗೆ ಬಂದನು. ಮಹಾ ಬುದ್ಧಿಶಾಲಿಯಾದ ಆ ಮುನಿಯು ಅಸುರೇಂದ್ರನಾಡಿದ ಆ ಮಾತುಗಳೆಲ್ಲವನ್ನೂ ಹಾಸ್ಯಪೂರ್ವಕವಾಗಿ ಅವರಿಗೆ ಹೇಳಿದನು.

೩೭–೩೯. ನಾರದನು ಹೇಳುತ್ತಾನೆ:—"ಅಯ್ಯಾ ದೇವತೆಗಳಿರಾ! ಈಗ ನನ್ನ ಮಾತನ್ನು ಕೇಳಿರಿ. ಇದು ಸತ್ಯವಾದುದು. ಅನುಯಾಯಿಗಳೊಡಗೂಡಿದ ಆ ತಾರಕಾಸುರನಾಡಿದ ಮಾತುಗಳನ್ನೀಗ ಕೇಳಿ ತಿಳಿದುಕೊಳ್ಳಿರಿ. ತಾರಕನು ಹೇಳುತ್ತಾನೆ: 'ಎಲೆವೋ ಮೂಢನೇ! ಮುಚುಕುಂದನನ್ನಾಶ್ರಯಿಸಿಕೊಂಡು ಸ್ವರ್ಗರಾಜ್ಯದಲ್ಲಿ ನೆಲಸಿ ಲೋಕಪಾಲಕರೆಲ್ಲರಿಂದಲೂ ಪೂಜೆಗೊಳ್ಳುತ್ತಿರುವ ನಿನ್ನನ್ನು ನಾನು ಕೊಲ್ಲುತ್ತೇನೆ. ಅಲ್ಲದೆ ದೇವತೆಯಾಗಿದ್ದೂ ಮಾನವನನ್ನಾಶ್ರಯಿಸಿದ ಅಂಜುಕುಳಿಯಾದ ನಿನ್ನೊಡನೆ ನಾನು ಯುದ್ಧಮಾಡುವುದಿಲ್ಲ' ಎಂದು ಹೇಳಿದನು."

೪೦–೪೩. ಮಹೇಂದ್ರನೇ ಮೊದಲಾದ ದೇವತೆಗಳೆಲ್ಲರೂ ಈರೀತಿ ನುಡಿದ ನಾರದ ಮಹರ್ಷಿಯ ಮಾತುಗಳನ್ನು ಕೇಳಿ ಕುಮಾರಸ್ವಾಮಿಯನ್ನು ಪುರಸ್ಕರಿಸಿಕೊಂಡು ಆತನನ್ನು ಕುರಿತು, "ಅಯ್ಯಾ ನಾರದ ಮುನಿಯೇ! ಶಿವಕುಮಾರನಾದ ಈ ಕಾರ್ತಿಕೇಯ ಕುಮಾರನ ಬಲಾಬಲಗಳನ್ನು ಚೆನ್ನಾಗಿ ಬಲ್ಲವನಾಗಿದ್ದೂ, ನೀನೀರೀತಿ ಏನೂ ತಿಳಿವಿಲ್ಲದವನಂತೆ ಆ ತಾರಕನ ಮಾತುಗಳನ್ನು ನಮ್ಮ ಮುಂದೆ ಹೇಳಬಹುದೇ?" ಎಂದು ಹೇಳಿದರು. ಅದನ್ನು ಕೇಳಿ ನಾರದನು

ಜಾನೀಧ್ವಮಮರಾಃ ಸರ್ವೇ ಕುಮಾರಂ ಜಯಿನಂ ಸುರಾಃ ।
ಭವಿಷ್ಯತ್ಯತ್ರ ಮೇ ವಾಕ್ಯಂ ನಾತ್ರ ಕಾರ್ಯಾ ವಿಚಾರಣಾ ॥ ೪೩ ॥
ನಾರದಸ್ಯ ವಚಃ ಶ್ರುತ್ವಾ ಸರ್ವೇ ದೇವಾ ಮುದಾನ್ವಿತಾಃ ।
ಏಕಪದ್ಯೇನ ಚೋತ್ತಸ್ಥುರ್ಯೋದ್ಧುಕಾಮಾಶ್ಚ ತಾರಕಂ ॥ ೪೪ ॥
ಕುಮಾರಂ ಗಜಮಾರೋಪ್ಯ ದೇವೇಂದ್ರೋಽಹ್ಯಗ್ರತೋಽಭವತ್ ।
ಸುರಸೈನ್ಯೇನ ಮಹತಾ ಲೋಕಪಾಲೈಃ ಸಮಾವೃತಃ ॥ ೪೫ ॥
ತದಾ ದುಂದುಭಯೋ ನೇದುಃ ಭೇರೀತೂರ್ಯಾಣ್ಯನೇಕಶಃ ।
ವೀಣಾವೇಣುಮೃದಂಗಾನಿ ತಥಾ ಗಂಧರ್ವ ನಿಸ್ವನಾಃ ॥ ೪೬ ॥
ಗಜಂ ದತ್ವಾ ಮಹೇಂದ್ರಾಯ ಕುಮಾರೋ ಯಾನಮಾರುಹತ್ ।
ಅನೇಕರತ್ನಸಂವೀತಂ ನಾನಾಶ್ಚರ್ಯಸಮನ್ವಿತಂ ।
ವಿಚಿತ್ರ ಚಿತ್ರಂ ಸುಮಹತ್ತಥಾಶ್ಚರ್ಯ ಸಮನ್ವಿತಂ ॥ ೪೭ ॥
ವಿಮಾನಮಾರುಹ್ಯ ತದಾ ಮಹಾಯಶಾಃ
ಸ ಶಾಂಕರಿಃ ಸರ್ವಗಣೈರುಪೇತಃ ।
ಶ್ರಿಯಾ ಸಮೇತಃ ಪರಯಾ ಬಭೌ ಮಹಾನ್
ಸ ವೀಜ್ಯಮಾನಶ್ಚಾಮರೈರ್ಮಹಾಪ್ರಭೈಃ ॥ ೪೮ ॥

---

ಘಟ್ಟಿಯಾಗಿ ನಕ್ಕು ಆ ಮಹೇಂದ್ರನ ಸನ್ನಿಧಿಯಲ್ಲಿ, "ನಾನೂ ಸಹ ಆ ತಾರಕನ ಮುಂಗಡೆ ಹಾಸ್ಯದ ಮಾತುಗಳನ್ನೇ ಆಡಿ ಬಂದಿರುವೆನು. ಎಲೈ ದೇವತೆಗಳಿರಾ! ನೀವುಗಳೆಲ್ಲರೂ ಈ ಕುಮಾರಸ್ವಾಮಿಯು ಯಾವಾಗಲೂ ಜಯಶೀಲನೇ ಎಂಬ ವಿಷಯವನ್ನರಿತುಕೊಳ್ಳಿರಿ. ಈತನೇ ಯುದ್ಧದಲ್ಲಿ ವಿಜಯಿಯೇ ಆಗುವ ನೆಂಬುದರಲ್ಲಿ ಸಂಶಯವೇ ಇರುವುದಿಲ್ಲ. ಇದರಲ್ಲಿ ಯಾವ ವಿಚಾರವನ್ನೂ ಮಾಡಬೇಕಾಗಿರುವುದಿಲ್ಲ."

೪೪–೪೫. ಈ ರೀತಿ ನುಡಿದ ನಾರದ ಮುನಿಯ ಮಾತನ್ನು ಕೇಳಿ ಸಮಸ್ತ ದೇವತೆಗಳೂ ಸಂತುಷ್ಟರಾಗಿ ತಾರಕನೊಡನೆ ಯುದ್ಧಮಾಡಲು ಒಂದೇ ತಡೆವೆಯೇ ಒಟ್ಟಾಗಿ ಪ್ರಯಾಣಸನ್ನದ್ಧರಾಗಿ ಎದ್ದು ನಿಂತರು. ಆ ಸಮಯದಲ್ಲಿ ಮಹೇಂದ್ರನಾದರೋ ಕುಮಾರಸ್ವಾಮಿಯನ್ನು ಐರಾವತ ಗಜದ ಮೇಲೆ ಕುಳ್ಳಿರಿಸಿ ತಾನು ಸುರಸೈನ್ಯಗಳಿಂದಲೂ, ಲೋಕಪಾಲಕ ರಿಂದಲೂ, ಪರಿವೃತನಾಗಿ ಆ ತಾರಕಾಸುರನೊಡನೆ ಯುದ್ಧಮಾಡಲು ಪಯಣ ಮಾಡಿದನು.

೪೬–೪೮. ಆಗ ದೇವದುಂದುಭಿಗಳೂ, ಭೇರಿಗಳೂ, ತುತ್ತೂರಿಗಳೂ ಬಹಳವಾಗಿ ಧ್ವನಿಗೊಂಡವು. ಇಷ್ಟೆಯಲ್ಲದೆ ಗಾಂಧರ್ವ ಸಂಗೀತ, ಧ್ವನಿಯುಳ್ಳ

ಪ್ರಾಚೇತಸಂ ಛತ್ರ ಮಹಾಮಣಿಪ್ರಭಂ
ರತ್ನೈರುಪೇತಂ ಬಹುಭಿರ್ವಿರಾಜಿತಂ ।
ಧೃತಂ ತದಾ ತೇನ ಕುಮಾರಮೂರ್ಧನಿ
ಚಂದ್ರೇಣ ಚಾಂದ್ರೈಃ ಕಿರಣೈಃ ಸುಶೋಭಿತಂ ॥ ೪೯ ॥
ಸಂಮಿಲಿತಾಸ್ತದಾ ಸರ್ವೇ ದೇವಾ ಇಂದ್ರ ಪುರೋಗಮಾಃ ।
ಬಲೈಃ ಸ್ವೈಃ ಸ್ವೈಃ ಪರಿಕ್ರಾಂತಾ ಯೋದ್ಧುಕಾಮಾ ಮಹಾಬಲಾಃ ॥೫೦॥
ಯಮೋಽಪಿ ಸ್ವಗಣೈಃ ಸಾರ್ಧಂ ಮರುದ್ಭಿಶ್ಚ ಸದಾಗತಿಃ ।
ಪಾಥೋಭಿರ್ವರುಣಸ್ತತ್ರ ಕುಬೇರೋ ಗುಹ್ಯಕೈಃ ಸಹ ।
ಈಶೋಽಪಿ ಪ್ರಮಥೈಃ ಸಾರ್ಧಂ ನೈರುತೋ ವ್ಯಾಧಿಭಿಃ ಸಹ ॥ ೫೧ ॥
ಏವಂ ತೇಽಷ್ಟೌ ಲೋಕಪಾ ಯೋದ್ಧುಕಾಮಾಃ
ಸರ್ವೇ ಮಿಲಿತ್ವಾ ತಾರಕಂ ಹಂತುಮೇವ ।
ಪುರಸ್ಕೃತ್ವಾ ಶಾಂಕರಿಂ ವಿಶ್ವವಂದ್ಯಂ
ಸೇನಾಪತಿಂ ಚಾತ್ಮವಿದಾಂ ವರಿಷ್ಠಂ ॥ ೫೨ ॥
ಏವಂ ತೇ ಯೋದ್ಧುಕಾಮಾ ಹಿ ಅವತೇರುಶ್ಚ ಭೂತಲಂ ।
ಅಂತರ್ವೇದ್ಯಾಂ ಸ್ಥಿತಾಃ ಸರ್ವೇ ಗಂಗಾಯಮುನಮಧ್ಯಗಾಃ ॥ ೫೩ ॥

---

ವೀಣೆ, ಕೊಳಲು, ಮೃದಂಗ ವಾದ್ಯಗಳೂ ಮೊಳಗಿದುವು. ಆ ಸಮಯದಲ್ಲಿ ಶ್ರೀ ಕುಮಾರಸ್ವಾಮಿಯಾದರೋ ಮಹೇಂದ್ರನಿಗೆ ಗಜವನ್ನಿತ್ತು ತಾನು ಅನೇಕ ರತ್ನಸಮನ್ವಿತವೂ, ನಾನಾಶ್ಚರ್ಯಯುಕ್ತವೂ ವಿಚಿತ್ರ ಚಿತ್ರವೂ, ಬಹು ಮಹತ್ತರವೂ ಆದ ಪಲ್ಲಕ್ಕಿಯನ್ನು ಏರಿ ಕುಳಿತನು.

೪೯. ಆಗಲಾ ಮಹಾ ಕೀರ್ತಿಶಾಲಿಯೂ, ಸಮಸ್ತಗುಣಪರಿಪೂರ್ಣನೂ, ಶಂಕರ ಕುಮಾರನೂ ಆದ ಶ್ರೀ ಷಣ್ಮುಖಸ್ವಾಮಿಯು ಅತ್ಯುತ್ತಮವಾದ ತೇಜಸ್ಸಿನಿಂದ ಕೂಡಿ ಚಾಮರಗಳಿಂದ ಬೀಸಲ್ಪಡುವವನಾಗಿ ವಿರಾಜಿಸಿದನು.

೫೦. ಅದೇ ಸಮಯದಲ್ಲಿಯೇ ಮಹಾ ಬಲಾಢ್ಯರಾದ ಮಹೇಂದ್ರಾದಿ ಸಮಸ್ತ ದೇವತೆಗಳೂ ಸಹ ತಮ್ಮ ತಮ್ಮ ಸೈನ್ಯಗಳೊಡನೆ ಒಗ್ಗೂಡಿ ತಾರಕನೊಡನೆ ಕಾಳಗವೆಸಗಲು ಮುಂದುವರಿದರು.

೫೧–೫೩. ಯಮನು ತನ್ನ ಕಿಂಕರ ಗಣಗಳಿಂದಲೂ, ವಾಯುದೇವನು ಸಪ್ತಮರುದ್ಗಣಗಳಿಂದಲೂ, ವರುಣನು ಮುಗಿಲುಗಳಿಂದಲೂ, ಕುಬೇರನು ಗುಹ್ಯಕರೊಡನೆಯೂ, ಈಶಾನನು ಪ್ರಮಥಗಣಗಳೊಡನೆಯೂ, ನೈರುತನು ವ್ಯಾಧಿಗಳೊಡನೆಯೂ ಹೀಗೆ ಆ ಎಂಟು ಮಂದಿ ಲೋಕಪಾಲಕರೂ ಸಹ

ಪಾತಾಲಾಚ್ಚ ಸಮಾಯಾತಾಸ್ತಾರಕಸ್ಯೋಪಜೀವಿನಃ ।
ಚತುರಂಗಬಲೋಪೇತಾಃ ಹಂತುಕಾಮಾಃ ಸುರಾನ್ರಣೇ ॥ ೫೪ ॥
ತಾರಕೋ ಹಿ ಸಮಾಯಾತೋ ವಿಮಾನೇನ ವಿರಾಜಿತಃ ।
ಛತ್ರೇಣ ಚ ಮಹಾತೇಜಾ ಧ್ರಿಯಮಾಣೇನ ಮೂರ್ಧನಿ ॥ ೫೫ ॥
ಚಾಮರೈರ್ವೀಜ್ಯಮಾನೋ ಹಿ ಶುಶುಭೇ ದೈತ್ಯರಾಟ್ಸ್ವಯಂ ॥ ೫೬ ॥
ಏವಂ ದೇವಾಶ್ಚ ದೈತ್ಯಾಶ್ಚ ಅಂತರ್ವೇದ್ಯಾಂ ಸ್ಥಿತಾಸ್ತದಾ ।
ಸೈನ್ಯೇನ ಮಹತಾ ತತ್ರ ವ್ಯೂಹಾನ್ಕೃತ್ವಾ ಪೃಥಕ್ ಪೃಥಕ್ ॥ ೫೭ ॥
ಗಜಾನ್ಕೃತ್ವಾ ಹ್ಯೇಕತಶ್ಚ ಹಯಾಂಶ್ಚ ವಿವಿಧಾಂ ಸ್ತಥಾ ।
ಸ್ಯಂದನಾನಿ ವಿಚಿತ್ರಾಣಿ ನಾನಾರತ್ನಯುತಾನಿಚ ॥ ೫೮ ॥
ಪಾದಾತಾ ಬಹವಸ್ತತ್ರ ಶಕ್ತಿಶೂಲಪರಶ್ವಧೈಃ ।
ಖಡ್ಗ ತೋಮರ ನಾರಾಚೈಃ ಪಾಶಮುದ್ಗರ ಶೋಭಿತಾಃ ॥ ೫೯ ॥

---

ಎಲ್ಲರೂ ಒಟ್ಟುಗೂಡಿ ಆ ತಾರಕನನ್ನು ಕೊಲ್ಲಲೋಸುಗ, ಆತ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಷಣ್ಮುಖನನ್ನು ಪುರಸ್ಕರಿಸಿಕೊಂಡು ಯುದ್ಧಾಪೇಕ್ಷಿಗಳಾಗಿ (ಪ್ರಯಾಣಸನ್ನದ್ಧರಾದರು). ಹೀಗೆ ಯುದ್ಧಕಾಮರಾದ ಆ ದೇವತೆಗಳೆಲ್ಲರೂ ಭೂಮಂಡಲಕ್ಕಿಳಿದು ಗಂಗಾ ಯಮುನಾ ನದಿಗಳ ನಡುವೆ ಬಯಲಲ್ಲಿ ಬಂದು ನಿಂತರು.

೫೪. ಅಂತೆಯೇ ತಾರಕಾಸುರನ ಕಿಂಕರಯೋಧರೂ ಸಹ ಪಾತಾಳ ಲೋಕದಿಂದ ಅದೇ ಪ್ರದೇಶಕ್ಕೈತಂದು ತಮ್ಮ ಚತುರಂಗ ಸೇನೆಯೊಡನೆ ಅಲ್ಲಿಯೇ ಆ ದೇವತೆಗಳೆಲ್ಲರನ್ನೂ ಕೊಲ್ಲಬಯಸಿದರು.

೫೫–೫೬. ಆ ಸಮಯದಲ್ಲಿಯೇ ದೈತ್ಯೇಶ್ವರನಾದ ತಾರಕಾಸುರನೂ ಸಹ ವಿಮಾನದಲ್ಲಿ ಕುಳಿತು ತಲೆಯಮೇಲೆ ಹಿಡಿದಿರುವ ಶ್ವೇತಛತ್ರದಿಂದಲೂ, ಬೀಸಲ್ಪಡುತ್ತಿರುವ ಚಾಮರಗಳಿಂದಲೂ ಬಹುವಾಗಿ ಬೆಳಗುತ್ತ ಆ ಪ್ರದೇಶಕ್ಕೆ ನಡೆತಂದನು.

೫೭–೬೦. ಹೀಗೆ ದೇವತೆಗಳೂ, ದೈತ್ಯರೂ ಗಂಗಾ ಯಮುನಾ ನದಿಗಳ ನಡುವಣ ಅಂತರ್ವೇದಿಯೆಂಬೆಡೆಯಲ್ಲಿ ನಿಂತು ಮಹತ್ತರವಾದ ತಮ್ಮ ಸೈನ್ಯಗಳನ್ನು ಬೇರೆಬೇರೆ ವ್ಯೂಹಗಳನ್ನಾಗಿ ನಿಲ್ಲಿಸಿದರು. ಅವರು ಆನೆಗಳನ್ನೆಲ್ಲ ಒಂದೆಡೆ ನಿಲ್ಲಿಸಿ, ಬಗೆಬಗೆಯ ಜಾತಿಯ ಕುದುರೆಗಳನ್ನೆಲ್ಲ ಒಂದೆಡೆ ನಿಲ್ಲಿಸಿ, ವಿಚಿತ್ರಗಳೂ, ನಾನಾ ರತ್ನಯುತಗಳೂ ಆದ ರಥಗಳೆಲ್ಲವನ್ನೂ ಒಂದೆಡೆ ನಿಲ್ಲಿಸಿ ಸೇನೆಯನ್ನೆಲ್ಲ ಸಜ್ಜುಗೊಳಿಸಿದರು. ಆ ಉಭಯ ಸೇನೆಗಳಲ್ಲಿದ್ದ ಕಾಲಾಳುಗಳೂ ಸಹ ಅಸಂಖ್ಯಾಕರಾಗಿ ಅವರೆಲ್ಲರೂ ಶಕ್ತಿ, ಶೂಲ, ಗಂಡುಗೊಡಲಿ, ಕತ್ತಿ, ಗುರಾಣಿ, ನಾರಾಚ, ಪಾಶ, ಮುದ್ಗರಗಳಿಂದ ಶೋಭಿಸುತ್ತಿದ್ದರು. ಎಲ್ಲೈ

**ತೇ ಸೇನೇ ಸುರದೈತ್ಯಾನಾಂ ಶುಶುಭಾತೇ ಪರಸ್ಪರಂ ।**
**ಹಂತು ಕಾಮಾಸ್ತದಾ ತೇ ವೈ ಸ್ತೂಯಮಾನಾಶ್ಚ ಬಂಧುಭಿಃ ॥ ೬೦ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ದೇವೈಃ ಸಹ ತಾರಕಾಸುರಸ್ಯ ಸಂಗ್ರಾಮೇ ದೇವದೈತ್ಯ ಸೇನಾ ಸನ್ನಾಹ ವರ್ಣನಂ" ನಾಮ ಅಷ್ಟಾವಿಂಶೋಽಧ್ಯಾಯಃ**

---

ಶೌನಕಾದಿ ಮುನಿಗಳಿರಾ! ಈ ಪ್ರಕಾರವಾಗಿ ಆ ಸುರದೈತ್ಯರೀರ್ವರ ಸೇನೆಗಳವರೂ ಸಹ ಅವರವರ ಬಂಧುಗಳಿಂದ ಸ್ತುತಿಸಲ್ಪಡುತ್ತಿರುವವರಾಗಿ ಒಬ್ಬರನ್ನೊಬ್ಬರು ಕೊಲ್ಲಬಯಸಿ ಅಲ್ಲಿ ನಿಂತು ಶೋಭಿಸುತ್ತಿದ್ದರು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ
"ದೇವತೆಗಳಿಗೂ ತಾರಕನಿಗೂ ನಡೆದ ಯುದ್ಧದಲ್ಲಿ ದೇವದೈತ್ಯಸೇನೆಯ
ಸನ್ನಾಹದ ವರ್ಣನ"ವೆಂಬ
ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಏಕೋನತ್ರಿಂಶೋಽಧ್ಯಾಯಃ

### ಸುರ ತಾರಕಾಸುರ ಸಂಗ್ರಾಮ ವರ್ಣನಂ

**ಲೋಮಶ ಉವಾಚ:—**

**ಉಭೇ ಸೇನೇ ತದಾ ತೇಷಾಂ ಸುರಾಣಾಂ ಚಾಸುರದ್ವಿಷಾಂ ।**
**ಅನೇಕಾಶ್ಚರ್ಯಸಂವೀತೇ ಚತುರಂಗಬಲಾನ್ವಿತೇ ।**
**ವಿರೇಜತುಸ್ತದಾನ್ಯೋನ್ಯಂ ಗರ್ಜತೋ ವಾಂಬುದಾಗಮೇ ॥ ೧ ॥**
**ಏತಸ್ಮಿನ್ನಂತರೇ ತತ್ರ ವಲ್ಗಮಾನಾಃ ಪರಸ್ಪರಂ ।**
**ದೇವಾಸುರಾಸ್ತದಾ ಸರ್ವೇ ಯುಯುಧುಶ್ಚ ಮಹಾಬಲಾಃ ॥ ೨ ॥**
**ಯುದ್ಧಂ ಸುತುಮುಲಂ ಹ್ಯಾಸೀದ್ದೇವದೈತ್ಯಸಮಾಕುಲಂ ।**
**ರುಂಡಮುಂಡಾಂಕಿತಂ ಸರ್ವಂ ಕ್ಷಣೇನ ಸಮಪದ್ಯತ ॥ ೩ ॥**
**ಭೂಮೌ ನಿಪತಿತಾಸ್ತತ್ರ ಶತಶೋಽಥ ಸಹಸ್ರಶಃ ।**
**ಕೇಷಾಂಚಿದ್ಬಾಹವಶ್ಛಿನ್ನಾಃ ಖಡ್ಗಪಾತೈಃ ಸುದಾರುಣೈಃ ॥ ೪ ॥**
**ಮುಚುಕುಂದೋ ಹಿ ಬಲವಾಂಸ್ತ್ರೈಲೋಕ್ಯೇಽಮಿತವಿಕ್ರಮಃ ॥ ೫ ॥**

---

### ಕನ್ನಡದ ಅನುವಾದ

#### ಸುರ ತಾರಕಾಸುರ ಸಂಗ್ರಾಮವರ್ಣನ

೧. ಲೋಮಶನು ಹೇಳುತ್ತಾನೆ.—ಅಯ್ಯಾ ವಿಪ್ರರಿರಾ! ಅನೇಕಾಶ್ಚರ್ಯಗಳೊಡಗೂಡಿ, ಚತುರಂಗಬಲ ಸಮನ್ವಿತವಾಗಿದ್ದ ಆ ದೇವಾಸುರರೀರ್ವರ ಸೇನೆಗಳೂ ಪರಸ್ಪರವಾಗಿ ಮುಗಿಲುಗಳಿದ್ದ ಕಾಲದಲ್ಲಂತೋ ಅಂತು ಗರ್ಜಿಸುತ್ತಿದ್ದುವು.

೨–೩. ಇದೇ ಸಮಯದಲ್ಲಿಯೇ ಪರಸ್ಪರವಾಗಿ ಕೆಚ್ಚಿನಿಂದ ಸಿಂಹನಾದಗಳನ್ನು ಮಾಡುತ್ತಲಿದ್ದ ಮಹಾ ಬಲಾಢ್ಯರಾದ ಆ ದೇವಾಸುರರೀರ್ವರೂ ಯುದ್ಧಮಾಡಿದರು. ಆ ಯುದ್ಧವು ಆ ದೇವದೈತ್ಯರ ಸೇನೆಗಳೆರಡರಲ್ಲಿಯೂ ತಳಮಳವುಂಟಾಗಿ ಬಹು ಬಿರುಸಾಗಿ ನಡೆಯಿತು. ಒಂದು ಕ್ಷಣಮಾತ್ರದಲ್ಲಿಯೇ ಕಾಳೆಗದ ನೆಲವೆಲ್ಲ ರುಂಡಮುಂಡಗಳಿಂದ ತುಂಬಿಹೋಯಿತು.

೪. ಅನೇಕ ದೈತ್ಯರೂ, ದೇವತೆಗಳೂ ನೂರಾರುಗಳಾಗಿಯೂ, ಸಾವಿರಾರುಗಳಾಗಿಯೂ ನೆಲಕ್ಕೆ ಬಿದ್ದುಹೋದರು. ಕತ್ತಿಯ ಪೆಟ್ಟುಗಳಿಂದ ಕೆಲವರ ತೋಳುಗಳೇ ಕತ್ತರಿಸಿ ಬಿದ್ದುಹೋದುವು.

೫–೬. ಆ ಯುದ್ಧದಲ್ಲಿ ದೇವತೆಗಳ ಕಡೆ ಯುದ್ಧಮಾಡುತ್ತಿದ್ದ ಮುಚುಕುಂದನು ಮೂರು ಲೋಕಗಳಲ್ಲಿಯೂ ಸಮಾನವಿಲ್ಲದ ಬಲಪರಾಕ್ರಮವುಳ್ಳವನು. ಮಹಾ ಬುದ್ಧಿವಂತನಾದ ಆತನು ತನ್ನ ಪ್ರಾಣಗಳನ್ನೆಲ್ಲ ಬಿಟ್ಟು

ತಾರಕೋ ಹಿ ತದಾ ತೇನ ಮುಚುಕುಂದೇನ ಧೀಮತಾ ।
ಖಡ್ಗೇನ ಚಾಹತಸ್ತತ್ರ ಸರ್ವಪ್ರಾಣೇನ ವಕ್ಷಸಿ ।
ಪ್ರಸಹ್ಯ ತತ್ಪ್ರಹಾರಂ ಚ ಪ್ರಹಸನ್ವಾಕ್ಯಮಬ್ರವೀತ್ ॥ ೬ ॥
ಕಿಂ ರೇ ಮೂಢ ತ್ವಯಾ ಚಾದ್ಯ ಕೃತಮಸ್ತಿ ಬಲಾದಿದಂ ।
ನ ತ್ವಯಾ ಯೋದ್ಧುಮಿಚ್ಛಾಮಿ ಮಾನುಷೇಣೈವ ಲಜ್ಜಯಾ ॥ ೭ ॥
ತಾರಕಸ್ಯ ವಚಃ ಶ್ರುತ್ವಾ ಮುಚುಕುಂದೋಽಭ್ಯಭಾಷತ ।
ಮಯಾ ಹತೋಽಸಿ ದೈತ್ಯೇಂದ್ರ ನಾನ್ಯೋ ಭವಿತುಮರ್ಹಸಿ ॥ ೮ ॥
ದೃಷ್ಟ್ವಾ ಮೇ ಖಡ್ಗಸಂಪಾತಂ ನ ತ್ವಂ ತಿಷ್ಠಸಿ ಚಾಗ್ರತಃ ।
ತ್ವಾಂ ಹನ್ಮಿ ಪಶ್ಯ ಮೇ ಶೌರ್ಯಂ ದೈತ್ಯರಾಜ ಸ್ಥಿರೋ ಭವ ॥ ೯ ॥
ಏವಮುಕ್ತ್ವಾ ತದಾ ವೀರೋ ಮುಚುಕುಂದೋ ಮಹಾಬಲಃ ।
ಯಾವಜ್ಜಘಾನ ಖಡ್ಗೇನ ತಾವಚ್ಛಕ್ತ್ಯಾ ಸಮಾಹತಃ ।
ಮಾಂಧಾತುಸ್ತನಯಸ್ತತ್ರ ಪಪಾತ ರಣಮಂಡಲೇ ॥ ೧೦ ॥
ಪತಿತಸ್ತತ್ಕ್ಷಣಾದೇವ ಚೋತ್ಥಿತಃ ಪರವೀರಹಾ ॥ ೧೧ ॥

---

ಖಡ್ಗದಿಂದ ಆ ತಾರಕಾಸುರನ ವಕ್ಷಸ್ಥಳಕ್ಕೆ ಬಲವಾಗಿ ಹೊಡೆದನು. ಆಗಲಾ ತಾರಕನು ಆ ಹೊಡೆತವನ್ನು ತಡೆದುಕೊಂಡು ನಗುತ್ತ ಅವನನ್ನು ಕುರಿತು ಹೀಗೆಂದನು.

೭. "ಎಲವೋ ಮೂಢನೇ! ಈಗ ನೀನು ನಿನ್ನ ಬಲವನ್ನೆಲ್ಲ ಬಿಟ್ಟು ಈ ಖಡ್ಗದಿಂದ ಹೊಡೆದು ನೀನು ಮಾಡಿದುದೇನು? ಇಷ್ಟೆಯಲ್ಲದೆ ಮನುಷ್ಯನಾದ ನಿನ್ನೊಡನೆ ಕಾಳೆಗಮಾಡಲು ನನಗೆ ನಾಚಿಕೆಯಾಗುತ್ತದೆಯಾದುದರಿಂದ ನಾನು ಯುದ್ಧಮಾಡಬಯಸುವುದಿಲ್ಲ."

೮–೯. ತಾರಕನ ಈ ಮಾತನ್ನು ಕೇಳಿ ಮುಚುಕುಂದನು ಅವನನ್ನು ಕುರಿತು, "ಅಯ್ಯಾ ದೈತ್ಯೇಂದ್ರನೇ! ಈಗ ನನ್ನ ಕತ್ತಿಯ ಪೆಟ್ಟನ್ನು ತಿಂದವನು ನೀನಲ್ಲದೆ ಬೇರೆಯವನಲ್ಲವಷ್ಟೆ? ಈ ಖಡ್ಗದ ಹೊಡೆತವನ್ನು ಕಂಡು ನೀನು ನನ್ನ ಮುಂದೆ ನಿಲ್ಲುವುದಿಲ್ಲ. ಸ್ಥಿರವಾಗಿ ನಿಲ್ಲು; ನಿನ್ನನ್ನು ನಾನು ಕೊಲ್ಲುತ್ತೇನೆ. ನನ್ನ ಶೌರ್ಯವನ್ನಾದರೂ ನೋಡು" ಎಂದು ಹೇಳಿದನು.

೧೦. ವೀರನೂ, ಮಹಾ ಬಲಾಢ್ಯನೂ ಆದ ಮುಚುಕುಂದನಿಂತು ನುಡಿದು ಪುನಃ ಖಡ್ಗವನ್ನು ತೆಗೆದು ಆ ದೈತ್ಯನನ್ನು ಹೊಡೆಯುವಷ್ಟರಲ್ಲಿಯೇ ಅವನ ಶಕ್ತ್ಯಾಯುಧದಿಂದ ಪೆಟ್ಟು ತಿಂದನು. ಒಡನೆಯೇ ಮಾಂಧಾತೃವಿನ ಮಗನಾದ ಆತನು ಆ ಯುದ್ಧಭೂಮಿಯಲ್ಲಿ ಬಿದ್ದುಹೋದನು.

೧೧–೧೪. ಶತ್ರುಮರ್ದನನಾದ ಆತನು ನೆಲಕ್ಕೆ ಬಿದ್ದೊಡನೆಯೇ ಮತ್ತೆ ಮೇಲಕ್ಕೆದ್ದನು. ಜಗತ್ತನ್ನೇ ಜಯಿಸಿರುವವನೂ, ಮಹಾ ಬಲಾಢ್ಯನೂ ಆದ

ಸ ಸಜ್ಜಮಾನೋಽತಿ ಮಹಾಬಲೋ ವೈ
ಹಂತುಂ ತದಾ ದೈತ್ಯಪತಿಂ ಚ ತಾರಕಂ ।
ಬ್ರಹ್ಮಾಸ್ತ್ರಮುದ್ಯಮ್ಯ ಧನುರ್ಗೃಹೀತ್ವಾ
ಮಾಂಧಾತೃಪುತ್ರೋ ಭುವನೈಕಜೇತಾ ॥ ೧೨ ॥
ಸ ತಾರಕಂ ಯೋದ್ಧುಕಾಮಸ್ತರಸ್ವೀ
ರುಷಾನ್ವಿತೋತ್ಫುಲ್ಲವಿಲೋಚನೋ ಮಹಾನ್ ।
ಸ ನಾರದೋ ಬ್ರಹ್ಮಸುತೋ ಬಭಾಷೇ
ತದಾ ನೃವೀರಂ ಮುಚುಕುಂದಮೇವಂ ॥ ೧೩ ॥
ನ ತಾರಕೋ ಹನ್ಯತೇ ಮಾನುಷೇಣ
ತಸ್ಮಾದೇತನ್ಮಾವಿನೋಚೇರ್ವೃಥಾಸ್ತ್ರಂ ॥ ೧೪ ॥
ನಿಶಮ್ಯ ವಚನಂ ತಸ್ಯ ದೇವರ್ಷೇರ್ನಾರದಸ್ಯ ಚ ।
ಮುಚುಕುಂದ ಉವಾಚೇದಂ ಭವಿತಾ ಕೋಽಸ್ಯ ಮಾರಕಃ ॥ ೧೫ ॥
ತದೋವಾಚ ಮಹಾತೇಜಾ ನಾರದೋ ದಿವ್ಯದರ್ಶನಃ ।
ಏನಂ ಹಂತಾ ಕುಮಾರಶ್ಚ ಕುಮಾರೋಽಯಂ ಶಿವಾತ್ಮಜಃ ॥ ೧೬ ॥
ತಸ್ಮಾದ್ಭವದ್ಭಿಸ್ಥಾತವ್ಯಮೇಕಪದ್ಯೇನ ಯುಧ್ಯತಾಂ ।
ತಿಷ್ಠ ತ್ವಂ ಚಾಯತೋ ಭೂತ್ವಾ ಮುಚುಕುಂದ ಮಹಾಮತೇ ॥ ೧೭ ॥

---

ಆ ಮಾಂಧಾತೃಪುತ್ರನು ರೋಷದಿಂದರಳಿದ ಕಣ್ಣುಗಳುಳ್ಳವನಾಗಿ ಧನುಸ್ಸನ್ನು ತೆಗೆದುಕೊಂಡು ಬ್ರಹ್ಮಾಸ್ತ್ರವನ್ನು ಹೂಡಿ ದೈತ್ಯಪತಿಯಾದ ಆ ತಾರಕನೊಡನೆ ಯುದ್ಧಮಾಡಬಯಸಿದನು. ಆಗ ಬ್ರಹ್ಮಸುತನಾದ ನಾರದ ಮುನಿಯು ಆ ಮಾನವ ವೀರನನ್ನು ಕುರಿತು, "ಅಯ್ಯಾ ಮುಚುಕುಂದನೇ! ಈ ತಾರಕನು ಮಾನವನಿಂದ ಸಾಯುವುದಿಲ್ಲವಾದುದರಿಂದ ಈ ಮಹಾಸ್ತ್ರವನ್ನು ಪ್ರಯೋಗ ಮಾಡಿ ವ್ಯರ್ಥಗೊಳಿಸಬೇಡ" ಎಂದು ಹೇಳಿದನು.

೧೫–೧೭. ದೇವರ್ಷಿಯಾದ ನಾರದನ ಮಾತನ್ನು ಕೇಳಿ ಮುಚುಕುಂದನು, "ಎಲೈ ಮುನಿಯೇ! ಈ ರಾಕ್ಷಸನನ್ನು ಕೊಲ್ಲುವವನಾರೆಂಬುದನ್ನು ತಿಳಿಸು" ಎಂದನು. ಆಗ ಮಹಾ ತೇಜಸ್ವಿಯೂ, ದಿವ್ಯಜ್ಞಾನಿಯೂ ಆದ ಆ ಮುನಿಯು, "ಅಯ್ಯಾ ಮುಚುಕುಂದನೇ! ಇವನನ್ನು ಕೊಲ್ಲುವಾತನು ಶಿವನ ಮಗನೂ, ಕುಮಾರನೂ ಆದ ಈ ಕುಮಾರಸ್ವಾಮಿಯೆಂದು ತಿಳಿಯುವವನಾಗು. ಆದುದರಿಂದ ನೀವೆಲ್ಲರೂ ಒಟ್ಟುಗೂಡಿಯೇ ಇವನೊಡನೆ ಕಾಳೆಗಮಾಡುತ್ತಿರಿ. ಎಲೈ ಮಹಾಮತಿಯಾದ ಮುಚುಕುಂದನೇ! ಈಗ ನೀನು ಸ್ವಲ್ಪ ವಿರಾಮವಾಗಿಯೂ ಬಹಳ ಆಯಾಸಪಡದೆಯೂ ಯುದ್ಧಮಾಡು" ಎಂದು ಹೇಳಿದನು.

ನಿಶಮ್ಯ ವಾಕ್ಯಂ ಚ ಮನೋಹರಂ ಶುಭಂ
ಹ್ಯುದೀರಿತಂ ತೇನ ಮಹಾಪ್ರಭೇಣ ।
ಸರ್ವೇ ಸುರಾಃ ಶಾಂತಿಪರಾ ಬಭೂವು
ಸ್ತೇನೈವ ಸಾಕಂ ನೃವರೇಣ ಯತ್ನಾತ್ ॥ ೧೮ ॥
ತತೋ ದುಂದಭಯೋ ನೇದುಃ ಶಂಖಾಶ್ಚ ಕೃತನಿಶ್ಚಯಾಃ ।
ತಾಡಿತಾ ವಿವಿಧೈರ್ವಾದ್ಯೈಃ ಸುರಾಸುರಸಮನ್ವಿತೈಃ ॥ ೧೯ ॥
ಜಗರ್ಜುರಸುರಾಸ್ತತ್ರ ದೇವಾನ್ಪ್ರತಿ ಕೃತೋದ್ಯಮಾಃ ।
ಶಿವಕೋಪೋದ್ಭವೋ ವೀರೋ ವೀರಭದ್ರೋ ರುಷಾನ್ವಿತಃ ॥ ೨೦ ॥
ಗಣೈರ್ಬಹುಭಿರಾಸಾದ್ಯ ತಾರಕಂ ಚ ಮಹಾಬಲಂ ।
ಮುಚುಕುಂದಂ ಪೃಷ್ಠತಃ ಕೃತ್ವಾ ತಥೈವ ಚ ಸುರಾನಪಿ ॥ ೨೧ ॥
ತದಾ ತೇ ಪ್ರಮಥಾಃ ಸರ್ವೇ ಪುರಸ್ಕೃತ್ಯ ಕುಮಾರಕಂ ।
ಯುಯುಧುಃ ಸಂಯುಗೇ ತತ್ರ ವೀರಭದ್ರಾದಯೋ ಗಣಾಃ ॥ ೨೨ ॥
ತ್ರಿಶೂಲೈರ್ಋಷ್ಟಿಭಿಃ ಪಾಶೈಃ ಖಡ್ಗೈಃ ಪರಶುಪಟ್ಟಿಶೈಃ ।
ನಿಜಘ್ನುಃ ಸಮರೇಽನ್ಯೋನ್ಯಂ ಸುರಾಸುರವಿಮರ್ದನೇ ॥ ೨೩ ॥
ತಾರಕೋ ವೀರಭದ್ರೇಣ ತ್ರಿಶೂಲೇನ ಹತೋ ಭೃಶಂ ।
ಪಪಾತ ಸಹಸಾ ತತ್ರ ಕ್ಷಣಂ ಮೂರ್ಛಾಪರಿಪ್ಲುತಃ ॥ ೨೪ ॥

---

೧೮–೨೧. ಮನೋಹರವೂ, ಮಂಗಳಕರವೂ ಆಗಿ ಮಹಾ ಪ್ರಭಾವಶಾಲಿಯಾದ ನಾರದ ಮಹರ್ಷಿಯ ಮಾತುಗಳನ್ನು ಕೇಳಿದ ಬಳಿಕ ಆ ಮಾನವಶ್ರೇಷ್ಠನಾದ ಮುಚುಕುಂದನೊಡನೆಯೇ ಸಮಸ್ತ ದೇವತೆಗಳೂ ಸಹ ಪ್ರಯತ್ನಪೂರ್ವಕವಾಗಿಯೇ ಸಮಾಧಾನವನ್ನು ಹೊಂದಿದರು. ಆಗ ಸಮರಾಂಗಣದಲ್ಲೆಲ್ಲಾ ದುಂದುಭಿಗಳೂ, ಶಂಖಗಳೂ, ಇನ್ನೂ ಇತರ ವಾದ್ಯಗಳೂ ಆ ದೇವದಾನವರಿಂದ ಧ್ವನಿಗೊಳಿಸಲಾದುವು. ಯುದ್ಧೋದ್ಯಮದಲ್ಲಿ ತೊಡಗಿದ್ದ ಅಸುರರೆಲ್ಲರೂ ದೇವತೆಗಳ ಮೇಲೆ ರೇಗಿ ಗರ್ಜಿಸತೊಡಗಿದರು. ಆಗ ಶಿವನ ಕೋಪದಿಂದುದಿಸಿದ ವೀರಭದ್ರನು ರೋಷಗೊಂಡು ಅನೇಕ ಪ್ರಮಥಗಣಗಳೊಡನೆ ಮುಂದುವರೆದು ಮುಚುಕುಂದನನ್ನೂ, ದೇವತೆಗಳನ್ನೂ ಹಿಂದಕ್ಕೆ ಬಿಟ್ಟು ಮಹಾಬಲನಾದ ಆ ತಾರಕನ ಬಳಿ ಸಾರಿದನು.

೨೨–೨೬. ಎಲೈ ಶೌನಕಾದಿ ಮುನಿಗಳಿರಾ! ತರುವಾಯ ದೇವತೆಗಳಿಗೂ, ದಾನವರಿಗೂ ಅತ್ಯಂತ ಮರ್ದನಕರವಾದ ಆ ಕಾಳಗದಲ್ಲಿ ವೀರಭದ್ರನೇ ಮೊದಲಾದ ಎಲ್ಲ ಪ್ರಮಥರೂ ತ್ರಿಶೂಲ, ಋಷ್ಟಿ, ಪಾಶ, ಖಡ್ಗ, ಪರಶು, ಪಟ್ಟಿಶ ಮೊದಲಾದ ಆಯುಧಗಳಿಂದ ಆ ದಾನವರೊಬ್ಬೊಬ್ಬರನ್ನೂ ಬಲವಾಗಿ ಹೊಡೆದರು. ಆಗ ಶಿವನ ಅನುಚರನಾದ ವೀರಭದ್ರನು ತಾರಕನನ್ನು ತ್ರಿಶೂಲದಿಂದ

ಉತ್ಥಾಯ ಚ ಮುಹೂರ್ತಾಚ್ಚ ತಾರಕೋ ದೈತ್ಯಪುಂಗವಃ ।
ಲಬ್ಧಸಂಜ್ಞೋ ಬಲಾವಿಷ್ಟೋ ವೀರಭದ್ರಂ ಜಘಾನ ಚ ॥ ೨೫ ॥
ಸ ಶಕ್ತಿಂ ಚ ಮಹಾತೇಜಾ ವೀರಭದ್ರೋ ಹಿ ತಾರಕಂ ।
ತ್ರಿಶೂಲೇನ ಚ ಘೋರೇಣ ಶಿವಸ್ಯಾನುಚರೋ ಬಲೀ ॥ ೨೬ ॥
ಏವಂ ಸಂಯುಧ್ಯಮಾನೌ ತೌ ಜಘ್ನತುಶ್ಚೇತರೇತರಂ ।
ದ್ವಂದ್ವಯುದ್ಧಂ ಸುತುಮುಲಂ ತಯೋರ್ಜಾತಂ ಮಹಾತ್ಮನೋಃ ॥ ೨೭ ॥
ಸುರಾಸುರಾಸ್ತತ್ರೈವ ಸಮರೇ ಪ್ರೇಕ್ಷಕಾ ಹ್ಯಭವಂಸ್ತದಾ ।
ತಯೋರ್ಭೇರೀಮೃದಂಗಾಶ್ಚ ಪಟಹಾನಕಗೋಮುಖಾಃ ॥ ೨೮ ॥
ತಥಾ ಡಮರುನಾದೇನ ವ್ಯಾಪ್ತಮಾಸೀಜ್ಜಗತ್ತ್ರಯಂ ।
ತೇನ ಘೋಷೇಣ ಮಹತಾ ಯುಧ್ಯಮಾನೌ ಮಹಾಬಲೌ ॥ ೨೯ ॥
ಶುಶುಭಾತೇಽತಿಸಂರಬ್ಧೌ ಪ್ರಹಾರೈರ್ಜರ್ಜರೀಕೃತೌ ।
ಅನ್ಯೋನ್ಯಮಭಿಸಂರಬ್ಧೌ ತೌ ಬುಧಾಂಗಾರಕಾವಿವ ॥ ೩೦ ॥
ನಾರದೇನ ತದಾ ಖ್ಯಾತೋ ವೀರಭದ್ರಸ್ಯ ತದ್ವಧಃ ।
ನ ರೋಚತೇ ಚ ತದ್ವಾಕ್ಯಂ ವೀರಭದ್ರಸ್ಯ ವೈ ತದಾ ॥ ೩೧ ॥

---

ಬಹಳ ಬಲವಾಗಿ ಘಾತಿಸಲು ಆ ದೈತ್ಯಪುಂಗವನು ಮೂರ್ಛಿತನಾಗಿ ನೆಲಕ್ಕುರು ಳಿದನು. ಹೀಗೆ ಒಂದು ಕ್ಷಣಕಾಲ ಮೂರ್ಛಿತನಾಗಿದ್ದು ಆಮೇಲೆ ಎಚ್ಚತ್ತು ತನ್ನ ಬಲವನ್ನೆಲ್ಲ ಬಿಟ್ಟು ಆ ವೀರಭದ್ರನನ್ನು ಹೊಡೆದನು. ಆಗ ಮಹಾ ತೇಜಸ್ವಿಯೂ, ಶಿವಕಿಂಕರನೂ ಆದ ವೀರಭದ್ರನಾದರೋ ಮತ್ತೆ ಮಹಾ ಭಯಂಕರವಾದ ತ್ರಿಶೂಲದಿಂದ ಆ ದಾನವನನ್ನು ಸದೆದನು.

೨೭–೩೦. ಹೀಗೆ ಕಾಳಗವಾಡುತ್ತಿದ್ದ ಅವರೀರ್ವರೂ ಒಬ್ಬರನ್ನೊಬ್ಬರು ಬಲವಾಗಿ ಹೊಡೆದರು. ಆಗಲಾ ಮಹಾತ್ಮರೀರ್ವರಿಗೂ ಮಹತ್ತರವಾದ ದ್ವಂದ್ವಯುದ್ಧವು ಮೊದಲಾಯಿತು. ಆ ಸಮಯದಲ್ಲಿ ದೇವದಾನವರೀರ್ವರೂ ಪ್ರೇಕ್ಷಕರಾಗಿ ನಿಂತರು. ಉಭಯಪಕ್ಷದವರ ಭೇರಿ, ಮೃದಂಗ, ಪಟಹ, ಗೋಮುಖ, ಆನಕ, ಡಮರು ಮೊದಲಾದ ರಣವಾದ್ಯಗಳ ನಾದದಿಂದ ಭುವನ ತ್ರಯವೂ ವ್ಯಾಪ್ತವಾಯಿತು. ಮಹತ್ತರವಾದ ಈ ವಾದ್ಯಘೋಷದ ನಡುವೆ ಆ ಮಹಾಬಲರೀರ್ವರೂ ಬಹಳವಾಗಿ ಕೆರಳಿ, ಪರಸ್ಪರ ಪ್ರಹಾರಗಳಿಂದ ಜರ್ಝರಿತವಾದ ಮೈಯುಳ್ಳವರಾಗಿ ಪರಸ್ಪರ ಕಾಳಗಕ್ಕೆ ಸೆಣಸಿನಿಂತ ಬುಧಾಂ ಗಾರಕ ಗ್ರಹಗಳಂತೆ ಬಹಳವಾಗಿ ಶೋಭಿಸಿದರು.

೩೧–೩೨. ಆ ಸಮಯದಲ್ಲಿ ನಾರದನು ಆ ವೀರಭದ್ರನಿಗೆ ಆ ತಾರಕಾ ಸುರನ ಮರಣವೃತಾಂತವನ್ನರುಹಿದರೂ ಆತನು ಆ ಮುನಿಯ ಮಾತು ಗಳನ್ನು ಕೇಳಲಿಲ್ಲವು. ಆ ಮಾತುಗಳಾತನಿಗೆ ರುಚಿಸಲೂ ಇಲ್ಲವು. ಮಹಾ

ನಾರದೇನ ಯದುಕ್ತಂ ಹಿ ತಾರಕಸ್ಯ ವಧಂ ಪ್ರತಿ ।
ಯಥಾ ರುದ್ರಸ್ತಥಾ ಸೋಽಪಿ ವೀರಭದ್ರೋ ಮಹಾಬಲಃ ॥ ೩೨ ॥
ಏವಂ ಪ್ರಯುಧ್ಯಮಾನೌ ತೌ ಜಘ್ನತುಶ್ಚೇತರೇತರಂ ।
ಅನ್ಯೋನ್ಯಂ ಸ್ಪರ್ಧಮಾನೌ ತೌ ಗರ್ಜಂತೌ ಸಿಂಹಯೋರಿವ ॥ ೩೩ ॥
ಏವಂ ತದಾ ತೌ ಭುವಿ ಯುಧ್ಯಮಾನೌ
ಮಹಾತ್ಮನಾ ಜ್ಞಾನವತಾಂ ವರೇಣ ।
ಸ ವೀರಭದ್ರೋ ಹಿ ತದಾ ನಿವಾರಿತೋ
ವಾಕ್ಯೈರನೇಕೈರಥ ನಾರದೇನ ॥ ೩೪ ॥
ತಥಾ ನಿಶಮ್ಯ ತದ್ವಾಕ್ಯಂ ನಾರದಸ್ಯ ಮುಖೋದ್ಗತಂ ।
ವೀರಭದ್ರೋ ರುಷಾವಿಷ್ಟೋ ನಾರದಂ ಪ್ರತ್ಯುವಾಚ ಹ ॥ ೩೫ ॥
ತಾರಕಂ ಚ ವಧಿಷ್ಯಾಮಿ ಪಶ್ಯ ಮೇಽದ್ಯ ಪರಾಕ್ರಮಂ ।
ಆನಯಂತಿ ಚ ಯೇ ವೀರಾಃ ಸ್ವಾಮಿನಂ ರಣಸಂಸದಿ ।
ತೇ ಪಾಪಿನೋ ಹ್ಯಧರ್ಮಿಷ್ಠಾಃ ವಿನಶ್ಯಂತಿ ರಣಂ ಗತಾಃ ॥ ೩೬ ॥
ಭೀರವಸ್ತೇತು ವಿಜ್ಞೇಯಾಃ ನ ವಾಚ್ಯಾಸ್ತೇ ಕದಾಚನ ।
ತ್ವಂ ನ ಜಾನಾಸಿ ದೇವರ್ಷೇ ಯೋಧಾನಾಂ ಚ ಪ್ರತಿಕ್ರಿಯಾಂ ॥ ೩೭ ॥

---

ಬಲನಾದ ಆ ವೀರಭದ್ರನು ಸಾಕ್ಷಾತ್ ರುದ್ರನಂತೆಯೇ ಅಂತೇ ಮಹಾ ಕೋಪಿಷ್ಠನು.

೩೩–೩೪. ತರುವಾಯ ಆ ಶಿವಕಿಂಕರ ವೀರಭದ್ರನೂ, ತಾರಕಾಸುರನೂ ಪರಸ್ಪರವಾಗಿ ಹುರುಡಿಸಿ ಸಿಂಹಗಳಂತೆ ಗರ್ಜಿಸುತ್ತ ಕಾದಿದರು. ಈ ರೀತಿ ಅವರೀರ್ವರೂ ಮತ್ತೆ ಕಾಳಗದಲ್ಲಿ ತೊಡಗಿರಲು ಮಹಾತ್ಮನೂ, ಜ್ಞಾನಿಗಳಲ್ಲಿ ಶ್ರೇಷ್ಠನೂ ಆದ ನಾರದನು ಮತ್ತೆ ಆ ವೀರಭದ್ರನಿಗೆ ಅನೇಕ ವಾಕ್ಯಗಳಿಂದ ಆ ದಾನವನ ಮರಣವಿಧಾನವನ್ನರುಹಿ ಯುದ್ಧಮಾಡಬೇಡವೆಂದು ಬೋಧಿಸಿದನು.

೩೫–೩೬. ನಾರದನ ಬಾಯಿಂದ ಬಂದ ಈ ಮಾತನ್ನು ಕೇಳಿ ವೀರಭದ್ರನು ಬಹಳವಾಗಿ ರೋಷಗೊಂಡು ಅವನನ್ನು ಕುರಿತು ಹೀಗೆಂದನು. ''ಎಲೈ ನಾರದ ಮುನಿಯೇ! ನಾನೀ ಯುದ್ಧದಲ್ಲಿ ತಾರಕನನ್ನು ವಧಿಸುತ್ತೇನೆ. ನನ್ನ ಪರಾಕ್ರಮವನ್ನು ನೋಡು. ಯಾವ ವೀರರು ರಣರಂಗಕ್ಕೆ ಒಡೆಯನನ್ನು ಕರೆತರುವವರೊ ಅವರು ಪಾಪಿಗಳು; ಅಧರ್ಮಿಷ್ಠರು. ಅವರು ಕಾಳಗದಲ್ಲಿಯೂ ನಾಶವಾಗುತ್ತಾರೆ.

೩೭. ಎಲೈ ಮುನಿಯೇ! ಒಡೆಯನನ್ನು ಯುದ್ಧಕ್ಕೆ ಕರೆತರುವವರು ಭೀರುಗಳೆಂದು ತಿಳಿಯಬೇಕು. ಅವರ ಹೆಸರನ್ನು ಯಾವಾಗಲೂ ಹೇಳಬಾರದು. ಎಲೈ ದೇವರ್ಷಿಯೇ! ನೀನು ವೀರಯೋಧರ ಬಲವನ್ನೂ, ಪ್ರತಿಕ್ರಿಯೆಯನ್ನೂ ಬಲ್ಲೆ.

ಮೃತ್ಯುಂ ಚ ಪೃಷ್ಠತಃ ಕೃತ್ವಾ ರಣಭೂಮೌ ಗತವ್ಯಥಾಃ ।
ಶಸ್ತ್ರಾಶಸ್ತ್ರೈರ್ಭಿನ್ನಗಾತ್ರಾಃ ಪ್ರಶಸ್ತಾ ನಾತ್ರ ಸಂಶಯಃ ॥ ೩೮ ॥
ಇತ್ಯುಕ್ತ್ವಾ ಚಾವದದ್ದೇವಾನ್ ವೀರಭದ್ರೋ ಮಹಾಬಲಃ ।
ಶೃಣ್ವಂತು ಮಮ ವಾಕ್ಯಾನಿ ದೇವಾ ಇಂದ್ರ ಪುರೋಗಮಾಃ ॥ ೩೯ ॥
ಅತಾರಕಾಂ ಮಹೀಂ ಚಾದ್ಯ ಕರಿಷ್ಯೇ ನಾತ್ರ ಸಂಶಯಃ ॥ ೪೦ ॥
ಅಥ ತ್ರಿಶೂಲಮಾದಾಯ ತಾರಕೇಣ ಯುಯೋಧ ಸಃ ।
ವೃಷಾರೂಢೈರನೇಕೈಶ್ಚ ತ್ರಿಶೂಲವರಧಾರಿಭಿಃ ॥ ೪೧ ॥
ಕಪರ್ದಿನೋ ವೃಷಾಂಕಾಶ್ಚ ಗಣಾಸ್ತೇಽತಿಪ್ರಹಾರಿಣಃ ।
ವೀರಭದ್ರಂ ಪುರಸ್ಕೃತ್ಯ ವೀರಭದ್ರಪರಾಕ್ರಮಾಃ ॥ ೪೨ ॥
ತ್ರಿಶೂಲಧಾರಿಣಃ ಸರ್ವೇ ಸರ್ವೇ ಸರ್ಪಾಂಗಭೂಷಣಾಃ ।
ಸ ಚಂದ್ರಶೇಖರಾಃ ಸರ್ವೇ ಜಟಾಜೂಟವಿಭೂಷಣಾಃ ॥ ೪೩ ॥
ನೀಲಕಂಠಾ ದಶಭುಜಾಃ ಪಂಚವಕ್ತ್ರಾಸ್ತ್ರಿಲೋಚನಾಃ ।
ಛತ್ರಚಾಮರಸಂವೀತಾಃ ಸರ್ವೇ ತೇಽತ್ಯುಗ್ರಬಾಹವಃ ॥ ೪೪ ॥
ವೀರಭದ್ರಂ ಪುರಸ್ಕೃತ್ಯ ಸರ್ವೇ ಹರಪರಾಕ್ರಮಾಃ ।
ಯುಯುಧುಸ್ತೇ ತದಾ ದೈತ್ಯಾಸ್ತಾರಕಾಸುರಜೀವಿನಃ ॥ ೪೫ ॥

---

೩೮–೪೦. ರಣಭೂಮಿಯಲ್ಲಿ ಮೃತ್ಯುವನ್ನು ಹಿಂದಕ್ಕೆ ತಳ್ಳಿ ವ್ಯಥೆಯಿಲ್ಲದೆ ಅಸ್ತ್ರಶಸ್ತ್ರಗಳಿಂದ ಸೀಳಿದ ಮೈಯುಳ್ಳವರೇ ಬಹಳ ಶ್ರೇಷ್ಠರೆಂಬುದರಲ್ಲಿ ಸಂದೇಹವಿಲ್ಲವು.'' ಮಹಾ ಬಲನಾದ ವೀರಭದ್ರನು ನಾರದನಿಗೆ ಹೇಳಿ, ದೇವತೆಗಳನ್ನು ಕುರಿತು, ''ಅಯ್ಯಾ ದೇವತೆಗಳಿರಾ! ಇಂದ್ರನೇ ಮೊದಲಾದ ನೀವುಗಳೆಲ್ಲರೂ ನನ್ನ ಮಾತನ್ನು ಕೇಳಿರಿ. ಇಂದಿನ ದಿನದ ಕಾಳಗದಲ್ಲಿ ನಾನೀ ಭೂಮಂಡಲವನ್ನು ತಾರಕಾಸುರರಹಿತವನ್ನಾಗಿ ಮಾಡುತ್ತೇನೆ'' ಎಂದನು.

೪೧. ತರುವಾಯ ಆ ವೀರಭದ್ರನು ತ್ರಿಶೂಲಗಳನ್ನು ಧರಿಸಿ ವೃಷಭಾರೂಢರಾಗಿದ್ದ ಅನೇಕ ಪ್ರಮಥಗಣಗಳೊಡನೆ ತಾನೂ ತ್ರಿಶೂಲವನ್ನು ತಳೆದು ಆ ತಾರಕನೊಡನೆ ಯುದ್ಧಮಾಡಿದನು.

೪೨–೪೫. ಆ ಪ್ರಮಥಗಣಗಳಾದರೋ ಪ್ರತಿಯೊಬ್ಬರೂ ಕಪರ್ದಿಗಳು; ವೃಷಭಾರೂಢರು; ಎಲ್ಲರೂ ತ್ರಿಶೂಲಗಳನ್ನು ಧರಿಸಿದ್ದರು; ಎಲ್ಲರೂ ಸರ್ಪಾಂಗಭೂಷಣರು; ಪ್ರತಿಯೊಬ್ಬರೂ ಚಂದ್ರಾಲಂಕೃತವಾದ ಜಟಾಜೂಟಗಳುಳ್ಳವರು; ಎಲ್ಲರೂ ನೀಲಕಂಠರಾದವರು; ಪ್ರತಿಯೊಬ್ಬರಿಗೂ ಹತ್ತು ಭುಜಗಳು, ಐದು ಮುಖಗಳು, ಮೂರು ಕಣ್ಣುಗಳು; ಎಲ್ಲರೂ ಛತ್ರ ಚಾಮರಗಳಿಂದ ಕೂಡಿದ್ದರು. ಎಲ್ಲರೂ ವೀರಭದ್ರನಂತೆಯೇ ಪರಾಕ್ರಮವುಳ್ಳವರು. ಅತ್ಯುಗ್ರಬಾಹುಗಳಾಗಿ ಹಗೆಗಳನ್ನು ಬಹು ಕಠೋರವಾಗಿ ಪ್ರಹರಿಸುವಂತಹ ಅವರೆಲ್ಲರೂ ತಮ್ಮೊಡೆಯ

ಪುನಃ ಪುನಸ್ತ್ರೈಶ್ಚ ತದಾ ಬಭೂವು
ಗಣೈರ್ಜಿತಾಸ್ತೇ ಹ್ಯಸುರಾ ಪರಾಙ್ಮುಖಾಃ ।
ಬಭೂವ ತೇಷಾಂ ಚ ತದಾತಿಸಂಗರೋ
ಮಹಾಭಯೋ ದೈತ್ಯವರೈಸ್ತದಾನೀಂ ॥ ೪೬ ॥
ಅಮೃಷ್ಯಮಾಣಾಃ ಪರಮಾಸ್ತ್ರಕೋವಿದೈಃ
ತತೋ ಗಣಾಸ್ತೇ ಜಯಿನೋ ಬಭೂವುಃ ।
ಗಣೈರ್ಜಿತಾಸ್ತೇಹ್ಯಸುರಾಃ ಪರಾಭವಂ
ತಂ ತಾರಕಂ ತೇ ವ್ಯಥಿತಾಃ ಶಶಂಸುಃ ॥ ೪೭ ॥
ವಿನಾಮ್ಯ ಚಾಪಂ ಹಿ ತಥಾ ಚ ತಾರಕಃ
ಸ ಯೋದ್ಧುಕಾಮಃ ಪ್ರವಿವೇಶ ಸೇನಾಂ ।
ಯಥಾ ಝಷೋ ವೈ ಪ್ರವಿವೇಶ ಸಾಗರಂ
ತಥಾ ಹ್ಯಸೌ ದೈತ್ಯವರೋ ಮಹಾತ್ಮಾ ॥ ೪೮ ॥
ಗಣೈಃ ಸಮೇತೋ ಯುಯುಧೇ ತದಾನೀಂ
ಸ ವೀರಭದ್ರೋ ಹಿ ಮಹಾಬಲಶ್ಚ ।
ಸರ್ವಾನ್ಸುರಾಂಶ್ಚೇಂದ್ರಮುಖಾನ್ಮಹಾಬಲ
ಸ್ತಥಾಗಣಾನ್ಯಕ್ಷ ಪಿಶಾಚ ಗುಹ್ಯಕಾನ್ ।
ಸ ದೈತ್ಯವರ್ಯೋಽತಿರುಷಂ ಪ್ರವಿಷ್ಟಃ
ಸಂಮರ್ದಯಾಮಾಸ ಮಹಾಬಲೋ ಹಿ ॥ ೪೯ ॥

---

ನಾದ ವೀರಭದ್ರನನ್ನು ಪುರಸ್ಕರಿಸಿಕೊಂಡು ಹರಪರಾಕ್ರಮಿಗಳಾಗಿ ಆ ತಾರಕನ ಸೇನೆಯೊಡನೆ ಯುದ್ಧಮಾಡಿದರು.

೪೬–೪೭. ತಾರಕನ ಅನುಜೀವಿಗಳಾದ ದೈತ್ಯರಾದರೋ ಆ ಪ್ರಮಥ ಗಣಗಳಿಂದ ಪುನಃ ಪುನಃ ಪರಾಜಿತರಾದರು. ಪ್ರಮಥಗಣಗಳಿಗೂ, ದೈತ್ಯರಿಗೂ ಆ ಸಮಯದಲ್ಲಿ ಹೀಗೆ ಮಹಾ ಭಯಂಕರವಾದ ಕಾಳಗವು ನಡೆದು, ದೈತ್ಯರು ಪರಮಾಸ್ತ್ರಕೋವಿದರಾದರೂ ಪ್ರಮಥಗಣಗಳಿಗೆ ಸೋತುಹೋದರು. ಹೀಗೆ ಪ್ರಮಥರೆಲ್ಲರೂ ಜಯಶಾಲಿಗಳಾದರು. ಅವರಿಂದ ಜಿತರಾದ ದೈತ್ಯರಾದರೋ ಆ ಪರಾಭವವನ್ನು ತಮ್ಮ ಪ್ರಭುವಾದ ತಾರಕಾಸುರನಿಗೆ ಬಹು ದುಃಖಿತರಾಗಿ ಅರಿಕೆ ಮಾಡಿಕೊಂಡರು.

೪೮–೫೦. ಆಗ ದೈತ್ಯಶ್ರೇಷ್ಠನೂ, ಮಹಾತ್ಮನೂ ಆದ ಆ ತಾರಕಾಸುರನು ಬಿಲ್ಲನ್ನು ಬಗ್ಗಿಸಿ ಹಿಡಿದು ಆ ಪ್ರಮಥಸೇನೆಯೊಡನೆ ಕಾದಬೇಕೆಂದು ಬಯಸಿ ಮೀನು ಸಮುದ್ರವನ್ನೆಂತೋ ಅಂತು ಆ ಶಿವಕಿಂಕರ ಸೇನೆಯನ್ನು ಪ್ರವೇಶಿಸಿದನು. ಆಗ ಶಿವಕಿಂಕರನೂ, ಮಹಾ ಬಲಾಢ್ಯನೂ ಆದ ವೀರಭದ್ರನು

ತತಃ ಸಮುಭವದ್ಯುದ್ಧಂ ದೇವದಾನವಸಂಕುಲಂ ।
ದೇವದಾನವಯಕ್ಷಾಣಾಂ ಸನ್ನಿಪಾತಕರಂ ಮಹತ್ ॥ ೫೦ ॥
ತಥಾ ವೃಷಾ ಗರ್ಜಮಾನಾ ಅಶ್ವಾನ್ ಜಘ್ನುಶ್ಚ ಸಾದಿಭಿಃ ।
ರಥಿಭಿಶ್ಚ ರಥಾನ್ ಜಘ್ನುಃ ಕುಂಜರಾನ್ ಸಾದಿಭಿಃ ಸಹ ॥ ೫೧ ॥
ವೃಷಾರೂಢೈಃ ಸರಥೈಸ್ತೇ ಚ ಸರ್ವೇ
ನಿಷ್ಪಾಟಿತಾ ಹ್ಯಸುರಾಃ ಪ್ರೋಥಿತಾಶ್ಚ ॥ ೫೨ ॥
ಕ್ಷಯಂ ಪ್ರಣೀತಾ ಬಹವಸ್ತದಾನೀಂ
ಪೇತುಃ ಪೃಥಿವ್ಯಾಂ ನಿಹತಾಶ್ಚ ಕೇಚಿತ್ ।
ಕೇಚಿತ್ಪ್ರವಿಷ್ಟಾ ಹಿ ರಸಾತಲಂ ಚ
ಪಲಾಯಮಾನಾ ಬಹವಸ್ತಥೈವ ॥ ೫೩ ॥
ಕೇಚಿಚ್ಚ ಶರಣಂ ಪ್ರಾಪ್ತಾ ರುದ್ರಾನುಚರಕಿಂಕರಾನ್ ।
ಏವಂ ನಷ್ಟಂ ತದಾ ಸೈನ್ಯಂ ವಿಲೋಕ್ಯಾಸುರಪಾಲಕಃ ॥ ೫೪ ॥
ಭುಜಾನಾಮಯುತಂ ಕೃತ್ವಾ ದೈತ್ಯರಾಜೋ ಹಿ ತಾರಕಃ ।
ಆರುಹ್ಯ ಸಿಂಹಂ ಸಹಸಾ ಘಾತಯಾಮಾಸ ತಾನ್ರಣೇ ॥ ೫೫ ॥

---

ಪ್ರಮಥಗಣಗಳೊಡಗೂಡಿ ಆ ದೈತ್ಯನೊಡನೆ ಯುದ್ಧಮಾಡಿದನು. ದೈತ್ಯ ಶ್ರೇಷ್ಠನಾದ ಆ ತಾರಕನಾದರೋ ಸಮರಭೂಮಿಯನ್ನು ಮಹಾ ರೋಷಾವಿಷ್ಟ ನಾಗಿ ಪ್ರವೇಶಿಸಿ ಇಂದ್ರನಾದಿಯಾದ ಸಮಸ್ತ ದೇವತೆಗಳನ್ನು ಮಾತ್ರ ವಲ್ಲದೆ ಯಕ್ಷ ಪಿಶಾಚ ಗುಹ್ಯಕ ಸಮೂಹಗಳನ್ನೂ ಸಹ ಮರ್ದಿಸಿದನು. ಅವನು ಮಹಾ ಬಲಶಾಲಿಯಷ್ಟೆ! ತರುವಾಯವೂ ಸಹ ದೇವತೆಗಳಿಗೂ, ದಾನವರಿಗೂ, ಯಕ್ಷರಿಗೂ ಸನ್ನಿಪಾತಕರವಾದ ಮಹತ್ತರ ಸಂಕುಲಯುದ್ಧವು ನಡೆಯಿತು.

೫೧. ಆ ಸಮರದಲ್ಲಿ ವೃಷಭಗಳು ಗುಟರಿಡುತ್ತ ಕುದುರೆಗಳನ್ನು ಸಾದಿ ಗಳೊಡನೆಯೇ ಗುದ್ದಿ ಕೆಡವಿದುವು. ರಥಿಕರು ರಥಗಳನ್ನೂ, ಮಾವುತರೊಡ ಗೂಡಿದ ಆನೆಗಳನ್ನೂ ಹೊಡೆದರು.

೫೨–೫೬. ವೃಷಭಾರೂಢರೂ, ರಥಿಕರೂ ಆದ ಪ್ರಮಥರು ಅಸುರರೆಲ್ಲ ರನ್ನೂ ಎತ್ತಿಹಾಕಿ ಕಲಕಿದರು. ಆಗ ಅನೇಕ ದೈತ್ಯರು ನಾಶವಾದರು. ಕೆಲವರು ಹೊಡೆತವನ್ನು ತಿಂದು ನೆಲಕ್ಕುರುಳಿದರು. ಕೆಲವರು ರಸಾತಲವನ್ನು ಪ್ರವೇಶಿ ಸಿದರು. ಅಂತೆಯೇ ಕೆಲ ದಾನವರು ದಿಕ್ಕೆಟ್ಟು ಓಡಿಹೋದರು. ಕೆಲವರು ರುದ್ರಾನುಚರನಾದ ವೀರಭದ್ರನು ಕಿಂಕರರಾದ ಪ್ರಮಥರನ್ನು ಕಾಪಾಡ ಬೇಕೆಂದು ಮರೆಹೊಕ್ಕರು. ಈ ರೀತಿ ತನ್ನ ಸೇನೆಯೆಲ್ಲವೂ ಆ ಶಿವಕಿಂಕರರಿಂದ ನಾಶವಾದುದನ್ನು ಆ ತಾರಕನು ಕಂಡನು. ದೈತ್ಯರಾಜನಾದ ಆ ತಾರಕನು

**ದಂಶಿತೇನ ಚ ಸಿಂಹೇನ ವೃಷಾಃ ಕೇಚಿದ್ವಿದಾರಿತಾಃ ।**
**ತಥೈವ ತಾರಕೇಣೈವ ಘಾತಿತಾಃ ಬಹವೋ ಗಣಾಃ ॥ ೫೬ ॥**
**ಏವಂ ಕೃತಂ ತದಾ ತೇನ ತಾರಕೇನ ಮಹಾತ್ಮನಾ ।**
**ಸರ್ವೇಷಾಮೇವ ದೇವಾನಾಮಶಕ್ಯಸ್ತಾರಕೋ ಮಹಾನ್ ॥ ೫೭ ॥**
**ಜಾತಸ್ತದಾ ಮಹಾಬಾಹುಸ್ತ್ರೈಲೋಕ್ಯಕ್ಷಯಕಾರಕಃ ।**
**ತಾರಕಸ್ಯಾನುಗಾ ದೈತ್ಯಾ ಅಜೇಯಾ ಬಲವತ್ತರಾಃ ॥ ೫೮ ॥**
**ಸಿಂಹಾರೂಢಾ ದಂಶಿತಾಶ್ಚ ಕರಾಲಾಸ್ತೇ ಪ್ರಹಾರಿಣಃ ।**
**ತೈರಾಹೃತಾ ಗಣಾಃ ಸರ್ವೇ ಸಿಂಹೈಶ್ಚ ವೃಷಭಾ ಹತಾಃ ॥ ೫೯ ॥**
**ಏವಂ ನಿಹನ್ಯಮಾನಾ ವೈ ಗಣಾಸ್ತೇ ರಣಮಂಡಲೇ ।**
**ಪ್ರಹಸ್ಯ ವಿಷ್ಣುಃ ಪ್ರೋವಾಚ ಕುಮಾರಂ ಶಿವವಲ್ಲಭಂ ॥ ೬೦ ॥**

**ವಿಷ್ಣುರುವಾಚ :—**

**ನಾನ್ಯೋ ಹಂತಾಽಸ್ಯ ಪಾಪಸ್ಯ ತ್ವದ್ವಿನಾ ಕೃತ್ತಿಕಾಸುತ ।**
**ತಸ್ಮಾತ್ತ್ವಯಾ ಹಿ ಕರ್ತವ್ಯಂ ವಚನಂ ಚ ಮಹಾಭುಜ ॥ ೬೧ ॥**
**ತಾರಕಸ್ಯ ವಧಾರ್ಥಾಯ ಉತ್ಪನ್ನೋಽಸಿ ಶಿವಾತ್ಮಜ ।**
**ತಸ್ಮಾತ್ತ್ವಯೈವ ಕರ್ತವ್ಯಂ ನಿಧನಂ ತಾರಕಸ್ಯ ಚ ॥ ೬೨ ॥**

---

ಹತ್ತುಸಾವಿರ ತೋಳುಗಳನ್ನು ತಾಳಿ ಸಿಂಹವನ್ನೇರಿ ಕುಳಿತು ನುಗ್ಗಿ ಹೊರಟು ಆ ಶಿವಗಣಗಳೊಡನೆ ಕಾದಿ ಅವರನ್ನು ಘಾತಿಸಿದನು. ಅವನೇರಿದ್ದ ಸಿಂಹವಾದರೋ ಕೆಲವು ವೃಷಭಗಳನ್ನು ಸೀಳಿಹಾಕಿತು. ಅಂತೆಯೇ ತಾರಕಾಸುರನೂ ಸಹ ಅನೇಕ ಶಿವಕಿಂಕರರನ್ನು ಕೊಂದನು.

೫೭–೫೮. ದೇವತೆಗಳಾರಿಂದಲೂ ಗೆಲ್ಲಲಸದಳನೂ, ಮಹಾತ್ಮನೂ ಆದ ಆ ತಾರಕನಿಂತು ಆ ಯುದ್ಧದಲ್ಲಿ ಶಿವಗಣಗಳನ್ನು ನಾಶಗೊಳಿಸಿದುದಲ್ಲದೆ, ಮಹಾ ಬಾಹುವು ಮೂರು ಲೋಕಗಳನ್ನೂ ನಾಶಗೊಳಿಸುವವನಾದನು. ತಾರಕನ ಕಿಂಕರರಾದರೋ ಅಜೇಯರೂ, ಮಹಾ ಬಲಾಢ್ಯರೂ ಆಗಿದ್ದರು.

೫೯–೬೦. ಅವರು ಸಿಂಹಗಳನ್ನೇರಿ ಹಲ್ಲುಗಳನ್ನು ಕಟಕಟಾಯಿಸುತ್ತ ಬಹು ಭಯಂಕರವಾಗಿ ಶತ್ರುಗಳನ್ನು ಸದೆಯುವವರಾಗಿದ್ದರು. ಅವರು ಪ್ರಮಥ ಗಣಗಳೆಲ್ಲವನ್ನೂ ಹೊಡೆದರು. ಅವರೇರಿದ್ದ ಸಿಂಹಗಳಾದರೋ ಪ್ರಮಥರೇರಿದ್ದ ವೃಷಭಗಳೆಲ್ಲವನ್ನೂ ಕೊಂದುವು. ಈ ರೀತಿ ಆ ದಾನವರಿಂದ ರಣಮಂಡಲದಲ್ಲಿ ಹತರಾಗುತ್ತಿದ್ದ ಗಣಗಳನ್ನು ಕಂಡು, ವಿಷ್ಣುವು ನಸುನಗುತ್ತ ಶಿವವಲ್ಲಭನಾದ ಕುಮಾರಸ್ವಾಮಿಯನ್ನು ಕುರಿತು ಹೀಗೆಂದನು.

೬೧–೬೨. ವಿಷ್ಣುವು ಹೇಳುತ್ತಾನೆ:—"ಮಹಾ ಭುಜನೂ, ಕೃತ್ತಿಕಾ ಸುತನೂ ಆದ ಕುಮಾರಸ್ವಾಮಿಯೇ! ಈ ಪಾಪಿಯು ನಿನ್ನಿಂದಲ್ಲದೆ ಮತ್ತಾ

ತಚ್ಛ್ರುತ್ವಾ ಭಗವಾನ್ಕ್ರುದ್ಧೋ ಪಾರ್ವತೀ ನಂದನೋ ಮಹಾನ್ ।
ಉವಾಚ ಪ್ರಹಸನ್ ವಾಕ್ಯಂ ವಿಷ್ಣುಂ ಪ್ರತಿ ಯಥೋಚಿತಮ್ ॥ ೬೩ ॥
ಮಯಾ ನಿರೀಕ್ಷ್ಯತೇ ಸಮ್ಯಕ್ಚಿತ್ರಯುದ್ಧಂ ಮಹಾತ್ಮನಾಂ ।
ಅನಭಿಜ್ಞೋಽಸ್ಮ್ಯಹಂ ವಿಷ್ಣೋ ಕಾರ್ಯಾಕಾರ್ಯವಿಚಾರಣೇ ॥ ೬೪ ॥
ಕೇಽಸ್ಮದೀಯಾಃ ಪರೇ ಚೈವ ನ ಜಾನಾಮಿ ಕಥಂಚನ ।
ಕಿಮರ್ಥಂ ಯುಧ್ಯಮಾನಾ ವೈ ಪರಸ್ಪರವಧೇ ಸ್ಥಿತಾಃ ॥ ೬೫ ॥
ಕುಮಾರಸ್ಯ ವಚಃ ಶ್ರುತ್ವಾ ನಾರದೋ ವಾಕ್ಯಮಬ್ರವೀತ್ ॥ ೬೬ ॥

ನಾರದ ಉವಾಚ :—

ಕುಮಾರೋಸಿ ಮಹಾಬಾಹೋ ಶಂಕರಸ್ಯಾಂಶಸಂಭವಃ ।
ತ್ವಂ ತ್ರಾತಾ ಜಗತಾಂ ಸ್ವಾಮಿ ದೇವಾನಾಂ ಚ ಪರಾಗತಿಃ ॥ ೬೭ ॥
ತಾರಕೇಣ ಪುರಾ ವೀರ ತಪಸ್ತಪ್ತಂ ಸುದಾರುಣಂ ।
ಯೇನೈವ ವಿಜಿತಾ ದೇವಾ ಯೇನ ಸ್ವರ್ಗಸ್ತಥಾ ಜಿತಃ ॥ ೬೮ ॥

ರಿಂದಲೂ ಸಾಯುವುದಿಲ್ಲವು. ಆದುದರಿಂದ ಇವನನ್ನು ನೀನೇ ಸಂಹರಿಸಬೇಕು. ಓ ಶಿವಸುತನೇ ! ನೀನು ಈ ತಾರಕನ ವಧೆಗಾಗಿಯೇ ಜನಿಸಿರುವೆ. ಆದುದರಿಂದ ನೀನೇ ಇವನನ್ನು ವಧಿಸಬೇಕು.''

೬೩. ಶ್ರೀಮನ್ಮಹಾವಿಷ್ಣುವಿನ ಈ ಮಾತನ್ನು ಕೇಳಿ ಭಗವಾನ್ ಪಾರ್ವತೀ ನಂದನನು ಕ್ರುದ್ಧನಾಗಿ ತರುವಾಯ ಗಟ್ಟಿಯಾಗಿ ನಗುತ್ತ ಆತನನ್ನು ಕುರಿತು ಯಥೋಚಿತವಾಗಿ ಹೀಗೆಂದನು.

೬೪. ''ಎಲೈ ವಿಷ್ಣುವೇ ! ನಾನು ಮಹಾತ್ಮರಾದ ಇವರೆಲ್ಲರೂ ಮಾಡು ತ್ತಿರುವ ಆಶ್ಚರ್ಯಕರವಾದ ಯುದ್ಧವನ್ನು ನೋಡುತ್ತಿರುವೆನು. ನನಗೆ ಮಾಡ ಬೇಕಾದ ಕಾರ್ಯವೇನು, ಮಾಡಬಾರದುದೇನು ಎಂಬುದೇ ತಿಳಿಯದು.

೬೫. ಈ ಸೇನೆಗಳಲ್ಲಿ ನಮ್ಮವರಾರು ? ಶತ್ರುಗಳಾರು ? ಇವರು ಏತಕ್ಕಾಗಿ ಕಾಳಗಮಾಡುತ್ತಿರುವರು ? ಒಬ್ಬರನ್ನೊಬ್ಬರೇತಕ್ಕಾಗಿ ಕೊಲ್ಲುತ್ತಿರುವರು ? ಮುಂತಾದ ಯಾವ ವಿಷಯವೂ ನನಗೆ ಅರಿವಾಗಲಿಲ್ಲವು.''

೬೬–೬೮. ಕುಮಾರಸ್ವಾಮಿಯ ಈ ಮಾತನ್ನುಕೇಳಿ ನಾರದನು ಆತನನ್ನು ಕುರಿತು ಹೇಳಿದನು. ನಾರದನು ಹೇಳುತ್ತಾನೆ:—'' ಎಲೈ ಮಹಾಬಾಹುವೇ ! ನೀನು ಕುಮಾರಸ್ವಾಮಿಯು. ನೀನು ಶಂಕರನ ಮಗನು, ಮೂರು ಲೋಕ ಗಳನ್ನು ರಕ್ಷಿಸುವವನೂ ನೀನೇ ! ಈ ದೇವತೆಗಳಿಗೆಲ್ಲ ನೀನೇ ಒಡೆಯನಲ್ಲದೆ ಅವರಿಗೆ ಶ್ರೇಷ್ಠವಾದ ಗತಿಯೂ ನೀನೇ. ಎಲೈ ವೀರನೇ ! ಈ ತಾರಕಾಸುರನು ಪೂರ್ವದಲ್ಲಿ ಬಹು ಭಯಂಕರವಾದ ತಪಸ್ಸನ್ನು ಮಾಡಿ ಅದರಿಂದಲೇ ದೇವತೆ ಗಳನ್ನೂ ದೇವಲೋಕವನ್ನೂ ಜಯಿಸಿರುವನು.

ತಪಸಾ ತೇನ ಚೋಗ್ರೇಣ ಅಜೇಯತ್ವಮವಾಪ್ತವಾನ್ ।
ಅನೇನಾಪಿ ಜಿತಶ್ಚೇಂದ್ರೋ ಲೋಕಪಾಲಾಸ್ತಥೈವಚ ॥ ೧೯ ॥
ತ್ರೈಲೋಕ್ಯಂ ಚ ಜಿತಂ ಸರ್ವಂ ಹ್ಯನೇನೈವ ದುರಾತ್ಮನಾ ।
ತಸ್ಮಾತ್ತ್ವಯಾ ನಿಹಂತವ್ಯಃ ತಾರಕಃ ಪಾಪಪೂರುಷಃ ॥ ೨೦ ॥
ಸರ್ವೇಷಾಂ ಶಂ ವಿಧಾತವ್ಯಂ ತ್ವಯಾ ನಾಥೇನ ಚಾದ್ಯ ವೈ ।
ನಾರದಸ್ಯ ವಚಃ ಶ್ರುತ್ವಾ ಕುಮಾರಃ ಪ್ರಹಸನ್ ಮಹಾನ್ ।
ವಿಮಾನಾದವತೀರ್ಯಾಥ ಪದಾತಿಃ ಪರಮೋಽಭವತ್ ॥ ೨೧ ॥

ಪದ್ಭ್ಯಾಂ ತದಾಽಸೌ ಪರಿಧಾವಮಾನಃ
ಶಿವಾತ್ಮಜೋಽಯಂ ಚ ಕುಮಾರರೂಪೀ ।
ಕರೇ ಸಮಾದಾಯ ಮಹಾಪ್ರಭಾವಾಂ
ಶಕ್ತಿಂ ಮಹೋಲ್ಕಾಮಿವ ದೀಪ್ತಿಯುಕ್ತಾಂ ॥ ೨೨ ॥
ದೃಷ್ಟ್ವಾ ತಮಾಯಾಂತಮತೀವ ಚಂಡ
ಮುವ್ಯಕ್ತರೂಪಂ ಬಲಿನಾಂ ವರಿಷ್ಠಂ ।
ದೈತ್ಯೋ ಬಭಾಷೇ ಸುರಸತ್ತಮಾನಾ
ಮಸೌ ಕುಮಾರೋ ದ್ವಿಷತಾಂ ನಿಹಂತಾ ॥ ೨೩ ॥

---

೧೯–೨೦. ಇಷ್ಟೇಯಲ್ಲದೆ ಆ ಉಗ್ರತಪಸ್ಸಿನಿಂದಲೇ ಇವನು ಅಜೇಯತ್ವವನ್ನೂ ಪಡೆದಿರುವನು. ಇವನು ಅದೇ ಬಲದಿಂದ ದೇವೇಂದ್ರನನ್ನೂ, ದಿಕ್ಪಾಲಕರನ್ನೂ ಜಯಿಸಿರುತ್ತಾನೆ. ಅಂತು ಈ ದುರಾತ್ಮನು ಜಗತ್ತ್ರಯವನ್ನೇ ಜಯಿಸಿರುವನು. ಎಲೈ ಕುಮಾರಸ್ವಾಮಿಯೇ! ಇವನು ಮಹಾ ಪಾಪಿಷ್ಠನಾದುದರಿಂದ ನೀನಿವನನ್ನು ಸಂಹರಿಸಬೇಕು. ಸಮಸ್ತ ದೇವತೆಗಳಿಗೂ, ಜಗತ್ತಿಗೂ ನಾಥನಾದ ನೀನು ಹೀಗೆ ಇವನನ್ನು ಸಂಹರಿಸಿ ಲೋಕಕ್ಕೇ ಶಾಂತಿಯನ್ನುಂಟುಮಾಡಬೇಕು."

೨೧–೨೨. ಎಲೈ ಶೌನಕಾದಿ ಮುನಿಗಳಿರಾ! ಮಹಾತ್ಮನಾದ ಆ ಕುಮಾರನು ನಾರದ ಮುನಿಯ ಮಾತನ್ನುಕೇಳಿ ನಗುತ್ತ ತಾನು ಕುಳಿತಿದ್ದ ವಿಮಾನದಿಂದಿಳಿದು ಕೇವಲ ಪದಾತಿಯಾದನು. ಶಿವಾತ್ಮಜನೂ, ಕುಮಾರ ರೂಪನೂ ಆದ ಆ ಸ್ವಾಮಿಯು ಮಹೋಲ್ಕೆಯಂತೆ ಪ್ರಜ್ವಲಿಸುತ್ತ ಮಹಾ ಪ್ರಭಾವಯುಕ್ತವಾದ ಶಕ್ತ್ಯಾಯುಧವನ್ನು ಕೈಗೆ ತೆಗೆದುಕೊಂಡು ಕಾಲ್ನಡಿಗೆಯಿಂದಲೇ ಆ ದಾನವನ ಕಡೆಗೆ ಧಾವಿಸಿ ಬಂದನು.

೨೩. ಆ ತಾರಕನಾದರೋ ತನ್ನನ್ನು ಅಟ್ಟಿಬರುತ್ತಿರುವ ಅತಿ ಪ್ರಚಂಡನೂ, ಬಲಾಢ್ಯರಲ್ಲೆಲ್ಲ ಶ್ರೇಷ್ಠನೂ, ಸುರಶ್ರೇಷ್ಠರೆಲ್ಲರಿಗೂ ಒಡೆಯನೂ, ಶತ್ರುಮರ್ದನನೂ ಆದ ಆ ಕುಮಾರನನ್ನು ಕುರಿತು ಹೀಗೆ ಹೇಳಿದನು.

ಅನೇನ ಸಾರ್ಧಂ ಹ್ಯಹಮೇವ ವೀರೋ
ಯೋತ್ಸ್ಯಾಮಿ ಸರ್ವಾನಹಮೇವ ವೀರಾನ್ ।
ಗಣಾಂಶ್ಚ ಸರ್ವಾನಪಿ ಘಾತಯಾಮಿ
ಮಾಹೇಶ್ವರಾನ್ ಲೋಕಪಾಲಾಂಶ್ಚ ಸದ್ಯಃ ॥ ೨೪ ॥
ಇತ್ಯೇವಮುಕ್ತ್ವಾ ಸತತಂ ಮಹಾಬಲಃ
ಕುಮಾರಮುದ್ದಿಶ್ಯ ಯಯೌ ಚ ಯೋದ್ಧುಂ ।
ಜಗ್ರಾಹ ಶಕ್ತಿಂ ಪರಮಾದ್ಭುತಾಂ ಚ
ಸ ತಾರಕೋ ವಾಕ್ಯಮಿದಂ ಬಭಾಷೇ ॥ ೨೫ ॥
ಕುಮಾರೋ ಮೇಽಗ್ರತಶ್ಚಾದ್ಯ ಭವದ್ಭಿಶ್ಚ ಕಥಂ ಕೃತಃ ।
ಯೂಯಂ ಗತತ್ರಪಾ ದೇವಾ ಯೇಷಾಂ ರಾಜಾ ಪುರಂದರಃ ॥ ೨೬ ॥
ಪುರಾ ಯೇನ ಕೃತಂ ಕರ್ಮ ವಿದಿತಂ ಸರ್ವಮೇವತತ್ ।
ಪ್ರಸುಪ್ತಶ್ಚಾರ್ದಿತಾ ಗರ್ಭೇ ಜಠರಸ್ಥಾ ನಿಪಾತಿತಾಃ ॥ ೨೭ ॥
ಕಶ್ಯಪಸ್ಯಾತ್ಮಜೇನೈವ ಬಹುರೂಪೋ ಹತೋಽಸುರಃ ।
ನಮುಚಿಶ್ಚ ಹತೋ ವೀರೋ ವೃತ್ರಶ್ಚೈವ ತಥಾ ಹತಃ ॥ ೨೮ ॥
ಕುಮಾರಂ ಹಂತುಕಾಮೋಽಸೌ ದೇವೇಂದ್ರೋ ಬಲಘಾತಕಃ ।
ಕುಮಾರೋಽಯಂ ಮಯಾ ದೇವಾ ಘಾತಿತೋಽದ್ಯ ನ ಸಂಶಯಃ ॥೨೯॥

---

೨೪–೨೫. "ಆಹಾ! ಈ ಬಾಲಕನೊಡನೆ ಯುದ್ಧಮಾಡುವ ನಾನು ವೀರನೇ! ಎಲೈ ದೇವತೆಗಳಿರಾ! ನಾನೀಗಲೇ ನಿಮ್ಮೆಲ್ಲರನ್ನೂ ಅಲ್ಲದೆ ಈ ಗಣಗಳನ್ನೂ, ಮಹೇಶ್ವರರನ್ನೂ, ಲೋಕಪಾಲಕರನ್ನೂ, ಸಮಸ್ತ ವೀರರನ್ನೂ ಘಾತಿಸುತ್ತೇನೆ." ಮಹಾ ಬಲಾಢ್ಯನಾದ ಆ ದಾನವನಿಂತು ನುಡಿದು ಕುಮಾರನನ್ನುದ್ದೇಶಿಸಿ ಯುದ್ಧಮಾಡಲು ಪರಮಾದ್ಭುತವಾದ ಶಕ್ತ್ಯಾಯುಧವನ್ನು ಕೈಯಲ್ಲಿ ತಾಳಿ ಈ ಮಾತನ್ನಾಡಿದನು.

೨೬–೨೭. ತಾರಕನು ಹೇಳುತ್ತಾನೆ:—"ಎಲೈ ದೇವತೆಗಳಿರಾ! ನೀವು ಈ ಹುಡುಗನನ್ನು ನನ್ನ ಮುಂದೆ ನಿಲ್ಲಿಸಿದುದೆಂತು? ಪುರಂದರನೇ ರಾಜನಾಗುಳ್ಳ ನೀವೆಲ್ಲರೂ ನಾಚಿಕೆಯಿಲ್ಲದವರು. ಈ ಪುರಂದರನು ಪೂರ್ವದಲ್ಲಿ ಏನೇನನ್ನು ಮಾಡಿರುವನೋ ಅದೆಲ್ಲವನ್ನೂ ನಾನು ಬಲ್ಲೆನು. ಇವನು ಗರ್ಭದಲ್ಲಿ ಮಲಗಿದ್ದವರೆಲ್ಲರನ್ನೂ ಕೊಂದಿರುತ್ತಾನೆ.

೨೮–೨೯. ಕಶ್ಯಪಾತ್ಮಜನಾದ ಇವನು ಬಹುರೂಪಾಸುರನನ್ನೂ ವಧಿಸಿರುವನು. ವೀರನಾದ ನಮುಚಿಯೂ, ವೃತ್ರಾಸುರನೂ ಅದೇ ರೀತಿ ಇವನಿಂದ ಹತರಾಗಿರುವರು. ಬಲಾಸುರಘಾತಿಯಾದ ಇವನೀಗ ಈ ಬಾಲಕನನ್ನು

ಪುರಾ ಹತಾಸ್ತ್ವಯಾ ವಿಪ್ರಾ ದಕ್ಷಯಜ್ಞೇ ಹ್ಯನೇಕಶಃ ।
ತತ್ಕರ್ಮಣಃ ಫಲಂ ಚಾದ್ಯ ವೀರಭದ್ರ ಮಹಾಮತೇ ।
ದರ್ಶಯಿಷ್ಯಾಮಿ ತೇ ವೀರ ರಣೇ ರಣವಿಶಾರದ ॥ ೮೦ ॥

ಇತ್ಯೇವ ಮುಕ್ತ್ವಾ ಸ ತದಾ ಮಹಾತ್ಮಾ
ದೈತ್ಯಾಧಿಪೋ ವೀರವರಃ ಸ ಏಕಃ ।
ಜಗ್ರಾಹ ಶಕ್ತಿಂ ಪರಮಾದ್ಭುತಾಂ ಚ
ಸ ತಾರಕೋ ಯುದ್ಧವಿದಾಂ ವರಿಷ್ಠಃ ॥ ೮೧ ॥

ಇತಿ ಪರಮರುಷಾಭಿಭೂತೋಽ
ದಿತಿತನಯಃ ಪರೀವೃತೋಽಸುರೇಂದ್ರೈಃ ।
ಯುಧಿಮಕರೋತ್ತದಾ ನಿಹಂತುಂ
ಸಮರವಿಜಯೀ ಸ ತಾರಕೋ ಬಲೀಯಾನ್ ॥ ೮೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ ಶಿವಶಾಸ್ತ್ರೇ
"ಸುರ ತಾರಕಾಸುರ ಸಂಗ್ರಾಮ ವರ್ಣನಂ" ನಾಮ
ಏಕೋನತ್ರಿಂಶೋಧ್ಯಾಯಃ

---

ಕೊಲ್ಲಬಯಸಿರುವನು. ಅಯ್ಯಾ ದೇವತೆಗಳಿರಾ! ಈಗಲೇ ಕುಮಾರನು ನನ್ನಿಂದ ಹತನಾದನೆಂದೇ ತಿಳಿಯಿರಿ.

೮೦. ಎಲವೋ ವೀರಭದ್ರನೇ! ನೀನು ಹಿಂದೆ ದಕ್ಷಯಜ್ಞದಲ್ಲಿ ಅನೇಕಾನೇಕ ವಿಪ್ರರನ್ನು ಕೊಂದಿರುತ್ತೀಯೆ. ಆ ಪಾಪಕರ್ಮದ ಫಲವೇ ಇದು. ಎಲೈ ರಣವಿಶಾರದನೇ! ಈ ಕಾಳಗದಲ್ಲಿ ವೀರನಾದ ನಿನಗೆ ಆ ಫಲವನ್ನು ನಾನು ತೋರುತ್ತೇನೆ. ನೋಡು."

೮೧. ಎಂಬೀ ಪ್ರಕಾರ ನುಡಿದು ಮಹಾತ್ಮನೂ, ದೈತ್ಯಾಧಿಪನೂ, ಏಕವೀರನೂ, ಯುದ್ಧವಿಧಾನವನ್ನರಿತವರಲ್ಲಿ ಶ್ರೇಷ್ಠನೂ ಆದ ಆ ತಾರಕನು ಶಕ್ತ್ಯಾಯುಧವನ್ನು ಕೈಗೆ ತೆಗೆದುಕೊಂಡನು.

೮೨. ಎಲೈ ವಿಪ್ರರಿರಾ! ಸಮರವಿಜಯಿಯೂ, ದಿತಿಸುತನೂ, ಬಲಶಾಲಿಯೂ ಆದ ಆ ತಾರಕಾಸುರನು, ಅಸುರರೆಲ್ಲರಿಂದಲೂ ಪರಿವೃತನಾಗಿ ದೇವತೆಗಳನ್ನಿಂತು ಸಮರಾಂಗಣದಲ್ಲಿ ಕೊಲ್ಲಲುಜ್ಜುಗಿಸಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರ ಖಂಡದಲ್ಲಿ
"ಸುರತಾರಕಾಸುರ ಸಂಗ್ರಾಮ ವರ್ಣನ" ವೆಂಬ
ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ತ್ರಿಂಶೋಽಧ್ಯಾಯಃ

### ತಾರಕಾಸುರವಧಪೂರ್ವಕಂ ಸ್ವಾಮಿ ಕಾರ್ತಿಕೇಯ ವಿಜಯೋತ್ಸವ ವರ್ಣನಂ

ಲೋಮಶ ಉವಾಚ:—

ವಲ್ಗಮಾನಂ ತಮಾಯಾಂತಂ ತಾರಕಾಸುರಮೋಜಸಾ ।
ಆಜಘಾನ ಚ ವಜ್ರೇಣ ಇಂದ್ರೋ ಮತಿಮತಾಂವರಃ ॥ ೧ ॥
ತೇನ ವಜ್ರಪ್ರಹಾರೇಣ ತಾರಕೋ ವಿಹ್ವಲೀಕೃತಃ ।
ಪತಿತೋಽಪಿ ಸಮುತ್ಥಾಯ ಶಕ್ತ್ಯಾ ತಂ ಪ್ರಾಹರದ್ದ್ವಿಪಂ ॥ ೨ ॥
ಪುರಂದರಂ ಗಜಸ್ಥಂ ಹಿ ಅಪಾತಯತ ಭೂತಲೇ ।
ಹಾಹಾಕಾರೋ ಮಹಾನಾಸೀತ್ಪತಿತೇ ಚ ಪುರಂದರೇ ॥ ೩ ॥
ತಾರಕೇಣಾಪಿ ತತ್ರೈವ ಯತ್ಕೃತಂ ತಚ್ಛೃಣು ಪ್ರಭೋ ।
ಪತಿತಂ ಚ ಪದಾಕ್ರಮ್ಯ ಹಸ್ತಾದ್ವಜ್ರಂ ಪ್ರಗೃಹ್ಯ ಚ ॥ ೪ ॥
ಹತಂ ದೇವೇಂದ್ರಮಾಲೋಕ್ಯ ತಾರಕೋ ರಿಪುಸೂದನಃ ।
ವಜ್ರಘಾತೇನ ಮಹತಾಽತಾಡಯತ್ತು ಪುರಂದರಂ ॥ ೫ ॥
ತ್ರಿಶೂಲಮುದ್ಯಮ್ಯ ಮಹಾಬಲಸ್ತದಾ
ಸ ವೀರಭದ್ರೋ ರುಷಿತಃ ಪುರಂದರಂ ।
ಸಂರಕ್ಷಮಾಣೋ ಹಿ ಜಘಾನ ತಾರಕಂ
ಶೂಲೇನ ದೈತ್ಯಂ ಚ ಮಹಾಪ್ರಭೇಣ ॥ ೬ ॥

---

### ಕನ್ನಡದ ಅನುವಾದ

#### ತಾರಕಾಸುರವಧಪೂರ್ವಕ ಸ್ವಾಮಿ ಕಾರ್ತಿಕೇಯ ವಿಜಯೋತ್ಸವ ವರ್ಣನ

೧. ಲೋಮಶನು ಹೇಳುತ್ತಾನೆ:—ಎಲೈ ಶೌನಕಾದಿ ಮುನಿಗಳಿರಾ! ಈ ರೀತಿ ಜಂಭವನ್ನು ಕೊಚ್ಚಿ ಕೂಗುತ್ತ ಬಹಳ ವೇಗವಾಗಿ ಧಾವಿಸಿಬರುತ್ತಿರುವ ಆ ತಾರಕಾಸುರನನ್ನು ನೋಡಿ ಬುದ್ಧಿವಂತರಲ್ಲೆಲ್ಲ ಅಗ್ರಣಿಯನಾದ ದೇವೇಂದ್ರನು ಅವನನ್ನು ವಜ್ರಾಯುಧದಿಂದ ಬಲವಾಗಿ ಸದೆದನು.

೨–೬. ಆ ವಜ್ರಾಯುಧ ಪ್ರಹಾರದಿಂದ ತತ್ತಳಿಸಿಹೋದರೂ, ನೆಲಕ್ಕುರಳಿ ಹೋದರೂ ಸಹ ಆ ತಾರಕನು ಮತ್ತೆ ಮೇಲಕ್ಕೆದ್ದು ಶಕ್ತ್ಯಾಯುಧದಿಂದ ಐರಾವತವನ್ನು ಹೊಡೆದನು. ಹೀಗೆ ಪ್ರಹರಿಸಿ ಅವನಾ ಮಹೇಂದ್ರನನ್ನು ಐರಾವತದೊಡನೆಯೇ ನೆಲಕ್ಕುರುಳಿಸಿದನು. ಆಗ ಎತ್ತೆತ್ತಲೂ ಮಹತ್ತರವಾದ ಹಾಹಾಕಾರವುಂಟಾಯಿತು. ಎಲೈ ಪ್ರಭುವೇ! ಆಗಲಾ ತಾರಕನೆಸಗಿದ ಕಾರ್ಯವನ್ನು ಕೇಳಿರಿ; ಹೀಗೆ ನೆಲದಲ್ಲಿ ಬಿದ್ದಿರುವ ಆ ಮಹೇಂದ್ರನನ್ನು ಕಾಲಿನಿಂದಮುಮಿ ಅವನ ವಜ್ರಾಯುಧವನ್ನು ಕೈಗೆ ತೆಗೆದುಕೊಂಡು ಅವನು

ಶೂಲಪ್ರಹಾರಾಭಿಹತೋ ನಿಪಪಾತ ಮಹೀತಲೇ ।
ಪತಿತೋಽಪಿ ಮಹಾತೇಜಾಸ್ತಾರಕಃ ಪುನರುತ್ಥಿತಃ ॥ ೭ ॥
ಜಘಾನ ಪರಯಾ ಶಕ್ತ್ಯಾ ವೀರಭದ್ರಂ ತದೋರಸಿ ।
ವೀರಭದ್ರೋಽಪಿ ಪತಿತಃ ಶಕ್ತಿಘಾತೇನ ತಸ್ಯ ವೈ ॥ ೮ ॥
ಸಗಣಾಶ್ಚೈವ ದೇವಾಶ್ಚ ಗಂಧರ್ವೋರಗರಾಕ್ಷಸಾಃ ।
ಹಾಹಾಕಾರೇಣ ಮಹತಾ ಚುಕ್ರುಶುಶ್ಚ ಪುನಃಪುನಃ ॥ ೯ ॥

ತದೋತ್ಥಿತಃ ಸಹಸಾ ಮಹಾಬಲಃ
ಸ ವೀರಭದ್ರೋ ದ್ವಿಷತಾಂ ನಿಹಂತಾ ।
ತ್ರಿಶೂಲಮುದ್ಯಮ್ಯ ತಡಿತ್ಪ್ರಕಾಶಂ
ಜಾಜ್ವಲ್ಯಮಾನಂ ಪ್ರಭಯಾ ನಿರಂತರಂ ।
ಸ್ವರೋಚಿಷಾ ಭಾಸಿತದಿಗ್ವಿತಾನಂ
ಸೂರ್ಯೇಂದುಬಿಂಬಾಗ್ನ್ಯುಡುಮಂಡಲಾಭಂ ॥ ೧೦ ॥

ತ್ರಿಶೂಲೇನ ತದಾ ಯಾವದ್ಧಂತುಕಾಮೋ ಮಹಾಬಲಃ ।
ನಿವಾರಿತಃ ಕುಮಾರೇಣ ಮಾವಧೀಸ್ತ್ವಂ ಮಹಾಮತೇ ॥ ೧೧ ॥

---

ಹತನಾಗಿದ್ದರೂ ಅವನನ್ನು ಮಹತ್ತರವಾದ ವಜ್ರಾಯುಧದಿಂದ ಹೊಡೆದನು ಆ ಸಮಯದಲ್ಲಿ ಮಹಾ ಬಲಿಷ್ಠನಾದ ವೀರಭದ್ರನು ಪುರಂದರನನ್ನು ಸಂರಕ್ಷಿಸ ಬಯಸಿ. ಮಹಾ ಪ್ರಭಾವಶಾಲಿಯಾದ ತ್ರಿಶೂಲದಿಂದಾತಾರಕನನ್ನು ಹೊಡೆದನು. ಮಹಾ ಪರಾಕ್ರಮಶಾಲಿಯಾದ ಆ ತಾರಕನಾದರೋ ಆ ಹೊಡೆತ ದಿಂದ ಕೆಳಕ್ಕೆ ಬಿದ್ದರೂ ಮತ್ತೆ ಮೇಲಕ್ಕೆದ್ದನು.

೮–೯. ಆ ದೈತ್ಯನಿಂತು ಮೇಲಕ್ಕೆದ್ದು ಶಕ್ತ್ಯಾಯುಧದಿಂದ ಆ ವೀರಭದ್ರ ನನ್ನು ಹೊಡೆಯಲು ಅವನೂ ನೆಲಕ್ಕುರುಳಿದನು. ಆಗ ಪ್ರಮಥಗಣಗಳೂ, ದೇವತೆಗಳೂ, ಗಂಧರ್ವೋರಗರಾಕ್ಷಸರೂ ಅಡಿಗಡಿಗೂ ಭಯಂಕರ ಹಾಹಾಕಾರ ಗಳನ್ನುಮಾಡಿ ಕೂಗಿಕೊಂಡರು.

೧೦. ಮಹಾ ಪರಾಕ್ರಮಿಯೂ, ಶತ್ರುಮರ್ದನನೂ ಆದ ವೀರಭದ್ರ ನಾದರೋ ಕೂಡಲೇ ಮೇಲಕ್ಕೆದ್ದು, ಮಿಂಚನ್ನು ಹೋಲಿ ಬೆಳಗುತ್ತಿರುವುದೂ, ಪ್ರಭೆಯಿಂದ ನಿರಂತರವೂ ಪ್ರಜ್ವಲಿಸುತ್ತಿರುವುದೂ, ಆ ತನ್ನ ಪ್ರಭೆಯಿಂದಲೇ ದಿಗಂತಗಳೆಲ್ಲವನ್ನೂ ಬೆಳಗಿಸುತ್ತಿರುವುದೂ, ಬೆಂಕಿಯ ಕೆಂಡಗಳನ್ನುಗುಳುತ್ತ ನಕ್ಷತ್ರಮಂಡಲದ ಕಾಂತಿಯೊಡಗೂಡಿದುದೂ ಆದ ತ್ರಿಶೂಲವನ್ನೆತ್ತಿ ಆ ದೈತ್ಯ ನನ್ನೊಕ್ಕಲಿಕ್ಕಬಯಸಿದನು.

೧೧. ಎಲೈ ವಿಪ್ರರಿರಾ! ಮಹಾಬಲನಾದ ಆ ವೀರಭದ್ರನಾವಿಧವಾದ ತ್ರಿಶೂಲದಿಂದ ಆ ದೈತ್ಯನನ್ನು ಬಡಿಯಬಯಸಿರುವಲ್ಲಿಯೇ ಕುಮಾರಸ್ವಾಮಿಯು,

ಜಗರ್ಜ ಚ ಮಹಾತೇಜಾಃ ಕಾರ್ತಿಕೇಯೋ ಮಹಾಬಲಃ ॥ ೧೨ ॥
ತದಾ ಜಯೇತ್ಯಭಿಹಿತೋ ಭೂತೈರಾಕಾಶಸಂಸ್ಥಿತೈಃ ।
ಶಕ್ತ್ಯಾ ಪರಮಯಾ ವೀರಸ್ತಾರಕಂ ಹಂತುಮುದ್ಯತಃ ॥ ೧೩ ॥
ತಾರಕಸ್ಯ ಕುಮಾರಸ್ಯ ಸಂಗ್ರಾಮಸ್ತತ್ರ ದುಃಸಹಃ ।
ಜಾತಸ್ತತೋ ಮಹಾಘೋರಃ ಸರ್ವಭೂತ ಭಯಂಕರಃ ॥ ೧೪ ॥
ಶಕ್ತಿಹಸ್ತೌ ಚ ತೌ ವೀರೌ ಯುಯುಧಾತೇ ಪರಸ್ಪರಂ ।
ಶಕ್ತಿಭ್ಯಾಂ ಭಿನ್ನಹಸ್ತೌ ತೌ ಮಹಾಸಾಹಸಸಂಯುತೌ ॥ ೧೫ ॥
ಪರಸ್ಪರಂ ವಂಚಯಂತೌ ಸಿಂಹಾವಿವ ಮಹಾಬಲೌ ।
ವೈತಾಲಿಕೀಂ ಸಮಾಶ್ರಿತ್ಯ ತಥಾ ವೈ ಖೇಚರೀಂ ಗತಿಂ ॥ ೧೬ ॥
ಪಾರ್ವತಂ ಮತಮಾಶ್ರಿತ್ಯ ಶಕ್ತ್ಯಾ ಶಕ್ತಿಂ ನಿಜಘ್ನತುಃ ।
ಏಭಿರ್ಮತೈರ್ಮಹಾವೀರೌ ಚಕ್ರತುರ್ಯುದ್ಧಮದ್ಭುತಂ ॥ ೧೭ ॥
ಅನ್ಯೋನ್ಯಸಾಧಕೌ ಭೂತ್ವಾ ಮಹಾಬಲಪರಾಕ್ರಮೌ ।
ಜಘ್ನತುಃ ಶಕ್ತಿಧಾರಾಭೀ ರಣೇ ರಣವಿಶಾರದೌ ॥ ೧೮ ॥

---

"ಎಲೈ ಮಹಾಮತಿಯಾದ ವೀರಭದ್ರನೇ! ನೀನಿವನನ್ನು ಹೊಡೆಯಬೇಡ" ಎಂದು ಹೇಳಿ ತಡೆದನು.

೧೨–೧೪. ತರುವಾಯ ಮಹಾಬಲನೂ, ಮಹಾತೇಜನೂ ಆದ ಕಾರ್ತಿಕೇಯನು ಸಿಂಹಗರ್ಜನೆಯನ್ನೆಸಗಿದನು. ಆಗ ಗಗನದಲ್ಲಿ ನಿಂತಿದ್ದ ಸಮಸ್ತ ಭೂತಗಳೂ ಸಹ, "ಜಯ ಜಯ!" ಎಂದು ಕೂಗಿದುವು. ಆಗಲಾ ಕುಮಾರ ವೀರನು ಆ ತಾರಕನನ್ನು ಶ್ರೇಷ್ಠವಾದ ಶಕ್ತ್ಯಾಯುಧದಿಂದ ಹೊಡೆಯಲುಜ್ಜುಗಿಸಿದನು. ಆ ಸಮಯದಲ್ಲಿ ತಾರಕನಿಗೂ, ಕುಮಾರಸ್ವಾಮಿಗೂ ಮಹಾ ಘೋರವೂ, ಭಯಂಕರವೂ, ನಹಿಸಲಸದಳವೂ ಆದ ಕಾಳೆಗವು ಮೊದಲಾಯಿತು.

೧೫–೧೮. ಆ ವೀರರೀರ್ವರೂ ಶಕ್ತ್ಯಾಯುಧವನ್ನೊಳಗೊಂಡ ಕೈಗಳುಳ್ಳವರಾಗಿಯೇ ಒಬ್ಬರೊಡನೊಬ್ಬರು ಕಾಳೆಗಮಾಡಿದರು. ಬಳಿಕ ಇಬ್ಬರೂ ಆ ಶಕ್ತ್ಯಾಯುಧದಿಂದೊಡೆದ ಕೈಗಳುಳ್ಳವರಾಗಲು ಮಹಾ ಸಾಹಸದಿಂದೊಡಗೂಡಿ ಮಹಾ ಬಲಿಷ್ಠಗಳಾದ ಸಿಂಹಗಳಂತೆ ಒಬ್ಬರನ್ನೊಬ್ಬರು ಮೋಸಗೊಳಿಸುತ್ತಲೂ (ಒಬ್ಬರ ಹೊಡತಕ್ಕೆ ಮತ್ತೊಬ್ಬರು ಸಿಕ್ಕದಂತೆ ಚಮತ್ಕಾರವಾದ ಗತಿಗಳನ್ನು ಪ್ರದರ್ಶಿಸುತ್ತಲೂ) ಯುದ್ಧಮಾಡಿದರು. ಆ ವೀರರೀರ್ವರೂ ದ್ವಂದ್ವಯುದ್ಧದಲ್ಲಿ ಬಹಳ ಪ್ರಸಿದ್ಧವಾದ ವೈತಾಲಿಕಿ, ಖೇಚರಿ, ಪಾರ್ವತಗಳೆಂಬ ನಡಿಗೆಗಳನ್ನು ತೋರಿ ವಿಜೃಂಭಿಸುತ್ತ ಶಕ್ತ್ಯಾಯುಧದಿಂದಲೇ ಶಕ್ತ್ಯಾಯುಧವನ್ನು ಸದೆಯುತ್ತ ಅದ್ಭುತವಾದ ಯುದ್ಧವನ್ನೆಸಗಿದರು. ಎಲೈ ವಿಪ್ರರಿರಾ! ಆ ಷಣ್ಮುಖಸ್ವಾಮಿಯೂ, ತಾರಕದೈತ್ಯನೂ ಇಬ್ಬರೂ ಮಹಾಬಲಪರಾಕ್ರಮಿಗಳು.

**ಮೂರ್ಧ್ನಿ ಕಂಠೇ ತಥಾ ಬಾಹ್ವೋರ್ಜಾನ್ವೋಶ್ಚೈವ ಕಟೀತಟೇ ।**
**ವಕ್ಷಸ್ಯುರಸಿ ಪೃಷ್ಠೇ ಚ ಚಿಚ್ಛಿದತುಃ ಪರಸ್ಪರಂ ॥ ೧೯ ॥**
**ತದಾ ತೌ ಯುಧ್ಯಮಾನೌ ಚ ಹಂತುಕಾಮೌ ಮಹಾಬಲೌ ।**
**ಪ್ರೇಕ್ಷಕಾಹ್ಯಭವನ್ಸರ್ವೇ ದೇವಗಂಧರ್ವಗುಹ್ಯಕಾಃ ॥ ೨೦ ॥**
**ಊಚುಃ ಪರಸ್ಪರಂ ಸರ್ವೇ ಕೋಽಸ್ಮಿನ್ಯುದ್ಧೇ ವಿಜೇಷ್ಯತೇ ।**
**ತದಾ ನಭೋಗತಾ ವಾಣೀ ಉವಾಚ ಪರಿಸಾಂತ್ವ್ಯ ವೈ ॥ ೨೧ ॥**
**ತಾರಕಂ ಹಿ ಸುರಾಶ್ಚಾದ್ಯ ಕುಮಾರೋಽಯಂ ಹನಿಷ್ಯತಿ ।**
**ಮಾ ಶೋಚ್ಯತಾಂ ಸುರಾಃ ಸರ್ವೈಃ ಸುಖೇನ ಸ್ಥೀಯತಾಂ ದಿವಿ ॥ ೨೨ ॥**
**ಶ್ರುತ್ವಾ ತದಾ ತಾಂ ಗಗನೇ ಸಮೀರಿತಾಂ**
**ತದೈವ ವಾಚಂ ಪ್ರಮಥೈಃ ಪರೀತಃ ।**
**ಕುಮಾರಕಸ್ತಂ ಪ್ರತಿಹಂತುಕಾಮೋ**
**ದೈತ್ಯಾಧಿಪಂ ತಾರಕಮುಗ್ರರೂಪಂ ॥ ೨೩ ॥**

---

ಇಬ್ಬರೂ ಯುದ್ಧಮಾಡುವುದರಲ್ಲಿ ವಿಶಾರದರಾದವರು. ಇಂತಹ ಶೂರಾಗ್ರಣಿಗಳಾದ ಅವರಿಬ್ಬರೂ ಶಕ್ತಿಧಾರೆಗಳಿಂದೊಬ್ಬರನ್ನೊಬ್ಬರು ಹೊಡೆದರು. ಆ ರಣಪಂಡಿತರು ತಮ್ಮತಮ್ಮ ಶಕ್ತ್ಯಾಯುಧಗಳಿಂದ ಪರಸ್ಪರವಾಗಿ ತಲೆ, ಕುತ್ತಿಗೆ, ತೋಳುಗಳು, ಜಾನು (ಮೊಣಕಾಲು)ಗಳು, ಸೊಂಟ, ವಕ್ಷಸ್ಥಳ, ಭುಜ ಮುಂತಾದ ಪ್ರದೇಶಗಳಲ್ಲೆಲ್ಲ ಬಲವಾಗಿ ಹೊಡೆದಾಡಿ ಆ ಅವಯವಗಳನ್ನೆಲ್ಲ ಕತ್ತರಿಸಿ ಕೆಡವಿದರು.

೨೦. ಹೀಗೆ ಆ ವೀರರಿಬ್ಬರೂ ಕಾಳಗಮಾಡುತ್ತ ಒಬ್ಬರನ್ನೊಬ್ಬರು ಕೊಲ್ಲಬಯಸಿರಲು, ದೇವಗಂಧರ್ವಗುಹ್ಯಕರೆಲ್ಲರೂ ಯುದ್ಧವನ್ನು ತೊರೆದು ಪ್ರೇಕ್ಷಕರಾಗಿ ನಿಂತು ನಿರೀಕ್ಷಿಸುತ್ತಿದ್ದರು.

೨೧–೨೨. ಆ ದೇವತೆಗಳೆಲ್ಲರೂ ಆ ಸಮಯದಲ್ಲಿಯೇ ಈ ತಾರಕ ಷಣ್ಮುಖರ ಪ್ರಚಂಡ ಯುದ್ಧವನ್ನು ಕಂಡು, "ಇವರಿಬ್ಬರಲ್ಲಿ ಯಾರು ಗೆಲ್ಲುತ್ತಾರೆಯೋ, ತಿಳಿಯದಾಗಿದೆಯಲ್ಲ!" ಎಂದು ತಮ್ಮತಮ್ಮಲ್ಲಿಯೇ ಮಾತನಾಡಿಕೊಂಡರು. ಆಗ ಆಕಾಶವಾಣಿಯು ಹೀಗೆ ಸಂಶಯಗ್ರಸ್ತರಾಗಿದ್ದ ಅವರೆಲ್ಲರನ್ನೂ ಸಮಾಧಾನಗೊಳಿಸುತ್ತ "ಅಯ್ಯಾ ದೇವತೆಗಳಿರಾ! ಈ ಕುಮಾರಸ್ವಾಮಿಯು ತಾರಕದೈತ್ಯನನ್ನು ಗೆದ್ದೇ ಗೆಲ್ಲುತ್ತಾನೆ. ನೀವಾರೂ ಈ ವಿಷಯದಲ್ಲಿ ಯೋಚಿಸಬೇಕಾದುದಿಲ್ಲ" ಎಂದು ನುಡಿಯಿತು.

೨೩. ಈ ಪ್ರಕಾರವಾಗಿ ಆಕಾಶವಾಣಿಯು ನುಡಿದುದನ್ನು ಕೇಳಿ ಪ್ರಮಥಗಣಗಳಿಂದ ಪರಿವೃತನಾದ ಆ ಕುಮಾರನು ಭಯಂಕರ ಸ್ವರೂಪನೂ, ದೈತ್ಯಾಧಿಪನೂ ಆದ ತಾರಕಾಸುರನನ್ನು ಕೊಲ್ಲಬಯಸಿದನು.

ಶಕ್ತ್ಯಾ ತಯಾ ಮಹಾಬಾಹುರಾಜಘಾನ ಸ್ತನಾಂತರೇ ।
ತಾರಕಂ ಹ್ಯಸುರಶ್ರೇಷ್ಠಂ ಕುಮಾರೋ ಬಲವತ್ತರಃ ॥ ೨೪ ॥
ತಂ ಪ್ರಹಾರಮನಾದೃತ್ಯ ತಾರಕೋ ದೈತ್ಯಪುಂಗವಃ ।
ಕುಮಾರಂ ಚಾಪಿ ಸಂಕ್ರುದ್ಧಃ ಸ್ವಶಕ್ತ್ಯಾ ಚಾಜಘಾನ ವೈ ॥ ೨೫ ॥
ತೇನ ಶಕ್ತಿಪ್ರಹಾರೇಣ ಶಾಂಕರಿರ್ಮೂರ್ಛಿತೋಽಭವತ್ ।
ಮುಹೂರ್ತಾಚ್ಚೇತನಾಂ ಪ್ರಾಪ್ತಃ ಸ್ತೂಯಮಾನೋ ಮಹರ್ಷಿಭಿಃ ॥
ಯಥಾ ಸಿಂಹೋಮದೋನ್ಮತ್ತೋ ಹಂತುಕಾಮಸ್ತಥೈವ ಚ ।
ಕುಮಾರಸ್ತಾರಕಂ ದೈತ್ಯಮಾಜಘಾನ ಪ್ರತಾಪವಾನ್ ॥ ೨೭ ॥
ಏವಂ ಪರಸ್ಪರೇಣೈವ ಕುಮಾರಶ್ಚೈವ ತಾರಕಃ ।
ಯುಯುಧಾತೇಽತಿಸಂರಬ್ಧೌ ಶಕ್ತಿಯುದ್ಧಪರಾಯಣೌ ॥ ೨೮ ॥
ಅಭ್ಯಾಸ ಪರಮಾವಾಸ್ತಾಮನ್ಯೋನ್ಯವಿಜಿಗೀಷಯಾ ।
ತಥಾ ತೌ ಯುಧ್ಯಮಾನೌ ಚ ಚಿತ್ರರೂಪೌ ತಪಸ್ವಿನೌ ॥ ೨೯ ॥
ಧಾರಾಭಿಶ್ಚ ಅಣೀಭಿಶ್ಚ ಸುಪ್ರಯುಕ್ತೌ ಚ ಜಘ್ನತುಃ ।
ಅವಲೋಕಪರಾಃ ಸರ್ವೇ ದೇವಗಂಧರ್ವಕಿನ್ನರಾಃ ॥ ೩೦ ॥

---

೨೪–೨೫. ಆಗಲಾ ಮಹಾಬಾಹುವೂ ಮಹಾ ಬಲಾಢ್ಯನೂ ಆದ ಷಣ್ಮುಖ ಸ್ವಾಮಿಯು ಶಕ್ತ್ಯಾಯುಧವನ್ನೇ ತೆಗೆದುಕೊಂಡು ಆ ರಾಕ್ಷಸನ ವಕ್ಷಸ್ಥಳದ ಮಧ್ಯಭಾಗಕ್ಕೆ ಬಡಿದನು. ಆ ಸಮಯದಲ್ಲಿ ತಾರಕದೈತ್ಯನಾದರೋ, ಆ ಹೊಡೆತ ವನ್ನು ಲಕ್ಷಿಸದೆ ಬಹಳವಾಗಿ ಮುನಿದು ಆ ಕುಮಾರನನ್ನೂ ಅಂತೆಯೇ ಶಕ್ತ್ಯಾ ಯುಧದಿಂದ ಹೊಡೆದನು.

೨೬–೨೮. ಆ ಶಕ್ತಿ ಪ್ರಹಾರದಿಂದ ಶಂಕರ ಕುಮಾರನಾದ ಆ ಷಣ್ಮುಖನು ಮೂರ್ಛೆಯೊಂದಿದನು. ತರುವಾಯ ಆತನೊಂದು ಮುಹೂರ್ತ ಕಾಲದಲ್ಲಿಯೇ ತಿಳಿವಾಂತು ಮೇಲೆದ್ದು ಮಹರ್ಷಿಗಳೆಲ್ಲರೂ ತನ್ನನ್ನು ಹೊಗಳುತ್ತಿರಲು, ಮದೋನ್ಮತ್ತವಾದ ಸಿಂಹದಂತೆ ಮಹಾ ಪ್ರತಾಪವನ್ನಾಂತು ಆ ತಾರಕನನ್ನು ವಧಿಸಬಯಸಿ ಅವನನ್ನು ಶಕ್ತ್ಯಾಯುಧದಿಂದ ಮತ್ತೆ ಹೊಡೆದನು. ಹೀಗೆ ಆ ಕುಮಾರನೂ ತಾರಕಾಸುರನೂ ಮಹಾ ಪ್ರಯತ್ನಪೂರ್ವಕವಾಗಿ ರೋಷ ಗೊಂಡು ಶಕ್ತ್ಯಾಯುಧಗಳಿಂದಲೇ ಕಾಳಗಮಾಡುವುದರಲ್ಲಿ ಆಸಕ್ತರಾಗಿದ್ದರು.

೨೯–೩೧. ಅವರೀರ್ವರೂ ಒಬ್ಬರನ್ನೊಬ್ಬರು ಗೆಲ್ಲಬಯಸಿ ಅತಿಶಯವಾದ ಯುದ್ಧಾಭ್ಯಾಸದಲ್ಲಿ ತೊಡಗಿದ್ದರು. ತಪಸ್ವಿಗಳಾಗಿ, ದಣಿದು ವಿಚಿತ್ರವಾದ ರೂಪವನ್ನು ತಳೆದು ಹೋರುತ್ತಿದ್ದ ಆ ವೀರರಿಬ್ಬರೂ ಖಡ್ಗಧಾರೆಗಳಿಂದಲೂ, ಅಣಿಗಳೆಂಬ ಆಯುಧ ವಿಶೇಷಗಳಿಂದಲೂ ಒಬ್ಬರನ್ನೊಬ್ಬರು ಬಲವಾಗಿ ಪ್ರಹರಿ ಸಿದರು. ಅವರ ಈ ದ್ವಂದ್ವಯುದ್ಧವನ್ನು ಕಂಡು ಯುದ್ಧವನ್ನು ನೋಡಲೋ

ವಿಸ್ಮಯಂ ಪರಮಂ ಪ್ರಾಪ್ತಾ ನೋಚುಃ ಕಿಂಚನ ತಸ್ಯ ವೈ ।
ನ ವವೌ ಚ ತದಾ ವಾಯುರ್ನಿಷ್ಪ್ರಭೋಽಭೂದ್ದಿವಾಕರಃ ॥ ೩೧ ॥
ಹಿಮಾಲಯೋಽಥ ಮೇರುಶ್ಚ ಶ್ವೇತಕೂಟಶ್ಚ ದುರ್ದುರಃ ।
ಮಲಯೋಽಥ ಮಹಾಶೈಲೋ ಮೈನಾಕೋ ವಿಂಧ್ಯಪರ್ವತಃ ॥ ೩೨ ॥
ಲೋಕಾಲೋಕೌ ಮಹಾಶೈಲೌ ಮಾನಸೋತ್ತರಪರ್ವತಃ ।
ಕೈಲಾಸೋ ಮಂದರೋ ಮಾಲ್ಯೋ ಗಂಧಮಾದನ ಏವಚ ॥ ೩೩ ॥
ಉದಯಾದ್ರಿರ್ಮಹೇಂದ್ರಶ್ಚ ತಥೈವಾಸ್ತಗಿರಿರ್ಮಹಾನ್ ॥ ೩೪ ॥
ಏತೇ ಚಾನ್ಯೇ ಚ ಬಹವಃ ಪರ್ವತಾಶ್ಚ ಮಹಾಪ್ರಭಾಃ ।
ಸ್ನೇಹಾದ್ವಿತಾಸ್ತದಾ ಜಗ್ಮುಃ ಕುಮಾರಂ ಚ ಪರೀಪ್ಸವಃ ॥ ೩೫ ॥
ತತಃ ಸ ದೃಷ್ಟ್ವಾ ತಾನ್ಸರ್ವಾನ್ಭಯಭೀತಾಂಶ್ಚ ಶಾಂಕರಿಃ ।
ಪರ್ವತಾನ್ಗಿರಿಜಾಪುತ್ರೋ ಬಭಾಷೇ ಪ್ರತಿಬೋಧಯನ್ ॥ ೩೬ ॥

ಕುಮಾರ ಉವಾಚ:—

ಮಾ ಖಿದ್ಯತ ಮಹಾಭಾಗಾ ಮಾ ಚಿಂತಾ ಕ್ರಿಯತಾಂ ನಗಾಃ ।
ಘಾತಯಾಮ್ಯದ್ಯ ಪಾಪಿಷ್ಠಂ ಸರ್ವೇಷಾಮಿಹ ಪಶ್ಯತಾಂ ॥ ೩೭ ॥

ಸುಗವೇ ಸುಮ್ಮನೆ ನಿಂತಿದ್ದ ದೇವಗಂಧರ್ವ ಕಿನ್ನರರೆಲ್ಲರೂ ಪರಮಾಶ್ಚರ್ಯ ಭರಿತರಾಗಿ ಏನೂ ಮಾತನಾಡದೆ ಸುಮ್ಮನಿದ್ದರು. ಆಗ ಗಾಳಿಯೂ ಬೀಸಲಿಲ್ಲವು ಸೂರ್ಯ ಭಗವಂತನಾದರೋ ಕಳೆಗುಂದಿದವನಾದನು.

೩೨–೩೬ ಆ ಸಮಯದಲ್ಲಿ ಹಿಮವಂತ, ಮೇರು, ಶ್ವೇತಕೂಟ, ದುರ್ದುರ, ಮಹಾಶೈಲವಾದ ಮಲಯ, ಮೈನಾಕ, ವಿಂಧ್ಯ, ಲೋಕ, ಆಲೋಕ, ಮಹಾಶೈಲವಾದ ಮಾನಸೋತ್ತರ, ಕೈಲಾಸ, ಮಂದರ, ಮಾಲ್ಯವಂತ, ಗಂಧಮಾದನ, ಉದಯಾದ್ರಿ, ಮಹೇಂದ್ರ, ಅಸ್ತಾಚಲ ಇವೇ ಮೊದಲಾದ ಮಹಾ ಪ್ರಭಾವಶಾಲಿಗಳೂ, ಪರಾಕ್ರಮಶಾಲಿಗಳೂ ಆದ ಅನೇಕ ಪರ್ವತ ರಾಜರು ಆ ಕುಮಾರಸ್ವಾಮಿಯಲ್ಲಿನ ಪ್ರೀತಿಯಿಂದ ಆ ಸ್ವಾಮಿಯನ್ನು ಸುತ್ತುಗಟ್ಟಿ ಸಂರಕ್ಷಿಸಬೇಕೆಂದು ಬಯಸಿದರು. ಆಗಲಾ ಶಂಕರ ಕುಮಾರನು ಭಯಭೀತರಾಗಿರುವ ಅವರೆಲ್ಲರನ್ನೂ ಕಂಡನು. ಆ ಗಿರಿಜಾಪುತ್ರನು ಅವರೆಲ್ಲರನ್ನೂ ಎಚ್ಚರಗೊಳಿಸುವವನಾಗಿ ಅವರನ್ನು ಕುರಿತು ಹೇಳಿದನು.

೩೭. ಕುಮಾರಸ್ವಾಮಿಯು ಹೇಳುತ್ತಾನೆ:—"ಅಯ್ಯಾ ಮಹಾ ಭಾಗ್ಯಶಾಲಿಗಳಾದ ಪರ್ವತರಾಜರೇ! ನೀವು ಈ ರೀತಿ ಖೇದಗೊಳ್ಳಬೇಡಿರಿ; ನೀವು ಯಾವ ಯೋಚನೆಯನ್ನೂ ಮಾಡಬೇಕಾದುದಿಲ್ಲವು. ನೀವೆಲ್ಲರೂ ನೋಡುತ್ತಿರುವಂತೆಯೇ ಪಾಪಿಷ್ಠನಾದ ಈ ದೈತ್ಯನನ್ನು ವಧಿಸುತ್ತೇನೆ. ನೀವು ಚಿಂತಿಸಬೇಡಿರಿ."

ಏವಂ ಸಮಾಶ್ವಸ್ಯ ತದಾ ಮನಸ್ವೀ
ತಾನ್ಸರ್ವತಾನ್ದೇವಗಣೈಃ ಸಮೇತಾನ್ ।
ಪ್ರಣಮ್ಯ ಶಂಭುಂ ಮನಸಾ ಹರಿಪ್ರಿಯಃ
ಸ್ವಾಂ ಮಾತರಂ ಚೈವ ನತಃ ಕುಮಾರಃ ॥ ೩೮ ॥

ಕಾರ್ತಿಕೇಯಸ್ತತಃ ಶಕ್ತ್ಯಾ ನಿಚಕರ್ತ ರಿಪೋಃ ಶಿರಃ ।
ತಚ್ಛಿರೋ ನಿಪಪಾತೋರ್ವ್ಯಾಂ ತಾರಕಸ್ಯ ಚ ತತ್ಕ್ಷಣಾತ್ ।
ಏವಂ ಸ ಜಯಮಾಪೇದೇ ಕಾರ್ತಿಕೇಯೋ ಮಹಾಪ್ರಭುಃ ॥ ೩೯ ॥
ದದೃಶುಸ್ತಂ ಸುರಗಣಾ ಋಷಯೋ ಗುಹ್ಯಕಾಃ ಖಗಾಃ ।
ಕಿನ್ನರಾಶ್ಚಾರಣಾಃ ಸರ್ಪಾಸ್ತಥಾ ಚೈವಾಪ್ಸರೋಗಣಾಃ ॥ ೪೦ ॥
ಹರ್ಷೇಣ ಮಹತಾವಿಷ್ಟಾಸ್ತುಷ್ಟುವುಸ್ತಂ ಕುಮಾರಕಂ ।
ವಿದ್ಯಾಧರ್ಯಶ್ಚ ನನೃತುರ್ಗಾಯಕಾಶ್ಚ ಜಗುಸ್ತದಾ ॥ ೪೧ ॥
ಏವಂ ವಿಜಯಮಾಪನ್ನಂ ದೃಷ್ಟ್ವಾ ಸರ್ವೇ ಮುದಾ ಯುತಾಃ ।
ತತೋ ಹರ್ಷಾತ್ಸಮಾಗಮ್ಯ ಸ್ವಾಂಕಮಾರೋಪ್ಯ ಚಾತ್ಮಜಂ ॥ ೪೨ ॥
ಪರಿಷ್ವಜ್ಯತು ಗಾಢೇನ ಗಿರಿಜಾಪಿ ತುತೋಷ ವೈ ।
ಸ್ವೋತ್ಸಂಗೇ ಚ ಸಮಾರೋಪ್ಯ ಕುಮಾರಂ ಸೂರ್ಯವರ್ಚಸಂ ॥ ೪೩ ॥

---

೩೮. ಹರಪ್ರಿಯನೂ, ಮಹಾ ಮನಸ್ವಿಯೂ ಆದ ಕುಮಾರನು ಅಲ್ಲಿ ಸೇರಿದ್ದ ಪರ್ವತರಾಜರೆಲ್ಲರನ್ನೂ ಸಮಾಧಾನಗೊಳಿಸಿ ತನ್ನ ಜನಕನಾದ ಶಂಭುವನ್ನೂ ತನ್ನ ತಾಯಿಯಾದ ಗಿರಿಜೆಯನ್ನೂ ಮನಸ್ಸಿನಲ್ಲಿಯೇ ಧ್ಯಾನಮಾಡಿ ಅವರನ್ನು ಭಕ್ತಿನಮ್ರನಾಗಿ ನಮಸ್ಕರಿಸಿದನು.

೩೯. ತರುವಾಯ ಆ ಕಾರ್ತಿಕೇಯಸ್ವಾಮಿಯು ಶಕ್ತ್ಯಾಯುಧವನ್ನೇ ಪ್ರಯೋಗಿಸಿ, ಪಗೆಯಾದ ಆ ತಾರಕಾಸುರನ ತಲೆಯನ್ನು ತರಿದುಹಾಕಿದನು. ಆ ಕ್ಷಣದಲ್ಲಿಯೇ ಆ ತಲೆಯು ನೆಲಕ್ಕುರುಳಿಹೋಯಿತು. ಹೀಗೆ ಮಹಾ ಪ್ರಭುವಾದ ಷಣ್ಮುಖಸ್ವಾಮಿಯು ವಿಜಯವನ್ನು ಪಡೆದನು.

೪೦–೪೧. ಈ ರೀತಿ ವಿಜಯಸಂಪನ್ನನಾದ ಆ ಸ್ವಾಮಿಯನ್ನು ದೇವತಾ ಸಮೂಹಗಳೂ, ಋಷಿಗಳೂ, ಗುಹ್ಯಕರೂ, ಪಕ್ಷಿಗಣಗಳೂ, ಕಿನ್ನರರೂ, ಚಾರಣರೂ, ನಾಗರೂ, ಅಪ್ಸರಸ್ಸುಗಳೂ ಕಂಡು ಪರಮಾನಂದಭರಿತರಾಗಿ ಆತನನ್ನು ಕೊಂಡಾಡಿದರು. ವಿದ್ಯಾಧರ ಕನ್ನಿಕೆಯರೆಲ್ಲರೂ ನರ್ತನಮಾಡಿದರು. ದೇವಗಾಯಕರೆಲ್ಲರೂ ಆ ಸ್ವಾಮಿಯ ವಿಜಯಗೀತೆಗಳನ್ನು ಹಾಡಿದರು.

೪೨–೪೩. ಎಲೈ ಶೌನಕಾದಿ ಮುನಿಗಳಿರಾ! ಈ ಪ್ರಕಾರವಾಗಿ ವಿಜಯವನ್ನು ಪಡೆದ ಆ ಕುಮಾರನನ್ನು ಕಂಡು, ಅವರೆಲ್ಲರೂ ಹರ್ಷಭರಿತರಾಗಿ ತೊಡೆಯಮೇಲೆ ಕುಳ್ಳಿರಿಸಿಕೊಂಡು ನಲಿದರು. ಅದೇ ಸಮಯದಲ್ಲಿಯೇ

**ಲಾಲಯಾಮಾಸ ತನ್ವಂಗೀ ಪಾರ್ವತೀ ರುಚಿರೇಕ್ಷಣಾ ।**
**ಋಷಿಭಿಃ ಸಂಸ್ತುತಃ ಶಂಭುಃ ಪಾರ್ವತ್ಯಾ ಸಹಿತಸ್ತದಾ ॥ ೪೪ ॥**
**ಅರ್ಧಾಸನ ಗತಾ ಸಾಧ್ವೀ ಶುಶುಭೇ ಮಿತಭಾಷಿಣೀ ।**
**ಸಂಸ್ತೂಯಮಾನಾ ಮುನಿಭಿಃ ಸಿದ್ಧಚಾರಣ ಪನ್ನಗೈಃ ॥ ೪೫ ॥**
**ನೀರಾಜಿತಾ ತದಾ ದೇವ್ಯೈಃ ಪಾರ್ವತೀ ಶಂಭುನಾ ಸಹ ।**
**ಕುಮಾರೇಣ ಸಹೈವಾಥ ಶೋಭಮಾನಾ ತದಾ ಸತೀ ॥ ೪೬ ॥**
**ಹಿಮಾಲಯಸ್ತದಾಗತ್ಯ ಪುತ್ರೈಶ್ಚ ಪರಿವಾರಿತಃ ।**
**ಮೇರ್ವಾದ್ಯೈಃ ಪರ್ವತೈಶ್ಚೈವ ಸ್ತೂಯಮಾನಃ ಪರೋಽಭವತ್ ॥ ೪೭ ॥**
**ತದಾ ದೇವಗಣಾಃ ಸರ್ವ ಇಂದ್ರಾದ್ಯಾ ಋಷಿಭಿಃ ಸಹ ।**
**ಪುಷ್ಪವರ್ಷೇಣ ಮಹತಾ ವವರ್ಷುರಮಿತದ್ಯುತಿಂ ।**
**ಕುಮಾರಮಗ್ರತಃ ಕೃತ್ವಾ ನೀರಾಜನಪರಾಬಭುಃ ॥ ೪೮ ॥**

---

ಗಿರಿಜಾದೇವಿಯೂ ಸಹ ಆ ಸ್ವಾಮಿಯನ್ನು ತಾಯಿಯ ಮಮತೆಯಿಂದ ಬಿಗಿಯಾಗಿ ಆಲಿಂಗಿಸಿ, ಸೂರ್ಯನಿಗೆ ಸಮಾನವಾದ ತೇಜಸ್ಸಿನಿಂದ ಬೆಳಗುತ್ತಿದ್ದ ಆತನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಬಹಳವಾಗಿ ಹರ್ಷಿಸಿದಳು.

೪೪. ಹೀಗೆ ಮಹಾ ಸುಂದರಿಯೂ ಸುಂದರನಯನೆಯೂ ಆದ ಆ ದೇವಿಯು ತನ್ನ ಮಗನನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ಲಾಲಿಸು (ಮುದ್ದಿಸು)ತ್ತಿರಲು ಮಹರ್ಷಿಗಳೆಲ್ಲರೂ ಆಕೆಯೊಡನಿದ್ದ ಶಂಭು ಶಂಕರನನ್ನು ಬಹಳವಾಗಿ ಪೂಜಿಸಿದರು.

೪೫. ಮಿತಭಾಷಿಣಿಯೂ, ಮಹಾ ಪತಿವ್ರತೆಯೂ ಆದ ಆ ಪಾರ್ವತಿಯು ಪರಮ ಪೂಜ್ಯವಾದ ಆಸನದಲ್ಲಿ ಕುಳಿತು ಸಿದ್ಧಚಾರಣ ಪನ್ನಗರಿಂದಲೂ, ಮುನಿಗಳಿಂದಲೂ ಸಂಸ್ತುತಳಾಗಿ ವಿರಾಜಿಸಿದಳು.

೪೬. ಆಗ ದೇವತೆಗಳೆಲ್ಲರೂ ಕುಮಾರನಾದ ಷಣ್ಮುಖನೊಡನೆಯೂ, ಸ್ವಾಮಿಯಾದ ಶಂಕರನೊಡನೆಯೂ ಕುಳಿತು ಬೆಳಗುತ್ತಲಿದ್ದ ಆ ದೇವಿಗೆ ಮಂಗಳದ ನೀರಾಜನವನ್ನೆತ್ತಿದರು.

೪೭–೪೮. ಅದೇ ಸಮಯದಲ್ಲಿಯೇ ಹಿಮವಂತನೂ ಸಹ ತನ್ನ ಪುತ್ರರಿಂದ ಪರಿವಾರಿತನಾಗಿ, ಮೇರುವೇ ಮೊದಲಾದ ಪರ್ವತರಾಜರಿಂದ ಬಹಳವಾಗಿ ಸ್ತುತಿಸಲಾದನು. ಆಗ ದೇವತಾ ಸಮೂಹಗಳೆಲ್ಲವೂ ಇಂದ್ರಾದಿ ಲೋಕಪಾಲಕರಿಂದಲೂ, ಋಷಿಗಳಿಂದಲೂ ಕೂಡಿ ಅಪಾರತೇಜಸ್ವಿಯಾದ ಕುಮಾರಸ್ವಾಮಿಯ ಮೇಲೆ ಹೂಮಳೆಗರೆದು ಆತನನ್ನು ಮುಂದಿರಿಸಿಕೊಂಡು ನಿರಾಜನವೆತ್ತಿದರು. ಆಗಲಾ ಕುಮಾರಸ್ವಾಮಿಯು ಗೀತವಾದಿತ್ರ ಘೋಷಗಳಿಂದಲೂ, ಬಹಳವಾದ

ಗೀತವಾದಿತ್ರ ಘೋಷೇಣ ಬ್ರಹ್ಮಘೋಷೇಣ ಭೂಯಸಾ ।
ಸಂಸ್ತೂಯಮಾನೋ ವಿವಿಧೈಃ ಸೂಕ್ತೈರ್ವೇದವಿದಾಂ ವರೈಃ ॥ ೪೯ ॥
ಕುಮಾರವಿಜಯಂ ನಾಮ ಚಾರಿತ್ರಂ ಪರಮಾದ್ಭುತಂ ।
ಸರ್ವಪಾಪಹರಂ ದಿವ್ಯಂ ಸರ್ವಕಾಮಪ್ರದಂ ನೃಣಾಂ ॥ ೫೦ ॥

ಯೇ ಕೀರ್ತಯಂತಿ ಶುಚಯೋಽಮಿತ ಭಾಗ್ಯಯುಕ್ತಾ
ಶ್ಚಾನಂತ್ಯರೂಪಮಜರಾಮರಮಾದಧಾನಾಃ ।
ಕೌಮಾರ ವಿಕ್ರಮ ಮಹಾತ್ಮ್ಯ ಮುದಾರಮೇತ
ದಾನಂದದಾಯಕಮನೋರ್ಥಕರಂ ನೃಣಾಂ ಹಿ ॥ ೫೧ ॥

ಯಃ ಪಠೇಚ್ಛೃಣುಯಾದ್ವಾಪಿ ಕುಮಾರಸ್ಯ ಮಹಾತ್ಮನಃ ।
ಚರಿತಂ ತಾರಕಾಖ್ಯಂ ಚ ಸರ್ವಪಾಪೈಃ ಪ್ರಮುಚ್ಯತೇ ॥ ೫೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ
ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ ಶಿವಶಾಸ್ತ್ರೇ
"ತಾರಕಾಸುರ ವಧಪೂರ್ವಕಂ ಸ್ವಾಮಿ ಕಾರ್ತಿಕೇಯ ವಿಜಯೋತ್ಸವವರ್ಣನಂ"
ನಾಮ ತ್ರಿಂಶೋಽಧ್ಯಾಯಃ

---

ವೇದಘೋಷಗಳಿಂದಲೂ, ವೇದವಿತ್ತುಗಳಾದ ಮಹರ್ಷಿಗಳ ಬಗೆ ಬಗೆಯ ಮಂಗಳಸೂಕ್ತಗಳಿಂದಲೂ ಸ್ತುತಿಸಲ್ಪಟ್ಟನು.

೫೦-೫೨. ಎಲೈ ಶೌನಕಾದಿ ಮುನಿಗಳಿರಾ! ಈ ಪ್ರಕಾರವಾದ ಕುಮಾರ ಸ್ವಾಮಿಯ ವಿಜಯ ಚರಿತ್ರೆಯು ಸರ್ವ ಪಾಪಹರವೂ, ದಿವ್ಯವೂ, ಮಾನವರಿಗೆ ಸಮಸ್ತ ಅಭೀಷ್ಟಗಳನ್ನೂ ಈಡೇರಿಸಿಕೊಡುವಂಥದೂ ಆಗಿರುವುದು. ಈ ಚರಿತ್ರೆಯನ್ನು ಯಾರು ಹೇಳುತ್ತಾರೆಯೋ, ಯಾರು ಕೇಳುತ್ತಾರೆಯೋ, ಅವರು ಪರಮಪವಿತ್ರರೂ, ಭಾಗ್ಯಸಂಪನ್ನರೂ ಆಗಿ ಅಜರಾಮರವಾದ ಮುಕ್ತಿಯನ್ನು ಪಡೆಯುತ್ತಾರೆ. ಬಹಳ ಉದಾರವಾದ ಈ ಕುಮಾರ ವಿಜಯದ (ಪರಾಕ್ರಮದ) ಮಹಾತ್ಮೆಯು ಮಾನವರೆಲ್ಲರಿಗೂ ಪರಮಾನಂದದಾಯಕವಾದುದಷ್ಟೆ! ಯಾರು ಮಹಾತ್ಮನಾದ ಈ ಕುಮಾರಸ್ವಾಮಿಯ ಮತ್ತು ತಾರಕಾಸುರನ ಈ ಚರಿತ್ರೆಯನ್ನು ಪಠಿಸುತ್ತಾರೆಯೋ ಅವರು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾರೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ
ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರ ಖಂಡದಲ್ಲಿ
"ತಾರಕಾಸುರವಧೆ—ಸ್ವಾಮಿ ಕಾರ್ತಿಕೇಯ ವಿಜಯೋತ್ಸವ ವರ್ಣನ"ವೆಂಬ
ಮೂವತ್ತನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಏಕತ್ರಿಂಶೋಽಧ್ಯಾಯಃ

### ಕಾರ್ತಿಕೇಯ ಪ್ರೋಕ್ತ ಶಿವಲಿಂಗ ಮಹಾತ್ಮ್ಯ ವರ್ಣನಂ

ಶೌನಕ ಉವಾಚ :—

**ಹತ್ವಾ ತಂ ತಾರಕಂ ಸಂಖ್ಯೇ ಕುಮಾರೇಣ ಮಹಾತ್ಮನಾ ।**
**ಕಿಂ ಕೃತಂ ಸುಮಹದ್ವಿಪ್ರ ತತ್ಸರ್ವಂ ವಕ್ತುಮರ್ಹಸಿ ॥ ೧ ॥**
**ಕುಮಾರೋ ಹ್ಯಪರಃ ಶಂಭುರ್ಯೇನ ಸರ್ವಮಿದಂ ತತಂ ।**
**ತಪಸಾ ತೋಷಿತಃ ಶಂಭುರ್ದದಾತಿ ಪರಮಂ ಪದಂ ॥ ೨ ॥**
**ಕುಮಾರೋ ದರ್ಶನಾತ್ಸದ್ಯಃ ಸಫಲೋ ಹಿ ನೃಣಾಂ ಸದಾ ।**
**ಯೇ ಪಾಪಿನೋ ಹ್ಯಧರ್ಮಿಷ್ಠಾಃ ಶ್ವಪಚಾ ಅಪಿ ಲೋಮಶ ।**
**ದರ್ಶನಾದ್ಧೂತಪಾಪಾಸ್ತೇ ಭವಂತ್ಯೇವ ನ ಸಂಶಯಃ ॥ ೩ ॥**
**ಶೌನಕಸ್ಯ ವಚಃ ಶ್ರುತ್ವಾ ಉವಾಚ ಚರಿತಂ ತದಾ ।**
**ವ್ಯಾಸಶಿಷ್ಯೋ ಮಹಾಪ್ರಾಜ್ಞಃ ಕುಮಾರಸ್ಯ ಮಹಾತ್ಮನಃ ॥ ೪ ॥**

ಲೋಮಶ ಉವಾಚ :—

**ಹತ್ವಾ ತಂ ತಾರಕಂ ಸಂಖ್ಯೇ ದೇವಾನಾಮಜಯಂ ತತಃ ।**
**ಅವಧ್ಯಂ ಚ ದ್ವಿಜಶ್ರೇಷ್ಠಾ ಕುಮಾರೋ ಜಯಮಾಪ್ತವಾನ್ ॥ ೫ ॥**

---

## ಕನ್ನಡದ ಅನುವಾದ

### ಕಾರ್ತಿಕೇಯಸ್ವಾಮಿಯು ಅಪ್ಪಣೆಕೊಡಿಸಿದ ಶಿವಲಿಂಗಮಾಹಾತ್ಮ್ಯ ವರ್ಣನ

೧-೫. ಶೌನಕನು ಹೇಳುತ್ತಾನೆ :—ಎಲೈ ಸೂತಪುರಾಣಿಕನೇ ! ಮಹಾತ್ಮನಾದ ಕುಮಾರಸ್ವಾಮಿಯು ತಾರಕಾಸುರನನ್ನು ಸಂಹರಿಸಿದ ತರುವಾಯ ಮತ್ತಾವ ಮಹತ್ತರಕಾರ್ಯವನ್ನೆಸಗಿದನೆಂಬ ವಿಷಯವನ್ನರುಹುವವನಾಗು. ಕುಮಾರಸ್ವಾಮಿಯು ಮತ್ತೊಬ್ಬ ಶಂಭುವೇ ಸರಿ. ಆತನಿಂದಲೇ ಈ ಪ್ರಪಂಚವೆಲ್ಲವೂ ವ್ಯಾಪ್ತವಾಗಿರುವುದು. ಶಂಭುವನ್ನು ತಪಸ್ಸಿನಿಂದ ಸಂತೋಷಗೊಳಿಸಿದರೆ ಪರಮ ಪದವಿಯನ್ನು ದಯಪಾಲಿಸುತ್ತಾನೆ. ಕುಮಾರಸ್ವಾಮಿಯಾದರೋ ಕೇವಲ ದರ್ಶನಮಾತ್ರದಿಂದಲೇ ಸಮಸ್ತ ಮಾನವರಿಗೂ ಸಮಸ್ತ ಇಷ್ಟಾರ್ಥಗಳನ್ನೂ ಕರುಣಿಸುತ್ತಾನೆ. ಎಲೈ ಲೋಮಶ ಮುನಿಯೇ ! ಪಾಪಿಗಳೂ, ಅಧರ್ಮಿಷ್ಠರೂ, ಶ್ವಪಚರೂ ಸಹ ಈ ಷಣ್ಮುಖಸ್ವಾಮಿಯನ್ನು ಸಂದರ್ಶಿಸಿದುದಾದರೆ ಪಾಪದೂರರಾಗುತ್ತಾರೆಯೆಂಬುದರಲ್ಲಿ ಸಂಶಯವಿಲ್ಲವು. ಈ ಪ್ರಕಾರನಾಗಿ ಶೌನಕನಾಡಿದ ಮಾತುಗಳನ್ನು ಕೇಳಿ ವ್ಯಾಸಶಿಷ್ಯನೂ, ಮಹಾಮೇಧಾವಿಯೂ ಆದ ಸೂತಪುರಾಣಿಕನು ಮಹಾತ್ಮನಾದ ಆ ಕುಮಾರಸ್ವಾಮಿಯ ಚರಿತ್ರೆಯನ್ನು ಮತ್ತೂ ಹೇಳತೊಡಗಿದನು. ಲೋಮಶನು ಹೇಳುತ್ತಾನೆ :—

**ಮಹಿಮಾ ಹಿ ಕುಮಾರಸ್ಯ ಸರ್ವಶಾಸ್ತ್ರೇಷು ಕಥ್ಯತೇ ।**
**ವೇದೈಶ್ಚ ಸ್ವಾಗಮೈಶ್ಚಾದಿಪುರಾಣೈಶ್ಚ ತಥೈವಚ ॥ ೬ ॥**
**ತಥೋಪನಿಷದೈಶ್ಚೈವ ಮೀಮಾಂಸಾದ್ವಿತಯೇನತು ।**
**ಏವಂ ಭೂತಃ ಕುಮಾರೋಽಯಮಶಕ್ಯೋ ವರ್ಣಿತುಂ ದ್ವಿಜಾಃ ॥ ೭ ॥**
**ಯೋ ಹಿ ದರ್ಶನಮಾತ್ರೇಣ ಪುನಾತಿ ಸಕಲಂ ಜಗತ್ ।**
**ತ್ರಾತಾರಂ ಭುವನಸ್ಯಾಸ್ಯ ನಿಶಮ್ಯ ಪಿತೃರಾಟ್ ಸ್ವಯಂ ॥ ೮ ॥**
**ಬ್ರಹ್ಮಾಣಂಚ ಪುರಸ್ಕೃತ್ಯ ವಿಷ್ಣುಂ ಚೈವ ಸವಾಸವಂ ।**
**ಸ ಯಯೌ ತ್ವರಿತೇಸ್ಸೈವ ಶಂಕರಂ ಲೋಕಶಂಕರಂ ।**
**ತುಷ್ಟಾವ ಪ್ರಯತೋ ಭೂತ್ವಾ ದಕ್ಷಿಣಾಶಾಪತಿಃ ಸ್ವಯಂ ॥ ೯ ॥**
**ನಮೋ ಭರ್ಗಾಯ ದೇವಾಯ ದೇವಾನಾಂ ಪತಯೇ ನಮಃ ।**
**ಮೃತ್ಯುಂಜಯಾಯ ರುದ್ರಾಯ ಈಶಾನಾಯ ಕಪರ್ದಿನೇ ॥ ೧೦ ॥**
**ನೀಲಕಂಠಾಯ ಶರ್ವಾಯ ವ್ಯೋಮಾವಯವರೂಪಿಣೇ ।**
**ಕಾಲಾಯ ಕಾಲನಾಥಾಯ ಕಾಲರೂಪಾಯ ವೈ ನಮಃ ॥ ೧೧ ॥**

---

ಅಯ್ಯಾ ವಿಪ್ರರೇ! ಕುಮಾರಸ್ವಾಮಿಯು ದೇವತೆಗಳಿಂದಲೂ ಜಯಿಸಲನಾಧ್ಯನೂ, ಅವಧ್ಯನೂ ಆದ ತಾರಕಾಸುರನನ್ನು ಸಂಹರಿಸಿ ವಿಜಯವನ್ನು ಪಡೆದನು.

೬–೭. ಈ ಕುಮಾರಸ್ವಾಮಿಯ ಮಹಿಮೆಯು ಸಮಸ್ತ ಶಾಸ್ತ್ರಗಳಲ್ಲಿಯೂ, ವೇದ-ಆಗಮ-ಪುರಾಣಗಳು ಉಪನಿಷತ್ತುಗಳು ಪೂರ್ವೋತ್ತರ ಮೀಮಾಂಸಾಶಾಸ್ತ್ರಗಳು ಮೊದಲಾದ ಸಮಸ್ತ ಶಾಸ್ತ್ರಗಳಲ್ಲಿಯೂ ವರ್ಣಿತವಾಗಿರುವುದು. ಇಂತಿರುವ ಈ ಷಣ್ಮುಖಸ್ವಾಮಿಯನ್ನು ವರ್ಣಿಸಲು ಅಶಕ್ಯವು.

೮–೯. ಯಾವನು ದರ್ಶನಮಾತ್ರದಿಂದಲೇ ಸಮಸ್ತ ಜಗತ್ತನ್ನೂ ಪಾವನಗೊಳಿಸುತ್ತಾನೆಯೋ, ಇಷ್ಟೆಯಲ್ಲದೆ ಸಂರಕ್ಷಿಸುತ್ತಾನೆಯೋ ಆ ಈ ಸ್ವಾಮಿಯ ಮಹಿಮೆಯನ್ನು ಕಂಡು ಕೇಳಿ ಸಾಕ್ಷಾತ್ ಯಮಧರ್ಮನೇ ಬ್ರಹ್ಮನನ್ನೂ, ವಿಷ್ಣುವನ್ನೂ ಪುರಸ್ಕರಿಸಿಕೊಂಡು ಮಹೇಂದ್ರನೊಡನೆಯೂ ಸಹ, ಬಹು ತ್ವರೆಯಿಂದೈತಂದು ಪ್ರಯತ್ನಪೂರ್ವಕವಾಗಿ ಲೋಕಶಂಕರನಾದ ಆ ಶಂಕರನನ್ನು ಮುಂದೆ ಹೇಳುವ ಪ್ರಕಾರ ಸ್ತೋತ್ರಮಾಡಿದನು

೧೦. "ಭರ್ಗನೂ ದೇವತೆಗಳೆಲ್ಲರಿಗೂ ಸ್ವಾಮಿಯೂ, ಮೃತ್ಯುಂಜಯನೂ, ರುದ್ರನೂ, ಈಶಾನನೂ, ಕಪರ್ದಿಯೂ ಆದ ಸ್ವಾಮಿಗೆ ನಮೋನಮಃ.

೧೧. ನೀಲಕಂಠನೂ, ಶರ್ವನೂ, ವ್ಯೋಮ(ಆಕಾಶ) ವಯವ ರೂಪನೂ, ಕಾಲಸ್ವರೂಪನೂ, ಕಾಲಕ್ಕೊಡೆಯನೂ (ಯಮನಿಗೂ ಸ್ವಾಮಿಯೂ) ಆದ ಓ ಪರಮೇಶ್ವರಾ! ನಿನಗೆ ನಮಸ್ಕಾರವು.

ಯಮೇನ ಸ್ತೂಯಮಾನೋ ಹಿ ಉವಾಚ ಪ್ರಭುರೀಶ್ವರಃ ।
ಕಿಮರ್ಥಮಾಗತೋಽಸಿ ತ್ವಂ ತತ್ಸರ್ವಂ ಕಥಯಸ್ವ ನಃ ॥ ೧೨ ॥

ಯಮ ಉವಾಚ :—

ಶ್ರೂಯತಾಂ ದೇವದೇವೇಶ ವಾಕ್ಯಂ ವಾಕ್ಯವಿಶಾರದ ।
ತಪಸಾ ಪರಮೇಣೈವ ತುಷ್ಟಿಂ ಪ್ರಾಪ್ನೋಽಸಿ ಶಂಕರ ॥ ೧೩ ॥
ಕರ್ಮಣಾ ಪರಮೇಣೈವ ಬ್ರಹ್ಮಾ ಲೋಕಪಿತಾಮಹಃ ।
ತುಷ್ಟಿಮೇತಿ ನ ಸಂದೇಹೋ ವರಾಣಾಂ ಹಿ ಸದಾ ಪ್ರಭುಃ ॥ ೧೪ ॥
ತಥಾ ವಿಷ್ಣುರ್ಹಿ ಭಗವಾನ್ವೇದವೇದ್ಯಃ ಸನಾತನಃ ।
ಯಜ್ಞೈರನೇಕೈಃ ಸಂತುಷ್ಟ ಉಪವಾಸವ್ರತೈಸ್ತಥಾ ॥ ೧೫ ॥
ದದಾತಿ ಕೇವಲಂ ಭಾವಂ ಯೇನ ಕೈವಲ್ಯ ಮಾಪ್ನುಯುಃ ।
ನರಾಃ ಸರ್ವೇ ಮಮ ಮತಂ ನಾನ್ಯಥಾ ಹಿ ವಚೋ ಮಮ ॥ ೧೬ ॥
ದದಾತಿ ತುಷ್ಟೋ ವೈ ಭೋಗಂ ತಥಾ ಸ್ವರ್ಗಾದಿ ಸಂಪದಃ ।
ಸೂರ್ಯೋ ನಮಸ್ಯಯಾರೋಗ್ಯಂ ದದಾತೀಹ ನ ಚಾನ್ಯಥಾ ॥ ೧೭ ॥
ಗಣೇಶೋ ಹಿ ಮಹಾದೇವ ಅರ್ಘ್ಯಪಾದ್ಯಾದಿ ಚಂದನೈಃ ।
ಮಂತ್ರಾವೃತ್ತ್ಯಾ ತಥಾ ಶಂಭೋ ನಿರ್ವಿಘ್ನಂ ಚ ಕರಿಷ್ಯತಿ ॥ ೧೮ ॥

---

೧೨. ಯಮಧರ್ಮನಿಂತು ಪ್ರಾರ್ಥಿಸಿದೊಡನೆ ಪ್ರಭುವಾದ ಪರಮೇಶ್ವರನು ಅವನನ್ನು ಕುರಿತು, "ಎಲೈ ಯಮನೇ! ನೀನಾವ ಪ್ರಯೋಜನಕ್ಕಾಗಿ ಬಂದಿರುವೆಯೆಂಬುದನ್ನು ನಮಗೆ ತಿಳಿಸುವವನಾಗು" ಎಂದು ಹೇಳಿದನು.

೧೩–೧೪. ಯಮನು ಹೇಳುತ್ತಾನೆ :—"ದೇವದೇವೇಶ್ವರಾ! ಲಾಲಿಸಬೇಕು; ಎಲೈ ವಾಕ್ಯವಿಶಾರದನಾದ ಪ್ರಭುವೇ! ನನ್ನೀ ಮಾತನ್ನು ಲಾಲಿಸಬೇಕು. ಎಲೈ ಶಂಕರನೇ! ನೀನು ಅತ್ಯುತ್ತಮವಾದ ತಪಸ್ಸಿನಿಂದಲೇ ಸಂತುಷ್ಟನಾಗುವೆ. ಲೋಕಪಿತಾಮಹನಾದ ಬ್ರಹ್ಮದೇವನಾದರೋ ಶ್ರೇಷ್ಠವಾದ ಕರ್ಮಾನುಷ್ಠಾನದಿಂದ ಸುಪ್ರೀತನಾಗುವನು. ಆ ಪ್ರಭುವು ಹೀಗೆ ಸತ್ಕರ್ಮಾನುಷ್ಠಾನದಿಂದ ಸಂತುಷ್ಟನಾಗುವನೆಂಬುದರಲ್ಲಿ ಸಂದೇಹವೇ ಇಲ್ಲ.

೧೫–೧೭. ಅಂತೆಯೇ ವೇದವೇದ್ಯನೂ, ಸನಾತನನೂ ಆದ ಭಗವಾನ್ ವಿಷ್ಣುವು ಅನೇಕ ಯಜ್ಞಗಳಿಂದಲೂ, ವ್ರತೋಪವಾಸಗಳಿಂದಲೂ ಸಂತುಷ್ಟನಾಗುತ್ತಾನೆ ಆ ಪ್ರಭುವು ಈ ರೀತಿ ಸುಪ್ರೀತನಾಗಿ ಯಾವುದರಿಂದ ಮಾನವರೆಲ್ಲರೂ ಮುಕ್ತಿಯನ್ನು ಪಡೆಯುತ್ತಾರೆಯೋ ಆ ಭಕ್ತಿಯನ್ನು ದಯಗೈಯುತ್ತಾನೆ. ಈ ನನ್ನ ಮಾತು ಯಥಾರ್ಥವಾದುದು.

೧೮. ಓ ಮಹಾದೇವ, ಶಂಭು! ನಿನ್ನ ಪುತ್ರನಾದ ಗಣೇಶನು ಅರ್ಘ್ಯಪಾದ್ಯಗಳಿಂದಲೂ, ಚಂದನಾದಿಗಳಿಂದಲೂ ಅರ್ಚಿಸಿದುದಾದರೆ ಅಥವಾ ಗಣೇಶ

**ತಥಾನ್ಯೇ ಲೋಕಪಾಃ ಸರ್ವೇ ಯಥಾಶಕ್ತ್ಯಾ ಫಲಪ್ರದಾಃ ।**
**ಯಜ್ಞಾಧ್ಯಯನದಾನಾದ್ಯೈಃ ಪರಿತುಷ್ಟಾಶ್ಚ ಶಂಕರ ॥ ೧೯ ॥**
**ಮಹದಾಶ್ಚರ್ಯ ಸಂಭೂತಂ ಸರ್ವೇಷಾಂ ಪ್ರಾಣಿನಾಮಿಹ ।**
**ಕೃತಂ ಚ ತವಪುತ್ರೇಣ ಸ್ವರ್ಗದ್ವಾರಮಪಾವೃತಂ ॥ ೨೦ ॥**
**ದರ್ಶನಾಚ್ಚ ಕುಮಾರಸ್ಯ ಸರ್ವೇ ಸ್ವರ್ಗೌಕಸೋ ನರಾಃ ।**
**ಪಾಪಿನೋಽಪಿ ಮಹಾದೇವ ಜಾತಾ ನಾಸ್ತ್ಯತ್ರ ಸಂಶಯಃ ॥ ೨೧ ॥**
**ಮಯಾ ಕಿಂ ಕ್ರಿಯತಾಂ ದೇವ ಕಾರ್ಯಾಕಾರ್ಯವ್ಯವಸ್ಥಿತೌ ।**
**ಯೇ ಸತ್ಯಶೀಲಾಃ ಶಾಂತಾಶ್ಚ ವದಾನ್ಯಾ ನಿರವಗ್ರಹಾಃ ॥ ೨೨ ॥**
**ಜಿತೇಂದ್ರಿಯಾ ಅಲುಬ್ಧಾಶ್ಚ ಕಾಮರಾಗವಿವರ್ಜಿತಾಃ ।**
**ಯಾಜ್ಞಿಕಾ ಧರ್ಮನಿಷ್ಠಾಶ್ಚ ವೇದವೇದಾಂಗಪಾರಗಾಃ ॥ ೨೩ ॥**
**ಯಾಂ ಗತಿಂ ಯಾಂತಿ ವೈ ಶಂಭೋ ಸರ್ವೇ ಸುಕೃತಿನೋಽಪಿ ಹಿ ।**
**ತಾಂ ಗತಿಂ ದರ್ಶನಾತ್ಸರ್ವೇ ಶ್ವಪಚಾ ಅಧಮಾ ಅಪಿ ॥ ೨೪ ॥**

---

ಮಂತ್ರವನ್ನು ಪುರಶ್ಚರಣೆಮಾಡಿದುದಾದರೆ ಸಮಸ್ತ ಕಾರ್ಯಗಳಿಗೂ ನಿರ್ವಿಘ್ನತೆಯನ್ನುಂಟುಮಾಡುತ್ತಾನೆ.

೧೯. ಎಲೈ ಶಂಕರನೇ! ಅಂತೆಯೇ ಇತರ ಲೋಕಪಾಲಕರು ಯಜ್ಞಗಳಿಂದಲೂ, ಅಧ್ಯಯನದಿಂದಲೂ, ಮಂತ್ರ ಜಪ ಪೂಜೆ ಮೊದಲಾದುವುಗಳಿಂದಲೂ ತಮ್ಮ ತಮ್ಮ ಶಕ್ತಿಗನುಗುಣವಾಗಿ ಫಲಗಳನ್ನು ಕೊಡುವವರಾಗುತ್ತಾರೆ.

೨೦. ಆದರೆ ನಿನ್ನ ಕಿರಿಮಗನಾದ ಷಣ್ಮುಖಸ್ವಾಮಿಯಾದರೋ ಸಮಸ್ತ ಪ್ರಾಣಿಗಳಿಗೂ ಆಶ್ಚರ್ಯವನ್ನುಂಟುಮಾಡುವಂತೆ ಸ್ವರ್ಗದ ಬಾಗಿಲನ್ನೇ ತೆರೆದುಬಿಟ್ಟಿರುವನು.

೨೧–೨೪. ಆ ಸ್ವಾಮಿಯನ್ನು ಸಂದರ್ಶಿಸಿದ ಮಾತ್ರದಿಂದಲೇ ಮಾನವರೆಲ್ಲರೂ ಪಾಪಿಗಳಾದರೂ ನಿರಾತಂಕವಾಗಿ ಸ್ವರ್ಗದಲ್ಲಿ ವಾಸಮಾಡುವವರಾಗಿರುವರು. ಓ ಮಹಾದೇವ! ಈ ನನ್ನ ಮಾತಿನಲ್ಲಿ ಸಂಶಯವಿಲ್ಲವು. ಪ್ರಭುವೇ! ವಿಷಯವಿಂತಿರುವಲ್ಲಿ ನಾನು ಕಾರ್ಯಾಕಾರ್ಯಗಳನ್ನು ನೆರವೇರಿಸುವ ವಿಷಯದಲ್ಲಿ ಮಾಡಬೇಕಾದುದೇನು? ಸತ್ಯಶೀಲರೂ, ಶಾಂತರೂ, ದಾತೃಗಳೂ, ಸ್ಥಿರಮನಸ್ಸುಳ್ಳವರೂ, ಇಂದ್ರಿಯಗಳನ್ನು ಜಯಿಸಿರುವವರೂ, ಲೋಭಿಗಳಲ್ಲದವರೂ, ಕಾಮ ಕ್ರೋಧಗಳಿಂದ ಬಿಡುಗಡೆಯಾದವರೂ, ಯಜ್ಞಗಳನ್ನು ಮಾಡಿದವರೂ, ಧರ್ಮಾಚರಣೆಯಲ್ಲಿಯೇ ನಿಷ್ಠೆಯುಳ್ಳವರೂ, ವೇದಗಳಲ್ಲಿಯೂ, ಶಿಕ್ಷಾವ್ಯಾಕರಣಾದಿ ಶಾಸ್ತ್ರಗಳಲ್ಲಿಯೂ ಪಾರಂಗತರೂ ಆದ ಪುಣ್ಯಾತ್ಮರು ಯಾವ ಸ್ಥಾನಗಳನ್ನು ಪಡೆಯುತ್ತಾರೆಯೋ ಆ ಸ್ಥಾನವನ್ನು

**ಕುಮಾರಸ್ಯ ಚ ದೇವೇಶ ಮಹದಾಶ್ಚರ್ಯಕರ್ಮಣಃ ।**
**ಕಾರ್ತಿಕ್ಯಾಂ ಕೃತ್ತಿಕಾಯೋಗಸಹಿತಾಯಾಂ ಶಿವಸ್ಯ ಚ ॥ ೨೫ ॥**
**ಶಿವಸ್ಯ ತನಯಂ ದೃಷ್ಟ್ವಾ ತೇ ಯಾಂತಿ ಸ್ವಕುಲೈಃ ಸಹ ।**
**ಕೋಟಿಭಿರ್ಬಹುಭಿಶ್ಚೈವ ಮತ್ಸ್ಥಾನಂ ಪರಿಮುಚ್ಯ ವೈ ॥ ೨೬ ॥**
**ಕುಮಾರದರ್ಶನಾತ್ಸರ್ವೇ ಶ್ವಪಚಾ ಅಪಿ ಯಾಂತಿ ವೈ ।**
**ಸದ್ಗತಿಂ ತ್ವರಿತೇನೈವ ಕಿಂ ಕ್ರಿಯೇತ ಮಯಾಧುನಾ ॥ ೨೭ ॥**
**ಯಮಸ್ಯ ವಚನಂ ಶ್ರುತ್ವಾ ಶಂಕರೋ ವಾಕ್ಯಮಬ್ರವೀತ್ ॥ ೨೮ ॥**

ಶಂಕರ ಉವಾಚ :—

**ಯೇಷಾಂ ತ್ವಂತಗತಂ ಪಾಪಂ ಜನಾನಾಂ ಪುಣ್ಯಕರ್ಮಣಾಂ ।**
**ವಿಶುದ್ಧಭಾವೋ ಭೋ ಧರ್ಮ ತೇಷಾಂ ಮನಸಿ ವರ್ತತೇ ॥ ೨೯ ॥**
**ಸತ್ತೀರ್ಥಗಮನಾಯೈವ ದರ್ಶನಾರ್ಥಂ ಸತಾಮಿಹ ।**
**ವಾಂಛಾ ಚ ಮಹತೀ ತೇಷಾಂ ಜಾಯತೇ ಪೂರ್ವಕಾರಿತಾ ॥ ೩೦ ॥**

---

ನಿನ್ನ ಕುಮಾರನನ್ನು ಸಂದರ್ಶಿಸಿದ ಮಾತ್ರದಿಂದಲೇ ಶ್ವಪಚರೂ, ಅಧಮರೂ ಆದ ಪಾಪಿಗಳೂ ಸಹ ಹೊಂದುತ್ತಿರುವರು.

೨೫-೨೬. ಎಲೈ ದೇವೇಶನೇ! ಮಹತ್ತರವಾದ ಆಶ್ಚರ್ಯ ಕರ್ಮಗಳನ್ನೆಸಿಗಿದ ಆ ಕುಮಾರಸ್ವಾಮಿಯನ್ನೂ, ನಿನ್ನನ್ನೂ ಕಾರ್ತೀಕಮಾಸದಲ್ಲಿ ಕೃತ್ತಿಕೆಯಲ್ಲಿ ಸಂದರ್ಶಿಸಿದ ಮಾನವರೆಲ್ಲರೂ ಅನೇಕ ಕೋಟಿ ಕುಲಗಳೊಡಗೂಡಿ ನನ್ನ ಸ್ಥಾನವನ್ನು ತೂರೆದು (ನರಕವನ್ನು ನೋಡದೆ) ಪರಮಪದವಿಯನ್ನು ಪಡೆಯುತ್ತಾರೆ.

೨೭. ಎಲೈ ಪರಮೇಶ್ವರನೇ! ನಿನ್ನ ಮಗನಾದ ಕುಮಾರಸ್ವಾಮಿಯನ್ನು ಸಂದರ್ಶಿಸಿದೊಡನೆಯೇ ಶ್ವಪಚರೂ ಸಹ ಬಹು ಜಾಗ್ರತೆಯಾಗಿ ಸದ್ಗತಿಯನ್ನು ಪಡೆಯುತ್ತಾರೆ. ಹೀಗಿರುವಲ್ಲಿ ಈಗ ನಾನು ಮಾಡತಕ್ಕುದೇನು? ನಾನು ಪಾಪಿಗಳನ್ನು ದಂಡಿಸುವ ಪದವಿಯಲ್ಲಿದ್ದೂ ನನಗಾವ ಕಾರ್ಯವೂ ಇಲ್ಲವಾಗಿರುವುದು. ಆದುದರಿಂದ ನಾನೀಗ ಏನು ಮಾಡಬೇಕು?''

೨೮. ಇಂತು ನುಡಿದ ಯಮಧರ್ಮನ ಮಾತುಗಳನ್ನು ಕೇಳಿ ಶಂಕರನು ಹೇಳಿದನು.

೨೯-೩೦. ಶಂಕರನು ಹೇಳುತ್ತಾನೆ:—'' ಅಯ್ಯಾ ಯಮಧರ್ಮನೇ! ಯಾರಿಗೆ ಪಾಪವೆಲ್ಲವೂ ಕಳೆದುಹೋಗಿರುತ್ತದೆಯೋ ಅಂತಹ ಸುಕೃತಶಾಲಿಗಳ ಮನಸ್ಸಿನಲ್ಲಿ ಪರಿಶುದ್ಧವಾದ ಭಕ್ತಿಯಿರುತ್ತದೆ. ಈ ಜಗತ್ತಿನಲ್ಲಿ ಅಂತಹ ಪುಣ್ಯಶಾಲಿಗಳಿಗೇ ಪೂರ್ವಜನ್ಮದಲ್ಲಿ ಮಾಡಿದ ಸುಕೃತದಿಂದ ಪುಣ್ಯಕ್ಷೇತ್ರಗಳಿಗೆ ಹೋಗಬೇಕೆಂದೂ, ಅಲ್ಲಿಯ ದೇವತಾ ಮೂರ್ತಿಗಳನ್ನು ಸಂದರ್ಶಿಸಬೇಕೆಂದೂ ಬುದ್ಧಿಯುಂಟಾಗುತ್ತದೆ.

ಬಹೂನಾಂ ಜನ್ಮನಾಮಂತೇ ಮಯಿ ಭಾವೋऽನುವರ್ತತೇ ।
ಪ್ರಾಣಿನಾಂ ಸರ್ವಭಾವೇನ ಜನ್ಮಾಭ್ಯಾಸೇನ ಭೋ ಯಮ ॥ ೩೧ ॥
ತಸ್ಮಾತ್ಸುಕೃತಿನಃ ಸರ್ವೇ ಯೇಷಾಂ ಭಾವೋऽನುವರ್ತತೇ ।
ಜನ್ಮಜನ್ಮಾನುವೃತ್ತಾನಾಂ ವಿಸ್ಮಯಂ ನೈವ ಕಾರಯೇತ್ ॥ ೩೨ ॥
ಸ್ತ್ರೀ ಬಾಲ ಶೂದ್ರಾಃ ಶ್ವಪಚಾಧಮಾಶ್ಚ
ಪ್ರಾಗ್ಜನ್ಮಸಂಸ್ಕಾರವಶಾದ್ಧಿ ಧರ್ಮ ।
ಯೋನಿಂ ಗತಾಃ ಪಾಪಿಷು ವರ್ತಮಾನಾ
ಸ್ತಥಾಪಿ ಶುದ್ಧಾ ಮನುಜಾ ಭವಂತಿ ॥ ೩೩ ॥
ತಥಾ ಸಿತೇನ ಮನಸಾ ಚ ಭವಂತಿ ಧರ್ಮ
ಸರ್ವೇಷುಚೈವ ವಿಷಯೇಷು ಭವಂತಿ ತದ್‌ಜ್ಞಾಃ ।
ದೈವೇನ ಪೂರ್ವಚರಿತೇನ ಭವಂತಿ ಸರ್ವೇ
ಸುರಾಶ್ಚೇಂದ್ರಾದಯೋ ಲೋಕಪಾಲಾಃ ॥ ೩೪ ॥
ಜಾತಾ ಹ್ಯಮೀ ಭೂತಗಣಾಶ್ಚ ಸರ್ವೇ
ಹ್ಯಮೀ ಋಷಯೋ ಹ್ಯಮೀ ದೇವತಾಶ್ಚ ॥ ೩೫ ॥

---

೩೧. ಎಲೈ ಯಮನೇ! ಪ್ರಾಣಿಗಳಿಗೆ ಅನೇಕ ಜನ್ಮಗಳು ಕಳೆದ ತರುವಾಯ ಆ ಜನ್ಮಗಳಲ್ಲಿ ಅವರೆಸಗಿದ ಪುಣ್ಯಕರ್ಮಗಳ ಅಭ್ಯಾಸಬಲದಿಂದ ನನ್ನಲ್ಲಿ ಭಕ್ತಿ ಯುಂಟಾಗುತ್ತದೆ.

೩೨. ಆದುದರಿಂದ ಯಾರಿಗೆ ಬಹು ಜನ್ಮಗಳಾಗಿ ನನ್ನಲ್ಲಿ ಭಕ್ತಿಯುಂಟಾಗುತ್ತದೆಯೋ ಅಂತಹ ಪುಣ್ಯಶಾಲಿಗಳ ವಿಷಯದಲ್ಲಿ ಯಾವ ಆಶ್ಚರ್ಯವನ್ನೂ ಪಡಬಾರದು. (ಅವರು ತಮ್ಮ ಪುಣ್ಯಕರ್ಮಕ್ಕನುಗುಣವಾಗಿಯೂ, ತಮ್ಮ ಭಕ್ತಿಗನುಸಾರವಾಗಿಯೂ ಸದ್ಗತಿಯನ್ನು ಪಡೆಯಲೇ ಪಡೆಯುತ್ತಾರೆ. ಇದರಲ್ಲಿ ಆಶ್ಚರ್ಯವೇನು?)

೩೩. ಎಲೈ ಧರ್ಮರಾಜನೇ! ಹೆಂಗಸರು, ಹುಡುಗರು, ಮುದುಕರು, ಶ್ವಪಚರೂ, ಅಧಮರೂ, ಪಾಪಯೋನಿಗಳಲ್ಲಿ ಬಿದ್ದವರೂ ಆದರೂ ಮಾನವರು ಹಿಂದಿನ ಜನ್ಮಸಂಸ್ಕಾರಬಲದಿಂದ ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದಿ ಶುದ್ಧರಾಗುತ್ತಾರೆ.

೩೪–೩೬. ಅಂತೆಯೇ ಅದೇ ಪರಿಶುದ್ಧವಾದ ಮನಸ್ಸಿನಿಂದ ಸಮಸ್ತ ವಿಷಯಗಳ ಸ್ವರೂಪವನ್ನೂ ತಿಳಿಯುವವರಾಗುತ್ತಾರೆಯಲ್ಲದೆ, ಪೂರ್ವಜನ್ಮದಲ್ಲೆಸಗಿದ ಸುಕೃತವಿಶೇಷದಿಂದಲೇ ದೇವತೆಗಳೂ, ಇಂದ್ರನೇ ಮೊದಲಾದ ಲೋಕಪಾಲಕರೂ ಆಗುತ್ತಾರೆ. ಅಯ್ಯಾ ಯಮನೇ! ಈ ಭೂತಗಣಗಳೂ, ಈ ಋಷಿಗಳೂ, ಈ ದೇವತೆಗಳೂ ಸಮಸ್ತರೂ ಪೂರ್ವಜನ್ಮದಲ್ಲಿ ಮಾಡಿದ

**ವಿಸ್ಮಯೋ ನೈವ ಕರ್ತವ್ಯಸ್ತ್ವಯಾ ವಾಪಿ ಕುಮಾರಕೇ ।**
**ಕುಮಾರದರ್ಶನೇ ಚೈವ ಧರ್ಮರಾಜ ನಿಬೋಧ ಮೇ ॥ ೩೬ ॥**
**ವಚನಂ ಕರ್ಮಸಂಯುಕ್ತಂ ಸರ್ವೇಷಾಂ ಫಲದಾಯಕಂ ।**
**ಸರ್ವತೀರ್ಥಾನಿ ಯಜ್ಞಾಶ್ಚ ದಾನಾನಿ ವಿವಿಧಾನಿ ಚ ।**
**ಕಾರ್ಯಾಣಿ ಮತಿಶುಧ್ಯರ್ಥಂ ನಾತ್ರಕಾರ್ಯಾ ವಿಚಾರಣಾ ॥ ೩೭ ॥**
**ಮನಸಾ ಭಾವಿತೋ ಹ್ಯಾತ್ಮಾ ಆತ್ಮನಾತ್ಮಾನಮೇವ ಚ ।**
**ಅತ್ಮಾ ಅಹಂ ಚ ಸರ್ವೇಷಾಂ ಪ್ರಾಣಿನಾಂ ಹಿ ವ್ಯವಸ್ಥಿತಃ ॥ ೩೮ ॥**
**ಅಹಂ ಸದಾ ಭಾವಯುಕ್ತ ಆತ್ಮಸಂಸ್ಥೋ ನಿರಂತರಃ ।**
**ಜಂಗಮಾಜಂಗಮಾನಾಂ ಚ ಸತ್ಯಂ ಪ್ರತಿವದಾಮಿ ತೇ ॥ ೩೯ ॥**
**ದ್ವಂದ್ವಾತೀತೋ ನಿರ್ವಿಕಲ್ಪೋ ಹಿ ಸಾಕ್ಷಾ**
**ತ್ಸ್ವಸ್ಥೋ ನಿತ್ಯೋ ನಿತ್ಯಯುಕ್ತೋ ನಿರೀಹಃ ।**
**ಕೂಟಸ್ಥೋ ನೈ ಕಲ್ಪಭೇದಪ್ರವಾದೈ**
**ರ್ಬಹಿಷ್ಕೃತೋ ಬೋಧಬೋಧ್ಯೋ ಹ್ಯನನ್ಯಃ ॥ ೪೦ ॥**

---

ಪುಣ್ಯಕರ್ಮದಿಂದಲೇ ಹುಟ್ಟಿರುತ್ತಾರೆ. ಆದುದರಿಂದ ನೀನು ನಮ್ಮ ಕುಮಾರನ ವಿಷಯದಲ್ಲಿಯಾಗಲಿ, ಆತನ ಸಂದರ್ಶನದಿಂದಾಗುವ ಮಹತ್ಫಲದ ವಿಷಯದಲ್ಲಿಯಾಗಲಿ ಆಶ್ಚರ್ಯಪಡಬಾರದು. ನನ್ನ ಈ ಮಾತನ್ನರಿತುಕೋ.

೩೭. ಕರ್ಮಾನುಷ್ಠಾನವನ್ನು ಬೋಧಿಸುವ ಮಾತು ಎಲ್ಲರಿಗೂ ಫಲದಾಯಕವಾದುದೇ! ಸಮಸ್ತ ತೀರ್ಥಕ್ಷೇತ್ರಗಳ ಸಂದರ್ಶನ, ಯಜ್ಞಗಳು, ವಿವಿಧ ದಾನಗಳು ಇವೇ ಮೊದಲಾದುವುಗಳೆಲ್ಲವನ್ನೂ (ಸಮಸ್ತರೂ) ಮನಶ್ಶುದ್ಧ್ಯರ್ಥವಾಗಿ ಮಾಡಲೇಬೇಕು. ಇದರಲ್ಲಿ ಯಾವ ವಿಚಾರವನ್ನೂ ಮಾಡಬೇಕಾದುದಿಲ್ಲವು.

೩೮. ಎಲೈ ಯಮಧರ್ಮನೇ! ಸಮಸ್ತ ಪ್ರಾಣಿಗಳಲ್ಲಿಯೂ ನಾನು ಆತ್ಮನಾಗಿ ನೆಲಸಿರುತ್ತೇನೆ. ಅಂತಹ ಮನಸ್ಸಿನ ಭಕ್ತಿಭಾವದಿಂದಲೇ ಭಾವಿಸಲ್ಪಡುತ್ತೇನೆ.

೩೯–೪೦. ನಾನು ಯಾವಾಗಲೂ ಭಾವಯುಕ್ತನಾಗಿಯೇ ಇರುವೆನು. ನಿರಂತರವೂ ಚರಾಚರಪ್ರಾಣಿಗಳ ಆತ್ಮದಲ್ಲಿಯೇ ನೆಲಸಿರುವೆನು. ಇದು ಸತ್ಯವೆಂಬುದನ್ನು ಮತ್ತೆ ಮತ್ತೆ ಸಾರಿ ಹೇಳುವೆನು. ನಾನು ದ್ವಂದ್ವಗಳೆಲ್ಲಕ್ಕೂ ಮೀರಿದವನು. ವಿಕಲ್ಪವಿಲ್ಲದವನು. ಸಾಕ್ಷಾತ್ತಾಗಿ ಸ್ವಸ್ಥನಾದವನು. (ಯಾವ ಕಾರ್ಯವನ್ನೂ ಮಾಡದೆ ಸ್ಥಾಣುವಾಗಿರುವವನು.) ಯಾವಾಗಲೂ ಇರುವವನು. ಯಾವಾಗಲೂ ಯೋಗದಲ್ಲಿಯೇ ಇರತಕ್ಕವನು. ಯಾವ ಎಡರುಗಳೂ ಇಲ್ಲದವನು. ಕೂಟಸ್ಥನು. ಕಲ್ಪಭೇದಗಳಿಂದಲೂ, ವೇದ ಶ್ರುತಿಗಳಿಂದಲೂ

ವಿಸ್ಮೃತ್ಯ ಚೈನಂ ಸ್ವಾತ್ಮಾನಂ ಕೇವಲಂ ಬೋಧಲಕ್ಷಣಂ ।
ಸಂಸಾರಿಣೋ ಹಿ ದೃಶ್ಯಂತೇ ಸಮಸ್ತಾ ಜೀವರಾಶಯಃ ॥ ೪೧ ॥
ಅಹಂ ಬ್ರಹ್ಮಾ ಚ ವಿಷ್ಣುಶ್ಚ ತ್ರಯೋಽಮೀ ಗುಣಕಾರಿಣಃ ।
ಸೃಷ್ಟಿಪಾಲನಸಂಹಾರಕಾರಕಾ ನಾನ್ಯಥಾ ಭವೇತ್ ॥ ೪೨ ॥
ಅಹಂಕಾರವೃತೇನೈವ ಕರ್ಮಣಾ ಕಾರಿತಾ ವಯಂ ।
ಯೂಯಂ ಚ ಸರ್ವೇ ವಿಬುಧಾ ಮನುಷ್ಯಾಶ್ಚ ಖಗಾದಯಃ ॥ ೪೩ ॥
ಪಶ್ವಾದಯಃ ಪೃಥಗ್ಭೂತಾಸ್ತಥಾನ್ಯೇ ಬಹವೋ ಹ್ಯಮೀ ।
ಪೃಥಕ್ಪೃಥಕ್ಸಮಾಚೀನಾ ಗುಣವಂತಶ್ಚ ಸಂಸೃತೌ ॥ ೪೪ ॥
ಪತಿತಾ ಮೃಗತೃಷ್ಣಾಯಾಂ ಮಾಯಯಾ ಚ ವಶೀಕೃತಾಃ ।
ವಯಂ ಸರ್ವೇ ಚ ವಿಬುಧಾಃ ಪ್ರಾಜ್ಞಾಃ ಪಂಡಿತಮಾನಿನಃ ॥ ೪೫ ॥
ಪರಸ್ಪರಂ ದೂಷಯಂತೋ ಮಿಥ್ಯಾವಾದರತಾಃ ಖಲಾಃ ॥ ೪೬ ॥

---

ತಿಳಿಯಲಾಗುವವನು. ಜ್ಞಾನದಿಂದಲೇ ತಿಳಿದುಕೊಳ್ಳಲು ಸಾಧ್ಯನಾಗುವವನು. (ಪಾರವಿಲ್ಲದವನು) ಅಂತವೇ ಇಲ್ಲದವನು.

೪೧. ಇಂತಹ ಕೇವಲ ಜ್ಞಾನವೇ ಲಕ್ಷಣವಾಗಿರುವ, (ತಮ್ಮಲ್ಲಿಯೇ ನೆಲಸಿರುವ) ತಮ್ಮ ಆತ್ಮವನ್ನು ಮರೆತು ಸಂಸಾರಿಗಳಾದ ಸಮಸ್ತ ಜೀವರಾಶಿಗಳೂ ಜೀವಿಸುತ್ತಿರುವುದು ಗೋಚರವಾಗಿರುವುದು.

೪೨. ನಾನೇ ಬ್ರಹ್ಮನೂ, ವಿಷ್ಣುವೂ ಆಗಿರುತ್ತೇನೆ. ಅಯ್ಯಾ ಯಮನೇ! ಬ್ರಹ್ಮ ವಿಷ್ಣು ರುದ್ರರೆಂಬ ಈ ತ್ರಿಮೂರ್ತಿಗಳೂ ಸತ್ತ್ವ–ರಜಸ್ಸು–ತಮಸ್ಸು ಎಂಬ ಮೂರು ಗುಣಗಳನ್ನುಂಟುಮಾಡುವವರು. (ಈ ಮೂರು ಗುಣಗಳನ್ನೊಳಗೊಂಡವರು.) ಇವರು ಮೂವರೂ, ಹುಟ್ಟು, ಬಾಳು, ಅಳಿವುಗಳನ್ನು ಉಂಟುಮಾಡುತ್ತಾರೆ. ಇವರು ಬೇರೊಂದು ಬಗೆಯಾಗಿ ಆಗುವುದಿಲ್ಲ.

೪೩. ನಾವೂ, ದೇವತೆಗಳಾದ ನೀವೂ, ಮನುಷ್ಯರೂ, ಪಕ್ಷಿಗಳೇ ಮೊದಲಾದವುಗಳೂ ಅಹಂಕಾರದೊಡಗೂಡಿದ ಕರ್ಮದಿಂದಲೇ ಸೃಷ್ಟಿಸಲ್ಪಟ್ಟಿರುತ್ತೇವೆ.

೪೪. ಈ ಪ್ರಪಂಚದಲ್ಲಿ ಕಾಣುವ ಪಶು ಮೊದಲಾದವುಗಳೂ, ಬೇರೆ ಬೇರೆಯಾದ ಇತರ ಅನೇಕ ಪ್ರಾಣಿಗಳೂ ಸತ್ತ್ವರಜಸ್ತಮೋಗುಣಗಳಿಂದ ಕೂಡಿದವುಗಳಾಗಿರುತ್ತವೆ.

೪೫. (ಇವುಗಳು ಮಾತ್ರವಲ್ಲದೆ) ಮಾಯೆಯಿಂದ ಮೃಗತೃಷ್ಣೆಗೆ (ಬಿಸಿಲ್ಗುದುರೆಗೆ) ಸ್ವಾಧೀನರಾಗಿರುವ ದೇವತೆಗಳಾದ ನಾವೆಲ್ಲರೂ ಮಹಾ ಜ್ಞಾನಿಗಳೆಂದೂ, ನಾವೇ ಪಂಡಿತರೆಂದೂ ತಿಳಿದುಕೊಂಡಿರುತ್ತೇವೆ.

೪೬. ಅದೇ ಮಾಯೆಯಿಂದ ಮೋಹಿತರಾಗಿರುವ ನಾವು ಒಬ್ಬರನ್ನೊಬ್ಬರು ದೂಷಣೆಮಾಡುವವರೂ ದುಷ್ಟರೂ ಆಗಿರುತ್ತೇವೆ.

**ತ್ರೈಗುಣ್ಯಾ ಭವಸಂಪನ್ನಾ ಅತತ್ತ್ವಜ್ಞಾಶ್ಚ ರಾಗಿಣಃ ।**
**ಕಾಮಕ್ರೋಧಭಯದ್ವೇಷಮದಮಾತ್ಸರ್ಯಸಂಯುತಾಃ ॥ ೪೭ ॥**
**ಪರಸ್ಪರಂ ದೂಷಯಂತೋ ಹ್ಯತತ್ವಜ್ಞಾ ಬಹಿರ್ಮುಖಾಃ ।**
**ತಸ್ಮಾದೇವಂ ವಿದಿತ್ವಾಥ ಅಸತ್ಯಂ ಗುಣಭೇದತಃ ॥ ೪೮ ॥**
**ಗುಣಾತೀತೇ ಚ ವಸ್ತ್ವರ್ಥೇ ಪರಮಾರ್ಥೈಕದರ್ಶನಂ ॥ ೪೯ ॥**
**ಯಸ್ಮಿನ್ಭೇದೋ ಹ್ಯಭೇದಂ ಚ ಯಸ್ಮಿನ್ರಾಗೋ ವಿರಾಗತಾಂ ।**
**ಕ್ರೋಧೋ ಹ್ಯಕ್ರೋಧತಾಂ ಯಾತಿ ತದ್ಧಾಮ ಪರಮಂ ಶೃಣು ॥ ೫೦ ॥**
**ನ ತದ್ಭಾಸಯತೇ ಶಬ್ದಃ ಕೃತಕತ್ವಾದ್ಯಥಾ ಘಟಃ ।**
**ಶಬ್ದೋ ಹಿ ಜಾಯತೇ ಧರ್ಮಃ ಪ್ರವೃತ್ತಿಪರಮೋ ಯತಃ ॥ ೫೧ ॥**
**ಪ್ರವೃತ್ತಿಶ್ಚ ನಿವೃತ್ತಿಶ್ಚ ತಥಾ ದ್ವಂದ್ವಾನಿ ಸರ್ವಶಃ ।**
**ವಿಲಯಂ ಯಾಂತಿ ಯತ್ರೈವ ತತ್ಸ್ಥಾನಂ ಶಾಶ್ವತಂ ಮತಂ ॥ ೫೨ ॥**

---

೪೭. ನಾವುಗಳೆಲ್ಲರೂ, ಮೂರು ಗುಣಗಳಿಂದ ಕೂಡಿದವರಾಗಿ, ಪ್ರಪಂಚದಲ್ಲಿ ತೊಡಗಿ, ತತ್ತ್ವವನ್ನರಿಯದವರೂ, ಕಾಮವುಳ್ಳವರೂ, ಕ್ರೋಧ, ಭಯ, ದ್ವೇಷ, ಮದ, ಮಾತ್ಸರ್ಯಗಳಿಂದ ಕೂಡಿದವರೂ ಆಗಿರುವೆವು.

೪೮. ಅಯ್ಯಾ ಯಮನೇ! ಇಷ್ಟುಯಲ್ಲದೆ, ತತ್ತ್ವವೇನೆಂಬುದನ್ನರಿತು ಕೊಳ್ಳದೆ ನಾವೆಲ್ಲರೂ ಕೇವಲ ಬಹಿರ್ಮುಖರಾಗಿರುತ್ತೇವೆ. ಆದಕಾರಣ, ನಾವು ಈ ಸತ್ತ್ವರಜಸ್ತಮೋಗುಣಗಳ ಭೇದದಿಂದ ಅಸತ್ಯವೇನೆಂಬುದನ್ನು ತಿಳಿದು ಕೊಳ್ಳಬೇಕು.

೪೯–೫೦. ತರುವಾಯ, ಮಾನವನು ಗುಣಾತೀತನಾದರೆ ವಾಸ್ತವವಾಗಿ ಪರಮಾರ್ಥವಾದ ದರ್ಶನವೊಂದೇ ಅವನಿಗೆ ಬೇಕಾಗುತ್ತದೆ. ಆ ಪರಬ್ರಹ್ಮ ವಸ್ತುವಿನಲ್ಲಿ ಭೇದವು ಅಭೇದವಾಗಿಯೂ, ರಾಗವು ವಿರಾಗವಾಗಿಯೂ, ಕ್ರೋಧವು ಅಕ್ರೋಧವಾಗಿಯೂ ಆಗುತ್ತದೆ. ಅಂತಹ ಪರಮಪದದ ವಿಚಾರ ವನ್ನು ಹೇಳುವೆನು, ಕೇಳು.

೫೧. ಎಲೈ ಯಮನೇ! ಆ ಪರಮಪದವನ್ನು ಮಡಕೆಯಂತೆ ಕೃತಕ ವಾದುದರಿಂದ ಶಬ್ದವು ಪ್ರಕಾಶಗೊಳಿಸುವುದಿಲ್ಲವು. ಎಲ್ಲಿ ಪ್ರವೃತ್ತಿಪರವಾದ ಧರ್ಮವೋ ಅಲ್ಲಿ ಶಬ್ದವು ಹುಟ್ಟುತ್ತದೆ.

೫೨. ಪ್ರವೃತ್ತಿಯೂ, ನಿವೃತ್ತಿಯೂ, ಸುಖದುಃಖಾದಿ ದ್ವಂದ್ವಗಳೂ ಎಲ್ಲಿ ಅಡಗಿಹೋಗುತ್ತದೆಯೋ ಆ ಸ್ಥಾನವೇ ಶಾಶ್ವತಪದವೆಂದರಿಯಲಾಗಿ ರುವುದು.

ನಿರಂತರಂ ನಿರ್ಗುಣಂ ಜ್ಞಪ್ತಿಮಾತ್ರಂ
ನಿರಂಜನಂ ನಿರ್ವಿಕಾರಂ ನಿರೀಹಂ ।
ಸತ್ತಾಮಾತ್ರಂ ಜ್ಞಾನಗಮ್ಯಂ ಸ್ವಸಿದ್ಧಂ
ಸ್ವಯಂಪ್ರಭಂ ಸುಪ್ರಭಂ ಬೋಧಗಮ್ಯಂ ॥ ೫೩ ॥
ಏತಜ್ಜ್ಞಾನಂ ಜ್ಞಾನವಿದೋ ವದಂತಿ
ಸರ್ವಾತ್ಮಭಾವೇನ ನಿರೀಕ್ಷಯಂತಿ ।
ಸರ್ವಾತೀತಂ ಜ್ಞಾನಗಮ್ಯಂ ವಿದಿತ್ವಾ
ಯೇನ ಸ್ವಸ್ಥಾಃ ಸಮುಬುದ್ಧ್ವಾ ಚರಂತಿ ॥ ೫೪ ॥
ಅತೀತ್ಯ ಸಂಸಾರಮನಾದಿಮೂಲಂ
ಮಾಯಾಮಯಂ ಮಾಯಯಾ ದುರ್ವಿಚಾರ್ಯಂ ।
ಮಾಯಾಂ ತ್ಯಕ್ತ್ವಾ ನಿರ್ಮಮಾ ವೀತರಾಗಾ
ಗಚ್ಛಂತಿ ತೇ ಪ್ರೇತರಾಣ್ನಿರ್ವಿಕಲ್ಪಂ ॥ ೫೫ ॥
ಸಂಸೃತಿಃ ಕಲ್ಪನಾಮೂಲಂ ಕಲ್ಪನಾ ಹ್ಯಮೃತೋಪಮಾ ।
ಯೈಃ ಕಲ್ಪನಾ ಪರಿತ್ಯಕ್ತಾ ತೇ ಯಾಂತಿ ಪರಮಾಂ ಗತಿಂ ॥ ೫೬ ॥

---

೫೩. ಅಂತರವಿಲ್ಲದುದೂ, ಸತ್ತ್ವಾದಿ ಗುಣಗಳಿಲ್ಲದುದೂ, ಸ್ಮರಣೆಯು ಮಾತ್ರ ವಿರತಕ್ಕುದೂ, ಯಾವ ಲೋಪವೂ ಇಲ್ಲದುದೂ, ವಿಕಾರರಹಿತವಾದುದೂ, ನಿರೀಹವೂ, ಸತ್ತಾಮಾತ್ರವೂ, ಜ್ಞಾನದಿಂದ ಮಾತ್ರ ತಿಳಿಯಲಾಗುವಂತಹುದೂ, ಸ್ವತಸ್ಸಿದ್ಧವೂ, ಸ್ವಪ್ರಕಾಶವೂ, ಸುಪ್ರಭವೂ, ಬೋಧಗಮ್ಯವೂ ಆದುದು ಯಾವುದೋ ಅದೇ ಪರಮ ಪದವು.

೫೪. ಇಂತಹ ಬ್ರಹ್ಮಸ್ಥಾನವನ್ನು ಜ್ಞಾನಿಗಳು ತಿಳಿಯುತ್ತಾರೆ. ಅವರು ಆ ಬ್ರಹ್ಮವನ್ನು ಸರ್ವಾತ್ಮಭಾವದಿಂದ (ಅನನ್ಯಭಕ್ತಿಯಿಂದ— ಸರ್ವವ್ಯಾಪಕವಾಗಿರುವುದನ್ನಾಗಿ) ನಿರೀಕ್ಷಿಸುತ್ತಾರೆ. ಎಲ್ಲಕ್ಕೂ ಮೀರಿದುದೂ, ಜ್ಞಾನಗಮ್ಯವಾದುದೂ ಆದ ಆ ಪರಬ್ರಹ್ಮವನ್ನರಿತುಕೊಂಡು ತರುವಾಯ ಅವರು ಸ್ವಸ್ಥರಾಗಿ (ಯಾವ ಈತಿಬಾಧೆಗಳೂ, ರಾಗದ್ವೇಷಗಳೂ ಇಲ್ಲದೆ) ನಡೆಯುತ್ತಾರೆ.

೫೫–೫೬. ಎಲೈ ಪ್ರೇತಪತಿಯಾದ ಯಮನೇ! ಅಂತಹ ಜ್ಞಾನಿಗಳು, ಮಾಯೆಯಿಂದ ಕಷ್ಟಪಟ್ಟು ವಿಚಾರಮಾಡಬೇಕಾದುದೂ, ಮಾಯಾಮಯವೂ, ತುದಿಮೊದಲಲಿಲ್ಲದುದೂ ಆದ ಈ ಸಂಸಾರವನ್ನು ದಾಟಿ, ಮಾಯೆಯನ್ನು ತೊರೆದು, ಮಮಕಾರ (ಅಹಂಭಾವವಿಲ್ಲದೆ)ವಿಲ್ಲದವರೂ, ವೀತರಾಗರೂ ಆಗಿ ವಿಕಲ್ಪವಿಲ್ಲದ (ನಿರ್ವಿಕಲ್ಪವಾದ) ಆ ಬ್ರಹ್ಮನ ಸ್ಥಾನವನ್ನು ಹೊಂದುತ್ತಾರೆ. ಈ ಸಂಸಾರವೆಲ್ಲವೂ ಕಲ್ಪನೆಯಿಂದಲೇ ಹುಟ್ಟಿದುದು. ಆ ಕಲ್ಪನೆಯಾದರೋ

**ಶುಕ್ತ್ಯಾಂ ರಜತಬುದ್ಧಿಶ್ಚ ರಜ್ಜುಬುದ್ಧಿರ್ಯಥೋರಗೇ ।**
**ಮರೀಚೌ ಜಲಬುದ್ಧಿಶ್ಚ ಮಿಥ್ಯಾ ಮಿಥ್ಯೈವ ನಾನ್ಯಥಾ ॥ ೫೭ ॥**
**ಸಿದ್ಧಿಃ ಸ್ವಚ್ಛಂದವರ್ತಿತ್ವಂ ಪಾರತಂತ್ರ್ಯಂ ಹಿ ವೈ ಮೃಷಾ ।**
**ಬದ್ಧೋ ಹಿ ಪರತಂತ್ರಾಖ್ಯೋ ಮುಕ್ತಃ ಸ್ವಾತಂತ್ರ್ಯ ಭಾವನಃ ॥ ೫೮ ॥**
**ಏಕೋ ಹ್ಯಾತ್ಮಾ ವಿದಿತ್ವಾಥ ನಿರ್ಮಮೋ ನಿರವಗ್ರಹಃ ।**
**ಕುತಸ್ತೇಷಾಂ ಬಂಧನಂ ಚ ಯಥಾ ಖೇ ಪುಷ್ಪಮೇವ ಚ ॥ ೫೯ ॥**
**ಶಶವಿಷಾಣಮೇವೈತಜ್ಞಾನಂ ಸಂಸಾರ ಏವಚ ।**
**ಕಿಂ ಕಾರ್ಯಂ ಬಹುನೋಕ್ತೇನ ವಚಸಾ ನಿಷ್ಫಲೇನ ಹಿ ॥ ೬೦ ॥**
**ಮಮತಾಂ ಚ ನಿರಾಕೃತ್ಯ ಪ್ರಾಪ್ತುಕಾಮಾಃ ಪರಂ ಪದಂ ।**
**ಜ್ಞಾನಿನಸ್ತೇ ಹಿ ವಿದ್ವಾಂಸೋ ವೀತರಾಗಾ ಜಿತೇಂದ್ರಿಯಾಃ ॥ ೬೧ ॥**
**ಯೈಸ್ತ್ಯಕ್ತೋ ಮಮತಾಭಾವೋ ಲೋಭಕೋಪೌ ನಿರಾಕೃತೌ ।**
**ತೇ ಯಾಂತಿ ಪರಮಂ ಸ್ಥಾನಂ ಕಾಮಕ್ರೋಧವಿವರ್ಜಿತಾಃ ॥ ೬೨ ॥**

---

ಅಮೃತಕ್ಕೆ ಸಾಟಿಯಾದುದು. ಇಂತಹ ಕಲ್ಪನೆಯನ್ನು ಯಾರು ತೊರೆಯು ತ್ತಾರೆಯೋ ಅವರು ಪರಮಗತಿಯನ್ನು ಹೊಂದುತ್ತಾರೆ.

೫೭. ಮುತ್ತಿನ ಚಿಪ್ಪಿನಲ್ಲಿ ಬೆಳ್ಳಿಯಿರುವುದೆಂಬ ಬುದ್ಧಿಯೂ, ಸರ್ಪದಲ್ಲಿ ಹಗ್ಗವೆಂಬ ಬುದ್ಧಿಯೂ ಬಿಸಿಲ್ಗುದುರೆಯಲ್ಲಿ ನೀರಿನ ಬುದ್ಧಿಯೂ ಮಿಥ್ಯಾಮೂಲಕ ವಾದುದು. ಅದು ಮಿಥ್ಯೆಯಲ್ಲದೆ ಸತ್ಯವಲ್ಲವು.

೫೮–೬೨. ಸ್ವಚ್ಛಂದವಾಗಿ (ತನ್ನಿಷ್ಟಾನುಸಾರ) ನಡೆಯುವುದು ಸಿದ್ಧಿಯು. ಪಾರತಂತ್ರ್ಯವು ಮಿಥ್ಯೆಯು: (ಆತ್ಮನು ಸರ್ವತಂತ್ರ ಸ್ವತಂತ್ರನು, ಅವನು ಪರತಂತ್ರನೆಂದರಿಯುವುದು ಭ್ರಾಂತಿಯು) ಪರತಂತ್ರನಾದವನು (ಸಂಸಾರದಲ್ಲಿ) ಕಟ್ಟುಬಿದ್ದವನು. ಮುಕ್ತನಾದರೋ ತಾನು ಸ್ವತಂತ್ರನೆಂಬ ಭಾವನೆಯಿರ ತಕ್ಕವನು. ಇರುವವನು ಒಬ್ಬನೇ ಆತ್ಮನು (ಪರಬ್ರಹ್ಮನೊಬ್ಬನೇ). ಅವನನ್ನು ತಿಳಿದರೆ ನರನು ನಿರ್ಮಮನೂ, ನಿರವಗ್ರಹನೂ ಆಗುತ್ತಾನೆ. ಅಂತಹವರಿಗೆ ಬಂಧನವೆಲ್ಲಿಂದ ಬಂದಿತು. ಅವರಿಗೆ ಬಂಧನವೆಂಬುದು ಆಕಾಶದಲ್ಲಿನ ಹೂವಿ ನಂತೆಯೇ! ಸಂಸಾರವು ಸತ್ಯವೆಂಬ ತಿಳುವಳಿಕೆಯೆಲ್ಲ ಮೊಲದ ಕೊಂಬಿನಂತೆ ಅಸತ್ಯವಾದುದು. ಹೆಚ್ಚಾಗಿ ಹೇಳಿ ಪ್ರಯೋಜನವೇನು? ಮಾತಿನಿಂದೇನೂ ಪ್ರಯೋಜನವಿಲ್ಲ. ಪರಮಪದವಿಯನ್ನು (ಮೋಕ್ಷವನ್ನು) ಪಡೆಯಬಯಸುವವರು ಮಮಕಾರವನ್ನು ದೂರಮಾಡಬೇಕು. ಅಂತಹವರೇ ಜ್ಞಾನಿಗಳು; ಅವರೇ ವಿದ್ವಾಂಸರು; ವೀತರಾಗರೂ, ಜಿತೇಂದ್ರಿಯರೂ ಅವರೇ. ಯಾರು ಮಮತಾ ಬುದ್ಧಿಯನ್ನೂ ಲೋಭಕೋಪಗಳನ್ನೂ ತೊರೆದಿರುವರೋ ಅವರು ಕಾಮಕ್ರೋಧ ಗಳಿಂದ ಬಿಡುಗಡೆಹೊಂದಿ ಪರಮಪದವಿಯನ್ನು ಪಡೆಯುವರು.

ಯಾವತ್ಕಾಮಶ್ಚ ಲೋಭಶ್ಚ ರಾಗದ್ವೇಷೌ ವ್ಯವಸ್ಥಿತೌ ।
ನಾಪ್ನುವಂತಿ ಚ ತಾಂ ಸಿದ್ಧಿಂ ಶಬ್ದಮಾತ್ರೈಕ ಬೋಧಕಾಃ ॥ ೬೩ ॥

ಯಮ ಉವಾಚ :-

ಶಬ್ದಾಚ್ಛಬ್ದಃ ಪ್ರವರ್ತೇತ ನಿಶ್ಶಬ್ದಂ ಜ್ಞಾನಮೇವಚ ।
ಅನಿತ್ಯತ್ವಂ ಹಿ ಶಬ್ದಸ್ಯ ಕಥಂ ಪ್ರೋಕ್ತಂ ತ್ವಯಾ ಪ್ರಭೋ ॥ ೬೪ ॥
ಅಕ್ಷರಂ ಬ್ರಹ್ಮ ಪರಮಂ ಶಬ್ದೋ ವೈ ಹ್ಯಕ್ಷರಾತ್ಮಕಃ ।
ತಸ್ಮಾಚ್ಛಬ್ದಸ್ತ್ವಯಾ ಪ್ರೋಕ್ತೋ ನಿರೀಕ್ಷಕ ಇತಿ ಶ್ರುತಂ ॥ ೬೫ ॥
ಪ್ರತಿಪಾದ್ಯಂ ಹಿ ಯತ್ಕಿಂಚಿಚ್ಛಬ್ದೇನೈವ ವಿನಾ ಕಥಂ ।
ತತ್ಸರ್ವಂ ಕಥ್ಯತಾಂ ಶಂಭೋ ಕಾರ್ಯಾಕಾರ್ಯವ್ಯವಸ್ಥಿತೌ ॥ ೬೬ ॥

ಶಂಕರ ಉವಾಚ :-

ಶೃಣುಷ್ವಾವಹಿತೋ ಭೂತ್ವಾ ಪರಮಾರ್ಥಯುತಂ ವಚಃ ।
ಯಸ್ಯ ಶ್ರವಣಮಾತ್ರೇಣ ಜ್ಞಾತವ್ಯಂ ನಾವಶಿಷ್ಯತೇ ॥ ೬೭ ॥

---

೬೩. ಎದುವರೆಗೆ ಕಾಮವೂ, ಲೋಭವೂ, ರಾಗದ್ವೇಷಗಳೂ ಇರುತ್ತ ವೆಯೋ ಅದುವರೆಗೆ ಕೇವಲ ಶಬ್ದ (ಮಾತಿನಿಂದ) ಮಾತ್ರದಿಂದ ಬ್ರಹ್ಮವಿಷಯ ವನ್ನೂ, ಮೋಕ್ಷಸ್ವರೂಪವನ್ನೂ ಹೇಳುವವರಾಗಿ (ಬ್ರಹ್ಮನು ಹಾಗಿರುವನು— ಹೀಗಿರುವನು ಎಂದು ಬರಿಮಾತುಗಳಿಂದ ಗಳಹುವವರಾಗಿ) ಸಿದ್ಧಿಯನ್ನೆಂದಿಗೂ ಪಡೆಯುವುದೇ ಇಲ್ಲವು.

೬೪. ಯಮನು ಹೇಳುತ್ತಾನೆ:—ಎಲೈ ಪ್ರಭುವೇ! ಶಬ್ದದಿಂದ ಶಬ್ದವು ಹುಟ್ಟುತ್ತದೆ. ನಿಃಶಬ್ದವೇ (ಮೌನವೇ) ಜ್ಞಾನವು. ಹೀಗಿರುವಾಗ ಶಬ್ದವು ಅಸ್ಥಿರವೆಂದು ನೀನು ಹೇಳಿದುದೆಂತು?

೬೫-೬೬. ಪರಬ್ರಹ್ಮವು ಅಕ್ಷರವಾದುದು (ಅಕ್ಷರವೇ ಪರಬ್ರಹ್ಮವು). ಶಬ್ದವಾದರೋ ಅಕ್ಷರಗಳಿಂದ ತುಂಬಿದುದು. ಆದುದರಿಂದ ನೀನು ಅಪ್ಪಣೆ ಕೊಡಿಸಿದ ಶಬ್ದವು ನಿರೀಕ್ಷಕ (ಎಲ್ಲವನ್ನು ನೋಡುವಂತಹದು) ಎಂದು ಕೇಳ ಲಾಗಿದೆ. ಶಬ್ದವನ್ನು ಬಿಟ್ಟು ಯಾವುದನ್ನು ತಾನೆ ಪ್ರತಿಪಾದಿಸಲಾಗುವುದು? ಆದುದರಿಂದ ಕಾರ್ಯಾಕಾರ್ಯಗಳ ವಿಷಯದಲ್ಲಿ ಹೇಗೆ ನಡೆಯಬೇಕೆಂಬುದೆಲ್ಲ ವನ್ನೂ ತಿಳಿಸುವವನಾಗು.

೬೭. ಶಂಕರನು ಹೇಳುತ್ತಾನೆ:—ಅಯ್ಯಾ ಯಮನೇ! ಸ್ಥಿರಮನಸ್ಸನಾಗಿ ಈಗ ನಾನು ಹೇಳುವುದನ್ನು ಕೇಳು. ಇದು ಪರಮಾರ್ಥವಾದ ಮಾತು. ಇದನ್ನು ಕೇಳಿದ ಮಾತ್ರದಿಂದಲೇ (ಲೋಕದಲ್ಲಿ) ತಿಳಿಯಬೇಕಾದುದಾವುದೂ ಉಳಿಯು ವುದಿಲ್ಲವು (ಸಮಸ್ತವೂ ಇದರಿಂದ ತಿಳಿಯುತ್ತದೆ).

**ಜ್ಞಾನಪ್ರವಾದಿನಃ ಸರ್ವೇ ಋಷಯೋ ವೀತಕಲ್ಮಷಾಃ ।**
**ಜ್ಞಾನಾಭ್ಯಾಸೇನ ವರ್ತಂತೇ ಜ್ಞಾನಂ ಜ್ಞಾನವಿದೋ ವಿದುಃ ॥ ೬೮ ॥**
**ಜ್ಞಾನಂ ಜ್ಞೇಯಂ ಜ್ಞಾನಗಮ್ಯಂ ಜ್ಞಾತ್ವಾ ಚ ಪರಿಗೀಯತೇ ।**
**ಕಥಂ ಕೇನ ಚ ಜ್ಞಾತವ್ಯಂ ಕಿಂ ತದ್ವಕ್ತುಂ ವಿವಕ್ಷಿತಂ ॥ ೬೯ ॥**
**ಏತತ್ಸರ್ವಂ ಸಮಾಸೇನ ಕಥಯಾಮಿ ನಿಬೋಧ ಮೇ !**
**ಏಕೋ ಹ್ಯನೇಕಧಾ ಚೈವ ದೃಶ್ಯತೇ ಭೇದಭಾವನಃ ॥ ೭೦ ॥**
**ಯಥಾ ಭ್ರಮರಿಕಾದೃಷ್ಟ್ಯಾ ಭ್ರಾಮ್ಯತೇ ಚ ಮಹೀ ಯಮ ।**
**ತಥಾತ್ಮಾಭೇದಬುದ್ಧ್ಯಾ ಚ ಪ್ರತಿಭಾತಿ ಹ್ಯನೇಕಧಾ ॥ ೭೧ ॥**
**ತಸ್ಮಾದ್ವಿಮೃಶ್ಯ ತೇನೈವ ಜ್ಞಾತವ್ಯಃ ಶ್ರವಣೇನ ಚ ।**
**ಮಂತವ್ಯಃ ಸಂಪ್ರಯೋಗೇಣ ಮನನೇನ ವಿಶೇಷತಃ ॥ ೭೨ ॥**
**ನಿರ್ಧಾರ್ಯ ಚಾತ್ಮನಾತ್ಮಾನಂ ಸುಖಂ ಬಂಧಾತ್ಪ್ರಮುಚ್ಯತೇ ।**
**ಮಾಯಾಜಾಲಮಿದಂ ಸರ್ವಂ ಜಗದೇತಚ್ಚರಾಚರಂ ॥ ೭೩ ॥**

---

೬೮. ಪಾಪಲೇಪವೇ ಇಲ್ಲದ ಮಹರ್ಷಿಗಳೆಲ್ಲರೂ ಜ್ಞಾನವನ್ನೇ ಬೋಧಿಸು ವವರು. ಅವರು ಯಾವಾಗಲೂ ಜ್ಞಾನವನ್ನೇ ಅಭ್ಯಾಸಮಾಡುತ್ತಿರುತ್ತಾರೆ. ಜ್ಞಾನವನ್ನು ಜ್ಞಾನಿಗಳು ಮಾತ್ರವೇ ಬಲ್ಲರು.

೬೯–೭೦. ಜ್ಞಾನ (ತಿಳಿವು), ಜ್ಞೇಯ (ತಿಳಿಯತಕ್ಕುದು), ತಿಳಿದ ಮೇಲೆ ಹೇಳುವುದೇನು? ಹೇಗೆ ಏತರಿಂದ ಆ ಜ್ಞಾನವನ್ನು ತಿಳಿಯಬೇಕು? ಅದನ್ನು ಹೇಳುವುದೆಂತು? ಈ ಮೊದಲಾದ ವಿಷಯವೆಲ್ಲವನ್ನೂ ಸಂಗ್ರಹವಾಗಿ ಹೇಳುತ್ತೇನೆ; ಕೇಳಿ ತಿಳಿದುಕೊಳ್ಳುವವನಾಗು. ಭೇದಭಾವನೆಯುಳ್ಳ ಆತ್ಮನು ತಾನು ಒಬ್ಬನೇ ಆದರೂ ಅನೇಕ ವಿಧವಾಗಿ ಕಾಣುತ್ತಾನೆ.

೭೧. ಎಲೈ ಯಮನೇ! ದುಂಬಿಯು ಹೇಗೆ ಭೂಮಿಯೆಲ್ಲವನ್ನೂ ಅಲೆಯು ತ್ತದೆಯೋ, ಅಂತೆಯೇ ಈ ಆತ್ಮನೂ ಸಹ ಭೇದಬುದ್ಧಿಯಿಂದ ಅನೇಕ ಪ್ರಕಾರವಾಗಿ ತೋರಿಬರುತ್ತಾನೆ.

೭೨–೭೩. ಆದುದರಿಂದ ಚೆನ್ನಾಗಿ ವಿಮರ್ಶೆಮಾಡಿ ಬುದ್ಧಿಯಿಂದಲೇ ಆತ್ಮನನ್ನು ತಿಳಿಯಬೇಕು. ಹಿರಿಯರಿಂದಲೂ, ಜ್ಞಾನಿಗಳಿಂದಲೂ ಆತ್ಮ ವಿಚಾರವನ್ನು ಕೇಳಿ ಮನನದಿಂದಲೂ ನಿರತಿಶಯವಾದ ಯೋಗದಿಂದಲೂ, ಆತ್ಮನನ್ನು ಆತ್ಮನಿಂದಲೇ ನಿರ್ಧರಿಸಿದುದಾದರೆ ಬಹು ಸುಲಭವಾಗಿ ಈ ಸಂಸಾರ ಬಂಧನದಿಂದ ಪ್ರಾಣಿಯು (ದೇಹಿಯು) ವಿಮುಕ್ತನಾಗುತ್ತಾನೆ. ಎಲೈ ಯಮಧರ್ಮನೇ! ಚರಾಚರಾತ್ಮಕವಾದ ಈ ಪ್ರಪಂಚವೆಲ್ಲವೂ ಮಾಯೆಯ ಬಲೆಯೇ!

ಮಾಯಾಮಯೋಽಯಂ ಸಂಸಾರೋ ಮಮತಾಲಕ್ಷಣೋ ಮಹಾನ್ ।
ಮಮತಾಂ ಚ ಬಹಿಃ ಕೃತ್ವಾ ಸುಖಂ ಬಂಧಾತ್ಪ್ರಮುಚ್ಯತೇ ॥ ೭೪ ॥
ಕೋಽಹಂ ಕಸ್ತ್ವಂ ಕುತಶ್ಚಾನ್ಯೇ ಮಹಾಮಾಯಾವಲಂಬಿನಃ ।
ಅಜಾಗಲಸ್ತನಸ್ಯೇವ ಪ್ರಪಂಚೋಽಯಂ ನಿರರ್ಥಕಃ ॥ ೭೫ ॥
ನಿಷ್ಫಲೋಽಯಂ ನಿರಾಭಾಸೋ ನಿಃಸಾರೋ ಧೂಮಡಂಬರಃ ।
ತಸ್ಮಾತ್ಸರ್ವಪ್ರಯತ್ನೇನ ಆತ್ಮಾನಂ ಸ್ಮರ ವೈ ಯಮ ॥ ೭೬ ॥

ಲೋಮಶ ಉವಾಚ :—

ಏವಂ ಪ್ರಚೋದಿತಸ್ತೇನ ಶಂಭುನಾ ಪ್ರೇತರಾಟ್ಸ್ವಯಂ ।
ಬುದ್ಧೋ ಭೂತ್ವಾ ಯಮಃ ಸಾಕ್ಷಾದಾತ್ಮಭೂತೋಽಭವತ್ತದಾ ॥ ೭೭ ॥
ಕರ್ಮಣಾಂ ಹಿ ಚ ಸರ್ವೇಷಾಂ ಶಾಸ್ತಾ ಕರ್ಮಾನುಸಾರತಃ ।
ಬಭೂವ ಡಂಬರೋ ನೃಣಾಂ ಭೂತಾನಾಂ ಚ ಸಮಾಹಿತಃ ॥ ೭೮ ॥

---

೭೪. ಈ ಸಂಸಾರವೂ ಸಹ ಮಾಯಾಮಯವಾದುದಲ್ಲದೆ ಅಹಂಕಾರವೇ (ಮಮತೆಯೇ) ಲಕ್ಷಣವಾಗಿರುವಂತಹದು. ಜೀವಿಯು ಮಮತೆಯನ್ನು ದೂರಮಾಡಿದರೆ ಸುಖವಾಗಿ ಈ ಸಂಸಾರಬಂಧನದಿಂದ ಬಿಡುಗಡೆ ಹೊಂದುತ್ತಾನೆ.

೭೫. ನಾನಾರು, ನೀನಾರು, ಮಹತ್ತರವಾದ ಮಾಯೆಯನ್ನು ನೆಮ್ಮಿರುವ ಈ ಇತರರೆಲ್ಲಿಯವರು? ಈ ಪ್ರಪಂಚವೆಲ್ಲವೂ ಆಡಿನ ಕೊರಳ ಮೊಲೆಯಂತೆ ನಿಷ್ಪ್ರಯೋಜನವಾದುದು.

೭೬. ಇದು ನಿಷ್ಫಲವಾದುದು ಮಾತ್ರವಲ್ಲದೆ, ಕಳೆಯಿಲ್ಲದುದೂ, ಸಾರವಿಲ್ಲದುದೂ, ಹೊಗೆಯಂತೆ ಹರಡಿರುವುದೂ ಆಗಿರುವುದು. ಆದುದರಿಂದೆಲೈ ಯಮನೇ! ಸರ್ವಪ್ರಯತ್ನದಿಂದಲೂ ನೀನು ಆತ್ಮನನ್ನು ಸ್ಮರಿಸು (ಪರಬ್ರಹ್ಮಾನುಸಂಧಾನದಲ್ಲಿ ತೊಡಗು).

೭೭. ಲೋಮಶನು ಹೇಳುತ್ತಾನೆ:—ಎಲೈ ಶೌನಕಾದಿ ಮುನಿಗಳಿರಾ! ಶಂಭುಶಂಕರನೀರೀತಿ ಬೋಧಿಸಲು, ಪ್ರೇತರಾಜನಾದ ಆ ಯಮನು ಆತ್ಮಜ್ಞಾನಿಯಾದನು. ಅವನು ತನ್ನಲ್ಲಿಯೇ ನೆಲಸಿರುವ ಪರಮಾತ್ಮನಲ್ಲಿಯೇ ಭಾವನೆ (ಭಕ್ತಿ)ಯುಳ್ಳವನಾದನು.

೭೮. ಮಾನವರ ಸುಕೃತ ದುಷ್ಕೃತ ಕರ್ಮಗಳಿಗನುಗುಣವಾಗಿ ಅವರೆಲ್ಲರನ್ನೂ ಶಿಕ್ಷಿಸುವ ಆ ಯಮನು ಪ್ರಶಾಂತವಾದ ಮನಸ್ಸುಳ್ಳವನಾಗಿ ಸಮಸ್ತ ಮಾನವರಿಗೂ, ಭೂತಗಳಿಗೂ ಕೇವಲ ಡಂಬರನಾದನು (ಸ್ವರೂಪಮಾತ್ರದಿಂದ ಭಯಗೊಳಿಸುವವನಾದನು).

**ಋಷಯ ಊಚುಃ:—**

**ಹತ್ವಾತು ತಾರಕಂ ಯುದ್ಧೇ ಕುಮಾರೇಣ ಮಹಾತ್ಮನಾ ।**
**ಅತ ಊರ್ಧ್ವಂ ಕಥ್ಯತಾಂ ಭೋ ಕಿಂ ಕೃತಂ ಮಹದದ್ಭುತಂ ॥ ೭೯ ॥**

**ಸೂತ ಉವಾಚ .—**

**ಹತೇತು ತಾರಕೇ ದೈತ್ಯೇ ಹಿಮವತ್ಪ್ರಮುಖಾದಯಃ ।**
**ಕಾರ್ತಿಕೇಯಂ ಸಮಾಗತ್ಯ ಗೀರ್ಭಿ ರಮ್ಯಾಭಿರೈಡಯನ್ ॥ ೮೦ ॥**

**ಗಿರಯ ಊಚುಃ:—**

**ನಮಃ ಕಲ್ಯಾಣರೂಪಾಯ ನಮಸ್ತೇ ವಿಶ್ವಮಂಗಲ ।**
**ವಿಶ್ವಬಂಧೋ ನಮಸ್ತೇಽಸ್ತು ನಮಸ್ತೇ ವಿಶ್ವಭಾವನ ॥ ೮೧ ॥**
**ವರಿಷ್ಠಾಃ ಶ್ವಪಚಾ ಯೇನ ಕೃತಾ ವೈ ದರ್ಶನಾತ್ತ್ವಯಾ ।**
**ತ್ವಾಂ ನಮಾಮೋ ಜಗದ್ಬಂಧುಂ ತ್ವಾಂ ವಯಂ ಶರಣಾಗತಾಃ ॥ ೮೨ ॥**
**ನಮಸ್ತೇ ಪಾರ್ವತೀಪುತ್ರ ಶಂಕರಾತ್ಮಜ ತೇ ನಮಃ ।**
**ನಮಸ್ತೇ ಕೃತ್ತಿಕಾಸೂನೋ ಅಗ್ನಿಭೂತ ನಮೋಽಸ್ತುತೇ ॥ ೮೩ ॥**

---

೭೯. ಋಷಿಗಳು ಹೇಳುತ್ತಾರೆ:—ಎಲೈ ಲೋಮಶನೇ! ಮಹಾತ್ಮನಾದ ಕುಮಾರಸ್ವಾಮಿಯು ತಾರಕಾಸುರನನ್ನು ರಣಾಂಗಣದಲ್ಲಿ ಕೊಂದಬಳಿಕ ಮತ್ತಾವ ಮಹಾದ್ಭುತಕಾರ್ಯವನ್ನೆಸಗಿದನೆಂಬ ವಿಷಯವನ್ನು ಅಪ್ಪಣೆ ಕೊಡಿಸುವವನಾಗು.

೮೦. ಸೂತನು ಹೇಳುತ್ತಾನೆ:—ಎಲೈ ಮುನಿಗಳಿರಾ! ತಾರಕಾಸುರನು ಕುಮಾರಸ್ವಾಮಿಯಿಂದ ಹತನಾದ ತರುವಾಯು, ಹಿಮವಂತನೇ ಮೊದಲಾದ ಪರ್ವತರಾಜರೆಲ್ಲರೂ, ಆ ಕಾರ್ತಿಕೇಯಸ್ವಾಮಿಯ ಬಳಿಗೈದಿ ಸ್ತೋತ್ರವಾಕ್ಯಗಳಿಂದ ಆತನನ್ನು ಸ್ತುತಿಸಿದರು.

೮೧. ಗಿರಿರಾಜರು ಹೇಳುತ್ತಾರೆ.—"ಎಲೈ ಮಂಗಳಸ್ವರೂಪಿಯಾದ ಕುಮಾರಸ್ವಾಮಿಯೇ! ನಿನಗೆ ನಮಸ್ಕಾರವು. ಎಲೈ ವಿಶ್ವಮಂಗಳನೇ! ಪ್ರಪಂಚಕ್ಕೆಲ್ಲ ಮಂಗಳವನ್ನುಂಟುಮಾಡುವವನೇ! ವಿಶ್ವಕ್ಕೆಲ್ಲ ಬಂಧುವಾಗಿರುವವನೇ, ನಿನಗೆ ನಮಸ್ಕಾರವು.

೮೨. ಓ ವಿಶ್ವಭಾವನನೇ! ನಿನಗೆ ನಮಸ್ಕಾರವು. ಓ ಸ್ವಾಮಿಯೇ! ನಿನ್ನನ್ನು ಸಂಸ್ಪರ್ಶಿಸಿದ ಮಾತ್ರದಿಂದಲೇ ಶ್ವಪಚರನ್ನೂ ಉತ್ತಮರನ್ನಾಗಿಸುವ ನಿನ್ನನ್ನು ನಮಸ್ಕರಿಸುತ್ತೇವೆ. ಪ್ರಭೂ! ಜಗದ್ಬಂಧುವಾದ ನಿನ್ನನ್ನೇ ನಾವೆಲ್ಲರೂ ಶರಣುಹೊಂದಿರುತ್ತೇವೆ.

೮೩. ಪಾರ್ವತೀ ಪುತ್ರನೂ, ಶಂಕರಾತ್ಮಜನೂ ಆದ ನಿನಗೆ ನಮಸ್ಕಾರವು. ಕೃತ್ತಿಕೆಯರ ಮಗನಾಗಿ, ಯಜ್ಞೇಶ್ವರನಿಂದ ಜನಿಸಿರುವ ನಿನಗೆ ನಮಸ್ಕಾರವು.

ನಮೋಽಸ್ತು ತೇ ದೇವವರೈಃ ಸುಪೂಜ್ಯ
ನಮೋಽಸ್ತು ತೇ ಜ್ಞಾನವಿದಾಂ ವರಿಷ್ಠ ।
ನಮೋಽಸ್ತು ತೇ ದೇವವರ ಪ್ರಸೀದ
ಶರಣ್ಯ ಸರ್ವಾರ್ತಿವಿನಾಶದಕ್ಷ ॥ ೮೪ ॥
ಏವಂ ಸ್ತುತೋ ಗಿರಿಭಿಃ ಕಾರ್ತಿಕೇಯೋ ಹ್ಯುಮಾಸುತಃ ।
ತಾನ್ಗಿರೀನ್ಸುಪ್ರಸನ್ನಾತ್ಮಾ ವರಂ ದಾತುಂ ಸಮುತ್ಸುಕಃ ॥ ೮೫ ॥
ಕಾರ್ತಿಕೇಯ ಉವಾಚ :—
ಭೋ ಭೋ ಗಿರಿವರಾ ಯೂಯಂ ಶೃಣುಧ್ವಂ ಮದ್ವಚೋಽಧುನಾ ।
ಕರ್ಮಿಭಿರ್ಜ್ಞಾನಿಭಿಶ್ಚೈವ ಸೇವ್ಯಮಾನಾ ಭವಿಷ್ಯಥ ॥ ೮೬ ॥
ಭವಸ್ತ್ವೇವ ಹಿ ವರ್ತಂತೇ ದೃಷದೋ ಯತ್ರ ಸೇವಿತಾಃ ।
ಪುನಂತು ವಿಶ್ವಂ ವಚನಾನ್ಮಮ ತಾ ನಾತ್ರ ಸಂಶಯಃ ॥ ೮೭ ॥
ಪರ್ವತೀಯಾನಿ ತೀರ್ಥಾನಿ ಭವಿಷ್ಯಂತಿ ನ ಚಾನ್ಯಥಾ ।
ಶಿವಾನಿ ಯಾನಿ ದಿವ್ಯಾನಿ ದಿವ್ಯಾನ್ಯಾಯತನಾನಿಚ ॥ ೮೮ ॥

---

೮೪. ಎಲೈ ಜ್ಞಾನಿಗಳಿಗೆಲ್ಲ ಶ್ರೇಷ್ಠನಾದವನೇ! ದೇವತಾ ಶ್ರೇಷ್ಠರೆಲ್ಲರಿಂದಲೂ ವಿಧಿಪೂರ್ವಕವಾಗಿ ಪೂಜಿಸಲಾದ ನಿನಗೆ ನಮಸ್ಕಾರವು. ಓ ದೇವೋತ್ತಮಾ! ಸಮಸ್ತ ಸಂಕಟಗಳನ್ನೂ ನಿವಾರಣೆಮಾಡುವುದರಲ್ಲಿ ಸಮರ್ಥನಾದ ಓ ಷಣ್ಮುಖಸ್ವಾಮಿಯೇ! ಪ್ರಸನ್ನನಾಗು.''

೮೫. ಎಲೈ ಶೌನಕಾದಿ ಮುನಿಗಳಿರಾ! ಗಿರಿರಾಜರೆಲ್ಲರೂ ಈ ರೀತಿ ಸ್ತುತಿಸಲು, ಉಮಾದೇವಿಯ ಪುತ್ರನಾದ ಆ ಕಾರ್ತಿಕೇಯಸ್ವಾಮಿಯು ಸುಪ್ರಸನ್ನನಾಗಿ ಆ ಗಿರಿರಾಜರೆಲ್ಲರಿಗೂ ವರಗಳನ್ನು ದಯಗೈಯುವವನಾಗಿ ಉತ್ಸಾಹದಿಂದವರನ್ನು ಕುರಿತು ಹೇಳಿದನು.

೮೬. ಕಾರ್ತಿಕೇಯಸ್ವಾಮಿಯು ಹೇಳುತ್ತಾನೆ.—ಎಲೈ ಗಿರಿಶ್ರೇಷ್ಠರೇ! ಈಗ ನಾನು ಹೇಳುವ ಮಾತನ್ನು ಕೇಳಿರಿ. ನೀವೆಲ್ಲರೂ ಇನ್ನುಮುಂದೆ ಸತ್ಕರ್ಮಾನುಷ್ಠಾನಮಾಡುವವರಿಂದಲೂ, ಜ್ಞಾನಿಗಳಿಂದಲೂ ಸೇವಿಸಲ್ಪಡುವವರಾಗುತ್ತೀರಿ.

೮೭. ನಿಮ್ಮಲ್ಲಿಯೇ ಶಿಲಾಮೂರ್ತಿಗಳೆಲ್ಲವೂ ನೆಲಸಿರುತ್ತವೆ. ಆ ದೇವತಾ ಮೂರ್ತಿಗಳೆಲ್ಲವೂ ಭಕ್ತಜನರಿಂದ ಸೇವೆಗೊಂಡವಾಗಿ ನನ್ನ ಮಾತಿನಂತೆ (ವರವಚನದಿಂದ) ಪ್ರಪಂಚವೆಲ್ಲವನ್ನೂ ಪಾವನಗೊಳಿಸುವವುಗಳಾಗಲಿ. ಈ ನನ್ನ ಮಾತಿನಲ್ಲಿ ಸಂಶಯವಿಲ್ಲವು.

೮೮. ಪರ್ವತಗಳಲ್ಲಿರುವ ತೀರ್ಥಗಳೂ, ಶಿವಾಲಯಗಳೂ, ಇತರ ದೇವತಾ ಮೂರ್ತಿಗಳೂ ದೇವಾಲಯಗಳೂ ಅಂತೆಯೇ ಲೋಕಪಾವನಗಳಾಗಲಿ.

**ಅಯನಾನಿ ವಿಚಿತ್ರಾಣಿ ಶೋಭನಾನಿ ಮಹಾಂತಿ ಚ ।**
**ಭವಿಷ್ಯಂತಿ ನ ಸಂದೇಹಃ ಪರ್ವತಾ ವಚನಾನ್ಮಯಾ ॥ ೮೯ ॥**
**ಯೋಽಯಂ ಮಾತಾಮಹೋ ಮೇಽದ್ಯ ಹಿಮವಾನ್ಪರ್ವತೋತ್ತಮಃ ।**
**ತಪಸ್ವಿನಾಂ ಮಹಾಭಾಗಃ ಫಲದೋ ಹಿ ಭವಿಷ್ಯತಿ ॥ ೯೦ ॥**
**ಮೇರುಶ್ಚ ಗಿರಿರಾಜೋಽಯಮಾಶ್ರಯೋ ಹಿ ಭವಿಷ್ಯತಿ ।**
**ಲೋಕಾಲೋಕೋ ಗಿರಿವರ ಉದಯಾದ್ರಿರ್ಮಹಾಯಶಃ ॥ ೯೧ ॥**
**ಲಿಂಗರೂಪೋ ಹಿ ಭಗವಾನ್ಭವಿಷ್ಯತಿ ನ ಚಾನ್ಯಥಾ ।**
**ಶ್ರೀಶೈಲೋ ಹಿ ಮಹೇಂದ್ರಶ್ಚ ತಥಾ ಸಹ್ಯಾಚಲೋ ಗಿರಿಃ ॥ ೯೨ ॥**
**ಮಾಲ್ಯವಾನ್ಮಲಯೋ ವಿಂಧ್ಯಸ್ತಥಾಽಸೌ ಗಂಧಮಾದನಃ ।**
**ಶ್ವೇತಕೂಟಸ್ತ್ರಿಕೂಟೋ ಹಿ ತಥಾ ದುರ್ದರ ಪರ್ವತಃ ॥ ೯೩ ॥**
**ಏತೇ ಚಾನ್ಯೇ ಚ ಬಹವಃ ಪರ್ವತಾ ಲಿಂಗರೂಪಿಣಃ ।**
**ಮಮ ವಾಕ್ಯಾದ್ಭವಿಷ್ಯಂತಿ ಪಾಪಕ್ಷಯಕರಾ ಹ್ಯಮೀ ॥ ೯೪ ॥**
**ಏವಂ ವರಂ ದದೌ ತೇಭ್ಯಃ ಪರ್ವತೇಭ್ಯಶ್ಚ ಶಾಂಕರಿಃ ।**
**ತತೋ ನಂದೀ ಹ್ಯುವಾಚಾಥ ಸರ್ವಾಗಮಪುರಸ್ಕೃತಂ ॥ ೯೫ ॥**

---

೮೯–೯೧. ನನ್ನ ಅನುಗ್ರಹವಚನದಿಂದ ಪರ್ವತಗಳಲ್ಲಿ ಅಯನಗಳು, ವಿಚಿತ್ರಗಳೂ, ಮಂಗಳಕರಗಳೂ ಮಹತ್ತರ (ಮಾಹಾತ್ಮ್ಯವುಳ್ಳವು)ಗಳೂ ಆಗುವುದರಲ್ಲಿ ಸಂದೇಹವಿಲ್ಲವು. ನನ್ನ ಮಾತಾಮಹ (ತಾತ)ನಾದ, ಪರ್ವತ ಶ್ರೇಷ್ಠನಾದ ಹಿಮವಂತನಾದರೋ ತಪಸ್ವಿಗಳೆಲ್ಲರಿಗೂ ಫಲವನ್ನುದಯೆಗೈಯುವ ಪುಣ್ಯಶಾಲಿಯಾಗುತ್ತಾನೆ. ಗಿರಿರಾಜನಾದ ಈ ಮೇರುವೂ, ಲೋಕಾಲೋಕ ಗಿರಿವರವೂ, ಮಹಾ ಕೀರ್ತಿಶಾಲಿಯಾದ ಉದಯಾಚಲವೂ ಅಂತೆಯೇ ತಪಸ್ವಿಗಳಿಗೂ, ಭಕ್ತಜನರಿಗೂ ಆಶ್ರಯಸ್ಥಾನಗಳಾಗುತ್ತಾರೆ.

೯೨–೯೪. ಭಗವಂತನಾದ ಪರಮ ಶಿವನು ಲಿಂಗರೂಪಿಯಾಗಿರುವನಲ್ಲದೆ ಮತ್ತೆಬೇರೆಯಲ್ಲವು. ಆದುದರಿಂದ ಶ್ರೀಶೈಲವೂ, ಮಹೇಂದ್ರವೂ, ಸಹ್ಯಾಚಲವೂ, ಮಾಲ್ಯವಂತ, ಮಲಯ, ವಿಂಧ್ಯ, ಗಂಧಮಾದನ, ಶ್ವೇತಕೂಟ, ತ್ರಿಕೂಟ, ದುರ್ದರ ಮೊದಲಾದ ಪರ್ವತಗಳೂ, ಇನ್ನೂ ಇತರ ಪರ್ವತಗಳೂ ಲಿಂಗರೂಪಿಗಳಾಗುತ್ತಾರೆ. ಇಷ್ಟೆಯಲ್ಲದೆ ಇವರೆಲ್ಲರೂ ನನ್ನ ವರದಿಂದ, ಯಾತ್ರಾದಿಗಳನ್ನು ಮಾಡುವ ಭಕ್ತಜನರ ಪಾಪಗಳನ್ನೆಲ್ಲ ಕಳೆಯುವವರಾಗುತ್ತಾರೆ.

೯೫. ಎಲೈ ಮಹರ್ಷಿಗಳಿರಾ! ಈ ಪ್ರಕಾರವಾಗಿ ಆ ಶಂಕರ ಪುತ್ರನಾದ ಕುಮಾರಸ್ವಾಮಿಯು ಪರ್ವತಗಳಿಗೆಲ್ಲ ವರವನ್ನು ಅನುಗ್ರಹಿಸಿದನು. ಆಗ ಶಿವಕಿಂಕರನಾದ ನಂದಿಕೇಶ್ವರನು ಸಮಸ್ತ ಆಗಮಗಳಿಂದಲೂ ಪುರಸ್ಕೃತವಾದ ಈ ಮಾತನ್ನಾಡಿದನು :

ನಂದ್ಯುವಾಚ :—

ತ್ವಯಾ ಕೃತಾ ಹಿ ಗಿರಯೋ ಲಿಂಗರೂಪಿಣ ಏವ ತೇ ।
ಶಿವಾಲಯಾಃ ಕಥಂ ನಾಥ ಪೂಜ್ಯಾಃ ಸ್ಯುಃ ಸರ್ವದೈವತೈಃ ॥ ೯೬ ॥

ಕುಮಾರ ಉವಾಚ :—

ಲಿಂಗಂ ಶಿವಾಲಯಂ ಜ್ಞೇಯಂ ದೇವದೇವಸ್ಯ ಶೂಲಿನಃ ।
ಸರ್ವೈರ್ನೃಭಿರ್ದೇವತೈಶ್ಚ ಬ್ರಹ್ಮಾದಿಭಿರತಂದ್ರಿತೈಃ ॥ ೯೭ ॥
ನೀಲಂ ಮುಕ್ತಾಪ್ರವಾಲಂ ಚ ವೈಡೂರ್ಯಂ ಚಂದ್ರಮೇವ ಚ ।
ಗೋಮೇದಂ ಪದ್ಮರಾಗಂ ಚ ಮಾರತಂ ಕಾಂಚನಂ ತಥಾ ॥ ೯೮ ॥
ರಾಜತಂ ತಾಮ್ರಮಾರಂ ಚ ತಥಾ ನಾಗಮಯಂ ಪರಂ ।
ರತ್ನಧಾತುಮಯಾನ್ಯೇವ ಲಿಂಗಾನಿ ಕಥಿತಾನಿ ತೇ ॥ ೯೯ ॥
ಪವಿತ್ರಾಣ್ಯೇವ ಪೂಜ್ಯಾನಿ ಸರ್ವಕಾಮಪ್ರದಾನಿ ಚ ।
ಏತೇಷಾಮಪಿ ಸರ್ವೇಷಾಂ ಕಾಶ್ಮೀರಂ ಹಿ ವಿಶಿಷ್ಯತೇ ॥ ೧೦೦ ॥
ಐಹಿಕಾಮುಷ್ಮಿಕಂ ಸರ್ವಂ ಪೂಜಾಕರ್ತುಃ ಪ್ರಯಚ್ಛತಿ ॥ ೧೦೧ ॥

---

೯೬. ನಂದಿಕೇಶ್ವರನು ಹೇಳುತ್ತಾನೆ —ಎಲೈ ಕುಮಾರನಾಥನೇ! ನೀನು ಈ ಪರ್ವತಗಳೆಲ್ಲವನ್ನೂ ಲಿಂಗರೂಪಗಳನ್ನಾಗಿಸಿದೆ. ಇನ್ನು ಸಮಸ್ತ ದೇವತೆಗಳೂ ಶಿವಾಲಯಗಳನ್ನರ್ಚಿಸುವ ಬಗೆ ಹೇಗೆ?

೯೭. ಕುಮಾರಸ್ವಾಮಿಯು ಹೇಳುತ್ತಾನೆ:—ಅಯ್ಯಾ ನಂದಿಕೇಶ್ವರನೇ! ಸಮಸ್ತ ಮಾನವರೂ, ದೇವತೆಗಳೂ, ಈತಿಬಾಧೆಗಳಿಲ್ಲದಿರುವ ಬ್ರಹ್ಮಾದಿ ದೇವತೆಗಳೂ ಸಹ ಲಿಂಗವೇ ದೇವದೇವನಾದ ಆ ಶೂಲಿಯ ಶಿವಾಲಯವೆಂದು ತಿಳಿಯತಕ್ಕದು.

೯೮—೯೯. ನೀಲ, ಮುಕ್ತ (ಮುತ್ತು), ಪ್ರವಾಳ (ಹವಳ), ವೈಡೂರ್ಯ, ಚಂದ್ರ, ಗೋಮೇದಿಕ, ಪದ್ಮರಾಗ, ಮರಕತ, ಕಾಂಚನ, ರಾಜತ, ತಾಮ್ರ, ನಾಗಮಯ, ರತ್ನಧಾತುಮಯ ಮೊದಲಾದ ಲಿಂಗಗಳ ವಿಚಾರವನ್ನು ನಿನಗೆ ಹೇಳಿಯೇ ಇರುತ್ತೇನೆ.

೧೦೦. ಇವುಗಳೆಲ್ಲವೂ ಪವಿತ್ರಗಳು ಮಾತ್ರವಲ್ಲದೆ, ಸಮಸ್ತ ಇಷ್ಟಾರ್ಥಗಳನ್ನೂ ದಯಪಾಲಿಸುವಂತಹವು. ಇವುಗಳಲ್ಲಿಯೂ ಕಾಶ್ಮೀರ ಲಿಂಗವು ಅತಿಶಯವಾದುದು.

೧೦೧. ಈ ಕಾಶ್ಮೀರ ಲಿಂಗವು ಪೂಜೆಮಾಡುವ ಭಕ್ತರಿಗೆ ಐಹಿಕಾಮುಷ್ಮಿಕ ಫಲಗಳೆಲ್ಲವನ್ನೂ ಕೊಡುತ್ತದೆ.

ನಂದ್ಯುವಾಚ :—

ಲಿಂಗಾನಾಮಪಿ ಪೂಜ್ಯಂ ಸ್ಯಾದ್ಬಾಣಲಿಂಗಂ ತ್ವಯಾ ಕಥಂ ।
ಕಥಿತಂ ಚೋತ್ತಮತ್ವೇನ ತತ್ಸರ್ವಂ ವದ ಸುವ್ರತ ॥ ೧೦೨ ॥

ಕುಮಾರ ಉವಾಚ :—

ರೇವಾಯಾಂ ತೋಯಮಧ್ಯೇ ಚ ದೃಶ್ಯಂತೇ ದೃಷದೋ ಹಿ ಯಾಃ ।
ಶಿವಪ್ರಸಾದಾತ್ತಾಸ್ತು ಸ್ಯುರ್ಲಿಂಗರೂಪಾ ನ ಚಾನ್ಯಥಾ ॥ ೧೦೩ ॥
ಶ್ಲಕ್ಷ್ಣಮೂಲಾಶ್ಚ ಕರ್ತವ್ಯಾಃ ಪಿಂಡಿಕೋಪರಿ ಸಂಸ್ಥಿತಾಃ ।
ಪೂಜನೀಯಾಃ ಪ್ರಯತ್ನೇನ ಶಿವದೀಕ್ಷಾಯುತೇನ ಹಿ ॥ ೧೦೪ ॥
ಪಿಂಡೀಯುಕ್ತಂ ಚ ಶಾಸ್ತ್ರೇಣ ವಿಧಿನಾ ಚ ಯಜೇಚ್ಛಿವಂ ।
ವರದೋ ಹಿ ಜಗನ್ನಾಥಃ ಪೂಜಕಸ್ಯ ನ ಚಾನ್ಯಥಾ ॥ ೧೦೫ ॥
ಪಂಚಾಕ್ಷರೀ ಯಸ್ಯ ಮುಖೇ ಸ್ಥಿತಾ ಸದಾ
ಚೇತೋನಿವೃತ್ತಿಃ ಶಿವಚಿಂತನೇ ಚ ।

---

೧೦೨. ನಂದಿಯು ಹೇಳುತ್ತಾನೆ:—"ಎಲೈ ಕಾರ್ತಿಕೇಯಸ್ವಾಮಿಯೇ! ಎಲ್ಲಾ ಶಿವಲಿಂಗಗಳಲ್ಲಿಯೂ ಬಾಣಲಿಂಗವೇ ಪೂಜ್ಯತಮವಾದುದೆಂದು ನೀನು ಹೇಳಿದೆಯಲ್ಲವೆ. ಅದು ಉತ್ತಮವೆಂಬುದು ಹೇಗೆ? ಈ ವಿಷಯವೆಲ್ಲವನ್ನೂ ನಮಗೆ ತಿಳಿಸುವವನಾಗು."

೧೦೩. ಕುಮಾರನು ಹೇಳುತ್ತಾನೆ.—"ಅಯ್ಯಾ ನಂದಿಯೇ! ಶಿವನ ಅನುಗ್ರಹದಿಂದ, ರೇವಾ ನದಿಯ ಜಲದಲ್ಲಿರುವ ಶಿಲೆಗಳೆಲ್ಲವೂ ಲಿಂಗರೂಪ ಗಳಾಗಿಯೇ ಇರುತ್ತವೆಯಲ್ಲದೆ ಬೇರೆಯಲ್ಲವು.

೧೦೪. ಇವುಗಳನ್ನು ತಂದು ಬುಡಗಳನ್ನು ಹದಗೊಳಿಸಿ ಪಾಣಿಪಟ್ಟದ ಮೇಲಿರಿಸಿ, ಶಿವದೀಕ್ಷೆಯನ್ನು ಕೈಕೊಂಡಿರುವವನು ಪ್ರಯತ್ನಪೂರ್ವಕವಾಗಿ ಶಾಸ್ತ್ರೋಕ್ತವಿಧಿಯಿಂದ ಅರ್ಚನೆ ಮಾಡಬೇಕು.

೧೦೫. ಶಿವಲಿಂಗವನ್ನು ಪಾಣಿಪಟ್ಟದೊಡನೆಯೇ ಶಾಸ್ತ್ರೋಕ್ತವಿಧಿಯನ್ನ ನುಸರಿಸಿ ಪೂಜಿಸಬೇಕು. ಜಗನ್ನಾಥನಾದ ಪರಶಿವನು ಈ ರೀತಿ ಪೂಜಿಸಿದರೆ ವರವನ್ನನುಗ್ರಹಿಸುವವನಾಗುತ್ತಾನೆ.

೧೦೬. ಯಾವ ಶಿವಪೂಜಕನ ಮುಖದಲ್ಲಿ ಎಲ್ಲ ಕಾಲಗಳಲ್ಲಿಯೂ ಪಂಚಾಕ್ಷರೀ ಮಂತ್ರಪುರಶ್ಚರಣೆಯಿರುತ್ತದೆಯೋ, ಶಿವಧ್ಯಾನದಲ್ಲಿಯೇ ಯಾವ ಶಿವಪೂಜಕನ ಮನಸ್ಸು ಆವೃತ್ತಿಗೊಳ್ಳುತ್ತಿರುತ್ತದೆಯೋ, ಯಾವನು ಸಮಸ್ತ ಭೂತಗಳಲ್ಲಿಯೂ ಸಮಭಾವನೆಯನ್ನು ಹೊಂದಿರುತ್ತಾನೆಯೋ, ಇತರ ಐಹಿಕ

**ಭೂತೇಷು ಸಾಮ್ಯಂ ಪರಿವಾದಮೂಕತಾ**
**ಷಂಡತ್ವಮೇವಂ ಪರಯೋಷಿತಾಸು ॥ ೧೦೬ ॥**

**ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ ಶಿವಶಾಸ್ತ್ರೇ "ಕಾರ್ತಿಕೇಯಪ್ರೋಕ್ತ ಶಿವಲಿಂಗ ಮಹಾತ್ಮ್ಯ ವರ್ಣನಂ"ನಾಮ್ನೈಕತ್ರಿಂಶೋಽಧ್ಯಾಯಃ**

---

ವಿಚಾರಗಳಲ್ಲಿ ಮೂಕತ್ವವನ್ನಾವನು ಹೊಂದಿರುತ್ತಾನೆಯೋ, ಯಾವನು ಪರಸ್ತ್ರೀಯರಲ್ಲಿ ಷಂಡನಂತಿರುತ್ತಾನೆಯೋ ಅವನಿಗೆ ಪರಮೇಶ್ವರನು ಸುಪ್ರಸನ್ನನಾಗಿ ವರವನ್ನು ದಯಪಾಲಿಸುವವನಾಗುತ್ತಾನೆ.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಕಾರ್ತಿಕೇಯನು ಅಪ್ಪಣೆಕೊಡಿಸಿದ ಲಿವಲಿಂಗ ಮಹಾತ್ಮ್ಯವರ್ಣನ"ವೆಂಬ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

## ದ್ವಾತ್ರಿಂಶೋಽಧ್ಯಾಯಃ

### ಶ್ವೇತರಾಜ ಚರಿತೇ ಶಿವಭಕ್ತಿ ಪ್ರಭಾವೇಣ ಕಾಲದಹನವೃತ್ತಾಂತ ವರ್ಣನಂ

**ಲೋಮಶ ಉವಾಚ :—**

**ಏವಂ ತೇ ಶಿವಧರ್ಮಾಶ್ಚ ಕಥಿತಾಸ್ತೇನ ವೈ ದ್ವಿಜಾಃ ।**
**ಸವಿಶೇಷಾಃ ಪಾಶುಪತಾಃ ಪ್ರಸಾದಾಚ್ಚೈವ ವಿಸ್ತರಾತ್ ॥ ೧ ॥**
**ಅನೇಕಾಗಮಸಂವೀತಾ ಯಥಾ ತತ್ತ್ವಮುದಾಹೃತಾಃ ।**
**ಕಾಪಾಲಿಕಾನಾಂ ಭೇದಾಶ್ಚ ಪ್ರೋಕ್ತಾ ವ್ಯಾಸ ಸಮಾಸತಃ ॥ ೨ ॥**
**ಧರ್ಮಾ ನಾನಾವಿಧಾಃ ಪ್ರೋಕ್ತಾ ನಂದಿನಂ ಪ್ರತಿ ವೈ ತದಾ ॥ ೩ ॥**

**ಋಷಯ ಊಚುಃ :—**

**ಶ್ರುತಂ ಕುಮಾರ ಚರಿತಮವಿಶೇಷಂ ಚ ಸುಮಂಗಲಂ ।**
**ಅಸ್ಮಾಭಿಶ್ಚ ಮಹಾಭಾಗ ಕಿಂಚಿತ್ಪೃಚ್ಛಾಮಹೇ ವಯಂ ॥ ೪ ॥**
**ಶ್ವೇತಸ್ಯ ರಾಜಸಿಂಹಸ್ಯ ಚರಿತಂ ಪರಮಾದ್ಭುತಂ ।**
**ಯೇನ ಸಂತೋಷಿತೋ ರುದ್ರಃ ಶಿವೋ ಭಕ್ತ್ಯಾಽಪ್ರಮೇಯಯಾ ॥ ೫ ॥**

---

### ಕನ್ನಡದ ಅನುವಾದ

#### ಶ್ವೇತರಾಜ ಚರಿತ್ರೆ— ಶಿವಭಕ್ತಿ ಪ್ರಭಾವದಿಂದ ಕಾಲನು ಸುಟ್ಟುಹೋದ ವೃತ್ತಾಂತ ವರ್ಣನವು

೧. ಲೋಮಶನು ಹೇಳುತ್ತಾನೆ:—ಅಯ್ಯಾ ಬ್ರಾಹ್ಮಣರಿರಾ! ಈ ರೀತಿ ವ್ಯಾಸಮಹರ್ಷಿಗಳ ಅನುಗ್ರಹದಿಂದ ನಿಮಗೆ ಈ ಶಿವಧರ್ಮಗಳೆಲ್ಲವನ್ನು ಮಾತ್ರವಲ್ಲದೆ, ವಿಶೇಷ ವಿಷಯಗಳೊಡಗೂಡಿದ ಪಾಶುಪತಧರ್ಮಗಳನ್ನೂ ವಿಸ್ತಾರವಾಗಿ ಹೇಳಿಯಾಯಿತು

೨. ಅನೇಕ ಆಗಮಗಳೊಡಗೂಡಿದ ಕಾಪಾಲಿಕ ಭೇದಗಳನ್ನೂ ಸಹ ಪೂಜ್ಯರಾದ ಆ ವೇದವ್ಯಾಸರ ಪ್ರಸಾದದಿಂದ ಹೇಳಿದೆವು.

೩. ಆ ಸಮಯದಲ್ಲಿ ಕಾರ್ತಿಕೇಯಸ್ವಾಮಿಯು ನಂದಿಕೇಶ್ವರನಿಗೆ ಅನೇಕ ವಿಧವಾದ ಧರ್ಮಗಳೆಲ್ಲವನ್ನೂ ಹೇಳಿದನು.

೪. ಋಷಿಗಳು ಕೇಳುತ್ತಾರೆ:—ಓ ಮಹಾಭಾಗನಾದ ಸೂತಪುರಾಣಿಕನೆ! ನೀನೀಗ ಅಪ್ಪಣೆಕೊಡಿಸಿದ ಕುಮಾರಸ್ವಾಮಿಯ ಚರಿತ್ರೆಯನ್ನು ನಾವೆಲ್ಲರೂ ಸಂಪೂರ್ಣವಾಗಿ ಕೇಳಿದೆವು. ಪ್ರಕೃತದಲ್ಲಿ ನಿನ್ನನ್ನು ಸ್ವಲ್ಪ ಪ್ರಶ್ನಿಸುತ್ತೇವೆ.

೫. ಯಾವನಲ್ಲಿನ ಭಕ್ತಿಯಿಂದ ರುದ್ರನಾದ ಶಿವನು ಸಂತೋಷಗೊಳಿಸಲಾದನೋ ಅಂತಹ ರಾಜಶ್ರೇಷ್ಠನಾದ ಶ್ವೇತನ ಚರಿತ್ರೆಯು ಪರಮಾದ್ಭುತವಾದುದಾಗಿದೆ.

ತೇ ಭಕ್ತಾಸ್ತೇ ಮಹಾತ್ಮಾನೋ ಜ್ಞಾನಿನಸ್ತೇ ಚ ಕರ್ಮಿಣಃ ।
ಯೇಽರ್ಚಯಂತಿ ಮಹಾಶಂಭುಂ ದೇವಂ ಭಕ್ತ್ಯಾ ಸಮಾವೃತಾಃ ॥ ೬ ॥
ತಸ್ಮಾತ್ಪೃಚ್ಛಾಮಹೇ ಸರ್ವೇ ಚರಿತಂ ಶಂಕರಸ್ಯ ಚ ।
ವ್ಯಾಸಪ್ರಸಾದಾತ್ಸರ್ವಂ ಯಜ್ಜಾನಾಸಿ ನ ಚಾಪರಃ ॥ ೭ ॥
ನಿಶಮ್ಯ ವಚನಂ ತೇಷಾಂ ಮುನೀನಾಂ ಲೋಮಶೋಽಬ್ರವೀತ್ ॥ ೮ ॥

ಲೋಮಶ ಉವಾಚ :—

ಆಕರ್ಣ್ಯತಾಂ ಮಹಾಭಾಗಾಶ್ಚರಿತಂ ಪರಮಾದ್ಭುತಂ ।
ತಸ್ಯ ರಾಜ್ಞೋ ಹಿ ಭಜತ ರಾಜಭೋಗಾಂಶ್ಚ ಸರ್ವಶಃ ।
ಮತಿರ್ಧರ್ಮೇ ಸಮುತ್ಪನ್ನಾ ಶ್ವೇತಸ್ಯ ಚ ಮಹಾತ್ಮನಃ ॥ ೯ ॥
ಪೃಥಿವೀಂ ಪಾಲಯಾಮಾಸ ಪ್ರಜಾ ಧರ್ಮೇಣ ಪಾಲಯನ್ ।
ಬ್ರಹ್ಮಣ್ಯಃ ಸತ್ಯವಾಕ್ಛೂರಃ ಶಿವಭಕ್ತೋ ನಿರಂತರಂ ॥ ೧೦ ॥

ರಾಜ್ಯಂ ಶಶಾಸಾಽಥ ಸ ಶಕ್ತಿತೋ ನೃಪೋ
ಭಕ್ತ್ಯಾ ತದಾ ಚೈವ ಸಮರ್ಚಯತ್ಸದಾ ।
ಶಂಭುಂ ಪರೇಶಂ ಪರಮಂ ಪರಾತ್ಪರಂ
ಶಾಂತಂ ಪುರಾಣಂ ಪರಮಾತ್ಮರೂಪಂ ॥ ೧೧ ॥

---

೬. ಯಾರು ಭಕ್ತಿಯೊಡಗೂಡಿ ಸ್ವಾಮಿಯಾದ ಮಹಾಶಂಭುವನ್ನು ಸಂಪೂಜಿಸುತ್ತಾರೆಯೋ ಅವರೇ ಮಹಾತ್ಮರು; ಅವರೇ ಭಕ್ತರು, ಜ್ಞಾನಿಗಳೂ ಸತ್ಕರ್ಮಾನುಷ್ಠಾನತತ್ಪರರೂ ಅವರೇ!

೭–೮. ಆದುದರಿಂದೆಲೈ ಸೂತನೇ! ನಾವೆಲ್ಲರೂ ಈಗ ಆ ಶಂಕರನ ಚರಿತ್ರೆಯನ್ನೇ ನಿನ್ನಿಂದ ಕೇಳಿ ತಿಳಿದುಕೊಳ್ಳಬಯಸುವೆವು. ವ್ಯಾಸಮಹರ್ಷಿಗಳ ಅನುಗ್ರಹದಿಂದ ಸಮಸ್ತವನ್ನೂ ಅರಿತಿರುವ ಜ್ಞಾನಿಯು ನಿನ್ನನ್ನು ಬಿಟ್ಟರೆ ಮತ್ತಾರೂ ಇಲ್ಲವು? ಈ ರೀತಿ ನುಡಿದ ಶೌನಕಾದಿ ಮುನಿಗಳ ನುಡಿಯನ್ನು ಕೇಳಿ ಲೋಮಶ ಮಹರ್ಷಿಯು ಅವರನ್ನು ಕುರಿತು ಈ ರೀತಿ ಹೇಳಿದನು.

೯–೧೧. ಲೋಮಶನು ಹೇಳುತ್ತಾನೆ:—ಎಲೈ ಮಹಾ ಪುಣ್ಯಶಾಲಿಗಳೇ! ಪರಮಾದ್ಭುತಕರವಾದ ಆ ಶ್ವೇತರಾಜನ ಚರಿತ್ರೆಯನ್ನೀಗ ಆಲಿಸಿರಿ. ಸಮಸ್ತ ರಾಜಭೋಗಗಳನ್ನು ಅನುಭವಿಸುತ್ತಲಿದ್ದ ಮಹಾತ್ಮನಾದ ಆ ಶ್ವೇತನಿಗೆ ಧರ್ಮಾನುಷ್ಠಾನದಲ್ಲಿ ಬುದ್ಧಿಯುಂಟಾಯಿತು. ಆತನು ಪ್ರಜೆಗಳನ್ನು ಧರ್ಮದಿಂದ ಸಂರಕ್ಷಣೆ ಮಾಡುತ್ತಲೂ, ಬ್ರಹ್ಮಜ್ಞಾನಿಯೂ, ಯಾವಾಗಲೂ ದಿಟವನ್ನೇ ನುಡಿಯುವವನೂ, ನಿರಂತರವೂ ಪರಮೇಶ್ವರನಲ್ಲಿ ಭಕ್ತಿಯುಳ್ಳವನೂ ಆದನು. ಆತನು ತನ್ನ ಶಕ್ತ್ಯನುಸಾರವಾಗಿ ರಾಜ್ಯವನ್ನಾಳುತ್ತ, ಶಂಭುವೂ

**ಆಯುಸ್ತಸ್ಯ ಪರೀಕ್ಷೀಣಮರ್ಚತಃ ಪರಮೇಶ್ವರಂ ।**
**ಅಥೈತಚ್ಚ ಮಹಾಭಾಗ ಚರಿತಂ ಶ್ರೂಯತಾಂ ಮಮ ॥ ೧೨ ॥**
**ವಾಣೀ ಶಿವಕಥಾಯುಕ್ತಾ ಪರಮಾಶ್ಚರ್ಯಸಂಯುತಾ ।**
**ನವಾಽಽಧಯೋ ಹಿ ತಸ್ಯೈವ ವ್ಯಾಧಯೋ ಹಿ ಮಹೀಪತೇಃ ॥ ೧೩ ॥**
**ತಸ್ಯ ರಾಜ್ಞೋ ನ ಬಾಧಂತೇ ತಥಾ ಚೋಪದ್ರವಾಸ್ತ್ವಿಮಾ ।**
**ನಿರೀತಿಕೋ ಜನೋ ಹ್ಯಾಸೀನ್ನಿರುಪದ್ರವ ಏವ ಚ ॥ ೧೪ ॥**
**ಅಕೃಷ್ಟಪಚ್ಯೌಷಧಯಸ್ತಸ್ಯ ರಾಜ್ಞೋಽಭವನ್ಭುವಿ ।**
**ತಪಸ್ವಿನೋ ಬ್ರಾಹ್ಮಣಾಶ್ಚ ವರ್ಣಾಶ್ರಮಯುತಾ ಜನಾಃ ॥ ೧೫ ॥**
**ನ ಪುತ್ರಮರಣೇ ದುಃಖಂ ನಾಪಮಾನಂ ನ ಮಾರಕಾಃ ।**
**ನ ದಾರಿದ್ರ್ಯಂ ಚ ತೇ ಸರ್ವೇ ಪ್ರಾಪ್ನುವಂತಿ ಕದಾಚನ ॥ ೧೬ ॥**
**ಏವಂ ಬಹುತರಃ ಕಾಲಸ್ತಸ್ಯ ರಾಜ್ಞೋ ಮಹಾತ್ಮನಃ ।**
**ಗತೋ ಹಿ ಸಫಲೋ ವಿಪ್ರಾಃ ಶಿವಪೂಜಾರತಸ್ಯ ವೈ ॥ ೧೭ ॥**

---

ಪರೇಶನೂ, ಪರಮಾತ್ಮನೂ, ಪರಾತ್ಪರನೂ, ಶಾಂತನೂ, ಪುರಾಣಪುರುಷನೂ, ಪರಮಾತ್ಮಸ್ವರೂಪನೂ ಆದ ಶಿವನನ್ನು ಪರಮ ಭಕ್ತಿಯಿಂದ ಪೂಜಿಸಿದನು.

೧೨–೧೩. ಹೀಗೆ ಆ ಸ್ವಾಮಿಯನ್ನು ಪೂಜಿಸುತ್ತಿದ್ದಂತೆಯೇ ಆತನ ಆಯುಸ್ಸು ಮುಗಿಯಿತು. ಎಲೈ ಮುನಿಗಳಿರಾ! ಆಮೇಲಣ ಚರಿತ್ರೆಯನ್ನು ಕೇಳಿರಿ. ಆ ಮಹಾರಾಜನ ವಾಣಿಯು ನಿರಂತರವೂ ಶಿವಕಥಾಪ್ರಸಂಗದಿಂದ ಕೂಡಿದುದಾಗಿ ಪರಮಾಶ್ಚರ್ಯಕರವಾಗಿದ್ದಿತು. ಆತನಿಗೆ ಯಾವ ಬಗೆಯ ಮನೋವ್ಯಾಧಿಗಳೂ, ದೈಹಿಕವಾದ ವ್ಯಾಧಿಗಳೂ ಇರಲಿಲ್ಲವು.

೧೪–೧೫. ಈ ಪ್ರಪಂಚದಲ್ಲಿನ ಯಾವ ಉಪದ್ರವಗಳೂ ಆ ದೊರೆಯ ಪ್ರಜೆಗಳನ್ನು ಬಾಧಿಸುತ್ತಿರಲಿಲ್ಲ. ಆತನ ಪ್ರಜೆಗಳು ಯಾವ ತೊಂದರೆಗಳೂ ಇಲ್ಲದೆ ನಿರುಪದ್ರವವಾಗಿದ್ದರು. ಆತನ ರಾಜ್ಯದಲ್ಲಿ ಬೆಳೆಗಳು ಬೆಳಯಿಸದೆ ತಾವಾಗಿಯೇ ಬಹು ಹುಲುಸಾಗಿ ಬೆಳೆಯುತ್ತಿದ್ದವು. ಬ್ರಾಹ್ಮಣರೆಲ್ಲರೂ ತಪಸ್ವಿಗಳಾಗಿದ್ದರು. ಜನಗಳು ವರ್ಣಾಶ್ರಮಧರ್ಮಗಳನ್ನು ಪಾಲಿಸುತ್ತಲಿದ್ದರು.

೧೬–೧೭. ಇಷ್ಟೆಯಲ್ಲದೆ ಆತನ ರಾಜ್ಯದಲ್ಲಿ ಯಾವ ಪ್ರಜೆಯೂ ಪುತ್ರಮರಣದಿಂದುಂಟಾದ ದುಃಖವನ್ನಾಗಲಿ, ಕೆಟ್ಟ ಕೆಲಸಗಳನ್ನು ಮಾಡಿದುದರಿಂದುಂಟಾದ ಅಪಮಾನವನ್ನಾಗಲಿ ಅನುಭವಿಸುತ್ತಿರಲಿಲ್ಲವು. ಇಷ್ಟೆಯಲ್ಲದೆ ಯಾರೊಬ್ಬರೂ ಇತರರನ್ನು ಕೊಲೆಮಾಡದೆ ಧರ್ಮದಲ್ಲಿಯೇ ಮನಸ್ಸುಳ್ಳವರಾಗಿದ್ದರು. ಯಾರೂ ಎಂದಿಗೂ ದಾರಿದ್ರ್ಯವನ್ನು ಹೊಂದುತ್ತಿರಲಿಲ್ಲ. ಅಯ್ಯಾ ವಿಪ್ರರೇ! ಹೀಗೆ ರಾಜ್ಯಭಾರ ಮಾಡುತ್ತಿದ್ದ ಮಹಾತ್ಮನೂ, ಶಿವಪೂಜಾಸಕ್ತನೂ ಆದ ಆ ಶ್ವೇತಭೂಪಾಲನಿಗೆ ಬಹು ಸಾರ್ಥಕವಾಗಿ ಅನೇಕ ವರ್ಷಗಳು ಕಳೆದವು.

ಏಕದಾ ಪೂಜಮಾನಂ ತಂ ಶಂಕರಂ ಪರಮಾರ್ಥದಂ ।
ಯಮೋ ಹಿ ಪ್ರೇಷಯಾಮಾಸ ಯಮದೂತಾನ್ನೃಪಂ ಪ್ರತಿ ॥ ೧೮ ॥
ವಚನಾಚ್ಚಿತ್ರಗುಪ್ತಸ್ಯ ಶ್ವೇತ ಆನೀಯತಾಮಿತಿ ।
ತಥೇತಿ ಮತ್ವಾ ತೇ ದೂತಾಃ ಆಗತಾಃ ಶಿವಮಂದಿರಂ ॥ ೧೯ ॥
ರಾಜಾನಂ ನೇತುಕಾಮಾಸ್ತೇ ಪಾಶಹಸ್ತಾ ಮಹಾಭಯಾಃ ।
ಯಾವತ್ಸಮಾಗತಾ ಯಾಮ್ಯಾ ರಾಜಾನಂ ದದೃಶುಸ್ತ್ವರಾತ್ ॥ ೨೦ ॥
ನ ಚಕ್ರಿರೇ ತದಾ ದೂತಾಃ ಆಜ್ಞಾಂ ಧರ್ಮಸ್ಯ ಚೈವಹಿ ।
ಜ್ಞಾತ್ವಾ ಸರ್ವಂ ಯಮಶ್ಚೈವ ಆಗತಃ ಸ್ವಯಮೇವ ಹಿ ॥ ೨೧ ॥
ಉದ್ಧೃತ್ಯ ದಂಡಂ ಸಹಸಾ ನೇತುಕಾಮಸ್ತದಾ ನೃಪಂ ।
ದದರ್ಶ ಚ ಮಹಾಬಾಹುಃ ಶಿವಧ್ಯಾನಪರಾಯಣಂ ॥ ೨೨ ॥
ಶಿವಭಕ್ತಿಯುತಂ ಶಾಂತಂ ಕೇವಲಂ ಜ್ಞಾನಸಂಯುತಂ ।
ಯಮೋಽಪಿ ದೃಷ್ಟ್ವಾ ರಾಜಾನಂ ಪರಂ ಕ್ಷೋಭಮುಪಾಗಮತ್ ॥೨೩॥
ಚಿತ್ರಸ್ಥೋ ಹ್ಯಭವತ್ಸದ್ಯಃ ಪ್ರೇತರಾಜೋಽತಿವಿಹ್ವಲಃ ।
ಕಾಲರೂಪಶ್ಚ ಯೋ ನಿತ್ಯಂ ಪ್ರಜಾನಾಂ ಕ್ಷಯಕಾರಕಃ ॥ ೨೪ ॥

---

೧೮–೧೯. ಒಂದಾನೊಂದು ದಿವಸ ಆತನು ಮೋಕ್ಷೈಶ್ವರ್ಯವನ್ನು ದಯಪಾಲಿಸುವ ಶಂಕರನನ್ನು ಪೂಜಿಸುತ್ತಿರುವಾಗ, ಯಮಧರ್ಮರಾಜನು ತನ್ನ ದೂತರನ್ನಲ್ಲಿಗೆ ಕಳಿಸಿದನು. ಚಿತ್ರಗುಪ್ತನು "ಶ್ವೇತರಾಜನನ್ನು ಕರೆದು ತನ್ನಿರಿ?" ಎಂದು ಅಪ್ಪಣೆಮಾಡಲು ಆ ದೂತರು ಅಂತೆಯೇ ಆಗಲೆಂದು ಆ ದೊರೆಯು ಪೂಜೆ ಮಾಡುತ್ತಿದ್ದ ಶಿವಾಲಯಕ್ಕೈತಂದರು.

೨೦–೨೧. ಪಾಶಹಸ್ತರೂ, ಮಹಾಭಯಂಕರರೂ ಆದ ಆ ಯಮದೂತರು ಆ ಶ್ವೇತಭೂಪಾಲನನ್ನು ಬಹಳ ತ್ವರೆಯಿಂದ ಕರೆದೊಯ್ಯಬಯಸಿ ಅಲ್ಲಿಗೆ ಬಂದು ಆತನನ್ನು ಕಂಡರು. ಆದರೆ ಆ ಶ್ವೇತನು ಶಿವಪೂಜೆಯಲ್ಲಿ ತೊಡಗಿದ್ದುದರಿಂದ ಅವರು ತಮ್ಮ ಪ್ರಭುವಾದ ಯಮಧರ್ಮನ ಅಪ್ಪಣೆಯನ್ನು ನೆರವೇರಿಸಲು ಶಕ್ತರಾಗಲಿಲ್ಲವು. ಇತ್ತ ಯಮನಾದರೋ ಈ ಎಲ್ಲ ಸಮಾಚಾರಗಳನ್ನೂ ಜ್ಞಾನದೃಷ್ಟಿಯಿಂದರಿತು ತಾನೇ ಅಲ್ಲಿಗೆ ಬಿಜಮಾಡಿದನು.

೨೨–೨೪. ಯಮದಂಡವನ್ನು ಎತ್ತಿಹಿಡಿದು ಬಹು ರಭಸದಿಂದ ಬಂದು ಆ ತಿರೆಯಾಣ್ಮನನ್ನು ತನ್ನ ಲೋಕಕ್ಕೆ ಸೆಳೆದೊಯ್ಯಬಯಸಿದ ಆ ಯಮನು, ಆ ಮಹಾರಾಜನು ಶಿವಧ್ಯಾನದಲ್ಲಿ ತೊಡಗಿದ್ದುದನ್ನು ಕಂಡನು. ಶಿವಭಕ್ತಿಸಂಪನ್ನನಾಗಿ, ಶಾಂತನಾಗಿ, ಕೇವಲ ಜ್ಞಾನಸಮನ್ವಿತನಾಗಿ ವಿರಾಜಿಸುತ್ತಿದ್ದ ಆ ರಾಜನನ್ನು ಕಂಡು ಸಮಸ್ತ ಜೀವರಾಶಿಗಳನ್ನೂ ಸೆಳೆದೊಯ್ಯುವವನಾದ ಯಮನು ಬಹಳವಾಗಿ ತಳಮಳಿಸಿಹೋದನು. ಕಾಲಸ್ವರೂಪನಾಗಿ ನಿರಂತರವೂ

ಆಗತಸ್ತತ್ಕ್ಷಣಾದೇವ ನೃಪಂ ಪ್ರತಿ ರುಷಾನ್ವಿತಃ ।
ಖಡ್ಗೇನ ಸಿತಧಾರೇಣ ಚರ್ಮಣಾ ಪರಮೇಣ ಹಿ ॥ ೨೫ ॥
ತಾವತ್ತಂ ದದೃಶೇ ಸೋಽಪಿ ಸ್ಥಿತಂ ದ್ವಾರಿ ಭಯಾವೃತಂ ।
ಉವಾಚ ಕಾಲೋ ಹಿ ತದಾ ಯಮಂ ವೈವಸ್ವತಂ ಪ್ರತಿ ॥ ೨೬ ॥
ಕಸ್ಮಾತ್ತ್ವಯಾ ಧರ್ಮರಾಜ ನೋ ನೀತೋಽಯಂ ನೃಪೋ ಮಹಾನ್ ।
ಯಮದೂತಸಹಾಯಶ್ಚ ಭೀತವತ್ಪ್ರತಿಭಾಸಿ ಮೇ ॥ ೨೭ ॥
ಕಾಲಾತ್ಯಯೋ ನ ಕರ್ತವ್ಯೋ ವಚನಾನ್ಮಮ ಸುವ್ರತ ।
ಕಾಲೇನೋಕ್ತಸ್ತದಾ ಧರ್ಮ ಉವಾಚ ಪ್ರಸ್ತುತಂ ವಚಃ ॥ ೨೮ ॥
ತವಾಜ್ಞಾಂ ಚ ಕರಿಷ್ಯಾಮಿ ನಾತ್ರ ಕಾರ್ಯಾ ವಿಚಾರಣಾ ।
ಅಸೌ ದುರತ್ಯಯೋಽಸ್ಮಾಕಂ ಶಿವಭಕ್ತೋ ನಿರಂತರಂ ॥ ೨೯ ॥
ಚಿತ್ರಸ್ಥಾ ಇವ ತಿಷ್ಠಾಮ ಭಯಾದ್ದೇವಸ್ಯ ಶೂಲಿನಃ ।
ಯಮಸ್ಯ ವಚನಂ ಶ್ರುತ್ವಾ ಕಾಲಃ ಕ್ರೋಧಸಮನ್ವಿತಃ ।
ರಾಜಾನಂ ಹಂತುಮಾರೇಭೇ ತ್ವರಿತಃ ಖಡ್ಗಮಾದದೇ ॥ ೩೦ ॥

---

ಪ್ರಜೆಗಳಿಗೆ ಮೃತ್ಯುವನ್ನುಂಟುಮಾಡುತ್ತಿರುವ ಆ ಪ್ರೇತರಾಜನು ಈ ರೀತಿ ಬೆಚ್ಚಿ ಚಿತ್ರದಂತೆ ಸ್ತಬ್ಧನಾಗಿಹೋದನು.

೨೫. ತರುವಾಯ ಆತನು ಒಡನೆಯೇ ರೋಷಗೊಂಡು ಅತ್ಯುತ್ತಮವೂ ಚರ್ಮದ ಒರೆಯುಳ್ಳದೂ, ಬಹಳ ಮೊನಚಾಗಿರುವದೂ ಆದ ಖಡ್ಗವನ್ನು ಹಿಡಿದು ಆ ದೊರೆಯ ಸಮೀಪಕ್ಕೆ ಬಂದನು.

೨೬-೩೦. ಅಷ್ಟರಲ್ಲಿಯೇ ಕಾಲನು ಬಾಗಿಲಿನಲ್ಲಿ ನಿಂತಿದ್ದ ಮಹಾ ಭಯಂಕರನೂ ಸೂರ್ಯಪುತ್ರನೂ ಆದ ಆ ಯಮನನ್ನು ಕಂಡು, ಅಯ್ಯಾ ಯಮಧರ್ಮರಾಜನೇ ! ಈ ಭೂಪಾಲನನ್ನು ಕರೆದೊಯ್ಯಲಿಲ್ಲವೇಕೆ ? ಪ್ರಕೃತದಲ್ಲಿ ನೀನು ಯಮದೂತರ ಸಹಾಯವನ್ನು ಪಡೆದಿದ್ದರೂ ಹೆದರಿದವನಂತೆ ತೋರುತ್ತಿರುವೆ. ನೀನೀಗ ನನ್ನ ಮಾತಿನಂತೆ ಕಾಲವಿಳಂಬವನ್ನು ಮಾಡಕೂಡದೆಂದು ಹೇಳಿದನು. ಕಾಲನೀರೀತಿ ನುಡಿದುದನ್ನು ಕೇಳಿ ಆ ಧರ್ಮರಾಜನು ಸಮಯಕ್ಕೆ ತಕ್ಕಂತೆ ಹೀಗೆಂದನು. "ಅಯ್ಯಾ ಕಾಲನೇ ! ನಾನು ನಿನ್ನ ಅಪ್ಪಣೆಯನ್ನು ನೆರವೇರಿಸುತ್ತೇನೆಂಬುದರಲ್ಲಿ ಸಂದೇಹವೇ ಇಲ್ಲವು; ಆದರೆ ಈ ಶ್ವೇತಭೂಪಾಲನು ಯಾವಾಗಲೂ ಶಿವಭಕ್ತಿಸಂಪನ್ನನಾಗಿರುವುದರಿಂದ ನಮಗೆ ದುರತ್ಯಯನಾಗಿರುತ್ತಾನೆ. ನಾವು ಸ್ವಾಮಿಯಾದ ಪರಶಿವನಿಗೆ ಭಯಪಟ್ಟು ಈ ರೀತಿ ಚಿತ್ರಾರ್ಪಿತವಾದ ಪ್ರತಿಮೆಗಳಂತಾಗಿರುತ್ತೇವೆ." ಯಮನಾಡಿದ ಈ ಮಾತನ್ನು ಕೇಳಿ ಕಾಲನು ಬಹಳವಾಗಿ ಕನಲಿ ಆ ಶ್ವೇತರಾಜನನ್ನು ಕೊಲ್ಲಲು ಯತ್ನಿಸಿ ಬಹು ಬೇಗನೆ ಕತ್ತಿಯನ್ನು ಕೈಗೆ ತೆಗೆದುಕೊಂಡನು.

**ತ್ರಿಗುಣಾಷ್ಟಾರ್ಕ ಸಂಕಾಶಂ ಪ್ರವಿವೇಶ ಶಿವಾಲಯಂ ।**
**ಯಾವತ್ಕೋಪೇನ ಮಹತಾ ತಾವದ್ದೃಷ್ಟಃ ಪಿನಾಕಿನಾ ।**
**ಸ್ವಭಕ್ತಂ ಹಂತುಕಾಮೋಽಸೌ ಶ್ವೇತರಾಜಾನಮುತ್ತಮಂ ॥ ೩೧ ॥**

**ಧ್ಯಾನಸ್ಥಿತಂ ಚಾತ್ಮನಿ ತಂ ವಿಶುದ್ಧ**
**ಜ್ಞಾನಪ್ರದೀಪೇನ ವಿಶುದ್ಧ ಚಿತ್ತಂ ।**
**ಆತ್ಮಾನಮಾತ್ಮಾತ್ಮತಯಾ ನಿರಂತರಂ**
**ಸ್ವಯಂಪ್ರಕಾಶಂ ಪರಮಂ ಪುರಸ್ತಾತ್ ॥ ೩೨ ॥**

**ಏವಂ ವಿಧಂ ತಂ ಪ್ರಸಮೀಕ್ಷ್ಯ ಕಾಲಂ**
**ಸಂಚಿಂತ್ಯಮಾನಂ ಮನಸಾಽಚಲೇನ ।**
**ಶೈವಂ ಪದಂ ಯತ್ಪರಮಾರ್ಥರೂಪಂ**
**ಕೈವಲ್ಯ ಸಾಯುಜ್ಯಕರಂ ಸ್ವರೂಪತಃ ॥ ೩೩ ॥**

**ಸದಾಶಿವೇನ ದೃಷ್ಟೋಽಸೌ ಕಾಲಃ ಕಾಲಾಂತಕೇನ ಚ ।**
**ಉಚ್ಛೃಂಖಲಃ ಖಲೋ ದರ್ಪಾದ್ವಿಶಮಾನೋ ನಿಜಾಂತಿಕೇ ॥ ೩೪ ॥**
**ನಂದಿಕೇಶ್ವರಮಧ್ಯಸ್ಥೋ ಯಾವದ್ದೃಷ್ಟೋ ನಿಜಾಂತಿಕೇ ।**
**ಶಿವೇನ ಜಗದೀಶೇನ ಭಕ್ತವತ್ಸಲ ಬಂಧುನಾ ॥ ೩೫ ॥**

---

೩೧–೩೨. ಮಹತ್ತರವಾದ ಕೋಪದಿಂದೊಡಗೂಡಿದ ಆ ಕಾಲನು ಎಂಟುಮಂದಿ ಸೂರ್ಯರಿಗಿಂತಲೂ ಮೂರರಷ್ಟು ಕಾಂತಿಯನ್ನೊಳಗೊಂಡು ಬೆಳಗುತ್ತಿದ್ದ ಶಿವಾಲಯವನ್ನು ಪ್ರವೇಶಿಸುವವರೊಳಗಾಗಿಯೇ ಪಿನಾಕಪಾಣಿಯಾದ ಪರಮೇಶ್ವರನು ತನ್ನ ಭಕ್ತಶ್ರೇಷ್ಠನಾದ ಶ್ವೇತರಾಜನನ್ನು ಕೊಲ್ಲ ಬಯಸಿರುವ ಅವನನ್ನು ಕಂಡನು. ಆ ಮಹಾರಾಜನಾದರೋ ಧ್ಯಾನದಲ್ಲಿ ತೊಡಗಿ ತನ್ನಲ್ಲಿಯೇ ಬೆಳಗುತ್ತಿರುವ ಬಹು ಸುದ್ಧವಾದ ಜ್ಞಾನದೀಪದೊಡಗೂಡಿ ಪರಿಶುದ್ಧವಾದ ಚಿತ್ತವುಳ್ಳವನಾಗಿ, ಸ್ವಯಂಪ್ರಕಾಶನೂ, ಸರ್ವೋತ್ತಮನೂ, ತನ್ನ ಹೃದಯದಲ್ಲಿಯೇ ನೆಲಸಿರುವ ಪರಮಾತ್ಮನಲ್ಲಿಯೇ ಒಂದಾಗಿ ಆ ಪರಶಿವ ಲಿಂಗದ ಮುಂಗಡೆ ಕುಳಿತಿದ್ದನು.

೩೩. ತರುವಾಯ ಆ ಕಾಲನು ಈ ರೀತಿ ನಿಶ್ಚಲವಾದ ಮನಸ್ಸಿನಿಂದ ಮುಕ್ತಿಸ್ವರೂಪವೂ ಕೈವಲ್ಯಸಾಯುಜ್ಯಗಳನ್ನು ತನ್ನ ಸ್ವರೂಪದಿಂದಲೇ ಉಂಟು ಮಾಡುವಂತಹುದೂ ಆದ ಶೈವಪದವನ್ನು ಧ್ಯಾನಿಸುತ್ತಿರುವ ಆ ಶ್ವೇತರಾಜನನ್ನು ಕಂಡನು.

೩೪–೩೫. ಹೀಗೆ ಸ್ವೇಚ್ಛಾಚಾರಿಯೂ ದುಷ್ಟನೂ ಆಗಿ ತನ್ನ ಬಳಿಗೆ ಬಹು ದರ್ಪದಿಂದ ಬರುತ್ತಿರುವ ಆ ಕಾಲನನ್ನು ಕಾಲಾಂತಕನಾದ ಸದಾಶಿವನು ಕಂಡನು. ಬಳಿಕಲಾ ಕಾಲನು ನಂದಿಕೇಶ್ವರನಿಗೂ, ತನಗೂ ನಡುವೆ ಬಂದಾಗ

ನಿರೀಕ್ಷಿತಸ್ತೃತೀಯೇನ ಚಕ್ಷುಷಾ ಪರಮೇಷ್ಠಿನಾ ।
ಸ್ವಭಕ್ತಂ ರಕ್ಷಮಾಣೇನ ಭಸ್ಮಸಾದಭವತ್ಕ್ಷಣಾತ್ ॥ ೩೬ ॥
ದದಾಹ ತಂ ಕಾಲಮನೇಕವರ್ಣಂ
ವ್ಯಾತ್ತಾನನಂ ಭೀಮಬಹೂಗ್ರರೂಪಂ ।
ಜ್ವಾಲಾವಲೀಭಿಃ ಪರಿದಹ್ಯಮಾನ
ಮತಿ ಪ್ರಚಂಡಂ ಭುವನೈಕಭಕ್ಷಣಂ ॥ ೩೭ ॥
ದದರ್ಶಿರೇ ದೇವಗಣಾಃ ಸಮೇತಾಃ
ಸಯಕ್ಷಗಂಧರ್ವಪಿಶಾಚಗುಹ್ಯಕಾಃ ।
ಸಿದ್ಧಾಪ್ಸರಃ ಸರ್ವ ಖಗಾಶ್ಚ ಪನ್ನಗಾಃ
ಪತತ್ರಿಣೋ ಲೋಕಪಾಲಾಸ್ತಥೈವ ॥ ೩೮ ॥
ಜ್ವಾಲಾಮಾಲಾವೃತಂ ಕಾಲಮೀಶ್ವರಸ್ಯಾಗ್ರತಃ ಸ್ಥಿತಂ ।
ಲಬ್ಧಸಂಜ್ಞಸ್ತದಾ ರಾಜಾ ಕಾಲಂ ಸ್ವಂ ಹಂತುಮಾಗತಂ ॥ ೩೯ ॥
ಪುನಃ ಪುನರ್ದದರ್ಶಾಥ ದಹ್ಯಮಾನಂ ಕೃಶಾನುನಾ ।
ಪ್ರಾರ್ಥಯಾಮಾಸ ಸನ್ಯಗ್ರೋ ರುದ್ರಂ ಕಾಲಾಗ್ನಿಸನ್ನಿಭಂ ॥ ೪೦ ॥

---

ಭಕ್ತವತ್ಸಲನೂ, ಜಗದೇಕಬಂಧುವೂ, ಜಗದೀಶ್ವರನೂ ಆದ ಪರಮೇಶ್ವರನು ಒಡನೆಯೇ ತನ್ನ ಭಕ್ತನಾದ ಶ್ವೇತರಾಜನನ್ನು ಸಂರಕ್ಷಿಸುವವನಾಗಿ ಆ ಕಾಲನನ್ನು ತನ್ನ ಮೂರನೆಯ ಕಣ್ಣಿನಿಂದ ನಿರೀಕ್ಷಿಸಿದನು. ಆ ಕ್ಷಣದಲ್ಲಿಯೇ ಕಾಲನು ಸುಟ್ಟು ಬೂದಿಯಾಗಿಹೋದನು.

೩೭–೪೦. ಅಯ್ಯಾ ವಿಪ್ರರಿರಾ! ಆ ಮಹಾದೇವನು ಈ ಪ್ರಕಾರವಾಗಿ ಅನೇಕ ವರ್ಣಗಳುಳ್ಳವನಾಗಿ ಅಗಲವಾದ ಬಾಯನ್ನೊಳಗೊಂಡು ಬಹು ಭಯಂಕರಸ್ವರೂಪನೂ ಆದ ಆ ಕಾಲನನ್ನು ದಹಿಸಿದನು. ಇಂತು ಜ್ವಾಲೆಗಳ ಮಾಲೆಗಳಿಂದ ಸುಡಲ್ಪಡುತ್ತಿರುವ, ಮಹಾ ಪ್ರಚಂಡನೂ ಲೋಕ ಲೋಕಗಳನ್ನೇ ಭಕ್ಷಿಸುವವನೂ ಆದ ಆ ಕಾಲನನ್ನು, ದೇವಗಣಗಳು ಯಕ್ಷ ಗಂಧರ್ವ ಪಿಶಾಚ ಗುಹ್ಯಕರೊಡಗೂಡಿದವರಾಗಿ ಕಂಡರು. ಅಂತೆಯೇ ಸಿದ್ಧರೂ ಅಪ್ಸರರೂ ಸಮಸ್ತ ಪಕ್ಷಿಗಣಗಳೂ ಪನ್ನಗರೂ ಲೋಕಪಾಲಕರೂ ನೋಡಿದರು. ಆಗಲಾ ಕಾಲನು ಈಶ್ವರನ ಸಮೀಪದಲ್ಲಿ ಜ್ವಾಲೆಗಳ ಮಾಲೆಗಳಿಂದ ಆವೃತನಾಗಿದ್ದನು. ಆ ಸಮಯದಲ್ಲಿ ಶ್ವೇತರಾಜನಾದರೋ ಧ್ಯಾನದಿಂದೆಚ್ಚರಗೊಂಡು ತನ್ನನ್ನು ಕೊಲ್ಲಲೈತಂದಿರುವ ಕಾಲನನ್ನು ಕಂಡನು. ಆತನು ಅಗ್ನಿಯಿಂದ ದಗ್ಧನಾಗುತ್ತಿದ್ದ ಆತನನ್ನು ಮತ್ತೆ ನೋಡಿ ಖತಿಗೊಂಡು ತನ್ನ ಮುಂಗಡೆಯಿದ್ದ ಪ್ರಳಯಕಾಲದ ಯಜ್ಞೇಶ್ವರನಿಗೆ ಸಮಾನನಾದ ರುದ್ರನನ್ನೀರೀತಿ ಪ್ರಾರ್ಥಿಸಿದನು.

ರಾಜೋವಾಚ :—

ನಮೋ ರುದ್ರಾಯ ಶಾಂತಾಯ ಸ್ವಜ್ಯೋತ್ಸ್ನಾಯಾತ್ಮವೇಧಸೇ ।
ನಿರಂತರಾಯ ಸೂಕ್ಷ್ಮಾಯ ಜ್ಯೋತಿಷಾಂ ಪತಯೇ ನಮಃ ॥ ೪೧ ॥
ತ್ರಾತಾ ತ್ವಂ ಹಿ ಜಗನ್ನಾಥ ಪಿತಾ ಮಾತಾ ಸುಹೃತ್ಸಖಾ ।
ತ್ವಮೇವ ಬಂಧುಃ ಸ್ವಜನೋ ಲೋಕಾನಾಂ ಪ್ರಭುರೀಶ್ವರಃ ॥ ೪೨ ॥
ಕಿಂ ಕೃತಂ ಹಿ ತ್ವಯಾ ಶಂಭೋ ಕೋಽಸೌ ದಗ್ಧೋ ಮಮಾಗ್ರತಃ ।
ನ ಜಾನಾಮಿ ಚ ಕಿಂ ಜಾತಂ ಕೃತಂ ಕೇನ ಮಹತ್ತರಂ ॥ ೪೩ ॥
ಏವಂ ಪ್ರಾರ್ಥಯತಸ್ತಸ್ಯ ಶ್ರುತ್ವಾ ಚ ಪರಿದೇವನಂ ।
ಉವಾಚ ಶಂಕರೋ ವಾಕ್ಯಂ ಬೋಧಯನ್ನಿವ ತಂ ನೃಪಂ ॥ ೪೪ ॥

ರುದ್ರ ಉವಾಚ :—

ಮಯಾ ದಗ್ಧೋ ಹ್ಯಯಂ ಕಾಲಸ್ತ್ವದರ್ಥೇ ಚ ತವಾಗ್ರತಃ ।
ದಹ್ಯಮಾನೋ ಹಿ ದೃಷ್ಟಸ್ತೇ ಜ್ವಾಲಾಮಾಲಾಕುಲೋ ಮಹಾನ್ ॥೪೫॥
ಏವಮುಕ್ತಸ್ತದಾ ತೇನ ಶಂಭುನಾ ರಾಜಸತ್ತಮಃ ।
ಉವಾಚ ಪ್ರಶ್ರಿತೋ ಭೂತ್ವಾ ವಚನಂ ಶಿವಮಗ್ರತಃ ॥ ೪೬ ॥

---

೪೧. ಶ್ವೇತರಾಜನು ಹೇಳುತ್ತಾನೆ:—"ರುದ್ರನೂ, ಸ್ವಯಂಪ್ರಕಾಶನೂ, ಪರಬ್ರಹ್ಮಸ್ವರೂಪನೂ, ತನ್ನನ್ನು ತಾನೇ ಅರಿತವನೂ, ಯಾವ ಎಡರುಗಳೂ ಇಲ್ಲದವನೂ, ಸೂಕ್ಷ್ಮಾತಿಸೂಕ್ಷ್ಮನೂ, ಜ್ಯೋತಿಗಳಿಗೆಲ್ಲ ಸ್ವಾಮಿಯೂ ಆದ ಓ ಪರಮೇಶ್ವರಾ!! ನಿನಗೆ ನಮಸ್ಕಾರವು.

೪೨-೪೩. ಎಲೈ ಜಗನ್ನಾಥನೇ! ಭಕ್ತರ ಸಂರಕ್ಷಕನೂ ನೀನೆ, ತಾಯಿಯೂ, ತಂದೆಯೂ, ನೆಂಟನೂ, ಗೆಳೆಯನೂ ನೀನೇ! ನೀನೇ ಬಂಧುವು, ಸ್ವಜನವೂ ಲೋಕಗಳಿಗೆಲ್ಲಕ್ಕೂ ಪ್ರಭುವೂ ನೀನೇ. ಎಲೈ ಶಂಭುವೇ! ಈಗ ನೀನು ಮಾಡಿದುದೇನು? ನನ್ನ ಮುಂಗಡೆ ದಗ್ಧನಾಗುತ್ತಿರುವ ಈತನಾರು? ಈ ಪ್ರಕೃತದಲ್ಲಿ ಏನಾಯಿತು? ಯಾರು ಯಾವ ಮಹತ್ತರ ಕಾರ್ಯವನ್ನೆಸಗಿದರು? ಎಂಬುದನ್ನೇ ನಾನರಿಯೆ."

೪೪. ಎಲೈ ವಿಪ್ರರೇ! ಈ ರೀತಿ ಪ್ರಾರ್ಥಿಸುತ್ತಿರುವ ಆ ಶ್ವೇತಮಹಾರಾಜನ ರೋದನವನ್ನು ಕೇಳಿ, ಆ ಶಂಕರನು ಆತನನ್ನೆಚ್ಚರಗೊಳಿಸುವಂತೆ ಈ ರೀತಿ ಮಾತನ್ನಾಡಿದನು.

೪೫-೪೬. ರುದ್ರನು ಹೇಳುತ್ತಾನೆ:—"ಅಯ್ಯಾ ಶ್ವೇತರಾಜನೇ! ನಾನು ಈ ಕಾಲನನ್ನು ನಿನಗೋಸುಗ ದಹಿಸಿದೆನು. ಇವನು ಜ್ವಾಲೆಯ ಮಾಲೆಗಳಿಂದ ಆವೃತನಾಗಿರುವುದನ್ನು ನೀನು ಕಂಡೆಯಷ್ಟೆ." ಶಂಭುವು ಈ ರೀತಿ ಹೇಳಿದುದನ್ನು ಕೇಳಿ, ಆ ರಾಜಸತ್ತಮನು ಶಾಂತನಾಗಿ ಆ ಶಿವನನ್ನು ಕುರಿತು, "ಪರಮೇಶ್ವರ!

**ಕಿಮನೇನ ಕೃತಂ ಶಂಭೋ ಅಕೃತ್ಯಂ ವದ ತತ್ತ್ವತಃ ।**
**ಯ ಇಮಾಂ ಪ್ರಾಪಿತೋಽವಸ್ಥಾಂ ಪ್ರಾಣಾತ್ಯಯಕರೀಂ ಭವ ॥ ೪೭ ॥**
**ಏವಂ ವಿಜ್ಞಾಪಿತಸ್ತೇನ ಹ್ಯುವಾಚ ಪರಮೇಶ್ವರಃ ।**
**ಭಕ್ಷಕೋಽಯಂ ಮಹಾರಾಜ ಸರ್ವೇಷಾಂ ಪ್ರಾಣಿನಾಮಿಹ ॥ ೪೮ ॥**
**ಭಕ್ಷಣಾರ್ಥಂ ತವ ವಿಭೋ ಸೋಽಯಂ ಕ್ರೂರೋಽಧುನಾಗತಃ ।**
**ಮಮಾಂತಿಕಂ ಮಹಾರಾಜ ತಸ್ಮಾದ್ದಗ್ಧೋ ಮಯಾ ವಿಭೋ ॥ ೪೯ ॥**
**ಬಹೂನಾಂ ಕ್ಷೇಮಮನ್ವಿಚ್ಛಂಸ್ತ್ವದರ್ಥೇಽಹಂ ವಿಶೇಷತಃ ॥ ೫೦ ॥**
**ಯೇ ಪಾಪಿನೋ ಹ್ಯಧರ್ಮಿಷ್ಠಾ ಲೋಕಸಂಹಾರಕಾರಕಾಃ ।**
**ಪಾಷಂಡವಾದಸಂಯುಕ್ತಾ ವಧ್ಯಾಸ್ತೇ ಮಮ ಚೈವ ಹಿ ।**
**ವಾಕ್ಯಂ ನಿಶಮ್ಯ ರುದ್ರಸ್ಯ ಶ್ವೇತೋ ವಚನಮಬ್ರವೀತ್ ॥ ೫೧ ॥**
**ಕಾಲೇನೈವ ಹಿ ಲೋಕೋಽಯಂ ಪುಣ್ಯಮಾಚರತೇ ಸದಾ ।**
**ಧರ್ಮನಿಷ್ಠಾಶ್ಚ ಕೇಚಿತ್ತು ಭಕ್ತ್ಯಾ ಪರಮಯಾ ಯುತಾಃ ॥ ೫೨ ॥**
**ಉಪಾಸನರತಾಃ ಕೇಚಿಜ್ಞಾನಿನೋ ಹಿ ತಥಾ ಪರೇ ।**
**ಕೇಚಿದಧ್ಯಾತ್ಮಸಂಯುಕ್ತಾಶ್ಚಾನ್ಯೇ ಮುಕ್ತಾಶ್ಚ ಕೇಚನ ॥ ೫೩ ॥**

---

ಈ ಕಾಲನು ಯಾವ ಅಕಾರ್ಯವನ್ನು ಮಾಡಿದುದರಿಂದ ಪ್ರಾಣನಾಶಕರವಾದ ಈ ಅವಸ್ಥೆಯನ್ನು ಪಡೆದನೆಂಬುದನ್ನು ಯಥಾರ್ಥವಾಗಿ ತಿಳಿಸುವವನಾಗು'' ಎಂದನು.

೪೮-೫೦. ಈ ರೀತಿ ಆ ದೊರೆಯು ವಿಜ್ಞಾಪಿಸಲು, ಪರಮೇಶ್ವರನು "ಅಯ್ಯಾ ಮಹಾರಾಜನೇ! ಇವನು ಸಮಸ್ತ ಪ್ರಾಣಿಗಳನ್ನೂ ಭಕ್ಷಿಸುವವನು. ಎಲೈ ವಿಭುವೆ! ಈ ಕಠಿನಹೃದಯನು ಇದೀಗ ನಿನ್ನನ್ನು ಭಕ್ಷಿಸಬಂದನು. ಇವನು ನನ್ನ ಮುಂಗಡೆಯೇ ಹೀಗೆ ಮಾಡಬಂದುದನ್ನು ಕಂಡು ಮುಖ್ಯವಾಗಿ ನಿನಗೋಸುಗವಾಗಿಯೂ, ಇತರ ಭಕ್ತಜನಗಳಿಗೋಸುಗವಾಗಿಯೂ ನಾನಿವನನ್ನು ಸುಟ್ಟೆನು.

೫೧-೫೪. ಪಾಪಿಗಳೂ, ಅಧರ್ಮಿಷ್ಠರೂ, ಲೋಕವನ್ನು ಸಂಹರಿಸುವವರೂ, ಪಾಷಂಡವಾದಗಳನ್ನು ಮಾಡುವವರೂ ಆದ ಎಲ್ಲರೂ ನನಗೆ ವಧ್ಯರೇ ಸರಿ.'' ಈ ರೀತಿ ನುಡಿದ ರುದ್ರನ ಮಾತನ್ನು ಕೇಳಿ ಶ್ವೇತರಾಜನು ಆತನನ್ನು ಕುರಿತು "ಎಲೈ ಸ್ವಾಮಿಯೇ! ಲೋಕವೆಲ್ಲವೂ ಈ ಕಾಲನ ದೆಸೆಯಿಂದಲೇ ಪುಣ್ಯಕರ್ಮಗಳನ್ನು ಆಚರಿಸುತ್ತದೆ. ಈತನಿಂದಲೇ ಕೆಲವರು ಧರ್ಮದಲ್ಲಿ ನಿಷ್ಠೆಯುಳ್ಳವರಾಗಿ ಪರಮಭಕ್ತಿಸಮನ್ವಿತರಾಗಿರುವರು. ಕೆಲವರು ಅದೇ ಭಕ್ತಿಯಿಂದಲೇ ಪರಮಾತ್ಮನಾದ ನಿನ್ನನ್ನು ಉಪಾಸನೆ ಮಾಡುವವರಾಗಿರುತ್ತಾರೆ. ಇನ್ನು ಕೆಲವರು,

ಕಾಲೋ ಹಿ ಹರ್ತಾ ಚ ಚರಾಚರಾಣಾಂ
ತಥಾ ಹ್ಯಸೌ ಪಾಲಕೋಽಪ್ಯದ್ವಿತೀಯಃ ।
ಸ ಸೃಷ್ಟ್ವಾ ವೈ ಪ್ರಾಣಿನಾಂ ಪ್ರಾಣಭೂತ
ಸ್ತಸ್ಮಾದೇನಂ ಜೀವಯ ಸ್ವಾಶು ಭೂಯಃ ॥ ೫೪ ॥
ಯದಿ ಸೃಷ್ಟಿಪರೋಽಸಿ ತ್ವಂ ಕಾಲಂ ಜೀವಯ ಸತ್ವರಂ ।
ಯದಿ ಸಂಹಾರಭೂತೋಽಸಿ ಸರ್ವೇಷಾಂ ಪ್ರಾಣಿನಾಮಿಹ ॥ ೫೫ ॥
ತರ್ಹ್ಯೇವಂ ಕುರು ಶಂಭೋ ತ್ವಂ ಕಾಲಸ್ಯ ಚ ಮಹಾತ್ಮನಃ ।
ವಿನಾ ಕಾಲೇನ ಯತ್ಕಿಂಚಿದ್ಭವಿಷ್ಯತಿ ನ ಶಂಕರ ॥ ೫೬ ॥
ಇತಿ ವಿಜ್ಞಾಪಿತಸ್ತೇನ ರಾಜ್ಞಾ ಶಂಭುಃ ಪ್ರತಾಪಿನಾ ।
ಚಕಾರ ವಚನಂ ತಸ್ಯ ಭಕ್ತಸ್ಯ ಚ ಚಿಕೀರ್ಷಿತಂ ॥ ೫೭ ॥
ಶಂಭುಃ ಪ್ರಹಸ್ಯಾಥ ತದಾ ಮಹೇಶಃ
ಸಂಜೀವಯಾಮಾಸ ಪಿನಾಕಪಾಣಿಃ ।
ಚಕಾರ ರೂಪಂ ಚ ಯಥಾ ಪುರಾಸೀ
ದಾಲಿಂಗಿತೋಽಸೌ ಯಮದೂತಮಧ್ಯೇ ॥ ೫೮ ॥

---

ಜ್ಞಾನಿಗಳಾಗಿರುವುದೂ ಇವನಿಂದಲೇ, ಕೆಲವರು ಅಧ್ಯಾತ್ಮದಲ್ಲಿ ತೊಡಗಿರುವುದೂ ಇವನಿಂದಲೇ; ಮತ್ತೆ ಕೆಲವರು ಮುಕ್ತರಾಗಿರುವುದೂ ಈತನ ಮೂಲಕ ವಾಗಿಯೇ. ಈ ಕಾಲನೇ ಚರಾಚರ ಪ್ರಾಣಿಗಳಿಗೆಲ್ಲ ಸಂಹಾರಕರ್ತನೂ ಅದ್ವಿತೀಯನಾದ ಪಾಲಕನೂ ಆಗಿರುವನು. ಪ್ರಭುವೇ! ಈತನೇ ಪ್ರಾಣಿಗಳನ್ನು ಸೃಜಿಸುವವನಾಗಿ ಅವುಗಳ ಪ್ರಾಣಸ್ವರೂಪನೂ ಆಗಿರುತ್ತಾನೆ. ಆದುದರಿಂದ ನೀನೀತನನ್ನು ಜಾಗ್ರತೆಯಾಗಿ ಬದುಕಿಸಬೇಕು.

೫೫–೫೬. ಎಲೈ ಶಂಕರನೇ! ನೀನು ಸೃಷ್ಟಿಯಲ್ಲಿ ಮನಸ್ಸುಳ್ಳವನೂ, ಸಮಸ್ತ ಪ್ರಾಣಿಗಳನ್ನು ಸಂಹಾರಗೊಳಿಸುವವನೂ ಆಗಿದ್ದರೆ ಈ ಕಾಲನನ್ನು ಜಾಗ್ರತೆಯಾಗಿ ಬದುಕಿಸುವವನಾಗು; ಓ ಶಂಕರ! ಕಾಲನನ್ನುಳಿದು ಈ ಲೋಕದಲ್ಲಿ ಏನೊಂದೂ ನಡೆಯುವುದಿಲ್ಲ.''

೫೭–೫೮. ಎಲೈ ಶೌನಕಾದಿ ಮಹರ್ಷಿಗಳಿರಾ! ಮಹಾ ಪ್ರತಾಪಶಾಲಿ ಯಾದ ಆ ಶ್ವೇತರಾಜನು ಈ ರೀತಿ ವಿಜ್ಞಾಪಿಸಿದ ತರುವಾಯ ಪರಮೇಶ್ವರನು ಆ ತನ್ನ ಭಕ್ತನ ಮಾತಿನಂತೆಯೇ ಮಾಡಿದನು. ಆ ಮಹೇಶ್ವರನು ನಸುನಕ್ಕು ಆ ಕಾಲನನ್ನು ಬದುಕಿಸಿದನು. ಅಲ್ಲದೆ ಪೂರ್ವದಲ್ಲಿ ಅವನಿಗೆ ಯಾವ ರೂಪ ವಿದ್ದಿತೋ ಅದನ್ನೂ ಅನುಗ್ರಹಿಸಿ ಯಮದೂತರ ಮಧ್ಯದಲ್ಲಿಯೇ ಅವನನ್ನು ಆಲಿಂಗಿಸಿದನು.

ಉಪಸ್ಥಿತೋಽಸೌ ತ್ವಥ ಲಜ್ಜಮಾನ
ಸ್ತುಷ್ಟಾವ ದೇವಂ ವೃಷಭಧ್ವಜಂ ತಂ ।
ನತ್ವಾ ಪುರಸ್ಥಾಽಗ್ನಿಮಯಂ ಹಿ ಕಾಲಃ
ಸ ವಿಸ್ಮಯೋ ವಾಕ್ಯಮಿದಂ ಬಭಾಷೇ ॥ ೫೯ ॥

ಕಾಲ ಉವಾಚ:—

ಕಾಲಾಂತಕ ತ್ರಿಪುರೇಶ ತ್ರಿಪುರಾಂತಕರ ಪ್ರಭೋ ।
ಮದನೋ ಹಿ ತ್ವಯಾ ದೇವ ಕೃತೋಽನಂಗೋ ಜಗತ್ಪತೇ ॥ ೬೦ ॥
ದಕ್ಷಯಜ್ಞವಿನಾಶಶ್ಚ ಕೃತೋ ಹಿ ಪರಮಾದ್ಭುತಃ ।
ಕಾಲಕೂಟಂ ದುಷ್ಪ್ರಸಹಂ ಸರ್ವೇಷಾಂ ಕ್ಷಯಕೃನ್ಮಹತ್ ॥ ೬೧ ॥
ಗ್ರಸಿತಂ ತತ್ತ್ವಯಾ ಶಂಭೋ ಅನ್ಯೇಷಾಮಪಿ ದುರ್ಧರಂ ।
ಲಿಂಗರೂಪೇಣ ಮಹತಾ ವ್ಯಾಪ್ತಮಾಸೀಜ್ಜಗತ್ರಯಂ ॥ ೬೨ ॥
ಲಯನಾಲ್ಲಿಂಗಮಿತ್ಯುಕ್ತಂ ಸರ್ವೈರಪಿ ಸುರಾಸುರೈಃ ।
ಯಸ್ಯಾಂತಂ ನ ವಿದುರ್ದೇವಾ ಬ್ರಹ್ಮವಿಷ್ಣುಪುರೋಗಮಾಃ ॥ ೬೩ ॥
ಲಿಂಗಸ್ಯ ದೇವದೇವಸ್ಯ ಮಹಿಮಾನಂ ಪರಸ್ಯ ಚ ।
ನಮಸ್ತೇ ಪರಮೇಶಾಯ ನಮಸ್ತೇ ವಿಶ್ವಮಂಗಲ ।
ನಮಸ್ತೇ ಶಿತಿಕಂಠಾಯ ನಮಸ್ತಸ್ಮೈ ಕಪರ್ದಿನೇ ॥ ೬೪ ॥

---

೫೯. ತರುವಾಯ ಆ ಕಾಲನು ಪರಮೇಶ್ವರನ ಸಮೀಪದಲ್ಲಿ ಲಜ್ಜೆಯೊಡಗೂಡಿ ವೃಷಭವಾಹನನಾದ ಆ ಸ್ವಾಮಿಯನ್ನು ನಮಸ್ಕರಿಸಿ ಅಗ್ನಿಮಯನಾದ ಆತನನ್ನು ಕಂಡು ಆಶ್ಚರ್ಯಭರಿತನಾಗಿ ಈ ಮಾತನ್ನಾಡಿದನು.

೬೦-೬೪. ಕಾಲನು ಹೇಳುತ್ತಾನೆ —"ಎಲೈ ಕಾಲಾಂತಕನೂ, ಸ್ವರ್ಗ ಮರ್ತ್ಯ ಪಾತಾಳಗಳೆಂಬ ತ್ರಿಪುರಗಳ ಒಡೆಯನೂ, ತ್ರಿಪುರಾಂತಕನೂ ಆದ ಓ ಪ್ರಭುವೇ! ಜಗತ್ಪತಿಯಾದ ನೀನು ಪೂರ್ವದಲ್ಲಿ ಮನ್ಮಥನನ್ನು ಸುಟ್ಟು ಅನಂಗನನ್ನಾಗಿ ಮಾಡಿದೆ. ಎಲೈ ಶಂಕರನೆ! ಪೂರ್ವದಲ್ಲಿ ದಕ್ಷನೆಸಗಿದ ಪರಮಾಶ್ಚರ್ಯಕರವಾದ ಯಜ್ಞವನ್ನು ನೀನು ನಾಶಗೊಳಿಸಿರುತ್ತೀಯೆ. ಎಲ್ಲರಿಗೂ ವಿನಾಶವನ್ನುಂಟುಮಾಡುವಂತಹ ಅಸಹ್ಯಕರವಾಗಿ ಇತರರಾರಿಗೂ ಧರಿಸಲಸಾಧ್ಯವಾದ ಕಾಲಕೂಟ ಮಹಾ ವಿಷವನ್ನು ಪಾನಮಾಡಿರುವೆ. ಲಿಂಗಸ್ವರೂಪಿಯಾದ ನಿನ್ನಿಂದ ಅಂದು ಮೂರು ಲೋಕಗಳೂ ವ್ಯಾಪಿಸಲಾದವು. ಆಗ ಸುರಾಸುರರೆಲ್ಲರೂ ಸಮಸ್ತವೂ ಲಯಿಸುವುದರಿಂದ ಇದು ಲಿಂಗವೆಂದು ಹೇಳಿದರು. ಯಾವ ಲಿಂಗದ ಅಂತವನ್ನೂ, ದೇವದೇವನಾದ ಆ ನಿನ್ನ ಸರ್ವೋತ್ತಮವಾದ ಲಿಂಗಸ್ವರೂಪದ ಮಹಿಮೆಯನ್ನೂ, ಬ್ರಹ್ಮ ವಿಷ್ಣು ಮೊದಲಾದ ದೇವತೆಗಳೂ ಅರಿಯದೆಹೋದರೋ ಅಂತಹ ಓ ವಿಶ್ವಮಂಗಳನೇ! ಪರಮೇಶ್ವರನಾದ ನಿನಗೆ ಪುನಃ ಪುನಃ ನಮಸ್ಕಾರವು. ಶಿತಿಕಂಠನೂ ಕಪರ್ದಿಯೂ ಆದ ನಿನಗೆ ನಮಸ್ಕಾರವು.

ನಮೋ ನಮಃ ಕರುಣಾಕರಾಯ ತೇ
ನಮೋ ನಮೋ ಮಂಗಲ ಮಂಗಲಾತ್ಮನೇ ।
ಜ್ಞಾನಾತ್ಮನೇ ಜ್ಞಾನವಿದಾಂ ಮನೀಷಿಣಾಂ
ತ್ವಮಾದಿದೇವೋಽಸಿ ಪುಮಾನ್ಪುರಾಣಃ ॥ ೬೫ ॥
ತ್ವಮೇವ ಸರ್ವಂ ಜಗದೇಕಬಂಧೋ
ವೇದಾಂತವೇದ್ಯೋಽಸಿ ಮಹಾನುಭಾವಃ ।
ಮಹಾನುಭಾವೈಃ ಪರಿಕೀರ್ತನೀಯ
ಸ್ತ್ವಮೇವ ವಿಶ್ವೇಶ್ವರ ವಿಶ್ವಮಾನ್ಯಃ ॥ ೬೬ ॥
ತ್ವಂ ಪಾಸಿ ಲುಂಪಸಿ ಜಗತ್ತ್ರಿತಯಂ ಮಹೇಶ
ಸೃಷ್ಟಾಸಿ ಭೂತಪತಿರೇವ ನ ಕಶ್ಚಿದನ್ಯಃ ॥ ೬೭ ॥
ಇತಿ ಸ್ತುತಸ್ತದಾ ತೇನ ಕಾಲೇನ ಜಗದೀಶ್ವರಃ ।
ಉವಾಚ ಕಾಲೋ ರಾಜಾನಂ ಶ್ವೇತಂ ಸಂಬೋಧಯನ್ನಿವ ॥ ೬೮ ॥
ಮನುಷ್ಯಲೋಕೇ ಸಕಲೋ ನಾನ್ಯಸ್ತ್ವತ್ತೋ ಹಿ ವಿದ್ಯತೇ ।
ಯೇನ ತ್ವಯಾ ಜಿತೋ ದೇವೋ ಹ್ಯಜೇಯೋ ಭುವನತ್ರಯೇ ॥ ೬೯ ॥

---

೬೫. ಕಾರಣಗಳೆಲ್ಲಕ್ಕೂ ಮೂಲಕಾರಣನಾಗಿರುವ ನಿನಗೆ ನಮೋ ನಮಃ! ಮಂಗಳರೂಪನೂ, ಮಂಗಳಾತ್ಮನೂ, ಜ್ಞಾನಸ್ವರೂಪನೂ ಆದ ನಿನಗೆ ನಮೋ ನಮಃ. ಪ್ರಭೂ! ಜ್ಞಾನವಿತ್ತುಗಳಾದ ಪಂಡಿತರೆಲ್ಲರಿಗೂ ಪುರಾಣಪುರುಷನಾದ ನೀನೇ ಆದಿದೇವನಾಗಿರುತ್ತೀಯೆ!

೬೬–೬೭. ಕಣ್ಣಿಗೆ ಕಾಣುವ, ಕಾಣಿಸದಿರುವ ಸಮಸ್ತವೂ ನಿನ್ನ ಸ್ವರೂಪವಾಗಿಯೇ ಇರುವುದು. ವೇದಾಂತ ಪ್ರತಿಪಾದ್ಯನೂ, ಮಹಾನುಭಾವನೂ, ಮಹಾನುಭಾವರೆಲ್ಲರಿಂದ ಸ್ತೋತ್ರಗೈಸಿಕೊಳ್ಳುವವನೂ, ವಿಶ್ವೇಶ್ವರನಾಗಿ ವಿಶ್ವಮಾನ್ಯನಾಗಿರುವವನೂ ನೀನೇ! ಓ ಮಹೇಶ!! ನೀನೇ ಈ ಮೂರು ಲೋಕಗಳನ್ನು ರಕ್ಷಿಸಿ ಲಯಗೊಳಿಸಿ ಮತ್ತೆ ಅವುಗಳನ್ನು ಸೃಜಿಸುವವನೂ ಆಗಿರುತ್ತೀಯೆ! ನಿನ್ನ ಹೊರತು ಈ ಅಂಡಜ ಸ್ವೇದಜ ಉದ್ಭಿಜ್ಜ ಜರಾಯುಜಗಳೆಂಬ ನಾಲ್ಕುಬಗೆಯ ಭೂತಗಳಿಗೆ ಸ್ವಾಮಿಯು ಮತ್ತಾವನೂ ಇರುವುದಿಲ್ಲ."

೬೮. ಎಲೈ ವಿಪ್ರರಿರಾ! ಆ ಕಾಲನು ಜಗದೀಶ್ವರನಾದ ಆ ಶಂಕರನನ್ನು ಈ ರೀತಿ ಸ್ತುತಿಸಿ ಶ್ವೇತರಾಜನನ್ನು ಸಂಬೋಧಿಸಿ ಈ ರೀತಿ ಹೇಳಿದನು.

೬೯. ಕಾಲನು ಹೇಳುತ್ತಾನೆ:—"ಎಲೈ ಶ್ವೇತಮಹಾರಾಜನೇ! ಈ ಮಾನವಪ್ರಪಂಚದಲ್ಲೆಲ್ಲ ನಿನ್ನನ್ನು ಬಿಟ್ಟರೆ ಮಹಾತ್ಮನಾದವನಾರೂ ಇಲ್ಲವು. ನೀನು ಮೂರುಲೋಕಗಳಿಗೂ ಅಜೇಯನಾಗಿರುವ ಸ್ವಾಮಿಯನ್ನು ಜಯಿಸಿರುವೆ.

ಮಯಾ ಹತಮಿದಂ ವಿಶ್ವಂ ಜಗದೇತಚ್ಚರಾಚರಂ ।
ಜೇತಾಹಂ ಸರ್ವದೇವಾನಾಂ ಸರ್ವೇಷಾಂ ದುರತಿಕ್ರಮಃ ॥ ೭೦ ॥
ಸಹಿ ತೇ ಚಾನುಗೋ ಜಾತೋ ಮಹಾರಾಜ ಪ್ರಯಚ್ಛಮೇ ।
ಅಭಯಂ ದೇವದೇವಾಚ್ಚ ಶೂಲಿನಃ ಪರಮೇಷ್ಠಿನಃ ॥ ೭೧ ॥
ಏವಮುಕ್ತಸ್ತದಾ ತೇನ ಶ್ವೇತಃ ಕಾಲೇನ ಚೈವ ಹಿ ।
ಉವಾಚ ಪ್ರಹಸನ್ವಾಚಾ ಮೇಘನಾದಗಭೀರಯಾ ॥ ೭೨ ॥

ರಾಜೋವಾಚ :—

ಶಿವಸ್ಯ ಪರಮಂ ರೂಪಂ ತ್ವಮೇಕೋ ನಾಸ್ತಿಸಂಶಯಃ ।
ಕಾಲಸ್ತ್ವಮಸಿ ಭೂತಾನಾಂ ಸ್ಥಿತಿ ಸಂಹಾರ ರೂಪವಾನ್ ॥ ೭೩ ॥
ತಸ್ಮಾತ್ಪೂಜ್ಯತಮೋಽಸಿ ತ್ವಂ ಸರ್ವೇಷಾಂ ಚ ನಿಯಾಮಕಃ ।
ತ್ವದ್ಭಯಾತ್ಯತಿನಃ ಸರ್ವೇ ಶರಣಂ ಪರಮೇಶ್ವರಂ ।
ವ್ರಜಂತಿ ವಿವಿಧೈರ್ಭಾವೈರಾತ್ಮಲಕ್ಷಣತತ್ಪರಾಃ ॥ ೭೪ ॥

---

೭೦. ಎಲೈ ದೊರೆಯೆ! ನಾನು ಈ ಚರಾಚರ ಪ್ರಪಂಚವನ್ನೇ ನಾಶಗೊಳಿಸಿರುವೆನು. ಸಮಸ್ತ ದೇವತೆಗಳನ್ನೂ ಜಯಿಸಿರುವವನು, ಸಮಸ್ತರಿಗೂ ಮೀರಲಸದಳನು.

೭೧. ಇಂತಹ ನಾನು ಈಗ ನಿನಗೆ ಸೇವಕನಾಗಿರುವೆನು. ಎಲೈ ಮಹಾರಾಜನೇ! ಪ್ರಕೃತದಲ್ಲಿ ನೀನು ಪರಮೇಶ್ವರನಾದ ಶೂಲಿಯಿಂದ ನನಗೆ ಅಭಯವನ್ನು ಕೊಡಿಸುವವನಾಗು.''

೭೨. ಆ ಕಾಲನಿಂತು, ನುಡಿಯಲು ಶ್ವೇತರಾಜನು ನಗುತ್ತ ಮುಗಿಲ ದನಿಯಂತೆ ಗಂಭೀರವಾಗಿ ನುಡಿದನು.

೭೩. ಶ್ವೇತರಾಜನು ಹೇಳುತ್ತಾನೆ:—ಅಯ್ಯಾ ಕಾಲನೇ! ನೀನು ಪರಮೇಶ್ವರನ ಅತ್ಯುತ್ತಮವಾದ ರೂಪಗಳಲ್ಲೊಂದು ರೂಪವೆಂಬುದರಲ್ಲಿ ಸಂಶಯವಿಲ್ಲವು. ಕಾಲನಾದ ನೀನು ಸಮಸ್ತ ಭೂತಗಳಿಗೂ ಸ್ಥಿತಿ ಸಂಹಾರ ರೂಪನಾಗಿರುವೆ.

೭೪. ಆದುದರಿಂದ ಎಲ್ಲರಿಗೂ ನಿಯಾಮಕನಾಗಿರುವ ನೀನು ಅತ್ಯಂತ ಪೂಜ್ಯತಮನಾಗಿರುವೆ. ನಿನ್ನ ಭಯದಿಂದಲೇ ಕರ್ಮಾನುಷ್ಠಾನತತ್ಪರರೆಲ್ಲರೂ ಆತ್ಮಧ್ಯಾನನಿರತರಾಗಿ ಬಗೆಬಗೆಯ ಮನೋಭಾವಗಳಿಂದ ಪರಮೇಶ್ವರನನ್ನು ಶರಣುಹೊಂದುತ್ತಾರೆ.

ಸೂತ ಉವಾಚ :—

ತೇನೈವಂ ರಕ್ಷಿತಃ ಕಾಲೋ ರಾಜ್ಞಾ ಪರಮಧರ್ಮಿಣಾ ।
ಶಿವಪ್ರಸಾದ ಮಾತ್ರೇಣ ಲಬ್ಧಸಂಜ್ಞೋ ಬಭೂವ ಹ ॥ ೭೫ ॥
ತದಾ ಯಮೇನ ಸ್ತುವಿತೋ ಮೃತ್ಯುನಾ ಯಮದೂತಕೈಃ ।
ಶಿವಂ ಪ್ರಣಮ್ಯ ಸಂಸ್ತುತ್ಯ ಶ್ವೇತಂ ರಾಜಾನಮೇವಚ ।
ಯಯೌ ಸ್ವಮಾಲಯಂ ವಿಪ್ರಾ ಮೇನೇ ಸ್ವಂ ಜನಿತಂ ಪುನಃ ॥ ೭೬ ॥
ಮಾಯಯಾ ಸಹ ಪತ್ನ್ಯಾ ಚ ಶಿವಸ್ಯ ಚರಿತಂ ಮಹತ್ ।
ಅನು ಸಂಸ್ಮೃತ್ಯ ಸಂಸ್ಮೃತ್ಯ ವಿಸ್ಮಯಂ ಪರಮಂ ಯಯೌ ॥ ೭೭ ॥
ಕಥಯಾಮಾಸ ಸರ್ವೇಷಾಂ ದೂತಾನಾಂ ಸ್ವಯಮೇವಹಿ ।
ಆಕರ್ಣ್ಯತಾಂ ಮಮ ವಚೋ ಹೇ ದೂತಾಸ್ತ್ವರಿತೇನ ಹಿ ॥ ೭೮ ॥
ಕರ್ತವ್ಯಂ ಚ ಪ್ರಯತ್ನೇನ ನಾನ್ಯಥಾ ಮಮಭಾಷಿತಂ ॥ ೭೯ ॥

ಕಾಲ ಉವಾಚ :—

ಯೇ ತ್ರಿಪುಂಡ್ರಂ ಧಾರಯಂತಿ ತಥಾ ಯೇ ವೈ ಜಟಾಧರಾಃ ।
ಯೇ ರುದ್ರಾಕ್ಷಧರಾಶ್ಚೈವ ತಥಾ ಯೇ ಶಿವನಾಮಿನಃ ॥ ೮೦ ॥

---

೭೫-೭೬. ಸೂತಮಹರ್ಷಿಯು ಹೇಳುತ್ತಾನೆ:—ಎಲೈ ಶೌನಕಾದಿ ಮುನಿಗಳಿರಾ! ಈ ಪ್ರಕಾರವಾಗಿ ಮಹಾ ಧರ್ಮಿಷ್ಠನಾದ ಆ ರಾಜನು ಕಾಲನನ್ನು ಸಂರಕ್ಷಿಸಿದನು. ಅವನು ಶಿವನ ಪ್ರಸಾದಮಾತ್ರದಿಂದ ತಿಳುವಳಿಕೆಯನ್ನು ಪಡೆದನು. ಆಗ ಯಮನೂ, ಮೃತ್ಯುದೇವತೆಯೂ, ಯಮದೂತರೂ ಆತನನ್ನು ಸ್ತುತಿಸಿದರು. ತರುವಾಯ ಯಮಧರ್ಮರಾಜನಾದರೋ ಶಿವನನ್ನು ನಮಸ್ಕರಿಸಿ ಸ್ತುತಿಸಿ ಪುನಃ ತಾನು ಬದುಕಿಕೊಂಡೆನೆಂದೆಂದುಕೊಂಡು ತನ್ನ ಪಟ್ಟಣಕ್ಕೆ ಹಿಂದಿರುಗಿದನು.

೭೭. ಅವನು ತನ್ನ ಭವನವನ್ನು ಸೇರಿದ ತರುವಾಯ ತನ್ನ ಪತ್ನಿಯಾದ ಮಾಯಾದೇವಿಯೊಡನೆ ಶಿವನ ಮಹತ್ತರವಾದ ಚರಿತ್ರೆಯನ್ನು ಅಡಿಗಡಿಗೂ ಸ್ಮರಿಸುತ್ತ ಅತ್ಯಾಶ್ಚರ್ಯಭರಿತನಾದನು.

೭೮-೭೯. ಇಷ್ಟೆಯಲ್ಲದೆ ಆತನು ತನ್ನ ದೂತರೆಲ್ಲರನ್ನೂ ಕುರಿತು ತಾನಾಗಿಯೇ, "ಎಲೈ ದೂತರಿರಾ! ಈಗ ನಾನು ಹೇಳುವ ಮಾತನ್ನು ಬಹು ಜಾಗರೂಕತೆಯಿಂದ ಕೇಳಿ ಸರ್ವಪ್ರಯತ್ನದಿಂದಲೂ ಅದರಂತೆಯೇ ನಡೆಯಬೇಕಲ್ಲದೆ ಮತ್ತೊಂದು ಬಗೆಯಾಗಿ ನಡೆಯಕೂಡದು.

೮೦-೮೨. ಕಾಲನು ಹೇಳುತ್ತಾನೆ:—ಯಾರು ತ್ರಿಪುಂಡ್ರವನ್ನು ಧರಿಸಿರುತ್ತಾರೆಯೋ, ಜಟೆಗಳನ್ನಾರು ಬಿಟ್ಟಿರುತ್ತಾರೆಯೋ, ಯಾರಾದರೆ ರುದ್ರಾಕ್ಷಿಗಳನ್ನು ಧರಿಸಿರುತ್ತಾರೆಯೋ, ಶಿವನ ಹೆಸರುಗಳನ್ನಾರು ತಳೆದಿರುತ್ತಾರೆಯೋ,

ಉಪಜೀವನಹೇತೋಶ್ಚ ಭಿಯಾ ಯೇ ಹ್ಯಪಿ ಮಾನವಾಃ ।
ಪಾಪಿನೋಽಪಿ ದುರಾಚಾರಾಃ ಶಿವವೇಷಧರಾ ಹ್ಯಮೀ ॥ ೮೧ ॥
ನಾನೇತವ್ಯಾ ಭವದ್ಭಿಶ್ಚ ಮಮ ಲೋಕಂ ಕದಾಚನ ।
ವರ್ಜ್ಯಾಸ್ತೇ ಹಿ ಪ್ರಯತ್ನೇನ ಪಾಪಿನೋಽಪಿ ಸದೈವ ಹಿ ॥ ೮೨ ॥
ಅನ್ಯೇಷಾಂ ಕಾ ಕಥಾ ದೂತಾ ಯೇಽರ್ಚಯಂತಿ ಸದಾಶಿವಂ ।
ಭಕ್ತ್ಯಾ ಪರಮಯಾ ಶಂಭುಂ ರುದ್ರಾಸ್ತೇ ನಾತ್ರ ಸಂಶಯಃ ॥ ೮೩ ॥
ರುದ್ರಾಕ್ಷಮೇಕಂ ಶಿರಸಾ ಬಿಭರ್ತಿ ಯ
ಸ್ತಥಾ ತ್ರಿಪುಂಡ್ರಂ ಚ ಲಲಾಟಮಧ್ಯಕೇ ।
ಪಂಚಾಕ್ಷರೀಂ ಯೇ ಪ್ರಜಪಂತಿ ಸಾಧವಃ
ಪೂಜ್ಯಾ ಭವದ್ಭಿಶ್ಚ ನ ಚಾನ್ಯಥಾ ಕ್ವಚಿತ್ ॥ ೮೪ ॥
ಯಸ್ಮಿನ್ರಾಷ್ಟ್ರೇಽಥವಾ ದೇಶೇ ಗ್ರಾಮೇ ಚಾಪಿ ವಿಚಕ್ಷಣಃ ।
ಶಿವ ಭಕ್ತೋ ನ ದೃಶ್ಯೇತ ಸ್ಮಶಾನಾತ್ತು ವಿಶಿಷ್ಯತೇ ।
ತದ್ರಾಷ್ಟ್ರಂ ದೇಶಮಿತ್ಯಾಹುಃ ಸತ್ಯಂ ಪ್ರತಿವದಾಮಿ ವಃ ॥ ೮೫ ॥

---

ಯಾರು ಆ ಪರಮೇಶ್ವರನ ದಿವ್ಯನಾಮಗಳನ್ನು ಪುರಶ್ಚರಣೆಮಾಡುತ್ತಿರುತ್ತಾರೆಯೋ, ಹೊಟ್ಟೆಯಪಾಡಿಗಾಗಿಯೋ ಭಯಕ್ಕೋಸುಗವಾಗಿಯೋ ಯಾರು ಪಾಪಿಷ್ಠರೂ ದುರಾಚಾರರೂ ಆದರೂ ಶಿವನ ವೇಷಗಳನ್ನು ತಳೆದಿರುತ್ತಾರೆಯೋ ಅವರೆಲ್ಲರನ್ನೂ ನೀವು ನನ್ನ ಲೋಕಕ್ಕೆ ಕರೆತರಕೂಡದು. ಅವರು ನಿರಂತರವೂ ಪಾಪಗಳನ್ನು ಮಾಡುವವರೇ ಆದರೂ ಅವರನ್ನು ಪ್ರಯತ್ನಪೂರ್ವಕವಾಗಿ ಬಿಟ್ಟುಬಿಡತಕ್ಕುದು.

೮೩–೮೪. ಎಲೈ ದೂತರಿರಾ! ಇನ್ನು ಪರಮಭಕ್ತಿಯಿಂದ ಆ ಸದಾಶಿವನನ್ನು ಪೂಜಿಸುವವರ ವಿಷಯವನ್ನು ಹೇಳತಕ್ಕುದೇನು? ಅವರು ಸಾಕ್ಷಾತ್ ರುದ್ರರೆಂಬುದರಲ್ಲಿ ಸಂಶಯವೇ ಇಲ್ಲವು. ಎಂದಿಗೇ ಆಗಲಿ ಕೊರಳಿನಲ್ಲಿ ಒಂದೇ ಒಂದು ರುದ್ರಾಕ್ಷಿಯನ್ನಾದರೂ ಧರಿಸಿರುವವರೂ, ಹಣೆಯಲ್ಲಿ ತ್ರಿಪುಂಡ್ರವನ್ನು ತಾಳಿರುವವರೂ, 'ಓಂ ನಮಃ ಶಿವಾಯ' ಎಂಬ ಪಂಚಾಕ್ಷರೀ ಮಂತ್ರವನ್ನು ಜಪಿಸುವ ಸಾಧುಗಳೂ ನಿಮ್ಮಿಂದ ನಿರಂತರವೂ ಪೂಜ್ಯರಾಗಿರತಕ್ಕುದಲ್ಲದೆ ಮತ್ತೆಬೇರೆಯಲ್ಲವು.

೮೫. ಯಾವ ರಾಷ್ಟ್ರದಲ್ಲಿ ಅಥವಾ ದೇಶದಲ್ಲಿ ಅಥವ ಗ್ರಾಮದಲ್ಲಿ ಕುಶಲನಾದ ಶಿವಭಕ್ತನಿರುವುದಿಲ್ಲವೋ ಅದು ಸ್ಮಶಾನಕ್ಕಿಂತಲೂ ಹೆಚ್ಚಿನದೆಂದು ತಿಳಿಯತಕ್ಕುದು. ಯಾವ ರಾಷ್ಟ್ರದಲ್ಲಿ ಶಿವಭಕ್ತನಿರುತ್ತಾನೆಯೋ ಅದೇ ದೇಶವೆನಿಸುತ್ತದೆ. ಈ ಮಾತನ್ನು ನಾನು ಸತ್ಯವಾಗಿಯೂ ಹೇಳುತ್ತಿರುವೆನು.

ಯಸ್ಮಿನ್ನಸಂತಿ ನಿತ್ಯಂ ಹಿ ಶಿವಭಕ್ತಿಸಮನ್ವಿತಾಃ ।
ತದ್ಗ್ರಾಮಸ್ಥಾ ಜನಾಃ ಸರ್ವೇ ಶಾಸನೀಯಾ ನ ಸಂಶಯಃ ॥ ೮೬ ॥
ಏವಮಾಜ್ಞಾಪಯಾಮಾಸ ಯಮೋಽಪಿ ನಿಜಕಿಂಕರಾನ್ ।
ತಥೇತಿ ಮತ್ವಾ ತೇ ಸರ್ವೇ ತೂಷ್ಣೀಮಾಸನ್ಸುವಿಸ್ಮಿತಾಃ ॥ ೮೭ ॥

ಏವಂ ವಿಧೋಽಯಂ ಭುವನೈಕಭರ್ತಾ
ಸದಾಶಿವೋ ಲೋಕಗುರುಃ ಸ ಏಕಃ ।
ದಾತಾ ಪ್ರಹರ್ತಾ ನಿಜಭಾವಯುಕ್ತಃ
ಸನಾತನೋಽಯಂ ಜಗದೇಕಬಂಧುಃ ॥ ೮೮ ॥

ದಗ್ಧ್ವಾ ಕಾಲಂ ಮಹಾದೇವೋ ನಿರ್ಭಯಂ ಚ ದದೌ ವಿಭುಃ ।
ಶ್ವೇತಸ್ಯ ರಾಜರಾಜಸ್ಯ ಮಹೀಪಾಲವರಸ್ಯ ಚ ॥ ೮೯ ॥
ತದಾ ನಿರ್ಭಯಮಾಪನ್ನಃ ಶ್ವೇತರಾಜೋ ಮಹಾಮನಾಃ ।
ಭಕ್ತ್ಯಾ ಚ ಪರಯಾ ಮುಕ್ತೋ ಬಭೂವ ಕೃತನಿಶ್ಚಯಃ ॥ ೯೦ ॥
ತದಾ ದೇವೈಃ ಪೂಜ್ಯಮಾನ ಋಷಿಭಿಃ ಪನ್ನಗೈಸ್ತಥಾ ।
ಶ್ವೇತೋ ರಾಜನ್ಯವರ್ಯೋಽಸೌ ಶಿವಸಾಯುಜ್ಯಮಾಪ್ತವಾನ್ ॥ ೯೧ ॥

---

೮೬. ಯಾವ ಗ್ರಾಮದಲ್ಲಿ ಸತತವೂ ಶಿವಭಕ್ತಿಸಂಪನ್ನನಾದವನಿರುವುದಿಲ್ಲವೋ, ಆ ಗ್ರಾಮವಾಸಿಗಳೆಲ್ಲರನ್ನೂ ದಂಡಿಸತಕ್ಕುದೆಂಬುದರಲ್ಲಿ ಸಂಶಯವೇ ಇಲ್ಲವು.''

೮೭. ಎಲೈ ವಿಪ್ರರಿರಾ! ಯಮನೂ ಸಹ ಈ ರೀತಿ ತನ್ನ ದೂತರಿಗೆ ಅಪ್ಪಣೆ ಮಾಡಿದನು. ಇದನ್ನು ಕೇಳಿ ಅವರೆಲ್ಲರೂ ಅಂತೆಯೇ ಆಗಲೆಂದು ನುಡಿದು ಅಚ್ಚರಿಗೊಂಡು ಸುಮ್ಮನಾದರು.

೮೮–೯೦. ಸಮಸ್ತ ಭುವನಗಳಿಗೂ ಸ್ವಾಮಿಯಾದ ಸದಾಶಿವನು ಇಂತಹ ಮಹಾತ್ಮ್ಯವುಳ್ಳವನು. ಸಮಸ್ತ ಪ್ರಪಂಚಕ್ಕೂ ಆತನೇ ಗುರುವು. ಸಮಸ್ತ ಇಷ್ಟಾರ್ಥಗಳನ್ನು ದಯಪಾಲಿಸುವವನೂ, ಸಂಹಾರಕರ್ತನೂ, ಸತ್ಯಸ್ವರೂಪದಿಂದೊಡಗೂಡಿದವನೂ, ಸನಾತನನೂ, ಭಕ್ತಜನರೆಲ್ಲರಿಗೂ ಏಕಬಂಧುವೂ ಆತನೇ! ಆ ಮಹಾದೇವನು ಈ ಪ್ರಕಾರ ಕಾಲನನ್ನು ಸುಟ್ಟು ರಾಜರಾಜನೂ, ರಾಜಶ್ರೇಷ್ಠನೂ ಆದ ಶ್ವೇತರಾಜನಿಗೆ ಅಭಯವನ್ನಿತ್ತನು. ತರುವಾಯ, ಮಹಾಮನಸ್ವಿಯಾದ ಆ ದೊರೆಯು ನಿರ್ಭಯತ್ವವನ್ನು ಹೊಂದಿ ಪರಮೇಶ್ವರನೇ ಮುಕ್ತಿದಾಯಕನೆಂದು ನಿರ್ಧರಿಸಿ ಉತ್ತಮೋತ್ತಮವಾದ ತನ್ನ ಭಕ್ತಿಯಿಂದ ಮುಕ್ತಿಯನ್ನು ಪಡೆದನು.

೯೧. ಇದಾದಮೇಲೆ ಆ ಭೂಪಾಲನು ದೇವತೆಗಳಿಂದಲೂ ಋಷಿಗಳಿಂದಲೂ ಪನ್ನಗರಿಂದಲೂ ಪೂಜಿತನಾಗಿ ಶಿವಸಾಯುಜ್ಯವನ್ನು ಪಡೆದನು.

ಏವಂ ಭಕ್ತಿಪರಾಣಾಂ ಚ ಮಹೇಶೇ ಚ ಜಗದ್ಗುರೌ ।
ಸಿದ್ಧಿಃ ಕರತಲೇ ತೇಷಾಂ ಸತ್ಯಂ ಪ್ರತಿವದಾಮಿ ವಃ ॥ ೯೨ ॥
ಶ್ವಪಚೋಽಪಿ ವರಿಷ್ಠಃ ಸ್ಯಾತ್ಪ್ರಸಾದಾಚ್ಛಂಕರಸ್ಯ ಚ ।
ತಸ್ಮಾತ್ಸರ್ವಪ್ರಯತ್ನೇನ ಪೂಜನೀಯೋ ಹಿ ಶಂಕರಃ ॥ ೯೩ ॥
ಬಹೂನಾಂ ಜನ್ಮನಾಮಂತೇ ಶಿವಭಕ್ತಿಃ ಪ್ರಜಾಯತೇ ॥ ೯೪ ॥
ಜ್ಞಾನಿನಾಂ ಕೃತಬುದ್ಧೀನಾಂ ಜನ್ಮಜನ್ಮನಿ ಶಂಕರಃ ।
ಕಿಂ ಮಯಾ ಬಹುನೋಕ್ತೇನ ಪೂಜನೀಯಃ ಸದಾಶಿವಃ ॥ ೯೫ ॥
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ।
ಕಿರಾತೇನ ಕೃತಂ ಯಚ್ಚ ವ್ರತಂ ಚ ಪರಮಾದ್ಭುತಂ ।
ಯೇನೈವ ತಾರಿತಂ ವಿಶ್ವಂ ಜಗದೇತಚ್ಚರಾಚರಂ ॥ ೯೬ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಶ್ವೇತರಾಜ ಚರಿತೇ ಶಿವಭಕ್ತಿಪ್ರಭಾವೇನ ಕಾಲದಹನ ವೃತ್ತಾಂತವರ್ಣನಂ" ನಾಮ ದ್ವಾತ್ರಿಂಶೋಽಧ್ಯಾಯಃ

---

೯೨. ಹೀಗೆ ಜಗದ್ಗುರುವಾದ ಆ ಮಹೇಶ್ವರನಲ್ಲಿ ಭಕ್ತಿಸಂಪನ್ನರಾಗಿರುವವರೆಲ್ಲರಿಗೂ ಮೋಕ್ಷಸಿದ್ಧಿಯು ಅಂಗೈಯಿನಲ್ಲಿಯೇ ಇರುತ್ತದೆಯೆಂಬುದನ್ನು ದಿಟವಾಗಿಯೂ ಹೇಳುವೆನು.

೯೩–೯೫. ಪರಮೇಶ್ವರನ ಪ್ರಸಾದವು ಲಭಿಸಿದುದಾದರೆ ಶ್ವಪಚನೂ ಸಹ ಅತ್ಯುತ್ತಮನಾಗುತ್ತಾನೆ. ಆದುದರಿಂದ ಆ ಶಂಕರನನ್ನು ಸಮಸ್ತ ಪ್ರಯತ್ನಗಳಿಂದಲೂ ಪೂಜಿಸಬೇಕು. ಎಲೈ ಮುನಿಗಳಿರಾ! ಪ್ರಾಣಿಗಳಿಗೆ ಅನೇಕ ಜನ್ಮಗಳು ಕಳೆದ ತರುವಾಯ ಶಿವಭಕ್ತಿಯು ಹುಟ್ಟುತ್ತದೆ. ಪರಶಿವನೇ ದೈವವೆಂಬ ನಿಶ್ಚಳವಾದ ಬುದ್ಧಿಯುಳ್ಳ ಜ್ಞಾನಿಗಳಿಗಾದರೋ ಜನ್ಮಜನ್ಮದಲ್ಲಿಯೂ ಆ ಸ್ವಾಮಿಯಲ್ಲಿ ಭಕ್ತಿಯು ಇದ್ದೇ ಇರುತ್ತದೆ. ನಾನು ಹೆಚ್ಚಾಗಿ ಹೇಳುವುದರಿಂದೇನು! ಸದಾಶಿವನು ಸದಾ ಪೂಜಿಸತಕ್ಕವನು.

೯೬. ಈ ವಿಷಯದಲ್ಲಿಯೇ ಪುರಾತನವಾದ ಇತಿಹಾಸವೊಂದನ್ನು ಹೇಳುತ್ತಾರೆ. ಅದರಲ್ಲಿ ಕಿರಾತನೊರ್ವನು ಪರಮಾದ್ಭುತವಾದ ಯಾವ ವ್ರತವನ್ನು ಆಚರಿಸಿದನೋ ಯಾವುದರಿಂದ ಚರಾಚರಾತ್ಮಕವಾದ ಈ ಸಮಸ್ತ ಪ್ರಪಂಚವೂ ಕಡೆಹಾಯಿಸಲಾಯಿತೋ ಆ ವಿಚಾರವೆಲ್ಲವೂ ನಿರೂಪಿತವಾಗಿರುತ್ತದೆ; ಕೇಳಿರಿ.

ಇಲ್ಲಿಗೆ ಎಂಬತ್ತೊಂದು ಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಶ್ವೇತರಾಜ ಚರಿತ್ರೆ – ಶಿವಭಕ್ತಿ ಪ್ರಭಾವದಿಂದ ಕಾಲನು ಸುಟ್ಟುಹೋದ ವೃತ್ತಾಂತದ ವರ್ಣನ"ವೆಂಬ ಮುವ್ವತ್ತೆರಡನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ತ್ರಯಸ್ತ್ರಿಂಶೋಽಧ್ಯಾಯಃ

## ಶಿವರಾತ್ರಿವ್ರತ ಮಾಹಾತ್ಮ್ಯ ವರ್ಣನಂ

ಋಷಯ ಊಚುಃ:—

ಕಿಂ ನಾಮಾ ಚ ಕಿರಾತೋಽಭೂತ್ಕಿಂ ತೇನ ವ್ರತಮಾಹಿತಂ ।
ತತ್ತ್ವಂ ಕಥಯ ವಿಪ್ರೇಂದ್ರ ಪರಂ ಕೌತೂಹಲಂ ಹಿ ನಃ ॥ ೧ ॥
ತತ್ಸರ್ವಂ ಶ್ರೋತುಮಿಚ್ಛಾಮೋ ಯಥಾತಥ್ಯೇನ ಕಥ್ಯತಾಂ ।
ನ ಹ್ಯನ್ಯೋ ವಿದ್ಯತೇ ಲೋಕೇ ತ್ವದ್ವಿನಾ ವದತಾಂ ವರಃ ।
ತಸ್ಮಾತ್ಕಥಯ ಭೋ ವಿಪ್ರ ಸರ್ವಂ ಶುಶ್ರೂಷತಾಂ ಹಿ ನಃ ॥ ೨ ॥
ಏವಮುಕ್ತಸ್ತದಾ ತೇನ ಶೌನಕೇನ ಮಹಾತ್ಮನಾ ।
ಕಥಯಾಮಾಸ ತತ್ಸರ್ವಂ ಪುಷ್ಕಸೇನಕೃತಂ ಚ ಯತ್ ॥ ೩ ॥

ಲೋಮಶ ಉವಾಚ:—

ಆಸೀತ್ಪುರಾ ಮಹಾರೌದ್ರಶ್ಚಂಡೋ ನಾಮ ದುರಾತ್ಮವಾನ್ ।
ಕ್ರೂರಸಂಗೋ ನಿಷ್ಕೃತಿಕೋ ಭೂತಾನಾಂ ಭಯದಾಹಕಃ ॥ ೪ ॥

---

### ಕನ್ನಡದ ಅನುವಾದ

#### ಶಿವರಾತ್ರಿವ್ರತ ಮಹಾತ್ಮ್ಯ ವರ್ಣನವು

೧-೨. ಋಷಿಗಳು ಹೇಳುತ್ತಾರೆ.—ಎಲೈ ಸೂತಪುರಾಣಿಕನೇ! ನೀನೀಗ ಅಪ್ಪಣೆಕೊಡಿಸಿದ ಕಿರಾತಭಕ್ತನ ಹೆಸರೇನು? ಆತನೆಸಗಿದ ವ್ರತವಾವುದು? ಇದನ್ನಪ್ಪಣೆಕೊಡಿಸು, ಕೇಳಲು ನಮಗೆ ಬಹಳ ಅಪೇಕ್ಷೆಯಾಗಿರುವುದು. ಎಲೈ ಮಹರ್ಷಿಯೇ! ಇಂತಹ ಇತಿಹಾಸ ಪುರಾಣಾದಿಗಳನ್ನು ಹೇಳುವವರಲ್ಲಿ ನಿನಗಿಂತಲೂ ಶ್ರೇಷ್ಠನಾದವನು ಮತ್ತಾವನೂ ಇಲ್ಲವು. ನಾವೆಲ್ಲರೂ ನಿನ್ನಿಂದಲೇ ಈ ಕಥೆಯನ್ನು ಕೇಳಬಯಸಿರುವುದರಿಂದ ಅದನ್ನು ಇದ್ದುದನ್ನಿದ್ದಂತೆಯೇ ತಿಳಿಸುವವನಾಗು.

೩. ಮಹಾತ್ಮನಾದ ಶೌನಕಮುನಿಯು ಈ ರೀತಿ ನುಡಿದುದನ್ನು ಕೇಳಿ ಆ ಲೋಮಶಮಹರ್ಷಿಯು ಆ ಇತಿಹಾಸವೆಲ್ಲವನ್ನೂ ವಿಸ್ತಾರವಾಗಿ ಹೇಳಿದನು.

೪. ಲೋಮಶನು ಹೇಳುತ್ತಾನೆ:—ಅಯ್ಯಾ ಶೌನಕಾದಿಗಳಿರಾ! ಪೂರ್ವದಲ್ಲಿ ಚಂಡನೆಂಬ ಮಹಾಭಯಂಕರನಾದ ಒಬ್ಬ ಕಿರಾತನಿದ್ದನು. ಅವನು ಬಹಳ ಕೆಟ್ಟವನು, ಕ್ರೂರರಾದವರ ಸಹವಾಸದಲ್ಲಿಯೇ ಇರುವವನು; ಮಹಾಪಾಪಿಷ್ಠನು; ಸಮಸ್ತ ಭೂತಗಳಿಗೂ ಭಯಂಕರನಾದವನು.

ಜಾಲೇನ ಮತ್ಸ್ಯಾನ್ಸ್ವಪಷ್ಟಾತ್ಮಾ ಘಾತಯತ್ಯನಿಶಂ ಖಲು ।
ಭಲ್ಲೈರ್ಮೃಗಾಂಛ್ವಾಂಪದಾಂಶ್ಚ ಕೃಷ್ಣಸಾರಾಂಶ್ಚ ಶಲ್ಲಕಾನ್ ॥ ೫ ॥
ಖಡ್ಗಾಂಶ್ಚೈವ ಚ ದುಷ್ಟಾತ್ಮಾ ದೃಷ್ಟ್ವಾ ಕಾಂಶ್ಚಿಚ್ಚ ಪಾಪವಾನ್ ।
ಪಕ್ಷಿಣೋ ಘಾತಯತ್ಯದ್ಧಾ ಬ್ರಾಹ್ಮಣಾಂಶ್ಚ ವಿಶೇಷತಃ ॥ ೬ ॥
ಲುಬ್ಧಕೋ ಹಿ ಮಹಾಪಾಪೋ ದುಷ್ಟೋ ದುಷ್ಟಜನಪ್ರಿಯಃ ।
ಭಾರ್ಯಾ ತಥಾವಿಧಾ ತಸ್ಯ ಪುಷ್ಕಸಸ್ಯ ಮಹಾಭಯಾ ॥ ೭ ॥
ಏವಂ ವಿಹರತಸ್ತಸ್ಯ ಬಹುಕಾಲೋಽತ್ಯವರ್ತತ ।
ಗತೇ ಬಹುತಿಥೇ ಕಾಲೇ ಪಾಪೌಘನಿರತಸ್ಯ ಚ ॥ ೮ ॥
ನಿಷಂಗೇ ಜಲಮಾದಾಯ ಕ್ಷುತ್ಪಿಪಾಸಾರ್ದಿತೋಭೃಶಂ ।
ಏಕದಾ ನಿಶಿ ಪಾಪೀಯಾನ್ಬಿಲ್ವವೃಕ್ಷೋಪರಿ ಸಂಸ್ಥಿತಃ ।
ಕೋಲಂ ಹಂತುಂ ಧನುಷ್ಪಾಣಿರ್ಜಾಗ್ರಚ್ಚಾನಿಮಿಷೇಣ ಹಿ ॥ ೯ ॥
ಮಾಘಮಾಸೇಽಸಿತಯಾಂ ವೈ ಚತುರ್ದಶ್ಯಾಮಥಾಗ್ರತಃ ।
ಮೃಗಮಾರ್ಗವಿಲೋಕಾರ್ಥೀ ಬಿಲ್ವಪತ್ರಾಣ್ಯಪಾತಯತ್ ॥ ೧೦ ॥

---

೫–೬. ಆ ದುರಾತ್ಮನು ಬಲೆಯೊಡ್ಡಿ ಪ್ರತಿನಿತ್ಯವೂ ಮೀನುಗಳನ್ನು ಹಿಡಿದು ಹಿಂಸಿಸುತ್ತಿದ್ದನು. ಭಲ್ಲೆಯಗಳಿಂದ ಮೃಗಗಳನ್ನೂ, ಶ್ವಾಪದಗಳನ್ನೂ, ಕೃಷ್ಣಸಾರಗಗಳನ್ನೂ, ಶಲ್ಲಕಗಳನ್ನೂ, ಖಡ್ಗಮೃಗಗಳನ್ನೂ, ಇತರ ಕೆಲವು ಪಕ್ಷಿಗಳನ್ನೂ ಯಾವಾಗಲೂ ಘಾತಿಸುತ್ತಲಿದ್ದನು. ವಿಶೇಷವಾಗಿ ಬ್ರಾಹ್ಮಣರನ್ನು ಕಂಡರೆ ಅವನು ಕನಲಿ ಅವರನ್ನು ಹಿಂಸಿಸುತ್ತಿದ್ದನು.

೭. ಆ ಬೇಡನು ಮಹಾ ಪಾಪಿಯು; ಬಹಳ ದುಷ್ಟನು; ದುಷ್ಟರಾದ ಜನರಿಗೆ ಬಹಳ ಹಿತವನು. ಅವನ ಹೆಂಡತಿಯೂ ಸಹ ಅವನಂತೆಯೇ ಮಹಾ ಭಯಂಕರಳು.

೮–೯. ಈ ರೀತಿ ಬಾಳನ್ನು ನೂಕುತ್ತಲಿದ್ದ ಆ ವ್ಯಾಧನಿಗೆ ಅನೇಕ ವರುಷಗಳು ಕಳೆದುವು. ಹೀಗೆ ಅನೇಕ ಸಂವತ್ಸರಗಳು ಕಳೆಯಲಾಗಿ ಪಾಪ ಸಮೂಹಗಳಲ್ಲಿ ನಿರತನಾದ ಆ ವ್ಯಾಧನು ಒಂದಾನೊಂದು ದಿನ ರಾತ್ರಿ ಹಸಿವು ಬಾಯಾರಿಕೆಗಳಿಂದ ಪೀಡಿತನಾಗಿ ಬತ್ತಳಿಕೆಯಲ್ಲಿ ನೀರನ್ನು ತುಂಬಿಕೊಂಡು ಹಂದಿಯನ್ನು ಕೊಲ್ಲಲೋಸುಗ ಬಿಲ್ವಪತ್ರೆಯ ಮರವನ್ನೇರಿ ರೆಪ್ಪೆಹಾಕದೆ ನೋಡುತ್ತ ಕುಳಿತಿದ್ದನು.

೧೦. ಆ ದಿನವು ಮಾಘಮಾಸದ ಕೃಷ್ಣಪಕ್ಷ ಚತುರ್ದಶಿ (ಶಿವರಾತ್ರಿ) ಯಾಗಿದ್ದಿತು. ಅಂದು ಆ ವ್ಯಾಧನು ಹಂದಿಯು ತಿರುಗುವ ದಾರಿಯನ್ನು ಕಂಡುಹಿಡಿಯಲಪೇಕ್ಷಿಸಿ ಆ ಮರದಮೇಲಡಗಿ ಅನೇಕ ಬಿಲ್ವಪತ್ರೆಗಳನ್ನು ನೆಲಕ್ಕುದುರಿಸಿದನು.

ಶ್ರೀವೃಕ್ಷಪರ್ಣಾನಿ ಬಹೂನಿ ತತ್ರ
ಸಂ ಛೇದಯಾಮಾಸ ರುಷಾನ್ವಿತೋಽಪಿ ।
ಶ್ರೀವೃಕ್ಷಮೂಲೇ ಪರಿವರ್ತಮಾನೋ
ಲಿಂಗಂ ಚ ತಸ್ಯೋಽಪರಿ ದೃಷ್ಟಭಾವಃ ॥ ೧೧ ॥
ವವರ್ಷ ಗಂಡೂಷಜಲಂ ದುರಾತ್ಮಾ
ಯದೃಚ್ಛಯಾ ತಾನಿ ಶಿವೇ ಪತಂತಿ ।
ಶ್ರೀವೃಕ್ಷಪರ್ಣಾನಿ ಚ ದೈವಯೋಗಾ
ಜ್ಞಾತಂ ಚ ಸರ್ವಂ ಶಿವಪೂಜನಂ ಮಹತ್ ॥ ೧೨ ॥
ಗಂಡೂಷವಾರಿಣಾ ತೇನ ಸ್ನಪನಂ ಚ ಕೃತಂ ಮಹತ್ ।
ಬಿಲ್ವಪತ್ರೈರಸಾಂಖ್ಯಾತೈರರ್ಚನಂ ಚ ಮಹತ್ಕೃತಂ ॥ ೧೩ ॥
ಅಜ್ಞಾನೇನಾಪಿ ಭೋ ವಿಪ್ರಾಃ ಪುಷ್ಕಸೇನ ದುರಾತ್ಮನಾ ।
ಮಾಘಮಾಸೇಽಸಿತೇಪಕ್ಷೇ ಚತುರ್ದಶ್ಯಾಂ ವಿಧೂದಯೇ ॥ ೧೪ ॥
ಪುಷ್ಕಸೋಽಥ ದುರಾಚಾರೋ ವೃಕ್ಷಾದವತತಾರ ಸಃ ।
ಆಗತ್ಯ ಜಲಸಂಕಾಶಂ ಮತ್ಸ್ಯಾನ್ಹಂತುಂ ಪ್ರಚಕ್ರಮೇ ॥ ೧೫ ॥
ಲುಬ್ಧಕಸ್ಯಾಪಿ ಭಾರ್ಯಾಭೂನ್ನಾಮ್ನಾ ಚೈವ ಘನೋದರೀ ।
ದುಷ್ಟಾ ಸಾ ಪಾಪನಿರತಾ ಪರದ್ರವ್ಯಾಪಹಾರಿಣೀ ॥ ೧೬ ॥

---

೧೧–೧೨. ಹೀಗೆ ಆ ಕಿರಾತನು ಹಂದಿಯನ್ನೇ ನಿರೀಕ್ಷಿಸುತ್ತಿದ್ದು ಅದು ಕಾಣದಿರಲು ರೇಗಿ ಆ ಮರದಲ್ಲಿನ ಅನೇಕ ಎಲೆಗಳನ್ನು ಕತ್ತರಿಸಿ ಕೆಡವಿದನಷ್ಟೆ. ಅವುಗಳೆಲ್ಲವೂ ಆ ಮರದಡಿಯಲ್ಲಿದ್ದ ಲಿಂಗದ ಮೇಲೆ ಬಿದ್ದವು. ಆ ದುರಾತ್ಮನು ಆಗಾಗ್ಗೆ ಎಂಜಲನ್ನು ಉಗುಳುತ್ತಿದ್ದನು. ಅಕಸ್ಮಾತ್ತಾಗಿ ಅದೆಲ್ಲವೂ ಆ ಶಿವಲಿಂಗದ ಮೇಲೆಯೇ ಬೀಳುತ್ತಿದ್ದಿತು. ಹೀಗೆ ದೈವಯೋಗದಿಂದ ಆ ಪಾಪಿಷ್ಠನು ಉದುರಿಸಿದ ಬಿಲ್ವಪತ್ರೆಯೂ, ಉಗುಳಿದ ಎಂಜಲ ನೀರೂ ಆ ಶಿವಲಿಂಗದ ಮೇಲೆ ಬಿದ್ದು ಶಿವಪೂಜೆಯಾಗಿ ಪರಿಣಮಿಸಿತು.

೧೩–೧೬. ಹೀಗೆ ಆ ವ್ಯಾಧನುಗಿದ ಎಂಜಲು ನೀರಿನಿಂದ ಶಿವಲಿಂಗಕ್ಕೆ ಮಹತ್ತರವಾದ ಅಭಿಷೇಕವೂ, ಅಸಂಖ್ಯಾತವಾದ ಬಿಲ್ವದಳಗಳಿಂದ ಅರ್ಚನೆಯೂ ಆಯಿತು. ಎಲೈ ವಿಪ್ರರೇ! ದುರಾತ್ಮನಾದ ಆ ಕಿರಾತನು ತಿಳುವಳಿಕೆಯಿಲ್ಲದೆಯೇ ಮಾಘಮಾಸದ ಕೃಷ್ಣಪಕ್ಷದ ಚತುರ್ದಶಿಯ ದಿನದಲ್ಲಿ ಚಂದ್ರೋದಯ ಸಮಯದಲ್ಲಿ ಶಿವಲಿಂಗಾರ್ಚನೆಯನ್ನೆಸಗಿದನು. ತರುವಾಯ ಆ ದುರಾಚಾರನಾದ ಕಿರಾತನು ಬಿಲ್ವವೃಕ್ಷದಿಂದಿಳಿದು ನದಿಯ ಬಳಿಗೈದಿ ಮೀನುಗಳನ್ನು ಹಿಡಿದು ಕೊಲ್ಲಲು ಮೊದಲಿಟ್ಟನು. ಈ ಲುಬ್ಧಕನಿಗೆ ದುಷ್ಟೆಯೂ. ಪಾಪಿಷ್ಠೆಯೂ, ಇತರರ ಸ್ವತ್ತುಗಳನ್ನಪಹರಿಸುವವಳೂ ಆದ ಘನೋದರಿಯೆಂಬ ಹೆಂಡತಿಯೊಬ್ಬಳಿದ್ದಳು.

ಗೃಹಾನ್ನಿರ್ಗತ್ಯ ಸಾಯಾಹ್ನೇ ಪುರದ್ವಾರಬಹಿಸ್ಥಿತಾ ।
ವನಮಾರ್ಗಂ ಪ್ರಪಶ್ಯಂತೀ ಪತ್ಯುರಾಗಮನೇಚ್ಛಯಾ ॥ ೧೭ ॥
ಚಿರಾದ್ಭರ್ತರಿ ನಾಯಾತೇ ಚಿಂತಯಾಮಾಸ ಲುಬ್ಧಕೀ ।
ಅದ್ಯ ಸಾಯಾಹ್ನವೇಲಾಯಾಮಾಗತಾಃ ಸರ್ವಲುಬ್ಧಕಾಃ ॥ ೧೮ ॥
ತಮಃ ಸ್ತೋಮೇನ ಸಂಛನ್ನಾ ಚತಸ್ರೋ ವಿದಿಶೋ ದಿಶಃ ।
ರಾತ್ರೌ ಯಾಮದ್ವಯಂ ಯಾತಂ ಕಿಂ ಮತಂಗಃ ಸಮಾಗತಃ ॥ ೧೯ ॥
ಕಿಂ ವಾ ಕೇಸರಲೋಭೇನ ಸಿಂಹೇನೈವ ವಿದಾರಿತಃ ।
ಕಿಂ ಭುಜಂಗ ಫಣಾರತ್ನಹಾರೀ ಸರ್ಪವಿಷಾರ್ದಿತಃ ॥ ೨೦ ॥
ಕಿಂ ವಾ ವರಾಹದಂಷ್ಟ್ರಾಗ್ರಘಾತೈಃ ಪಂಚತ್ವಮಾಗತಃ ।
ಮಧುಲೋಭೇನ ವೃಕ್ಷಾಗ್ರಾತ್ ಸನ್ವೈ ಪ್ರಪತಿತೋ ಭುವಿ ॥ ೨೧ ॥
ಕ್ವಾನ್ವೇಷ್ಯಾಮಿ ಪೃಚ್ಛಾಮಿ ಕ್ವ ಗಚ್ಛಾಮಿ ಚ ಕಂ ಪ್ರತಿ ।
ಏವಂ ವಿಲಪ್ಯ ಬಹುಧಾ ನಿವೃತ್ತಾ ಸ್ವಂ ಗೃಹಂ ಪ್ರತಿ ॥ ೨೨ ॥
ನೈವಾನ್ನಂ ನೋ ಜಲಂ ಕಿಂಚಿನ್ನ ಭುಕ್ತಂ ತದ್ದಿನೇ ತಯಾ ।
ಚಿಂತಯಂತೀ ಪತಿಂ ಚಾಪಿ ಲುಬ್ಧಕೀ ತ್ವನಯನ್ನಿಶಂ ॥ ೨೩ ॥

---

೧೭. ಇವಳು ಸಾಯಂಕಾಲದಲ್ಲಿ ಮನೆಯನ್ನು ಬಿಟ್ಟುಬಂದು ಪಟ್ಟಣದ ಬಾಗಿಲಹೊರಗೆ ನಿಂತು ತನ್ನ ಗಂಡನ ಬರವನ್ನವೇಕ್ಷಿಸುತ್ತ ಕಾಡುದಾರಿಯ ಕಡೆಯೇ ನೋಡುತ್ತಿದ್ದಳು.

೧೮–೨೨. ಬಹಳ ಹೊತ್ತಾದರೂ ಅವನು ಬಾರದಿರಲು, ಆ ಕಿರಾತಿಯು "ಇಂದಿನ ಸಾಯಂಕಾಲದಲ್ಲಿಯೇ ಬೇಡರೆಲ್ಲರೂ ಮನೆಗೆ ಹಿಂತಿರುಗಿದರು; ನಾಲ್ಕು ದಿಕ್ಕುಗಳೂ ಕತ್ತಲೆಯಿಂದ ತುಂಬಿಹೋಗಿವೆ. ರಾತ್ರಿಯಲ್ಲಿ ಎರಡು ಯಾಮಗಳೂ ಕಳೆದುಹೋದವು. ಈ ಮತಂಗನಿನ್ನೂ ಏಕೆ ಬರಲಿಲ್ಲ? ಕೇಸರಗಳ ಲೋಭದಿಂದ ಕೊಲ್ಲಲು ಬಳಿಗೈದಿದ ಇವನನ್ನು ಸಿಂಹವೇನಾದರೂ ಸಿಗಿದುಹಾಕಿರ ಬಹುದೆ? ಅಥವ ನಾಗಸರ್ಪದ ಹೆಡೆಮಣಿಯನ್ನು ತರಹೋಗಿ ಅದರ ಕಡಿತ ದಿಂದ ಸಾವಿಗೊಳಗಾದನೊ? ಅಥವ ಹಂದಿಯ ಕೋರೆದಾಡೆಯ ಹೊಡೆತಗಳಿಂದ ಸಾವನ್ನು ಪಡೆದನೊ? ಅದೂ ಅಲ್ಲದಿದ್ದರೆ ಜೇನಿನಾಶೆಯಿಂದ ಹೆಮ್ಮರವನ್ನು ಹತ್ತಿ ಕೆಳಕ್ಕೆ ಬಿದ್ದುಹೋದನೊ? ಒಂದೂ ತಿಳಿಯದಾಗಿದೆ; ಎಲ್ಲಿ ಹುಡುಕಲಿ, ಯಾರನ್ನು ಕೇಳಲಿ, ಎಲ್ಲಿಗೆ ಹೋಗಲಿ!!" ಎಂದು ಬಹಳವಾಗಿ ವಿಲಪಿಸಿ ಕಿರಾತಿಯು ಕಡೆಗೆ ಮನೆಗೆ ಹಿಂತಿರುಗಿದಳು.

೨೩–೨೪. ಅವಳು ಈ ರೀತಿ ತನ್ನ ಗಂಡನನ್ನೇ ಕುರಿತು ಚಿಂತಿಸುತ್ತ, ನೀರನ್ನು ಕುಡಿಯದೆ ಊಟವನ್ನೂ ಮಾಡದೆ ಆ ದಿನದ ರಾತ್ರಿಯನ್ನು ಕಳೆದಳು.

**ಅಥ ಪ್ರಭಾತೇ ವಿಮಲೇ ಪುಷ್ಕಸೀ ವನಮಾಯಯೌ ।**
**ಅಶನಾರ್ಥಂ ಚ ತಸ್ಯಾನ್ನಮಾದಾಯ ತ್ವರಿತಾ ಸತೀ ॥ ೨೪ ॥**
**ಭ್ರಮಮಾಣಾ ತಸ್ಮಿನ್ವನೇ ದದರ್ಶ ಮಹತೀಂ ನದೀಂ ।**
**ತಸ್ಯಾಸ್ತೀರೇ ಸಮಾಸೀನಂ ಸ್ವಪತಿಂ ಪ್ರೇಕ್ಷ್ಯ ಹರ್ಷಿತಾ ॥ ೨೫ ॥**
**ತದನ್ನಂ ಕೂಲತಃ ಸ್ಥಾಪ್ಯ ನದೀಂ ತರ್ತುಂ ಪ್ರಚಕ್ರಮೇ ।**
**ನಿರೀಕ್ಷ್ಯಚಾಥ ಮತ್ಸ್ಯಾನ್ಸ ಜಾಲಪ್ರೋತಾನ್ಸಮಾನಯತ್ ॥ ೨೬ ॥**
**ತಾವತ್ತಯೋಕ್ತಶ್ಚಂಡೋಽಸಾವೇಹಿ ಶೀಘ್ರಂ ಚ ಭಕ್ಷಯ ।**
**ಅನ್ನಂ ತ್ವದರ್ಥಮಾನೀತಮುಪೋಷ್ಯ ದಿವಸಂ ಮಯಾ ॥ ೨೭ ॥**
**ಕೃತಂ ಕಿಮದ್ಯ ರೇ ಮಂದ ಗತೇಽಹನಿ ಚ ಕಿಂ ಕೃತಂ ।**
**ನಾಶಿತಂ ಚ ತ್ವಯಾ ಮೂಢ ಲಂಘಿತೇನಾದ್ಯ ಪಾಪಿನಾ ॥ ೨೮ ॥**
**ನದ್ಯಾಂ ಸ್ನಾತೌ ತಥಾ ತೌ ಚ ದಂಪತೀ ಚ ಶುಚಿವ್ರತೌ ।**
**ಯಾವದ್ಗತಶ್ಚ ಭೋಕ್ತುಂ ಸ ತಾವಚ್ಛ್ವಾ ಸ್ವಯಮಾಗತಃ ॥ ೨೯ ॥**
**ತೇನ ಸರ್ವಂ ಭಕ್ಷಿತಂ ಚ ತದನ್ನಂ ಸ್ವಯಮೇವ ಹಿ ।**
**ಚಂಡೀ ಪ್ರಕುಪಿತಾ ಚೈವ ಶ್ವಾನಂ ಹಂತುಮುಪಸ್ಥಿತಾ ॥ ೩೦ ॥**

---

ಬಳಿಕ ರಾತ್ರಿಯು ಕಳೆದು ಬೆಳ್ಳನೆ ಬೆಳಗಾಗಲು ಪತಿವ್ರತೆಯಾದ ಆ ಕಿರಾತಿಯು ತನ್ನ ಗಂಡನಿಗೆ ಊಟವನ್ನು ತೆಗೆದುಕೊಂಡು ಕಾಡಿಗೆ ಬಂದಳು.

೨೫. ಅವಳು ಆ ಕಾಡಿನಲ್ಲತ್ತಿತ್ತ ಅಲೆಯುತ್ತ ಅಲ್ಲಿಯೆ ಒಂದು ದೊಡ್ಡ ನದಿಯನ್ನೂ ಅದರ ತೀರದಲ್ಲಿ ಕುಳಿತು ಮೀನುಗಳನ್ನು ಹಿಡಿಯುತ್ತಿದ್ದ ತನ್ನ ಗಂಡನನ್ನೂ ಕಂಡು ಸಂತೋಷಗೊಂಡಳು.

೨೬–೨೮. ಆಗಲವಳು ಆ ಅನ್ನವನ್ನು ತೀರದಲ್ಲಿಟ್ಟು, ನದಿಯನ್ನು ದಾಟಲು ಮೊದಲುಮಾಡಿದಳು. ಅದೇ ಸಮಯದಲ್ಲಿಯೇ ಆ ಕಿರಾತನಾದ ಚಂಡನೂ ಕೂಡ ಬಲೆಯಲ್ಲ ಸಿಲುಕಿದ್ದ ಮೀನುಗಳನ್ನು ತಂದನು. ಅಷ್ಟರಲ್ಲಿಯೇ ಕಿರಾತಿಯು ಅವನನ್ನು ಕುರಿತು, "ಓ ಸ್ವಾಮಿಯೇ! ನಾನು ದಿವಸವೆಲ್ಲ ಉಪವಾಸವಿದ್ದು ಈಗ ನಿನಗಾಗಿ ಅನ್ನವನ್ನು ತಂದಿರುತ್ತೇನೆ, ಜಾಗ್ರತೆಯಾಗಿ ಬಾ; ಊಟಮಾಡು. ಎಲಾ ತಿಳಿಗೇಡಿ! ಈಗೇನು ಮಾಡಿದೆ, ನಿನ್ನೆಯ ರಾತ್ರಿಯೆಲ್ಲವೂ ನೀನು ಮಾಡುತ್ತಿದ್ದುದೇನು? ಪಾಪಿಷ್ಠನಾದ ನೀನು ನಿನ್ನೆಯೆಲ್ಲ ಊಟವನ್ನೇ ಮಾಡಲಿಲ್ಲವಲ್ಲ!" ಎಂದು ಹೇಳಿದಳು.

೨೯–೩೦. ತರುವಾಯ, ಆ ದಂಪತಿಗಳಿಬ್ಬರೂ ನದಿಯಲ್ಲಿಳಿದು ಸ್ನಾನಮಾಡಿ ಪರಿಶುದ್ಧರಾಗಿ ಬರುವಷ್ಟರಲ್ಲಿಯೇ ನಾಯಿಯೊಂದು ಆ ಸ್ಥಳಕ್ಕೆ ಬಂದು ಆ ಅನ್ನವೆಲ್ಲವನ್ನೂ ಭಕ್ಷಿಸಿಬಿಟ್ಟಿತು. ಅದನ್ನು ಕಂಡು ಆ ಚಂಡನ ಹೆಂಡತಿಯೂ ಚಂಡಿಯೂ ಆದ ಆ ಘನೋದರಿಯು ಆ ನಾಯಿಯನ್ನು ಹೊಡೆಯಬಂದಳು.

ಅನಯೋರ್ಭಕ್ಷಿತಂ ಚಾನ್ನಮನೇನೈವ ಚ ಪಾಪಿನಾ ।
ಕಿಂ ಚ ಭಕ್ಷಯಸೇ ಮೂಢ ಭವಿತಾದ್ಯ ಬುಭುಕ್ಷಿತಃ ॥ ೩೧ ॥
ಏವಂ ತಯೋಕ್ತಶ್ಚಂಡೋಽಸೌ ಬಭಾಷೇ ತಾಂ ಶಿವಪ್ರಿಯಃ ।
ಯಚ್ಛುನಾ ಭಕ್ಷಿತಂ ಚಾನ್ನಂ ತೇನಾಹಂ ಪರಿತೋಷಿತಃ ॥ ೩೨ ॥
ಕಿಮನೇನ ಶರೀರೇಣ ನಶ್ವರೇಣ ಗತಾಯುಷಾ ।
ಶರೀರಂ ದುರ್ಲಭಂ ಲೋಕೇ ಪೂಜ್ಯಂಚ ಕ್ಷಣಭಂಗುರಂ ॥ ೩೩ ॥
ಯೇ ಪುಷ್ಣಂತಿ ನಿಜಂ ದೇಹಂ ಸರ್ವಭಾವೇನ ಚಾಹತಾಃ ।
ಮೂಢಾಸ್ತೇ ಪಾಪಿನೋ ಜ್ಞೇಯಾಃ ಲೋಕದ್ವಯಬಹಿಷ್ಕೃತಾಃ ॥ ೩೪ ॥
ತಸ್ಮಾನ್ಮಾನಂ ಪರಿತ್ಯಜ್ಯ ಕ್ರೋಧಂ ಚ ದುರವಗ್ರಹಂ ।
ಸ್ವಸ್ಥಾ ಭವ ವಿಮರ್ಶೇನ ತತ್ತ್ವಬುದ್ಧ್ಯಾ ಸ್ಥಿರಾ ಭವ ॥ ೩೫ ॥
ಬೋಧಿತಾ ತೇನ ಚಂಡೀ ಸಾ ಪುಷ್ಕಸೇನ ತದಾ ಭೃಶಂ ।
ಜಾಗರಾದಿ ಚ ಸಂಪ್ರಾಪ್ತಃ ಪುಷ್ಕಸೋಽಪಿ ಚತುರ್ದಶೀಂ ॥ ೩೬ ॥
ಶಿವರಾತ್ರಿಪ್ರಸಂಗಾಚ್ಚ ಜಾಯತೇ ಯದ್ಧ್ಯಸಂಶಯಂ ।
ತಜ್ಜ್ಞಾನಂ ಪರಮಂ ಪ್ರಾಪ್ತಃ ಶಿವರಾತ್ರಿಪ್ರಸಂಗತಃ ॥ ೩೭ ॥

---

೩೧–೩೩. ಇಷ್ಟೆಯಲ್ಲದೆ, ಆ ಕಿರಾತಿಯು ಗಂಡನನ್ನು ಕುರಿತು ಎಲೋ ಮೂಢನೆ! ನಮ್ಮಿಬ್ಬರ ಅನ್ನವನ್ನು ಈ ನಾಯಿಯು ತಿಂದುಹಾಕಿತು. ನೀನೇನನ್ನು ಊಟಮಾಡುವೆ, ಇಂದು ನಿನಗೆ ಉಪವಾಸವೇ ಸರಿ? ಎಂದಳು. ಕಿರಾತ ಚಂಡನಾದರೋ ತನ್ನ ಹೆಂಡತಿಯಾಡಿದ ಈ ಮಾತುಗಳನ್ನು ಕೇಳಿ ಅವಳನ್ನು ಕುರಿತು—"ಎಲೌ ಪ್ರಿಯಳೇ! ಈಗ ನೀನು ನನಗಾಗಿ ತಂದಿದ್ದ ಅನ್ನವನ್ನು ಈ ನಾಯಿಯು ತಿಂದುದರಿಂದ ನಾನು ತೃಪ್ತನಾಗಿರುವೆನು. ಕೇಳು! ನಶ್ವರವೂ ಗತಾಯುಷ್ಯವೂ ಆದ ಈ ಶರೀರದಿಂದೇನು! ಲೋಕದಲ್ಲಿ ಈಗಿದ್ದು ನಾಳೆ ಬಿದ್ದುಹೋಗುವ ಈ ಶರೀರವನ್ನು ಎಲ್ಲರೂ ಪೂಜಿಸುತ್ತಾರೆ.

೩೪–೩೫. ಯಾರು ಸರ್ವಪ್ರಯತ್ನದಿಂದಲೂ ತಮ್ಮ ದೇಹವನ್ನು ಮಾತ್ರ ಪೋಷಿಸಿಕೊಳ್ಳುತ್ತಾರೆಯೋ ಅವರು ಕೇವಲ ತಿಳುವಳಿಕೆಯಿಲ್ಲದವರು. ಅವರೇ ಇಹಪರಲೋಕಗಳಿಂದ ಬಹಿಷ್ಕೃತರಾದ ಪಾಪಿಗಳೆಂದು ತಿಳಿಯತಕ್ಕದು. ಆದುದರಿಂದ ನೀನು ಈ ಅಹಂಕಾರವನ್ನೂ, ಕೋಪವನ್ನೂ, ಈ ಚಿಂತೆಯನ್ನೂ, ತೊರೆದು ನಿನ್ನಲ್ಲಿ ನೀನೇ ವಿಮರ್ಶಿಸಿಕೊಂಡು ತತ್ತ್ವಬುದ್ಧಿಯನ್ನು ಪಡೆದು ಸಮಾಧಾನಗೊಳ್ಳು" ಎಂದು ಹೇಳಿದನು.

೩೬–೩೭. ಎಲೈ ವಿಪ್ರರಿರಾ! ಈ ಪ್ರಕಾರವಾಗಿ ಆ ಕಿರಾತನು ತನ್ನ ಪತ್ನಿಯಾದ ಆ ಚಂಡಿಗೆ ಬಹಳ ತಿಳುವಳಿಕೆಯನ್ನು ಹೇಳಿದನು. ಆ ಚತುರ್ದಶಿಯ ದಿನ ಜಾಗರಣೆಯೇ ಮೊದಲಾದ ವ್ರತನಿಯಮಗಳನ್ನೂ ಹೊಂದಿದನು.

ಯಾಮದ್ವಯಂ ಚ ಸಂಜಾತಮಮಾವಾಸ್ಯಾಂತು ತತ್ರ ವೈ ।
ಆಗತಾಶ್ಚ ಗಣಾಸ್ತತ್ರ ಬಹವಃ ಶಿವಚೋದಿತಾಃ ॥ ೩೮ ॥
ವಿಮಾನಾನಿ ಬಹೂನ್ಯತ್ರ ಆಗತಾನಿ ತದಂತಿಕಂ ।
ದೃಷ್ಟ್ವಾನಿ ತೇನ ತಾನ್ಯೇವ ವಿಮಾನಾನಿ ಗಣಾಸ್ತಥಾ ॥ ೩೯ ॥
ಉವಾಚ ಪರಯಾ ಭಕ್ತ್ಯಾ ಪುಷ್ಕಸೋಽಪಿ ಚ ತಾನ್ಪ್ರತಿ ।
ಕಸ್ಮಾತ್ಸಮಾಗತಾ ಯೂಯಂ ಸರ್ವೇ ರುದ್ರಾಕ್ಷಧಾರಿಣಃ ॥ ೪೦ ॥
ವಿಮಾನಸ್ಥಾಶ್ಚ ಕೇಚಿಚ್ಚ ವೃಷಾರೂಢಾಶ್ಚ ಕೇಚನ ।
ಸರ್ವೇ ಸ್ಫಟಿಕಸಂಕಾಶಾಃ ಸರ್ವೇ ಚಂದ್ರಾರ್ಧಶೇಖರಾಃ ॥ ೪೧ ॥
ಕಪರ್ದಿನಶ್ಚರ್ಮಪರೀತವಾಸಸೋ
ಭುಜಂಗ ಭೋಗೈಃ ಕೃತಹಾರಭೂಷಣಾಃ ।
ಶ್ರಿಯಾನ್ವಿತಾ ರುದ್ರಸಮಾನವೀರ್ಯಾ
ಯಥಾತಥಂ ಭೋ ವದತಾತ್ಮನೋಚಿತಂ ॥ ೪೨ ॥
ಪುಷ್ಕಸೇನ ತದಾ ಪೃಷ್ಟಾ ಊಚುಃ ಸರ್ವೇ ಚ ಪಾರ್ಷದಾಃ ।
ರುದ್ರಸ್ಯ ದೇವದೇವಸ್ಯ ಸಂನಮ್ರಾಃ ಕಮಲೇಕ್ಷಣಾಃ ॥ ೪೩ ॥

---

೩೮. ಶಿವರಾತ್ರಿಯ ವ್ರತಾಚರಣೆಯಿಂದ ಯಾವ ಜ್ಞಾನವುಂಟಾಗುತ್ತದೆಯೋ ಆ ಜ್ಞಾನವನ್ನೂ ಆ ವ್ಯಾಧನು ಪಡೆದನು. ಅದೇ ನದೀ ತೀರದಲ್ಲಿಯೇ ಅಮಾವಾಸ್ಯೆಯ ದಿನದಲ್ಲಿ ಎರಡು ಯಾಮುಗಳೂ ಕಳೆದುವು. ಆಗ ಶಿವನಿಂದ ಪ್ರೇರಿತರಾದ ಶಿವಗಣಗಳು ಆ ಪ್ರದೇಶಕ್ಕೈತಂದರು.

೩೯–೪೨. ಇಷ್ಟೆಯಲ್ಲದೆ, ಅನೇಕ ವಿಮಾನಗಳೂ ಸಹ ಆ ಕಿರಾತನ ಬಳಿಗೆ ಬಂದುವು. ಆಗಲಾ ಕಿರಾತನು ಆ ವಿಮಾನಗಳನ್ನೂ, ಶಿವಗಣಗಳನ್ನೂ ನೋಡಿ ಅವರನ್ನು ಕುರಿತು ಪರಮಭಕ್ತಿಯಿಂದ ಈ ಪ್ರಕಾರ ಹೇಳಿದನು. "ಎಲೈ! ರುದ್ರಾಕ್ಷಮಾಲೆಗಳನ್ನು ಧರಿಸಿರುವ ನೀವು ಇಲ್ಲಿಗೇತಕ್ಕಾಗಿ ಬಂದಿರುವಿರಿ? ನಿಮ್ಮಲ್ಲಿ ಕೆಲವರು ವಿಮಾನಾರೂಢರಾಗಿರುವಿರಿ. ಕೆಲವರು ವೃಷಭಾರೂಢರಾಗಿರುತ್ತೀರಿ. ನಿಮ್ಮಲ್ಲಿ ಸಮಸ್ತರೂ ಸ್ಫಟಿಕಕಾಂತಿಯನ್ನೊಳಕೊಂಡು, ತಲೆಯಲ್ಲಿ ಅರ್ಧಚಂದ್ರನನ್ನು ಧರಿಸಿ ಕಪರ್ದಿಗಳೂ, ಗಜಚರ್ಮಾಂಬರಧರರೂ, ಹಾವುಗಳನ್ನೇ ಮಾಲಾಭರಣಗಳನ್ನಾಗಿ ಧರಿಸಿ, ಕಾಂತಿಸಂಪನ್ನರಾಗಿ, ಸಾಕ್ಷಾತ್ ರುದ್ರನಿಗೆ ಸಮಾನವಾದ ವೀರ್ಯವುಳ್ಳವರಾಗಿರುತ್ತೀರಿ. ನೀವಾರೆಂಬುದನ್ನು ಯಥಾರ್ಥವಾಗಿ ನನಗೆ ತಿಳಿಸಿರಿ."

೪೩. ಕಿರಾತನ ಈ ಮಾತುಗಳನ್ನು ಕೇಳಿ ದೇವದೇವನಾದ ರುದ್ರನ ಕಿಂಕರರೂ, ಕಮಲೇಕ್ಷಣರೂ ಆದ ಆ ಗಣಗಳೆಲ್ಲರೂ ಅವನನ್ನು ಕುರಿತು ಹೇಳಿದರು.

ಗಣಾ ಊಚುಃ:—

ಪ್ರೇಷಿತಾಸ್ಮೋ ವಯಂ ಚಂಡ ಶಿವೇನ ಪರಮೇಷ್ಠಿನಾ ।
ಆಗಚ್ಛ ತ್ವರಿತೋ ಭೂತ್ವಾ ಸಸ್ತ್ರೀಕೋ ಯಾನಮಾರುಹ ॥ ೪೪ ॥
ಲಿಂಗಾರ್ಚನಂ ಕೃತಂ ಯಚ್ಚ ತ್ವಯಾ ರಾತ್ರೌ ಶಿವಸ್ಯ ಚ ।
ತೇನ ಕರ್ಮವಿಪಾಕೇನ ಪ್ರಾಪ್ತೋಽಸಿ ಶಿವಸನ್ನಿಧಿಂ ॥ ೪೫ ॥
ತಥೋಕ್ತೋ ವೀರಭದ್ರೇಣ ಉವಾಚ ಪ್ರಹಸನ್ನಿವ ।
ಪುಷ್ಕಸೋಽಪಿ ಸ್ವಯಾ ಬುದ್ಧ್ಯಾ ಪ್ರಸ್ತಾವಸದೃಶಂ ವಚಃ ॥ ೪೬ ॥

ಪುಷ್ಕಸ ಉವಾಚ:—

ಕಿಂ ಮಯಾ ಕೃತಮದ್ಯೈವ ಪಾಪಿನಾ ಹಿಂಸಕೇನ ಚ ।
ಮೃಗಯಾರಸಿಕೇನೈವ ಪುಷ್ಕಸೇನ ದುರಾತ್ಮನಾ ॥ ೪೭ ॥
ಪಾಪಾಚಾರೋ ಹ್ಯಹಂ ನಿತ್ಯಂ ಕಥಂ ಸ್ವರ್ಗಂ ವ್ರಜಾಮ್ಯಹಂ ।
ಕಥಂ ಲಿಂಗಾರ್ಚನಮಿದಂ ಕೃತಮಸ್ತಿ ತದುಚ್ಯತಾಂ ॥ ೪೮ ॥
ಪರಂ ಕೌತುಕಮಾಪನ್ನಃ ಪೃಚ್ಛಾಮಿ ತ್ವಾಂ ಯಥಾತಥಂ ।
ಕಥಯಸ್ವ ಮಹಾಭಾಗ ಸರ್ವಂ ಚೈವ ಯಥಾ ವಿಧಿ ॥ ೪೯ ॥

---

೪೪. ಶಿವಗಣಗಳು ಹೇಳುತ್ತಾರೆ:—"ಎಲೈ ಕಿರಾತ ಚಂಡನೇ! ಪರಮಾತ್ಮನಾದ ಶಿವನು ನಮ್ಮನ್ನಿಲ್ಲಿಗೆ ಕಳುಹಿಸಿರುವನು. ನೀನು ಜಾಗ್ರತೆಯಾಗಿ ನಿನ್ನ ಹೆಂಡತಿಯೊಡಗೂಡಿ ಈ ವಿಮಾನವನ್ನೇರು.

೪೫. ನೀನು ನಿನ್ನಿನಿರುಳಲ್ಲಿ ಶಿವಲಿಂಗಾರ್ಚನೆಯನ್ನು ಮಾಡಿದ ಸತ್ಕರ್ಮಾನುಷ್ಠಾನದ ಪರಿಣಾಮದಿಂದ ಶಿವಸಾನ್ನಿಧ್ಯವನ್ನು ಪಡೆದಿರುತ್ತೀಯೆ."

೪೬. ಈ ರೀತಿ ಗಣಾಧಿಪನಾದ ವೀರಭದ್ರನು ಸುಪ್ರಸನ್ನನಾಗಿ ನಸುನಗುತ್ತ ಹೇಳಿದುದನ್ನು ಕೇಳಿ ಆ ಕಿರಾತನು ತನ್ನ ಸ್ವಂತಬುದ್ಧಿಯಿಂದಲೇ ಆಲೋಚಿಸಿ ಆ ಸಮಯಕ್ಕನುಗುಣವಾಗಿ ಇಂತೆಂದನು.

೪೭–೪೮. ಕಿರಾತನು ಹೇಳುತ್ತಾನೆ:—" ಎಲೈ ಶಿವಕಿಂಕರರೇ! ಕೇವಲ ವ್ಯಾಧನೂ, ಪಾಪಿಷ್ಠನೂ, ಭೂತಹಿಂಸಕನೂ, ದುರಾತ್ಮನೂ ಆದ ನಾನು ಈಗ ಅಂತಹ ಪುಣ್ಯವನ್ನೇನುಮಾಡಿದೆನು? ನಾನು ನಿರಂತರವೂ ಪಾಪಗಳನ್ನೇ ಮಾಡುವವನು! ಇಂತಹ ನಾನು ಶಿವಲಿಂಗಾರ್ಚನೆಯನ್ನು ಮಾಡಿದುದೆಂತು? ಈ ವಿಷಯವನ್ನು ಹೇಳಿರಿ.

೪೯. ಅಯ್ಯಾ ನನಗೆ ಈ ವಿಚಾರವನ್ನು ಕೇಳಲು ಬಹಳ ಕುತೂಹಲವಾಗಿದೆಯಾಗಿ ನಿನ್ನನ್ನು ಕೇಳುತ್ತಿರುವೆನು. ಓ ಪುಣ್ಯಶಾಲಿಯೇ! ಈ ವಿಷಯವನ್ನು ಯಥಾರ್ಥವಾಗಿ ನನಗೆ ಅಪ್ಪಣೆಕೊಡಿಸು."

ಇತ್ಯೇವಂ ಪೃಚ್ಛತಸ್ತಸ್ಯ ಪುಷ್ಕಸಸ್ಯ ಯಥಾವಿಧಿ ।
ಕಥಯಾಮಾಸ ತತ್ಸರ್ವಂ ಶಿವಧರ್ಮಂ ಮುದಾನ್ವಿತಃ ॥ ೫೦ ॥

ವೀರಭದ್ರ ಉವಾಚ :—

ದೇವದೇವೋ ಮಹಾದೇವೋ ದೇವಾನಾಂ ಪತಿರೀಶ್ವರಃ ।
ಪರಿತುಷ್ಟೋಽದ್ಯ ಹೇ ಚಂಡ ಸ ಮಹೇಶ ಉಮಾಪತಿಃ ॥ ೫೧ ॥
ಪ್ರಾಸಂಗಿಕತಯಾ ಮಾಘೇ ಕೃತಂ ಲಿಂಗಾರ್ಚನಂ ತ್ವಯಾ ।
ಶಿವತುಷ್ಟಿಕರಂ ಚಾದ್ಯ ಪೂತೋಽಸಿ ತ್ವಂ ನ ಸಂಶಯಃ ।
ಶಿವರಾತ್ರ್ಯಾಂ ಪ್ರಸಂಗೇನ ಕೃತಮರ್ಚನಮೇವ ಚ ॥ ೫೨ ॥
ಕೋಲಂ ನಿರೀಕ್ಷಮಾಣೇನ ಬಿಲ್ವಪತ್ರಾಣಿ ಚೈವ ಹಿ ।
ಛೇದಿತಾನಿ ತ್ವಯಾ ಚಂಡ ಪತಿತಾನಿ ತದೈವ ಹಿ ।
ಲಿಂಗಸ್ಯ ಮಸ್ತಕೇ ತಾನಿ ತೇನ ತ್ವಂ ಸುಕೃತೀ ಪ್ರಭೋ ॥ ೫೩ ॥
ತತಶ್ಚ ಜಾಗರೋ ಜಾತೋ ಮಹಾನ್ವೃಕ್ಷೋಪರಿ ಧ್ರುವಂ ।
ತೇನೈವ ಜಾಗರೇಣೈವ ತುತೋಷ ಜಗದೀಶ್ವರಃ ॥ ೫೪ ॥

---

೫೦. ಈ ರೀತಿ ಕೇಳಲು ವೀರಭದ್ರನು ಸಂತೋಷಭರಿತನಾಗಿ ಆ ಕಿರಾತನಿಗೆ ಶಿವಧರ್ಮವೆಲ್ಲವನ್ನೂ ಹೇಳಿದನು.

೫೧. ವೀರಭದ್ರನು ಹೇಳುತ್ತಾನೆ:—" ಎಲೈ ಚಂಡನೇ! ದೇವತೆಗಳಿಗೆಲ್ಲ ಆದಿದೇವನಾಗಿ, ಮಹಾದೇವನೂ, ದೇವಪತಿಯೂ, ಪರಮೇಶ್ವರನೂ, ಉಮಾಪತಿಯೂ ಆದ ಮಹೇಶ್ವರನು ನಿನ್ನ ವಿಷಯದಲ್ಲಿ ಸಂತೋಷಗೊಂಡಿರುವನು.

೫೨. ಎಲೈ ಭಕ್ತನೇ! ಬೇಟೆಯ ಪ್ರಸಂಗದಿಂದ ಮಾಘಮಾಸದ ಕೃಷ್ಣಪಕ್ಷ ಚತುರ್ದಶಿಯ ದಿನದಂದು ನೀನು ಪರಶಿವನಿಗೆ ಅತ್ಯಂತ ಸಂತೋಷಕರವಾದ ಲಿಂಗಾರ್ಚನೆಯನ್ನೆಸಗಿರುವೆಯಾಗಿ ನೀನು ಸಮಸ್ತ ಪಾಪಗಳಿಂದಲೂ ಬಿಡುಗಡೆ ಹೊಂದಿ ಪರಿಶುದ್ಧನಾಗಿರುತ್ತೀಯೆ. ಇದರಲ್ಲಿ ಸಂಶಯವಿಲ್ಲವು. ಎಲೈ ಕಿರಾತನೆ ಶಿವರಾತ್ರಿಯಾದ ಆ ಮಹಾದಿನ ನೀನು ಪ್ರಸಂಗವಶದಿಂದ ಶಿವನನ್ನರ್ಚಿಸಿದುದೆಂತೆಂಬುದನ್ನು ಕೇಳು?

೫೩–೫೪. ನೀನು ಬಿಲ್ವಪತ್ರೆಯ ಮರವನ್ನೇರಿ ಕುಳಿತು, ಹಂದಿಯು ಬರವನ್ನೇ ನಿರೀಕ್ಷಿಸುತ್ತ ಆ ಮರದ ಎಲೆಗಳನ್ನು ಕತ್ತರಿಸಿ ಕೆಡವಿದೆಯಷ್ಟೆ, ಅವುಗಳೆಲ್ಲವೂ ಆಗಲೇ ಶಿವಲಿಂಗದ ಮಸ್ತಕದ ಮೇಲೆ ಬಿದ್ದುವು. ಅದರಿಂದ ನೀನು ಪುಣ್ಯಶಾಲಿಯಾದೆ. ಇದಾದಮೇಲೆ ನಿನಗೆ ಅದೇ ಬಿಲ್ವವೃಕ್ಷದ ಮೇಲೆ ಜಾಗರಣೆಯೂ ನಡೆಯಿತು. ಆ ಜಾಗರಣೆಯಿಂದಲೇ ಜಗದೀಶ್ವರನಾದ ಶಂಕರನು ಸಂತುಷ್ಟನಾದನು.

ಛಲೇನೈವ ಮಹಾಭಾಗ ಕೋಲಸಂದರ್ಶನೇನ ಹಿ ।
ಶಿವರಾತ್ರಿದಿನೇ ಚಾತ್ರ ಸ್ವಪ್ನಸ್ತೇ ನ ಚ ಯೋಷಿತಃ ॥ ೫೫ ॥
ತೇನೋಪವಾಸೇನ ಚ ಜಾಗರೇಣ
ತುಷ್ಟೋಽಹ್ಯಸೌ ದೇವವರೋ ಮಹಾತ್ಮಾ ।
ತವ ಪ್ರಸಾದಾಯ ಮಹಾನುಭಾವೋ
ದದಾತಿ ಸರ್ವಾನ್ವರದೋ ಮಹಾಂಶ್ಚ ॥ ೫೬ ॥
ಏವಮುಕ್ತಸ್ತದಾ ತೇನ ವೀರಭದ್ರೇಣ ಧೀಮತಾ ।
ಪುಷ್ಕಸೋಽಪಿ ವಿಮಾನಾಗ್ರ್ಯಮಾರುರೋಹ ಚ ಪಶ್ಯತಾಂ ॥ ೫೭ ॥
ಗಣಾನಾಂ ದೇವತಾನಾಂ ಚ ಸರ್ವೇಷಾಂ ಪ್ರಾಣಿನಾಮಪಿ ।
ತದಾ ದುಂದಭಯೋ ನೇದುರ್ಭೇರ್ಯಸ್ತೂರ್ಯಾಣ್ಯನೇಕಶಃ ॥ ೫೮ ॥
ವೀಣಾವೇಣುಮೃದಂಗಾನಿ ತಸ್ಯ ಚಾಗ್ರೇ ಗತಾನಿ ಚ ।
ಜಗುರ್ಗಂಧರ್ವಪತಯೋ ನನೃತುಶ್ಚಾಪ್ಸರೋಗಣಾಃ ॥ ೫೯ ॥
ವಿದ್ಯಾಧರಗಣಾಃ ಸರ್ವೇ ತುಷ್ಟುವುಃ ಸಿದ್ಧಚಾರಣಾಃ ।
ಚಾಮರೈರ್ವೀಜ್ಯಮಾನೋ ಹಿ ಚ್ಛತ್ರೈಶ್ಚ ವಿವಿಧೈರಪಿ ।
ಮಹೋತ್ಸವೇನ ಮಹತಾ ಆನೀತೋ ಗಂಧಮಾದನಂ ॥ ೬೦ ॥

---

೫೫–೫೬. ಓ ಮಹಾಭಾಗ! ಹಂದಿಯು ಯಾವಾಗ ಬರುವುದೋ ಎಂಬ ನಿರೀಕ್ಷಣೆಯಲ್ಲಿ ತೊಡಗಿದ್ದ ನೀನು ಆ ಶಿವರಾತ್ರಿಯ ದಿನ ಸ್ವಪ್ನದಲ್ಲಿಯೂ ಹೆಂಗಸನ್ನು ಕಾಣಲಿಲ್ಲ. ಉಪವಾಸದಿಂದಲೂ, ಜಾಗರಣೆಯಿಂದಲೂ, ಮಹಾತ್ಮನಾದ ಆ ದೇವಶ್ರೇಷ್ಠನು ಸಂತೋಷಗೊಂಡಿರುವನು. ಆದುದರಿಂದಲೇ ಮಹಾನುಭಾವನೂ, ವರಪ್ರದಾಯಕನೂ ಆದ ಪರಮೇಶ್ವರನು ನಿನ್ನನ್ನು ಅನುಗ್ರಹಿಸಲೋಸುಗ ನಿನಗೆ ಸಮಸ್ತ ಇಷ್ಟಾರ್ಥಗಳನ್ನೂ ದಯಪಾಲಿಸಿರುತ್ತಾನೆ.''

೫೭—೫೮. ಮಹಾ ಬುದ್ಧಿಶಾಲಿಯಾದ ವೀರಭದ್ರನಿಂತು ನುಡಿಯಲು, ಆ ವ್ಯಾಧನು ಅಲ್ಲಿದ್ದ ಶಿವಕಿಂಕರರೆಲ್ಲರೂ ನೋಡುತ್ತಿರುವಂತೆಯೇ ದೇವವಿಮಾನವನ್ನೇರಿದನು. ಈ ರೀತಿ ಅವನು ವಿಮಾನಾರೂಢನಾದುದನ್ನು ಶಿವಕಿಂಕರರೂ, ದೇವತೆಗಳೂ, ಸಮಸ್ತಪ್ರಾಣಿಗಳೂ ಕಂಡರು. ಆ ಸಮಯದಲ್ಲಿ ಅಸಂಖ್ಯಾತವಾದ ದುಂದುಭಿಗಳೂ, ಭೇರಿ ತುತ್ತೂರಿ ಮೊದಲಾದ ವಾದ್ಯಗಳೂ ಭೋರ್ಗರೆದವು.

೫೯–೬೩. ಆ ಶಿವಭಕ್ತನ ಮುಂಗಡೆ ವೀಣೆ ಕೊಳಲು ಮೃದಂಗ ಮೊದಲಾದ ವಾದ್ಯಗಳು ಹೊರಟವು. ಗಂಧರ್ವರಾಜರೆಲ್ಲರೂ ಗಾಯನವನ್ನು ಮಾಡಿದರು. ಅಪ್ಸರ ಸಮೂಹವೆಲ್ಲವೂ ನರ್ತಿಸಿದವು. ವಿದ್ಯಾಧರ ಸಮೂಹಗಳೂ, ಸಿದ್ಧರೂ, ಚಾರಣರೂ ಆ ಭಕ್ತನನ್ನು ಬಗೆಬಗೆಯ ಚಾಮರಗಳಿಂದ ಬೀಸಿ ಶ್ವೇತಚ್ಛತ್ರಗಳನ್ನು ಹಿಡಿದು ಓಲೈಸಿ ಸಂತೋಷಗೊಳಿಸಿದರು. ಹೀಗೆ ಬಹ

**ಶಿವಸಾನ್ನಿಧ್ಯಮಗಮಚ್ಚಂಡೋಽಸೌ ತೇನ ಕರ್ಮಣಾ ।**
**ಶಿವರಾತ್ರ್ಯುಪವಾಸೇನ ಪರಂ ಸ್ಥಾನಂ ಸಮಾಗಮತ್ । ॥ ೬೧ ॥**
**ಪುಷ್ಕಸೋಽಪಿ ತಥಾ ಪ್ರಾಪ್ತಃ ಪ್ರಸಂಗೇನ ಸದಾಶಿವಂ ।**
**ಕಿಂ ಪುನಃ ಶ್ರದ್ಧಯಾ ಯುಕ್ತಾಃ ಶಿವಾಯ ಪರಮಾತ್ಮನೇ ॥ ೬೨ ॥**
**ಪುಷ್ಪಾದಿಕಂ ಫಲಂ ಗಂಧಂ ತಾಂಬೂಲಂ ಭಕ್ಷ್ಯಮೃದ್ಧಿಮತ್ ।**
**ಯೇ ಪ್ರಯಚ್ಛಂತಿ ಲೋಕೇಽಸ್ಮಿನ್ರುದ್ರಾಸ್ತೇ ನಾತ್ರ ಸಂಶಯಃ ॥ ೬೩ ॥**
**ಚಂಡೇನ ವೈ ಪುಷ್ಕಸೇನ ಸಫಲಂ ತಸ್ಯ ಚಾಭವತ್ ।**
**ಪ್ರಸಂಗೇನಾಪಿ ತೇನೈವ ಕೃತಂ ತಚ್ಚಾಲ್ಪಬುದ್ಧಿನಾ ॥ ೬೪ ॥**

**ಋಷಯ ಊಚುಃ:—**

**ಕಿಂ ಫಲಂ ತಸ್ಯ ಚೋದ್ದೇಶಃ ಕೇನ ಚೈವ ಪುರಾಕೃತಂ ।**
**ಕಸ್ಮಾದ್ವ್ರತಮಿದಂ ಜಾತಂ ಕೃತಂ ಕೇನ ಪುರಾ ವಿಭೋ ॥ ೬೫ ॥**

**ಲೋಮಶ ಉವಾಚ:—**

**ಯದಾ ಸೃಷ್ಟಂ ಜಗತ್ಸರ್ವಂ ಬ್ರಹ್ಮಣಾ ಪರಮೇಷ್ಠಿನಾ ।**
**ಕಾಲಚಕ್ರಂ ತದಾ ಜಾತಂ ಪುರಾ ರಾಶಿಸಮನ್ವಿತಂ ॥ ೬೬ ॥**

---

ವಿಜೃಂಭಣೆಯ ಉತ್ಸವದಿಂದ ಆ ಶಿವಭಕ್ತನು ಗಂಧಮಾದನ ಪರ್ವತಕ್ಕೆ ಕರೆತರಲಾದನು. ಎಲೈ ವಿಪ್ರರೇ ! ಈ ಪ್ರಕಾರವಾಗಿ ಆ ಕಿರಾತನೂ ಸಹ ಪ್ರಸಂಗ ವಶದಿಂದೆಸಗಿದ ಶಿವರಾತ್ರಿಯ ವ್ರತೋಪವಾಸಗಳಿಂದ ಶಿವಲಿಂಗಾರ್ಚನೆಯನ್ನು ಮಾಡಿದುದರ ಫಲವಾಗಿ ಶಿವಸಾನ್ನಿಧ್ಯವನ್ನು ಹೊಂದಿ ಸರ್ವೋತ್ತಮವಾದ ಪದವಿಯನ್ನು ಪಡೆದನು. ಎಂದಬಳಿಕ ಪರಮಾತ್ಮನಾದ ಆ ಪರಶಿವನನ್ನು ಶ್ರದ್ಧೆಯಿಂದ ಗಂಧ ಪುಷ್ಪ ತಾಂಬೂಲ ನೈವೇದ್ಯಾದಿಗಳನ್ನು ಅತಿಶಯವಾಗಿ ಸಮರ್ಪಿಸಿ ಪೂಜಿಸುವ ಭಕ್ತರ ವಿಷಯದಲ್ಲಿ ಹೇಳತಕ್ಕುದೇನು ? ಈ ರೀತಿ ಶಿವನಿಗೆ ಪೂಜಾದಿಗಳನ್ನು ಸಲ್ಲಿಸುವವರು ಸಾಕ್ಷಾತ್ ರುದ್ರರೆಂಬುದರಲ್ಲಿ ಸಂದೇಹವಿಲ್ಲವು.

೬೪. ಹೀಗೆ ಅಲ್ಪಬುದ್ಧಿಯಾದ ಆ ಕಿರಾತ ಚಂಡನು ಪ್ರಸಂಗವಶದಿಂದ ಎಸಗಿದ ಶಿವರಾತ್ರಿಯ ಪೂಜೆಯಿಂದ ಅವನಿಗೆ ಸತ್ಫಲವುಂಟಾಯಿತು.

೬೫. ಋಷಿಗಳು ಕೇಳುತ್ತಾರೆ:—"ಎಲೈ ಸೂತಪುರಾಣಿಕನೆ! ಈ ಶಿವ ರಾತ್ರಿಯ ವ್ರತಕ್ಕೆ ಫಲವೇನು? ಇದನ್ನುದ್ದೇಶಿಸಿದವರಾರು? ಪೂರ್ವದಲ್ಲಿ ಈ ವ್ರತವನ್ನಾರುಮಾಡಿದರು? ಯಾರಿಂದ ಈ ವ್ರತವು ಹುಟ್ಟಿತು? ಇದನ್ನು ಮೊದಲುಮಾಡಿದವರಾರು? ಎಂಬುದನ್ನು ದಯವಿಟ್ಟು ಹೇಳುವವನಾಗು."

೬೬. ಲೋಮಶನು ಹೇಳುತ್ತಾನೆ:—ಎಲೈ ಶೌನಕಾದಿ ಮಹರ್ಷಿಗಳಿರಾ! ಬ್ರಹ್ಮನು ಈ ಜಗತ್ತೆಲ್ಲವನ್ನೂ ನಿರ್ಮಾಣಮಾಡಿದ ಸಮಯದಲ್ಲಿ ರಾಶಿಗಳೊಡ ಗೂಡಿದ ಕಾಲಚಕ್ರವು ಹುಟ್ಟಿತು.

ದ್ವಾದಶ ರಾಶಯಸ್ತತ್ರ ನಕ್ಷತ್ರಾಣಿ ತಥೈವ ಚ ।
ಸಪ್ತವಿಂಶತಿಸಂಖ್ಯಾನಿ ಮುಖ್ಯಾನಿ ಕಾರ್ಯಸಿದ್ಧಯೇ ॥ ೬೭ ॥
ಏಭಿಃ ಸರ್ವಂ ಪ್ರಚಂಡಂ ಚ ರಾಶೀಭಿರುಡುಭಿಸ್ತದಾ ।
ಕಾಲಚಕ್ರಾನ್ವಿತಃ ಕಾಲಃ ಕ್ರೀಡಯನ್ಸೃಜತೇ ಜಗತ್ ॥ ೬೮ ॥
ಆಬ್ರಹ್ಮಸ್ತಂಬಪರ್ಯಂತಂ ಸೃಜತ್ಯವತಿ ಹಂತಿ ಚ ।
ನಿಬದ್ಧಮಸ್ತಿ ತೇನೈವ ಕಾಲೇನೈಕೇನ ಭೋ ದ್ವಿಜಾಃ ॥ ೬೯ ॥
ಕಾಲೋ ಹಿ ಬಲವಾಂಲ್ಲೋಕೇ ಏಕ ಏವ ನ ಚಾಪರಃ ।
ತಸ್ಮಾತ್ಕಾಲಾತ್ಮಕಂ ಸರ್ವಮಿದಂ ನಾಸ್ತ್ಯತ್ರ ಸಂಶಯಃ ॥ ೭೦ ॥
ಆದೌ ಕಾಲಃ ಕಾಲನಾಚ್ಚ ಲೋಕನಾಯಕನಾಯಕಃ ।
ತತೋ ಲೋಕೋ ಹಿ ಸಂಜಾತಃ ಸೃಷ್ಟಿಶ್ಚ ತದನಂತರಂ ॥ ೭೧ ॥
ಸೃಷ್ಟೇರ್ಲವೋ ಹಿ ಸಂಜಾತೋ ಲವಾಚ್ಚ ಕ್ಷಣಮೇವ ಚ ।
ಕ್ಷಣಾಚ್ಚ ನಿಮಿಷಂ ಜಾತಂ ಪ್ರಾಣಿನಾಂ ಹಿ ನಿರಂತರಂ ॥ ೭೨ ॥
ನಿಮಿಷಾಣಾಂ ಚ ಷಷ್ಟ್ಯಾ ವೈ ಪಲ ಇತ್ಯಭಿಧೀಯತೇ ।
ಪಂಚದಶ್ಯಾ ಅಹೋರಾತ್ರ್ಯೈಃ ಪಕ್ಷ ಇತ್ಯಭಿಧೀಯತೇ ॥ ೭೩ ॥
ಪಕ್ಷಾಭ್ಯಾಂ ಮಾಸ ಏವ ಸ್ಯಾನ್ಮಾಸಾ ದ್ವಾದಶ ವತ್ಸರಃ ॥ ೭೪ ॥

---

೬೭–೬೮. ಅದರಲ್ಲಿ ಸಮಸ್ತ ಮಾನವರ ಕಾರ್ಯಸಿದ್ಧಿಗಾಗಿ ಹನ್ನೆರಡು ರಾಶಿಗಳೂ, ಬಹು ಮುಖ್ಯವಾದ ಇಪ್ಪತ್ತೇಳು ನಕ್ಷತ್ರಗಳೂ ಇರುತ್ತವೆ. ಕಾಲ ಪುರುಷನು ಪ್ರಚಂಡವಾದ ಈ ರಾಶಿಗಳಿಂದಲೂ ನಕ್ಷತ್ರಗಳಿಂದಲೂ ಕೂಡಿದ ಕಾಲಚಕ್ರವನ್ನು ಹೊಂದಿ ಕ್ರೀಡಿಸುತ್ತ ಜಗತ್ತನ್ನು ನಿರ್ಮಾಣ ಮಾಡುವನು.

೬೯–೭೦. ಈ ಕಾಲಚಕ್ರದ ಸಹಾಯದಿಂದಲೇ ಅವನು ಜಗತ್ತನ್ನು ಸಂರಕ್ಷಿಸುವನು. ಎಲೈ ವಿಪ್ರರೇ! ಜಗತ್ತೆಲ್ಲವೂ ಈ ಕಾಲಚಕ್ರದ ಕಟ್ಟಿಗೇ ಒಳಪಟ್ಟಿರುತ್ತದೆ. ಲೋಕದಲ್ಲಿ ಕಾಲಪುರುಷನೊಬ್ಬನೇ ಮಹಾಬಲಾಢ್ಯನು. ಅವನಿಗಿಂತಲೂ ಬಲಾಢ್ಯರಾದವರು ಮತ್ತಾರೂ ಇಲ್ಲವು; ಆದುದರಿಂದ ಈ ಸಮಸ್ತವೂ ಕಾಲಸ್ವರೂಪವಾಗಿಯೇ ಇರುವುದೆಂಬುದರಲ್ಲಿ ಸಂದೇಹವಿಲ್ಲ.

೭೧–೭೨. ಸೃಷ್ಟಿಯ ಮೊದಲಲ್ಲಿ ಕಾಲಪುರುಷನೂ, ಅವನಾದಮೇಲೆ ಲೋಕನಾಯಕನೂ, ಆಮೇಲೆ ಈ ಲೋಕಗಳೂ ಹುಟ್ಟಿದವು. ಇದಾದ ಬಳಿಕ ಭೂತಸೃಷ್ಟಿ. ಈ ಸೃಷ್ಟಿಯಿಂದ ಲಯವೂ ಅದರಿಂದ ಕ್ಷಣವೂ ಅದರಿಂದ ನಿಮಿಷವೂ ಪ್ರಾಣಿಗಳ ಪರಿವೆಗಾಗಿ ಹುಟ್ಟಿದವು.

೭೩–೭೪. ಅರವತ್ತು ನಿಮಿಷಗಳಿಗೆ ಪಲವೆಂದು ಹೇಳಲ್ಪಡುತ್ತದೆ. ಹದಿನೈದು ಹಗಲಿರುಳುಗಳು ಪಕ್ಷವೆನಿಸುವುದು; ಎರಡು ಪಕ್ಷಗಳಿಗೆ ಒಂದು ತಿಂಗಳು. ಹನ್ನೆರಡು ತಿಂಗಳುಗಳಿಗೆ ಒಂದು ಸಂವತ್ಸರವು.

**ತಂ ಕಾಲಂ ಜ್ಞಾತುಕಾಮೇನ ಕಾರ್ಯಂ ಜ್ಞಾನಂ ವಿಚಕ್ಷಣೈಃ ।**
**ಪ್ರತಿಪದ್ದಿನಮಾರಭ್ಯ ಪೌರ್ಣಮಾಸ್ಯಂತಮೇವಚ ।**
**ಪಕ್ಷಪೂರ್ಣೋಹಿ ಯಸ್ಮಾಚ್ಚ ಪೂರ್ಣಿಮೇತ್ಯಭಿಧೀಯತೇ ॥ ೭೫ ॥**
**ಪೂರ್ಣಚಂದ್ರಮಸೀ ಯಾತು ಸಾ ಪೂರ್ಣಾ ದೇವತಾಪ್ರಿಯಾ ।**
**ನಷ್ಟಸ್ತು ಚಂದ್ರೋ ಯಸ್ಯಾಂ ವಾ ಅಮಾ ಸಾ ಕಥಿತಾ ಬುಧೈಃ ॥ ೭೬ ॥**
**ಅಗ್ನಿಷ್ವಾತ್ತಾದಿ ಪಿತೄಣಾಂ ಪ್ರಿಯಾತೀವ ಬಭೂವ ಹ ।**
**ತ್ರಿಂಶದ್ದಿನಾನಿ ಹ್ಯೇತಾನಿ ಪುಣ್ಯಕಾಲಯುತಾನಿಚ ।**
**ತೇಷಾಂ ಮಧ್ಯೇ ವಿಶೇಷೋ ಯಸ್ತಂ ಶೃಣುಧ್ವಂ ದ್ವಿಜೋತ್ತಮಾಃ ॥**
**ಯೋಗಾನಾಂ ವಾ ವ್ಯತೀಪಾತ ಊಡೂನಾಂ ಶ್ರವಣಸ್ತಥಾ ।**
**ಅಮಾವಾಸ್ಯಾ ತಿಥೀನಾಂಚ ಪೂರ್ಣಿಮಾ ವೈ ತಥೈವ ಚ ॥ ೭೮ ॥**
**ಸಂಕ್ರಾಂತಯಸ್ತಥಾ ಜ್ಞೇಯಾಃ ಪವಿತ್ರಾ ದಾನಕರ್ಮಣಿ ।**
**ತಥಾಷ್ಟಮೀ ಪ್ರಿಯಾ ಶಂಭೋರ್ಗಣೇಶಸ್ಯ ಚತುರ್ಥಿಕಾ ॥ ೭೯ ॥**
**ಪಂಚಮೀ ನಾಗರಾಜಸ್ಯ ಕುಮಾರಸ್ಯಚ ಷಷ್ಠಿಕಾ ।**
**ಭಾನೋಶ್ಚ ಸಪ್ತಮೀ ಜ್ಞೇಯಾ ನವಮೀ ಚಂಡಿಕಾಪ್ರಿಯಾ ॥ ೮೦ ॥**

---

೭೫. ಈ ಕಾಲವನ್ನು ತಿಳಿಯಬಯಸುವ ವಿಚಕ್ಷಣರು ಜ್ಯೋತಿಶ್ಶಾಸ್ತ್ರದ ಜ್ಞಾನವನ್ನು ಪಡೆಯಬೇಕು. ಪಾಡ್ಯದ ಮೊದಲುಗೊಂಡು ಹುಣ್ಣಿಮೆಯ ವರೆಗೂ ಒಂದು ಪಕ್ಷವು ಪೂರ್ಣವಾಗುತ್ತದೆ. ಆದುದರಿಂದಲೇ ಆ ಪಕ್ಷದ ಕಡೆಯದಿನಕ್ಕೆ ಪೂರ್ಣಿಮೆ ಎಂದು ಹೇಳಲಾಗುತ್ತದೆ.

೭೬–೭೭. ಸಂಪೂರ್ಣವಾದ ಹುಣ್ಣಿಮೆಯು ದೇವತೆಗಳೆಲ್ಲರಿಗೂ ಪ್ರಿಯ ವಾದುದು. ಯಾವ ದಿನದಲ್ಲಿ ಚಂದ್ರನಿರುವುದಿಲ್ಲವೋ ಆ ದಿನವೇ ಅಮಾವಾಸ್ಯೆ ಎಂದು ತಿಳಿದವರು ಹೇಳುತ್ತಾರೆ. ಇದು ಅಗ್ನಿಯ ಮೂಲಕ ಶ್ರಾದ್ಧಾದಿ ಕರ್ಮಗಳಿಗೆ ಶ್ರೇಷ್ಠವಾದ ದಿನವಾದುದರಿಂದ ಪಿತೃದೇವತೆಗಳಿಗೆ ಅತ್ಯಂತ ಪ್ರಿಯಕರವಾಗಿರುತ್ತದೆ; ಹೀಗೆ ಪುಣ್ಯಕಾಲಗಳೊಡಗೂಡಿದ ಈ ಮುವ್ವತ್ತು ದಿನಗಳಿಗೊಂದುಮಾಸವು. ಎಲೈ ಬ್ರಾಹ್ಮಣಶ್ರೇಷ್ಠರೇ! ಈ ದಿನಗಳಲ್ಲಿಯೂ ವಿಶೇಷವಾದ ದಿನವನ್ನು ಹೇಳುತ್ತೇನೆ ಕೇಳಿರಿ.

೭೮–೮೨. ಯೋಗಗಳಲ್ಲಿ ವ್ಯತೀಪಾತವೂ, ನಕ್ಷತ್ರಗಳಲ್ಲಿ ಶ್ರವಣನಕ್ಷತ್ರವೂ, ತಿಥಿಗಳಲ್ಲಿ ಅಮಾವಾಸ್ಯೆ ಮತ್ತು ಹುಣ್ಣಿಮೆಯೂ, ಸಂಕ್ರಮಣಗಳೂ ದಾನ ಮಾಡಲು ಬಹಳ ಪವಿತ್ರವಾದವುಗಳೆಂದು ತಿಳಿಯತಕ್ಕುದು. ತಿಥಿಗಳಲ್ಲಿ ಅಷ್ಟಮಿಯು ಶಿವನಿಗೂ, ಚತುರ್ಥಿಯು ಗಣೇಶನಿಗೂ, ಪಂಚಮಿಯು ನಾಗರಾಜ ನಿಗೂ, ಷಷ್ಠಿಯು ಕುಮಾರಸ್ವಾಮಿಗೂ, ಸೂರ್ಯನಿಗೆ ಸಪ್ತಮಿಯೂ, ಚಂಡಿಗೆ

ಬ್ರಹ್ಮಣೇ ದಶಮೀ ಜ್ಞೇಯಾ ರುದ್ರಸ್ಯೈಕಾದಶೀ ತಥಾ ।
ವಿಷ್ಣುಪ್ರಿಯಾ ದ್ವಾದಶೀ ಚ ಅಂತಕಸ್ಯ ತ್ರಯೋದಶೀ ॥ ೮೧ ॥
ಚತುರ್ದಶೀ ತಥಾ ಶಂಭೋಃ ಪ್ರಿಯಾ ನಾಸ್ತ್ಯತ್ರ ಸಂಶಯಃ ।
ನಿಶೀಥ ಸಂಯುಕ್ತಾ ಯಾತು ಕೃಷ್ಣಪಕ್ಷೇ ಚತುರ್ದಶೀ ।
ಉಪೋಷ್ಯಾ ಸಾ ತಿಥಿಃ ಶ್ರೇಷ್ಠಾ ಶಿವಸಾಯುಜ್ಯಕಾರಿಣೀ ॥ ೮೨ ॥
ಶಿವರಾತ್ರಿತಿಥಿಃ ಖ್ಯಾತಾ ಸರ್ವಪಾಪಪ್ರಣಾಶಿನೀ ।
ಅತ್ರೈವೋದಾಹರಂತೀಮಮಿತಿಹಾಸಂ ಪುರಾತನಂ ॥ ೮೩ ॥
ಬ್ರಾಹ್ಮಣೀ ವಿಧವಾ ಕಾಚಿತ್ಪುರಾ ಹ್ಯಾಸೀಚ್ಚ ಚಂಚಲಾ ।
ಶ್ವಪಚಾಭಿರತಾ ಸಾ ಚ ಕಾಮುಕೀ ಕಾಮಹೇತುತಃ ॥ ೮೪ ॥
ತಸ್ಯಾಂ ತಸ್ಯ ಸುತೋ ಜಾತಃ ಶ್ವಪಚಸ್ಯ ದುರಾತ್ಮನಃ ।
ದುಃಸಹೋ ದುಷ್ಟನಾಮಾತ್ಮಾ ಸರ್ವಧರ್ಮಬಹಿಷ್ಕೃತಃ ॥ ೮೫ ॥
ಮಹಾಪಾಪಪ್ರಯೋಗಾಚ್ಚ ಪಾಪಮಾರಭತೇ ಸದಾ ।
ಕಿತವಶ್ಚ ಸುರಾಪಾಯೀ ಸ್ತೇಯೀ ಚ ಗುರುತಲ್ಪಗಃ ॥ ೮೬ ॥

---

ನವಮಿಯೂ, ಬ್ರಹ್ಮನಿಗೆ ದಶಮಿಯೂ, ರುದ್ರನಿಗೆ ಏಕಾದಶಿಯೂ, ವಿಷ್ಣುವಿಗೆ ದ್ವಾದಶಿಯೂ, ಯಮನಿಗೆ ತ್ರಯೋದಶಿಯೂ, ಶಿವನಿಗೆ ಚತುರ್ದಶಿಯೂ ಪ್ರಿಯಕರಗಳಾದ ತಿಥಿಗಳೆಂಬುದರಲ್ಲಿ ಸಂಶಯವಿಲ್ಲ. ಕೃಷ್ಣಪಕ್ಷದಲ್ಲಿ ರಾತ್ರಿಯ ವ್ಯಾಪನೆಯುಳ್ಳ ಚತುರ್ದಶೀ ತಿಥಿಯು ಉಪವಾಸಮಾಡಲು ಯೋಗ್ಯವಾದುದು. ಅದು ಶಿವಸಾಯುಜ್ಯವನ್ನುಂಟುಮಾಡುತ್ತದೆ.

೮೩. ಅದೇಯೇ ಸಮಸ್ತ ಪಾಪಗಳನ್ನೂ ಕಳೆಯುವ ಶಿವರಾತ್ರಿಯೆಂದು ಪ್ರಸಿದ್ಧವಾಗಿದೆ. ಈ ವಿಷಯದಲ್ಲಿ ಪುರಾತನವಾದ ಒಂದು ಇತಿಹಾಸವು ಉದಾಹರಿಸಲ್ಪಡುತ್ತದೆ.

೮೪. ಪೂರ್ವದಲ್ಲಿ ಒಬ್ಬಾನೊಬ್ಬ ಬ್ರಾಹ್ಮಣ ವಿಧವೆಯಿದ್ದಳು ಅವಳು ಬಹಳ ಚಪಲಸ್ವಭಾವದವಳು. ಶ್ವಪಚರಲ್ಲಿಯೇ ಕಾಮಕಾರಣದಿಂದ ಕಾಮುಕಿಯಾಗಿದ್ದಳು.

೮೫. ಈ ವಿಧವೆಯಲ್ಲಿ ದುರಾತ್ಮನಾದ ಆ ಶ್ವಪಚನಿಗೆ ಒಬ್ಬ ಮಗನು ಹುಟ್ಟಿದನು. ಇವನ ಹೆಸರು ದುಷ್ಟನೆಂದು. ಸಮಸ್ತಧರ್ಮಗಳಿಗೂ ಹೊರಗಾದ ಈ ಶ್ವಪಚಪುತ್ರನು ಎಲ್ಲರಿಗೂ ಸಹಿಸಲಸದಳನಾಗಿದ್ದನು.

೮೬–೮೮. ಇವನು ಎಲ್ಲ ಕಾಲಗಳಲ್ಲಿಯೂ ಪೂರ್ವಜನ್ಮದ ದುಷ್ಕೃತ್ಯದಿಂದ ಪಾಪವನ್ನೇ ಆರಂಭಿಸುವನು. ಕಳ್ಳನೂ, ಹೆಂಡಕುಡಕನೂ, ಸುವರ್ಣ ರಜತಾದಿಗಳನ್ನು ಕದಿಯುವವನೂ, ಗುರುತಲ್ಪಗನೂ, ಮೃಗಗಳನ್ನು ಬೇಟೆಯಾಡುವ

ಮೃಗಯುಶ್ಚ ದುರಾತ್ಮಾಸೌ ಕರ್ಮಚಂಡಾಲ ಏವ ಸಃ ।
ಅಧರ್ಮಿಷ್ಠೋ ಹ್ಯಸದ್ವೃತ್ತಃ ಕದಾಚಿಚ್ಚ ಶಿವಾಲಯಂ ।
ಶಿವರಾತ್ರ್ಯಾಂ ಚ ಸಂಪ್ರಾಪ್ತೋ ಹ್ಯುಷಿತಃ ಶಿವಸನ್ನಿಧೌ ॥ ೮೭ ॥
ಶ್ರವಣಂ ಶೈವಶಾಸ್ತ್ರಸ್ಯ ಯದೃಚ್ಛಾಜಾತಮಂತಿಕೇ ।
ಶಿವಸ್ಯ ಲಿಂಗರೂಪಸ್ಯ ಸ್ವಯಂಭುವೋ ಯದಾ ತದಾ ॥ ೮೮ ॥
ಸ ಏಕತ್ರೋಷಿತೋ ದುಷ್ಟಃ ಶಿವರಾತ್ರ್ಯಾಂತು ಜಾಗರಾತ್ ।
ತೇನ ಕರ್ಮವಿಪಾಕೇನ ಪುಣ್ಯಾಂ ಯೋನಿಮವಾಪ್ತವಾನ್ ॥ ೮೯ ॥
ಭುಕ್ತ್ವಾ ಪುಣ್ಯತಮಾಂಲ್ಲೋಕಾನುಷಿತ್ವಾ ಶಾಶ್ವತೀಃ ಸಮಾಃ ।
ಚಿತ್ರಾಂಗದಸ್ಯ ಪುತ್ರೋಽಭೂದ್ಭೂಪಾಲೇಶ್ವರಲಕ್ಷಣಃ ॥ ೯೦ ॥
ನಾಮ್ನಾ ವಿಚಿತ್ರವೀರ್ಯೋಽಸೌ ಸುಭಗಃ ಸುಂದರೀಪ್ರಿಯಃ ।
ರಾಜ್ಯಂ ಮಹತ್ತರಂ ಪ್ರಾಪ್ಯ ನಿಸ್ತಂಭೋ ಹಿ ಮಹಾನಭೂತ್ ॥ ೯೧ ॥
ಶಿವೇ ಭಕ್ತಿಂ ಪ್ರಕುರ್ವಾಣಃ ಶಿವಕರ್ಮಪರೋಽಭವತ್ ।
ಶೈವಶಾಸ್ತ್ರಂ ಪುರಸ್ಕೃತ್ಯ ಶಿವಪೂಜನ ತತ್ಪರಃ ।
ರಾತ್ರೌ ಜಾಗರಣಂ ಯತ್ನಾತ್ಕರೋತಿ ಶಿವಸನ್ನಿಧೌ ॥ ೯೨ ॥

---

ವನೂ, ಕರ್ಮಚಂಡಾಲನೂ, ದುರಾತ್ಮನೂ ಅಧರ್ಮಿಷ್ಠನೂ, ಒಟ್ಟಿನ ಮೇಲೆ ಮಾಡಬಾರದ ಕೆಲಸಗಳೆಲ್ಲವನ್ನೂ ಮಾಡುವವನೂ ಆದ ಈ ಶ್ವಪಚಪುತ್ರನು ಒಂದಾನೊಂದು ದಿನ ಶಿವರಾತ್ರಿಯಂದು ಶಿವಾಲಯಕ್ಕೆ ಬಂದು ಶಿವನ ಸನ್ನಿಧಿಯಲ್ಲಿದ್ದನು. ಆಕಸ್ಮಿಕವಾಗಿ ಈ ದುಷ್ಟನು ಆ ಶಿವನ ಬಳಿಯಲ್ಲಿ ಶೈವಶಾಸ್ತ್ರದಲ್ಲಿ ಹೇಳಿರುವ ಸ್ವಯಂಭು ಲಿಂಗಸ್ವರೂಪನಾದ ಪರಶಿವನ ಮಹಾತ್ಮ್ಯವನ್ನು ಕೇಳಿದನು.

೮೯–೯೨. ಶಿವರಾತ್ರಿಯ ದಿನ ಆ ದುಷ್ಟನು ಒಂದೆಡೆಯಲ್ಲಿಯೇ ನಿಂತು ಜಾಗರಣೆ ಮಾಡಿದುದರ ಫಲವಾಗಿ ಪುಣ್ಯಕರವಾದ ಜನ್ಮವನ್ನು ಪಡೆದನು. ಎಲೈ ವಿಪ್ರರೇ! ಅವನು ಪುಣ್ಯಲೋಕಗಳಲ್ಲೆಲ್ಲ ಅನೇಕ ವರುಷಗಳ ಕಾಲ ವಾಸಮಾಡಿ ಸಮಸ್ತ ಭೋಗಭಾಗ್ಯಗಳನ್ನೂ ಅನುಭವಿಸಿ ಚಿತ್ರಾಂಗದನೆಂಬ ಮಹಾರಾಜನಿಗೆ ಸಮಸ್ತ ರಾಜಲಕ್ಷಣ ಲಕ್ಷಿತನಾದ ಪುತ್ರನಾಗಿ ಜನಿಸಿದನು; ಪುಣ್ಯಶಾಲಿಯೂ ಸುಂದರಾಂಗನೂ ಸುಂದರಿಯರಿಗೆಲ್ಲ ಪ್ರಿಯಂಕರನೂ ಆದ ಇವನ ಹೆಸರು ವಿಚಿತ್ರವೀರ್ಯನೆಂದು. ಇವನು ಮಹತ್ತರವಾದ ರಾಜ್ಯವನ್ನು ಪಡೆದು ಬಹಳ ಚಟುವಟಿಕೆಯುಳ್ಳ ದೊರೆಯಾದನು. ಇಷ್ಟೆಯಲ್ಲದೆ ಈ ವಿಚಿತ್ರವೀರ್ಯನು ಶಿವಭಕ್ತಿಸಂಪನ್ನನಾಗಿ ಶಿವನಿಗೆ ಪ್ರಿಯವಾದ ಸತ್ಕರ್ಮಾನುಷ್ಠಾನಗಳಲ್ಲಿ ಆಸಕ್ತನಾದನು. ಶೈವಶಾಸ್ತ್ರವನ್ನನುಸರಿಸಿ ಶಿವಪೂಜೆಯಲ್ಲಿ ತೊಡಗಿ ಆ ಶಿವನ ಸನ್ನಿಧಿಯಲ್ಲಿಯೇ ಜಾಗರಣೆಯನ್ನು ಮಾಡುತ್ತಿದ್ದನು.

ಶಿವಸ್ಯ ಗಾಥಾ ಗಾಯಂಸ್ತು ಆನಂದಾಶ್ರುಕಣಾನ್ಮುಹುಃ ।
ಪ್ರಮುಂಚಂಶ್ಚೈವ ನೇತ್ರಾಭ್ಯಾಂ ರೋಮಾಂಚಪುಲಕಾವೃತಃ ॥ ೯೩ ॥
ಆಯುಷ್ಯಂ ಚ ಗತಂ ತಸ್ಯ ಶಿವಧ್ಯಾನ ಪರಸ್ಯ ಚ ।
ಶಿವೋ ಹಿ ಸುಲಭೋ ಲೋಕೇ ಪಶೂನಾಂ ಜ್ಞಾನಿನಾಮಪಿ ॥ ೯೪ ॥
ಸಂಸೇವಿತುಂ ಸುಖಪ್ರಾಪ್ತ್ಯೈ ಹ್ಯೇಕ ಏವ ಸದಾಶಿವಃ ।
ಶಿವರಾತ್ರ್ಯುಪವಾಸೇನ ಪ್ರಾಪ್ತಾ ಜ್ಞಾನಮನುತ್ತಮಂ ॥ ೯೫ ॥
ಜ್ಞಾನಾತ್ಸರ್ವಮನುಪ್ರಾಪ್ತಂ ಭೂತಸಾಮ್ಯಂ ನಿರಂತರಂ ।
ಸರ್ವಭೂತಾತ್ಮಕಂ ಜ್ಞಾತ್ವಾ ಕೇವಲಂ ಚ ಸದಾಶಿವಂ ।
ವಿನಾ ಶಿವೇನ ಯತ್ಕಿಂಚಿನ್ನಾಸ್ತಿ ವಸ್ತ್ವತ್ರ ನ ಕ್ವಚಿತ್ ॥ ೯೬ ॥
ಏವಂ ಪೂರ್ಣಂ ನಿಷ್ಪ್ರಪಂಚಂ ಜ್ಞಾನಂ ಪ್ರಾಪ್ನೋತಿ ದುರ್ಲಭಂ ।
ಪ್ರಾಪ್ತಜ್ಞಾನಸ್ತದಾ ರಾಜಾ ಜಾತೋ ಹಿ ಶಿವವಲ್ಲಭಃ ॥ ೯೭ ॥
ಮುಕ್ತಿಂ ಸಾಯುಜ್ಯತಾಂ ಪ್ರಾಪ್ತಃ ಶಿವರಾತ್ರೇರುಪೋಷಣಾತ್ ।
ತೇನ ಲಬ್ಧಂ ಶಿವಂ ಜನ್ಮ ಪುರಾ ಯತ್ಕಥಿತಂ ಮಯಾ ॥ ೯೮ ॥

---

೯೩–೯೫. ಶಿವನ ಸ್ತೋತ್ರಗಳನ್ನೂ, ಕಥೆಗಳನ್ನೂ ಹಾಡುತ್ತ ಆನಂದಾಶ್ರುಗಳನ್ನಡಿಗಡಿಗೂ ಸುರಿಸುತ್ತ ರೋಮಾಂಚಗೊಳ್ಳುತ್ತಿದ್ದನು. ಹೀಗೆ ಶಿವಧ್ಯಾನದಲ್ಲಿ ತೊಡಗಿದ್ದ ಆತನಿಗೆ ಆಯುಸ್ಸು ಕಳೆಯಿತು. ಎಲೈ ಶೌನಕಾದಿ ಮುನಿಗಳಿರಾ! ಈ ಲೋಕದಲ್ಲಿ ಪರಶಿವನು ಭಕ್ತಿಭರಿತಗಳಾದ ಪಶುಗಳಿಗೂ, ಜ್ಞಾನಿಗಳಿಗೂ ಸಹ ಸುಲಭನಾದವನು. ಸುಖಕ್ಕೋಸುಗವಾಗಿ ಸೇವಿಸಬೇಕಾದರೆ ಸದಾಶಿವನನ್ನೊಬ್ಬನನ್ನೇ ಸೇವಿಸಬೇಕು. ಈ ಪ್ರಕಾರವಾಗಿ ಆ ಶ್ವಪಚನು ಶಿವರಾತ್ರಿಯ ಉಪವಾಸದ ಪ್ರಭಾವದಿಂದ ಉತ್ತಮವಾದ ಜ್ಞಾನವನ್ನು ಪಡೆದನು.

೯೬–೯೮. ತರುವಾಯ ಅವನು ಅದೇ ಜ್ಞಾನದಿಂದಲೇ ಸಮಸ್ತ ಭೋಗಭಾಗ್ಯಗಳನ್ನೂ ಪಡೆದು, ಸಮಸ್ತ ಪ್ರಾಣಿಗಳಲ್ಲಿಯೂ ನೆಲಸಿರುವವನು ಪರಮಾತ್ಮನೊಬ್ಬನೇ ಎಂಬ ಸಮಭಾವವನ್ನು ಹೊಂದಿದನು. ತರುವಾಯ ಸರ್ವಭೂತಾಂತರ್ಯಾಮಿಯಾದ ಕೇವಲನಾದ ಸದಾಶಿವನನ್ನು ತಿಳಿದುಕೊಂಡನು. ಈ ಜಗತ್ತಿನಲ್ಲಿ ಶಿವನನ್ನುಳಿದು ಯಾವ ವಸ್ತುವೂ ಎಲ್ಲಿಯೂ ಇರುವುದಿಲ್ಲವೆಂಬ ಪೂರ್ಣವೂ, ಪ್ರಪಂಚರಹಿತವೂ, ಇತರರಿಂದ ಪಡೆಯಲಸಾಧ್ಯವೂ ಆದ ಜ್ಞಾನವನ್ನೂ ಪಡೆದನು. ತರುವಾಯ ಆ ದೊರೆಯು ಶಿವನಿಗೆ ಅತ್ಯಂತ ಪ್ರಿಯನಾದನು. ಇವನು ಶಿವರಾತ್ರಿಯ ವ್ರತದ ಉಪವಾಸದ ಮಹಾತ್ಮ್ಯದಿಂದ ಮುಕ್ತಿಸಾಯುಜ್ಯಗಳನ್ನು ಪಡೆದನು. ನಾನು ಹಿಂದೆಯೇ ಹೇಳಿದ್ದಂತೆ ಶಿವನ ಪ್ರಸಾದದಿಂದ ಇವನು ಉತ್ತಮ ಜನ್ಮವನ್ನೂ ಪಡೆದಿದ್ದನಷ್ಟೆ.

ದಾಕ್ಷಾಯಣೀ ವಿಯೋಗಾಚ್ಚ ಜಟಾಜೂಟೇನ ವಿಸ್ತರಾತ್ ।
ಯ ಉತ್ಪನ್ನೋ ಮಸ್ತಕಾಚ್ಚ ಶಿವಸ್ಯ ಪರಮಾತ್ಮನಃ ।
ವೀರಭದ್ರೇತಿ ವಿಖ್ಯಾತೋ ದಕ್ಷಯಜ್ಞವಿನಾಶನಃ ॥ ೯೯ ॥
ಶಿವರಾತ್ರಿವ್ರತೇನೈವ ತಾರಿತಾ ಬಹವಃ ಪುರಾ ।
ಪ್ರಾಪ್ತಾಃ ಸಿದ್ಧಿಂ ಪುರಾ ವಿಪ್ರಾ ಭರತಾದ್ಯಾಶ್ಚ ದೇಹಿನಃ ॥ ೧೦೦ ॥
ಮಾಂಧಾತಾ ಧುಂಧುಮಾರಶ್ಚ ಹರಿಶ್ಚಂದ್ರಾದಯೋ ನೃಪಾಃ ।
ಪ್ರಾಪ್ತಾಃ ಸಿದ್ಧಿಮನೇನೈವ ವ್ರತೇನ ಪರಮೇಣ ಹಿ ॥ ೧೦೧ ॥
ತತೋ ಗಿರೀಶೋ ಗಿರಿಜಾಸಮೇತಃ
ಕ್ರೀಡಾನ್ವಿತೋಽಸೌ ಗಿರಿರಾಜಮಸ್ತಕೇ ।
ದ್ಯೂತಂ ತದೈವಾಕ್ಷಯುತಂ ಪರೇಶೋ
ಯುಕ್ತೋ ಭವಾನ್ಯಾ ಸ ಭೃಶಂ ಚಕಾರ ॥ ೧೦೨ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ "ಶಿವರಾತ್ರಿ ವ್ರತ ಮಾಹಾತ್ಮ್ಯ ವರ್ಣನಂ" ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

೯೯. ತರುವಾಯ ಇವನೇ, ದಾಕ್ಷಾಯಣಿಯ ವಿಯೋಗವಾದಂದು ದಕ್ಷಯಜ್ಞವನ್ನು ನಾಶಗೊಳಿಸಿದವನೂ, ಪರಮಾತ್ಮನ ಮಸ್ತಕದ ಜಟಾಜೂಟ ದಿಂದುದ್ಭವಿಸಿದವನೂ ಆದ ವೀರಭದ್ರನೆಂದು ಪ್ರಸಿದ್ಧನಾದನು.

೧೦೦. ಎಲೈ ವಿಪ್ರರಿರಾ! ಹೀಗೆ ಪೂರ್ವದಲ್ಲಿ ಶಿವರಾತ್ರಿ ವ್ರತಾಚರಣೆಯ ಫಲವಾಗಿ ಭರತನೇ ಮೊದಲಾದ ಅನೇಕ ಮಾನವರು ಭವಸಾಗರದಿಂದ ದಾಟಿಸ ಲ್ಪಟ್ಟವರಾಗಿ ಸಿದ್ಧಿಯನ್ನು ಪಡೆದಿರುತ್ತಾರೆ.

೧೦೧. ಮಾಂಧಾತ, ಧುಂದುಮಾರಿ, ಹರಿಶ್ಚಂದ್ರ ಮೊದಲಾದವರೆಲ್ಲರೂ ಅತ್ಯುತ್ತಮವಾದ ಶಿವರಾತ್ರಿ ವ್ರತದಿಂದಲೇ ಸಿದ್ಧಿಯನ್ನು ಪಡೆದಿರುವರು.

೧೦೨. ತರುವಾಯ, ಇತ್ತ ಗಿರೀಶನಾದ ಶಂಕರನಾದರೋ ಗಿರಿಜೆಯೊಡ ಗೂಡಿ ಗಿರಿರಾಜನಾದ ಹಿಮವಂತನ ಶಿಖರದಲ್ಲಿ ಕ್ರೀಡೆಯಲ್ಲಿ ತೊಡಗಿ ದಾಳದೊಡ ಗೂಡಿದ ಪಗಡೆಯಾಟವನ್ನು ಬಹಳವಾಗಿ ಆಡಿದನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರಖಂಡದಲ್ಲಿ "ಶಿವರಾತ್ರಿ ಮಹಾತ್ಮ್ಯ"ವೆಂಬ ಮೂವತ್ತಮೂರನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

## ಚತುಸ್ತ್ರಿಂಶೋಽಧ್ಯಾಯಃ

**ಶಿವಶಾಸ್ತ್ರೇ ಶಿವಪಾರ್ವತೀ ದ್ಯೂತಪ್ರಸಂಗೇನ ಪಾರ್ವತೀ ಪಾರಿತ ಸರ್ವಸ್ಯ ಶಿವಸ್ಯ ಕೈಲಾಸಂ ವಿಹಾಯ ತಪೋವನ ಗಮನ ವರ್ಣನಂ**

**ಲೋಮಶ ಉವಾಚ :—**

**ರಾಜ್ಯಂ ಚಕಾರ ಕೈಲಾಸೇ ದೇವದೇವೋ ಜಗತ್ಪತಿಃ ।**
**ಗಣೈಃ ಸಮೇತೋ ಬಹುಭಿರ್ವೀರಭದ್ರಾನ್ವಿತೋ ಮಹಾನ್ ॥ ೧ ॥**
**ಋಷಿಭಿಃ ಸಹಿತೋ ರುದ್ರೋ ದೇವೈರಿಂದ್ರಾದಿಭಿಃ ಸಹ ।**
**ಬ್ರಹ್ಮಾ ಯಸ್ಯ ಸ್ತುತಿಪರೋ ವಿಷ್ಣುಃ ಪ್ರೇಷ್ಯವದಾಸ್ಥಿತಃ ॥ ೨ ॥**
**ಇಂದ್ರೋ ದೇವಗಣೈಃ ಸಾರ್ಧಂ ಸೇನಾಧರ್ಮ ಪರೋಽಭವತ್ ।**
**ಯಸ್ಯ ಚ್ಛತ್ರಧರಶ್ಚಂದ್ರೋ ವಾಯುಶ್ಚಾಮರಧೃಕ್ತಥಾ ॥ ೩ ॥**
**ಸೂಪಾನ್ನಕರ್ತಾ ಸತತಂ ಜಾತವೇದಾ ನಿರಂತರಂ ।**
**ಗಂಧರ್ವಾ ಗಾಯಕಾ ಯಸ್ಯ ಸ್ತಾವಕಾಶ್ಚ ಪಿನಾಕಿನಃ ॥ ೪ ॥**
**ವಿಧ್ಯಾಧರಾಶ್ಚ ಬಹವಸ್ತಥಾ ಚಾಪ್ಸರಸಾಂಗಣಾಃ ।**
**ನನೃತುಶ್ಚಾಗ್ರಗಾ ಯಸ್ಯ ಸೋಽಸೌ ಕೈಲಾಸಪರ್ವತೇ ॥ ೫ ॥**

---

### ಕನ್ನಡದ ಅನುವಾದ

**ಶಿವಪಾರ್ವತಿಯರ ದ್ಯೂತ ವರ್ಣನ**

೧–೨. ಲೋಮಶನು ಹೇಳುತ್ತಾನೆ :—ಎಲೈ ಶೌನಕಾದಿ ಮಹರ್ಷಿಗಳಿರಾ! ದೇವದೇವನಾದ ಆ ಜಗತ್ಪತಿಯು, ವೀರಭದ್ರನೇ ಮೊದಲಾದ ಅನೇಕ ಶಿವಗಣಗಳಿಂದಲೂ, ಋಷಿಗಳಿಂದಲೂ, ಇಂದ್ರನೇ ಮೊದಲಾದ ದೇವತೆಗಳಿಂದಲೂ ಸಹಿತನಾಗಿ ಕೈಲಾಸದಲ್ಲಿ ರಾಜ್ಯವನ್ನಾಳಿದನು. ಆಗ ಬ್ರಹ್ಮನು ಆ ಸ್ವಾಮಿಯನ್ನು ಹೊಗಳುವವನಾದನು. ವಿಷ್ಣುವು ಆ ಪ್ರಭುವಿನ ಸೇವಕನಂತೆ ನಡೆದನು.

೩–೪. ಇಂದ್ರನು ದೇವತಾ ಸಮೂಹಗಳೊಡಗೂಡಿ ಆ ಪರಮಾತ್ಮನ ಸೇವೆಯಲ್ಲಿ ನಿರತನಾದನು. ಚಂದ್ರನು ಛತ್ರವನ್ನು ಹಿಡಿದನು. ವಾಯುವು ಚಾಮರವನ್ನು ಹಾಕಿದನು. ಯಜ್ಞೇಶ್ವರನು ಆ ಪ್ರಭುವಿಗೆ ರುಚಿಕರವಾದ ಪಕ್ವಾನ್ನಗಳನ್ನು ಸಿದ್ಧಪಡಿಸುವ ಪಾಚಕನಾದನು. ಪಿನಾಕಿಯ ಆ ಸಭೆಯಲ್ಲಿ ಗಂಧರ್ವರೆಲ್ಲರೂ ಗಾಯಕರಾದರು.

೫–೬. ವಿದ್ಯಾಧರರೂ, ಅನೇಕ ಅಪ್ಸರೋಗಣಗಳೂ ಆತನ ಮುಂಗಡೆ ನರ್ತಿಸಿದರು. ಹೀಗೆ ಆ ಪರಶಿವನು ಕೈಲಾಸ ಪರ್ವತದಲ್ಲಿ ಗಣೇಶ ಸ್ಕಂದನೇ

ಪುತ್ರೈರ್ಗಣೇಶಸ್ಕಂದಾದ್ಯೈಸ್ತಥಾ ಗಿರಿಜಯಾ ಸಹ ।
ರಾಜ್ಯಂ ಪ್ರತಾಪಿಭಿಶ್ಚಕ್ರೇಽಶಂಕಶ್ಚಕ್ರಮಣೇನ ಚ ॥ ೬ ॥
ಯೇನಾಂಧಕೋ ಮಹಾದೈತ್ಯಃ ಸ ದೇವಾಸಾಮರಿರ್ಮಹಾನ್ ।
ದುಷ್ಟೋ ವಿದ್ಧಸ್ತ್ರಿಶೂಲೇನ ಗಗನೇ ಸ್ಥಾಪಿತಶ್ಚಿರಂ ॥ ೭ ॥
ಹತ್ವಾ ಗಜಾಸುರಂ ಯೇನ ಉತ್ಕೃತ್ಯ ಚರ್ಮ ನೈ ಕೃತಂ ।
ಚಿರಂ ಪ್ರಾವರಣಂ ದಿವ್ಯಂ ತಥಾ ತ್ರಿಪುರದೀಪನಂ ।
ವಿಷ್ಣುನಾ ಪಾಲ್ಯಭೂತೇನ ರೇಜೇ ಸರ್ವಾಂಗಸುಂದರಃ ॥ ೮ ॥
ತಂ ದ್ರಷ್ಟುಕಾಮೋ ಭಗವಾನ್ನಾರದೋ ದಿವ್ಯ ದರ್ಶನಃ ।
ಯಯೌ ಚ ಪರ್ವತಶ್ರೇಷ್ಠಂ ಕೈಲಾಸಂ ಚಂದ್ರಪಾಂಡುರಂ ॥ ೯ ॥
ಸುಧಯಾ ಪರಯಾ ಚಾಪಿ ಸೇವಿತಂ ಪರಮಾದ್ಭುತಂ ।
ಕರ್ಪೂರಗೌರಂ ಚ ತದಾ ದೃಷ್ಟ್ವಾ ತಂ ಸು ಮಹಾಬಲಂ ।
ನಾರದೋ ವಿಸ್ಮಯಾವಿಷ್ಟಃ ಪ್ರವಿಷ್ಟೋ ಗಂಧಮಾದನಂ ॥ ೧೦ ॥
ಅನೇಕಾಶ್ಚರ್ಯ ಸಂಯುಕ್ತಂ ತಪಸ್ವೈಶ್ಚ ಸುಶೋಭಿತಂ ।
ಗಾಯದ್ವಿದ್ಯಾಧರೀಭಿಶ್ಚ ಪೂರಿತಂ ಚ ಮಹಾಪ್ರಭಂ ॥ ೧೧ ॥

---

ಮೊದಲಾದ ಪುತ್ರರೊಡನೆಯೂ, ಪತ್ನಿಯಾದ ಗಿರಿಜೆಯೊಡನೆಯೂ ಬಹು ದರ್ಪವಾಗಿ ಯಾವೊಂದು ಯೋಚನೆಯೂ ಇಲ್ಲದೆ ಬಹಳ ಸಂಭ್ರಮದಿಂದ ರಾಜ್ಯವಾಳಿದನು.

೭–೮. ಯಾವನು ದೇವತೆಗಳೆಲ್ಲರಿಗೂ ಮಹಾ ವೈರಿಯಾದ ಅಂಧಕಾಸುರನನ್ನು ತ್ರಿಶೂಲದಿಂದ ತಿವಿದು ಬಹಳಕಾಲ ಗಗನದಲ್ಲಿರಿಸಿದನೋ, ಗಜಾಸುರನನ್ನು ಕೊಂದು ಅವನ ಚರ್ಮವನ್ನು ಹೊದಿಕೆಯಾಗಿ ಮಾಡಿಕೊಂಡನೋ, ತ್ರಿಪುರದಹನವನ್ನಾವನೆಸಗಿದನೋ ಆ ಪರಮಶಿವನು ಕೈಲಾಸಪರ್ವತದಲ್ಲಿ ಜಗದ್ರಕ್ಷಕನಾದ ವಿಷ್ಣುವಿನೊಡಗೂಡಿ ಸರ್ವಾಂಗಸುಂದರನಾಗಿ ವಿರಾಜಿಸಿದನು.

೯. ಪೂಜ್ಯನೂ ದಿವ್ಯದರ್ಶನನೂ ಆದ ನಾರದಮಹರ್ಷಿಯು ಆ ಸ್ವಾಮಿಯನ್ನು ಸಂದರ್ಶಿಸಲೋಸುಗ ಚಂದ್ರನಂತೆ ಧವಳಕಾಂತಿಯನ್ನು ತಳೆದು ಬೆಳಗುತ್ತಿದ್ದ ಪರ್ವತಶ್ರೇಷ್ಠವಾದ ಆ ಕೈಲಾಸಕ್ಕೆ ಚಿತ್ತೈಸಿದನು.

೧೦. ಆತನು, ಸುಣ್ಣ ತೊಳೆದು ಪರಮಾದ್ಭುತವಾಗಿ ಕರ್ಪೂರದಂತೆ ಬೆಳ್ಳಗೆ ಬೆಳಗುತ್ತಲಿರುವ ಮಹಾ ಬಲಿಷ್ಠವಾದ ಆ ಗಂಧಮಾದನ ಪರ್ವತವನ್ನು ಕಂಡು ಆಶ್ಚರ್ಯಭರಿತನಾಗಿ ಅದನ್ನು ಪ್ರವೇಶಿಸಿದನು.

೧೧. ಆ ಪರ್ವತವು, ಅನೇಕ ಆಶ್ಚರ್ಯಗಳಿಂದೊಡಗೂಡಿ ಸೂರ್ಯಕಾಂತ ಶಿಲೆಗಳಿಂದ ಶೋಭಿಸುವುದಾಗಿ ಹಾಡುತ್ತಿರುವ ವಿದ್ಯಾಧರಾಂಗನೆಯರಿಂದ ತುಂಬಿ ಮಹಾ ಕಾಂತಿಸಂಪನ್ನವಾಗಿದ್ದಿತು.

ಕಲ್ಪದ್ರುಮಾಶ್ಚ ಬಹವೋ ಲತಾಭಿಃ ಪರಿವೇಷ್ಟಿತಾಃ ।
ಘನಚ್ಛಾಯಾಸು ತಾಸ್ವೇವ ನಿಶಿಷ್ಟಾಃ ಕಾಮಧೇನವಃ ॥ ೧೨ ॥
ಪಾರಿಜಾತವನಾಮೋದಲಂಪಟಾ ಬಹವೋಽಲಯಃ ।
ಕಲಹಂಸಾಶ್ಚ ಬಹವಃ ಕ್ರೀಡಮಾನಾಃ ಸರಸ್ಸು ಚ ॥ ೧೩ ॥
ಶಿಖಂಡಿನೋ ಮಹಚ್ಚಕ್ರುಸ್ತತ್ರ ಕೇಕಾರವಂ ಮುದಾ ।
ಪಂಚಮಾಲಾಪಿನಃ ಸರ್ವೇ ವಿಹಂಗಾಃ ಸಂಮುದಾನ್ವಿತಾಃ ॥ ೧೪ ॥
ಕರಿಣಃ ಕರಿಣೀಭಿಶ್ಚ ಮೋದಮಾನಾಃ ಸುವರ್ಚಸಃ ।
ಸಿಂಹಾಸ್ತಥಾ ಗರ್ಜಮಾನಾಃ ಶಾರ್ದೂಲೈಃ ಸಹ ಸಂಗತಾಃ ॥ ೧೫ ॥
ವೃಷಭಾ ನಂದಿಮುಖ್ಯಾಶ್ಚ ರೇಭಮಾನಾ ನಿರಂತರಂ ।
ದೇವದ್ರುಮಾಶ್ಚ ಬಹವಸ್ತಥಾ ಚಂದನವಾಟಿಕಾಃ ॥ ೧೬ ॥
ನಾಗ ಪುನ್ನಾಗ ಬಕುಳಾಶ್ಚಂಪಕಾ ನಾಗಕೇಸರಾಃ ।
ತಥಾ ಚ ವನಜಂಬ್ವಶ್ಚ ತಥಾ ಕನಕಕೇತಕಾಃ ॥ ೧೭ ॥
ಕಲ್ಹಾರಾಃ ಕರವೀರಾಶ್ಚ ಕುಮುದಾನಿ ಹ್ಯನೇಕಶಃ ।
ಮಂದಾರಾಶ್ಚ ಬದರ್ಯಶ್ಚ ಕ್ರಮುಕಾಃ ಪಾಟಲಾಸ್ತಥಾ ॥ ೧೮ ॥

---

೧೨–೧೩. ಬಳ್ಳಿಗಳು ಹಬ್ಬಿರುವ ಕಲ್ಪವೃಕ್ಷಗಳೂ, ಮೋಡಗಳ ನೆರಳಿನಲ್ಲಿ ವಿಶ್ರಮಿಸಿಕೊಳ್ಳುವ ಕಾಮಧೇನುಗಳೂ, ಪಾರಿಜಾತವನದ ಪರಿಮಳವನ್ನಾಸ್ವಾದಿಸುವುದರಲ್ಲಿಯೇ ಆಸಕ್ತವಾದ ಅಸಂಖ್ಯಾತ ದುಂಬಿಗಳೂ, ಕೊಳಗಳಲ್ಲಿ ಆಟವಾಡುತ್ತಿದ್ದ ಅನೇಕ ರಾಜಹಂಸಗಳೂ ಆ ಪರ್ವತದಲ್ಲಿ ಕಂಗೊಳಿಸುತ್ತಿದ್ದವು.

೧೪. ಅಲ್ಲಿ, ಅನೇಕ ನವಿಲುಗಳು ಮಹತ್ತರವಾದ ಕೇಕಾರವನ್ನು ಮಾಡುತ್ತಿದ್ದವು. ಅಲ್ಲಿ ನೆಲಸಿದ್ದ ಸಮಸ್ತ ಪಕ್ಷಿಗಳೂ ಮುದಿಸಿ ಪಂಚಮಸ್ವರದಲ್ಲಿ ಇಂಪಾಗಿ ಹಾಡುತ್ತಿದ್ದುವು.

೧೫. ಸಲಗಗಳು ಹೆಣ್ಣಾನೆಗಳೊಡಗೂಡಿ ಆನಂದಪಡುತ್ತಿದ್ದವು. ಅಂತೆಯೇ ಸಿಂಹಗಳು ಶಾರ್ದೂಲಗಳೊಡಗೂಡಿ ಗರ್ಜಿಸುತ್ತಿದ್ದುವು.

೧೬. ನಂದಿಯೇ ಮೊದಲಾದ ವೃಷಭಗಳು ಮುದಿಸಿ ನಿರಂತರವೂ ಗುಟರೆಗಳನ್ನು ಹಾಕುತ್ತ ಸಂಚರಿಸುತ್ತಿದ್ದವು.

೧೭–೧೮. ಆ ಪರ್ವತದಲ್ಲಿ ಅನೇಕ ಶ್ರೀಗಂಧದ ವನಗಳೂ, ದೇವದಾರು ವೃಕ್ಷಗಳೂ, ನಾಗ, ಪುನ್ನಾಗ, ಬಕುಲ, ಚಂಪಕ, ನಾಗಕೇಸರ, ಜಂಬೂ, ಸ್ವರ್ಣಕೇತಕಿ, ಕಲ್ಹಾರ, ಕರವೀರ, ಕುಮುದ, ಮಂದಾರ, ಬದರೀ, ಕ್ರಮುಕ, ಪಾಟಲ ಮೊದಲಾದ ಶಿವಪ್ರಿಯಕರಗಳಾದ ಅನೇಕ ವೃಕ್ಷಗಳು ಶೋಭಿಸುತ್ತಿದ್ದವು

ತಥಾನ್ಯೇ ಬಹವೋ ವೃಕ್ಷಾಃ ಶಂಭೋಸ್ತೋಷಕರಾ ಹ್ಯಮೀ ।
ಏಕಪದ್ಯೇನ ದೃಷ್ಟಾಸ್ತೇ ನಾನಾದ್ರುಮಲತಾನ್ವಿತಾಃ ।
ಆರಾಮಾ ಬಹವಸ್ತತ್ರ ದ್ವಿಗುಣಾಶ್ಚ ಬಭೂವಿರೇ ॥ ೧೯ ॥
ಗಗನಾನ್ನಿಸ್ಸೃತಃ ಸದ್ಯೋ ಗಂಗೌಘಃ ಪರಮಾದ್ಭುತಃ ।
ಪತಿತೋ ಮಸ್ತಕೇ ತಸ್ಯ ಪರ್ವತಸ್ಯ ಸುಶೋಭಿತೇ ॥ ೨೦ ॥
ಕೂಪೋ ಹಿ ಪಯಸೋ ಯೇನ ಪವಿತ್ರಂ ವರ್ತತೇ ಜಗತ್ ।
ಸೋಽಪಿ ದ್ವಿಧಾ ತದಾ ದೃಷ್ಟೋ ನಾರದೇನ ಮಹಾತ್ಮನಾ ॥ ೨೧ ॥
ಸರ್ವಂ ತದಾ ದ್ವಿಧಾಭೂತಂ ದೃಷ್ಟಂ ತೇನ ಮಹಾತ್ಮನಾ ।
ನಾರದೇನ ತದಾ ವಿಪ್ರಾಃ ಪರಮೇಣ ನಿರೀಕ್ಷಿತಃ ॥ ೨೨ ॥
ಏವಂ ವಿಲೋಕಮಾನೋಽಸೌ ನಾರದೋ ಭಗವಾನೃಷಿಃ ।
ತ್ವರಿತೇನ ತಥಾ ಯಾತಃ ಶಿವಾಲೋಕನತತ್ಪರಃ ॥ ೨೩ ॥
ಯಾವದ್ದ್ವಾರಿ ಸ್ಥಿತೋಽಪಶ್ಯನ್ಮಹದಾಶ್ಚರ್ಯಮೇವ ಚ ।
ದ್ವಾರಪಾಲೌ ತದಾ ದೃಷ್ಟ್ವಾ ಕೃತಕೌ ವಿಶ್ವಕರ್ಮಣಾ ॥ ೨೪ ॥
ನಾರದೋ ಮೋಹಿತೋ ಹ್ಯಾಸೀತ್ಪಪ್ರಚ್ಛ ಚ ಸ ತೌ ತದಾ ।
ಅಹಂ ಪ್ರವೇಷ್ಟುಮಿಚ್ಛಾಮಿ ಶಿವದರ್ಶನಲಾಲಸಃ ॥ ೨೫ ॥

---

೧೯–೨೩. ನಾರದ ಮಹರ್ಷಿಯು ಈ ವಿಧವಾಗಿ ಬಗೆಬಗೆಯ ವೃಕ್ಷಗಳಿಂದಲೂ, ಲತೆಗಳಿಂದಲೂ ಕೂಡಿ ಇಮ್ಮಡಿಯಾಗಿ ಶೋಭಿಸುತ್ತಿರುವ ಅನೇಕ ಉಪವನಗಳನ್ನು ಕಂಡನು. ಗಗನದಿಂದ ಜಾರಿ ಬೀಳುತ್ತಿದ್ದ ಗಂಗಾನದಿಯ ಪ್ರವಾಹವು ಬಹುವಾಗಿ ವಿರಾಜಿಸುತ್ತಿದ್ದ ಆ ಪರ್ವತದ ಶಿಖರದ ಮೇಲೆ ಬೀಳುತ್ತಿದ್ದಿತು. ಯಾವುದರ ಜಲದಿಂದ ಜಗತ್ತೆಲ್ಲವೂ ಪವಿತ್ರವಾಗುತ್ತದೆಯೋ ಅಂತಹ ಗಂಗಾಕೂಲವು ವಿಭಾಗವಾಗಿರುವುದನ್ನು ಮಹಾತ್ಮನಾದ ಆ ನಾರದ ಮಹರ್ಷಿಯು ಕಂಡನು. ಎಲೈ ವಿಪ್ರರೇ! ಈ ರೀತಿ ಆತನು ಅಲ್ಲಿರುವ ಸಮಸ್ತ ಪದಾರ್ಥಗಳೂ, ಎರಡೆರಡು ಬಗೆಯಾಗಿರುವುದನ್ನು ಕಂಡನು. ಪೂಜ್ಯ ಮಹರ್ಷಿಯು ಇಂತೆಯೇ ಆ ಪರ್ವತ ಪ್ರಾಂತವೆಲ್ಲವನ್ನೂ ನೋಡುತ್ತ ಶ್ರೀ ಶಿವನನ್ನು ಕಾಣಲು ತ್ವರೆಯಿಂದೈತಂದನು.

೨೪. ಆತನು ಕೈಲಾಸಭವನದ ಬಾಗಿಲಿಗೆ ಬಂದೊಡನೆಯೇ ಮಹತ್ತರವಾದ ಆಶ್ಚರ್ಯವನ್ನು ಕಂಡನು. ಆ ಬಾಗಿಲಿನಲ್ಲಿ ವಿಶ್ವಕರ್ಮನು ನಿರ್ಮಿಸಿದ ಕೃತಕಗಳಾದ ದ್ವಾರಪಾಲಕರ ಪ್ರತಿಮೆಗಳಿದ್ದುವು.

೨೫. ನಾರದ ಮಹರ್ಷಿಯು ಅವುಗಳನ್ನು ಕಂಡು ನಿಜವಾದ ದ್ವಾರಪಾಲಕರೆಂದೇ ಭ್ರಮಿಸಿ ಅವುಗಳನ್ನು ಕುರಿತು, "ಎಲೈ ದ್ವಾರಪಾಲಕರಿರಾ! ನಾನು ಶಿವನನ್ನು ಕಾಣಲು ಕುತೂಹಲನಾಗಿರುವೆನು.

**ತಸ್ಮಾದನುಜ್ಞಾ ದಾತವ್ಯಾ ದರ್ಶನಾರ್ಥಂ ಶಿವಸ್ಯ ಚ ।**
**ಅಶ್ರುಣ್ವಂತೌ ತದಾ ದೃಷ್ಟ್ವಾ ನಾರದೋ ವಿಸ್ಮಿತೋಽಭವತ್ ॥ ೨೬ ॥**
**ಜ್ಞಾನ ದೃಷ್ಟ್ಯಾ ವಿಲೋಕ್ಯಾಥ ತೂಷ್ಣೀಂಭೂತೋಽಭವತ್ತದಾ ।**
**ಕೃತ್ರಿಮೌ ಹಿ ಚ ತೌ ಜ್ಞಾತ್ವಾ ಪ್ರವಿಷ್ಟೋ ಹಿ ಮಹಾತ್ಮನಃ ॥ ೨೭ ॥**
**ತಥಾನ್ಯಾ ತತ್ಸ್ವರೂಪಾಶ್ಚ ದೃಷ್ಟಾಸ್ತೇನ ಮಹಾತ್ಮನಾ ।**
**ಋಷಿಃ ಪ್ರಣಮಿತಸ್ತೈಶ್ಚ ನಾರದೋ ಭಗವಾನ್ಮುದಾ ॥ ೨೮ ॥**
**ಏವಮಾದೀನ್ಯನೇಕಾನಿ ಆಶ್ಚರ್ಯಾಣಿ ದದರ್ಶ ಸಃ ।**
**ದದರ್ಶಾಥ ಚ ಸಂಯುಕ್ತಂ ತ್ರ್ಯಂಬಕಂ ಗಿರಿಜಾನ್ವಿತಂ ॥ ೨೯ ॥**
**ಅರ್ಧಾಸನಗತಾ ಸಾಧ್ವೀ ಶಂಕರಸ್ಯ ಮಹಾತ್ಮನಃ ।**
**ತನಯಾ ಗಿರಿರಾಜಸ್ಯ ಯಯಾ ವ್ಯಾಪ್ತಂ ಜಗತ್ರಯಂ ॥ ೩೦ ॥**
**ಗೌರೀ ಸಿತೇಕ್ಷಣಾ ಬಾಲಾ ತನ್ವಂಗೀ ಚಾರುಲೋಚನಾ ।**
**ಯಯಾ ರೂಪೀ ಕೃತಃ ಶಂಭುರುಪಾದೇಯಃ ಕೃತೋ ಮಹಾನ್ ॥ ೩೧॥**
**ನಿರ್ವಿಕಾರೋ ವಿಕಾರೈಶ್ಚ ಬಹುಭಿಃ ವಿಕಲೀಕೃತಃ ।**
**ಅರ್ಧಾಂಗಲಗ್ನಾ ಸಾ ದೇವೀ ದೃಷ್ಟಾ ತೇನ ಶಿವಸ್ಯ ಚ ॥ ೩೨ ॥**

---

೨೬–೨೮. ಒಳಗೆ ಪ್ರವೇಶಿಸಲಿಚ್ಛಿಸುತ್ತೇನೆ. ಆದುದರಿಂದ ಶಿವದರ್ಶನಾರ್ಥವಾಗಿ ನನಗೆ ಪ್ರವೇಶಕ್ಕೆ ಅಪ್ಪಣೆಯನ್ನು ಕೊಡಬೇಕು" ಎಂದು ಕೇಳಿದನು. ಆದರೆ ಆ ಕೃತಕ ದ್ವಾರಪಾಲಕರು ಆ ಮಾತನ್ನು ಕಿವಿಗೆ ಹಾಕಿಕೊಳ್ಳದುದನ್ನು ಕಂಡು ಆ ಮಹರ್ಷಿಯು ಆಶ್ಚರ್ಯಭರಿತನಾದನು. ತರುವಾಯ ಆತನು ಜ್ಞಾನದೃಷ್ಟಿಯಿಂದ ಇದೇನಿರಬಹುದೆಂದು ಯೋಚಿಸಿ ಅವುಗಳು ಮಾಡಿಟ್ಟ ಪ್ರತಿಮೆಗಳೆಂದರಿತು ಒಳಕ್ಕೆ ಪ್ರವೇಶಿಸಿದನು. ಅಲ್ಲಿಯೂ ಸಹ ಆ ಪ್ರತಿಮೆಗಳಿಗೆ ಸಮಾನವಾದ ಅನೇಕ ಪ್ರತಿಮೆಗಳು ಇದ್ದುದನ್ನು ಮಹಾತ್ಮನಾದ ಆ ನಾರದನು ಕಂಡನು. ಅವುಗಳೆಲ್ಲವೂ ಆ ಪೂಜ್ಯನನ್ನು ನಮಸ್ಕರಿಸಿದವು.

೨೯–೩೨. ಆತನು ಇಂತಹ ಅನೇಕ ಆಶ್ಚರ್ಯಗಳನ್ನು ಆ ಭವನದಲ್ಲಿ ಕಂಡನು. ತರುವಾಯ ಗಿರಿಜೆಯೊಡಗೂಡಿ ಪ್ರಕಾಶಿಸುತ್ತಿದ್ದ ಮಹೇಶ್ವರನನ್ನು ಸಂದರ್ಶಿಸಿದನು. ಯಾವಳು ಮೂರು ಲೋಕಗಳನ್ನೂ ವ್ಯಾಪಿಸಿರುವಳೋ, ಯಾವಳು ಸ್ವರೂಪರಹಿತನಾದ ಪರಶಿವನನ್ನು ಎಲ್ಲರಿಗೂ ಸೇವಿಸಲು ಯೋಗ್ಯನಾಗುವಂತೆಸಗಿದಳೋ, ವಿಕಾರರಹಿತನಾದರೂ ಆತನನ್ನು ಅನೇಕ ವಿಕಾರಗಳಿಂದ ಚಂಚಲನನ್ನಾಗಿ ಮಾಡಿದಳೋ, ಅಂತಹ ಗಿರಿರಾಜಪುತ್ರಿಯೂ, ಗೌರವರ್ಣಸಂಶೋಭಿತೆಯೂ, ಕಮಲೇಕ್ಷಣೆಯೂ, ತರುಣಿಯೂ, ಸುಂದರಿಯೂ ಆದ ಪಾರ್ವತಿಯು ಆ ಪರಶಿವನ ಅರ್ಧಾಂಗದಲ್ಲಿ ಸೇರಿದ್ದುದನ್ನು ಆ ಮಹರ್ಷಿಯು ಕಂಡನು.

ನಾರದೇನ ತಥಾ ಶಂಭುರ್ದೃಷ್ಟಸ್ತ್ರಿಭುವನೇಶ್ವರಃ ।
ಶುದ್ಧಚಾಮೀಕರಪ್ರಖ್ಯೈಃ ಸೇವ್ಯಮಾನಸ್ಸುರಾಸುರೈಃ ॥ ೩೩ ॥
ಶಂಖೇಣ ಭೋಗಿವರ್ಯೇಣ ಸೇವಿತಂ ಚಾಂಘ್ರಿಪಂಕಜಂ ।
ಧೃತರಾಷ್ಟ್ರೇಣ ಚ ತಥಾ ತಕ್ಷಕೇಣ ವಿಶೇಷತಃ ॥ ೩೪ ॥
ಅನ್ಯೈಶ್ಚ ನಾಗವರ್ಯೈಶ್ಚ ಸೇವಿತೋ ಹಿ ನಿರಂತರಂ ।
ವಾಸುಕಿಃ ಕಂಠಲಗ್ನೋ ಹಿ ಹಾರಭೂತೋ ಮಹಾಪ್ರಭಃ ॥ ೩೫ ॥
ಕಂಬಲಾಶ್ವತರೌ ನಿತ್ಯಂ ಕರ್ಣಭೂಷಣಭೂಷಿತೌ ।
ಜಟಾಮೂಲಗತಾಶ್ಚಾನ್ಯೇ ಮಹಾಫಣವರಾ ಹ್ಯಮೀ ॥ ೩೬ ॥
ಅನೇಕಜಾತಿಸಂವೀತಾ ನಾನಾವರ್ಣಾಶ್ಚ ಪದ್ಮಿನಃ ।
ತಕ್ಷಕಃ ಕುಲಿಕಃ ಶಂಖೋ ಧೃತರಾಷ್ಟ್ರೋ ಮಹಾಪ್ರಭಃ ॥ ೩೭ ॥
ಪದ್ಮೋ ದಂಭಃ ಸುದಂಭಶ್ಚ ಕರಾಲೋ ಭೀಷಣಸ್ತಥಾ ।
ಏತೇ ಚಾನ್ಯೇ ಚ ಬಹವೋ ನಾಗಾಶ್ಚಾಶೀವಿಷಾ ಹ್ಯಮೀ ॥ ೩೮ ॥
ಅಂಗಭೂತಾ ಹರಸ್ಯಾಸನ್ಪೂಜ್ಯಸ್ಯಾಸ್ಯ ಜಗತ್ರಯೇ ।
ಫಣೈಕಯಾ ಶೋಭಮಾನಾಃ ಕೇಚಿದ್ಧಿ ಪನ್ನಗೋತ್ತಮಾಃ ॥ ೩೯ ॥
ಫಣಾನಾಂ ದ್ವಿತಯಂ ಕೇಷಾಂ ತ್ರಿತಯಂ ಚ ಮಹಾಪ್ರಭಂ ।
ಚತುಷ್ಕಂ ಪಂಚಕಂ ಷಟ್ಕಂ ಸಪ್ತಕಂ ಚಾಷ್ಟಕಂ ತಥಾ ॥ ೪೦ ॥

---

೩೩–೩೫. ಬಳಿಕ ಆ ಮಹರ್ಷಿಯು ತ್ರಿಭುವನೇಶ್ವರನಾದ ಪರಮೇಶ್ವರನನ್ನು ಸಂದರ್ಶಿಸಿದನು. ಆ ಸ್ವಾಮಿಯಾದರೋ, ಆ ಸಮಯದಲ್ಲಿ ಶುದ್ಧವಾದ ಚಿನ್ನದ ಕಾಂತಿಯನ್ನು ತಳೆದು ವಿರಾಜಿಸುತ್ತ ದೇವತೆಗಳಿಂದಲೂ, ಅಸುರರಿಂದಲೂ ಓಲೈಸಿಕೊಳ್ಳುತ್ತಿದ್ದನು. ನಾಗಶ್ರೇಷ್ಠನಾದ ಶಂಖನು ಆ ಪ್ರಭುವಿನ ಪಾದಕಮಲಗಳನ್ನು ಸೇವಿಸುತ್ತಿದ್ದನು. ಧೃತರಾಷ್ಟ್ರ, ತಕ್ಷಕ, ಪದ್ಮ, ಮಹಾತ್ಮನಾದ ಆದಿಶೇಷ ಇವರೇ ಮೊದಲಾದ ನಾಗಶ್ರೇಷ್ಠರು ನಿರಂತರವೂ ಆ ಪ್ರಭುವನ್ನು ಸೇವಿಸುತ್ತಿದ್ದರು. ಮಹಾ ಕಾಂತಿಸಂಪನ್ನನಾದ ವಾಸುಕಿಯು ಆ ಪರಮಾತ್ಮನ ಕೊರಳಿನಲ್ಲಿ ಬೆಳಗುವ ಹಾರವಾಗಿದ್ದನು.

೩೬–೪೦. ಕಂಬಲ ಅಶ್ವತರರೆಂಬ ನಾಗಗಳು ಆ ಸ್ವಾಮಿಯ ಕಿವಿಯೋಲೆಗಳಾಗಿ ವಿರಾಜಿಸುತ್ತಿದ್ದರು. ಅನೇಕ ಜಾತಿಗಳೂ, ಅನೇಕ ವರ್ಣಗಳೂ, ಪದ್ಮಗಳೂ ಉಳ್ಳ ತಕ್ಷಕ, ಕುಲಿಕ, ಶಂಖ, ಧೃತರಾಷ್ಟ್ರ, ದಂಭ, ಸುದಂಭ, ಕರಾಲ, ಭೀಷಣ, ಮೊದಲಾದ ತೀಕ್ಷ್ಣವಾದ ವಿಷಗಳುಳ್ಳ ಈ ಸರ್ಪಗಳೆಲ್ಲವೂ ಮೂರು ಲೋಕಗಳಲ್ಲಿಯೂ ಪೂಜನೀಯನಾದ ಆ ಪರಶಿವನ ಶರೀರದಲ್ಲಿ ಆಭರಣಗಳಾಗಿ ಶೋಭಿಸುತ್ತಿದ್ದವು ಆ ಸರ್ಪರಾಜರಲ್ಲಿ ಕೆಲವರು ಒಂದೇ ಒಂದು ಹೆಡೆಯುಳ್ಳವರಾಗಿ ಬೆಳಗುತ್ತಿದ್ದರು. ಮತ್ತೆ ಕೆಲವರು, ಎರಡು

**ನವಕಂ ದಶಕಂ ಚೈವ ತಥೈಕಾದಶಕಂ ತ್ವಥ ।**
**ದ್ವಾದಶಕಂ ಚಾಷ್ಟಾದಶಕಮೇಕೋನ ವಿಂಶಕಂ ತಥಾ ॥ ೪೧ ॥**
**ಚತ್ವಾರಿಂಶತ್ಫಣಾಃ ಕೇಽಪಿ ಪಂಚಾಶತ್ಕಂ ಚ ಷಷ್ಟಿಕಂ ।**
**ಸಪ್ತತಿಶ್ಚಾಪ್ಯಶೀತಿಶ್ಚ ನವತಿಶ್ಚ ತಥೈವ ಚ ॥ ೪೨ ॥**
**ತಥಾ ಶತಸಹಸ್ರಾಣಿ ಹ್ಯಯುತಪ್ರಯುತಾನಿಚ ।**
**ಅರ್ಬುದಾನಿ ಚ ರತ್ನಾನಿ ತಥಾ ಶಙ್ಖಮಿತಾನಿಚ ॥ ೪೩ ॥**
**ಅನಂತಾಶ್ಚ ಫಣಾ ಯೇಷಾಂ ತೇ ಸರ್ಪಾಃ ಶಿವಭೂಷಣಾಃ ।**
**ದೃಷ್ಟಾಸ್ತದಾನೀಂ ತೇ ಸರ್ವೇ ನಾರದೇನ ಮಹಾತ್ಮನಾ ॥ ೪೪ ॥**
**ವಿದ್ಯಾವಂತೋಽಪಿ ತೇ ಸರ್ವೇ ಭೋಗಿನೋಽಪಿ ಸುಶೋಭಿತಾಃ ।**
**ಹಾರಭೂಷಣಭೂತಾಸ್ತೇ ಮಣಿಮಂತೋಽಮಿತಪ್ರಭಾಃ ॥ ೪೫ ॥**
**ಅರ್ಧಚಂದ್ರಾಂಕಿತೋ ಯಸ್ಯ ಕಪರ್ದಸ್ತ್ವತಿಸುಂದರಃ ।**
**ಚಕ್ಷುಷಾ ಚ ತೃತೀಯೇನ ಭಾಲಸ್ಥೇನ ವಿರಾಜಿತಃ ॥ ೪೬ ॥**

---

ಹೆಡೆಗಳುಳ್ಳವರು. ಕೆಲವರಿಗೆ ಮಹಾ ಕಾಂತಿಸಂಪನ್ನವಾದ ಮೂರು ಹೆಡೆಗಳೂ ಕೆಲವಕ್ಕೆ ನಾಲ್ಕೂ ಐದೂ ಆರೂ ಏಳೂ ಎಂಟೂ ಹೆಡೆಗಳಿದ್ದುವು.

೪೧–೪೨. ಕೆಲವು ಸರ್ಪಗಳಿಗೆ ಹತ್ತು ಹನ್ನೊಂದೂ ಹನ್ನೆರಡೂ ಹೆಡೆಗಳಿದ್ದುವು. ಮತ್ತೆ ಕೆಲವಕ್ಕೆ ಹದಿನೆಂಟು ಹತ್ತೊಂಭತ್ತು ಇಪ್ಪತ್ತು ಹೆಡೆಗಳು. ಕೆಲವು ಸರ್ಪಗಳು ನಲವತ್ತು ಹೆಡೆಗಳುಳ್ಳವುಗಳಾಗಿದ್ದುವು. ಕೆಲವಕ್ಕೆ ನಲವತ್ತು ಐವತ್ತೂ ಹೆಡೆಗಳಿದ್ದುವು. ಕೆಲವಕ್ಕಂತೂ ಎಪ್ಪತ್ತೂ ಎಂಬತ್ತೂ ತೊಂಬತ್ತೂ ಹೆಡೆಗಳಿದ್ದುವು.

೪೩–೪೫. ಕೆಲವಕ್ಕೆ ಒಂದು ಲಕ್ಷ ಹೆಡೆಗಳೂ, ಕೆಲವಕ್ಕೆ ಹತ್ತುಸಾವಿರ ಇಪ್ಪತ್ತುಸಾವಿರ ಹೆಡೆಗಳೂ ಇದ್ದುವು. ಇನ್ನು ಕೆಲವಕ್ಕೆ ಅರ್ಬುದ ಸಂಖ್ಯೆಯ ಹೆಡೆರತ್ನಗಳೂ, ಇನ್ನು ಕೆಲವಕ್ಕೆ ಶಂಖ ಸಂಖ್ಯೆಯ ಹೆಡೆಗಳೂ ಇದ್ದುವು ಲೆಕ್ಕವೇ ಇಲ್ಲದಷ್ಟು ಹೆಡೆಗಳುಳ್ಳ ಇನ್ನೂ ಕೆಲವು ಸರ್ಪಗಳು ಸಹ ಆ ಪರಮೇಶ್ವರನಿಗೆ ಆಭರಣಗಳಾಗಿದ್ದವು. ಮಹಾತ್ಮನಾದ ನಾರದ ಮಹರ್ಷಿಯು ಆಭರಣಗಳಾಗಿ ಬೆಳಗುತ್ತಿದ್ದ ಆಸರ್ಪಗಳೆಲ್ಲವನ್ನೂ ಕಂಡನು. ಆ ಸರ್ಪಗಳೆಲ್ಲವೂ ಬಹಳ ವಿದ್ಯಾವಂತಗಳಾದರೂ, ಹೆಡೆಮಣಿಗಳನ್ನೊಳಗೊಂಡು ಆ ಪರಶಿವನಿಗೆ ಮಾಲೆಗಳಾಗಿ ನಿರತಿಶಯವಾದ ಕಾಂತಿಯಿಂದ ಶೋಭಿಸುತ್ತಿದ್ದುವು.

೪೬. ಆ ಪರಮೇಶ್ವರನಾದರೋ ಅರ್ಧಚಂದ್ರಾಲಂಕೃತನಾಗಿ ಜಡೆಮುಡಿಯಿಂದ ಶೋಭಿಸಿ ಪರಮ ಸುಂದರನಾಗಿ ಹಣೆಯಲ್ಲಿ ಬೆಳಗುವ ಮೂರನೆಯ ಕಣ್ಣಿನಿಂದೊಡಗೂಡಿ ವಿರಾಜಿಸುತ್ತಿದ್ದನು.

ಪಂಚವಕ್ತ್ರೋ ಮಹಾದೇವೋ ಬಾಹುಭಿರ್ದಶಭಿರ್ವೃತಃ ।
ತಥಾ ಮರಕತಶ್ಯಾಮಕಂಧರೋಽತೀವ ಸುಂದರಂ ॥ ೪೭ ॥
ಉರೋ ಯಸ್ಯ ವಿಶಾಲಂ ಚ ತಥೋರುಜಘನಂ ಪರಂ ।
ಚರಣದ್ವಯಂ ಚ ರುದ್ರಸ್ಯ ಶೋಭಿತಂ ಪರಮಂ ಮಹತ್ ॥ ೪೮ ॥
ತದ್ದೃಷ್ಟಂ ಚರಣಾರವಿಂದಮತುಲಂ ತೇಜೋಮಯಂ ಸುಂದರಃ ।
ಸಂಧ್ಯಾರಾಗಸುಮಂಗಲಂ ಚ ಪರಮಂ ತಾಪಾಪನುತ್ತಿಂಕರಂ ।
ತೇಜೋರಾಶಿಕರಂ ಪರಾತ್ಪರಮಿದಂ ಲಾವಣ್ಯಲೀಲಾಸ್ಪದಂ
ಸರ್ವೇಷಾಂ ಸುಖವೃದ್ಧಿಕಾರಣಪರಂ ಶಂಭೋಃ ಪದಂ ಪಾವನಂ ॥೪೯॥
ತಥೈವ ದೃಷ್ಟ್ವಾ ಪರಮಾಂ ಪರಾಣಾಂ
ಪರಾ ಸತೀ ರೂಪವತೀ ಚ ಸುಂದರೀ ।
ಸೌಭಾಗ್ಯಲಾವಣ್ಯ ಮಹಾ ವಿಭೂತ್ಯಾ
ವಿರಾಜಮಾನಾ ಹ್ಯತಿಸುಂದರೀ ಶುಭಾ ॥ ೫೦ ॥

---

೪೭–೪೮. ಆ ಮಹಾದೇವನು ಪಂಚಮುಖನಾಗಿಯೂ, ದಶಭುಜನಾಗಿಯೂ, ಶ್ಯಾಮಲವರ್ಣವಾದ ಕಂಠಪ್ರದೇಶದಿಂದ ಮನೋಹರನಾಗಿಯೂ, ಅಗಲವಾದ ವಕ್ಷಸ್ಥಲವೂ, ದಪ್ಪವಾದ ಜಘನಪ್ರದೇಶವೂ ಉಳ್ಳವನಾಗಿದ್ದನು. ಆ ರುದ್ರನ ಚರಣದ್ವಯವು ಮಾಹಾತ್ಮ್ಯವುಳ್ಳದಾಗಿ ಅತ್ಯುತ್ತಮವಾಗಿ ಶೋಭಿಸುತ್ತಿದ್ದಿತು.

೪೯. ಎಲೈ ಮಹರ್ಷಿಗಳಿರಾ! ಆ ನಾರದ ಮಹರ್ಷಿಯು, ಸಮಾನವಿಲ್ಲದುದೂ, ತೇಜೋಮಯವಾದುದೂ, ಸುಂದರವಾದುದೂ, ಸಂಜೆಗೆಂಪಿನಂತೆ ಬಹಳ ಮಂಗಳಕರವಾದುದೂ, ಭಕ್ತಜನರ ಸಂಕಟಗಳನ್ನು ಪರಿಹಾರಮಾಡುವಂತಹುದೂ, ಮಹತ್ತರವಾದ ತೇಜೋರಾಶಿಯನ್ನುಂಟುಮಾಡುವಂತಹುದೂ, ಶ್ರೇಷ್ಠಾತಿಶ್ರೇಷ್ಠವಾದುದೂ, ಲಾವಣ್ಯವೆಂಬ ಲೀಲೆಗೆ ನೆಲೆಯಾದರೂ ನಂಬಿ ಭಜಿಸುವ ಭಕ್ತರೆಲ್ಲರಿಗೂ ಆನಂದವನ್ನು ಹೆಚ್ಚಿಸುವುದರಲ್ಲಿ ಉತ್ತಮ ಕಾರಣರೂಪವಾಧುದೂ, ಪರಮಪಾವನವಾದುದೂ ಆದ ಆ ಪರಮೇಶ್ವರನ ದಿವ್ಯ ಪಾದಗಳನ್ನು ಸಂದರ್ಶಿಸಿದನು.

೫೦. ಆ ಮಹರ್ಷಿಯು ಇಂತೆಯೇ ಅತ್ಯುತ್ತಮವಾದುದೆಲ್ಲಕ್ಕಿಂತಲೂ ಉತ್ತಮೆಯೂ, ಮಹಾಪತಿವ್ರತೆಯೂ, ರೂಪವತಿಯೂ, ಸುಂದರಿಯೂ, ಸೌಭಾಗ್ಯಲಾವಣ್ಯಗಳೆಂಬ ಮಹದೈಶ್ವರ್ಯದಿಂದ ವಿರಾಜಿಸುತ್ತಿರುವವಳೂ, ಸುಂದರಿಯರೆಲ್ಲರಿಗೂ ಅತಿ ಸುಂದರಿಯೂ, ಮಂಗಳಕರೆಯೂ ಆದ ಪರ್ವತರಾಜಪುತ್ರಿಯನ್ನೂ ಸಂದರ್ಶಿಸಿದನು.

**ದೃಷ್ಟ್ವಾ ತೌ ದಂಪತೀ ಶುದ್ಧೌ ರಾಜಮಾನೌ ಜಗತ್ತ್ರಯೇ।**
**ಅಭಿನ್ನೌ ಭೇದಮಾಪನ್ನೌ ನಿರ್ಗುಣೌ ಗುಣಿನೌ ಚ ತೌ ॥ ೫೧ ॥**
**ಸಾಕಾರೌ ಚ ನಿರಾಕಾರೌ ನಿರಾತಂಕೌ ಸುಖಪ್ರದೌ ।**
**ವವಂದೇ ಚ ಮುದಾ ತೌ ಸ ನಾರದೋ ಭಗವತ್ಪ್ರಿಯಃ ।**
**ಉತ್ಥಾಯೋತ್ಥಾಯ ಚ ತದಾ ತುಷ್ಟಾವ ಜಗದೀಶ್ವರೌ ॥ ೫೨ ॥**

**ನಾರದ ಉವಾಚ:—**

**ನತೋಽಸ್ಮ್ಯಹಂ ದೇವವರೌ ಯುವಾಭ್ಯಾಂ**
**ಪರಾತ್ಪರಾಭ್ಯಾಂ ಕಲಯಾ ತಥಾಪಿ ।**
**ದೃಷ್ಟೌ ಮಯಾ ದಂಪತೀ ರಾಜಮಾನೌ**
**ಯೌ ಬೀಜಭೂತೌ ಸಚರಾಚರಸ್ಯ ॥ ೫೩ ॥**
**ಪಿತರೌ ಸರ್ವಲೋಕಸ್ಯ ಜ್ಞಾತೌ ಚಾದ್ಯೈವ ತತ್ತ್ವತಃ ।**
**ಮಯಾ ನಾಸ್ತ್ಯತ್ರ ಸಂದೇಹೋ ಭವತೋಃ ಕೃಪಯಾ ತಥಾ ॥ ೫೪ ॥**
**ಏವಂ ಸ್ತುತೌ ತದಾ ತೇನ ನಾರದೇನ ಮಹಾತ್ಮನಾ ।**
**ತುತೋಷ ಭಗವಾಂಛಂಭುಃ ಪಾರ್ವತ್ಯಾ ಸಹಿತಸ್ತದಾ ॥ ೫೫ ॥**

---

೫೧–೫೨. ಈ ಪ್ರಕಾರವಾಗಿ ಪರಿಶುದ್ಧರಾಗಿ ಬೆಳಗುತ್ತಿರುವ ಲೋಕ ದಂಪತಿಗಳನ್ನು ಕಂಡನು. ಆ ದಂಪತಿಗಳು ಒಬ್ಬರನ್ನೊಬ್ಬರಗಲದೆ ಅಭಿನ್ನರಾಗಿದ್ದರು. ಬೇರೆ ಬೇರೆಯಾಗಿರುವಂತೆ ತೋರಿ ಯಾವೊಂದು ಗುಣಗಳೂ ಇಲ್ಲದವರಾಗಿದ್ದರೂ, ಸಮಸ್ತ ಗುಣಸಂಪನ್ನರಾಗಿ ಒಪ್ಪುತ್ತಿದ್ದರು. ಅವರು ಆಕಾರವೇ ಇಲ್ಲದವರಾದರೂ ಸಾಕಾರರಾಗಿ, ಯಾವೊಂದು ಆತಂಕಗಳೂ ಇಲ್ಲದವರಾಗಿ, ಭಕ್ತರಿಗೆ ಸುಖಸಂತೋಷಗಳನ್ನನುಗ್ರಹಿಸುವವರಾಗಿದ್ದರು. ಇಂತಿರುವ ಪಾರ್ವತೀ ಪರಮೇಶ್ವರರನ್ನು ಕಂಡು ಭಗವತ್ಪ್ರಿಯನಾದ ಆ ನಾರದ ಮಹರ್ಷಿಯು ಪುನಃ ಪುನಃ ದೀರ್ಘದಂಡ ಪ್ರಣಾಮವನ್ನು ಮಾಡಿ ಆ ಜಗನ್ಮಾತಾಪಿತೃಗಳನ್ನು ಈ ರೀತಿ ಸ್ತೋತ್ರಮಾಡಿದನು.

೫೩–೫೫. ನಾರದನು ಹೇಳುತ್ತಾನೆ.—“ಎಲೈ ದೇವಶ್ರೇಷ್ಠರಾದ ಪಾರ್ವತೀ ಪರಮೇಶ್ವರರೇ! ಪರಾತ್ಪರರಾದ ನಿಮ್ಮಿಬ್ಬರನ್ನೂ ನಮಸ್ಕರಿಸುತ್ತೇನೆ! ಸಮಸ್ತ ಚರಾಚರ ಜಗತ್ತಿಗೂ ಬೀಜಭೂತರಾಗಿ (ಮೂಲಕಾರಣರಾಗಿ) ನೀವೀರ್ವರೂ ಕಳೆಯೊಡಗೂಡಿ ನನ್ನಿಂದ ಸಂದರ್ಶಿಸಲಾದಿರಿ. ಎಲೈ ಲೋಕ ದಂಪತಿಗಳಿರಾ! ನೀವೀರ್ವರೂ ಈ ಸಮಸ್ತ ಲೋಕಕ್ಕೂ ಮಾತಾಪಿತೃಗಳೆಂಬ ವಿಷಯವನ್ನೀಗ ನಿಮ್ಮನುಗ್ರಹದಿಂದ ಯಥಾರ್ಥವಾಗಿಯೂ ತಿಳಿದೆನೆಂಬುದರಲ್ಲಿ ಸಂದೇಹವಿಲ್ಲವು” ಮಹಾತ್ಮನಾದ ನಾರದಮುನಿಯು ಈ ಪ್ರಕಾರ ಸ್ತುತಿಸಲು, ಪಾರ್ವತೀ ಸಹಿತನಾದ ಆ ಶಂಭುವು ಸಂತುಷ್ಟನಾದನು.

ಮಹಾದೇವ ಉವಾಚ :—

ಸುಖೇನ ಸ್ಥೀಯತಾಂ ಬ್ರಹ್ಮನ್ಕಿಂಕಾರ್ಯಂ ಕರವಾಣಿ ತೇ ।
ತಚ್ಛೃತ್ವಾ ವಚನಂ ಶಂಭೋರ್ನಾರದೋ ವಾಕ್ಯಮಬ್ರವೀತ್ ॥ ೫೬ ॥
ದರ್ಶನಂ ಜಾತಮದ್ಯೈವ ತೇನ ತುಷ್ಟೋಽಸ್ಮ್ಯಹಂ ವಿಭೋ ।
ದರ್ಶನಾತ್ಸರ್ವಮೇವಾದ್ಯ ಶಂಭೋ ಮಮ ನ ಸಂಶಯಃ ॥ ೫೭ ॥
ಕ್ರೀಡನಾರ್ಥಮಿಹಾಯಾತಃ ಕೈಲಾಸಂ ಪರ್ವತೋತ್ತಮಂ ।
ಹೃದಿಸ್ಥೋ ಹಿ ಸದಾ ನೄಣಾಮಾಸ್ಥಿತೋ ಭಗವನ್ಪ್ರಭೋ ॥ ೫೮ ॥
ತಥಾಪಿ ದರ್ಶನಂ ಭಾವ್ಯಂ ಸತತಂ ಪ್ರಾಣಿನಾಮಿಹ ॥ ೫೯ ॥

ಗಿರಿಜೋವಾಚ :—

ಕಾ ಕ್ರೀಡಾ ಹಿ ತ್ವಯಾ ಭಾವ್ಯಾ ವದ ಶೀಘ್ರಂ ಮಮಾಗ್ರತಃ ।
ತಸ್ಯಾಸ್ತದ್ವಚನಂ ಶ್ರುತ್ವಾ ಉವಾಚ ಪ್ರಹಸನ್ನಿವ ॥ ೬೦ ॥
ದ್ಯೂತಕ್ರೀಡಾ ಮಹಾದೇವಿ ದೃಶ್ಯತೇ ವಿವಿಧಾತ್ರ ಚ ।
ಭವೇದ್ವಾಭ್ಯಾಂ ಚ ದೂತೇ ಹಿ ರಮಣಾಚ್ಚ ಮಹಾಸುಖಂ ॥ ೬೧ ॥

---

೫೬-೫೯. ಮಹಾದೇವನು ಹೇಳುತ್ತಾನೆ.— "ಎಲೈ ಬ್ರಹ್ಮರ್ಷಿಯೇ! ಸುಖಾಸೀನನಾಗು. ನಿನಗೆ ಯಾವ ಕಾರ್ಯವನ್ನು ಮಾಡಿಕೊಡಲಿ?" ಶಂಭುವಿನ ಈ ಮಾತನ್ನು ಕೇಳಿ, ನಾರದನು, "ಎಲೈ ಪ್ರಭುವೇ! ಈಗತಾನೇ ತಮ್ಮಿರ್ವರ ಸಂದರ್ಶನವು ನನಗೆ ದೊರೆಯಿತು. ಇದರಿಂದ ನಾನು ಸಂತುಷ್ಟನಾಗಿರುವೆನು. ತಮ್ಮ ದರ್ಶನದಿಂದಲೇ ನನಗೆ ಸಮಸ್ತ ಇಷ್ಟಾರ್ಥಗಳೂ ಲಭಿಸಿದುವೆಂಬುದರಲ್ಲಿ ಸಂದೇಹವಿಲ್ಲವು. ಎಲೈ ಷಡ್ಗುಣೈಶ್ವರ್ಯಸಂಪನ್ನನೇ; ಪ್ರಭುವೇ! ನಾನು ಕೇವಲ ವಿನೋದಕ್ಕಾಗಿಯೇ ಕೈಲಾಸಕ್ಕೈತಂದೆನು. ಎಲೈ ಸ್ವಾಮಿಯೇ! ನೀನು ಸಮಸ್ತ ಭೂತಗಳ ಹೃದಯದಲ್ಲಿಯೂ ನೆಲಸಿರುವೆಯಾದರೂ, ಎಲ್ಲ ಪ್ರಾಣಿಗಳೂ ನಿನ್ನಲ್ಲಿ ಭಕ್ತಿಸಂಪನ್ನರಾಗಿ ನಿನ್ನನ್ನು ಭಾವಿಸುತ್ತಿರಬೇಕು" ಎಂದನು.

೬೦. ಗಿರಿಜೆಯು ಹೇಳುವಳು :— "ಎಲೈ ನಾರದ ಮುನಿಯೇ! ನೀನು ಯಾವ ಕ್ರೀಡೆಯನ್ನು ನೋಡಬಯಸಿರುವೆಯೆಂಬುದನ್ನು ನನ್ನಲ್ಲಿ ಹೇಳು."

೬೧. ದೇವರ್ಷಿಯು ಆ ದೇವಿಯನ್ನು ಕುರಿತು ನಸುನಗುತ್ತ, "ಓ ಮಹಾದೇವಿ! ಅನೇಕ ಬಗೆಗಳನ್ನೊಳಕೊಂಡ ದ್ಯೂತ (ಪಗಡೆಯ) ಕ್ರೀಡೆಯೆಂಬುದೊಂದುಂಟು. ಆ ಕ್ರೀಡೆಯನ್ನು ನೀವೀರ್ವರೂ ಆಡಿದುದಾದರೆ ಆ ಆಟದಿಂದ ಬಹಳ ಆನಂದವಾಗುತ್ತದೆ" ಎಂದು ಹೇಳಿದನು.

ಇತ್ಯೇವಮುಕ್ತೋಽಪರತಂ ಸತೀಭೃಶ
ಮುವಾಚ ವಾಕ್ಯಂ ಕುಪಿತಾ ಋಷಿಂ ಪ್ರತಿ ।
ಕಥಂ ವಿಜಾನಾಸಿ ಪರಂ ಪ್ರಸಿದ್ಧಂ
ದ್ಯೂತಂ ಚ ದುಷ್ಟೋದರಕಂ ಮನಸ್ವಿನಾಂ ॥ ೬೨ ॥
ತ್ವಂ ಬ್ರಹ್ಮಪುತ್ರೋಽಸಿ ಮುನಿರ್ಮನೀಷಿಣಾಂ
ಶಾಸ್ತಾಹಿ ವಾಕ್ಯಂ ವಿವಿಧೈಃ ಪ್ರಸಿದ್ಧೈಃ ।
ಚರಿಷ್ಯಮಾಣೋ ಭುವನತ್ರಯೇ ಸದಾ
ನ ಹಿ ತ್ವದನ್ಯೋ ಹ್ಯಪರೋ ಮನಸ್ವೀ ॥ ೬೩ ॥
ಏವಮುಕ್ತಸ್ತದಾ ದೇವ್ಯಾ ನಾರದೋ ದೇವದರ್ಶನಃ ।
ಉವಾಚ ವಾಕ್ಯಂ ಪ್ರಹಸನ್ಗಿರಿಜಾಂ ಶಿವಸನ್ನಿಧೌ ॥ ೬೪ ॥

ನಾರದ ಉವಾಚ :—

ದ್ಯೂತಂ ನ ಜಾನಾಮಿ ನ ಚಾಶ್ರಯಾಮಿ
ಹ್ಯಹಂ ತಪಸ್ವೀ ಶಿವಕಿಂಕರಶ್ಚ ।
ಕಥಂ ಚ ಮಾಂ ಪೃಚ್ಛಸಿ ರಾಜಕನ್ಯಕೇ
ಯೋಗೀಶ್ವರಾಣಾಂ ಪರಮಂ ಪವಿತ್ರೇ ॥ ೬೫ ॥

---

೬೨–೬೩. ಈ ರೀತಿ ನುಡಿದ ಆ ನಾರದನ ಮಾತನ್ನಾಲಿಸಿ ಗಿರಿಜಾದೇವಿಯು ಬಹಳವಾಗಿ ಕೋಪಗೊಂಡು ಆತನನ್ನು ಕುರಿತು, "ನಾರದಾ! ಕೇವಲ ಮೋಸದಾಟವೆಂದು ಪ್ರಸಿದ್ಧವಾಗಿರುವ ಈ ದ್ಯೂತವು ಮನಸ್ವಿಗಳಾದವರಿಗೆ ಮಾತ್ರ ತಕ್ಕುದುದೆಂದು ನೀನು ತಿಳಿಯದಿರುವುದೆಂತು? ನೀನು ಬ್ರಹ್ಮಪುತ್ರನಾಗಿರುವೆ! ದೇವರ್ಷಿಯಾಗಿರುವೆ! ಬುದ್ಧಿಶಾಲಿಗಳಿಗೆಲ್ಲ ಬುದ್ಧಿಹೇಳಿ ಶಿಕ್ಷಿಸುವವನು! ಪ್ರಸಿದ್ಧವಾದ ಬಗೆಬಗೆಯ ನೀತಿವಾಕ್ಯಗಳನ್ನಾಡುವವನು! ಯಾವಾಗಲೂ ತ್ರಿಲೋಕಸಂಚಾರಿಯಾದವನು. ಇಂತಿಹ ನಿನ್ನನ್ನು ಬಿಟ್ಟರೆ ಬೇರೊಬ್ಬ ಸ್ವೇಚ್ಛಾಚಾರಿಯುರುವನೇ! ಸಾಕು, ಸುಮ್ಮನಿರು" ಎಂದಳು. ಈ ರೀತಿ ನುಡಿದಾ ದೇವಿಯನ್ನು ಕುರಿತು, ದೇವದರ್ಶನನಾದ ಆ ನಾರದನು ಆ ಶಿವನ ಸನ್ನಿಧಿಯಲ್ಲಿ ನಗುತ್ತಲೇ ಆ ಗಿರಿಜೆಯನ್ನು ಕುರಿತು ಹೀಗೆಂದನು.

೬೪–೬೭. ನಾರದನು ಹೇಳುತ್ತಾನೆ:—"ಅಮ್ಮಾ! ನನಗೆ ದ್ಯೂತವೆಂದರೇನೆಂಬುದು ತಿಳಿಯದು. ನಾನದನ್ನಾಡಲೂ ಇಲ್ಲವು. ನಾನು ತಪಸ್ವಿ. ಶಿವಕಿಂಕರನಾಗಿರುವೆನು. ಯೋಗೀಶ್ವರರೆಲ್ಲರಿಗೂ ಪರಮಪಾವನೆಯಾಗಿರುವ ಓ ಗಿರಿರಾಜ ಕುಮಾರಿಯೇ! ನೀನು ದ್ಯೂತದ ವಿಷಯದಲ್ಲಿ ಇಂತಿರುವ ನನ್ನನ್ನೇಕೆ ಕೇಳುವೆ!" ಆ ದೇವಮುನಿಯು ಈ ರೀತಿ ನುಡಿಯಲು, ಭುವನೈಕ ಸುಂದರಿಯಾದ ಆ ಗಿರಿರಾಜ ಕನ್ಯೆಕೆಯು, "ಎಲೈ ವಟುವೇ! ನಿನಗೆಲ್ಲವೂ

ನಿಶಮ್ಯ ವಾಕ್ಯಂ ಗಿರಿಜಾ ಸತೀ ತದಾ
ಹ್ಯುವಾಚ ವಾಕ್ಯಂ ಚ ವಿಹಸ್ಯ ತಂ ಪ್ರತಿ ।
ಜಾನಾಸಿ ಸರ್ವಂ ಚ ಬಟೋಽದ್ಯ ಪಶ್ಯ ಮೇ
ದ್ಯೂತಂ ಮಹೇಶೇನ ಕರೋಮಿ ತೇಽಗ್ರತಃ ॥ ೬೬ ॥

ಇತ್ಯೇವ ಮುಕ್ತ್ವಾ ಗಿರಿರಾಜಕನ್ಯಕಾ
ಜಗ್ರಾಹ ಚಾಕ್ಷಾನ್ಭುವನೈಕಸುಂದರೀ ।
ಕ್ರೀಡಾ ಚಕಾರಾಥ ಮಹರ್ಷಿ ಸಾಕ್ಷ್ಯಕೀ
ತತ್ರಾಸ್ಥಿತಾ ಸಾ ಹಿ ಭವೇನ ಸಂಯುತಾ ॥ ೬೭ ॥

ತೌ ದಂಪತೀ ಕ್ರೀಡಯಾ ಸಜ್ಜಮಾನೌ
ದೃಷ್ಟ್ವೌ ತದಾ ಋಷಿಣಾ ನಾರದೇನ ।
ಸ ವಿಸ್ಮಯೋತ್ಫುಲ್ಲಮನಾ ಮನಸ್ವೀ
ವಿಲೋಕಮಾನೋಽತಿತರಾಂ ತುತೋಷ ॥ ೬೮ ॥

ಸಖೀಜನೇನ ಸಂವೀತಾ ತದಾ ದ್ಯೂತಪರಾ ಸತೀ ।
ಶಿವೇನ ಸಹ ಸಂಗಮ್ಯ ಚ್ಛಲಾದ್ದ್ಯೂತಮಕಾರಯತ್ ॥ ೬೯ ॥
ಸ ಪಣಂ ಚ ತದಾ ಚಕ್ರೇ ಛಲೇನ ಮಹತಾವೃತಃ ।
ಜಿತಾ ಭವಾನೀ ಚ ತದಾ ಶಿವೇನ ಪ್ರಹಸನ್ನಿವ ॥ ೭೦ ॥
ನಾರದೋಽಸ್ಯಾಃ ಶಿವೇನಾಥ ಉಪಹಾಸಕರೋಽಭವತ್ ।
ನಿಶಮ್ಯ ಹಾರಿತಂ ದ್ಯೂತಮುಪಹಾಸಂ ನಿಶಮ್ಯ ಚ ॥ ೭೧ ॥

---

ತಿಳಿದಿರುವದು. ಈಗ ನಾನು ನಿನ್ನೆದುರಿಗೇ ಮಹೇಶ್ವರನೊಡನೆ ದ್ಯೂತದಾಟ ಮಾಡುವೆನು. ನೀನು ನೋಡುತ್ತಿರು'' ಎಂದು ಹೇಳಿ ದಾಳಗಳನ್ನು ಹಿಡಿದು ಅಲ್ಲಿದ್ದ ಮಹರ್ಷಿಗಳೆಲ್ಲರ ಮುಂದೆಯೇ ಪಗಡೆಯಾಡಲಾರಂಭಿಸಿದಳು.

೬೮–೭೩. ಈ ರೀತಿ ಪಗಡೆಯಾಟದಲ್ಲಿ ತೊಡಗಿದ ಆ ಲೋಕ ದಂಪತಿಗಳನ್ನು ಕಂಡು ನಾರದನು ಪರಮಾಶ್ಚರ್ಯದಿಂದರಳಿದ ಕಂಗಳುಳ್ಳವನಾಗಿ ಅದನ್ನೇ ನೋಡುತ್ತ ಸಂತೋಷಗೊಳ್ಳುತ್ತಿದ್ದನು. ಆ ಸತಿಯು ತನ್ನ ಗೆಳತಿಯರೊಡಗೂಡಿ ಶಿವನೊಡನೆ ಬಹು ಹುರುಡಿನಿಂದ ಆಟವನ್ನಾಡಿದಳು. ಆಗಲಾ ಪರಮೇಶ್ವರನೂ ಸಹ ಬಹಳವಾಗಿ ಹುರುಡಿಸಿ ಪಣವನ್ನೊಡ್ಡಿದನು. ಆಗಲಾತನು ಆಟದಲ್ಲಿ ಪಾರ್ವತಿಯನ್ನು ಗೆದ್ದು ಅವಳನ್ನು ಹಾಸ್ಯಮಾಡಿ ನಕ್ಕನು. ಆ ಸಮಯದಲ್ಲಿ ನಾರದನೂ ಸಹ ಶಿವನೊಡನೆ ಸೇರಿ ಆ ದೇವಿಯನ್ನು ಪರಿಹಾಸ್ಯಮಾಡುವವನಾದನು. ಆಗಲಾ ಪಾರ್ವತಿಯು ಆಟದಲ್ಲಿ ಪಣವನ್ನು ಸೋತುದರಿಂದಲೂ, ಪರಶಿವನ ಪರಿಹಾಸ್ಯದಿಂದಲೂ, ನಾರದನಾಡಿದ ಕುಚೇಷ್ಟೆಯ ಮಾತಿನಿಂದಲೂ

ನಾರದಸ್ಯ ದುರಕ್ತ್ಯೈಶ್ಚ ಕುಪಿತಾ ಪಾರ್ವತೀ ಭೃಶಂ ।
ಉವಾಚ ತ್ವರಿತಾ ಚೈವ ದತ್ವಾ ಚೈವಾರ್ಧಚಂದ್ರಕಂ ॥ ೭೨ ॥
ತಥಾ ಶಿರೋಮಣೀ ಚೈವ ತರಲೇ ಚ ಮನೋಹರೇ ।
ಮುಖಂ ಸುಶೋಭನಂ ಚೈವ ತಥಾ ಕುಪಿತಸುಂದರಂ ॥ ೭೩ ॥
ದೃಷ್ಟ್ವಾ ಹರೇಣ ಚ ಪುನಃ ಪುನರ್ದ್ಯೂತಮಕಾರಯುತ್ ।
ತಥಾ ಗಿರಿಜಯಾ ಪ್ರೋಕ್ತಃ ಶಂಕರೋ ಲೋಕಶಂಕರಃ ।
ಹಾರಿತಂ ಚ ಮಯಾದತ್ತಃ ಪಣ ಏವ ಚ ನಾನ್ಯಥಾ ॥ ೭೪ ॥
ಕ್ರಿಯತೇ ಚ ತ್ವಯಾ ಶಂಭೋ ಕ ಪಣೋ ಹಿ ತದುಚ್ಯತಾಂ ।
ತತಃ ಪ್ರಹಸ್ಯ ಚೋವಾಚ ಪಾರ್ವತೀಂ ಚ ತ್ರಿಲೋಚನಃ ॥ ೭೫ ॥
ಮಯಾ ಪಣೋಽಯಂ ಕ್ರಿಯತೇ ಭವಾನಿ
ತ್ವದರ್ಥಮೇತಚ್ಚ ವಿಭೂಷಣಂ ಮಹತ್ ।
ಸಾ ಚಂದ್ರಲೇಖಾ ಹಿ ಮಹಾನ್ಹಿ ಹಾರ
ಸ್ತಥೈವ ಕರ್ಣೋತ್ಪಲಭೂಷಣದ್ವಯಂ ॥ ೭೬ ॥
ಇದಮೇವ ತ್ವಯಾ ತನ್ವೀ ಮಾಂ ಜಿತ್ವಾ ಗೃಹ್ಯತಾಂ ಸುಖಂ ।
ತತಃ ಪ್ರವರ್ತಿತಂ ದ್ಯೂತಂ ಶಂಕರೇಣ ಸಹೈವ ಚ ॥ ೭೭ ॥

---

ಬಹಳವಾಗಿ ಕೋಪಗೊಂಡು ಬಹುಬೇಗನೆಯೇ ಅರ್ಧಚಂದ್ರನನ್ನೂ ಬಹು ಮನೋಹರವೂ, ಥಳಥಳಿಸುತ್ತಿರುವುದೂ ಆದ ಶಿರೋಮಣಿಗಳೆರಡನ್ನೂ ಶಿವನಿಗೆ ಕೊಟ್ಟುಬಿಟ್ಟಳು. ಆಗಲಾ ಪರಶಿವನಾದರೋ ಮುನಿಸಿನಿಂದ ಕೆಂಪೇರಿ ಬಹು ಸುಂದರವಾಗಿ ರಂಜಿಸುತ್ತಿದ್ದ ಆಕೆಯ ಮಂಗಳಕರವಾದ ಮುಖವನ್ನು ನೋಡಿ ಮತ್ತೆ ದ್ಯೂತವಾಡತೊಡಗಿದನು.

೭೪–೭೫. ಆಗ ಗಿರಿಜೆಯು ಲೋಕಶಂಕರನಾದ ಆ ಶಂಕರನನ್ನು ಕುರಿತು, "ಎಲೈ ಪ್ರಿಯನೇ! ಈಗ ನೀನು ಆಟವನ್ನು ಗೆದ್ದುದಕ್ಕೆ ನಾನು ಪಣವನ್ನು ನಿನಗೆ ಕೊಟ್ಟಿರುತ್ತೇನೆ. ಇದು ಸುಳ್ಳಲ್ಲವಷ್ಟೆ! ಆದುದರಿಂದ ಈಗ ನಾವು ಆಡುತ್ತಿರುವ ಎರಡನೆಯ ಆಟಕ್ಕೆ ಯಾವ ಪಣವನ್ನಿಡುವೆ; ಹೇಳು" ಎಂದಳು. ಆಗಲಾ ತ್ರಿಲೋಚನನು ನಗುತ್ತಾ ಹೇಳಿದನು.

೭೬–೭೭. "ಎಲೆ ಸುಂದರಿ! ನಾನು ನಿನಗೋಸ್ಕರವಾಗಿ ಈ ಆಭರಣ ವನ್ನೂ, ಆ ಚಂದ್ರರೇಖೆಯನ್ನೂ, ಮಹತ್ತರವಾದ ಈ ಹಾರವನ್ನೂ, ಈ ಎರಡೂ ಕರ್ಣಕುಂಡಲಗಳನ್ನೂ ಪಣವಾಗಿಡುತ್ತೇನೆ. ಆಟ ಗೆದ್ದು ನೀನಿವುಗಳನ್ನು ಸುಖವಾಗಿ ತೆಗೆದುಕೊ." ಇಂತು ನುಡಿದ ತರುವಾಯ ಆ ಪಾರ್ವತಿಗೂ, ಶಂಕರನಿಗೂ ಮತ್ತೆ ದ್ಯೂತವು ಮೊದಲಾಯಿತು.

ಏವಂ ವಿಕ್ರೀಡಮಾನೌ ತಾವಕ್ಷವಿದ್ಯಾವಿಶಾರದೌ ।
ತದಾ ಜಿತೋ ಭವಾನ್ಯಾಥ ಶಂಕರೋ ಬಹುಭೂಷಣಃ ॥ ೭೮ ॥
ಪ್ರಹಸ್ಯ ಗೌರೀ ಪ್ರೋವಾಚ ಶಂಕರಂ ತ್ವತಿಸುಂದರೀ ।
ಹಾರಿತಂ ಚ ಪಣಂ ದೇಹಿ ಮಮಚಾದ್ಯೈವ ಶಂಕರಂ ॥ ೭೯ ॥
ತದಾ ಮಹೇಶಃ ಪ್ರಹಸನ್ಸತ್ಯಂ ವಾಕ್ಯಮುವಾಚ ಹ ।
ನ ಜಿತೋಽಹಂ ತ್ವಯಾ ತನ್ವಿ ತತ್ತ್ವತೋ ಹಿ ವಿಮೃಶ್ಯತಾಂ ॥ ೮೦ ॥
ಅಜೇಯೋಽಹಂ ಪ್ರಾಣಿನಾಂ ಸರ್ವಥೈವ
ತಸ್ಮಾನ್ನ ವಾಚ್ಯಂ ತು ವಚೋ ಹಿ ಸಾಧ್ವಿ ।
ದ್ಯೂತಂ ಕುರುಷ್ವಾದ್ಯ ಯಥೇಷ್ಟಮೇವ
ಜೇಷ್ಯಾಮಿ ಚಾಹಂ ಚ ಪುನಃ ಪ್ರಪಶ್ಯ ॥ ೮೧ ॥
ತದಾಂಬಿಕಾಹ ಸ್ವಪತಿಂ ಮಹೇಶಂ ।
ಮಯಾಜಿತೋಽಸ್ಯದ್ಯ ನ ವಿಸ್ಮಯೋಽತ್ರ ॥
ಏವಮುಕ್ತ್ವಾ ತದಾ ಶಂಭುಂ ಕರೇ ಗೃಹವರಾನನಾ ।
ಜಿತೋಽಸಿ ತ್ವಂ ನ ಸಂದೇಹಸ್ತ್ವಂ ನ ಜಾನಾಸಿ ಶಂಕರ ॥ ೮೨ ॥

---

೭೮. ಎಲೈ ಮುನಿಗಳಿರಾ! ಈ ರೀತಿ ಪಗಡೆಯಾಟದಲ್ಲಿ ನಿಸ್ಸೀಮರಾದ ಪಾರ್ವತೀ ಪರಮೇಶ್ವರರು ಆಟವನ್ನು ಮುಂದುವರಿಸಿದರು. ಆಗ ಪಾರ್ವತಿಯು ಶಂಕರನನ್ನು ಆಟದಲ್ಲಿ ಗೆದ್ದು ಆತನ ಅನೇಕ ಆಭರಣಗಳನ್ನು ಗೆದ್ದಳು.

೭೯. ಆ ಸಮಯದಲ್ಲಿ ಮಹಾಸುಂದರಿಯಾದ ಪಾರ್ವತಿಯು ನಗುತ್ತ ಶಂಕರನನ್ನು ಕುರಿತು, "ಶಂಕರ! ನಾನು ಪಣವನ್ನು ಗೆದ್ದೆನು. ಅದನ್ನು ನನಗೆ ಕೊಡು" ಎಂದಳು

೮೦. ಆಗಲಾ ಮಹೇಶನು ನಗುತ್ತಲೇ, "ಓ ಸುಂದರಿ! ನೀನು ನನ್ನನ್ನು ಗೆಲ್ಲಲಿಲ್ಲ. ನಿಜವಾಗಿಯೂ ಯೋಚಿಸಿನೋಡು.

೮೧. ನಾನು ಸಮಸ್ತ ಪ್ರಾಣಿಗಳಿಗೂ ಗೆಲ್ಲಲಸದಳನಾಗಿರುವೆನು. ಆದುದರಿಂದ 'ನಿನ್ನನ್ನು ಗೆದ್ದೆ' ಎಂದು ಎಂದಿಗೂ ಹೇಳಬಾರದು. ಎಲೆ ಸಾಧ್ವಿ! ನಿನ್ನಿಷ್ಟಾನುಸಾರ ಪಗಡೆಯನ್ನಾಡು. ನಾನು ನಿನ್ನನ್ನು ಪುನಃ ಗೆಲ್ಲುತ್ತೇನೆ ನೋಡು" ಎಂದು ಹೇಳಿದನು.

೮೨. ಈ ಮಾತನ್ನು ಕೇಳಿ ಅಂಬಿಕೆಯು ತನ್ನ ಪತಿಯಾದ ಆ ಪರಮೇಶ್ವರನನ್ನು ಕುರಿತು, "ಪ್ರಿಯನೇ! ಈಗ ನಾನು ನಿನ್ನನ್ನು ಗೆದ್ದೇ ಇರುವೆನು. ಇದರಲ್ಲಿ ಸಂಶಯವೇ ಇರುವುದಿಲ್ಲವು" ಎಂದು ಹೇಳಿ ಆ ತರುವಾಯ ಆ ವರಾನನೆಯು ಆ ಶಂಕರನ ಕೈಯನ್ನು ಹಿಡಿದು, "ಶಂಕರ! ನಾನು ನಿನ್ನನ್ನು ಗೆದ್ದಿರುವೆನು. ಆದರೆ ನೀನು ಸೋತಿರುವುದನ್ನು ಮಾತ್ರ ನೀನರಿಯೆ!" ಎಂದೂ ನುಡಿದಳು.

ಏವಂ ಪ್ರಹಸ್ಯ ರುಚಿರಂ ಗಿರಿಜಾ ತು ಶಂಭುಂ
ಸಾ ಪ್ರೇಕ್ಷ್ಯ ನರ್ಮವಚಸಾ ಸ ತಯಾಭಿಭೂತಃ ।
ದೇಹೀತಿ ಮೇ ಸಕಲಮಂಗಲಮಂಗಲೇಶ
ಯದ್ದ್ಧಾರಿತಂ ಸ್ಮರರಿಪೋ ವಚಸಾನುಮೋದಿತಂ ॥ ೮೩ ॥

ಶಿವ ಉವಾಚ:—

ಅಜೇಯೋಽಹಂ ವಿಶಾಲಾಕ್ಷಿ ತವ ನಾಸ್ತ್ಯತ್ರ ಸಂಶಯಃ ।
ಅಹಂಕಾರೇಣ ಯತ್ಪ್ರೋಕ್ತಂ ತತ್ತ್ವತಸ್ತದ್ವಿಮೃಶ್ಯತಾಂ ॥ ೮೪ ॥
ತಸ್ಯ ತದ್ವಚನಂ ಶ್ರುತ್ವಾ ಪ್ರೋವಾಚ ಚ ವಿಹಸ್ಯ ಸಾ ।
ಅಜೇಯೋ ಹಿ ಮಹಾದೇವಃ ಸರ್ವೇಷಾಮಪಿ ವೈ ಪ್ರಭೋ ॥ ೮೫ ॥
ಮಯ್ಯೈಕಯಾ ಜಿತೋಽಸಿ ತ್ವಂ ದ್ಯೂತೇನ ವಿಮಲೇನ ಹಿ ।
ನ ಜಾನಾಸಿ ಚ ಕಿಂಚಿಚ್ಚ ಕಾರ್ಯಾಕಾರ್ಯಂ ವಿವಕ್ಷಿತಂ ॥ ೮೬ ॥
ಏವಂ ವಿವದಮಾನೌ ತೌ ದಂಪತೀ ಪರಮೇಶ್ವರೌ ।
ನಾರದಃ ಪ್ರಹಸನ್ವಾಕ್ಯಮುವಾಚ ಋಷಿಸತ್ತಮಃ ॥ ೮೭ ॥

---

೮೩. ಎಲೈ ಶೌನಕಾದಿಗಳಿರಾ! ಆಕೆಯು ಈ ರೀತಿ ನುಡಿದು ಬಹು ಮನೋಹರವಾಗಿ ನಕ್ಕು ಆ ಪರಶಿವನನ್ನು ವಿಲಾಸದಿಂದ ನೋಡಿ ನರ್ಮವಚನಗಳಿಂದ ಹಾಸ್ಯಮಾಡುತ್ತ, "ಸಮಸ್ತ ಮಂಗಳಗಳಿಗೂ ಮಂಗಳಸ್ವರೂಪನಾದ ಓ ಪರಮೇಶ್ವರನೇ! ಈಗ ನಾನೂ ಆಟದಲ್ಲಿ ಗೆದ್ದಿರುವ, ನೀನು ಮಾತು ಕೊಟ್ಟಿರುವ ಸಮಸ್ತವನ್ನೂ ನನಗೆ ಕೊಡುವವನಾಗು" ಎಂದು ಕೇಳಿದಳು.

೮೪. ಶಿವನು ಹೇಳುತ್ತಾನೆ:—"ಎಲೆ ವಿಶಾಲಾಕ್ಷಿ! ನಾನು ಸಮಸ್ತರಿಗೂ ಅಜೇಯನೆಂಬುದರಲ್ಲಿ ಸಂಶಯವಿಲ್ಲವು. ನೀನು 'ನಿನ್ನನ್ನು ಗೆದ್ದಿರುವೆ'ನೆಂದು ಅಹಂಕಾರದಿಂದ ನುಡಿದಿರುವ ನುಡಿಯನ್ನು ವಿಮರ್ಶೆಮಾಡುವವಳಾಗು" ಎಂದು ಹೇಳಿದನು.

೮೫–೮೬. ಪಾರ್ವತಿಯು ಶಿವನಾಡಿದ ಈ ಮಾತನ್ನು ಕೇಳಿ ನಗುತ್ತ, "ಎಲೈ ಪ್ರಭುವೇ! ಮಹಾದೇವನಾದ ನೀನು ಸಮಸ್ತ ಪ್ರಾಣಿಗಳಿಗೂ ಅಜೇಯನಾಗಿರುವವನೇ ಸರಿ. ಆದರೆ, ನಾನೊಬ್ಬಳು ಮಾತ್ರ ಏನೊಂದೂ ಕಪಟವಿಲ್ಲದ ಈ ಪಗಡೆಯಾಟದಲ್ಲಿ ನಿನ್ನನ್ನು ಗೆದ್ದಿರುತ್ತೇನೆ. ಎಲೈ ಪ್ರಿಯನೇ! ನಿನಗೆ ವಿವಕ್ಷಿತವಾದ ಕಾರ್ಯಾಕಾರ್ಯಗಳನ್ನೆಂತು ಮಾಡಬೇಕೆಂಬುದೇ ತಿಳಿದಿಲ್ಲವು" ಎಂದಳು.

೮೭. ಈ ರೀತಿ ಮಾತಿಗೆ ಮಾತನ್ನು ಬೆಳಸುತ್ತಿರುವ ಆ ಪಾರ್ವತೀ ಪರಮೇಶ್ವರರನ್ನು ಕಂಡು ಋಷಿಸತ್ತಮನಾದ ಆ ನಾರದ ಮುನಿಯು ನಗುತ್ತ ಈ ರೀತಿ ಹೇಳಿದನು.

ನಾರದ ಉವಾಚ :—

ಆಕರ್ಣಯಾಽಽಕರ್ಣ ವಿಶಾಲ ನೇತ್ರೇ
ವಾಕ್ಯಂ ತದೇಕಂ ಜಗದೇಕಮಂಗಲಂ ।
ಅಸೌ ಮಹಾಭಾಗ್ಯವತಾಂ ವರೇಣ್ಯ
ಸ್ತ್ವಯಾಜಿತಃ ಕಿಂ ಚ ಮೃಷಾ ಬ್ರವೀಷಿ ॥ ೮೮ ॥

ಅಜಿತೋ ಹಿ ಮಹಾದೇವೋ ದೇವಾನಾಂ ಪರಮೋ ಗುರುಃ ।
ಅರೂಪೋಽಯಂ ಸುರೂಪೋಽಯಂ ರೂಪಾತೀತೋಽಯಮುಚ್ಯತೇ ॥
ಏಕ ಏವ ಪರಂ ಜ್ಯೋತಿಸ್ತೇಷಾಮಪಿ ಚ ಯನ್ಮಹಃ ।
ತ್ರೈಲೋಕ್ಯನಾಥೋ ವಿಶ್ವಾತ್ಮಾ ಶಂಕರೋ ಲೋಕಶಂಕರಃ ॥ ೯೦ ॥
ಕಥಂ ತ್ವಯಾ ಜಿತೋ ದೇವಿ ಹ್ಯಜೇಯೋ ಭುವನತ್ರಯೇ ।
ಶಿವಮೇನಂ ನ ಜಾನಾಸಿ ಸ್ತ್ರೀ ಭಾವಾಚ್ಚ ವರಾನನೇ ॥ ೯೧ ॥
ನಾರದೇನ್ಯೈವ ಮುಕ್ತ್ವಾ ಸಾ ಪಾರ್ವತೀ ಕುಪಿತಾ ಭೃಶಂ ।
ಬಭಾಷೇ ಮತ್ಸರಗ್ರಸ್ತಾ ಸಾಕ್ಷೇಪಂ ವಚನಂ ಸತೀ ॥ ೯೨ ॥

---

೮೮-೮೯. ನಾರದನು ಹೇಳುತ್ತಾನೆ:—"ಕಿವಿವರೆಗೂ ಹರಡಿ ವಿಶಾಲವಾಗಿರುವ ನೇತ್ರಗಳುಳ್ಳ ಓ ದೇವಿ, ಪಾರ್ವತಿ! ಕೇಳು: ಈಗ ನಾನಾಡುವ ಮಾತು ಪ್ರಪಂಚಕ್ಕೇ ಮಂಗಳವನ್ನುಂಟುಮಾಡುವಂತಹದು. ಮಹಾ ಪುಣ್ಯಶಾಲಿಗಳೆಲ್ಲರಿಗೂ ಶ್ರೇಷ್ಠನಾದ ಈ ಪರಶಿವನು 'ನನ್ನಿಂದ ಜಿತನಾಗಿರುವನು' ಎಂದು ಸುಳ್ಳು ಹೇಳುತ್ತಿರುವೆ. ದೇವತೆಗಳಿಗೆಲ್ಲ ಪರಮ ಗುರುವಾದ ಈ ಮಹಾದೇವನು ಅಜಿತ (ಗೆಲ್ಲಲಸದಳ)ನಾಗಿರುವನು. ರೂಪವಿಲ್ಲವನೂ ಈತನೇ; ರೂಪವಿರುವವನೂ ಈತನೇ (ಸಾಕಾರ ನಿರಾಕಾರ ಸ್ವರೂಪನಾಗಿರುವವನೀ ಮಹಾತ್ಮನು) ಈತನೇ ರೂಪಾತೀತನೆನಿಸುತ್ತಾನೆ.

೯೦. ಓ ದೇವಿ! ಪರಂಜ್ಯೋತಿಸ್ವರೂಪನು ಈತನು ಒಬ್ಬನೇ. ಅದಕ್ಕಿಂತಲೂ ಯಾವದು ಮಹಾಜ್ಯೋತಿಯೋ ಅದೂ ಈತನೇ! ಮೂರು ಲೋಕಗಳಿಗೆ ಒಡೆಯನೂ, ವಿಶ್ವಾತ್ಮನೂ, ಲೋಕಕ್ಕೆಲ್ಲ ಶಾಂತಿಯನ್ನನುಗ್ರಹಿಸುವಾತನೂ, ಸುಖದಾಯಕನೂ ಈತನೇ.

೯೧. ಓ ವರಾನನೇ! ಹೀಗೆ ಭುವನತ್ರಯದಲ್ಲಿಯೂ ಅಜೇಯನಾಗಿರುವ ಈ ಪ್ರಭುವನ್ನು ನೀನು ಗೆದ್ದುದೆಂತು? ಹೆಂಗಸಾದುದರಿಂದ ಚಪಲೆಯಾಗಿರುವ ನೀನು ಈತನನ್ನು ತಿಳಿದೇ ಇಲ್ಲವು."

೯೨. ಎಲೈ ವಿಪ್ರರೇ! ನಾರದನಿಂತು ನುಡಿಯಲು, ಆ ಪಾರ್ವತಿಯು ಕೋಪಗೊಂಡು ಮತ್ಸರಗ್ರಸ್ತೆಯಾಗಿ ಆಕ್ಷೇಪಕರವಾದ ಈ ಮಾತನ್ನಾಡಿದಳು.

ಪಾರ್ವತ್ಯುವಾಚ :—
ಚಾಪಲ್ಯಾಚ್ಚ ನ ವಕ್ತವ್ಯಂ ಬ್ರಹ್ಮಪುತ್ರ ನಮೋಽಸ್ತುತೇ ।
ತವ ಭೀತಾಸ್ಮಿ ಭದ್ರಂ ತೇ ದೇವರ್ಷೇ ಮೌನಮಾವಹ ॥ ೯೩ ॥
ಕಥಂ ಶಿವೋ ಹಿ ದೇವರ್ಷೇ ಉಕ್ತೋಽತೋ ಹಿ ತ್ವಯಾ ಬಹು ।
ಮತ್ಪ್ರಸಾದಾಚ್ಛಿವೋ ಜಾತ ಈಶ್ವರೋ ಯೋ ಹಿ ಪಠ್ಯತೇ ॥ ೯೪ ॥
ಮಯಾ ಲಬ್ಧಪ್ರತಿಷ್ಠೋಽಯಂ ಜಾತೋ ನಾಸ್ತ್ಯತ್ರ ಸಂಶಯಃ ॥ ೯೫ ॥
ಏವಂ ಬಹುವಿಧಂ ಶ್ರುತ್ವಾ ನಾರದೋ ಮೌನಮಾಶ್ರಯತ್ ।
ಉಪಸ್ಥಿತಂ ಚ ತದ್ದೃಷ್ಟ್ವಾ ಭೃಂಗೀ ವಾಕ್ಯಮಥಾಬ್ರವೀತ್ ॥ ೯೬ ॥

ಭೃಂಗ್ಯುವಾಚ :—
ತ್ವಯಾ ಬಹು ನ ವಕ್ತವ್ಯಂ ಪುನರೇವ ಚ ಭಾಮಿನಿ ।
ಅಜೇಯೋ ನಿರ್ವಿಕಾರೋ ಹಿ ಸ್ವಾಮೀ ಮಮ ಸುಮಧ್ಯಮೇ ॥ ೯೭ ॥

---

೯೩-೯೫. ಪಾರ್ವತಿಯು ಹೇಳುತ್ತಾಳೆ:—"ಬ್ರಹ್ಮಪುತ್ರ! ನೀನು ಆ ನಿನ್ನ ವಟುಚಾಪಲ್ಯದಿಂದ ಈ ರೀತಿಯೆಲ್ಲ ಮಾತನಾಡಬೇಡ. ನಿನಗೆ ನಮಸ್ಕಾರ. ನಿನ್ನನ್ನು ಕಂಡರೆ ನನಗೆ ಹೆದರಿಕೆಯಾಗಿರುವುದು. ಅಯ್ಯಾ ದೇವರ್ಷಿಯೇ! ಈಗ ನೀನು ಸುಮ್ಮನಿದ್ದರೆ ಸಾಕು. ನಾರದಾ! ಈ ಶಿವನ ವಿಷಯದಲ್ಲಿ ನೀನೇನು ಬಹಳವಾಗಿ ಹೇಳುತ್ತಿರುವೆಯಲ್ಲ! ಈಶ್ವರನೆಂದು ಯಾವನು ಹೇಳಲ್ಪಡುತ್ತಿರುವನೋ ಆ ಈತನು ನನ್ನ ಅನುಗ್ರಹದಿಂದ ಹುಟ್ಟಿದವನು. ಈತನು ನನ್ನ ಅನುಗ್ರಹದಿಂದಲೇ ಪ್ರತಿಷ್ಠೆಯನ್ನೂ ಪಡೆದಿರುತ್ತಾನೆ. ಇದರಲ್ಲಿ ಸಂದೇಹವಿಲ್ಲವು."

೯೬. ಈ ರೀತಿಯಾದ ಬಗೆಬಗೆಯ ಮಾತುಗಳನ್ನು ಕೇಳಿ ಆ ನಾರದನು ಮರುಮಾತನ್ನಾಡದೆ ಸುಮ್ಮನಾಗಿಹೋದನು. ಈ ರೀತಿ ಬೆಳದ ಆ ವಿವಾದವನ್ನು ಕಂಡು ಶಿವಕಿಂಕರನಾದ ಭೃಂಗಿಯು ದೇವಿಯನ್ನು ಕುರಿತು ಹೀಗೆಂದನು.

೯೭. ಭೃಂಗಿಯು ಹೇಳುತ್ತಾನೆ:—"ಓ ಭಾಮಿನಿ! ನೀನು ಪುನಃ ಈ ರೀತಿ ಹೇಳಬಾರದು. ಓ ಸುಮಧ್ಯಮೆಯಾದ ದೇವಿಯೇ! ನಮ್ಮ ಪ್ರಭುವು ವಿಕಾರ ವಿಲ್ಲದವನು. ಆದುದರಿಂದಲೇ ಅಜೇಯನು. ಎಲೆ ವರಾನನೇ! ನೀನು ಕೇವಲ ಸ್ತ್ರೀ ಸ್ವಭಾವದಿಂದ ಕೂಡಿರುವೆಯಾದುದರಿಂದ ಈ ನಮ್ಮ ಸ್ವಾಮಿಯನ್ನರಿಯದ ವಳಾಗಿರುವೆ. ಈತನು ಶ್ರೇಷ್ಠವಾದ ನಮಸ್ತಕ್ಕೂ ಶ್ರೇಷ್ಠನಾದವನು. ಓ ಭವಾನೀ! ನೀನು ಕೇವಲ ಮನ್ಮಥನನ್ನು ಪುರಸ್ಕರಿಸಿಕೊಂಡು ಮಹಾ ಭಯಂಕರನಾದ ಈ ನಮ್ಮ ಮಹೇಶ್ವರನ ಬಳಿಗೈದಿರುವೆ.

ಸ್ತ್ರೀಭಾವಯುಕ್ತಾಸಿ ವರಾನನೇ ತ್ವಂ
ದೇವಂ ನ ಜಾನಾಸಿ ಪರಂ ಪರಾಣಾಂ ।
ಕಾಮಂ ಪುರಸ್ಕೃತ್ಯ ಪುರಾ ಭವಾನಿ
ಸಮಾಗತಾಸ್ಯೇವ ಮಹೇಶಮುಗ್ರಂ ॥ ೯೮ ॥
ಯಥಾ ಕೃತಂ ತೇನ ಪಿನಾಕಿನಾ ಪುರಾ
ಏತತ್ಸ್ಮೃತಂ ಕಿಂ ಸುಭಗೇ ವದಸ್ವ ನಃ ।
ಕೃತೋ ಹ್ಯನಂಗೋ ಹಿ ತದಾ ಹ್ಯನೇನ
ದಗ್ಧಂ ವನಂ ತಸ್ಯ ಗಿರೇಃ ಪಿತುಸ್ತೇ ॥ ೯೯ ॥
ಪಶ್ಚಾತ್ತ್ವಯಾರಾಧಿತ ಏವ ಏಷ
ಶಿವಃ ಪರಾಣಾಂ ಪರಮಃ ಪರಾತ್ಮಾ ॥ ೧೦೦ ॥
ಭೃಂಗಿಣೇತ್ಯೇವಮುಕ್ತಾ ಸಾ ಹ್ಯುವಾಚ ಕುಪಿತಾ ಭೃಶಂ ।
ಶೃಣ್ವತೋ ಹಿ ಮಹೇಶಸ್ಯ ವಾಕ್ಯಂ ರುಷ್ಟಾ ಚ ಭೃಂಗಿಣಂ ॥ ೧೦೧ ॥
ಪಾರ್ವತ್ಯುವಾಚ :—
ಹೇ ಭೃಂಗಿನ್ಪಕ್ಷಪಾತಿತ್ವಾದ್ಯದುಕ್ತಂ ವಚನಂ ಮಮ ।
ಶಿವಪ್ರಿಯೋಽಸಿ ರೇ ಮಂದ ಭೇದಬುದ್ಧಿರತೋ ಹ್ಯಸಿ ॥ ೧೦೨ ॥
ಅಹಂ ಶಿವಾತ್ಮಿಕಾ ಮೂಢ ಶಿವೋ ನಿತ್ಯಂ ಮಯಿ ಸ್ಥಿತಃ ।
ಕಥಂ ಶಿವಾಭ್ಯಾಂ ಭಿನ್ನತ್ವಂ ತ್ವಯೋಕ್ತಂ ವಾಗ್ಬಲೇನ ಹಿ ॥ ೧೦೩ ॥

---

೯೮–೯೯. ಎಲೌ ಮಂಗಳಕರಳೇ! ಈ ನಮ್ಮ ಪ್ರಭುವು ಪೂರ್ವದಲ್ಲಿ ಸಗಿದುದೆಲ್ಲವನ್ನೂ ಈಗಾಗಲೇ ಮರೆತುಹೋದೆಯೇನು? ಈ ಸಂಗತಿಯನ್ನು ನಮಗೆ ಹೇಳು. ಆಗ ನಮ್ಮಾ ಶಿವನು ಮನ್ಮಥನನ್ನು ದಹಿಸಿ ಅವನನ್ನು ಅನಂಗನನ್ನಾಗಿ ಮಾಡಿದುದಲ್ಲದೆ ಗಿರಿರಾಜನಾದ ನಿನ್ನ ತಂದೆಯ ಉಪವನವೆಲ್ಲವನ್ನೂ ಸುಟ್ಟುದನ್ನೂ ಮರೆತೆಯೇನು?

೧೦೦. ಆ ತರುವಾಯ ನೀನು ಈ ನಮ್ಮ ಪ್ರಭುವನ್ನು, ಸರ್ವೋತ್ತಮನಾದ ಈ ಪರಮಾತ್ಮನನ್ನು ಪೂಜಿಸಲಿಲ್ಲವೇ?''

೧೦೧–೧೦೨. ಆ ಭೃಂಗಿಯು ಈ ಪ್ರಕಾರವಾಗಿ ಹೇಳಲು ಗಿರಿಜೆಯು ಬಹಳವಾಗಿ ಕೋಪಗೊಂಡು ಮಹೇಶ್ವರನು ಕೇಳುತ್ತಿರುವಂತೆಯೇ ಭೃಂಗಿಯನ್ನು ಕುರಿತು ರೋಷದಿಂದ ಹೀಗೆಂದಳು: ಪಾರ್ವತಿಯು ಹೇಳುತ್ತಾಳೆ:—'' ಎಲೈ ಭೃಂಗಿಯೇ! ನೀನು ಶಿವನಿಗೆ ಪ್ರಿಯನಾದವನು. ಪಕ್ಷಪಾತದಿಂದ ಈ ಮಾತನ್ನಾಡಿದೆಯಾದುದರಿಂದ ನೀನು ಭೇದಬುದ್ಧಿಯುಳ್ಳವನಾಗಿರುತ್ತೀಯೆ.

೧೦೩. ಎಲೆವೋ ತಿಳಿಗೇಡಿಯೇ! ನಾನು ಯಾವಾಗಲೂ ಶಿವಸ್ವರೂಪಳಾಗಿಯೇ ಇರುವೆನು. ಈ ಶಿವನು ನಿರಂತರವೂ ನನ್ನಲ್ಲಿಯೇ ನೆಲಸಿರುವನು.

ಶ್ರುತಂ ಚ ವಾಕ್ಯಂ ಶುಭದಂ ಪಾರ್ವತ್ಯಾ ಭೃಂಗಿಣಾ ತದಾ ।
ಉವಾಚ ಪಾರ್ವತೀಂ ಭೃಂಗೀ ರುಷಿತಃ ಶಿವಸನ್ನಿಧೌ ॥ ೧೦೪ ॥
ಪಿತೃಯಜ್ಞೇ ಚ ದಕ್ಷಸ್ಯ ಶಿವನಿಂದಾ ತ್ವಯಾ ಶ್ರುತಾ ।
ಅಪ್ರಿಯಶ್ರವಣಾತ್ಸದ್ಯಸ್ತ್ವಯಾ ತ್ಯಕ್ತಂ ಕಲೇವರಂ ॥ ೧೦೫ ॥
ತತ್ಕ್ಷಣಾದೇವ ತನ್ವಂಗಿ ಹ್ಯಧುನಾ ಕಿಂ ಕೃತಂ ತ್ವಯಾ ।
ಸಂಭ್ರಮಾತ್ಕಿಂ ದಜಾನಾಸಿ ಶಿವನಿಂದಕಮೇವಚ ॥ ೧೦೬ ॥
ಕಥಂ ವಾ ಪರ್ವತಶ್ರೇಷ್ಠಾಜ್ಜಾತಾಸಿ ವರವರ್ಣಿನಿ ।
ಕಥಂ ವಾ ತಪಸೋಗ್ರೇಣ ಸಂತಪ್ತಾಸಿ ಸುಮಧ್ಯಮೇ ॥ ೧೦೭ ॥
ಸಪ್ರೇಮಾ ಚ ಶಿವೇ ಭಕ್ತಿಸ್ತವ ನಾಸ್ತೀಹ ಸಾಂಪ್ರತಂ ।
ಶಿವಪ್ರಿಯಾನಿ ತನ್ವಂಗಿ ತಸ್ಮಾದೇವಂ ಬ್ರವೀಮಿ ತೇ ॥ ೧೦೮ ॥
ಶಿವಾತ್ಪರತರಂ ನಾನ್ಯತ್ತ್ರಿಷು ಲೋಕೇಷು ವಿದ್ಯತೇ ।
ಶಿವೇ ಭಕ್ತಿಸ್ತ್ವಯಾ ಕಾರ್ಯಾ ಸಪ್ರೇಮಾ ವರವರ್ಣಿನಿ ॥ ೧೦೯ ॥

---

ನೀನು ಕೇವಲ ಆ ನಿನ್ನ ಮಾತಿನ ಬಲದಿಂದ ಹೇಳಿದ ಭೇದವು ಪಾರ್ವತೀ ಪರಮೇಶ್ವರರಾದ ನಮ್ಮಿರ್ವರಿಗೂ ಹೇಗೆತಾನೆ ಇರುತ್ತದೆ?"

೧೦೪–೧೦೬. ಬಹು ಮಂಗಳಕರವಾದ ಆ ಪಾರ್ವತಿಯಾಡಿದ ಈ ಮಾತನ್ನು ಕೇಳಿ ಆ ಭೃಂಗಿಯು ಶಿವನ ಸನ್ನಿಧಿಯಲ್ಲಿ ಆ ದೇವಿಯನ್ನು ಕುರಿತು ರೋಷದಿಂದ ಹೇಳಿದನು. "ಓ ದೇವೀ! ನೀನು ಪೂರ್ವದಲ್ಲಿ ನಿನ್ನ ತಂದೆಯಾದ ದಕ್ಷಬ್ರಹ್ಮ ನೆಸಗಿದ ಯಜ್ಞದ ಸಮಯದಲ್ಲಿ ಆತನೊರೆದ ಶಿವನಿಂದಾವಾಕ್ಯಗಳೆಲ್ಲವನ್ನೂ ಕಿವಿಯಾರ ಕೇಳಿದೆ. ಆ ಅನಿಷ್ಟ ವಾಕ್ಯಗಳನ್ನು ಕೇಳಿ ಒಡನೆಯೇ ನೀನು ನಿನ್ನ ದೇಹವನ್ನು ತೊರೆದೆ. ಅಂತಹ ನೀನು ಈಗೇನು ಮಾಡುತ್ತಿರುವೆಯೆಂಬುದನ್ನು ನಿನ್ನೀ ರೋಷದಿಂದ ನೀನೇ ಶಿವನಿಂದೆಯನ್ನೆಸಗುತ್ತಿರುವುದನ್ನು ಸಂಭ್ರಮದಿಂದ ತಿಳಿಯದಿರುವೆ!

೧೦೭. ವರವರ್ಣಿನಿಯಾದ ನೀನು ಪರ್ವತರಾಜನಾದ ಹಿಮವಂತನಿಗೆ ಮಗಳಾಗಿ ಜನಿಸಿದುದೆಂತು? ಓ ಸುಮಧ್ಯಮೆಯೇ! ಆ ತರುವಾಯ ಉಗ್ರವಾದ ತಪಸ್ಸನ್ನೆಸಗಿ ನೀನು ಸಂತಪಿಸಿದುದೆಂತು?

೧೦೮. ಅಂತಹ ಪ್ರೇಮಭರಿತೆಯಾಗಿದ್ದ ನಿನಗೆ ಇದೀಗ ಶಿವನಲ್ಲಿ ಭಕ್ತಿಯಿಲ್ಲದೆಹೋದುದು ಹೇಗೆ? ಓ ಸುಂದರಿ! ನೀನು ಶಿವನಿಗೆ ಪ್ರಿಯಳಾದುದ ರಿಂದ ನಾನು ನಿನಗೀರೀತಿ ಹೇಳುತ್ತಿರುವೆನು.

೧೦೯. ಶಿವನನ್ನುಳಿದು ಮೂರುಲೋಕಗಳಲ್ಲಿಯೂ ಶ್ರೇಷ್ಠವಾದ ಪರವಸ್ತು ವಿರುವುದಿಲ್ಲವು. ಆದುದರಿಂದೆಲೈ ವರವರ್ಣಿನಿಯೇ! ನೀನು ಪ್ರೇಮದಿಂದೊಡ ಗೂಡಿ ಈ ಪರಶಿವನಲ್ಲಿ ಭಕ್ತಿಸಂಪನ್ನಳಾಗಿರಬೇಕು.

ಭಕ್ತಾಸಿ ತ್ವಂ ಮಹಾದೇವಿ ಮಹಾಭಾಗ್ಯವತಾಂ ವರೇ ।
ಸಂಸೇವ್ಯತಾಂ ಪ್ರಯತ್ನೇನ ತಪಸೋಪಾರ್ಜಿತಸ್ತ್ವಯಾ ॥ ೧೧೦ ॥
ಶಿವೋ ವರೇಣ್ಯಃ ಸರ್ವೇಶಃ ನಾನ್ಯಥಾ ಕರ್ತುಮರ್ಹಸಿ ।
ಭೃಂಗಿಣೋ ವಚನಂ ಶ್ರುತ್ವಾ ಗಿರಿಜಾ ತಮುವಾಚ ಹ ॥ ೧೧೧ ॥

ಗಿರಿಜೋವಾಚ :—

ರೇ ಭೃಂಗಿನ್ಮೌನಮಾಲಂಬ್ಯ ಸ್ಥಿರೋ ಭವಾಥವಾ ವ್ರಜ ।
ವಾಚ್ಯಾವಾಚ್ಯಂ ನ ಜನಾಸಿ ಕಿಂ ಬ್ರವೀಷಿ ಪಿಶಾಚವತ್ ॥ ೧೧೨ ॥
ತಪಸಾ ಕೇನ ಚಾನೀತಃ ಕಯಾ ಚಾಪಿ ಶಿವೋ ಹ್ಯಯಂ ।
ಕಾಹಂ ಕೋಽಸೌ ತ್ವಯಾ ಜ್ಞಾತಃ ಭೇದಬುದ್ಧ್ಯಾ ಬ್ರವೀಷಿ ನೋ ॥
ಕೋಽಸಿ ತ್ವಂ ಕೇನ ಯುಕ್ತೋಽಸಿ ಕಸ್ಮಾಚ್ಚ ಬಹು ಭಾಷಸೇ ।
ಶಾಪಂ ತವ ಪ್ರದಾಸ್ಯಾಮಿ ಶಿವಃ ಕಿಂ ಕುರುತೇಽಧುನಾ ॥ ೧೧೪ ॥
ಭೃಂಗಿಣೋಕ್ತಾ ತಿರಸ್ಕೃತ್ಯ ತದಾ ಶಾಪಂ ದದೌ ಸತೀ ।
ನಿರ್ಮಾಂಸೋ ಭವ ರೇ ಮಂದ ರೇ ಭೃಂಗಿನ್ಶಂಕರಪ್ರಿಯ ॥ ೧೧೫ ॥

---

೧೧೦. ಎಲೌ ಮಹಾದೇವಿಯೇ! ನೀನು ನಿಜವಾಗಿಯೂ ಶಿವಭಕ್ತೆಯಾಗಿರುವೆ! ಮಹಾಭಾಗ್ಯವತಿಯಾಗಿರುವೆ! ಆದಕಾರಣ ನೀನು ನಿನ್ನ ತಪಸ್ಸಿನಿಂದ ಪತಿಯನ್ನಾಗಿ ಪಡೆದಿರುವ ಈ ಪರಶಿವನನ್ನು ಸೇವಿಸುವವಳಾಗು.

೧೧೧. ಶಿವನು ವರೇಣ್ಯನು; ಸರ್ವೇಶ್ವರನು, ಆತನ ವಿಷಯದಲ್ಲಿ ನೀನು ಅನ್ಯಥಾ ನಡೆಯಬೇಡ.'' ಎಲೈ ವಿಪ್ರರೇ! ಭೃಂಗಿಯ ಈ ಮಾತುಗಳನ್ನು ಕೇಳಿ ಗಿರಿಜೆಯು ಅವನನ್ನು ಕುರಿತು ಹೇಳಿದಳು.

೧೧೨–೧೧೩. ಗಿರಿಜೆಯು ಹೇಳುತ್ತಾಳೆ:—'' ಎಲೆವೋ ಭೃಂಗಿ! ನೀನು ಮಾತನಾಡದೆ ಸುಮ್ಮನಿರು. ಇಲ್ಲವಾದರೆ ಇಲ್ಲಿಂದ ಹೊರಟುಹೋಗು. ಹೇಳಬೇಕಾದುದೇನು, ಹೇಳಬಾರದುದೇನು ಎಂಬುದನ್ನೇ ನೀನರಿಯೆ! ಏತಕ್ಕೆ ಸುಮ್ಮನೆ ಪಿಶಾಚದಂತೆ ಗಳಹುತ್ತೀಯೆ. ಎಲೆವೋ! ನಾನು ಯಾವ ತಪಸ್ಸಿನಿಂದ ಈ ಶಿವನನ್ನು ಕರೆತಂದೆ? ನಾನಾರು? ಈ ಶಿವನಾರು? ನಾವೀರ್ವರೂ ಬೇರೆ ಬೇರೆಯೆಂಬ ಭೇದಬುದ್ಧಿಯಿಂದ ಮಾತನಾಡುತ್ತಿರುವೆಯಲ್ಲಾ!

೧೧೪. ನೀನಾರು? ಯಾರೊಡನಿರುವೆ? ನಿನ್ನನ್ನು ನಿಯಮಿಸಿದವರಾರು? ಏತಕ್ಕೆ ಬಹಳವಾಗಿ ಮಾತನಾಡುತ್ತೀಯೆ? ಈಗ ನಾನು ನಿನಗೆ ಶಾಪವನ್ನೀಯುತ್ತೇನೆ. ಶಿವನೇನುಮಾಡುವನೋ ನೋಡುವ.''

೧೧೫. ಈ ಮಾತನ್ನು ಕೇಳಿ ಭೃಂಗಿಯು ತಿರಸ್ಕಾರದಿಂದ ಮಾತನಾಡಿದನು. ಆಗಲಾ ಸತಿಯು ಅವನನ್ನೀರೀತಿ ಶಪಿಸಿದಳು. '' ಎಲೆವೋ ತಿಳಿಗೇಡಿಯೇ! ಶಂಕರಪ್ರಿಯನಾದ ನೀನು ಮಾಂಸವಿಲ್ಲದವನಾಗು.''

ಏವ ಮುಕ್ತ್ವಾ ತದಾ ದೇವೀ ಪಾರ್ವತೀ ಶಂಕರಪ್ರಿಯಾ ।
ಅಥ ಕೋಪೇನ ಸಂಯುಕ್ತಾ ಪಾರ್ವತೀ ಶಂಕರಂ ತದಾ ॥ ೧೧೬ ॥
ಕರೇ ಗೃಹ್ಯ ಚ ತನ್ವಂಗೀ ಭುಜಂಗಂ ವಾಸುಕಿಂ ತಥಾ ।
ಉದತಾರಯುತ್ಕಂಠಾತ್ಸಾ ತಥಾನ್ಯಾನಿ ಬಹೂನಿ ಚ ॥ ೧೧೭ ॥
ಶಂಭೋರ್ಜಗ್ರಾಹ ಕುಪಿತಾ ಭೂಷಣಾನಿ ತ್ವರಾನ್ವಿತಾ ।
ಹೃತಾ ಚಂದ್ರಕಲಾ ತಸ್ಯ ಗಜಾಜಿನಮನುತ್ತಮಂ ॥ ೧೧೮ ॥
ಕಂಬಲಾಶ್ವ ತತಾ ನಾಗೌ ಮಹೇಶಕೃತಭೂಷಣೌ ।
ಹೃತೌ ತಯಾ ಮಹಾದೇವ್ಯಾ ಛಲೋಕ್ತ್ಯಾ ಚ ಪ್ರಹಸ್ಯ ವೈ ॥ ೧೧೯ ॥
ಕೌಪೀನಾಚ್ಛಾದನಂ ತಸ್ಯ ಛಲೋಕ್ತ್ಯಾ ಚ ಪ್ರಹಸ್ಯವೈ ।
ತದಾ ಗಣಾಶ್ಚ ಸಖ್ಯಶ್ಚ ತ್ರಪಯಾ ಪೀಡಿತಾಭವನ್ ॥ ೧೨೦ ॥
ಪರಾಂಙ್ಮುಖಾಶ್ಚ ಸಂಜಾತಾ ಭೃಂಗೀ ಚೈವ ಮಹಾತಪಾಃ ।
ತಥಾ ಚಂಡೋಹಿ ಮುಂಡಶ್ಚ ಮಹಾಲೋಮಾ ಮಹೋದರಃ ॥ ೧೨೧ ॥
ಏತೇ ಚಾನ್ಯೇ ಚ ಬಹವೋ ಗಣಾಸ್ತೇ ದುಃಖಿನೋಽಭವನ್ ।
ತಾಂಶ್ಚ ದೃಷ್ಟ್ವಾ ತಥಾ ಭೂತಾನ್ಮಹೇಶೋ ಲಜ್ಜಿತೋಽಭವತ್ ॥ ೧೨೨ ॥
ಉವಾಚ ವಾಕ್ಯಂ ರುಷಿತಃ ಪಾರ್ವತೀಂ ಪ್ರತಿ ಶಂಕರಃ ॥ ೧೨೩ ॥

---

೧೧೬–೧೨೦. ಶಂಕರಪ್ರಿಯೆಯಾದ ಆ ಪಾರ್ವತಿಯು ಭೃಂಗಿಯನ್ನು ಹೀಗೆ ಶಪಿಸಿ, ಆ ಬಳಿಕ ಕೋಪಗೊಂಡು ಶಂಕರನ ಕೈಯನ್ನು ಹಿಡಿದು, ವಾಸುಕಿ ಸರ್ಪವನ್ನೂ, ಇನ್ನೂ ಇತರ ಭೂಷಣಗಳನ್ನೂ ತೆಗೆದುಹಾಕಿದಳು. ಆಕೆಯು ಇಷ್ಟುಮಾತ್ರವಲ್ಲದೆ ಕುಪಿತಳಾಗಿ ಬೇಗಬೇಗನೆ ಆ ಶಿವನ ಮೈಮೇಲಿದ್ದ ಒಡವೆಗಳೆಲ್ಲವನ್ನೂ ಮಾತ್ರವಲ್ಲದೆ, ಆತನ ಶಿರಸ್ಸಿನಲ್ಲಿದ್ದ ಚಂದ್ರಕಲೆ ಯನ್ನೂ, ಗಜಚರ್ಮವನ್ನೂ, ಕಂಬಲಾಶ್ವತರ ನಾಗಗಳನ್ನೂ ಹುರುಡಿನ ಮಾತುಗಳನ್ನಾಡಿ ನಕ್ಕು ಕಸೆದುಕೊಂಡಳು. ಇದೂ ಅಲ್ಲದೆ, ಆ ದೇವಿಯು ಅದೇ ಛಲೋಕ್ತಿಯಿಂದಲೇ ನಗುತ್ತ ಆ ಶಿವನ ಕೌಪೀನವನ್ನೂ ಕಸೆದುಕೊಂಡಳು. ಅದನ್ನು ಕಂಡು ಅಲ್ಲಿದ್ದ ಶಿವಕಿಂಕರರೂ, ಆಕೆಯ ಸಖಿಯರೂ ನಾಚಿಕೆಗೊಳ ಗಾದರು.

೧೨೧–೧೨೨. ಅವರೂ, ಮಹಾತಪಸ್ವಿಯಾದ ಭೃಂಗಿಯೂ, ಚಂಡಮುಂಡರೂ, ಮಹಾಲೋಮ ಮಹೋದರರೂ, ಇನ್ನೂ ಇತರ ಅನೇಕ ಶಿವಗಣಗಳೂ ದುಃಖಿತರಾದರು. ಇಂತಾದ ಅವರನ್ನು ಕಂಡು ಆ ಪರಶಿವನೂ ನಾಚಿದನು.

೧೨೩. ಆಗಲಾ ಶಂಕರನು ರೋಷಗೊಂಡಿರುವ ಆ ಪಾರ್ವತಿಯನ್ನು ಕುರಿತು ಹೇಳಿದನು :

ರುದ್ರ ಉವಾಚ :—

ಉಪಹಾಸಂ ಪ್ರಕುರ್ವಂತಿ ಸರ್ವೇ ಹಿ ಋಷಯೋ ಭೃಶಂ ।
ತಥಾ ಬ್ರಹ್ಮಾ ಚ ವಿಷ್ಣುಶ್ಚ ತಥಾ ಚೇಂದ್ರಾದಯೋ ಹ್ಯಮೀ ॥ ೧೨೪ ॥
ಉಪಹಾಸಪರಾಃ ಸರ್ವೇ ಕಿಂ ತ್ವಯಾದ್ಯ ಕೃತಂ ಶುಭೇ ।
ಕುಲೇ ಜಾತಾಸಿ ತನ್ವಂಗಿ ಕಥಮೇವಂ ಕರಿಷ್ಯಸಿ ॥ ೧೨೫ ॥
ತ್ವಯಾ ಜಿತೋ ಹ್ಯಹಂ ಸುಭ್ರು ಯದಿ ಜಾನಾಸಿ ತತ್ತ್ವತಃ ।
ತರ್ಹ್ಯೇವಂ ಕುರು ಮೇ ದೇಹಿ ಕೌಪೀನಾಚ್ಛಾದನಂ ಪರಂ ।
ದೇಹಿ ಕೌಪೀನ ಮಾತ್ರಂ ಮೇ ನಾನ್ಯಥಾ ಕರ್ತುಮರ್ಹಸಿ ॥ ೧೨೬ ॥
ಏವಮುಕ್ತಾ ಸತೀ ತೇನ ಶಂಭುನಾ ಯೋಗಿನಾ ತದಾ ।
ಪ್ರಹಸ್ಯ ವಾಕ್ಯಂ ಪ್ರೋವಾಚ ಪಾರ್ವತೀ ರುಚಿರಾನನಾ ॥ ೧೨೭ ॥
ಕಿಂ ಕೌಪೀನೇನ ತೇ ಕಾರ್ಯಂ ಮುನಿನಾ ಭಾವಿತಾತ್ಮನಾ ।
ದಿಗಂಬರೇಣೈವ ತದಾ ಕೃತಂ ದಾರುವನೇ ತಥಾ ॥ ೧೨೮ ॥
ಭಿಕ್ಷಾಟನಮಿಷೇಣೈವ ಋಷಿಪತ್ನ್ಯೋ ವಿಮೋಹಿತಾಃ ।
ಗಚ್ಛತಸ್ತೇ ತದಾ ಶಂಭೋ ಪೂಜನಂ ತೈರ್ಮಹತ್ಕೃತಂ ॥ ೧೨೯ ॥
ಕೌಪೀನಂ ಪತಿತಂ ತತ್ರ ಮುನಿಭಿರ್ನಾನ್ಯಥೋದಿತಂ ।
ತಸ್ಮಾತ್ತ್ವಯಾ ಪ್ರಹಾತವ್ಯಂ ದ್ಯೂತೇ ಹಾರಿತಮೇವ ತತ್ ॥ ೧೩೦ ॥

---

೧೨೪. ರುದ್ರನು ಹೇಳುತ್ತಾನೆ:—"ಎಲೆ ದೇವಿ! ಈ ಮಹರ್ಷಿಗಳೂ, ಬ್ರಹ್ಮವಿಷ್ಣು ಮಹೇಂದ್ರಾದಿಗಳಾದ ಈ ದೇವತೆಗಳೂ ನನ್ನನ್ನು ನೋಡಿ ಹಾಸ್ಯ ಮಾಡುತ್ತಾರೆ.

೧೨೫. ಓ ಮಂಗಳಾಂಗಿ! ಈಗ ನೀನೇನುಮಾಡಿದೆ? ಎಲೌ ಸುಂದರಿ! ನೀನು ಒಳ್ಳೆಯ ಕುಲದಲ್ಲಿ ಹುಟ್ಟಿರುವೆ. ಆದರೂ ಹೀಗೇಕೆ ಮಾಡುತ್ತೀಯೆ!

೧೨೬. ಓ ಸುಭ್ರು! ನಾನು ನಿನ್ನಿಂದ ಜಿತನಾಗಿರುತ್ತೇನೆ. ಇದನ್ನು ನೀನು ಯಥಾರ್ಥವಾಗಿಯೂ ತಿಳಿಯುವವಳಾಗು. ಆದುದರಿಂದ ಈಗ ನೀನು ನನ್ನ ಕೌಪೀನದಿಂದ ನನಗೆ ಆಚ್ಛಾದನವನ್ನು ಮಾಡು. ದೇವೀ! ನೀನು ನನಗೆ ಕೌಪೀನವನ್ನು ಮಾತ್ರ ಕೊಡು. ಹೀಗೆ ಮಾಡಬೇಡ."

೧೨೭–೧೩೦. ಯೋಗಿಯಾದ ಶಂಭುವಿಂತು ನುಡಿಯಲು, ರುಚಿರಾನನೆಯಾದ ಆ ಪಾರ್ವತಿಯು ನಕ್ಕು ನುಡಿದಳು: "ಎಲೈ ಪ್ರಿಯನೇ! ಮುನಿಯೂ, ಆತ್ಮಜ್ಞಾನಿಯೂ ಆದ ನಿನಗೆ ಕೌಪೀನದಿಂದೇನು ಪ್ರಯೋಜನ? ಪೂರ್ವದಲ್ಲಿ ನೀನು ದಾರುವನದಲ್ಲಿ ದಿಗಂಬರನಾಗಿ ಭಿಕ್ಷಾಟನೆಯ ನೆಪದಿಂದ ಋಷಿಪತ್ನಿಯರೆಲ್ಲರನ್ನೂ ಮೋಹಗೊಳಿಸಲಿಲ್ಲವೆ? ನೀನು ಹೋಗುತ್ತಿರುವಂತೆಯೇ ಆ ಋಷಿಭಾರ್ಯೆಯರು ನಿನಗೆ ಬಹಳವಾಗಿ ಪೂಜೆಯನ್ನು ಸಲ್ಲಿಸಲಿಲ್ಲವೆ? ಆಗ ನಿನ್ನ

ತಚ್ಛ್ರುತ್ವಾ ಕುಪಿತೋ ರುದ್ರಃ ಪಾರ್ವತೀಂ ಪರಮೇಶ್ವರಃ ।
ನಿರೀಕ್ಷಮಾಣೋಽತಿರುಷಾ ತೃತೀಯೇನೈವ ಚಕ್ಷುಷಾ ॥ ೧೩೧ ॥
ಕುಪಿತಂ ಶಂಕರಂ ದೃಷ್ಟ್ವಾ ಸರ್ವೇ ದೇವಗಣಾಸ್ತದಾ ।
ಭಯೇನ ಮಹತಾವಿಷ್ಟಾಸ್ತಥಾ ಗಣಕುಮಾರಕಾಃ ॥ ೧೩೨ ॥
ಊಚುಃ ಸರ್ವೇ ಶನೈಸ್ತತ್ರ ಶಂಕಿತೇನ ಪರಸ್ಪರಂ ।
ಅದ್ಯಾಯಂ ಕುಪಿತೋ ರುದ್ರೋ ಗಿರಿಜಾಂ ಪ್ರತಿ ಸಂಪ್ರತಿ ॥ ೧೩೩ ॥
ಯಥಾ ಹಿ ಮದನೋ ದಗ್ಧಸ್ತಥೇಯಂ ನಾನ್ಯಥಾ ವಚಃ ।
ಏವಂ ಮೀಮಾಂಸಮಾನಾಸ್ತೇ ಗಣಾ ದೇವರ್ಷಯಸ್ತದಾ ॥ ೧೩೪ ॥
ವಿಲೋಕಿತಾಸ್ತಯಾ ದೇವ್ಯಾ ಸರ್ವೇ ಸೌಭಾಗ್ಯಮುದ್ರಯಾ ।
ಉವಾಚ ಪ್ರಹಸನ್ನೇವ ಸತೀ ಸತ್ಪುರುಷಂ ತದಾ ॥ ೧೩೫ ॥
ಕಿಮಾಲೋಕಪರೋ ಭೂತ್ವಾ ಚಕ್ಷುಷಾ ಪರಮೇಣ ಹಿ ।
ನಾಹಂ ಕಾಲೋ ನಕಾಮೋಽಹಂ ನಾಹಂ ದಕ್ಷಸ್ಯ ವೈ ಮಖಃ ॥ ೧೩೬ ॥

---

ಕೌಪೀನವು ನೆಲಕ್ಕೆ ಬಿದ್ದುಹೋಯಿತು. ಅದನ್ನು ಕಂಡೂ ಸಹ ಆ ಋಷಿಪತ್ನಿಯರೇನೂ ಹೇಳಲಿಲ್ಲವು. ಆದುದರಿಂದ ನಾನು ದ್ಯೂತದಲ್ಲಿ ಗೆದ್ದಿರುವ ಈ ಕೌಪೀನವನ್ನು ಬಿಟ್ಟುಬಿಡತಕ್ಕುದೆಂತು?''

೧೩೧–೧೩೨. ಈ ಮಾತನ್ನು ಕೇಳಿ ಆ ಪರಮೇಶ್ವರನು ಪಾರ್ವತಿಯಲ್ಲಿ ಬಹಳವಾಗಿ ಕೋಪಗೊಂಡು ಅವಳನ್ನು ತನ್ನ ಮೂರನೆಯ ಕಣ್ಣಿನಿಂದ ದುರದುರನೆ ನೋಡುತ್ತಲಿದ್ದನು. ಶಂಕರನೀರೀತಿ ಕುಪಿತನಾದುದನ್ನು ಕಂಡು ಸಮಸ್ತ ದೇವತಾಸಮೂಹಗಳೂ, ಶಿವಗಣಗಳೂ, ಗಣೇಶನೇ ಮೊದಲಾದ ಕುಮಾರರೂ ಬಹಳ ಭಯಗೊಂಡರು.

೧೩೩–೧೩೪. ಹೀಗೆ ಭಯದಿಂದ ಶಿವನೇನು ಮಾಡುವನೋ ಎಂದು ಸಂಶಯಪಟ್ಟ ಅವರೆಲ್ಲರೂ ತಂತಮ್ಮಲ್ಲಿಯೇ ಮೆಲ್ಲಮೆಲ್ಲಗೆ, "ಈಗಲೀ ರುದ್ರನು ಗಿರಿಜೆಯ ವಿಷಯದಲ್ಲಿ ಕೋಪಗೊಂಡಿರುವನು. ಪೂರ್ವದಲ್ಲಿ ಮನ್ಮಥನು ಹೇಗೆಯೋ ಈಕೆಯೂ ಸಹ ಹಾಗೆಯೇ ಸುಟ್ಟುಹೋಗುವಳೆಂಬುದರಲ್ಲಿ ಸಂಶಯವಿಲ್ಲವು" ಎಂದುಕೊಂಡರು. ಆ ದೇವಗಣ ಶಿವಗಣಗಳೂ, ದೇವರ್ಷಿಗಳೂ ಈ ರೀತಿ ಚರ್ಚಿಸಿಕೊಳ್ಳುತ್ತಲಿದ್ದರು.

೧೩೫–೧೩೬. ಆಗಲಾ ದೇವಿಯು ಅವರೆಲ್ಲರನ್ನೂ ಸೌಭಾಗ್ಯಮುಖಮುದ್ರೆಯಿಂದ ಕಂಡು ನಗುತ್ತಲೇ ಪುರುಷೋತ್ತಮನಾದ ಆ ಶಂಕರನನ್ನು ಕುರಿತು, "ಎಲೈ ಪ್ರಿಯನೇ! ನೀನೇಕೆ ಈ ರೀತಿ ನಿನ್ನ ಉತ್ತಮವಾದ ಆ ಮೂರನೆಯ ಕಣ್ಣಿನಿಂದ ನನ್ನನ್ನು ದುರದುರನೆ ನೋಡುತ್ತಿರುವೆ. ನಾನು ಕಾಲನಲ್ಲ, ಕಾಮನಲ್ಲ; ನಾನು ದಕ್ಷನ ಯಾಗವೂ ಅಲ್ಲ.

ತ್ರಿಪುರೋ ನೈವ ನೈ ಶಂಭೋ ನಾಂಧಕೋ ವೃಷಭಧ್ವಜ ।
ವೀಕ್ಷಿತೇನೈವ ಕಿಂ ತೇನ ತವಚಾದ್ಯ ಭವಿಷ್ಯತಿ ।
ವೃಥೈವಂ ತ್ವಂ ವಿರೂಪಾಕ್ಷಃ ಜಾತೋಽಸಿ ಮಮ ಚಾಗ್ರತಃ ॥ ೧೩೭ ॥
ಏವಮಾದೀನ್ಯನೇಕಾನಿ ಹ್ಯುವಾಚ ಪರಮೇಶ್ವರೀ ।
ನಿಶಮ್ಯ ದೇವೋ ವಾಕ್ಯಾನಿ ಗಮನಾಯ ಮನೋ ದಧೇ ॥ ೧೩೮ ॥
ವನಮೇವ ವರಂ ಚಾದ್ಯ ವಿಜನಂ ಪರಮಾರ್ಥತಃ ।
ಏಕಾಕೀ ಯತಚಿತ್ತಾತ್ಮಾ ತ್ಯಕ್ತಸರ್ವಪರಿಗ್ರಹಃ ॥ ೧೩೯ ॥
ಸ ಸುಖೀ ಪರಮಾರ್ಥಜ್ಞಃ ಸ ವಿದ್ವಾನ್ಸ ಚ ಪಂಡಿತಃ ।
ಯೇನ ಮುಕ್ತೌ ಕಾಮರಾಗೌ ಸಮುಕ್ತಃ ಸ ಸುಖೀ ಭವೇತ್ ॥೧೪೦॥

ಏವಂ ವಿಮೃಶ್ಯ ಚ ತದಾ ಗಿರಿಜಾಂ ವಿಹಾಯ
ಶ್ರೀಶಂಕರಃ ಪರಮಕಾರುಣಿಕಸ್ತದಾನೀಂ ।
ಯಾತಃ ಪ್ರಿಯಾವಿರಹಿತೋ ವನಮದ್ಭುತಂ ಚ
ಸಿದ್ಧಾಟವೀಂಪರಮ ಹಂಸಯುತಾಂ ತಥೈವ ॥ ೧೪೧ ॥

---

೧೩೭. ಓ ಶಂಭುವೇ! ವೃಷಭವಾಹನ: ನಾನು ತ್ರಿಪುರಗಳಂತೂ ಅಲ್ಲವೇ ಅಲ್ಲ. ಅಂಧಕಾಸುರನಂತೂ ಅಲ್ಲವೇ ಅಲ್ಲ! ಹೀಗಿರುವಲ್ಲಿ ನೀನಿಂತು ನನ್ನನ್ನು ನೋಡಿದರೆ ನಿನಗಾವ ಪ್ರಯೋಜನವಾಗುತ್ತದೆ? ಈಗ ನೀನು ವಿರೂಪಾಕ್ಷನಾದುದು ನನ್ನ ಮುಂದೆ ವ್ಯರ್ಥವಾಯಿತು" ಎಂದು ಹೇಳಿದಳು.

೧೩೮. ಎಲೈ ಶೌನಕಾದಿ ಮುನಿಗಳಿರಾ! ಆ ಮಹೇಶ್ವರಿಯು ಇವೇ ಮೊದಲಾದ ಅನೇಕ ಚುಚ್ಚುನುಡಿಗಳನ್ನಾಡಿದಳು. ಇವೆಲ್ಲವನ್ನೂ ಕೇಳಿ ಆ ಪರಮೇಶ್ವರನು ಅಲ್ಲಿಂದ ಹೊರಟುಹೋಗಲು ನಿಶ್ಚಯಿಸಿದನು.

೧೩೯–೧೪೦. "ಪರಮಾರ್ಥವಾಗಿಯೂ ನಿರ್ಜನವಾದ ವನವೇ ಈಗ ನನಗೆ ಶ್ರೇಷ್ಠವಾದುದು. ಯಾವನು ಸ್ಥಿರಚಿತ್ತವುಳ್ಳವನಾಗಿ ಸಮಸ್ತ ಪರಿವಾರವನ್ನೂ ಬಿಟ್ಟು ಒಂಟಿಯಾಗಿರುತ್ತಾನೆಯೋ ಅವನೇ ಸುಖಿ; ಪರಮಾರ್ಥವನ್ನರಿತ ವಿದ್ವಾಂಸನೂ, ಜ್ಞಾನಿಯೂ ಅವನೇ! ಯಾವನು ಕಾಮಕ್ರೋಧಗಳನ್ನು ತೊರೆದಿರುವನೋ ಅವನು ಮುಕ್ತನಾಗಿ ಸುಖಿಯಾಗುತ್ತಾನೆ."

೧೪೧. ಪರಮ ಕರುಣಾಸಮುದ್ರನಾದ ಆ ಪರಮೇಶ್ವರನೀರೀತಿ ತನ್ನಲ್ಲಿಯೇ ವಿಮರ್ಶಿಸಿಕೊಂಡು ಆ ಕೂಡಲೇ ಗಿರಿಜೆಯನ್ನು ತೊರೆದು ಹೊರಟನು. ತರುವಾಯ ಆ ಸ್ವಾಮಿಯು ಪರಮಹಂಸರಿಂದ ಸೇವಿತವಾದ ಸಿದ್ಧಾಟವಿಯೆಂದು ಪ್ರಸಿದ್ಧವಾದ ಅದ್ಭುತವನಕ್ಕೈತಂದನು.

**ನಿರ್ಗತಂ ಶಂಕರಂ ದೃಷ್ಟ್ವಾ ಸರ್ವೇ ಕೈಲಾಸವಾಸಿನಃ ।**
**ನಿರ್ಯಯುಶ್ಚ ಗಣಾಃ ಸರ್ವೇ ವೀರಭದ್ರಾದಯೋಽನುತಂ ॥ ೧೪೨ ॥**
**ಛತ್ರಂ ಭೃಂಗೀ ಸಮಾದಾಯ ಜಗಾಮ ತಸ್ಯ ಪೃಷ್ಠತಃ ।**
**ಚಾಮರೇ ವೀಜ್ಯಮಾನೇ ಚ ಗಂಗಾಯಮುನಸನ್ನಿಭೇ ॥ ೧೪೩ ॥**
**ತಾಭ್ಯಾಂ ಯುಕ್ತಸ್ತದಾ ನಂದೀ ಪೃಷ್ಠತೋಽನ್ವಗಮತ್ಸುಧೀಃ ।**
**ವೃಷಭೋ ಹ್ಯಗ್ರತೋ ಭೂತ್ವಾ ಪುಷ್ಪಕೇಣ ವಿರಾಜಿತಃ ॥ ೧೪೪ ॥**
**ಶೋಭಮಾನೋ ಮಹಾದೇವ ಏಭಿಃ ಸರ್ವೈಃ ಸುಶೋಭನೈಃ ।**
**ಅಂತಃಪುರಗತಾ ದೇವೀ ಪಾರ್ವತೀ ಸಾ ಹಿ ದುರ್ಮನಾಃ ॥ ೧೪೫ ॥**
**ಸಖೀಭಿರ್ಬಹುಭಿಸ್ತತ್ರ ತಥಾನ್ಯಾಭಿಃ ಸುಸಂವೃತಾ ।**
**ಗಿರಿಜಾ ಚಿಂತಯಾಮಾಸ ಮನಸಾ ಪರಮೇಶ್ವರಂ ॥ ೧೪೬ ॥**
**ತತೋ ದೂರಂ ಗತಃ ಶಂಭುರ್ವಿಸೃಜ್ಯ ಚ ಗಣಾಂಸ್ತದಾ ।**
**ಗಣೇಶಂ ಚ ಕುಮಾರಂ ಚ ವೀರಭದ್ರಂ ತಥಾಽಪರಾನ್ ॥ ೧೪೭ ॥**
**ಭೃಂಗಿಣಂ ನಂದಿನಂ ಚಂಡಂ ಸೋಮನಂದಿನಮೇವ ಚ ।**
**ಏತಾನನ್ಯಾಂಶ್ಚ ಸರ್ವಾಂಶ್ಚ ಕೈಲಾಸ ಪುರವಾಸಿನಃ ॥ ೧೪೮ ॥**

---

೧೪೨. ಈ ರೀತಿ ಶಂಕರನು ಅಲ್ಲಿಂದ ಹೊರಟುದನ್ನು ಕಂಡು ಕೈಲಾಸವಾಸಿಗಳಾದ ವೀರಭದ್ರಾದಿ ಗಣನಾಯಕರೂ, ಇತರ ಶಿವಕಿಂಕರರೂ ಸಹ ಆ ಸ್ವಾಮಿಯನ್ನು ಹಿಂಬಾಲಿಸಿ ಹೊರಟರು.

೧೪೩–೧೪೪. ಆಗ ಭೃಂಗಿಯು ಛತ್ರವನ್ನು ಹಿಡಿದು ಹೊರಟನು. ಗಂಗಾಯಮುನಾ ನದೀದೇವತೆಗಳು ಚಾಮರಗಳನ್ನು ಹಾಕುತ್ತ ಹೊರಟರು. ಮಹಾಜ್ಞಾನಿಯಾದ ನಂದಿವೃಷಭವು ಪುಷ್ಪಕವಿಮಾನದೊಡನೆ ಇವರೆಲ್ಲರನ್ನೂ ಅನುಸರಿಸಿ ಹೊರಟನು.

೧೪೫. ಮಹಾದೇವನು ಇವರೆಲ್ಲರೊಡಗೂಡಿ ಶೋಭಿಸುತ್ತ ಸಿದ್ಧಾಟವಿಗೆ ಹೊರಟುಹೋದನು. ಆಗಲಾ ಪಾರ್ವತೀ ದೇವಿಯಾದರೋ ಅಂತಃಪುರವನ್ನು ಸೇರಿ ಬಹಳ ಮನಕುಗ್ಗಿದವಳಾದಳು.

೧೪೬. ಆಗಲಾ ದೇವಿಯು ಅನೇಕ ಗೆಳತಿಯರಿಂದಲೂ, ಇನ್ನೂ ಇತರರಿಂದಲೂ ಪರಿವೃತೆಯಾಗಿ ಮನಸ್ಸಿನಲ್ಲಿಯೇ ಆ ಪರಮೇಶ್ವರನನ್ನು ಕುರಿತು ಚಿಂತಿಸಿದಳು.

೧೪೭–೧೪೮. ಆ ಬಳಿಕ ಪರಮೇಶ್ವರನಾದರೋ ಆ ಸಿದ್ಧಾಟವಿಯಲ್ಲಿ ಬಹಳ ದೂರ ಹೋಗಿ, ಅಲ್ಲಿ ಶಿವಗಣಗಳನ್ನೂ, ಗಣೇಶ ಷಣ್ಮುಖರನ್ನೂ, ವೀರಭದ್ರಾದಿ ಇತರ ಕಿಂಕರರನ್ನೂ, ಭೃಂಗಿ, ನಂದಿ, ಚಂಡ, ಸೋಮನಂದಿ ಮೊದಲಾದ ಇತರ ಕೈಲಾಸವಾಸಿಗಳನ್ನೂ ತೊರೆದುಬಿಟ್ಟನು.

**ವಿಸೃಜ್ಯ ಚ ಮಹಾದೇವ ಏಕ ಏವ ಮಹಾತಪಾಃ ।**
**ಗತೋ ದೂರಂ ವನಸ್ಯಾಂತೇ ತಥಾ ಸಿದ್ಧವಟಂ ಶಿವಃ ॥ ೧೪೯ ॥**
**ಕಾಶ್ಮೀರ ರತ್ನೋಪಲ ಸಿದ್ಧರತ್ನ**
**ವೈಢೂರ್ಯಚಿತ್ರಂ ಸುಧಯಾ ಪರಿಷ್ಕೃತಂ ।**
**ದಿವ್ಯಾಸನಂ ತಸ್ಯ ಚ ಕಲ್ಪಿತಂ ಭುವಾ**
**ತತ್ರಾಸ್ಥಿತೋ ಯೋಗಪತಿರ್ಮಹೇಶಃ ॥ ೧೫೦ ॥**
**ಪದ್ಮಾಸನೇ ಚೋಪವಿಷ್ಟೋ ಮಹೇಶೋ ಯೋಗವಿತ್ತಮಃ ।**
**ಕೇವಲಂ ಚಾತ್ಮನಾತ್ಮಾನಂ ದಧೌ ಮಿಾಲಿತಲೋಚನಃ ॥ ೧೫೧ ॥**
**ಶುಶುಭೇ ಸ ಮಹಾದೇವಃ ಸಮಾಧೌ ಚಂದ್ರಶೇಖರಃ ।**
**ಯೋಗಪಟ್ಟಃ ಕೃತಸ್ತೇನ ಶೇಷಸ್ಯ ಚ ಮಹಾತ್ಮನಃ**
**ವಾಸುಕಿಃ ಸರ್ಪರಾಜಶ್ಚ ಕಟಿಬದ್ಧಃ ಕೃತೋ ಮಹಾನ್ ॥ ೧೫೨ ॥**
**ಆತ್ಮಾನಮಾತ್ಮಾತ್ಮತಯಾ ಚ ಸಂಸ್ತುತೋ**
**ವೇದಾಂತವೇದ್ಯೋ ಸ ಹಿ ವಿಶ್ವಚೇಷ್ಟಿತಃ ।**

---

೧೪೯. ತರುವಾಯ ಮಹಾ ತಪಸ್ವಿಯಾದ ಆ ಮಹಾದೇವನು ಕಾಡಿನಲ್ಲಿ ಬಹಳ ದೂರ ಹೋಗಿ ಸಿದ್ಧವಟವನ್ನು ಪ್ರವೇಶಿಸಿದನು.

೧೫೦–೧೫೧. ಅಲ್ಲಿಯಾದರೋ ಭೂದೇವಿಯು ಆ ಪ್ರಭುವಿಗೆ ಕಾಶ್ಮೀರ ರತ್ನಗಳು, ಸಿದ್ಧರತ್ನಗಳು, ವೈಡೂರ್ಯಗಳೂ ಕೆತ್ತಿ ಸುಧೆ (ಸುಣ್ಣ ತೊಳೆದು) ಯಿಂದ ಶುಭ್ರವಾಗಿರುವ ಆಸನವನ್ನು ಸಿದ್ಧಪಡಿಸಿದ್ದಳು. ಯೋಗೀಶ್ವರನಾದ ಆ ಪರಶಿವನು ಆ ಪೀಠದಲ್ಲಿ ಕುಳಿತು, ಯೋಗವನ್ನರಿತವರಲ್ಲಿ ಅತ್ಯುತ್ತಮನಾದುದರಿಂದ ಪದ್ಮಾಸನಾಸೀನನಾಗಿ ಕಣ್ಣುಮುಗಿದು ಆತ್ಮದಿಂದಲೇ ಪರಮಾತ್ಮನನ್ನೂ ಧ್ಯಾನಿಸುತ್ತಲಿದ್ದನು. ಆ ಚಂದ್ರಶೇಖರನೀರೀತಿ ಸಮಾಧಿನಿಷ್ಠನಾಗಿ ಶೋಭಿಸಿದನು.

೧೫೨. ಆಗಲಾತನು ಮಹಾತ್ಮನಾದ ಆದಿಶೇಷನನ್ನೇ ಯೋಗಪಟ್ಟವನ್ನಾಗಿಯೂ ಸರ್ಪರಾಜನಾದ ವಾಸುಕಿಯನ್ನು ಉಡುದಾರವನ್ನಾಗಿಯೂ ಮಾಡಿಕೊಂಡನು.

೧೫೩. ಆ ಸಮಯದಲ್ಲಿ ವೇದಾಂತ ವೇದ್ಯನೂ (ಉಪನಿಷತ್ಪ್ರತಿಪಾದ್ಯನೂ), ವಿಶ್ವಚೇಷ್ಟಿತನೂ, ಜಗದ್ವ್ಯಾಪಾರವೇ ಲೀಲೆಯಾಗಿ ಉಳ್ಳವನೂ ಆಗಿ, ಸಮಸ್ತ ಚರಾಚರ ಪ್ರಪಂಚದ ಅಂತರ್ಯಾಮಿಯಾಗಿ ಸಕಲ ಯೋಗಿ ಜನ ಭಕ್ತ ಜನ ಸಮೂಹಗಳಿಂದ ಸ್ತುತಿಗೈಸಿಕೊಳ್ಳಲಾದವನೂ ಆದ ಆ ಮಹಾದೇವನು ತಾನೊಬ್ಬನೇ ಆದರೂ, ಅನೇಕವಾಗಿ ತೋರಿ ಅಪಾರ ಮಹಿಮನೂ, ಸಮಸ್ತ ಪಾಪಗಳನ್ನೂ ನಿರ್ಮೂಲ ಮಾಡುವವನೂ, ಇಂತೆಂದು ಊಹಿಸಲಸದಳನೂ,

ಏಕೋ ಹ್ಯನೇಕೋ ಹಿ ದುರಂತಪಾರ
ಸ್ತಥಾ ಹ್ಯ ತರ್ಕ್ಯೋ ನಿಜಬೋಧರೂಪಃ ।
ಸ್ಥಿತಸ್ತದಾನೀಂ ಪರಮಂ ಪರಾಣಾಂ
ನಿರೀಕ್ಷಮಾಣೋ ಭುವನೈಕಭರ್ತಾ ॥ ೧೫೩ ॥

ಇತಿ ಶ್ರೀ ಸ್ಕಾಂದೇ ಮಹಾಪುರಾಣೇ ಏಕಾಶೀತಿ ಸಾಹಸ್ರ್ಯಾಂ ಸಂಹಿತಾಯಾಂ ಪ್ರಥಮೇ ಮಾಹೇಶ್ವರಖಂಡೇ ಕೇದಾರಖಂಡೇ ಶಿವಶಾಸ್ತ್ರೇ "ಶಿವ ಪಾರ್ವತೀ ದ್ಯೂತಪ್ರಸಂಗೇನ ಪಾರ್ವತೀ ಹಾರಿತ ಸರ್ವಸ್ವ ಶಿವಸ್ಯ ಕೈಲಾಸಂ ವಿಹಾಯ ತಪೋವನಗಮನ ವರ್ಣನಂ" ನಾಮ ಚತುಸ್ತ್ರಿಂಶೋಽಧ್ಯಾಯಃ

---

ಯಥಾರ್ಥಜ್ಞಾನಸ್ವರೂಪನೂ ಅಖಂಡ ಪ್ರಪಂಚದ ಪ್ರಭುವೂ ಆದುದರಿಂದ, ಆ ಸಮಯದಲ್ಲಿ ಎಲ್ಲ ಮಹತ್ತುಗಳಿಗಿಂತಲೂ ಮಹತ್ತರವಾದ ತನ್ನ ಆತ್ಮವನ್ನೇ ತಾನು ನಿರೀಕ್ಷಿಸುತ್ತ ಸಮಾಧಿನಿಷ್ಠನಾಗಿ ಕುಳಿತನು.

ಇಲ್ಲಿಗೆ ಎಂಬತ್ತೊಂದುಸಾವಿರ ಶ್ಲೋಕಗಳ ಸಂಹಿತೆಯೆಂದು ಪ್ರಸಿದ್ಧವಾದ ಶ್ರೀ ಸ್ಕಾಂದಮಹಾಪುರಾಣದ ಮಾಹೇಶ್ವರಖಂಡದ ಮೊದಲನೆಯ ಕೇದಾರ ಖಂಡದಲ್ಲಿ "ಶ್ರೀ ಶಿವಪಾರ್ವತಿಯರ ದ್ಯೂತಪ್ರಸಂಗದಲ್ಲಿ ಪಾರ್ವತಿಯು ಸರ್ವಸ್ವವನ್ನೂ ಗೆಲ್ಲಲು, ಶಿವನು ಕೈಲಾಸವನ್ನು ತೊರೆದು ತಪೋವನಕ್ಕೆ ತೆರಳಿದು"ದೆಂಬ ಮೂವತ್ತನಾಲ್ಕನೆಯ ಅಧ್ಯಾಯವು ಮುಗಿದುದು

॥ ಶ್ರೀಃ ॥

# ಪಂಚತ್ರಿಂಶೋಽಧ್ಯಾಯಃ

**ಪಾರ್ವತ್ಯಾ ಶಬರೀ ರೂಪೇಣ ಶಿವಸ್ಯ ಗಂಧಮಾದನ ಪರ್ವತಂ ಪ್ರತ್ಯಾನಯನ ಪೂರ್ವಕಂ ಬೃಹಸ್ಪತಿ ಕೃತ ಶಿವರಾಜ್ಯಾಭಿಷೇಕ ವರ್ಣನಂ**

**ಲೋಮಶ ಉವಾಚ :—**

**ವನಂ ಗತೇ ಮಹಾದೇವೇ ಗಿರಿಜಾ ವಿರಹಾತುರಾ ।**
**ಸುಖಂ ನಲೇಭೇ ತನ್ವಂಗೀ ಹರ್ಮ್ಯೇಽಷ್ವಾಯತನೇಷು ವಾ ॥ ೧ ॥**
**ಚಿಂತಯಂತೀ ಶಿವಂ ತನ್ವೀ ಸರ್ವಭಾವೇನ ಶೋಭನಾ ।**
**ಚಿಂತಮಾನಾಂ ಶಿವಾಂ ಜ್ಞಾತ್ವಾ ಹ್ಯುವಾಚ ವಿಜಯಾ ಸಖೀ ॥ ೨ ॥**

**ವಿಜಯೋವಾಚ :—**

**ತಪಸಾ ಮಹತಾ ಚೈವ ಶಿವಂ ಪ್ರಾಪ್ತಾಸಿ ಶೋಭನೇ ।**
**ಮೃಷಾ ದ್ಯೂತಂ ಕೃತಂ ತೇನ ಶಂಕರೇಣ ತಪಸ್ವಿನಾ ॥ ೩ ॥**
**ದ್ಯೂತೇ ಹಿ ಬಹವೋ ದೋಷಾ ನಶ್ರುತಾಃ ಕಿಂ ತ್ವಯಾಽನಘೇ ।**
**ಕ್ಷಮಾಪಯ ಶಿವಂ ತನ್ವಿ ತ್ವರೇಣೈವ ವಿಚಕ್ಷಣೇ ॥ ೪ ॥**
**ಅಸ್ಮಾಭಿಃ ಸಹಿತಾ ದೇವಿ ಗಚ್ಛ ಗಚ್ಛ ವರಾನನೇ ॥ ೫ ॥**

---

## ಕನ್ನಡದ ಅನುವಾದ

**ಪಾರ್ವತಿಯು ಶಬರೀರೂಪದಿಂದ ಗಂಧಮಾದನ ಪರ್ವತಕ್ಕೆ ಹೋಗಿ ಶಿವನನ್ನು ಕರೆತಂದುದು— ಬೃಹಸ್ಪತಿಯು ಪರಶಿವನಿಗೆ ರಾಜ್ಯಾಭಿಷೇಕವನ್ನು ಮಾಡಿದುದು**

೧. ಲೋಮಶನು ಹೇಳುತ್ತಾನೆ:—ಎಲೈ ಶೌನಕಾದಿ ಮಹರ್ಷಿಗಳಿರಾ! ಮಹಾದೇವನು ಈ ರೀತಿ ವನಕ್ಕೆ ಹೊರಟುಹೋಗಲು, ಗಿರಿಜೆಯು ವಿರಹಸಂತಪ್ತೆಯಾಗಿ ಭವನಗಳಲ್ಲಾಗಲಿ, ಸಿದ್ಧಾಯತನಗಳಲ್ಲಾಗಲಿ ಸುಖವಾಗಿರದೆ ತಳಮಳಿಸಿಹೋದಳು.

೨. ಶಿವನನ್ನೇ ಸರ್ವಭಾವದಿಂದಲೂ ಚಿಂತಿಸುತ್ತ ಆ ಮಂಗಳಾಂಗಿಯು ಕೊರಗುತ್ತಿದ್ದುದನ್ನು ಕಂಡು ಆಕೆಯ ಗೆಳತಿಯಾದ ವಿಜಯೆಯು ಹೀಗೆಂದಳು.

೩–೫. ವಿಜಯೆಯು ಹೇಳುತ್ತಾಳೆ:—"ಎಲೆ ಮಂಗಳಾಂಗಿ! ನೀನು ಮಹತ್ತರವಾದ ತಪಸ್ಸಿನಿಂದ ಪಡೆದ ಅಂತಹ ತಪಸ್ವಿಯಾದ ಶಂಕರನೊಡನೆ ಇದೀಗ ಸುಮ್ಮಸುಮ್ಮನೆ ದ್ಯೂತವನ್ನೇಕೆ ಆಡಿದೆ? ಈ ದ್ಯೂತದಲ್ಲಿ ಅನೇಕ ದೋಷಗಳುಂಟೆಂಬುದನ್ನು ನೀನು ಕೇಳಿಲ್ಲವೆ? ಎಲೌ ನಿಷ್ಪಾಪಳೆ! ವರಾರೋಹೆಯಾದ ನೀನು ಇದೀಗ ಬುದ್ಧಿಶಾಲಿನಿಯಾಗಿ ಆ ಪರಮೇಶ್ವರನನ್ನು ಜಾಗ್ರತೆಯಾಗಿ ಸಂದರ್ಶಿಸಿ ಆತನ ಕ್ಷಮಾಪಣೆಯನ್ನು ಕೇಳು. ಓ ಸುಂದರವದನೆ! ನೀನೀಗಲೇ ತಡಮಾಡದೆ ನಮ್ಮೊಡನೆ ಹೊರಡು.

ಯಾವಚ್ಛಂಭುರ್ದೂರತೋ ನಾಭಿಗಚ್ಛೇ
ತ್ತಾವದ್ಗತ್ವಾ ಶಂಕರಂ ಕ್ಷಾಮಯಸ್ವ ।
ನೋಚೇತ್ತಸ್ಮಿ ಕ್ಷಾಮಯೇಥಾ ಶಿವಂ ತ್ವಂ
ದುಃಖಂ ಪಶ್ಚಾತ್ತೇ ಭವಿಷ್ಯತ್ಯವಶ್ಯಂ ॥ ೬ ॥
ನಿಶಮ್ಯ ವಾಕ್ಯಂ ವಿಜಯಾ ಪ್ರಯುಕ್ತಂ
ಪ್ರಹಸ್ಯಮಾನಾ ಸಮಧೀರಚೇತಾಃ ।
ಉವಾಚ ವಾಕ್ಯಂ ವಿಜಯಾಂ ಸಖೀಂ ಚ
ಆಶ್ಚರ್ಯಭೂತಂ ಪರಮಾರ್ಥಯುಕ್ತಂ ॥ ೭ ॥
ಮಯಾ ಜಿತೋಽಸೌ ನಿರಪತ್ರಪಃ ಶಿವಃ
ಪುರಾ ವೃತೋ ವೈ ಪರಯಾ ವಿಭೂತ್ಯಾ ।
ಕಿಂಚಿಚ್ಚ ಕೃತ್ಯಂ ಮಮನಾಸ್ತಿ ಸದ್ಯೋ
ಮಯಾ ವಿನಾಸೌ ಚ ವಿರೂಪ ಆಸ್ಥಿತಃ ॥ ೮ ॥
ರೂಪೀ ಕೃತೋ ಮಯಾ ದೇವೋ ಮಹೇಶೋ ನಾನ್ಯಥಾ ವದ ।
ಮಯಾ ತೇನ ವಿಯೋಗಶ್ಚ ಸಂಯೋಗೋ ನೈವ ಜಾಯತೇ ॥ ೯ ॥
ಸಾಕಾರೋ ಹಿ ನಿರಾಕಾರೋ ಮಹೇಶೋ ಹಿ ಮಯಾ ಕೃತಃ ॥ ೧೦ ॥

---

೬. ಶಂಭುವು ಬಹಳದೂರ ಹೋಗದಿರುವಷ್ಟರಲ್ಲಿಯೇ ಆತನಲ್ಲಿಗೆ ಹೋಗಿ ಕ್ಷಮಾಪಣೆಯನ್ನು ಕೇಳಿಕೊ: ಹೀಗೆ ಮಾಡದೆಹೋದೆಯಾದರೆ ಆಮೇಲೆ ನೀನು ದುಃಖವನ್ನನುಭವಿಸುವುದು ಖಂಡಿತವು.''

೭. ಈ ರೀತಿ ನುಡಿದ ವಿಜಯೆಯ ಮಾತನ್ನು ಕೇಳಿ, ಬಹಳ ಧೈರ್ಯಶಾಲಿನಿಯಾದ ಆ ದೇವಿಯು ನಸುನಕ್ಕು ಅವಳನ್ನು ಕುರಿತು ಆಶ್ಚರ್ಯಕರವೂ ಪರಮಾರ್ಥಯುಕ್ತವೂ ಆದ ಈ ಮಾತನ್ನಾಡಿದಳು.

೮–೧೦. ''ಎಲೆ ವಿಜೆಯೆ! ನನ್ನಿಂದ ಗೆಲ್ಲಲಾದವನೂ, ಲಜ್ಜೆಯಿಲ್ಲದವನೂ ಆದ ಈ ಶಿವನನ್ನು ಪೂರ್ವದಲ್ಲಿ ನಾನು ಬಹಳ ವಿಜೃಂಭಣೆಯಿಂದ ಮದುವೆಯಾದೆನು. ಈಗ ಅವನಿಂದ ನನಗಾಗಬೇಕಾದ ಕಾರ್ಯವಾವುದೂ ಇಲ್ಲ. ಪ್ರಕೃತದಲ್ಲಿ ಅವನು ನನ್ನನ್ನು ಬಿಟ್ಟುಹೋಗಿರುವನಾಗಿ ರೂಪವಿಲ್ಲದವನೇ (ವಿರೂಪನೇ) ಆದನು. ಆ ಮಹಾದೇವನನ್ನು ನಾನೇ ರೂಪವುಳ್ಳವನನ್ನಾಗಿಸಿದೆನು. ನೀನು ಮತ್ತೇನನ್ನೂ ಹೇಳಬೇಡ. ಆತನಿಗೆ ನನ್ನ ಅಗಲಿಕೆಯಾಗಲಿ, ಕೂಡಿಕೆಯಾಗಲಿ ಆಗುವುದೇ ಇಲ್ಲವು. ಮೊದಲು ನಿರಾಕಾರನಾಗಿದ್ದ ಈ ಪರಶಿವನನ್ನು ಸಾಕಾರನನ್ನಾಗಿ ಮಾಡಿ ಈಗ ಸಾಕಾರನಾಗಿದ್ದವನನ್ನು ನಿರಾಕಾರಿಯನ್ನಾಗಿ ಮಾಡಿದವಳೂ ನಾನೆ.

ಕೃತಂ ಮಯಾ ವಿಶ್ವಮಿದಂ ಸಮಗ್ರಂ
ಚರಾಚರಂ ದೇವದೇವ್ಯೈಃ ಸಮೇತಂ ।
ಕ್ರೀಡಾರ್ಥಮಸ್ಯೋದ್ಭವ ವೃತ್ತಿಹೇತುಭಿ
ಶ್ಚಿಕ್ರೀಡಿತಂ ಮೇ ವಿಜಯೇ ಪ್ರಪಶ್ಯ ॥ ೧೧ ॥

ಏವಮುಕ್ತ್ವಾ ತದಾ ದೇವೀ ಗಿರಿಜಾ ಸರ್ವಮಂಗಳಾ ।
ಶಬರೀರೂಪಮಾಸ್ಥಾಯ ಗಂತುಕಾಮಾ ಮಹೇಶ್ವರಂ ॥ ೧೨ ॥

ಶ್ಯಾಮಾ ತನ್ವೀ ಶಿಖರದಶನಾ ಬಿಂಬ ಬಿಂಬಾಧರೋಷ್ಠೀ
ಸುಗ್ರೀವಾಢ್ಯಾ ಕುಚಭರನತಾ ವರ್ಧಿತಸ್ನಿಗ್ಧ ಕೇಶೀ ।
ಮಧ್ಯೇ ಕ್ಷಾಮಾ ಪೃಥುಕಟಿತಟಾ ಹೇಮರಂಭೋರು ಗೌರೀ
ವಲ್ಲೀಯುಕ್ತಾ ವರವಲಯಿನೀ ಬರ್ಹಿಬರ್ಹಾವತಂಸಾ ॥
ಪಾಣೌ ಮೃಣಾಲಸದೃಶಂ ದಧತೀ ಚ ಚಾಪಂ
ಪೃಷ್ಠೇ ಲಸತ್ಕೃತಕ ಬಾಣಕೋಶಂ ।
ಸಾ ತಂ ಗಿರೀಶಮವಲೋಕಯತಿ ಸ್ಮ ತತ್ರ
ಸಂಸೇವಿತಾ ಸುವದನಾ ಬಹುಭಿಃ ಸಖೀಭಿಃ ॥ ೧೪ ॥

---

೧೧. ವಿಜಯೇ ನೋಡು, ನಾನು ಈತನ ಕ್ರೀಡೆಗೋಸುಗವಾಗಿಯೇ ಸೃಷ್ಟಿ ಮೊದಲಾದ ಕಾರಣಗಳೊಡಗೂಡಿ ಚರಾಚರ ಪ್ರಾಣಿಗಳಿಂದಲೂ ದೇವಶ್ರೇಷ್ಠರಿಂದಲೂ ಸಮನ್ವಿತವಾದ ಈ ಪ್ರಪಂಚವನ್ನು ಉಂಟುಮಾಡಿ ಈಗ ಹೇಗೆ ಆಟವಾಡಿದೆನು !

೧೨–೧೪. ಎಲೈ ವಿಪ್ರರಿರಾ ! ಸರ್ವಮಂಗಳೆಯಾದ ಆ ದೇವಿಯು ಈ ರೀತಿ ನುಡಿದು ಆ ತರುವಾಯ ಮಹೇಶ್ವರನ ಬಳಿಗೈದಲು ಶಬರಿಯ ರೂಪವನ್ನು ತಾಳಿದಳು. ಶ್ಯಾಮ (ಯುವತಿ) ಸುಂದರಿಯಾಗಿ ಮೊನಚಾದ ಸಮವಾದ ಹಲ್ಲುಗಳ ಪಂಕ್ತಿಯುಳ್ಳವಳಾಗಿ, ಪಕ್ವವಾದ ತೊಂಡೆಯ ಹಣ್ಣನ್ನು ಹೋಲುವ ತುಟಿಗಳುಳ್ಳವಳಾಗಿ, ಸೊಗಸಾದ ಕಂಠದಿಂದೊಪ್ಪಿ ಕುಚಭಾರದಿಂದ ನಸುಬೊಗ್ಗಿ ತಾನೇತಾನಾಗಿ ವೃದ್ಧಿಗೊಂಡಿರುವ ಸುಂದರವಾದ ಕೇಶರಾಶಿಗಳಿಂದ ಕೂಡಿ, ತೆಳುವಾದ ಮಧ್ಯಪ್ರದೇಶವುಳ್ಳವಳಾಗಿ, ಘನನಿತಂಬಿನಿಯಾಗಿ, ಚಿನ್ನದ ಬಾಳೆಯ ಕಂಬಗಳಂತೆ ಕಂಗೊಳಿಸುವ ಊರುಪ್ರದೇಶಗಳುಳ್ಳವಳಾಗಿ, ಗೌರವರ್ಣದಿಂದ ವಿರಾಜಿಸಿ, ಸೊಗಸಾದ ಬಳೆಗಳನ್ನು ತೊಟ್ಟು, ನವಿಲುಗರಿಗಳನ್ನು ಶಿರೋಭೂಷಣ ವನ್ನಾಗಿ ತಾಳಿ, ಕೈಯಲ್ಲಿ ಕಮಲಸದೃಶವಾದ ಬಿಲ್ಲನ್ನು ಹಿಡಿದು, ಬೆನ್ನಿನಲ್ಲಿ ತಾಳೆಯೆಲೆಗಳಿಂದ ಮಾಡಿದ ಬತ್ತಳಿಕೆಯುಳ್ಳವಳಾಗಿ, ಆ ಪರಶಿವನಿದ್ದ ಸಿದ್ಧವನಕ್ಕೈತಂದು, ಬಹುಮಂದಿ ಸಖಿಯರು ತನ್ನನ್ನು ಓಲೈಸುತ್ತಿರಲು, ಆತನನ್ನೇ ನೋಡುತ್ತಿದ್ದಳು.

ಭೃಂಗೀನಾದೇನ ಮಹತಾ ನಾದಯಂತೀ ಜಗತ್ತ್ರಯಂ ।
ಗಿರಿಜಾ ಮನ್ಮಥಂ ಸದ್ಯೋ ಜೀವಯಂತೀ ಪುನಃ ಪುನಃ ॥ ೧೫ ॥
ಸ ಕಾಮುನಾ ರಾಜಹಂಸಾ ಬಭೂವುಸ್ತತ್ಕ್ಷಣಾದಪಿ ।
ದ್ವಿರೇಫಾ ಬರ್ಹಿಣಶ್ಚೈವ ಸರ್ವೇ ತೇ ಹೃಚ್ಛಯಾನ್ವಿತಾಃ ॥ ೧೬ ॥
ಏಕಾಕೀ ಸಂಸ್ಥಿತೋ ಯತ್ರ ಸಮಾಧಿಸ್ಥೋ ಮಹೇಶ್ವರಃ ।
ದೃಷ್ಟಸ್ತತಸ್ತಯಾ ದೇವ್ಯಾ ಭೃಂಗೀನಾದೇನ ಮೋಹಿತಃ ॥ ೧೭ ॥
ಪ್ರಬುದ್ಧೋ ಹಿ ಮಹಾದೇವೋ ನಿರೀಕ್ಷ್ಯ ಶಬರೀಂ ತದಾ ।
ಸಮಾಧೇರುತ್ಥಿತಃ ಸದ್ಯಃ ಮಹೇಶೋ ಮದನಾನ್ವಿತಃ ॥ ೧೮ ॥
ಯಾವತ್ಕರೇ ಗೃಹ್ಯಮಾಣೇ ಗಿರಿಜಾಂ ಸ ಸಮೀಪಗಃ ।
ತಾವತ್ತಸ್ಯ ಪುರಃ ಸದ್ಯಸ್ತಿರೋಧಾನಂ ಗತಾ ಸತೀ ॥ ೧೯ ॥
ತದ್ದೃಷ್ಟ್ವಾ ತತ್ಕ್ಷಣಾದೇವ ದೇವೋ ಭ್ರಾಂತಿ ವಿನಾಶನಃ ।
ಭ್ರಮಮಾಣಸ್ತದಾ ಶಂಭುರ್ನಾಪಶ್ಯದಸಿತೇಕ್ಷಣಾಂ ॥ ೨೦ ॥
ವಿರಹೇಣ ಸಮಾಯುಕ್ತೋ ಹೃಚ್ಛಯೇನ ಸಮನ್ವಿತಃ ।
ಮದನಾರಿಸ್ತದಾ ಶಂಭುರ್ಜ್ಞಾನರೂಪೋ ನಿರಂತರಂ ॥ ೨೧ ॥

---

೧೫. ಸುಂದರವದನೆಯಾದ ಆ ಗಿರಿಜೆಯು ಹಾಗೆಯೇ ನಿಂತು ನಿರೀಕ್ಷಿಸುತ್ತ ಮಹತ್ತರವಾದ ಭೃಂಗಿನಾದದಿಂದ ಮೂರು ಲೋಕಗಳನ್ನೂ ತುಂಬಿ, ಅಡಿಗಡಿಗೂ ಮನ್ಮಥನನ್ನು ಉಜ್ಜೀವನಗೊಳಿಸುತ್ತಲಿದ್ದಳು.

೧೬. ಆ ಕ್ಷಣದಲ್ಲಿಯೇ ಕಾಮಸಹಿತಗಳಾದ ರಾಜಹಂಸಗಳು ಆ ಪ್ರದೇಶ ದಲ್ಲುಂಟಾದುವು. ಅಂತೆಯೇ ಮನ್ಮಥಾವಿಷ್ಟಗಳಾದ ದುಂಬಿಗಳೂ, ನವಿಲುಗಳೂ ಕಂಗೊಳಿಸಿದವು.

೧೭. ಇದಾದ ತರುವಾಯ ಆ ದೇವಿಯು ಒಬ್ಬೊಂಟಿಗನಾಗಿ ಕುಳಿತು ಸಮಾಧಿನಿಷ್ಠನಾಗಿದ್ದ ಮಹೇಶ್ವರನನ್ನು ಕಂಡಳು. ಆ ಮಹೇಶ್ವರನಾದರೋ ಆಕೆಯೆಸಗುತ್ತಿದ್ದ ಭೃಂಗಿನಾದದಿಂದ ಮೋಹಿತನಾದನು.

೧೮. ಕೂಡಲೆ ಆ ಮಹಾದೇವನು ಆ ಶಬರಿಯನ್ನು ಕಂಡು ಸಮಾಧಿ ಯಿಂದೆಚ್ಚೆತ್ತು ಮದನಪರವಶನಾಗಿಹೋದನು.

೧೯–೨೧. ಆತನಿಂತು ಸಮಾಧಿಯಿಂದೆದ್ದು ಆಕೆಯ ಬಳಿಗೈದಿ ಆಕೆಯ ಕೈಯನ್ನು ಹಿಡಿದುಕೊಳ್ಳುವಷ್ಟರಲ್ಲಿಯೇ ಆಕೆಯು ಆತನ ಮುಂಗಡೆಯೇ ಅಂತರ್ಧಾನವಾದಳು. ಶಿವನು ಕೂಡಲೇ ಎಲ್ಲ ಭ್ರಾಂತಿಗಳನ್ನೂ ಕಳೆಯುವವ ನಾದರೂ ತಾನೇ ಭ್ರಾಂತಿಗೊಂಡು ಅತ್ತಿತ್ತ ತಿರುಗುತ್ತ ಆ ಅಸಿತೇಕ್ಷಣೆಯನ್ನು ಕಾಣದೆಹೋದನು. ಆತನು ಮದನಾಂತಕನಾದರೂ, ಜ್ಞಾನಸ್ವರೂಪನಾದರೂ ಆ ಶಬರಿಯ ವಿರಹದಿಂದ ಮದನತಾಪಕ್ಕೊಳಗಾದನು.

ನಿರ್ಮೋಹೋ ಮೋಹಮಾಪನ್ನೋ ದದರ್ಶ ಗಿರಿಜಾಂ ಪುನಃ ।
ಉವಾಚ ವಾಕ್ಯಂ ಶಬರೀಂ ಪ್ರಸ್ತಾವ ಸದೃಶಂ ಮಹತ್ ॥ ೨೨ ॥
ಶಿವ ಉವಾಚ :—
ವಾಕ್ಯಂ ಮೇ ಶೃಣು ತನ್ವಂಗಿ ಶ್ರುತ್ವಾ ತತ್ಕರ್ತುಮರ್ಹಸಿ ।
ಕಾಸಿ ಕಸ್ಯಾಸಿ ತನ್ವಂಗಿ ಕಿಮರ್ಥಮಟನಂ ವನೇ ।
ತತ್ಕಥ್ಯತಾಂ ಮಹಾಭಾಗೇ ಯಥಾತಥ್ಯಂ ಸುಮಧ್ಯಮೇ ॥ ೨೩ ॥
ಪತಿಮನ್ವೇಷಯಿಷ್ಯಾಮಿ ಸರ್ವಜ್ಞಂ ಸಕಲಾರ್ಥದಂ ।
ಸ್ವತಂತ್ರಂ ನಿರ್ವಿಕಾರಂ ಚ ಜಗತಾಮೀಶ್ವರಂ ವರಂ ॥ ೨೪ ॥
ಇತ್ಯುಕ್ತಃ ಪ್ರತ್ಯುವಾಚೇದಂ ಗಿರಿಜಾಂ ವೃಷಭಧ್ವಜಃ ।
ಅಹಂ ತವೋಚಿತೋ ಭದ್ರೇ ಪತಿರ್ನಾನ್ಯೋ ಹಿ ಭಾಮಿನಿ ॥ ೨೫ ॥
ವಿಮೃಶ್ಯತಾಂ ವರಾರೋಹೇ ತತ್ತ್ವತೋ ಹಿ ವರಾನನೇ ।
ವಚೋ ನಿಶಮ್ಯ ರುದ್ರಸ್ಯ ಸ್ಮಿತಪೂರ್ವಮಭಾಷತ ॥ ೨೬ ॥
ಮಯಾರ್ಥಿತೋ ಮಹಾಭಾಗ ಪತಿಸ್ತ್ವಂ ನಾನ್ಯಥಾ ವದ ।
ಕಿಂತು ವಕ್ಷ್ಯಾಮಿ ಭದ್ರಂತೇ ನಿರ್ಗುಣೋಽಸಿ ಪರಂತಪಃ ॥ ೨೭ ॥

---

೨೨—೨೩. ನಿರ್ಮೋಹನಾದರೂ ಆ ಪ್ರಭುವು ಮೋಹವನ್ನಾಂತು ಪುನಃ ಅಲ್ಲಿಯೇ ಆ ಗಿರಿಜೆಯನ್ನು ಕಂಡು ಶಬರೀರೂಪಳಾದ ಅವಳನ್ನು ಕುರಿತು ಪ್ರಸ್ತಾವಸದೃಶವಾದ ಈ ಮಾತನ್ನು ಆಡಿದನು. ಶಿವನು ಹೇಳುತ್ತಾನೆ:— "ಎಲೆ ಸುಂದರಿ! ನನ್ನ ಮಾತನ್ನು ಕೇಳಿ ಅದರಂತೆ ನಡೆಯುವವಳಾಗು; ನೀನಾರು? ಯಾರವಳಾಗಿರುವೆ? ಈ ವನದಲ್ಲಿ ಸಂಚರಿಸುತ್ತಿರುವೆಯೇಕೆ? ಓ ಸುಮಧ್ಯಮೆ! ಈ ವಿಷಯಗಳೆಲ್ಲವನ್ನೂ ಯಥಾರ್ಥವಾಗಿ ಹೇಳುವವಳಾಗು."

೨೪. ಶಬರಿಯು ಹೇಳುತ್ತಾಳೆ.—"ಆರ್ಯ! ನಾನು ಸರ್ವಜ್ಞನಾಗಿ, ಸಕಲಾಭೀಷ್ಟಗಳನ್ನು ದಯಪಾಲಿಸುವವನಾಗಿ, ಸ್ವತಂತ್ರನೂ ವಿಕಾರರಹಿತನೂ, ಜಗತ್ತಿಗೆಲ್ಲ ಒಡೆಯನೂ, ಸರ್ವೋತ್ತಮನೂ ಆದ ಪತಿಯನ್ನು ಹುಡುಕುತ್ತಿರುವೆನು?"

೨೫—೨೭. ಆಕೆಯಿಂತೆನಲು, ಆ ವೃಷಭಧ್ವಜನು, "ಎಲೆ ಭದ್ರೆ! ಸುಂದರಿಯಾದ ನಿನಗೆ ನಾನಲ್ಲದೆ ಮತ್ತಾರೂ ಪತಿಯಾಗಲು ಯೋಗ್ಯರಲ್ಲವು. ನೀನು ಈ ವಿಷಯವನ್ನು ಚನ್ನಾಗಿ ಯೋಚಿಸುವವಳಾಗು" ಎಂದನು. ಆ ಮಾತನ್ನು ಕೇಳಿ ಶಬರೀರೂಪಳಾದ ಗಿರಿಜೆಯು ನಸುನಗುತ್ತ, "ಅಯ್ಯಾ ಪುಣ್ಯಾತ್ಮಾ! ನಾನು ಬಯಸುತ್ತಿರುವ ಪತಿಯು ನೀನೇ ಇದ್ದರೂ ಇರಬಹುದು; ಆದರೆ ಹೇಳುತ್ತೇನೆ. ನಿನಗೆ ಮಂಗಳವಾಗಲಿ; ಮಹಾ ತಪಸ್ವಿಯೂ, ಶತ್ರುಸಂಹಾರಕನೂ ಆದರೂ ನೀನು ನಿರ್ಗುಣನಾಗಿರುವೆ.

ಯಯಾ ಪುರಾವೃತೋಽಸಿ ತ್ವಂ ತಪಸಾ ಚ ಪರೇಣ ಹಿ ।
ಪರಿತ್ಯಕ್ತಾ ತ್ವಯಾರಣ್ಯೇ ಕ್ಷಣಮಾತ್ರೇಣ ಭಾಮಿನೀ ॥ ೨೮ ॥
ದುರಾರಾಧ್ಯೋಽಸಿ ಸತತಂ ಸರ್ವೇಷಾಂ ಪ್ರಾಣಿನಾಮಪಿ ।
ತಸ್ಮಾನ್ನವಾಚ್ಯಂ ಹಿ ಪುನರ್ಯದುಕ್ತಂ ತೇ ಮನಾಗ್ರತಃ ॥ ೨೯ ॥
ಶಬರ್ಯಾ ವಚನಂ ಶ್ರುತ್ವಾ ಪ್ರತ್ಯುವಾಚ ವೃಷಧ್ವಜಃ ।
ಮೈವಂ ವದ ವಿಶಾಲಾಕ್ಷೀ ನತ್ಯಕ್ತಾ ಸಾ ತಪಸ್ವಿನೀ ।
ಯದಿ ತ್ಯಕ್ತಾ ಮಯಾ ತನ್ವಿ ಕಿಂ ವಕ್ತುಮಿಹ ಪಾರ್ಯತೇ ॥ ೩೦ ॥
ಏವಂ ಜ್ಞಾತ್ವಾ ವಿಶಾಲಾಕ್ಷಿ ಕೃಪಣಂ ಕೃಪಣಪ್ರಿಯಂ ।
ತಸ್ಮಾತ್ತ್ವಯಾ ಹಿ ಕರ್ತವ್ಯಂ ವಚನಂ ಮೇ ಸುಮಧ್ಯಮೇ ॥ ೩೧ ॥
ಏವಮಭ್ಯರ್ಥಿತಾ ತೇನ ಬಹುಧಾ ಶೂಲಪಾಣಿನಾ ।
ಪ್ರಹಸ್ಯ ಗಿರಿಜಾ ಪ್ರಾಹ ಉಪಹಾಸಪರಂ ವಚಃ ॥ ೩೨ ॥
ತಪೋಧನೋಽಸಿ ಯೋಗೀಶ ವಿರಕ್ತೋಽಸಿ ನಿರಂಜನಃ ।
ಆತ್ಮಾರಾಮೋ ಹಿ ನಿರ್ದ್ವಂದ್ವೋ ಮದನೋ ಯೇನ ಘಾತಿತಃ ॥ ೩೩ ॥

---

೨೮. ಹಿಂದೆ, ಬಹಳ ದೊಡ್ಡ ತಪಸ್ಸನ್ನು ಮಾಡಿ ನಿನ್ನನ್ನು ವರಿಸಿದ್ದ ಮಹಾಸುಂದರಿಯಾದ ಪಾರ್ವತಿಯನ್ನು ನೀನು ಒಂದು ಕ್ಷಣಮಾತ್ರದಲ್ಲಿಯೇ ಕಾಡಿನಲ್ಲಿ ತೊರೆದುಬಿಟ್ಟೆ.

೨೯. ಅಲ್ಲದೆಯೇ, ಸಮಸ್ತ ಪ್ರಾಣಿಗಳಿಗೂ ನೀನು ದುರಾರಾಧ್ಯನಾಗಿರುವೆ; ಆದುದರಿಂದ ನೀನೀಗ ನುಡಿದ ನುಡಿಯನ್ನು ಇನ್ನುಮುಂದೆ ನುಡಿಯಬೇಡ" ಎಂದಳು.

೩೦. ಶಬರಿಯು ಈ ಮಾತನ್ನು ಕೇಳಿ ಆ ವೃಷಭಧ್ವಜನು ಅವಳನ್ನು ಕುರಿತು, "ಓ ವಿಶಾಲಾಕ್ಷಿ! ಆ ತಪಸ್ವಿನಿಯನ್ನು ನಾನು ತೊರೆಯಲಿಲ್ಲ. ಒಂದುವೇಳೆ ನಾನವಳನ್ನು ತೊರೆದಿರುವುದು ದಿಟವೇ ಆದರೆ ಈಗ ಮಾತನಾಡುವುದಕ್ಕಾಗುತ್ತದೆಯೆ?

೩೧. ಎಲೆ ವಿಶಾಲನೇತ್ರಿ! ದೀನನೂ, ದೀನಜನರಿಗೆ ಅತ್ಯಂತ ಪ್ರಿಯನೂ ಆದ ನನ್ನ ವಿಷಯವನ್ನು ನೀನೀ ರೀತಿ ಅರಿತು ನನ್ನ ಮಾತನ್ನು ಸಲ್ಲಿಸಿಕೊಡಬೇಕು" ಎಂದನು.

೩೨–೩೪. ಆ ಶೂಲಪಾಣಿಯು ಈ ಪ್ರಕಾರ ಬಹುಬಗೆಯಾಗಿ ಪ್ರಾರ್ಥಿಸಲು ಆ ಗಿರಿಜೆಯು ಗಟ್ಟಿಯಾಗಿ ನಕ್ಕು, ಆತನನ್ನು ಕುರಿತು ಪರಿಹಾಸ್ಯಕರವಾಗಿ "ಎಲೈ ಯೋಗೀಶ್ವರನೆ! ನೀನು ತಪೋಧನನಾಗಿರುವೆ, ವಿರಕ್ತನಾಗಿರುವೆ, ನಿರಂಜನನೂ, ಆತ್ಮರಾಮನೂ, ಸುಖದುಃಖಾದಿ ದ್ವಂದ್ವರಹಿತನೂ, ಮನ್ಮಥನನ್ನು ಸುಟ್ಟು ಘಾತಿಸಿದವನೂ ಆದ ಸಾಕ್ಷಾತ್ ವಿರೂಪಾಕ್ಷನೇ ನೀನಾಗಿರುವೆ,

ಸ ತ್ವಂ ಸಾಕ್ಷಾದ್ವಿರೂಪಾಕ್ಷೋ ಮಯಾ ದೃಷ್ಟೋಽಸಿ ಚಾದ್ಯ ವೈ ।
ಅಶಕ್ಯೋ ಹಿ ಮಯಾ ಪ್ರಾಪ್ತುಂ ಸರ್ವೇಷಾಂ ದುರತಿಕ್ರಮಃ ।
ತಸ್ಮಾತ್ತ್ವಯಾ ನವಕ್ತವ್ಯಂ ಯದುಕ್ತಂ ಚ ಪುರಾ ಮಮ ॥ ೩೪ ॥
ತಸ್ಯಾಸ್ತದ್ವಚನಂ ಶ್ರುತ್ವಾ ಪ್ರೋವಾಚ ಮದನಾಂತಕಃ ।
ಮಮ ಭಾರ್ಯಾ ಭವತ್ವಂ ಹಿ ನಾನ್ಯಥಾ ಕರ್ತುಮರ್ಹಸಿ ॥ ೩೫ ॥
ಇತ್ಯುಕ್ತ್ವಾ ತಾಂ ಕರೇಽಗೃಹ್ಣಾಚ್ಛಬರೀಂ ಮದನಾತುರಃ ।
ಉವಾಚ ತಂ ಸ್ಮಯಂತೀ ಸಾ ಮುಂಚ ಮುಂಚೇತಿ ಸಾದರಂ ॥ ೩೬ ॥
ಸೂಚಿತಂ ಭಗವನ್ಕರ್ತುಂ ತಾಪಸೇನ ಬಲಾದಿದಂ ।
ಯಾಚಯಸ್ವ ಪಿತುರ್ಮೇತ್ವಂ ನಾನ್ಯಥಾಭಿಭವಿಷ್ಯಸಿ ॥ ೩೭ ॥

ಮಹಾದೇವ ಉವಾಚ:—

ಪಿತರಂ ಕಥಯಾಶು ತ್ವಂ ಸ್ಥಿತಃ ಕುತ್ರ ಶುಭಾನನೇ ।
ದ್ರಕ್ಷ್ಯಾಮಿ ತಂ ವಿಶಾಲಾಕ್ಷಿ ಪ್ರಣಿಪಾತಪುರಸ್ಸರಂ ॥ ೩೮ ॥
ಏತದುಕ್ತಂ ತದಾ ತೇನ ನಿಶಮ್ಯಾಸಿತನೇತ್ರಯಾ ।
ಆನೀತೋ ಹಿ ತಯಾ ತಸ್ಯಾ ಪಿತರಂ ವೃಷಭಧ್ವಜಃ ॥ ೩೯ ॥

---

ಇಂತಹ ನಿನ್ನನ್ನು ಇದೀಗ ಕಂಡುದಾಯಿತು. ಸಮಸ್ತರಿಗೂ ಮೀರಲಸದಳನಾದ ನಿನ್ನನ್ನು ಹೊಂದಲು ನನಗೆ ಅಸಾಧ್ಯವು. ಆದುದರಿಂದ ನೀನಾಡಿದ ಮಾತನ್ನು ಮತ್ತೊಮ್ಮೆ ನನ್ನಲ್ಲಾಡಬೇಡ'' ಎಂದಳು.

೩೫–೩೭. ಆ ಮದನಾಂತಕನು ಈ ಮಾತನ್ನು ಕೇಳಿ, ''ಓ ಸುಂದರಿ! ನೀನು ನನ್ನ ಭಾರ್ಯೆಯಾಗು, ಅನ್ಯಥಾ ನುಡಿಯಬೇಡ'' ಎಂದು ಹೇಳಿ ಮದನಾತುರನಾಗಿ ಶಬರಿಯ ವೇಷದಿಂದಿರುವ ಆ ದೇವಿಯ ಕೈಯನ್ನು ಹಿಡಿದುಕೊಂಡನು. ಆಗಲವಳು ನಸುನಗುತ್ತಲೇ, ಆದರಪೂರ್ವಕವಾಗಿ ''ಕೈಯನ್ನು ಬಿಡು! ಬಿಡು!! ಷಡ್ಗುಣೈಶ್ವರ್ಯಸಂಪನ್ನನೂ, ತಪಸ್ವಿಯೂ ಆದ ನೀನು ಈ ರೀತಿ ನಡೆಯುವುದು ಯುಕ್ತವಲ್ಲವು. ನೀನು ನನ್ನ ತಂದೆಯ ಅಪ್ಪಣೆಯನ್ನು ಪಡೆ, ಇಲ್ಲವಾದರೆ ಪರಸ್ತ್ರೀಯನ್ನು ಕಾಮಿಸಿದ ನಿಂದೆಗೊಳಗಾಗುತ್ತೀಯೆ'' ಎಂದಳು.

೩೮–೩೯. ಮಹಾದೇವನು ಹೇಳುತ್ತಾನೆ:—''ಎಲೆ ಶುಭಾನನೆ! ನಿನ್ನ ತಂದೆ ಯಾರೆಂಬುದನ್ನು ತಿಳಿಸು, ಆತನೆಲ್ಲಿರುವನು? ಓ ವಿಶಾಲನಯನೆ! ಈಗ ನಾನು ನಿನ್ನ ತಂದೆಯನ್ನು ನಮಸ್ಕಾರಪೂರ್ವಕವಾಗಿಯೇ ಸಂದರ್ಶಿಸುತ್ತೇನೆ.'' ಈ ಮಾತನ್ನು ಕೇಳಿ ಆ ಅಸಿತನೇತ್ರೆಯು ಆ ವೃಷಭಧ್ವಜನನ್ನು ತನ್ನ ತಂದೆಯ ಬಳಿಗೆ ಕರೆತಂದಳು.

ಸ್ಥಿತಂ ಕೈಲಾಸಶಿಖರೇ ಹಿಮವಂತಂ ನಗೋತ್ತಮಂ ।
ಅಹಿಭಿರ್ಬಹುಭಿಶ್ಚೈವ ಸಂವೃತಂ ಚ ಮಹಾಪ್ರಭಂ ॥ ೪೦ ॥
ದ್ವಾರಿಸ್ಥಿತಂ ತಯಾ ದೇವ್ಯಾ ದರ್ಶಿತಂ ಶಂಕರಸ್ಯ ಚ ।
ಅಸೌ ಮಮ ಪಿತಾ ದೇವ ಯಾಚಸ್ವ ವಿಗತತ್ರಪಃ ।
ದದಾತಿ ಮಾಂ ನ ಸಂದೇಹಸ್ತ್ವಪಸ್ವಿನ್ಮಾವಿಲಂಬಿತಂ ॥ ೪೧ ॥

ತಥೇತಿ ಮತ್ವಾ ಸಹಸಾ ಪ್ರಣಮ್ಯ
ಹಿಮಾಲಯಂ ವಾಕ್ಯಮಿದಂ ಬಭಾಷೇ ।
ಪ್ರಯಚ್ಛತಾಂ ಚಾದ್ಯ ಗಿರೀಶವರ್ಯ
ಹ್ಯಾರ್ತಾಯ ಕನ್ಯಾಂ ಸುಭಗಾಂ ಮಹಾಮತೇ ॥ ೪೨ ॥

ಕೃಪಣಂ ವಾಕ್ಯಮಾಕರ್ಣ್ಯ ಸಮುತ್ಥಾಯ ಹಿಮಾಲಯಃ ।
ಮಹೇಶಂ ಚ ಸಮಾದಾಯ ಹ್ಯುವಾಚ ಗಿರಿರಾಟ್ಸ್ವಯಂ ॥ ೪೩ ॥
ಕಿಂ ಜಲ್ಪಸಿ ಹಿ ಭೋ ದೇವ ತವಾಯುಕ್ತಂ ಚ ಸಾಂಪ್ರತಂ ।
ತ್ವಂ ದಾತಾ ತ್ರಿಷು ಲೋಕೇಷು ತ್ವಂ ಸ್ವಾಮೀ ಜಗತಾಂ ವಿಭೋ ॥ ೪೪ ॥

---

೪೦. ಆ ಸಮಯದಲ್ಲಿ ಆಕೆಯ ತಂದೆಯಾದ ಹಿಮವಂತನಾದರೋ ಕೈಲಾಸ ಶಿಖರದಲ್ಲಿ ಅನೇಕ ಸರ್ಪಗಳೊಡಗೂಡಿ ಮಹಾಕಾಂತಿಸಂಪನ್ನನಾಗಿ ಕಂಗೊಳಿಸುತ್ತಲಿದ್ದನು.

೪೧. ಆತನು ಕೈಲಾಸಭವನದ ಬಾಗಿಲಿನಲ್ಲಿ ಕುಳಿತಿದ್ದುದನ್ನು ಆ ಪಾರ್ವತಿಯು ಶಂಕರನಿಗೆ ತೋರಿ, "ಎಲೈ ಸ್ವಾಮಿಯೆ! ಈತನೇ ನನ್ನ ತಂದೆಯು; ನಾಚಿಕೆಯನ್ನು ಬಿಟ್ಟು ಈತನನ್ನು ಯಾಚಿಸು; ದಿಟವಾಗಿಯೂ ನನ್ನನ್ನು ನಿನಗೆ ಕೊಡುವನೆಂಬುದರಲ್ಲಿ ಸಂಶಯವಿಲ್ಲವು. ಆದುದರಿಂದ ತಡಮಾಡಬೇಡ ಕೇಳು."

೪೨. ಈ ಮಾತನ್ನು ಕೇಳಿ, ಆ ಶಂಭುವು ಅಂತೆಯೇ ಆತನನ್ನು ನಮಸ್ಕರಿಸಿ "ಎಲೈ ಮಹಾಮತಿಯೆ! ಪರ್ವತಶ್ರೇಷ್ಠನಾದ ನೀನು, ಆರ್ತನಾಗಿ ಬೇಡುತ್ತಿರುವ ನನಗೆ ಸುಂದರಿಯಾದ ಈ ನಿನ್ನ ಕನ್ನಿಕೆಯನ್ನು ದಾನಮಾಡು" ಎಂದು ಕೇಳಿದನು.

೪೩–೪೪. ಪರಶಿವನ ಈ ದೀನವಾಕ್ಯಗಳನ್ನು ಕೇಳಿ ಆ ಗಿರಿರಾಜನು ಕೂಡಲೆ ಮೇಲಕ್ಕೆದ್ದು, ಆ ಮಹೇಶನನ್ನು ಒಳಕ್ಕೆ ಬರಮಾಡಿಕೊಂಡು ಆತನನ್ನು ಕುರಿತು, "ಎಲೈ ಸ್ವಾಮಿಯೆ! ಏತಕ್ಕೆ ಹೀಗೆ ಮಾತನಾಡುವೆ? ಇದು ನಿನಗೆ ಅಯುಕ್ತವು, ಅಸಾಂಪ್ರತವು. ಪ್ರಪಂಚಕ್ಕೇ ಒಡೆಯನಾದ ನೀನು ಮೂರು ಲೋಕಗಳಿಗೂ ದಾತೃವಾದವನು; ಚರಾಚರಾತ್ಮಕವಾದ ಈ ಜಗತ್ತು ನಿನ್ನಿಂದಲೇ ಸೃಷ್ಟಿಯಾಗಿರುವುದು" ಎಂದು ಹೇಳಿ ಆ ಪ್ರಭುವನ್ನು ಹೊಗಳಿದನು.

ತ್ವಯಾ ತತಮಿದಂ ವಿಶ್ವಂ ಜಗದೇತಚ್ಚರಾಚರಂ ।
ಏವಂ ಸ್ತುತಿಪರೋಽಭೂಚ್ಚ ಹಿಮಾಲಯಗಿರಿರ್ಮಹಾನ್ ।
ಆಗತೋ ನಾರದಸ್ತತ್ರ ಋಷಿಭಿಃ ಪರಿವಾರಿತಃ ॥ ೪೫ ॥
ಉವಾಚ ಪ್ರಹಸನ್ವಾಕ್ಯಂ ಶೂಲಪಾಣೇ ನಮಃ ಪ್ರಭೋ ।
ಹೇ ಶಂಭೋ ಶೃಣು ಮೇ ವಾಕ್ಯಂ ತತ್ತ್ವಸಾರಮಯಂ ಪರಂ ॥ ೪೬ ॥
ಯೋಷಿದ್ಭಿಃ ಸಂಗತಿಃ ಪುಂಸಾಂ ವಿಡಂಬಾಯೋಪಕಲ್ಪತೇ ।
ತ್ವಂ ಸ್ವಾಮೀ ಜಗತಾಂ ನಾಥಃ ಪರಾಣಾಂ ಪರಮಃ ಪರಂ ।
ವಿಮೃಶ್ಯ ಸರ್ವಂ ದೇವೇಶ ಯಾಥಾವದ್ವಕ್ತುಮರ್ಹಸಿ ॥ ೪೭ ॥
ಏವಂ ಪ್ರಬೋಧಿತಸ್ತೇನ ನಾರದೇನ ಮಹಾತ್ಮನಾ ।
ಪ್ರಭೋಧಮಗಮಚ್ಛಂಭುರ್ಜಹಾಸ ಪರಮೇಶ್ವರಃ ॥ ೪೮ ॥

ಶಿವ ಉವಾಚ :—

ಸತ್ಯಮುಕ್ತಂ ತ್ವಯಾ ಚಾತ್ರ ನಾನ್ಯಥಾ ನಾರದ ಕ್ವಚಿತ್ ।
ಯೋಷಿತ್ಸಂಗತಿಮಾತ್ರೇಣ ನೃಣಾಂ ಪತನಮೇವ ಚ ॥ ೪೯ ॥
ಭವಿಷ್ಯತಿ ನ ಸಂದೇಹೋ ನಾನ್ಯಥಾ ವಚನಂ ತವ ।
ಅನಯಾ ಮೋಹಿತೋಽದ್ಯಾಹಮಾನೀತೋ ಗಂಧಮಾದನಂ ॥ ೫೦ ॥

---

ಆ ಸಮಯಕ್ಕೆ ಸರಿಯಾಗಿ ದೇವರ್ಷಿಯಾದ ನಾರದನು ಬ್ರಹ್ಮರ್ಷಿಗಳೊಡಗೂಡಿ ಅಲ್ಲಿಗೈತಂದನು.

೪೬–೪೭. ಆಗಲಾತನು ನಸುನಗುತ್ತ, "ಪ್ರಭುವೇ, ಓ ಶೂಲಪಾಣಿ! ನಿನಗೆ ನಮೋ ನಮಃ. ಎಲೈ ಶಂಭುವೆ! ತತ್ವಸಾರಮಯವಾದ ಈ ನನ್ನ ಮಾತನ್ನು ಕೇಳು; ಲೋಕದಲ್ಲಿ ಸ್ತ್ರೀಯರ ಸಹವಾಸವು ಪುರುಷರಿಗೆ ಕೇವಲ ಅವಹೇಳನಕ್ಕಾಗಿಯೇ ಉಂಟಾಗುತ್ತದೆ; ಅಥವಾ ವಿಡಂಬನೆಗಾಗಿ ಉಂಟಾಗುವುದು. ನೀನೋ ಜಗತ್ತಿಗೆಲ್ಲ ಸ್ವಾಮಿಯು; ಸರ್ವೋತ್ತಮನು; ಆದುದರಿಂದ ಈ ವಿಚಾರವೆಲ್ಲವನ್ನೂ ಚನ್ನಾಗಿ ವಿಮರ್ಶಿಸಿಕೊಂಡು ಮಾತನಾಡುವವನಾಗು."

೪೮. ಮಹಾತ್ಮನಾದ ನಾರದ ಮಹರ್ಷಿಯು ಈ ರೀತಿ ಎಚ್ಚರಿಸಿದ ತರುವಾಯ ಆ ಪರಮೇಶ್ವರನು ಎಚ್ಚೆತ್ತುಕೊಂಡು ಗಟ್ಟಿಯಾಗಿ ನಗತೊಡಗಿದನು.

೪೯–೫೦. ಶಿವನು ಹೇಳುತ್ತಾನೆ:—"ನಾರದಾ! ನೀನು ಹೇಳಿದುದು ದಿಟ. ಇದು ಎಂದಿಗೂ ಸುಳ್ಳಾಗುವುದಿಲ್ಲ; ಸ್ತ್ರೀ ಸಹವಾಸಮಾತ್ರದಿಂದಲೇ ಮಾನವರಿಗೆ ಪತನವೇ ಆಗುತ್ತದೆಯೆಂಬ ನಿನ್ನ ಮಾತು ನಿಸ್ಸಂದೇಹವಾದುದು. ಈಗ ನಾನು ಇವಳಿಂದ ಮೋಹಿತನಾಗಿ ಈ ಗಂಧಮಾದನ ಪರ್ವತಕ್ಕೆ ಕರೆತರಲಾದೆನು.

**ಪಿಶಾಚವತ್ಕೃತಮಿದಂ ಚರಿತಂ ಪರಮಾದ್ಭುತಂ ॥ ೫೧ ॥**
**ತಸ್ಮಾನ್ನತಿಷ್ಠಾಮಿ ಗಿರೇಃ ಸಮೀಪೇ**
**ವ್ರಜಾಮಿ ಚಾದ್ಯೈವ ವನಾಂತರಂ ಪುನಃ ।**
**ಇತ್ಯೇವಮುಕ್ತ್ವಾ ಸ ಜಗಾಮ ಮಾರ್ಗಂ**
**ದುರತ್ಯಯಂ ಯೋಗಿನಾಮಪ್ಯಗಮ್ಯಂ ॥ ೫೨ ॥**
**ನಿರಾಲಂಬಂ ಸ ವಿಜ್ಞಾಯ ನಾರದೋ ವಾಕ್ಯಮಬ್ರವೀತ್ ।**
**ಗಿರಿಜಾಂ ಚ ಗಿರೀಂದ್ರಂ ಚ ಪಾರ್ಷದಾನ್ಪ್ರತಿ ಸತ್ವರಂ ॥ ೫೩ ॥**
**ವಂದನೀಯಶ್ಚ ಸ್ತುತ್ಯಶ್ಚ ಕ್ಷಾಮ್ಯತಾಂ ಪರಮಾರ್ಥತಃ ।**
**ಮಹೇಶೋಽಯಂ ಜಗನ್ನಾಥಸ್ತ್ರಿಪುರಾರಿರ್ಮಹಾಯಶಾಃ ॥ ೫೪ ॥**
**ಏತಚ್ಛ್ರುತ್ವಾ ತು ವಚನಂ ನಾರದಸ್ಯ ಮುಖೋದ್ಗತಂ ।**
**ಗಿರಿಜಾಂ ಪುರತಃ ಕೃತ್ವಾ ಗಿರಯೋ ಹಿ ಮಹಾಪ್ರಭಾಃ ॥ ೫೫ ॥**
**ದಂಡವತ್ಪತಿತಾಃ ಸರ್ವೇ ಶಂಕರಂ ಲೋಕಶಂಕರಂ ।**
**ತುಷ್ಟುವುಃ ಪ್ರಣತಾಃ ಸರ್ವೇ ಪ್ರಮಥಾ ಗುಹ್ಯಕಾದಯಃ ॥ ೫೬ ॥**
**ಸ್ತೂಯಮಾನೋಹಿ ಭಗವಾನಾಗತೋ ಗಂಧಮಾದನಂ ।**
**ಅಂಗಿರಸಾ ಹಿ ಸರ್ವೇಶೋ ಹ್ಯಭಿಷಿಕ್ತೋ ಮಹಾತ್ಮಭಿಃ ॥ ೫೭ ॥**

---

೫೧–೫೨. ಪರಮಾದ್ಭುತವಾದ ಈ ಚರಿತ್ರೆಯೆಲ್ಲವೂ ಪಿಶಾಚದಾಟದಂತೆ ಹೇಗೆಹೇಗೋ ನಡೆದುಹೋಯಿತು. ಆದುದರಿಂದ ಇನ್ನು ನಾನು ಈ ಪರ್ವತದ ಸಮೀಪದಲ್ಲಿಯೇ ನಿಲ್ಲುವುದಿಲ್ಲ, ಈಗಲೇ ತಪೋವನವನ್ನು ಪ್ರವೇಶಿಸುತ್ತೇನೆ.'' ಇಂತು ನುಡಿದು ಯೋಗಿಗಳಿಗೂ ಹೊಂದಲನದಳವಾಗಿ, ಹೋಗಲಸಾಧ್ಯವೂ ಆಲಂಬರಹಿತವೂ ಆದ ತಪೋವನದ ಮಾರ್ಗವನ್ನು ಹಿಡಿದು ಹೊರಟನು.

೫೩–೫೪. ಆಗ ನಾರದನು ಆತನು ಹೊರಟುಹೋಗುತ್ತಿರುವುದನ್ನು ಕಂಡು ಗಿರಿಜೆಯನ್ನೂ, ಗಿರೀಂದ್ರನನ್ನೂ, ಶಿವಕಿಂಕರರನ್ನೂ ಕುರಿತು ಬಹು ಅವಸರವಸರವಾಗಿ, ''ಅಯ್ಯಾ! ಈ ಮಹೇಶ್ವರನು ಜಗನ್ನಾಥನು; ತ್ರಿಪುರ ಸಂಹಾರಕನು; ಮಹಾಯಶಸ್ವಿ, ಪರಮಾರ್ಥವನ್ನು ಯೋಚಿಸಿದರೆ ಈತನನ್ನು ನಮಸ್ತರೂ ನಮಸ್ಕರಿಸಬೇಕು, ಸ್ತುತಿಸಬೇಕು; ಆದುದರಿಂದ ನೀವೆಲ್ಲರೂ ಈಗಲೇ ಈ ಪ್ರಭುವಿನ ಕ್ಷಮಾಪಣೆಯನ್ನು ಕೇಳಿಕೊಳ್ಳಿರಿ'' ಎಂದು ಹೇಳಿದನು.

೫೫–೫೭. ನಾರದನಾಡಿದ ಈ ಮಾತುಗಳನ್ನು ಕೇಳಿ ಮಹಾತೇಜಸ್ವಿಗಳಾದ ಆ ಪರ್ವತರಾಜರೂ, ಪ್ರಮಥ ಗುಹ್ಯಕ ಗಣಗಳೂ ಪಾರ್ವತಿಯನ್ನು ಪುರಸ್ಕರಿಸಿಕೊಂಡು ಲೋಕಶಂಕರನಾದ ಆ ಶಂಕರನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ ಭಕ್ತಿಭರಿತರಾಗಿ ಆ ಸ್ವಾಮಿಯನ್ನು ಸ್ತುತಿಸಿದರು. ಈ ಪ್ರಕಾರ ಅವರೆಲ್ಲರೂ ಸ್ತೋತ್ರಮಾಡುತ್ತಿರಲು, ಆ ಭಗವಂತನು ಮತ್ತೆ ಗಂಧಮಾದನಕ್ಕೆ

ತದಾ ದುಂದುಭಯೋ ನೇದುರ್ವಾದಿತ್ರಾಣಿ ಬಹೂನಿ ಚ ।
ಇಂದ್ರಾದ್ಯಾಃ ಸುರಾಃ ಸರ್ವೇ ಪುಷ್ಪವರ್ಷಂ ವವರ್ಷಿರೇ ॥ ೫೮ ॥
ಬ್ರಹ್ಮಾದಿಭಿಃ ಸುರಗಣೈರ್ಬಹುಭಿಃ ಪರೀತೋ
ಯೋಗೀಶ್ವರೋ ಗಿರಿಜಯಾ ಸಹ ವಿಶ್ವವಂದ್ಯಃ ।
ಅಭ್ಯರ್ಥಿತಃ ಪರಮಮಂಗಲಮಂಗಲೈಶ್ಚ
ದಿವ್ಯಾಸನೋ ಪರಿರರಾಜ ಮಹಾವಿಭೂತ್ಯಾ ॥ ೫೯ ॥

ಸೂತ ಉವಾಚ :—

ಏವಂ ವಿಧಾನ್ಯನೇಕಾನಿ ಚರಿತಾನಿ ಮಹಾತ್ಮನಃ ।
ಮಹೇಶಸ್ಯ ಚ ಭೋ ವಿಪ್ರಾಃ ಪಾಪಹಾರೀಣಿ ಶೃಣ್ವತಾಂ ॥ ೬೦ ॥
ಯಾನಿ ಯಾನೀಹ ರುದ್ರಸ್ಯ ಚರಿತಾನಿ ಮಹಾಂತ್ಯಪಿ ।
ಶ್ರುತಾನಿ ಪರಮಾಣ್ಯೇವ ಭೂಯಃ ಕಿಂ ಕಥಯಾಮಿ ವಃ ॥ ೬೧ ॥

ಋಷಯ ಊಚುಃ :—

ಏವಮುಕ್ತಂ ತ್ವಯಾ ಸೂತ ಚರಿತಂ ಶಂಕರಸ್ಯ ಚ ।
ಅನೇನ ಚರಿತೇನೈವ ಸಂತೃಪ್ತಾಃ ಸ್ಮೋ ನ ಸಂಶಯಃ ॥ ೬೨ ॥

---

ಹಿಂತಿರುಗಿದನು. ಆಗ ಬೃಹಸ್ಪತಿಯೂ, ಇನ್ನೂ ಇತರ ಮಹಾತ್ಮರೂ ಆ ಪ್ರಭುವಿಗೆ ಕೈಲಾಸ ರಾಜ್ಯದ ಪಟ್ಟಾಭಿಷೇಕವನ್ನ ನಗಿದರು.

೫೮–೫೯. ಆಗ ದೇವದುಂದುಭಿಗಳೂ, ತುತ್ತೂರಿಗಳೂ, ಇತರ ವಾದ್ಯಗಳೂ ಅನೇಕವಾಗಿ ಭೋರ್ಗರೆದವು. ಮಹೇಂದ್ರನೇ ಮೊದಲಾದ ದೇವತೆಗಳೆಲ್ಲರೂ ಹೂಮಳೆಗರೆದರು. ಆ ಸಮಯದಲ್ಲಿ ವಿಶ್ವವಂದ್ಯನೂ, ಮಹಾ ಯೋಗೀಶ್ವರನೂ ಆದ ಪರಮೇಶ್ವರನು ಗಿರಿಜೆಯೊಡನೆಯೂ, ಬ್ರಹ್ಮಾದಿ ದೇವಗಣಗಳೊಡನೆಯೂ ದಿವ್ಯ ಸಿಂಹಾಸನಾರೂಢನಾಗಿ ಉತ್ತಮೋತ್ತಮವಾದ ಮಂಗಲಗೀತೆಗಳಿಂದ ಸ್ತುತಿಗೈಸಿಕೊಳ್ಳುತ್ತ, ನಿರತಿಶಯವಾದ ಮಹತ್ತರ ಕಾಂತಿಯಿಂದ ರಾರಾಜಿಸಿದನು.

೬೦–೬೧. ಸೂತನು ಹೇಳುತ್ತಾನೆ:—ಎಲೈ ವಿಪ್ರರೇ! ಮಹಾತ್ಮನಾದ ಮಹೇಶ್ವರನ ಇಂತಹ ಚರಿತ್ರೆಗಳು ಅನೇಕವಾಗಿವೆ. ಅವೆಲ್ಲವೂ ಕೇಳುವವರ ಪಾಪಗಳೆಲ್ಲವನ್ನೂ ಕಳೆಯತಕ್ಕುವುಗಳು. ಭಗವಾನ್ ರುದ್ರನ ಮಹತ್ತರಗಳಾದ ಉತ್ತಮಚರಿತ್ರೆಗಳೆಲ್ಲವನ್ನೂ ನೀವು ಕೇಳಿದಿರಿ; ಇನ್ನುಮುಂದೆ ನಾನು ನಿಮಗೆ ಹೇಳಬೇಕಾದುದೇನು ?

೬೨. ಋಷಿಗಳು ಹೇಳುತ್ತಾರೆ:— ಎಲೈ ಸೂತಪುರಾಣಿಕನೆ! ಈ ಪ್ರಕಾರವಾಗಿ ನೀನು ಅಪ್ಪಣೆಕೊಡಿಸಿದ ಶಂಕರನ ಚರಿತ್ರೆಯನ್ನು ಕೇಳಿ ನಾವೆಲ್ಲರೂ ತೃಪ್ತರಾಗಿರುವೆವು. ಇದರಲ್ಲಿ ಸಂದೇಹವಿಲ್ಲ.

